# ಛತ್ರಪತಿ ಶಿವಾಜಿ





ವೀರಕೇಸರಿ
ಸೀತಾರಾಮ ಶಾಸ್ತ್ರಿ

ಜೈ ಅಂಬಾ ಭವಾನಿ




# ಛತ್ರಪತಿ ಶಿವಾಜಿ

(ನಾಲ್ಕು ಐತಿಹಾಸಿಕ ಕಾದಂಬರಿಗಳ ಸಂಪುಟ)

**ಶ್ರೀ ಛತ್ರಪತಿ ಶಿವಾಜಿ ಮಹಾರಾಜರ**
**360ನೇ ಜಯಂತ್ಯೋತ್ಸವದ**
**ಸವಿನೆನಪಿಗೆ ಕಿರು ಕಾಣಿಕೆ**

ಲೇಖಕರು :

ವೀರಕೇಸರಿ ಸೀತಾರಾಮ ಶಾಸ್ತ್ರಿ



ಪ್ರಕಾಶಕರು :

**ಅಖಿಲ ಕರ್ನಾಟಕ ಶಿವಾಜಿ ಯುವಕರ ಬಳಗ**
ನಂ. 52, ಗವಿಪುರಂ ಗ್ರಾಮ
ಹನುಮಂತನಗರ, ಬೆಂಗಳೂರು-560 019

ಛತ್ರಪತಿ ಶಿವಾಜಿ (ಐತಿಹಾಸಿಕ ಕಾದಂಬರಿ). ವೀರಕೇಸರಿ ಸೀತಾರಾಮ ಶಾಸ್ತ್ರಿ. ಪ್ರಕಾಶಕರು : ಅಖಿಲ ಕರ್ನಾಟಕ ಶಿವಾಜಿ ಯುವಕರ ಬಳಗ, ನಂ. 52, ಗವಿಪುರಂ ಗ್ರಾಮ, ಹನುಮಂತನಗರ, ಬೆಂಗಳೂರು-560019



ಮೊದಲ ಮುದ್ರಣ : 1958

ಎರಡನೇ ಮುದ್ರಣ : 1987



ಹೊದಿಕೆ ಕಲೆ : ಶಿವ ಶಂಕರಿ ಆರ್ಟ್ಸ್



**ಪ್ರತಿಭಾ ಪ್ರಿಂಟರ್ಸ್**
ನಂ. 411, 8ನೇ ಮೈನ್,
ಹನುಮಂತನಗರ,
ಬೆಂಗಳೂರು-560 019.

**ಲಿಪಿ ಮುದ್ರಣ**
ನಂ. 1,
ಬ್ಯೂಗಲ್ ರಾಕ್ ರಸ್ತೆ,
ಬೆಂಗಳೂರು-560 004.




# ಮುನ್ನುಡಿ

(ಮೊದಲ ಮುದ್ರಣದಿಂದ)

ಇದು ನನ್ನಿಂದ ರಚಿತವಾದ ಒಂದು ಹೊಸ ಕಾದಂಬರಿ. ಛತ್ರಪತಿ ಶಿವಾಜಿ ಮಹಾರಾಜರ ಚರಿತ್ರೆಯನ್ನು ಮೂಲವಾಗಿ ಇಟ್ಟುಕೊಂಡು ರಚಿತವಾಗಿರುವ ರಸಭರಿತ ಕಾದಂಬರಿ ಇದು. ಶಿವಾಜಿಯ ಕಥೆ, ನಾಟಕಗಳು ಕೆಲವು ಕನ್ನಡದಲ್ಲಿ ಪ್ರಕಟವಾಗಿವೆ.

ಈ ಹೆಸರಿನಲ್ಲಿ ನಾಲ್ಕು ಕಾದಂಬರಿಗಳನ್ನು ಪ್ರಕಟಿಸಲು ಸಿದ್ಧಪಡಿಸುತ್ತೇನೆ. ಅವುಗಳಲ್ಲಿ ಇದು ಮೊದಲನೆಯದು.

ಶಿವಾಜಿಯ ಅಭ್ಯುತ್ಥಾನವು ಆರಂಭವಾಗುತ್ತಲೇ ಡೆಲ್ಲಿಯ ಬಾದಶಹನೂ ಬಿಜಾಪುರದ ಸುಲ್ತಾನನೂ ಶಿವಾಜಿಯನ್ನು "ಯವನವಿದ್ರೋಹಿ" ಎಂದು ಕರೆದರು. ಆ ಕಥೆಗಳನ್ನೇ ಪ್ರಥಮ ಪುಸ್ತಕವಾಗಿ ಉಲ್ಲೇಖಿಸಿದ್ದೇನೆ. ಬಿಜಾಪುರದ ದರ್ಬಾರಿನವರು ಆಮೇಲೆ ಶಿವಾಜಿಯನ್ನು "ಮಹಾರಾಜ" ಎಂದು ಕರೆದರು. ಆದುದರಿಂದ ಎರಡನೆಯ ಭಾಗವನ್ನು "ಶಿವಾಜಿ ಮಹಾರಾಜ" ಎಂದು ನಿರ್ದೇಶಿಸಿದ್ದೇನೆ. ಶಿವಾಜಿಯು ರಾಷ್ಟ್ರ ನಿರ್ಮಾಣ ಮಾಡಿದ ನಂತರ ಹಿಂದೂಸ್ಥಾನದ ಜನಪದವು ಹಿಂದೂ ಸಮ್ರಾಟನೆಂದು ಕರೆಯುತ್ತಿದ್ದಿತು. ಮೂರನೆಯ ಗ್ರಂಥವನ್ನು "ಛತ್ರಪತಿ ಶಿವಾಜಿ" ಎಂದು ಹೆಸರು ಇಟ್ಟು ಕರೆದಿದ್ದೇನೆ. ಶಿವಾಜಿಯ ನಂತರ ಪಟ್ಟಕ್ಕೆ ಬಂದ ಅವನ ಮಗ ಸಾಂಬಾಜಿಯು ಪರಾಕ್ರಮಿ, ಶೂರ, ರಣಧೀರನಾಗಿದ್ದರೂ ನೀತಿ ಭ್ರಷ್ಟನಾಗಿ ಹಿಂದೂ ಸಾಮ್ರಾಜ್ಯವು ಕಳೆಗುಂದಿತು. ಆದುದರಿಂದ "ಶಿವಾಜಿಯ ಕೈವಲ್ಯ" ಎಂದು ನಾಲ್ಕನೆಯ ಪುಸ್ತಕಕ್ಕೆ ಹೆಸರಿಟ್ಟಿದ್ದೇನೆ.

ಈ ಗ್ರಂಥದಲ್ಲಿ ಒಂದು ವಿಶೇಷವಿದೆ. ರಾಜರು, ಚಕ್ರವರ್ತಿಗಳು, ರಾಜ್ಯಗಳು ಇವುಗಳ ಕಥೆಗಿಂತಲೂ ಜನ ಜಾಗೃತಿ ಜನಪದದ ಉಚ್ಛ್ರಾಯಸ್ಥಿತಿ

ಇಡೀ ಹಿಂದೂ ಜನಾಂಗವು ಧರ್ಮೋದ್ಧಾರಕ್ಕಾಗಿ ಸರ್ವಸ್ವವನ್ನೂ ತ್ಯಾಗಮಾಡಿ ಕಟ್ಟಿದ ಮಹಾಸಾಮ್ರಾಜ್ಯದ ಚಿತ್ರಣವಿದೆ. ಆ ಜನಪದದ ಧರ್ಮಯುದ್ಧ ಬಲಿ-ದಾನಗಳಲ್ಲಿ ಶಿವಾಜಿಯೂ ಡೆಲ್ಲಿಯ ಬಾದಷಹನೂ ಬಿಜಾಪುರದ ಸುಲ್ತಾನನೂ ಇನ್ನೂ ಎಷ್ಟೋ ಮಂದಿ ಹಿಂದೂ ಮುಸ್ಲಿಂ ವೀರರೂ ರಾಜಕಾರಣಗಳೂ ಇವರೆಲ್ಲರೂ ಸಣ್ಣದಾಗಿ ಕಾಣುತ್ತಾರೆ.

ನಾನಾ ದುರ್ಗಗಳೂ ನಾನಾ ರಾಜ್ಯಗಳೂ ಮೊಗಲ್ ಸಮ್ರಾಟನ ಸಾಮ್ರಾಜ್ಯ ಇವೆಲ್ಲವುಗಳ ಚರಿತ್ರಾಂಶಗಳು ಇಲ್ಲಿ ಎದ್ದು ಕಾಣುತ್ತವೆ. ಇದನ್ನು ಈ ಚರಿತ್ರಾಂಶಗಳ ಉಪನ್ಯಾಸವೆಂದು ಕರೆಯಬಹುದು. ಆದರೆ ಈ ಕಥೆಯ ವರ್ಣನಾಕ್ರಮದಲ್ಲಿ ಶೃಂಗಾರ ವೀರ ಕರುಣಾರಸಗಳ ಉಚ್ಚಳವಿದೆ. ಈ ರಸ ಪುಷ್ಟಿಗಾಗಿ ಕೆಲವು ಕಲ್ಪನೆಗಳೂ ಇವೆ. ಆದುದರಿಂದ ರಸವತ್ತಾದ ಐತಿಹಾಸಿಕ ಕಾದಂಬರಿಯೆಂದು ಹೇಳಿದರೆ ಸಮನ್ವಯವಾಗುತ್ತದೆ. ಆಂಗ್ಲ ಭಾಷೆಯಲ್ಲಿ ಹಿಸ್ಟಾರಿಕಲ್ ರೋಮಾನ್ಸ್ (Historical Romance) ಎಂಬ ಬಗೆಯ ಕಾದಂಬರಿಗಳಿವೆ, ಈ ಕಾದಂಬರಿಯು ಆ ಜಾತಿಗೆ ಸರಿಹೊಂದುತ್ತವೆ.

ನಾನು ರಚಿಸಿರುವ ಕಾದಂಬರಿಗಳಲ್ಲಿ ಇದು ಹತ್ತನೆಯ ಕಾದಂಬರಿ. ಆ ಕಾದಂಬರಿಗಳೆಲ್ಲಾ ಸಾಮಾನ್ಯವಾಗಿ ಒಬ್ಬ ಪ್ರತಾಪಶಾಲಿಯಾದ ಚರಿತ್ರ ಪುರುಷ. ಅವನ ಪ್ರತಿದ್ವಂದ್ವಿ, ರಾಜ್ಯಗಳು ಮುಳುಗಿ ಎದ್ದ ಘಟನೆಗಳು, ಕೆಲವು ಸಾಹಸಗಳು, ಕೆಲವು ಶೃಂಗಾರ ಕಥೆಗಳು ಇವುಗಳಿಂದ ಕೂಡಿದೆ. ಈ ಕಾದಂಬರಿಯು ಆಂದಿನ ಕಾಲದ ಹಿಂದೂ-ಮುಸ್ಲಿಂ ಜನಾಂಗಗಳ ದ್ವಂದ್ವ ಯುದ್ಧವಾಗಿದೆ ಮತ್ತು ಧರ್ಮೋದ್ಧಾರ ಧರ್ಮನಾಶ ಇವುಗಳಿಗಾಗಿ ವೀರಾಧಿ ವೀರರು ಹೋರಾಡಿದ ಅನೇಕ ಕಥೆಗಳು ಹಣೆದುಕೊಂಡಿವೆ. ಅನೇಕ ರಾಜ್ಯಗಳು ಈ ಕಥೆಯಲ್ಲಿ ಮುಳುಗಿ ತೇಲುತ್ತವೆ. ಕನ್ಯಾಕುಮಾರಿಯಿಂದ ಹಿಮಾಲಯದ ವರೆಗಿನ ಇಡೀ ಹಿಂದೂಸ್ಥಾನವೇ ರಂಗಭೂಮಿಯಾಗಿ ಚಿತ್ರಿತವಾಗಿದೆ. ಆ ದೃಷ್ಟಿಯಿಂದ ಇದನ್ನು "ಬೃಹತ್ಕಥೆ" ಎಂದು ಕರೆಯಬಹುದು.

ನನ್ನ ಮನಸ್ಸಿನಲ್ಲಿ ಹಿಂದೂ ಧರ್ಮದ ಉದ್ಧಾರದ ಬಗ್ಗೆ ಹಿಂದೂಸ್ಥಾನದ ಪೂರ್ವೇತಿಹಾಸಕ್ಕೆ ಸಂಬಂಧಿಸಿದ ಎರಡು ಬೃಹತ್ಕಥೆಗಳನ್ನು ಬರೆದು ವಾಚಕರ

ಮುಂದಿಡಬೇಕೆಂಬ ಪ್ರಬಲವಾದ ಆಸೆಯಿತ್ತು. ಅವೆರಡು ಕೃತಿರಚನೆಯಲ್ಲಿಯೂ ಈಗ ನಾನು ಕೃತಕಾರ್ಯನಾಗಿದ್ದೇನೆ.

ಶಿವಾಜಿಗೆ ಸಂಬಂಧಿಸಿದಂತೆ ಅನೇಕ ಕಥೆಗಳೂ ನಾಟಕಗಳೂ ನಾವಲ್ ಎಂಬ ಹೆಸರಿನ ಗ್ರಂಥಗಳೂ ಕನ್ನಡದಲ್ಲಿ ಪ್ರಕಟವಾಗಿವೆ. ಅದೇ ಸಾರಸ್ವತ ಸಂಪತ್ತಿಗೆ ನನ್ನದೂ ಒಂದು ಕಾಣಿಕೆ. ದೊಡ್ಡ ವಿದ್ವಾಂಸರೊಬ್ಬರು ಹೇಳಿದ್ದಾರೆ ॥ ಕೃತಯೋ ವಿಭಿನಾಃ ಕವಯೋ ಸ್ತ್ವನೇಕಾಃ ॥ ಎಂದು ನಾನು ಅದನ್ನೇ ಇಲ್ಲಿ ಉಲ್ಲೇಖಿಸುತ್ತೇನೆ.

## ಶಿವಾಜಿ ಮಹಾರಾಜ

ಶಿವಾಜಿಯು ಬಡತನದಲ್ಲಿ ಹುಟ್ಟಿ ಬಡತನ ಕ್ಲೇಶಗಳನ್ನನುಭವಿಸುತ್ತಲೇ ರೈತರ ಮಧ್ಯದಲ್ಲಿ ಬೆಳೆದವನು. ತಂದೆಯಿಂದ ಬಾಲ್ಯದಲ್ಲಿಯೇ ನಿರಾಕರಿಸಲ್ಪಟ್ಟವನು. ಅಂಥವನು ಸ್ವಪರಾಕ್ರಮದಿಂದ ಇಡೀ ಹಿಂದೂಸ್ಥಾನದಲ್ಲಿ ಮಹಾವೀರನೆನಿಸಿಕೊಂಡನು. ಇಡೀ ಮಹಾರಾಷ್ಟ್ರ ರಾಜ್ಯವು ಅವನ ಶಕ್ತಿಯಿಂದ ಒಂದು ರಾಜ್ಯವೆನಿಸಿಕೊಂಡಿತು. ಆ ಜನಾಂಗಕ್ಕೆ ಒಂದು ಮನ್ನಣೆಯು ಬಂದಿತು. ಇಡೀ ರಾಜ್ಯವೇ ಅವನನ್ನು ಮಹಾರಾಜನೆಂದು ಕರೆಯಿತು. ಅವನನ್ನು ತಿರಸ್ಕಾರದಿಂದ ಕಂಡು ಅವನನ್ನು ನಾಶಪಡಿಸಲು ಅನೇಕ ಕೃತ್ರಿಮೋಪಾಯಗಳನ್ನೂ ಯುದ್ಧಗಳನ್ನೂ ನಡೆಸಿದಂಥಾ ಬಿಜಾಪುರ ಸುಲ್ತಾನನು ಶಿವಾಜಿಯನ್ನು ಮಹಾರಾಜನೆಂದೊಪ್ಪಿಕೊಂಡು ಬರೆದುಕೊಟ್ಟು ಸಂಧಿಮಾಡಿಕೊಂಡನು. ಅಂದು ಹಿಂದೂಸ್ಥಾನವನ್ನೆಲ್ಲಾ ನಡುಗಿಸುತ್ತಿದ್ದ ಔರಂಗಜೇಬ್ ಬಾದಷಹನು ಶಿವಾಜಿಯನ್ನು ನೋಡಿ ಸಹಿಸಲಾರದೇ ಪ್ರಚಂಡ ಸೈನ್ಯವನ್ನು ಯುದ್ಧಕ್ಕೆ ಕಳುಹಿಸಿದನು. ಪ್ರಖ್ಯಾತ ರಜಪೂತ ವೀರನಾದ ಮಹಾರಾಜ ಜಯಸಿಂಹನು ಶಿವಾಜಿಯ ಪರಾಕ್ರಮವನ್ನು ಮೆಚ್ಚಿ ಅವನೊಡನೆ ಸಂಧಿಗೊಪ್ಪಿ ದೆಹಲಿಯ ದರಬಾರಿನಲ್ಲಿ ಮಹಾರಾಜಾಧಿರಾಜರಿಗೆ ಯೋಗ್ಯವಾದ ಗೌರವವನ್ನು ಕೊಡಿಸಬೇಕೆಂದು ಬಾದಷಹನಲ್ಲಿ ಪ್ರಾರ್ಥನೆ ಮಾಡಿಕೊಂಡನು. ಔರಂಗಜೇಬನು ತದ್ವಿರುದ್ಧವಾಗಿ ಶಿವಾಜಿಯನ್ನು ಬಂಧನದಲ್ಲಿಡಿಸಿದನು. ಶಿವಾಜಿಯು ಆ ಬಂಧನದಿಂದ ಬಿಡಿಸಿಕೊಂಡು ಬಂದ ಆಶ್ಚರ್ಯಕರವಾದ ಘಟನೆಯು

ಹಿಂದೂಸ್ಥಾನದ ಇತಿಹಾಸದಲ್ಲಿಯೇ ಪ್ರಸಿದ್ಧವಾದುದು. ಈ ಪ್ರಕರಣವು ಈ ಕಾದಂಬರಿಯಲ್ಲಿ ಚಿತ್ರಿಸಲ್ಪಟ್ಟಿದೆ. ಶಿವಾಜಿಯು ಬಿಜಾಪುರದ ಸೇನಾಧಿಪತಿಯಾದ ಅಫಜಲ್‌ಖಾನನ್ನು ಕೊಂದು ಹಾಕಿದ್ದು ಎಂಥಾ ಅದ್ಭುತ ಘಟನೆಯೋ ಔರಂಗಜೇಬನ ಸೆರೆಯಿಂದ ತಪ್ಪಿಸಿಕೊಂಡು ಹೋದದು ಅದಕ್ಕಿಂತಲೂ ನೂರು ಪಾಲು ಸಾಹಸದ ಪ್ರಸಂಗವಾಗಿದೆ. ಇದರಿಂದ ಔರಂಗಜೇಬನಿಗೆ ಆದಷ್ಟು ಅಪಮಾನವು ಮತ್ತಾವಾಗಲೂ ಸಂಭವಿಸಿರಲಿಲ್ಲ.

ಈ ಪ್ರಕರಣದಿಂದ ಹಿಂದೂಸ್ಥಾನದ ಚರಿತ್ರೆಯೇ ಬದಲಾಗಿಹೋಯಿತು.

## ಛತ್ರಪತಿ ಶಿವಾಜಿ

ಶಿವಾಜಿಯ ಗುರುಗಳಾದ ರಾಮದಾಸರು ಮಹಾರಾಷ್ಟ್ರ ನಿರ್ಮಾಣದಲ್ಲಿ ಮುಖ್ಯ ಪುರುಷರು. ಅವರ ತಪಃ ಪ್ರಭಾವದಿಂದಲೇ ಮಹಾರಾಷ್ಟ್ರ ರಾಜ್ಯವು ಸ್ಥಾಪಿಸಲ್ಪಟ್ಟಿತು ಎಂಬುದಕ್ಕೆ ಅಡ್ಡಿಯೇ ಇಲ್ಲ. ಸಮರ್ಥ ರಾಮದಾಸರು ಶಿವಾಜಿಗೆ 'ನೀನು ಸಾರ್ವಭೌಮನೆಂದು ಪಟ್ಟಾಭಿಷೇಕ ಮಾಡಿಕೋ' ಎಂದು ಹೇಳಿದರು. ಅಷ್ಟೇ ಅಲ್ಲ ತಾವೇ ಸ್ವತಃ ಪ್ರತಾಪಗಡಕ್ಕೆ ಬಂದು ನಿಂತು ಕಾಶಿಯಿಂದಲೂ ದಕ್ಷಿಣ ದೇಶದ ನಾನಾ ಪ್ರದೇಶಗಳಿಂದಲೂ ವೈದಿಕ ಬ್ರಾಹ್ಮಣರನ್ನು ಕರೆಸಿ ಶಾಸ್ತ್ರೋಕ್ತ ವಿಧಗಳಿಗನುಸಾರವಾಗಿ ಸಾಂಗೋಪಾಂಗವಾಗಿ ಶಿವಾಜಿಯ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸಿದರೆಂದು ಅನೇಕ ಗ್ರಂಥಗಳಲ್ಲಿ ಸಾರಿಹೇಳಲ್ಪಟ್ಟಿದೆ. ಪಟ್ಟಾಭಿಷೇಕದ ತರುವಾಯ ಎಲ್ಲರೂ ಶಿವಾಜಿಯನ್ನು "ಛತ್ರಪತಿ ಶಿವಾಜಿ" ಎಂಬ ಅಂಕಿತದಿಂದ ಸ್ತುತಿಸುತ್ತಿದ್ದರು. ಭಾರತ ವರ್ಷದಲ್ಲಿ ಹಿಂದುಗಳೆಲ್ಲರೂ ಈ ಸಾಮ್ರಾಜ್ಯವನ್ನು "ಹಿಂದೂಪದಪಾದಶಾಹಿ" ಎಂದು ಕರೆಯುತ್ತಿದ್ದರು.

## ಶಿವಾಜಿಯ ಕೈವಲ್ಯ

ಶಿವಾಜಿಯ ಮಹತ್ವದಿಂದ ಹಿಂದೂ ಜನರ ಹೃದಯದಲ್ಲಿ ನೆಡಲ್ಪಟ್ಟ ರಾಷ್ಟ್ರಭಕ್ತಿ ದೇಶ ಪ್ರೇಮಗಳು ಒಂದಲ್ಲ ಒಂದು ವಿಧದಿಂದ ಭಾರತವರ್ಷದಲ್ಲಿ ಬೆಳೆಯುತ್ತಲೇ ಇದೆ. ಶಿವಾಜಿಯ ರಾಜ್ಯ ಸ್ಥಾಪನೆಯ ಮೂಲ ಉದ್ದೇಶ್ಯವು

ಅವರಲ್ಲಿ ಅಡಗಿದೆ. ನಮ್ಮ ಜನರಿಗೆ ಅದನ್ನು ಎತ್ತಿ ಹೇಳಿ ವಿವರಿಸುವ ಉದ್ದೇಶ್ಯದಿಂದಲೇ ನಾನು ಈ ಕಾದಂಬರಿಗಳನ್ನೆಲ್ಲಾ ಬರೆದಿದ್ದೇನೆ. ಅದು ಎಷ್ಟರ ಮಟ್ಟಿಗೆ ಸಾರ್ಥಕವಾಗಿದೆಯೋ ಯಶಸ್ವಿಯಾಗಿದೆಯೋ ಅದನ್ನು ನಿರ್ಧರಿಸುವುದು ವಾಚಕಮಹಾಶಯರ ಅಧಿಕಾರಕ್ಕೆ ಸೇರಿದ್ದು.

ಕನ್ನಡ ನಾಡಿನಲ್ಲಿ ಬಹುಮಂದಿ ಕನ್ನಡ ಭಾಷಾಭಿಮಾನಿಗಳಿಗೆ ನನ್ನ ಪರಿಚಯವಿದೆ. ಅವರ ಅಭಿಮಾನ ವಿಶ್ವಾಸಗಳು ನನ್ನ ಮೇಲೆ ಪರಿಪೂರ್ಣ ವಾಗಿದೆ. ಅದಕ್ಕಾಗಿ ನಾನೆಷ್ಟು ಆನಂದಪಟ್ಟರೂ ತೀರದು. ನನಗೆ ಈ ವಾಚಕರ ಮೆಚ್ಚಿಗೆಗಿಂತಲೂ ಅಧಿಕವಾದುದು ಮತ್ತಾವುದು ಇಲ್ಲ. ಯಾವುದನ್ನೂ ನಾನು ಕೋರುವುದೂ ಇಲ್ಲ. ವಾಚಕರು ನನಗೆ ತೋರಿಸುತ್ತಾ ಬಂದಿರುವ ಅಭಿಮಾನ ಪ್ರೀತಿ ವಿಶ್ವಾಸಗಳಿಗಾಗಿ ಮತ್ತೊಮ್ಮೆ ಹೃತ್ಪೂರ್ವಕವಾದ ವಂದನೆ ಗಳನ್ನು ಅರ್ಪಿಸುತ್ತೇನೆ.

ಈ ಗ್ರಂಥ ಪ್ರಕಟಣದಲ್ಲಿ ನನ್ನನ್ನು ಪ್ರೋತ್ಸಾಹಿಸಿ ಇದನ್ನು ಬರೆಸಿದ ನನ್ನ ಬಹುಕಾಲದ ಮಿತ್ರರಾದ ಶ್ರೀಮಾನ್ ಹೆಚ್. ಭೀಮರಾಯರವರಿಗೂ ಈ ಕರ್ನಾಟಕದಲ್ಲಿ ಸುಪ್ರಸಿದ್ಧ ಪ್ರಕಟಣಕಾರರಾದ ಬೆಂಗಳೂರು ಸ್ಟ್ಯಾಂಡರ್ಡ್ ಬುಕ್ ಡಿಪೋ ಮಾಲೀಕರಾದ ಶ್ರೀ ಕಮಲಾನಾಥ್‌ರವರು ನನ್ನ ಈ ನಾಲ್ಕು ಗ್ರಂಥಗಳ ಪ್ರಕಟಣೆಯನ್ನು ವಹಿಸಿಕೊಂಡಿದ್ದಾರೆ. ಈ ಪ್ರಕಾಶನದ ಸಹಾಯ ಕ್ಕಾಗಿ ಶ್ರೀಮಾನ್ ಕಮಲಾನಾಥ್‌ರವರಿಗೆ ನನ್ನ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ವೀರಕೇಸರಿ ಎಂ. ಸೀತಾರಾಮಶಾಸ್ತ್ರಿ

# ಅಭಿನಂದನೆಗಳು

ಕರ್ನಾಟಕದ ಅಗ್ರಗಣ್ಯ ಐತಿಹಾಸಿಕ ಕಾದಂಬರಿಕಾರರಾದ ಶ್ರೀ ವೀರಕೇಸರಿ ಸೀತಾರಾಮಶಾಸ್ತ್ರಿಗಳು ಶಿವಾಜಿಯ ಜೀವನವನ್ನು ಆಧಾರವಾಗಿಟ್ಟುಕೊಂಡು ಬರೆದಿರುವ ಕಾದಂಬರಿಗಳು :

1. ಯವನ ವಿದ್ರೋಹಿ ಶಿವಾಜಿ
2. ಶಿವಾಜೀ ಮಹಾರಾಜ
3. ಛತ್ರಪತಿ ಶಿವಾಜಿ
4. ಶಿವಾಜಿಯ ಕೈವಲ್ಯ.

ಈ ನಾಲ್ಕು ಕಾದಂಬರಿಗಳು ಒಂದೇ ಸಂಪುಟದಲ್ಲಿ ಪುನರ್‌ಮುದ್ರಣಕ್ಕೆ ಅವಕಾಶ ಮಾಡಿಕೊಟ್ಟ ವೀರಕೇಸರಿ ಸೀತಾರಾಮಶಾಸ್ತ್ರಿ ಕುಟುಂಬವರ್ಗದವರಿಗೂ ಮತ್ತು ಸರಿಯಾದ ಸಮಯಕ್ಕೆ ಪುಸ್ತಕವನ್ನು ಹೊರತರಲು ಸಹಕರಿಸಿದ ಪ್ರತಿಭಾ ಪ್ರಿಂಟರ್ಸ್ ಮತ್ತು ಲಿಪಿ ಮುದ್ರಣದ ಬಳಗಕ್ಕೂ ಎಂದೆಂದೂ ಚಿರಋಣಿಯಾಗಿರುತ್ತೇವೆ. ಹಾಗೂ ಎಲ್ಲಾ ರೀತಿ ಸಹಕಾರ ಮತ್ತು ಪ್ರೋತ್ಸಾಹ ನೀಡಿದ ಅಭಿಮಾನಿಗಳಿಗೂ ಮತ್ತು ಮೀನಾಕ್ಷೀ ಪೇಪರ್ ಮಾರ್ಟ್‌ನವರಿಗೂ, ನಮ್ಮ ಬಳಗವು ಕೃತಜ್ಞತೆಗಳನ್ನು ಅರ್ಪಿಸುತ್ತದೆ. ಮುಖ ಚಿತ್ರವನ್ನು ಸುಂದರವಾಗಿ ಮುದ್ರಿಸಿಕೊಟ್ಟ ಶ್ರೀ ಕೋದಂಡರಾಮ್ ಅವರಿಗೂ, ಎಲ್ಲ ನಮ್ಮ ಹಿತೈಷಿ ಮತ್ತು ಬಳಗಕ್ಕೂ ನಾವು ಅಭಿನಂದನೆಗಳನ್ನು ಸಲ್ಲಿಸುತ್ತಿದ್ದೇವೆ.

**ಸಂಚಾಲಕರು**
ಅ.ಕ.ಶಿ.ಯು. ಬಳಗ,
ಬೆಂಗಳೂರು

17–5–87

# ಯುವನ ವಿದ್ರೋಹಿ ಶಿವಾಜಿ

## ೧

ಸಹ್ಯಾದ್ರಿಯ ತಪ್ಪಲಿನಲ್ಲಿ ದಟ್ಟವಾಗಿ ಬೆಳೆದ ಕಾಡು ಕಣ್ಮನಗಳನ್ನು ಆಕರ್ಷಿಸುವ ಮನೋಹರವಾದ ಪ್ರಕೃತಿ ಸೌಂದರ್ಯ. ಮಾನವ ಜಾತಿಯು ಜನ ಅದನ್ನು ಬಿಟ್ಟುಕೊಟ್ಟದ್ದರೆ, ಗಂಧರ್ವಕಿನ್ನರರು ನಮಗಿರಲಿ ಎಂದು ಆಶೆ ಪಡುವಂಥಾ ರಮ್ಯ ವನಪ್ರದೇಶಗಳು. ಅಂಥಾ ಸ್ಥಳಗಳಲ್ಲಿ ಅಲ್ಲಲ್ಲಿ ಸಣ್ಣ ಹಳ್ಳಿಗಳು. ಆ ಕಾಲದಲ್ಲಿಯೂ ರಾಜಭಾಟಿಗಳುಂಟು. ಆ ರಾಜಭಾಟಿಗಳ ಪಕ್ಕದಲ್ಲಿಯೂ ಊರುಕೇರಿಗಳುಂಟು. ಮೊಗಲ್ ಸೈನಿಕರ ಆಘಾತಗಳಿಂದ ಆ ಊರುಗಳು ಗೋಳು ಕರೆಯುತ್ತಿದ್ದವು. ಆದರೆ ಜನ ಬಿಟ್ಟು ಹೋಗರು. ಅಪ್ಪ ಹಾಕಿದ ಆಲದಮರ, ಅದನ್ನು ಬಿಟ್ಟು ಹೋಗುವ ಸಾಹಸ ನಮ್ಮ ಜನಕ್ಕಿರಲಿಲ್ಲ. ರಾಜಭಾಟಿಯನ್ನು ಬಿಟ್ಟು ಗುಡ್ಡಗಾಡುಗಳ ಕಡೆ ಕಾಲುಹಾದಿಗಳಲ್ಲಿ ನಡೆದುಹೋದರೆ ಆ ವನಗಳ ಮಧ್ಯದಲ್ಲಿ ಕೆಲವು ಹಳ್ಳಿಗಳು ಅವಿತುಕೊಂಡಿದ್ದವು. ಅಲ್ಲಿ ತುರುಷ್ಕ ಸೈನಿಕರ ಹಾವಳಿ ಇಲ್ಲವೆಂದಲ್ಲ. ಆದರೆ ಎಂದೋ ಐವತ್ತು ವರ್ಷಗಳಿಗೊಮ್ಮೆ ನೂರುವರ್ಷಗಳಿಗೊಮ್ಮೆ ತುರುಷ್ಕ ಸೈನಿಕರು ಆ ಹಳ್ಳಿಗಳಲ್ಲಿ ಇಣಕಿ ನೋಡಿ ಕಿತ್ತು ತಿಂದು ಅಲ್ಪಸ್ವಲ್ಪ ಬಚ್ಚಿಟ್ಟದ್ದ ಧನಧಾನ್ಯಗಳನ್ನು ಹೊತ್ತುಕೊಂಡು ಹೋಗುತ್ತಿದ್ದರು. ದನಕರುಗಳನ್ನೂ ಕುರಿಕಡಸುಗಳನ್ನು ಕಿತ್ತು ಕೊಂದು ತಿಂದು ತೇಗುತ್ತಿದ್ದರು. ಆ ಹಾವಳಿಯಲ್ಲಿ ಸತ್ತವರೆಷ್ಟೋ ಕೆಟ್ಟವರೆಷ್ಟೋ. ಬದುಕಿದವರು ಹಳಬರನ್ನೂ ಮರೆತುಬಿಡುತ್ತಿದ್ದರು. ಇತ್ತ ಕಡೆ ಯಾರೂ ಬರುವುದಿಲ್ಲ, ಯಾರೂ ನೋಡುವುದಿಲ್ಲ ಎಂಬ ಧೈರ್ಯದಿಂದ ಬದುಕುತ್ತಿದ್ದರು. ಎಂತಹ ಬದುಕು. ದೇವರುಕೊಟ್ಟ ಜೀವವು ತಾನಾಗಿ ಉಳಿದುಕೊಂಡಿತ್ತು. ಏನೋ ಬದುಕಿಕೊಳ್ಳಲು ಕೈಗೆ

ಸಿಕ್ಕಿದ್ದು ತಿಂದು ಆ ಜನರು ಕಾಲಕಳೆಯುತ್ತಿದ್ದರು. ಅವರಿಗಿದ್ದುದು ಬೇಸಾಯ, ಪಶುಪಾಲನೆಗಳೇ ಜೀವನೋಪಾಯಗಳು.

ಆ ಗೊಂಡಾರಣ್ಯದಲ್ಲಿಯೂ ಬೆಟ್ಟಗಾಡಿನ ಜನರು ಜಮೀನುಗಳನ್ನು ಹದಮಾಡಿ, ನೀರು ಹಾಯಿಸಿ ಸ್ವಲ್ಪ ಸ್ವಲ್ಪ ಗದ್ದೆ ಹೊಲಗಳನ್ನು ಮಾಡಿ, ಉತ್ತು ಬಿತ್ತಿದ್ದರು, ದೇವರ ಕೃಪೆ, ಮಳೆ ಬಂದು ಬೆಳೆ ಚೆನ್ನಾಗಿ ಬೆಳೆದು ಬಂದಿತ್ತು.

ಈ ವರ್ಷ ಕಾಡುಮೃಗಗಳ ಹಾವಳಿ, ಆ ಜನರು ಗಟ್ಟಿಜನ ಹುಲಿ ಕರಡಿಗಳಿಗೆ ಅವರು ಭಯಪಡಲಿಲ್ಲ. ಇಬ್ಬರು ಹೊಂಚು ಕಾದು ದೊಣ್ಣೆಗಳಿಂದಲೇ ಹುಲಿಯನ್ನು ಕೊಂದ ನಿದರ್ಶನಗಳೆಷ್ಟೋ ಉಂಟು. ಆ ಜನಕ್ಕೆ ಅದೊಂದು ದೊಡ್ಡ ಮಾತಲ್ಲ. ಆದರೆ ಈ ಬಾರಿ ಅಂಥಾ ಸಂಕಟವಲ್ಲ. ತೋಳಗಳ ಹಾವಳಿ, ಕಾಡುಹಂದಿಗಳ ಉಪದ್ರವ. ಅವು ರಭಸದಿಂದ ಬಂದು ಬೆಳೆಗಳನ್ನೆಲ್ಲ ನಾಶಪಡಿಸಿ ಓಡಿಹೋಗುತ್ತಿದ್ದವು. ಮೇಯುತ್ತಿದ್ದ ಕುರಿ ಮೇಕೆಗಳನ್ನು ಕೊಂದು ತಿನ್ನುತ್ತಿದ್ದವು. ದನಕಾಯುವ ಹುಡುಗರನ್ನು ಗಾಯಪಡಿಸುತ್ತಿದ್ದುವು. ಜನ ನಿರಾಶೆಯಿಂದ ಗುಂಪು ಕಟ್ಟಿಕೊಂಡು ಗೋಳಿಡುತ್ತಾ ಕುಳಿತಿದ್ದರು. ಹಳ್ಳಿಗಳೆಲ್ಲಾ ಬೆಂಗಾಡುಗಳಂತೆ ಬರಿದಾಗಿ ಹೋಗಿದ್ದುವು.

ಪುಣೆಯಿಂದ ತರುಣರ ತಂಡವೊಂದು ಆ ಹಳ್ಳಿಗಳ ಕಡೆ ಬಂದಿತು. ಹಳ್ಳಿಯ ಜನ ತಲೆ ಎತ್ತಿ ನೋಡಿದರು. ಎಂಥಾ ಜನ. ಎಂಥಾ ವೀರ ಪುರುಷರು. ವೇಷ ಭೂಷಣಗಳನ್ನು ನೋಡಿದರೆ ನಮ್ಮಂತೆಯೇ ಇದ್ದಾರೆ. ಭೂಮಿಯ ಮೇಲೆ ನಡೆದರೆ ಭೂಮಿ ನಡುಗುತ್ತದೋ ಎಂಬ ಭಾವನೆಯಾಗುತ್ತದೆ. ಸೊಗಸಾದ ಕುದುರೆಗಳನ್ನು ಹತ್ತಿ ಬಂದಿದ್ದಾರೆ. ಕೈಯಲ್ಲಿ ಭಲ್ಯ, ಸೊಂಟದಲ್ಲಿ ಕತ್ತಿ. ಈ ತರುಣರನ್ನು ಆ ಹಳ್ಳಿಯ ಜನ ನೋಡಿದರು. ಮೊದಲು ದೂರದಿಂದ ಖರಪುಟಗಳನ್ನು ಕೇಳಿ, ಮೊಗಲ್ ಸೈನಿಕರು ಬಂದು ಬಿಟ್ಟರೇನೋ, ಇನ್ನೇನು ಗತಿ, ಎಲ್ಲಿಯಾದರೂ ಓಡಿಹೋಗಿ ಕಾಡು ಗುಡ್ಡಗಳಲ್ಲಿ ಸೇರಿಕೊಳ್ಳಬೇಕು, ಎಂದು ಆ ಹಳ್ಳಿಗಾಡಿನ ಜನ ತಹತಹ ಪಡುತ್ತಿರುವಷ್ಟರಲ್ಲಿ ಆ ತರುಣರ ತಂಡ, ಆ ಗುಂಪಿನ ಹತ್ತಿರ ಬಂದೇಬಿಟ್ಟಿತು. ಆ ಗುಡ್ಡಗಾಡಿನ ಜನ ಧೈರ್ಯಮಾಡಿ ತಲೆ ಎತ್ತಿ ನೋಡಿದರು. ಹಣೆಯಲ್ಲಿ ಅಗಲವಾದ ಗಂಧದ ಬೊಟ್ಟು. ನೆತ್ತಿಯಲ್ಲಿ ಕುಂಕುಮ. ಹಳ್ಳಿಗರಿಗೆ ಧೈರ್ಯ

ನಾಯಿತು. ಈ ಸೈನಿಕರು ಹಿಂದೂ ಜನ, ನಮ್ಮವರೇ, ಎಂದುಕೊಂಡರು. ಆದರೆ ಯಾಕೆ ಬಂದಿದ್ದಾರೆ? ಎಂಬ ಆಕಾಂಕ್ಷೆಯು ಮಿಡಿಯುತ್ತಲೇ ಇದ್ದಿತು. ಆ ಸವಾರರೆಲ್ಲರೂ ಕುದುರೆಗಳಿಂದ ಜಗಜಗನೆ ಇಳಿದರು. ಸರದಾರನೊಬ್ಬನು "ಕಾಯ್ ಹೋ" "ಕಸಾಲಾ, ಇಥೇಯಾ" ಎಂದು ಆ ಹಳ್ಳಿಗರನ್ನು ಕೈ ಬೀಸಿ ಕರೆದನು. ಆ ಕರೆಯಲ್ಲಿ ಪ್ರೇಮವಿತ್ತು. ಆತ್ಮೀಯತೆ ಇತ್ತು. ಆ ಶಬ್ದಗಳು, ಹಳ್ಳಿಗರ ಕಿವಿಗೆ ಬೀಳುತ್ತಲೇ ಆಪ್ಯಾಯನವಾಯಿತು. ಏನೋ ಹೊಸ ಆಸೆ, ಭರವಸೆಗಳು ಬಂದಂತಾದುವು. ಆ ಜನರ ದೀನವದನಗಳು ಪ್ರಫುಲ್ಲವಾದುವು. ಹಳ್ಳಿಯ ಹೆಂಗಸರು ಮಕ್ಕಳೆಲ್ಲ ಬಂದು ಸುತ್ತಿಕೊಂಡರು. ಆ ಸವಾರರು, ತುರುಷ್ಕ ಸೈನಿಕರು ಯಾರಾದರೂ ಬಂದು ಹಾವಳೀಮಾಡಿದರೇ? ಏಕೆ? ಹಳ್ಳಿಗೆ ಹಳ್ಳಿಯೇ ಗೊಳಾಡುತ್ತಿದೆ ಎಂದು ಕೇಳಿದರು. ಗ್ರಾಮದ ಯಜಮಾನನು ಮುಂದೆ ಬಂದು ಕೈಮುಗಿದು. ಸೈನಿಕರು ಬರಲಿಲ್ಲ. ತೋಳಗಳ ಹಾವಳಿ, ಕಾಡುಹಂದಿಗಳ ಕಾಟ. ನಮ್ಮ ಹೊಲ ಗದ್ದೆಗಳಲ್ಲಿದ್ದ ದೇವರು ಕೊಟ್ಟ ಬೆಳೆಗಳನ್ನೆಲ್ಲಾ ಕಿತ್ತುಕೊಂಡು ಹೋದವು. ಕೈಗೆ ಬಂದ ತುತ್ತು ಬಾಯಿಗೆ ಬರದಂತಾಯಿತು. ಇನ್ನು ಒಂದು ಸಂವತ್ಸರ ಹೇಗೆ ಬದುಕುವುದು. ನಾವಾದರೂ ಗೆಡ್ಡೆಗೆಣಸುಗಳನ್ನು ತಿಂದು ಜೀವ ಉಳಿಸಿಕೊಂಡೇವು. ಈ ಹುಡುಗರು ಮಕ್ಕಳನ್ನು ಕಾಪಾಡುವುದು ಹೇಗೆ, ಎಂದು ಹೇಳುತ್ತಾ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದರು.

ಆ ತರುಣರ ಮುಖಂಡನು ನಾಲ್ಕುಹೆಜ್ಜೆ ಮುಂದೆ ಬಂದು ಹೇಳಿದನು. 'ಅಳಬೇಡಿರಣ್ಣಾ ಅಳಬೇಡಿ' ಹೊಟ್ಟೆಗೆ ಎಲ್ಲಿಂದಲಾದರೂ ತಂದುಕೊಡೋಣ, ಆದರೆ ವರ್ಷವೂ ಅತ್ತರೂ ಆ ಕ್ರೂರ ಮೃಗಗಳಿಗೆ ನಿಮ್ಮ ಕಷ್ಟ ತಿಳಿಯುವು ದೇನಯ್ಯ. ಆದರಿಂದ ಫಲವಿಲ್ಲ. ಬೇಟೆ ಮಾಡಬೇಕು. ಶಿಕಾರಿ ಮಾಡ ಬೇಕು. ತೋಳಗಳನ್ನು ಹಂದಿಗಳನ್ನು ಹೊಡೆದುಕೊಲ್ಲಬೇಕು. ಕೊಂಪು ಮರಗಳಿಗೆ ನೇತುಹಾಕಬೇಕು. ಅದನ್ನು ನೋಡಿದರೆ ಆ ಮೃಗಗಳು ಓಡಿ ಹೋಗುತ್ತವೆ ಏಳಿರಿ. ನಿಮ್ಮ ಹಳ್ಳಿಯಲ್ಲಿ ಮಚ್ಚು ಕುಡಗೋಲು ದೊಣ್ಣೆ ಗಳಿದ್ದರೆ ತೆಗೆದುಕೊಂಡು ಹೊರಡಿರಿ. ನೀವು ಕಟ್ಟುಮಸ್ತು ಆಳುಗಳಿದ್ದೀರಿ. ನಾವೂ ಬರುತ್ತೇವೆ. ನಾವು ಬೇಟೆಗೆ ಬಂದಿದ್ದೇವೆ' ಎಂದು ಹುರಿದುಂಬಿ ಸಿದನು.

ಮಧ್ಯಾಹ್ನದ ಹೊತ್ತಾಗಿತ್ತು ಹಳ್ಳಿಗಾಡಿನವರು ಉಪ್ಪು ಗಂಜಿ, ರೊಟ್ಟಿ ಮೆಣಸಿನಕಾಯಿಗಳನ್ನು ತಂದು ಆ ತರುಣರಿಗೆ ಊಟಕ್ಕೆ ಇಟ್ಟರು, ಅವರು ಅಲಕ್ಷ್ಯ ಮಾಡಲಿಲ್ಲ. ಸಂತೋಷದಿಂದ ಆ ಬಡವರ ಔತಣವನ್ನು ಉಂಡು ಅವರನ್ನು ಪ್ರಶಂಸೆಮಾಡಿದರು. ಹಳ್ಳಿಯ ತರುಣರು ಅವರ ಮುಂದೆ ಹೊರಟರು. ಕುದುರೆಯ ಸವಾರರು ಹಿಂದೆ ಹೊರಟರು. ತಮಟೆಗಳನ್ನು ಬಾರಿಸಿದರು. ಕೊಂಬುಗಳನ್ನು ಊದಿದರು. ವನಪ್ರದೇಶವೆಲ್ಲವೂ ಪ್ರತಿಧ್ವನಿತವಾಗುತ್ತಿದ್ದಿತು.

ಆ ಹಳ್ಳಿಯ ತರುಣರಲ್ಲಿ ನಾಲ್ಕಾರುಜನ ಅಂಬುಗಾರರಿದ್ದರು. ಅವರು ಬಿಲ್ಲುಬಾಣಗಳನ್ನು ತೆಗೆದುಕೊಂಡು ಹೊರಟರು. ಕುದುರೆಯ ಸವಾರರಿಗೆ ಅವರನ್ನು ನೋಡಿ ಆಶ್ಚರ್ಯವಾಯಿತು. ಎಂಥ ಬಲಿಷ್ಠರಾದ ಆಳುಗಳು. ತೋಳುಗಳು ಎಷ್ಟು ಗಾತ್ರವಿದೆ. ತೊಡೆಯ ಕಂಬಗಳು ಎಷ್ಟು ಪುಷ್ಟವಾಗಿದೆ. ಎಂಥಾ ಎದೆಭುಜಗಳು, ಎಷ್ಟು ಅಕೃತಿಮ ನೋಟ ಇವರದು, ಎಂದು ಆಶ್ಚರ್ಯಪಟ್ಟುಕೊಂಡರು. ದಾರಿ ನಡೆದಂತೆಲ್ಲಾ ಪರಸ್ಪರ ಮಾತನಾಡುತ್ತಾ ಸ್ನೇಹವು ಬೆಳೆಯಿತು. ಕುದುರೆಯ ಸರದಾರನು ಅಂಬುಗಾರರನ್ನು ನೋಡಿ ನಗುತ್ತಾ "ಈ ಅಂಬುಗಳಿಂದ ತೋಳಗಳನ್ನು ಹೊಡೆಯಲಾಗುವುದೇ?" ಎಂದು ಕೇಳಿದನು.

"ಸರದಾರರೇ ಈ ಅಂಬಿನ ವಿದ್ಯದ ರಹಸ್ಯವನ್ನು ಕೇಳಿ. ಗುರಿಯಿಟ್ಟು ಹೊಡೆದರೆ ಕಣ್ಣುಗಳು ತೂತಾಗಿಹೋಗುತ್ತವೆ. ಹಣೆಗೆ ಹೊಡೆದರೆ ತಲೆಯಿಂದ ರಕ್ತ ಸೋರುತ್ತದೆ. ಆಗ ತೋಳಗಳು ನೆಗೆದುಹಾರುತ್ತವೆ. ದೊಣ್ಣೆಗಳಿಂದ ಹೊಡೆದರೆ ನೆಲದ ಮೇಲೆ ಬಿದ್ದು ಸಾಯುತ್ತವೆ" ಎಂದು ಹೇಳಿದರು.

ಕಾಡಿನ ಕಡೆಯಿಂದ ಗಿಡಗಳ ಮಧ್ಯೆ ರಭಸದಿಂದ ತೋಳವು ಬರುತ್ತಿರುವ ಸದ್ದು ಕೇಳಿಸಿತು. ಕುದುರೆಯ ಸವಾರರು "ಅಣ್ಣಗಳಿರಾ, ಅಂಬು ಹೊಡೆಯಿರಿ ನೋಡೋಣ" ಎಂದನು. ಇಬ್ಬರು ಅಂಬುಗಾರರು ಗುರಿಯಿಟ್ಟು ಎರಡು ಬಾಣಗಳನ್ನು ಹೊಡೆದರು. ತೋಳವು ಅರ್ಭಟಿಸುತ್ತಾ ಮೇಲೆ ಚಿಮ್ಮಿತು. ಕುದುರೆಯ ಸವಾರನು ಈಟಿಯಿಂದ ಹೊಟ್ಟೆಗೆ ತಿವಿದನು. ತೋಳವು ಅರ್ಭಟಿಸುತ್ತಾ ನೆಲದಮೇಲೆ ಸುತ್ತುತ್ತಿತ್ತು. ಮತ್ತೊಬ್ಬನು ಈಡಿಯಿಂದ ತಿವಿದನು. ನೆಲದ ಮೇಲೆ ಬಿತ್ತು. ಕತ್ತಿಯಿಂದ ಚುಚ್ಚಿದನು.

ಈ ಬೇಟೆಯು ಗದ್ದಲ ಹಳ್ಳಿಯಿಂದ ಹಳ್ಳಿಗೆ ಹಬ್ಬಿತು. ತರುಣರೆಲ್ಲರೂ ಬೇಟೆಗೆ ಹೊರಟರು. ಎಲ್ಲೆಲ್ಲಿಯೂ ತೋಳಗಳು ಹಂದಿಗಳು ಸತ್ತು ಬೀಳು ತ್ತಿದ್ದುವು.

ಪುಣೆಗೆ ಸುಮಾರು ಒಂದು ಗಾವುದ ದೂರದಲ್ಲಿ ತೋರಣವೆಂಬು ದೊಂದು ಊರು. ಆ ಊರಿನ ಕೋಟೆ ಭದ್ರವಾದ ಕೋಟೆ. ಅಲ್ಲಿ ಬಿಜಾ ಪುರದ ಸುಲ್ತಾನನ ಸೈನ್ಯದ ಠಾಣೆಯಿತ್ತು. ಒಬ್ಬ ತುರುಷ್ಕ ಸೇನಾಪತಿ ಯಿದ್ದನು.

ಆ ಸವು ಮೊಗಲ್ ಚಕ್ರವರ್ತಿಗಳ ರಾಜ್ಯಕ್ಕೂ ಬಿಜಾಪುರ ರಾಜ್ಯಕ್ಕೂ ಗಡಿನಾಡಾಗಿದ್ದಿತು. ಅಲ್ಲಿ ಆಯಕಟ್ಟಿನ ಸ್ಥಳಗಳಲ್ಲಿ ಅನೇಕ ದುರ್ಗಗಳಿದ್ದುವು. ಅವೆಲ್ಲವೂ, ಬಿಜಾಪುರದ ಸುಲ್ತಾನನಿಗೆ ಸೇರಿತ್ತು. ಅಲ್ಲೆಲ್ಲಾ ಬಿಜಾಪುರದ ಸೈನಿಕರಿದ್ದರು.

ತೋರಣದಲ್ಲಿದ್ದ ನಾಲ್ಕಾರು ಸೈನಿಕರು ಈ ಕಾಡುಗಳಲ್ಲಿ ಕುದುರೆಯ ಮೇಲೆ ತಿರುಗಾಟಕ್ಕೆ ಹೊರಟಿದ್ದರು. ಅದು ಗಸ್ತಿನ ತಿರುಗಾಟ. ಶತ್ರುಗಳ ಸುಳಿವನ್ನು ಕಂಡುಹಿಡಿಯುವ ಗಸ್ತು. ಕಾಡಿನಲ್ಲಿ ತೋಳಗಳು ಸತ್ತು ಬಿದ್ದಿವೆ. ಈಟಿ ಭಲ್ಯ ಕತ್ತಿಗಳಿಂದ ಘಾಯಮಾಡಿದ್ದಾರೆ, ಕುದುರೆಯ ಗೊರಸಿನ ಗುರುತುಗಳಿವೆ. ಇದೇನು, ಯಾರೋ ಸೈನಿಕರು ಇಲ್ಲಿ ಓಡಾಡುತ್ತಿರಬಹುದು ಎಂದು ಶಂಕಿಸಿ ದಟ್ಟವಾದ ಅರಣ್ಯದಲ್ಲಿ ಸ್ವಲ್ಪದೂರ ಕುದುರೆಗಳನ್ನು ಚುಕಾ ಯಿಸಿದರು. ತಮಟೆ ಕೊಂಬುಗಳ ಸದ್ದು ಕಿವಿಗೆ ಬಿತ್ತು. ಆಲೈಸಿ ಕೇಳಿದರು. ಆಕ್ರೋಶದಿಂದ ಮುಂದೆ ನುಗ್ಗಿದರು. ಈ ಬೇಟೆಗಾರರ ದಂಡು ಅವರಕಣ್ಣಿಗೆ ಬಿದ್ದಿತು. ಅವರನ್ನು ನೋಡಿ ಆ ಬಿಜಾಪುರಿ ಸೈನಿಕರು ಅಚ್ಚರಿಗೊಂಡರು. ಹಳ್ಳಿಯ ತರುಣರು ಅವರಕಡೆ ಬಿರುಗುಟ್ಟಿಕೊಂಡು ನೋಡುತ್ತಿದ್ದರು. ಕುದುರೆ ಸವಾರರು "ಅವು ತೋಳಗಳಲ್ಲ" ಕಾಣಿರೋ ಬಿಜಾಪುರದ ಸುಲ್ತಾನರ ಗೂಳಿ ಗಳು,ಎಂದು ಹಾಸ್ಯಮಾಡಿ ನಗುತ್ತಾ ಕೇಕೆಹಾಕುತ್ತಾ ಮುಂದೆಹೋದರು. ಆ ಮಾತುಗಳು ತುರುಷ್ಕ ಸೈನಿಕರ ಕಿವಿಗೆ ಬೀಳುತ್ತಲೇ ಬಿಸಿಬಿಸಿಯಾಯಿತು. ರೋಷವೆದ್ದಿತು. ಅವರು ಕುದುರೆಗಳನ್ನು ತಿರುಗಿಸಿ, ಮುಂದೆ ತಂದು ತಡೆದು ನಿಲ್ಲಿಸಿ, "ಯಾರೋ ನೀವು ಕಳ್ಳರಂತೆ ಕಾಣುತ್ತೀರಿ, ದರೋಡೆಕೋರರಂತೆ ಕಾಣುತ್ತೀರಿ" ಎಂದು ಗದ್ದರಿಸಿದರು.

ಹಳ್ಳಿಯ ತರುಣರು "ಇಲ್ಲ ಸಾಹೇಬಾ ನಾವು ಸತ್ಯವಾಡುವ ಜನ ಬೇಟೆ. ಯಾಡುತ್ತಿದ್ದೇವೆ. ನಿಮ್ಮ ದಾರಿ ನೋಡಿಕೊಂಡು ನೀವು ಹೋಗಿ ನಮ್ಮ ಹಾದಿ ನಮಗೆ" ಎಂದು ಹೇಳಿದರು.

ತುರುಷ್ಕ ಸೈನಿಕರು ಅವರ ಅಲಕ್ಷ್ಯದ ಮಾತುಗಳನ್ನ ಕೇಳಿ "ಅಲ್ಲ ಕಾಣಿರೋ ಹಂದಿಗಳಿರಾ! ಇದು ಸರಕಾರದ ರಾಜ್ಯ, ಎಂಬುದು ಗೊತ್ತಿಲ್ಲ ವೇನಿರೋ ಬೇಟೆಯಾಡಲು ನಮು ಗಾರು ಪರವಾನಗಿ ಕೊಟ್ಟಿದ್ದಾರೆ" ಎಂದು ಅಧಿಕಾರವಾಣಿಯಿಂದ ನುಡಿದರು. ಅವರಿಗೆ ಆ ಅಧಿಕಾರ ಮದದಲ್ಲಿ ತಾವು ಎಷ್ಟು ಮಂದಿ ಇದ್ದೇವೆ ಈ ಜನನೆಷ್ಟಿವೆ ಎಂಬ ಜ್ಞಾನೋದಯವೇ ಆಗಲಿಲ್ಲ. ಹಿಂದೂ ಸವಾರರು ಅವರಮೇಲೆ ನುಗ್ಗಿ ಕೆಳಗುರುಳಿಸಿದರು. ಕತ್ತಿಗಳನ್ನು ಕಿತ್ತುಕೊಂಡರು. ಹಗ್ಗಗಳಿಂದ ಮರಗಳಿಗೆ ಕಟ್ಟಿಬಿಗಿದರು. ಅವರ ಬಾಯಿಗಳಿಗೆ ಬಟ್ಟೆ ತುರುಕಿ "ಹರಾಂ ಥಾಂಡಿಗರ ಎಚ್ಚರವಿರಲಿ" ಎಂದು ಮೂದಲಿಸಿ ಹೊರಟುಹೋದರು.

ಆ ಗುಡ್ಡಗಾಡು ಪ್ರದೇಶವು ಮಹಾರಾಷ್ಟ್ರದ ಸೀಮೆ. ನವರಾತ್ರಿಯ ದಿನಗಳು ಬಂದವು. ಎಲ್ಲೆಲ್ಲಿಯೂ ದುರ್ಗಾಪೂಜೆ. ಆ ಹಳ್ಳಿಗಳಲ್ಲೆಲ್ಲಾ ಪುಣೆಯ ಹೆಸರು ಕೇಳಿಬರುತ್ತಿದ್ದಿತು.

ಪುಣೆಯೆಂದರೆ ಇಂದಿನ ಮಹಾನಗರಿಯಲ್ಲ. ಅಂದು ಅದೊಂದು ಸಣ್ಣ ಹಳ್ಳಿ. ಆಮೇಲೆ ಬೆಳೆದು ಬೆಳೆದು ಮಹಾನಗರಿಯಾಯಿತು. ಮಹಾರಾಷ್ಟ್ರದ ರಾಜಧಾನಿಯಾಯಿತು. ನಾವು ಹೇಳುತ್ತಿರುವ ಕಾಲ ಮೂರು ಶತಮಾನಗಳ ಹಿಂದಿನ ಕಾಲ. ಪುಣೆ ಸಣ್ಣಹಳ್ಳಿ. ಅದು ಶಿವಾಜಿಯ ತಂದೆ ಷಾಜಿಯವರ ಜಹಗೀರ. ಬಿಜಾಪುರದ ಸಂಸ್ಥಾನಕ್ಕೆ ಸೇರಿದ ಗಡಿಪ್ರದೇಶ.ಆಗಾಗ ಮೊಗಲರು ಬಂದು ಹಾವಳಿಮಾಡಿ ಊರು ಹಾಳಾಗಿತ್ತು. ಷಾಜಿಯು ಬಿಜಾಪುರದಲ್ಲಿ ಮಹೋನ್ನತ ಪದವಿಯುಳ್ಳಿದ್ದನು. ಅವನಿಂದ ಪರಿತ್ಯಕ್ತಳಾದ ಧರ್ಮಪತ್ನಿ ಅವಳ ಜೊತೆಯಲ್ಲಿ ತಂದೆಯ ಆಗ್ರಹ ಪುತ್ರನಾದ ಕುಮಾರ ಶಿವಾಜಿ ಅಲ್ಲಿ ಬೆಳೆಯುತ್ತಿದ್ದನು. ದಾದಾಜೀಕೊಂಡದೇವನೆಂಬ ಬ್ರಾಹ್ಮಣನನ್ನು ಷಾಜಿಯು ಶಿವಾಜಿಯ ಉಪಾಧ್ಯಾಯನನ್ನಾಗಿ ನೇಮಿಸಿದ್ದನು. ಜಹಗೀರಿಯ ಆಡಳಿತಾಧಿ ಕಾರವನ್ನೂ ದಾದಾಜೀಯೇ ನೋಡಿಕೊಳ್ಳುತ್ತಿದ್ದನು ನಿಷ್ಠಾವಂತ ನಿಸ್ಪೃಹ ಬ್ರಾಹ್ಮಣ ಕೊಂಡದೇವನು ಆ ಜಮೀನ್‌ದಾರಿಯನ್ನು ಬಹಳ ಅಭಿವೃದ್ಧಿಗೆ

ತಂದಿದ್ದನು. ಆ ಗುಡ್ಡಗಾಡಿನ ಜನ ಕಷ್ಟಪಟ್ಟು ಬೇಸಾಯ ಮಾಡುವವರಲ್ಲ. ಅವರಿಗೆಲ್ಲಾ ಅನ್ನ ಬಟ್ಟೆಗಳನ್ನು ಕೊಟ್ಟು ವಿಶೇಷ ಪ್ರೋತ್ಸಾಹ ಕೊಟ್ಟು ಒಳ್ಳೆಯ ಬೇಸಾಯದಲ್ಲಿ ಪಳಗಿಸಿದ್ದನು. ಪುಣೆಯ ವಿಷಯದಲ್ಲಿ ಅನೇಕ ಕಥೆಗಳಿವೆ. ಅಂತಹ ಪ್ರಾಚೀನ ಕಥೆಗಳನ್ನುಳ್ಳ ಪುರಾತನ ಗ್ರಾಮಗಳೇ ಮುಂದಿನ ಚರಿತ್ರೆಗಳಲ್ಲಿ ಬಲು ದೊಡ್ಡ ಪ್ರಾಮುಖ್ಯತೆಯನ್ನು ಪಡೆದಿರುವ ಮಹಾನಗರಗಳು, ಯಾತ್ರಾಸ್ಥಳಗಳು, ಪುಣ್ಯಸ್ಥಳಗಳೂ ಆಗಿವೆ. ಕ್ರೂರಿಯಾದ ಮೊಗಲ್ ಸೇನಾಧಿಪತಿಯೊಬ್ಬನು ಸೈನ್ಯ ಸಮೇತ ಆ ಗ್ರಾಮಕ್ಕೆ ಬಂದನಂತೆ. ಅಲ್ಲಿ ಒಂದು ಹಿಡಿ ದವಸವೂ ಸಿಕ್ಕಲಿಲ್ಲ.ಒಂದು ಚಿನ್ನದ ನಾಣ್ಯವೂ ದೊರೆಯಲಿಲ್ಲ. ಒಬ್ಬ ಯುವತಿಯೂ ಕಣ್ಣಿಗೆ ಬೀಳಲಿಲ್ಲ. ಎಲ್ಲರೂ ಕಾಡು ಸೇರಿಕೊಂಡು ಊರು ಬರಿದಾಗಿಹೋಗಿತ್ತು. ಸೇನಾಧಿಪತಿಗೆ ಕೋಪವು ಇಮ್ಮಡಿಸಿತು. ಅವನ ಸೈನಿಕರನ್ನು ಬಿಟ್ಟು ಆ ಮನೆಗಳನ್ನೆಲ್ಲಾ ನೆಲಸಮ ಮಾಡಿಸಿದನು. ನೇಗಿಲುಗಳಿಗೆ ಕತ್ತೆಗಳನ್ನು ಕಟ್ಟಿಸಿ ಉಳಿಸಿದನು. ಊರು ಮಧ್ಯದಲ್ಲಿ ಒಂದು ಕಬ್ಬಿಣದ ಕಂಭವನ್ನು ನೆಡಿಸಿ ಗುರುತು ಮಾಡಿಹೋದನು. ಗ್ರಾಮದ ಜನ ಪುನಃ ಬಂದು ಸೇರಿಕೊಂಡರು. ಗುಡಿಸಲುಗಳನ್ನು ಹಾಕಿಕೊಂಡು ಗಾಳಿ ಮಳೆಗಳಿಗೆ ಮರೆಮಾಡಿಕೊಂಡರು. ಹಾಗೆಯೇ ಇದ್ದ ಹಾಳು ಗ್ರಾಮ ಕೊಂಡದೇವನ ಅಧಿಕಾರದಿಂದ ಬೆಳಕು ಮಾಡಿದಂತಾಯಿತು. ಆ ಕಬ್ಬಿಣದ ಕಂಭವನ್ನು ನೋಡಿ ಜನ ಹೆದರುತ್ತಿದ್ದರು. ಕೊಂಡದೇವನು ತಾನೇ ತನ್ನ ಕೈಯಿಂದ ಆ ಕಂಭವನ್ನು ಕಿತ್ತುಹಾಕಿದನು. ಒಳ್ಳೆಯ ಎತ್ತುಗಳನ್ನು ಕಟ್ಟಿ ಚಿನ್ನದ ಗುಳದಿಂದ ಉಳಸಿದನು, ಆಮೇಲೆ ಊರು ಅಭಿವೃದ್ಧಿಯಾಗಿ ಕಳಕಳಿಸತೊಡಗಿತು. ಮನೆಗಳನ್ನು ಕಟ್ಟಿದರು. ಬಡವರಾದರೂ ಅಚ್ಚುಕಟ್ಟಾದ ಮನೆಗಳು. ಮನೆಯ ಗೋಡೆಗಳಲ್ಲಿ ಕೃಷ್ಣ ರುಕ್ಮಿಣಿ ಚಿತ್ರ, ಕಾಳಿಂಗ ಮರ್ಧನ ಚಿತ್ರ ಬರೆಯುತ್ತಿದ್ದರು. ಊರು ಮಧ್ಯದಲ್ಲಿ ಒಂದು ದೇವಾಲಯ. ಮತ್ತೊಂದುಕಡೆ ಜಹಗೀರ್‌ದಾರ್‌ರ ಹಳೆಯ ಕಾಲದ ದೊಡ್ಡ ಮನೆ. ಹೊರಗಿನ ಚಾವಡಿ ವಿಶಾಲವಾಗಿದ್ದಿತು. ಒಳಗಿನ ಹಜಾರ ದೊಡ್ಡದಾಗಿದ್ದಿತು. ಮಧ್ಯೆ ತುಳಸಿಯ ಬೃಂದಾವನ. ಒಂದೆರಡು ಪಾರಿಜಾತ ವೃಕ್ಷಗಳು, ಹೂವಿನ ಗಿಡಗಳು ಶೋಭಿಸುತ್ತಿದ್ದುವು. ಹೊರಗಿನ ಚಾವಡಿಯಲ್ಲಿಯೇ ಕೊಂಡದೇವನು ಶಿವಾಜಿಯನ್ನು ಅವನ ಸಹಪಾಠಿಗಳನ್ನು ಸೇರಿಸಿ

ಪಾಠಪ್ರವಚನಗಳನ್ನು ಮಾಡುತ್ತಿದ್ದನು.ಮಧ್ಯಾಹ್ನವೆಲ್ಲಾ ಲೆಖ್ಖಪತ್ರಗಳನ್ನು ನೋಡಿ ಬರೆದಿಡುತ್ತಿದ್ದನು. ಸಂಧ್ಯಾಕಾಲ ದೀಪಸ್ತಂಭಗಳಲ್ಲಿ ದೀಪಗಳನ್ನು ಹಚ್ಚಿಡುತ್ತಿದ್ದರು. ಕೊಂಡದೇವನು ತನ್ನ ಶಿಷ್ಯರಿಗೆ ಭಜನೆ ಮಾಡಿಸಿ, ರಾಮಾಯಣ ಮಹಾಭಾರತ ಕಥೆಗಳನ್ನು ಹೇಳುತ್ತಿದ್ದನು. ಊರಿನ ಜನರೂ ಬಂದು ಕೇಳಿಕೊಂಡು ಹೋಗುತ್ತಿದ್ದರು. ಹೀಗೆ ಪ್ರಾತಃಕಾಲದಿಂದ ಸಂಧ್ಯಾ ಕಾಲದವರೆಗೆ ಓದುವ ಹುಡುಗರು ರೈತರು ಊರಜನರೂ ಆ ಚಾವಡಿಯಲ್ಲಿ ಸೇರಿರುತ್ತಿದ್ದರು. ಒಳಗಿನ ಹಜಾರದಲ್ಲಿ ಜೀಜಾಬಾಯಿಯು ಮನೆಯ ಕೆಲಸ ಗಳನ್ನೆಲ್ಲಾ ಮಾಡಿ, ದೇವರಪೂಜೆ ನಡೆಸುತ್ತಿದ್ದಳು.ಬ್ರಾಹ್ಮಣರಿಗೆ ದಾನದಕ್ಷಿಣೆ ಗಳನ್ನು ಕೊಡುತ್ತಿದ್ದಳು. ಬಡವರಿಗೆ ಅನ್ನ ಗಂಜಿ ನೀಡುತ್ತಿದ್ದಳು ಮಕ್ಕಳಿಗೆ ಹಾಲುಕೊಡುತ್ತಿದ್ದಳು. ಆ ಊರಿನ ಪಾಠಶಾಲೆ, ಅನ್ನಛತ್ರ, ನ್ಯಾಯಾಲಯ ಕಛೇರಿ ಎಲ್ಲವೂ ಆ ಮನೆಯೇ ಆಗಿತ್ತು. ನವರಾತ್ರಿಯಲ್ಲಿ ಅಮ್ಮನವರನ್ನು ಕೂಡಿಸಿ,ಪೂಜೆ ಪುನಸ್ಕಾರಗಳು ವಿಶೇಷವಾಗಿ ನಡೆಯುತ್ತಿದ್ದುವು. ಬ್ರಾಹ್ಮ ಣರು ಸಪ್ತಶತಿ ಪಾರಾಯಣ, ದುರ್ಗಾಪೂಜೆ, ಚಂಡೀಹೋಮಗಳನ್ನು ಆ ಮನೆಯ ಒಳಗಿನ ಹಜಾರದಲ್ಲಿ ಮಾಡುತ್ತಿದ್ದರು. ಹೊರಗಿನ ಚಾವಡಿಯಲ್ಲಿ ಮನೆಯ ಮುಂದಿನ ಅಂಗಳವಲ್ಲಿ ಹುಡುಗರು ನಾಡಹಬ್ಬದ ಹಾಡುಗಳನ್ನು ಹಾಡುತ್ತಾ ಕೋಲಾಟವಾಡುತ್ತಿದ್ದರು. ಹೆಣ್ಣು ಹುಡುಗಿಯರು ಹಾಡು ಹೇಳುತ್ತಾ ರಂಗವಲ್ಲಿಗಳನ್ನು ಹಾಕಿ ಆರತಿಯ ತಟ್ಟೆಗಳಲ್ಲಿ ದೀಪಗಳನ್ನು ಹಚ್ಚಿಟ್ಟುಕೊಂಡು ಬೃಂದಾವನಕ್ಕೆ ಪೂಜೆ ಮಾಡಿ ಆರತಿ ಮಾಡುತ್ತಿದ್ದರು ಹೀಗೆ ಹಬ್ಬವು ವಿಜೃಂಭಣೆಯಿಂದ ನಡೆಯುತ್ತಿದ್ದಿತು

ಕೊಂಡದೇವನು ಸ್ನಾನಾಹ್ನಿಕಗಳನ್ನು ಮುಗಿಸಿಕೊಂಡುಪುಂಡ್ರಧಾರಣೆ ಮಾಡಿಕೊಂಡು ಕಛೇರಿಯಲ್ಲಿ ಆಥ್ಯತೆಯಿಂದ ಲೋಡು ದಿಂಬುಗಳನ್ನು ಒರಗಿ ಕುಳಿತು ಕೊಂಡಿದ್ದನು. ಗುಮಾಸ್ತರಿಬ್ಬರು ಜಮಿಾನ್ದಾರಿಯ ಲೆಖ್ಖಗಳನು ತಾಳೆಹಾಕಿ ಸುಲಾವಣೆ ಮಾಡುತ್ತಿದ್ದರು, ಊರುಬಾಗಿಲಿನ ಅಟ್ಟಣಿಕೆಯ್ನು ಕಾವಲುಗಾರರು ಓಡಿಬಂದು ಬಿಜಾಪುರದ ಸುಲ್ತಾನರ ಸಿಪಾಯಿಗಳಿಬ್ಬರು ಬಂದಿದ್ದಾರೆಂದೂ, ಪಗಡೀ ಧರಿಸಿದ ಕಾರಕೂನನೂ ಅವರ ಜೊತೆಯಲ್ಲಿ ಬಂದಿದ್ದಾನೆಂದೂ, ವಿನಯದಿಂದ ಅರಿಕೆಮಾಡಿದರು. ಕೊಂಡದೇವನು ಅವರನ್ನು ಕರೆತರುವಂತೆ ಅಪ್ಪಣೆ ಮಾಡಿದನು. ಆ ಸಿಪಾಯಿಗಳೂ ಕಾರ

ಕೂನನೂ ಬಂದು ಆ ತೇಜಸ್ವಿಯಾದ ವೃದ್ಧ ಬ್ರಾಹ್ಮಣನನ್ನು ಕಂಡರು. ಮಾತು ಕಥೆಗಳು ಸೌಜನ್ಯದಿಂದಲೇ ಆರಂಭವಾದವು. ಕಾರಕೂನನು ಬ್ರಾಹ್ಮಣ, ಅವನು ಸಮಾಚಾರವೆಲ್ಲವನ್ನೂ ಗೋಪ್ಯವಾಗಿ ದಾದಾಜಿಯವರಿಗೆ ಅರಿಕೆಮಾಡಿದನು. ಶೋರಣದ ಠಾಣ್ಯದ ಗಸ್ತು ಸಿಪಾಯಿಗಳನ್ನು ಹೊಡೆದು ಬಡೆದು ಮರಗಳಿಗೆ ಕಟ್ಟಿಹಾಕಿದ್ದರು. ಈ ಸಮಾಚಾರ ಸೇನಾಧಿಪತಿ ಗಫೂರ್ ಖಾನ್ ಸಾಹೇಬರಿಗೆ ತಿಳಿಯಿತು. ಅವರು ವಿಚಾರಣೆ ನಡೆಸಿದರು. ಹತ್ತಿಪ್ಪತ್ತು ಕುದುರೆಯ ಸವಾರರಿದ್ದರೆಂದು ಅವರಿಗೆ ವರದಿಯಾಗಿದೆ. ಆ ಸವಾರರ ಮುಖಂಡನು ಶಿವಾಜಿಯೆಂದು ಸಾಹೇಬರಿಗೆ ಗೊತ್ತಾಗಿದೆ, ಶಿವಾಜಿಯನ್ನು ಕರೆತರಬೇಕೆಂದು ಅಪ್ಪಣೆಮಾಡಿ ಕಳುಹಿಸಿದ್ದಾರೆ ಎಂದು ವಿನಯದಿಂದ ತಿಳಿಸಿದನು. ಕೊಂಡದೇವನ ಮುಖಭಾವದಲ್ಲಿ ಬದಲಾವಣೆ ಏನೂ ಆಗಲಿಲ್ಲ. ಅವನು ನಿಧಾನವಾಗಿ "ಶಿವಾಜಿಯವರೆಂದರೆ ಯಾರೆಂದುಕೊಂಡಿದ್ದೀರಿ. ನೀವೆಲ್ಲಿಯೋ ತಪ್ಪಿ ಇಲ್ಲಿಯವರೆಗೆ ಬಂದುಬಿಟ್ಟಿದ್ದೀರಿ, ಒಳ್ಳೆಯದು ನೀವೂ ನಮ್ಮವರೇ, ಈ ಜಹಗೀರಿಯ ಒಡೆಯರು ಬಹದ್ದೂರ್ ಷಾಜಿಯವರು. ಬಿಜಾಪುರದ ದರಬಾರಿನಲ್ಲಿ ಅವರ ಹೆಸರನ್ನು ಕೇಳದವರಿಲ್ಲ, ಅವರ ಮಕ್ಕಳು ಶಿವಾಜಿರಾಯರು. ಅವರು ಅಂಥಾ ಕೆಲಸಗಳಿಗೆ ಹೋಗುವವರಲ್ಲ. ನಿಮ್ಮ ಸಿಪಾಯಿಗಳಿಗೂ ಆ ಕುದುರೆಯ ಸವಾರರಿಗೂ ಹೋರಾಟ ನಡೆಯಲಿಲ್ಲ. ಸಿಪಾಯಿಗಳಾರೂ ಸತ್ತಿಲ್ಲ. ಇಂಥಾ ಪ್ರಕರಣದಲ್ಲಿ ಖಾನ್ ಸಾಹೇಬರಿಗೆ ವಿಚಾರಣೆ ನಡೆಸುವ ಅಧಿಕಾರವಿಲ್ಲ. ವಿಚಾರಣೆಯಾಗಬೇಕಾದರೆ ಬಿಜಾಪುರದ ದರ್ಬಾರಿನಲ್ಲಿ ವಿಚಾರಣೆ ನಡೆಯಬೇಕು. ಅಂಥಾ ದೊಡ್ಡ ಪ್ರಮೇಯವೇನೂ ಈಗ ನಡೆದಿಲ್ಲ. ವೃಥಾ ಕಿತ್ತಾಟಕ್ಕೆ ಕೈಹಚ್ಚಬೇಡಿರಿ, ಇದೆಲ್ಲಾ ರಗಳೆಗಿಟ್ಟುಕೊಂಡು ಎಲ್ಲಿಂದ ಎಲ್ಲಿಗೇ ಹೋಗುತ್ತೋ ಯಾರಿಗೆ ಗೊತ್ತು, ಎಂದು ಹೇಳಿ ಕಾರಕೂನನ ಕಡೆ ತಿರುಗಿ ರಾವ್‌ಜೀ ನೀವು ಬ್ರಾಹ್ಮಣ ಮುತ್ಸದ್ದಿಗಳು, ನಿಮಗಿಷ್ಟು ಮುಂದಾಲೋಚನೆ ಹೊಳೆಯಲಿಲ್ಲವೇ? ವಿಚಾರಣೆ ಹಾಗಿರಲಿ ಮೊದಲು ನಿಮ್ಮ ತಲೆಗೆ ಬರುವ ಪ್ರಸಂಗವಿದು ಷಾಜಿಯವರೆಂದರೆ ಏನೆಂದುಕೊಂಡಿದ್ದೀರಿ. ಬಿಜಾಪುರ ರಾಜ್ಯದಲ್ಲಿ ಅವರ ಹೆಸರು ಎತ್ತುವುದಕ್ಕೆ ಯಾರಿಗೆ ಧೈರ್ಯವಿದೆ. ಈ ಪೀಕಲಾಟಕ್ಕೆ ನೀವೆಲ್ಲಿ ಸಿಕ್ಕಿಕೊಂಡಿರಿ, ಎಂದು ಹೇಳಿದನು. ಕಾರಕೂನನ ಮುಖ ಸಪ್ಪಗಾಯಿತು. ಅವನು ದಾದಾಜೀಸಾಹೇಬ್,

ನಾನೇನು ಮಾಡಲಿ ತಾವು ಹೇಳಿದ್ದನ್ನೆಲ್ಲಾ ನಾನು ಅರಿತೇ ಇದ್ದೇನೆ. ಆದರೆ ಬಿಜಾಪುರದ ಸಿಪಾಯಿಗಳಿಗೆ ಅಪಮಾನವಾಗಿದೆಯೆಂದು, ಖಾನ್ ಸಾಹೇಬರು ರೊಚ್ಚಿಗೆದ್ದಿದ್ದಾರೆ. ಅವರು ನನ್ನನ್ನು ಹೋಗಿ ಬಾ, ಎಂದರು ಇಲ್ಲಿಯವರೆಗೆ ಬಂದೆ. ನನ್ನ ಅಪರಾಧವಿದ್ದರೆ ಮನ್ನಿಸಿರಿ ಎಂದು ಹೇಳಿದನು.

ಕೊಂಡದೇವನು ಒಳ್ಳೆಯದು ಹೊತ್ತು ಏರುತ್ತಿದೆ ಒಳಗೆ ಹೋಗಿ ಸ್ನಾನ ಭೋಜನಗಳನ್ನು ನೆರವೇರಿಸಿರಿ, ಭೋಜನೋತ್ತರ ಏನಾದರೂ ಯೋಚನೆ ಮಾಡೋಣ, ಎಂದು ಹೇಳಿದನು.

ಬಿಜಾಪುರದ ಸಿಪಾಯಿಗಳಿಬ್ಬರೂ ಕಛೇರಿಯ ಠಾಣೆಯಲ್ಲಿ ಬಿಡಾರ ಮಾಡಲಿ, ಅವರ ಊಟ ಉಪಚಾರಗಳಿಗೆ ವ್ಯವಸ್ಥೆ ಮಾಡೋಣ ಎಂದು ಹೇಳಿ ಕಳುಹಿಸಿದನು.

ಮಧ್ಯಾಹ್ನ ಪೂಜೆ ಮಂಗಳಾರತಿಗಳಾದ ಮೇಲೆ ಬ್ರಾಹ್ಮಣಭೋಜನ ವಾಯಿತು. ಕಾರಕೂನನಿಗೂ ಒಳ್ಳೆಯ ಹಬ್ಬದೂಟ ಸಿಕ್ಕಿತು. ಮಧ್ಯಾಹ್ನೋತ್ತರ ಕಛೇರಿಯಲ್ಲಿ ಸಿಪಾಯಿಗಳಿಗೂ ಕಾರಕೂನನಿಗೂ ತಾಂಬೂಲಗಳನ್ನು ಕೊಟ್ಟರು.

ಕೊಂಡದೇವನು ಸ್ನೇಹ ಪುರಸ್ಸರವಾಗಿ ಅವರನ್ನು ಬೀಳ್ಕೊಟ್ಟು ಕಳುಹಿಸಿದನು. ದಾರಿಯಲ್ಲಿ ಬರುತ್ತಾ ಸಿಪಾಯಿಗಳೂ ಕಾರಕೂನನೂ ಬಹಳ ಮಾತನಾಡಿಕೊಂಡರು. ಅವರಿಗೆ ಇನ್ನೂರೈವತ್ತು ಮೊಹರುಗಳ ಗುಪ್ತದಾನ ಸಿಕ್ಕಿತ್ತು. ಹೇಗೆ ಹಂಚಿಕೊಳ್ಳಬೇಕು, ಎಂಬ ಮಾತುಗಳಿಗೆ ಮೊದಲಾಯಿತು. ಸಿಪಾಯಿಗಳು ನಾಲ್ವರಿಗೂ ಕಾರಕೂನನಿನೂ ಸಮಭಾಗ ಐವತ್ತು ಐವತ್ತು ಮೊಹರುಗಳು ಸಿಕ್ಕಿದುವು. ಅವರ ಆನಂದಕ್ಕೆ ಪಾರವಿಲ್ಲ. ದೊಡ್ಡ ವಿಜಯಗಳಿಸಿ ತೆಂದುಕೊಂಡು ಹೊರಟುಹೋದರು. ಮತ್ತಾರಿಗೂ ಈ ವಿಷಯ ಕಿವಿಗೆ ಬೀಳಬಾರದೆಂದು ಆಣೆಹಾಕಿಕೊಂಡು ಹೊರಟುಹೋದರು.

ನವರಾತ್ರಿ ಹಬ್ಬವು ಪೂರೈಸಿದಮೇಲೆ ದಾದಾಜಿಯು ಜೀಜಾಬಾಯಿಯವರೊಡನೆ ಅಂತರಂಗದಲ್ಲಿ ಈ ಪ್ರಕರಣವನ್ನು ತಿಳಿಸಿದನು. ಅವರಿಬ್ಬರೂ ಮಾತನಾಡಿಕೊಂಡರು.

ಕೊಂಡದೇವನು ಶಿವಾಜಿಯನ್ನು ಕರೆದು ತೋರಣದ ಸಿಪಾಯಿಗಳು ಬಂದುಹೋದ ಸಂಗತಿಯನ್ನು ಪ್ರಸ್ತಾಪಮಾಡಿದನು. ಕೊಂಡದೇವ

ಜೀಜಾಬಾಯಿ ಇಬ್ಬರೇ ಇದ್ದರು. ಶಿವಾಜಿಯು ನಡೆದ ವೃತ್ತಾಂತವನ್ನೆಲ್ಲಾ ನಿರ್ಭಯವಾಗಿ ವಿನಯಪೂರ್ವಕವಾಗಿ ವಿವರಿಸಿದನು.

ಜೀಜಾಬಾಯಿಯು ಮಗನದೇನೂ ತಪ್ಪಿಲ್ಲ ಆ ಸಿಪಾಯಿಗಳು ಸೊಕ್ಕಿ ಹೋಗಿದ್ದಾರೆ ಎಂದು ಹೇಳಿ ಮಗನ ತಲೆ ಸವರಿಸಿದಳು.

ಗುರು ಕೊಂಡದೇವನು, ಶಿವಾಜಿ ನೀನು ಇನ್ನೂ ತರುಣ. ನಿನಗೆ ಬಿಜಾಪುರದ ದರ್ಬಾರಿನ ವಿಷಯ ಗೊತ್ತಿಲ್ಲ. ಅದು ರಾವಣನ ದರ್ಬಾರು, ನಮ್ಮ ಸರಿತಪ್ಪುಗಳು ಅಲ್ಲಿ ಕೇಳುವವರೇ ಇಲ್ಲ. ತುರುಕರಿಗೆ ಅಪಮಾನ ವಾಗಬಾರದು. ಸೈನಿಕರ ಮೇಲೆ ಯಾರೂ ಕೈಮಾಡಬಾರದು. ಇದೇ ಸುಲ್ತಾನನ ರಾಜ್ಯದ ಶಾಸನ, ನಾವು ಆದಷ್ಟು ಈ ಹವ್ಯಾಸಕ್ಕೆ ಹೋಗದಿರ ಬೇಕು. ಇದನ್ನು ಕೇಳಿದರೆ ಷಾಜೀಯವರಿಗೂ ಅಸಮಾಧಾನವಾಗುತ್ತದೆ ಎಂದು ಬುದ್ಧಿವಾದ ಹೇಳಿದನು.

ಶಿವಾಜಿಯು ಮಂದಹಾಸದಿಂದ ತಲೆಬಾಗಿ ಬುದ್ಧಿವಾದವನ್ನು ಅಂಗೀ ಕರಿಸಿದನು.

ಕೊಂಡದೇವನು ಚಾವಡಿಗೆ ಹೊರಟುಹೋದನು.

ಜೀಜಾಬಾಯಿಯು ಗುರುವಿನ ಮಾತಿಗೆ ನೊಂದುಕೊಳ್ಳಬೇಡಾ, ಬಾಲಾ ಈ ತುರುಕರ ನ್ಯಾಯ ನೆಟ್ಟಗಿಲ್ಲ. “ಶಠಪ್ರತಿಶಾಠ್ಯಂ” ಇದೇ ಮಾನವರ ಲಕ್ಷಣ. ಬದುಕುವುದು ಸಾಯುವುದು ದೇವರ ಇಷ್ಟ, ಎಂದು ಹೇಳಿ ತಲೆಸವರಿ ಆಶೀರ್ವದಿಸಿದಳು.

ಕೊಂಡದೇವನ ಗುಪ್ತದಾನದ ವಿಷಯ ತಾಯಿ ಮಕ್ಕಳಿಬ್ಬರಿಗೂ ತಿಳಿಯಲಿಲ್ಲ.

೨

ಶಿವಾಜಿಯು ಹಳ್ಳಿಗಳ ಕಡೆ ಯಾತ್ರೆ ಹೊರಟನು. ಶಿಕಾರಿಯು ಪೂರೈಸಿ ಹೋಗಿದ್ದಿತು. ಕಾಡು ಮೃಗಗಳ ಕಾಟವಿಲ್ಲ. ಹಳ್ಳಿಗರಿಗೆ

ಧೈರ್ಯೋತ್ಸಾಹಗಳು ತುರುಕುತ್ತಿದ್ದವು. ನಾನಾ ಹಳ್ಳಿಗಳ ತರುಣರ ತಂಡ ಗುಂಪು ಸೇರಿತು. ಶಿವಾಜಿಗೆ ಏನೋ ಒಂದು ಯೋಚನೆಯು ತೋರಿತು. ಆ ದಿನ ಆ ತರುಣರೆಲ್ಲರೂ ತೋರಣದ ಕೋಟೆಗೆ ಹೋಗಬೇಕೆಂದು ನಿಷ್ಕರ್ಷೆ ಮಾಡಿದರು. ತೋರಣದ ಕೋಟೆ ಭದ್ರವಾದ ಕೋಟೆ ಸುತ್ತಲೂ ಗಿರಿಕಂದರ ಗಳು. ಮಳೆಯ ಹೊಡೆತ ಬಹಳ ರಾತ್ರಿ ಹಗಲು ಕುಂಭದ್ರೋಣವಾದ ಮಳೆ. ಪಠಪಠನೆ ಮಳೆ ಹೊಡೆಯುತ್ತಿದೆ. ಮನೆಯ ಚಾವಣಿಗಳಿಂದ ಮಳೆ ನೀರು ಸುರಿದು ಹರಿಯುತ್ತಿದೆ.ಮಳೆಯ ಭರ ಕಡಿಮೆಯಾದರೆ ಸೋನೆಯು ಕುಟುಕು ತ್ತಲೆ ಇರುತ್ತದ. ಬಿರುಗಾಳಿಯ ಹೊಡೆಯ ಚಳಿಯ ಕಡಿತ. ಕೋಟೆ ಯೊಳಗಿದ್ದ ಬಿಜಾಪುರದ ಸೈನಿಕರೂ, ಸೇನಾಧಿಪತಿ ಖಾನ್ ಸಾಹೇಬರೂ ಮನೆ ಬಿಟ್ಟು ಹೊರಡುವಂತಿಲ್ಲ. ಕುದುರೆಗಳು, ಲಾಯಗಳಿಂದ ಹೊರಗೆ ಬರುವಂತಿಲ್ಲ. ಕೈಕಾಲುಗಳು ಕಟ್ಟಿಹೋಗಿದೆ. ಖಾನ್‌ಸಾಹೇಬರಿಗೆ ಬೇಸತ್ತು ಆ ಸೈನಿಕರ ಸಮೇತ ಬಡಲು ಪ್ರದೇಶಗಳಿಗೆ ನೂರಾರು ಮೈಲಿಗಳ ದೂರ ಹೋಗಿ ಮಳೆ ಚಳಿಗಾಲಗಳ ಹೊಡೆತ ತಪ್ಪಿಸಿಕೊಂಡು ಕುಡಿತ, ಕುಣಿತಗಳಲ್ಲಿ ಆನಂದಮಗ್ನ ರಾಗಿದ್ದರು. ಕೋಟೆಯೊಳಗೆ ಹೋಗಿಬರುವ ಕೂಲಿಯ ಜನರಿಂದ ಈ ಸಂಗತಿಯು ಶಿವಾಜಿಯ ಕಿವಿಗೆ ಬಿದ್ದಿತ್ತು ಮತ್ತೊಮ್ಮೆ ಅದನ್ನು ಖಾತ್ರಿಮಾಡಿ ಕೊಂಡನು.ಹಳ್ಳಿಗಳ ಗುಡ್ಡ ಗಾಡುಗಳ ತಂಡವನ್ನು ಕರೆದುಕೊಂಡು ಶಿವಾಜಿಯು ಧೈರ್ಯದಿಂದ ಕೋಟೆಯೊಳಗೆ ನುಗ್ಗಿದನು. ಕಾವಲುಗಾರರನ್ನೆಲ್ಲಾ ಕಡಿದು ಹಾಕಿದರು. ಆ ಕೋಟೆಯಲ್ಲಿಯೂ ಸಣ್ಣದೊಂದು ಅರಮನೆಯಿತ್ತು. ಅದೇ ಖಾನ್‌ಸಾಹೇಬರ ಅರಮನೆ ಖಜಾನೆ ಶಸ್ತ್ರಾಗಾರ ಎಲ್ಲವೂ ಇದ್ದಿತು. ಅರಮನೆ ಯಲ್ಲಿ ಕೆಲವು ಮಂದಿ ಪಹರೆಯವರು ಕೆಲಸಗಾರರು ಮತ್ತೆ ಕೆಲವು ಬೀದಿಯ ಹೆಣ್ಣುಗಳು. ಆ ಹೆಣ್ಣುಗಳನ್ನೆಲ್ಲಾ ಕೋಟೆಯಿಂದ ಹೊರಗೆ ಕಳುಹಿಸಿದರು. ಪಹರೆಯವರನ್ನು ಕೊಂದರು. ಕೆಲಸದವರನ್ನು ಹೊಡೆದು ಓಡಿಸಿದರು. ಕೋಟೆ ಅರಮನೆ ಕಛೇರಿಗಳೆಲ್ಲಾ ಶಿವಾಜಿಯ ಕೈಗೆ ಸಿಕ್ಕಿದವು. ಶಿವಾಜಿಯು ಖಜಾನೆಯನ್ನು ಒಡೆದು ಅಲ್ಲಿದ್ದ ಹಣವನ್ನೆಲ್ಲಾ ತನ್ನ ಜೊತೆಗಾರರಿಗೂ, ಹಳ್ಳಿಯ ತರುಣರಿಗೂ ಯಥೇಚ್ಛವಾಗಿ ಹಂಚಿದನು. ಆ ಕೋಟೆಯಲ್ಲಿ ಬೇಕಾದಷ್ಟು ದವಸ ಧಾನ್ಯಗಳಿದ್ದುವು. ಅದು ಶಿವಾಜಿಯ ಗೋಲಂದಾಜ ಸೈನ್ಯದ ಶಿಬಿರವಾಗಿ ಪರಿಣಮಿಸಿತು.

ಬಯಲು ನಾಡಿನಲ್ಲಿದ್ದ ಸೇನಾಪತಿ ಗಫೂರ್‌ಖಾನ್ ಸಾಹೇಬರಿಗೆ ಈ ಸಮಾಚಾರಗಳನ್ನೆಲ್ಲಾ ವಿವರವಾಗಿ ತಿಳಿಯಬಂದಿತು. ಖಾನ್‌ಸಾಹೇಬರಿಗೆ ಭಯವಾಯಿತು. ಅವರು ಬಿಜಾಪುರದ ದರ್ಬಾರಿಗೆ ಬರೆದು ಅಪ್ಪಣೆಯನ್ನು ಪಡೆದು ತೋರಣ ಕೋಟೆಯನ್ನು ಬಿಟ್ಟುಹೋಗಿರಲಿಲ್ಲ. ಸೈನ್ಯದ ಶಿಸ್ತಿನಲ್ಲಿ ಆ ತಪ್ಪು ತಮ್ಮ ಮೇಲೆಯೇ ಬರುತ್ತದೆ. ಆದರೂ ಸುಲ್ತಾನರಿಗೆ ವರದಿ ಮಾಡದೇ ಇರುವಂತಿಲ್ಲ. ಕೋಟೆಯು ಪೂರ್ತಿಯಾಗಿ ವಿದ್ರೋಹಿಗಳ ವಶವಾಗಿ ಹೋಗಿದೆ. ತಮಗೂ ತಮ್ಮ ಸೈನ್ಯಕ್ಕೂ ಊಟಕ್ಕೆ ದವಸ ಧಾನ್ಯಗಳಿಲ್ಲ. ಖರ್ಚಿಗೆ ದುಡ್ಡಿಲ್ಲ. ಇಂಥಾ ಅಂತರಾಟ ಸ್ಥಿತಿ ಖಾನ್‌ಸಾಹೇಬನು ಸುಲ್ತಾನನಿಗೆ ಸುಳ್ಳುಪಳ್ಳು ಕಥೆ ಕಟ್ಟಿ ಬರೆದು ಕಳುಹಿಸಿದನು. ಅದರಲ್ಲಿ ತಾಜಾಕಲಂ ಇಷ್ಟೆ. "ಹಿಂದೂ ಕಳ್ಳರು ದರೋಡೆಕೋರರು ಶಸ್ತ್ರಾಸ್ತ್ರ ಸಹಿತರಾಗಿ ಪಂಜುಗಳನ್ನು ಹಚ್ಚಿಕೊಂಡು ಬಂದು ಕೋಟೆಯನ್ನು ನುಗ್ಗಿ ಮನೆಗಳಿಗೆ ಬೆಂಕಿಹಚ್ಚಿ ದಾಂಧಳೆ ಮಾಡಿಬಿಟ್ಟರು. ಬಿಜಾಪುರದ ಸೈನ್ಯ ಸೇನಾಧಿಪತಿಗಳು ತಲೆ ತಪ್ಪಿಸಿಕೊಂಡು ಓಡಿ ಬಂದು ಪ್ರಾಣಸಹಿತ ಉಳಿದುಕೊಂಡಿದ್ದೇವೆ. ತೋರಣದ ಕೋಟೆ ವಿದ್ರೋಹಿಗಳ ವಶವಾಗಿದೆ. ವಿದ್ರೋಹಿ ಮುಖಂಡ, ಶಿವಾಜಿ."

ಈ ಪತ್ರವನ್ನು ಖಾನ್‌ಸಾಹೇಬನು ಬಿಜಾಪುರದ ದರ್ಬಾರಿಗೆ ಕಳುಹಿಸಿ ಕೊಟ್ಟನು. ಶಿವಾಜಿಯ ಕಡೆಯವರು ಮೂವರು ನಾಲ್ವರು ಬಿಜಾಪುರಕ್ಕೆ ಹೋದರು. ಕಛೇರಿಗಳಲ್ಲಿ ಕಾರಕೂನರುಗಳಿಗೂ ಅಧಿಕಾರಿಗಳಿಗೂ ಲಂಚ ಕೊಟ್ಟರು. ದೂರು ಸುಲ್ತಾನನ ಕಿವಿಗೆ ಮುಟ್ಟಲೇ ಇಲ್ಲ. ತಿಂಗಳು ಕಳೆದವು. ಖಾನ್‌ಸಾಹೇಬನು ಮೇಲೆಮೇಲೆ ನಾಲ್ಕಾರು ಪತ್ರಗಳನ್ನು ಬರೆದು ಕಳುಹಿಸಿ ದನು. ಎಲ್ಲವೂ ದಫ್ತರದಲ್ಲಿ ಅಡಗಿಕೊಂಡವು. ಖಾನ್‌ಸಾಹೇಬನ ಸೈನಿಕನಿಗೆ ಹೊಟ್ಟೆಗಿಲ್ಲ. ಎಲ್ಲರೂ ಓಡಿಹೋದರು. ಖಾನ್‌ಸಾಹೇಬನು ಅತಿ ಪ್ರಯಾಸ ದಿಂದ ರಾಜಧಾನಿಗೆ ಬಂದು ಸೇರಿದನು. ಅಧಿಕಾರಿಗಳನ್ನು ಕಂಡು ಹೇಳಿ ಕೊಂಡನು. "ನಿನ್ನ ಸೈನ್ಯವೆಲ್ಲಿ" ಏನು ಮಾಡುತ್ತಿದ್ದೆ ? ಬಿಜಾಪುರದ ಸೈನ್ಯ ಕಳ್ಳಕಾಕರಿಗೆ ಹೆದರಿ ಓಡುವುದೆಂದರೆ ಎಂಥಾ "ನಾಮಾರ್ದಾ" ಎಂದು ಅವಹೇಳನ ಮಾಡಿದರು.

ಶಿವಾಜಿಯ ಕಡೆಯವರೂ ಅಧಿಕಾರಿಗಳೊಡನೆ ದೂರುಕೊಟ್ಟರು. ಖಾನ್ ಸಾಹೇಬನು ಮಳೆಗಾಲ ಬರುತ್ತಲೇ ಹೆಂಗಸರನ್ನು ಕಟ್ಟಿಕೊಂಡು ಬಯಲು

ಸೀಮೆಗೆ ಹೊರಟುಹೋದ. ಖಜಾನೆಯನ್ನು ಬರಿದುಮಾಡಿದ್ದ ಸೈನಿಕರೆಲ್ಲಾ ಸಂಬಳವಿಲ್ಲದೆ ಕಾಲುಕಿತ್ತರು. ನಾಡಿಗೆ ರಕ್ಷಕರಿಲ್ಲದೆ ಹಳ್ಳಿಯ ಕಾವಲುಗಾರರೇ ಕೋಟೆಯ ರಕ್ಷಣೆ ಮಾಡುತ್ತಿದ್ದಾರೆ. ಮೊಗಲ್ ಸೈನಿಕನಿಗೆ ತಿಳಿದು ಅವರು ಬಂದು ಕೋಟೆಯನ್ನು ಆಕ್ರಮಣ ಮಾಡಿದರೆ ಗತಿಯೇನು? ಹತ್ತಿರದಲ್ಲಿದ್ದ ಶಿವಾಜಿ ಬಿಜಾಪುರದ ಸುಲ್ತಾನನಿಗೆ ಆಗುವ ಅಪಮಾನವನ್ನು ಸಹಿಸಲಾರದೇ ಕೋಟೆಗೆ ಹೋಗಿ ಕಾವಲು ಹದ್ದುಬಸ್ತು ಮಾಡಿ ವ್ಯವಸ್ಥೆ ಮಾಡಿದ್ದಾನೆ. ಸುಲ್ತಾನರ ಆಜ್ಞೆಯನ್ನು ಶಿರಸವಹಿಸಿ, ನಡೆಸಲು ಸಿದ್ಧವಾಗಿದ್ದಾನೆ ಎಂದು ವರದಿ ಮಾಡಿದರು. ಎರಡು ವರದಿಗಳಲ್ಲಿಯೂ ನಿಜ–ಸುಳ್ಳುಗಳು ಬೆರೆತಿವೆ ಯೆಂದು ಅಧಿಕಾರಿಗಳು ಮನಗಂಡರು. ಅಷ್ಟು ಸೈನ್ಯವಿರುವಾಗ ಖಾನ ಸಾಹೇಬನು ಕೋಟೆಯನ್ನು ಬಿಟ್ಟುಹೋದುದು ಹೇಗೆ? ಅವನು ಮೈಮರೆತು ಮೊದಲೇ ಹೋಗಿಬಿಟ್ಟಿದ್ದಾನೆ. ಶಿವಾಜಿಯು ಸ್ವಯಂಪ್ರೇರಣೆಯಿಂದ ಬಂದು ಕೋಟೆಯಲ್ಲಿ ಕಾವಲು ವ್ಯವಸ್ಥೆ ಮಾಡಲು ಅವನಿಗೆ ಯಾರು ಅಧಿಕಾರ ಕೊಟ್ಟರು. ಇದು ದುರುಳ ಸ್ವಭಾವದ ತರುಣ ಶಿವಾಜಿಯ ಉದ್ಧಟತನ ಎಂದು ಅಧಿಕಾರಿಗಳು ಮಾತನಾಡಿಕೊಂಡರು. ತರ್ಕ, ವಿತರ್ಕಗಳು ನಡೆಯು ತ್ತಲೇ ಇದ್ದುವು. ಅಧಿಕಾರಿಗಳಿಗೆಲ್ಲಾ ಚೆನ್ನಾಗಿ ಹೊನ್ನಿನ ಊಟ ಬಿದ್ದಿತ್ತು. ಬರೀ ಮಾತಿನಲ್ಲಿಯೇ ನ್ಯಾಯ ಚರ್ಚೆಯಾಗುತ್ತಿದ್ದಿತು.

ಖಾನಸಾಹೇಬನು ಸುಲ್ತಾನರ ಭೇಟಿ ಮಾಡಬೇಕೆಂದು ಬಹು ಪ್ರಯತ್ನ ಮಾಡಿದನು. ಅದು ಅಷ್ಟು ಸುಲಭ ಸಾಧ್ಯವಾಗಿರಲಿಲ್ಲ. ಇಂದು ಹಬ್ಬ, ನಾಳೆ ನರ್ತನ. ಮತ್ತೊಂದು ದಿನ ಪ್ರಸಿದ್ಧ ಗಾಯಕ ಖುಸ್ರುವಿನ ಸಂಗೀತ. ಔತಣ ಸಮಾರಂಭಗಳು, ಹೀಗೆ ದರ್ಬಾರು ದೇದೀಪ್ಯಮಾನವಾದಿತ್ತು, ದೈವ ಕೃಪೆಯೂ ಖಾನ್‌ಸಾಹೇಬನಿಗೆ ಅಡ್ಡಲಾಗಿ ಬಂದಿತು. ಸುಲ್ತಾನನು ಜ್ವರ ಪೀಡಿತನಾಗಿ ಹಾಸಿಗೆ ಹಿಡಿದು ಮಲಗಿದನು. ದಿನದಿನಕ್ಕೆ ರೋಗ ಉಲ್ಬಣ ವಾಯಿತು. ಹಕೀಮರ ಓಡಾಟ. ಖಾಜಿಗಳ ಪ್ರಾರ್ಥನೆ ಆಶೀರ್ವಾದಗಳು. ಅರಮನೆಯ ಸುತ್ತಲೂ ಯಾರೂ ಓಡಿಯಾಡಕೂಡದು. ಸದ್ದಾಗಕೂಡದು. ನಗಾರಿ ನೌಪತ್ತುಗಳಿಲ್ಲ. ದರಬಾರಿಲ್ಲ. ಸುಲಾವಣೆ ವಿಚಾರಣೆಗಳಿಲ್ಲ. ಎಲ್ಲಕ್ಕೂ ಸ್ತಂಭೀಭಾವ.

ಖಾನನ ಮೊರೆ ಕೇಳುವವರಾರು? ಯಾರೂ ಅವನ ಮಾತಿಗೆ ಕಿವಿಗೊಡರು. ಮಹೋನ್ನತ ಸ್ಥಾನದಲ್ಲಿರುವ ಷಾಜಿಯ ಮಗ ಶಿವಾಜಿಯ ದುರುಳುತನದ ಪ್ರಕರಣವಿದು. ಯಾರಿಗೆ ವಿಚಾರಣೆ ಮಾಡುವ ಅಧಿಕಾರವಿದೆ. ಯಾರು ತೀರ್ಪು ಕೊಡುವವರು. ಆ ತೀರ್ಪನ್ನು ಜಾರಿಮಾಡುವವರಾರು? ಇದೆಲ್ಲಾ ಮಾಡಿದರೆ ಯಾರಿಗೆ ಲಾಭ. ಎಲ್ಲರೂ ಖಾನ್‌ನನ್ನು ತಿರಸ್ಕಾರದಿಂದ ನೋಡುತ್ತಿದ್ದರು. ಅವನು ಬೀದಿಯ ಭಿಕಾರಿಯಂತೆ ಹುಚ್ಚನಂತೆ ರಾಜಧಾನಿಯ ಬೀದಿಗಳಲ್ಲಿ ಅಲೆಯುತ್ತಿದ್ದನು. ಅಂದಿನ ರಾಜ್ಯಭಾರದ ಸ್ಥಿತಿಯೇ ಹಾಗಿತ್ತು.

ಈ ಸಮಾಚಾರವೆಲ್ಲಾ ದಾದಾಜೀ ಕೊಂಡದೇವನಿಗೆ ತಿಳಿಯಬಂತು. ಅವನು ಹೆದರಿದನು, ಏನೇ ಆಗಲಿ, ಶಿವಾಜಿಗೆ ವಿದ್ರೋಹಿ ಎಂಬ ಮುದ್ರೆ ಬಿದ್ದಂತಾಯಿತು, ಎಂದು ವ್ಯಸನಪಟ್ಟನು. ಸತ್ಯಪ್ರಿಯ ಪ್ರಾಮಾಣಿಕ ಮನುಷ್ಯನವನು. ಇದ್ದದ್ದು ಇದ್ದ ಹಾಗೆ ಎಲ್ಲವನ್ನು ವಿವರವಾಗಿ ಷಾಜಿಯವರಿಗೆ ಬರೆದು ಶಿಷ್ಯನ ಅಪರಾಧಕ್ಕೆ ಗುರುವು ಕ್ಷಮಾಪಣೆ ಕೇಳುತ್ತಾನೆ, ಎಂದು ಬರೆದು ಕಳುಹಿಸಿದನು. ಅಂದಿನಿಂದ ಆ ತೇಜಸ್ವೀ ವೃದ್ಧ ಬ್ರಾಹ್ಮಣನು ನಿರಾಶೆಯಿಂದ ಕೊರಗಿ ಕುಗ್ಗುತ್ತಾ ಬಂದನು. ಆತನ ಆಶೆಯ ಗೋಪುರವು ಕಳಚಿ ಬಿದ್ದಂತಾಗಿತ್ತು. ತೇಜಸ್ವೀ ಅಜಾನುಬಾಹು ತರುಣ ಶಿವಾಜಿಗೆ ಚೆನ್ನಾಗಿ ವಿದ್ಯೆ ಕಲಿಸಿದ್ದನು. ಸುಲ್ತಾನನ ದರ್ಬಾರಿನಲ್ಲಿ ಉನ್ನತ ಪದವಿಯು ಸಿಕ್ಕುವುದೆಂದು ಆಶಾಕಲ್ಪನೆ ಮಾಡಿಕೊಂಡಿದ್ದನು. ಇನ್ನೆಲ್ಲಿ ಈ ವಿದ್ರೋಹಿಗೆ ಒಳ್ಳೆಯ ಭವಿಷ್ಯವಿಲ್ಲವೆಂಬುದೇ ಅವನ ನಿರಾಶೆಯಾಗಿತ್ತು. ಜೀಜಾಬಾಯಿಯು ಸಂತೋಷಪಡುತ್ತಿದ್ದಳು. ಹುಡುಗನು ಧೈರ್ಯಶಾಲಿ, ಸಾಹಸಿ, ಒಂದು ಕೋಟೆಯನ್ನು ಹಿಡಿದಿದ್ದಾನೆ. ಇವನ ತಂದೆ ಸುಲ್ತಾನೀ ದರ್ಬಾರಿನಲ್ಲಿ ಮಹೋನ್ನತ ಪದವಿಯಲ್ಲಿದ್ದರೇನು? ಇಂಥಾ ಸಾಹಸ ಕೃತ್ಯವನ್ನು ಅವನು ಮಾಡಿದ ನಿದರ್ಶನ ಒಂದಾದರೂ ಉಂಟೆ? ಶಿವಾಜಿಗೆ ಆಯಸ್ಸು ಕೊಟ್ಟು ದೇವರು ಕಾಪಾಡಲಿ, ಎಂದು ಹರಸುತ್ತಿದ್ದಳು.

ಬಿಜಾಪುರದಲ್ಲಿ ಸುಲ್ತಾನನ ಖಾಯಿಲೆಯು ಕೊಂಚವೂ ಗುಣಮುಖವಾಗಲಿಲ್ಲ. ಹಕೀಮರೆಲ್ಲಾ ಕೈಬಿಟ್ಟರು. ಅಧಿಕಾರಿಗಳಿಗೆಲ್ಲಾ ಜಂಗಾಬಲವು ಹೋಯಿತು. ಖಾಜಿಗಳ ಪ್ರಾರ್ಥನೆಗಳು ದೇವರ ಕಿವಿಗೆ ಮುಟ್ಟಲಿಲ್ಲ.

ಇನ್ನೇನು ಮಾಡಬೇಕು, ಇನ್ನೇನು ಮಾಡಬೇಕು ಎಂದು ಎಲ್ಲರೂ ಯೋಚನಾ ಕ್ರಾಂತರಾದರು. ಆ ಸಮಯಕ್ಕೆ ಸರಿಯಾಗಿ ಟರ್ಕಿ ದೇಶದಿಂದ ಮಂತ್ರವಾದಿ ಯೊಬ್ಬನು ರಾಜಧಾನಿಗೆ ಬಂದನು. ಸಾಕ್ಷಾತ್ ದೇವರೇ ಅವನನ್ನು ಕಳಿಸಿ ಕೊಟ್ಟಂತಾಯಿತು. ಅವನ ಹೆಸರು ಹಷೀಂ ಉಲೂಬಿ.

ಅವನು ಅರಮನೆಗೆ ಬಂದು ಸುಲ್ತಾನರಿಗೆ ಮಂತ್ರದಿಂದ ಗುಣಪಡಿಸುವು ದಾಗಿ ಭರವಸೆ ಕೊಟ್ಟನು. ದೇವರೇ ಪ್ರತ್ಯಕ್ಷ ಮಾತನಾಡುವಂತೆ ಮಾತನಾಡಿ ದನು. ಮಂತ್ರ ತಂತ್ರಗಳು ನಡೆದವು ಫಲವಾಗಲಿಲ್ಲ. ಅವಸಾನಕಾಲ ಬಂದೇಬಿಟ್ಟಿದೆ. ಸುಲ್ತಾನರ ರಾಣಿಗಳು ಗೋಳಿಡುತ್ತಾ ಒಂದುಕಡೆ ನಿಂತಿ ದ್ದಾರೆ. ಮಂತ್ರಿ ಸೇನಾಧಿಪತಿಗಳು ಮತ್ತೊಂದು ಕಡೆ ಜೋಲುಮುಖ ಹಾಕಿಕೊಂಡು ನಿಂತಿದ್ದಾರೆ. ಷಾಜಿಯೂ ಅಲ್ಲೇ ಇದ್ದಾನೆ. ಮಂತ್ರವಾದಿಯು ಓಹೋ ಮನುಷ್ಯ ಯತ್ನದಲ್ಲಿ ಇದು ಕೈಮೀರಿ ಹೋಗುವಂತಿದೆ. ಈಗ ದೊಡ್ಡ ಕೆಲಸ ಮಾಡಬೇಕು. ದೇವರಲ್ಲಿ ಜಗಳವಾಡಬೇಕು. ಸುಲ್ತಾನನು ಸತ್ತುಹೋದರೆ ಈ ಧರ್ಮರಾಜ್ಯವು ರಕ್ಷಕರಿಲ್ಲದಂತಾಗುತ್ತದೆ. ಸರ್ವಥಾ ಹಾಗಾಗಕೂಡದು ಎಂದು ಉಚ್ಚ ಕಂಠದಿಂದ ಕೂಗಿದನು. ಸುಲ್ತಾನನ ತಲೆಯನ್ನು ತೊಡೆಯಮೇಲೆ ಇಟ್ಟುಕೊಂಡು ಎರಡು ಹಸ್ತಗಳಿಂದಲೂ ಸುಲ್ತಾನನ ಮುಖವನ್ನು ಮುಚ್ಚಿ ಧ್ಯಾನಾಸಕ್ತನಾಗಿ ಕುಳಿತುಕೊಂಡನು, ರಾಣೀವಾಸದ ರೋಧನ ಧ್ವನಿಯು ನಿಂತಿತು. ಅಧಿಕಾರಿಗಳ ಪಿಸುಮಾತು ಗಳು ನಿಂತುವು. ಪರಿಚಾರಕರ ಓಡಾಡವು ನಿಂತಿತು. ಎಲ್ಲವೂ ನಿಶ್ಶಬ್ಧ, ಗಾಳಿಯೂ ಸದ್ದು ಮಾಡದೆ ಸಂಚರಿಸುತ್ತಿತ್ತು. ಮಂತ್ರವಾದಿಯು ಕಣ್ಣು ತೆರೆದನು. ಈ ಪ್ರಭುವಿನ ಆಯುಷ್ಯವು ಮುಗಿದುಹೋಗಿದೆ. ನನ್ನ ಆಯುಷ್ಯದಿಂದ ಅರ್ಧವನ್ನು ಇವನಿಗೆ ಕೊಡುತ್ತೇನೆ, ಅದಕ್ಕೆ ದೇವರ ಅಪ್ಪಣೆ ಪಡೆದಿದ್ದೇನೆ ಎಂದು ಹೇಳಿ ಸುಲ್ತಾನನ ಮುಖದ ಮೇಲೆ ಮುಖ ವಿಟ್ಟು ಧ್ಯಾನ ಮಾಡಿದನು. ಸುಲ್ತಾನನಿಗೆ ಎಚ್ಚರವಾಯಿತು. ಎದ್ದು ಕುಳಿತನು. ಹರ್ಷೋದ್ಗಾರಗಳಾದುವು. ಮಂತ್ರವಾದಿಯು ಕೈಸನ್ನೆಯಿಂದ ಸದ್ದನ್ನು ಅಡಗಿಸಿ, ಖಾಜಿಗಳನ್ನು ಕರೆಸಿದನು. ಖುರಾನಿನ ಮಂತ್ರಗಳನ್ನು ಪಠಣ ಮಾಡಿಸಿದನು, ಸುಲ್ತಾನನಿಗೆ ಜೀವ ಬಂತು, ಪುನಃ ರಾಜಧಾನಿಯು ಕಳಕಳಿಸಿತು. ದರ್ಬಾರು ಪ್ರಕಾಶಮಾನವಾಗಿ ಶೋಭಿಸಿತು.

ಈ ಸಮಯಕ್ಕೆ ಒಂದು ವರ್ಷವು ಕಳೆದುಹೋಗಿತ್ತು. ಶಿವಾಜಿಯು ತೋರಣಕ್ಕೆ ಹತ್ತು ಮೈಲಿಗಳ ದೂರದಲ್ಲಿದ್ದ ಸಿಂಹಗಡ ಕೋಟೆಯನ್ನು ವಶಪಡಿಸಿಕೊಂಡನು. ಆ ಕೋಟೆಯು ತೋರಣಕ್ಕಿಂತಲೂ ವಿಶಾಲವೂ ಭದ್ರವೂ ಆದ ಕೋಟೆ. ಅಲ್ಲಿ ಬೇಕಾದಷ್ಟು ಶಸ್ತ್ರಾಸ್ತ್ರಗಳು ಸಿಕ್ಕಿದವು. ಈಗ ಹಳ್ಳಿಗಾಡಿನ ತರುಣರೆಲ್ಲರೂ ದೊಣ್ಣೆಯ ಕಟ್ಟಾಳುಗಳಾಗಿರಲಿಲ್ಲ. ಅಸ್ತ್ರಶಸ್ತ್ರಗಳನ್ನು ಧರಿಸಿದ್ದ ತರಬೇತಾದ ಮರಾಠಾ ಸೈನಿಕರಾಗಿ ಪರಿವರ್ತನೆಹೊಂದಿದ್ದರು. ಹತ್ತು ತೋಪುಗಳು ಅವರ ಕೈವಶವಾಗಿದ್ದುವು. ಸೂಕ್ಷ್ಮಬುದ್ಧಿಯ ಮರಾಠರು ತೋಪುಗಳನ್ನು ಹಾರಿಸುವುದನ್ನು ಕಲಿತಿದ್ದರು.

ಬಿಜಾಪುರದಲ್ಲಿ ಸುಲ್ತಾನನು ಪೂರ್ಣ ಗುಣಹೊಂದಿದಮೇಲೆ ವಿಚಾರಣೆಗೆ ಆರಂಭವಾಯಿತು. ಎರಡು ಪಕ್ಷಗಳ ವಾದಗಳನ್ನು ಅಧಿಕಾರಿಗಳು ಸಮರ್ಥಿಸಿದರು. ಅಷ್ಟರಲ್ಲಿ ಶಿವಾಜಿಯ ಕಡೆಯಿಂದ ಒಂಟೆಗಳ ಮೇಲೆ ಪೊಗದಿಯ ಹಣವು ಬಂದಿತು. ಅದು ಮಾಮೂಲಿಗಿಂತ ಹೆಚ್ಚಾಗಿದ್ದಿತು. ಶಿವಾಜಿಯಿಂದ ಅತಿ ವಿನಯಪೂರ್ವಕವಾದ ವಿಜ್ಞಾಪನಾ ಪತ್ರಿಕೆಯು ಬಂದಿದ್ದಿತು.

ಷಹಾ‌ಷಾಹಾ ಸುಲ್ತಾನವರ ಜನಾಬಿಗೆ ಜಹಪನಾ, ಈ ಗುಡ್ಡಗಾಡುಗಳು ಗದ್ದಲ ತಣಿಸುವುದಕ್ಕೆ ನಾನೆಷ್ಟೋ ಸಾಹಸಮಾಡಿದ್ದೇನೆ. ತಮ್ಮ ಪ್ರಭುತ್ವದ ವರ್ಚಸ್ಸನ್ನು ಈ ಗಡಿಪ್ರಾಂತ್ಯದಲ್ಲಿ ಬೆಳಗಿಸಿದ್ದೇನೆ. ವರ್ಷಂಪ್ರತಿ ಒಂದಕ್ಕೆರಡರಷ್ಟು ಪೊಗದಿಹಣ ಹುಜೂರು ಖಜಾನೆಗೆ ಸಂದಾಯಮಾಡುತ್ತೇನೆ. ಕಟ್ಟಾಳುಗಳ ಸೈನ್ಯ ತರಬೇತು ಮಾಡಿದ್ದೇನೆ. ಮೊಗಲ್ ಸೈನ್ಯಗಳು ಇತ್ತ ಬಂದರೆ ನಮ್ಮ ದಮನಿಗಳಲ್ಲಿ ರಕ್ತಕಣವಿರುವವರೆಗೆ ಅವರನ್ನು ಎದುರಿಸಿ ಹೋರಾಡುತ್ತೇನೆ. ಸುಲ್ತಾನ್‌ರವರ ಆಜ್ಞಾವರ್ತಿಗಳಾಗಿ ಸೇವೆ ಸಲ್ಲಿಸಲು ಸಿದ್ಧರಾಗಿದ್ದೇವೆ.

ತಮ್ಮ ಸೇವಕ,
ಶಿವಾಜಿ

ಈ ಪತ್ರವು ದರಬಾರಿನಲ್ಲಿ ಸುಲಾವಣೆಯಾಯಿತು. ದರಬಾರಿಗಳೆಲ್ಲರೂ ಬಲು ಸಂಭ್ರಮದಿಂದ ಅದನ್ನು ಅನುಮೋದಿಸಿದರು. ಸುಲ್ತಾನನು

ಅದಕ್ಕೊಪ್ಪಿಕೊಂಡನು. ಊರುಗಳೆಲ್ಲಾ ಶಾರಿಹೋದುವು. ಇದು ಶಿವಾಜಿಯ ಅದೃಷ್ಟವೆಂದರೂ ಅನ್ನಬಹುದು.

ಶಿವಾಜಿಯ ಕಣ್ಣು ಪುರಂದರಗಡದಮೇಲೆ ಬಿದ್ದಿತು. ಆದರೆ ಅದನ್ನು ಯುದ್ಧಮಾಡಿ ಜಯಿಸುವಷ್ಟು ಶಕ್ತಿಸಾಮರ್ಥ್ಯಗಳು ಮರಾಠರಿಗೆ ಇನ್ನೂ ಬಂದಿರಲಿಲ್ಲ, ಪುರಂಧರಗಢದಲ್ಲಿ ನವಾಬ್ ಫರೂಕ್ ಎಂಬುವನು ಆಡಳಿತ ನಡೆಸುತ್ತಿದ್ದನು. ಇವನು ಅತ್ಯಂತ ದಕ್ಷಕನಾಗಿದ್ದನು. ಈ ಕೋಟೆಯೂ ಬಿಜಾಪುರದ ಸುಲ್ತಾನರಿಗೆ ಸೇರಿತ್ತು. ದರ್ಬಾರಿನಲ್ಲಿ ಫರೂಕ್‌ನಿಗೆ ಬಹಳ ಗಣ್ಯತೆಯಿತ್ತು. ಅವನಿಗೆ ದುರೇಷಾ, ಎಂಬುವಳು ರಾಣಿಯಾಗಿದ್ದಳು. ದೊಡ್ಡ ಹೆಂಡತಿಯು ತೀರಿಹೋಗಿ ಇವಳು ಎರಡನೆಯ ಹೆಂಡತಿ. ಬಿಜಾ ಪುರದ ಶ್ರೀಮಂತ ಮನೆತನದಲ್ಲಿ ಹುಟ್ಟಿದವಳು. ನವಾಬನು ಅತ್ಯಂತ ಪ್ರೇಮದಿಂದ ಮದುವೆಯಾಗಿದ್ದನು. ಹಾಗೆಯೇ ಅವಳನ್ನು ಆದರಿಸುತ್ತಿದ್ದನು. ಅವಳ ಸೌಂದರ್ಯ ಮತ್ತು ಗಾನಮಾಧುರ್ಯಗಳು ಬಿಜಾಪುರದಲ್ಲಿ ಅತ್ಯಂತ ಪ್ರಶಂಸೆಯನ್ನು ಪಡೆದಿದ್ದವು. ದುರೇಷಾ ನವಾಬನನ್ನೂ ಪ್ರೀತಿಸುತಿದ್ದಳು. ಆದರೆ ನವಾಬ್ ಫರೂಕ್‌ನು ಅಫೀಮಿನ ದಾಸನಾಗಿದ್ದನು. ಯಾವಾಗಲೂ ಅಫೀಮು ತಿಂದು ಮತ್ತನಾಗಿರುತ್ತಿದ್ದನು. ದುರೇಷಾ ದಿನದಿನಕ್ಕೆ ಫರೂಕ್ ನಲ್ಲಿ ವಿರಕ್ತಳಾಗುತ್ತಬಂದಳು. ಆದರಲ್ಲಿ ವಿರಸವೂ ಬೆಳೆಯುತ್ತಿದ್ದಿತು. ಪುನಃ ನವಾಬನೂ ರಾಣಿಯೂ ಸರಿಯಾಗಿಬಿಡುತ್ತಿದ್ದರು. ಮಳೆಗಾಲವು ಬಂದರೆ ದುರೇಷಾ ತವರುಮನೆಗೆ ತಪ್ಪದೇ ಹೋಗುತ್ತಿದ್ದಳು. ಹಾಗೆ ನಾಲ್ಕೈದು ವರುಷಗಳು ಕಳೆದಿದ್ದವು. ಈ ವರ್ಷ ಮಳೆಗಾಲವು ಆರಂಭ ವಾಗುವ ಮೊದಲೇ ದುರೇಷಾ ತವರುಮನೆಗೆ ಹೊರಟಳು. ಫರೂಕ್‌ನು ಬೇಡವೆಂದು ನಾಲ್ಕಾರು ಬಾರಿ ದಿರೋಧಿಸಿದನು. ಒಂದು ತಿಂಗಳಾಯಿತು. ಬಲವಾದ ಮಳೆಯ ಹೊಡೆತವು ಆರಂಭವಾಯಿತು. ಅದೇ ವರ್ಷವೇ ಶಿವಾಜಿಯ ತೋರಣ, ಸಿಂಹಗಢಗಳನ್ನು ಹಿಡಿದಿದ್ದ ವರ್ಷ. ದುರೇಷಾ ಹಠಮಾಡಿ ತವರುಮನೆಗೆ ಹೊರಟೇ ಬಿಟ್ಟಳು. ಅವಳ ಜೊತೆಯಲ್ಲಿ ಜನಾನಾದ ಮಿತಪರಿವಾರವು ಹೊರಟಿತ್ತು. ದುರೇಷಾ ಸಂಭ್ರಮದಿಂದ ಬಿಜಾ ಪುರಕ್ಕೆ ಹೊರಟಳು.

ಬಿಜಾಪುರದಲ್ಲಿ ಖುಸ್ರು ಎಂಬ ಗವಾಯಿಯೊಬ್ಬನು ಬಂದಿದ್ದನು. ದರಬಾರಿನಲ್ಲಿ ಅವನ ಸಂಗೀತಕಛೇರಿಗಳಾದುವು. ಶ್ರೀಮಂತರ ಮನೆಯವರಿಗೂ ಗೌರವಪೂರ್ಣ ಸ್ವಾಗತವಿದ್ದಿತು. ದುರೇಷಾ ಗವಾಯಿಯ ಕಛೇರಿಗಳಿಗೆ ತಪ್ಪದೆ ಹೋಗುತ್ತಿದ್ದಳು. ತಂದೆ ಫಿರೋಜ್‌ಷಾ ಮುದುಕನಾಗಿದ್ದನು ಅವನಿಗೆ ದರಬಾರಿನಲ್ಲಿ ಬಹಳ ಗೌರವವಿದ್ದಿತು. ಆ ದರಬಾರಿನಲ್ಲಿ ಅವನು, ಉಮ್ರಾಗಳಲ್ಲೊಬ್ಬ. ದುರೇಷಾ ತಂದೆಯನ್ನು ಪ್ರಾರ್ಥಿಸಿ ಆ ಗವಾಯಿಯನ್ನು ತನ್ನ ಮನೆಗೆ ಕರೆಸಿಕೊಂಡಳು. ಗವಾಯಿಯು ದುರೇಷಳ ಕಂಠಮಾಧುರ್ಯವನ್ನು ಗಾನವಿದ್ಯಾಪ್ರೌಢಿಮೆಯನ್ನು ತಂದೆತಾಯಿಗಳ ಮುಂದೆ ಬಹಳವಾಗಿ ಪ್ರಶಂಸಿಸುತ್ತಿದ್ದನು. ಆ ವೃದ್ಧ ದಂಪತಿಗಳು ಮಗಳ ಮೇಲಿನ ಪ್ರೇಮದಿಂದ ಆ ಗವಾಯಿಯಲ್ಲಿ ವಿಶೇಷ ಪ್ರಸನ್ನರಾಗಿದ್ದರು. ಗವಾಯಿಖುಸ್ರುವು ಯಾವಾಗಬೇಕೆಂದರೂ, ಫಿರೋಜ್‌ಷಾನಿನ ಮಹಲಿಗೆ ಬಂದು ಹೋಗುತ್ತಿದ್ದನು. ದುರೇಷಾ ಆಸಕ್ತಿಯಿಂದ ಖುಸ್ರುವಿನ ಕೆಲವು ಪಾಠಗಳನ್ನು ಕಲಿಯಲಾರಂಭಿಸಿದಳು. ಖುಸ್ರುವು ದಿನದಿನಕ್ಕೆ ಬದಲಾವಣೆಯಾದನು. ದುರೇಷಳನ್ನು ಅರಿಯದಯೇ ಮೋಹಿಸತೊಡಗಿದನು. ಅವರಿಬ್ಬರ ಸಂಗೀತ ಅಭಿಲಾಷೆಯು ಪ್ರೇಮಮಯವಾಯಿತು. ತಾಯಿಯು ಒಂದು ದಿನ ಖುಸ್ರುವೂ ದುರೇಷಳೂ ಗಾಢಾಲಿಂಗನದಲ್ಲಿದ್ದುದನ್ನು ನೋಡಿದಳು. ಕೆಲವು ದಿನಗಳು ಮಗಳಮೇಲಿನ ಪ್ರೇಮದಿಂದ ಅದನ್ನು ಅಲಕ್ಷ್ಯ ಮಾಡುತ್ತಿದ್ದಳು. ಪರಿಜನರು ಈ ಸಂಗೀತಪ್ರೇಮಿಗಳ ಪ್ರೇಮಬಂಧನವನ್ನು ಚೆನ್ನಾಗಿ ತಿಳಿದುಕೊಂಡಿದ್ದರು. ತಾಯಿಗೆ ಭಯವಾಯಿತು. ಅವಳು ತನ್ನ ಪತಿಯೊಡನೆ ಸೂಕ್ಷ್ಮವಾಗಿ ಹೇಳಿದಳು.

ಫಿರೋಜ್‌ಷಾನು, 'ಖುರೇಷಾ, ನಿನ್ನ ಪ್ರಾಯದಕಾಲದಲ್ಲಿ ನೀನೆಷ್ಟು ಕಲಾಪ್ರೇಮಿಯಾಗಿದ್ದೆ, ನಿನ್ನ ಕಲೆಯೇ ನಿನ್ನ ಮಗಳಲ್ಲಿ ಮೂಡಿದೆ. ಖುಸ್ರು ಗಾನ ಕಲೆಯಲ್ಲಿ ಪ್ರವೀಣ. ಆ ಕಲಾಪ್ರೇಮವನ್ನು ಅನ್ಯಥಾ ಭಾವಿಸಬಾರದು' ಎಂದು ಹೇಳಿದನು.

ಖುರೇಷಳು, ಹಾಗಲ್ಲ 'ಪರಿಜನರೆಲ್ಲರೂ ಗುಸುಗುಸು ಮಾತನಾಡಿಕೊಳ್ಳುತ್ತಾರೆ. ಹಾಸ್ಯ ಮಾಡಿ ನಗುತ್ತಾರೆ. ನಾನೇ ಕಣ್ಣಾರೆ ಕಂಡಿದ್ದೇನೆ. ಅವರಿಬ್ಬರ ಪ್ರೇಮ ಬೆರೆತುಹೋಗಿದೆ ಎಂದು ಹೇಳಿ ಮುಖವನ್ನು ಸಂಕೋಚ

ಮಾಡಿಕೊಂಡು ನಮ್ಮ ಮಗಳು ದುರೇಷಳ ರೂಪುಲಾವಣ್ಯಗಳು ಬಿಜಾಪುರ ದಲ್ಲೆಲ್ಲಾ ಖ್ಯಾತಿ ಪಡೆದಿದೆ. ಪ್ರಕರ್ಷವಾದ ಯೌವನ. ಅವಳ ಯಜಮಾನ ಫರೂಕ್‌ನು ಬಲು ದೊಡ್ಡ ಮನುಷ್ಯ. ಈ ಹೆಂಡತಿಯಲ್ಲಿ ಅಚ್ಚುಮೆಚ್ಚಿನಿಂದ ನಡೆದುಕೊಳ್ಳುತ್ತಾನೆ. ಎಂದಾದರೂ ಅವನಿಗೆ ಈ ಸಂಘಟನೆಯು ತಿಳಿಯದೇ ಹೋಗುವುದಿಲ್ಲ. ಹಾಗಾದರೆ ನಮ್ಮ ಮನೋರಥಗಳೆಲ್ಲಾ ಭಗ್ನವಾಗಿಹೋಗು ತ್ತವೆ. ನನಗೇಕೋ ಭಯವಾಗುತ್ತದೆ' ಎಂದು ಹೇಳಿದಳು. ಫಿರೋಜ್‌ಖಾನೂ ಗಾಬರಿಗೊಂಡನು. ಅದಕ್ಕೇನಾದರೂ ಒಂದು ಉಪಾಯ ಮಾಡಬೇಕೆಂದು ಅವರಿಬ್ಬರೂ ಮಾತನಾಡಿಕೊಂಡರು.

ಒಂದು ದಿನ ಸಂಧ್ಯಾಕಾಲದಲ್ಲಿ ದುರೇಷಳು ಗೋಲಗುಂಬಜ್‌ನ ಸಮೀಪಕ್ಕೆ ಹೋಗಿದ್ದಳು. ಆ ಕಾಲದಲ್ಲಿ ಬಿಜಾಪುರದ ಶ್ರೀಮಂತ ಕನ್ಯೆಯರು ಗುಂಬಜ್‌ನ ಉದ್ಯಾನಕ್ಕೆ ಬಂದು ಹೋಗುವ ವಾಡಿಕೆಯಿತ್ತು. ಆ ಹೆಣ್ಣುಗಳ ಲಾವಣ್ಯ ವಯ್ಯಾರಗಳನ್ನು ನೋಡಲು ಬಹುಮಂದಿ ತರುಣ ಸರದಾರರು ಸುಳಿದಾಡುತ್ತಿದ್ದರು. ಸೂರ್ಯಾಸ್ತಮಾನವಾಯಿತು. ಪ್ರಫುಲ್ಲ ಚಂದ್ರೋ ದಯದಲ್ಲಿ ದುರೇಷಳು ಇಬ್ಬರು ಸಖಿಯರೊಂದಿಗೆ ಮನೆಯಕಡೆ ತಿರುಗಿದ್ದಳು.

ಖುಸ್ರುವು ಎದುರಿಗೆ ಬಂದು ಮರ್ಯಾದೆಯಿಂದ ದುರೇಷಳನ್ನು ಮಾತ ನಾಡಿಸಿದನು. "ದುರೇಷಾ, ಮಹಲಿಗೆ ಹೊರಟಿದ್ದೀ" ಎಂದು ಸಾಕೂತವಾಗಿ ನುಡಿದನು.

ದುರೇಷಳು "ಹೊತ್ತಾಯಿತು ಬೇಗನೆ ಮನೆಗೆ ಹೋಗಬೇಕು" ಎಂದು ನಗುತ್ತಾ ಹೇಳಿದಳು.

ಖುಸ್ರುವು "ಅದೇನು ಮನೆಯಲ್ಲಿ ಏನಾದರೂ ಮೇಜುವಾನಿಯುಂಟೆ? ನನಗೆ ಹೇಳಲೇ ಇಲ್ಲವಲ್ಲಾ" ಎಂದನು.

ದುರೇಷಳು ನಿಮಗೆ ಯಾವಾಗಲೂ ಮೇಜುವಾನಿಯ ಚಿಂತೆ, ನಿಮಗೆ ತಿಳಿಸದೇ ನಮ್ಮ ಮಹಲಿನಲ್ಲಿ ಮೇಜುವಾನಿಯೆಲ್ಲಿ ಬಂತು ? ಅಮ್ಮಾಜಯವರು ಬೇಗ ಬರಬೇಕೆಂದು ಹೇಳಿದ್ದಾರೆ. ಕೋಪಿಸಿಕೊಳ್ಳುತ್ತಾರೆ. ಎಂದಳು.

ಖುಸ್ರುವು ದುರೇಷಾ, ಏನೂ ಹೊತ್ತಾಗಿಲ್ಲ. ಸಲ್ಪ ಹೊತ್ತು ಈ ಗುಂಬಜ್‌ನ ಕಡೆ ಹೋಗಿ ಬರೋಣ ಎಂದು ಹೇಳಿ ಸಖಿಯ ಕಡೆ ತಿರುಗಿ ಕೈಮುಗಿದು ನೋಡಿ ನಾವಿಬ್ಬರೂ ಹಾಗೆ ಒಂದು ಸುತ್ತು ಹಾಕಿಕೊಂಡು

ಬರುತ್ತೇವೆ. ನಿಮ್ಮ ಒಡತಿಯನ್ನು ಸ್ವಲ್ಪ ಬಿಟ್ಟುಕೊಡಿರಿ, ಎಂದು ಹೇಳಿದನು ಸಖಿಯರು ನಕ್ಕು ತಲೆಬಾಗಿದರು.

ದುರೇಷಾ ಮಂತ್ರಮುಗ್ಧಳಂತೆ ಖುಸ್ರುವಿನ ಜೊತೆಯಲ್ಲಿ ಹೊರಟು ಹೋದಳು.

ಸಖಿಯರು ಕಾದು ನೋಡಿದರು. ಅವರವರೇ ಹಾಸ್ಯಮಾಡಿಕೊಳ್ಳುತ್ತಾ ಮನೆಗಳಿಗೆ ಹೊರಟುಹೋದರು.

ದುರೇಷಾ ಆ ಖುಸ್ರುವಿನೊಂದಿಗೆ ಪುಷ್ಪಭರಿತವಾದ ವೃಕ್ಷಗಳ ಮಧ್ಯದಲ್ಲಿ ಆ ಪ್ರಫುಲ್ಲ ಚಂದ್ರಿಕಾಲೋಕದಲ್ಲಿ ಆ ಕಲಾಪ್ರವೀಣ ಖುಸ್ರುವಿನೊಡನೆ ಬಹಳ ಹೊತ್ತು ವನವಿಹಾರದಲ್ಲಿ ಮೈಮರೆತಳು. ಅವರ ಪ್ರೇಮಾಲಾಪಗಳಲ್ಲಿ ಹೊತ್ತು ಅರಿಯದೇಹೋಯಿತು ಅರ್ಧರಾತ್ರಿಯ ವೇಳೆಯಾಗಿರಬಹುದು. ಖುಸ್ರುವು ದುರೇಷಳ ಜೊತೆಯಲ್ಲಿಯೇ ಫಿರೋಜ್‌ಷಾನ ಮಹಲಿಗೆ ಹೋದನು. ಮಹಲಿನ ಬಾಗಲಿನಲ್ಲಿ ಖುಸ್ರು ದುರೇಷಳ ಕೈಬಿಟ್ಟು ತನ್ನ ನಿವಾಸಕ್ಕೆ ಹೋಗಲು ಅನುಮತಿ ಬೇಡಿದನು. ದುರೇಷಳು ಕಣ್ಣುಸನ್ನೆ ಮಾಡಿದಳು. ಆ ದೃಷ್ಟಿ ಪಾಶದಿಂದಲೇ ಖುಸ್ರುವನ್ನು ದುರೇಷಳು ಸೆಳೆದೊಯ್ದಳು. ಮಹಡಿಯ ಮೇಲೆ ಅಲಂಕೃತವಾಗಿದ್ದ ದುರೇಷಳ ಶೈಯಾಗೃಹವನ್ನು ಪ್ರವೇಶಮಾಡಿದರು. ಖುಸ್ರುವು ಮೋಹಾವೇಶದಿಂದ ದುರೇಷಳನ್ನು ಆಲಂಗಿಸಿ ಅಧರವನ್ನು ಚುಂಬಿಸಿದನು. ಕಣ್ಣುಸನ್ನೆಯಿಂದ ಹೋಗಲು ಅಪ್ಪಣೆ ಬೇಡಿದನು. ದುರೇಷಳು ಖುಸ್ರುವನ್ನು ಬಲಾತ್ಕಾರದಿಂದ ಹಿಡಿದು ಪರ್ಯಂಕದಮೇಲೆ ಕುಳ್ಳಿಸಿ ಚಿನ್ನದ ಮಧ್ಯಪಾತ್ರೆಗೆ ಸೊಗಸಾದ ಮದ್ಯವನ್ನು ಬಗ್ಗಿಸಿ ಖುಸ್ರುವಿಗೆ ಕುಡಿಸಿದಳು. ಆ ಪ್ರೇಮಿಗಳಿಬ್ಬರೂ, ಒಂದೇ ಮಧುಪಾತ್ರೆಯಲ್ಲಿ ಕುಡಿಯುತ್ತಾ ಆಲಿಂಗನ ಚುಂಬನಗಳಲ್ಲಿ ತಮ್ಮನ್ನು ತಾವೇ ಮರೆತರು. ಲೋಕವನ್ನೇ ಮರೆತರು.

ಬೆಳಕು ಹರಿಯಿತು. ದುರೇಷಳ ಶೈಯ್ಯಾಗೃಹದಲ್ಲಿ ಖುಸ್ರುವಿರುವುದು ತಾಯಿ ಖುರೇಷಳಿಗೆ ವ್ಯಕ್ತವಾಗಿ ತಿಳಿಯಿತು. ಆಕಾಶವೇ ಭೂಮಿಗೆ ಕಳಚಿ ಬಿದ್ದಂತೆ ತಾಯಿಯು ಭಯಗ್ರಸ್ಥಳಾದಳು. ಅಂತಃಪುರವನ್ನೆಲಾ ಮುಚ್ಚಿದರು. ಅತಿ ಪ್ರಯಾಸದಿಂದ ಈ ರಹಸ್ಯವನ್ನು ಮುಚ್ಚಿಟ್ಟಳು. ದುರೇಷಳು ಸೂರ್ಯೋದಯವಾದ ಎಷ್ಟೋ ಹೊತ್ತಿನ ಮೇಲೆ ಶೈಯ್ಯಾಗೃಹದಿಂದ ಎದ್ದು ಬಂದಳು.

ಕಾದಿದ್ದ ತಾಯಿಯು ಮಗಳನ್ನು ಹಿಡಿದುಕೊಂಡು ಅಂತರಂಗದ ಕೋಣೆಗೆ

ಕರೆದೊಯ್ದು. ಕೂಡಿಸಿಕೊಂಡಳು. ದುರೇಷಾ, ಕೈ ಮಿಂಚಿಹೋಯಿತು. ಬಹಳ ಅಪಮಾನವಾದಂತಾಯಿತು. ಈಗೇನು ಮಾಡುವುದು, ನನ್ನ ಮಾನಕ್ಕೂ ಸಂಚಕಾರ ಬಂದಿತು, ಎಂದು ದುಃಖದಿಂದ ಹೇಳಿದಳು.

ದುರೇಷಳು ಚಲಿಸದೇ ಸ್ವಲ್ಪಹೊತ್ತು ಮೌನವಾಗಿ ಕುಳಿತಿದ್ದಳು. ಸ್ವಲ್ಪ ಹೊತ್ತಾದಮೇಲೆ ದುರೇಷಳು ಅಮ್ಮಾ ಜರ್ಾ ಇದನ್ನು ಮುಚ್ಚಿಡುವುದರಿಂದ ಫಲವಿಲ್ಲ. ಮನಸ್ಸನ್ನು ಕಟ್ಟಿಇಟ್ಟು ಎಷ್ಟುದಿನ ನಡೆಯಬಲ್ಲೆ. ನನ್ನ ಮನವು ಸಂಪೂರ್ಣವಾಗಿ ಖುಸ್ರುವಿನಲ್ಲಿ ಒಲಿದಿದೆ. ನಾನು ಅವನನ್ನು ವಿವಾಹ ವಾಗುತ್ತೇನೆ. ಇದೇ ನನ್ನ ನಿಜವಾದ ಮದುವೆ ಎಂದು ಹೇಳಿ ತಾಯಿಯ ಎದೆಯ ಮೇಲೆ ಮುಖವಿಟ್ಟು ತಾಯಿಯನ್ನು ಆಲಿಂಗನ ಮಾಡಿಕೊಂಡು ಅಳ ತೊಡಗಿದಳು.

ತಾಯಿಯು ಮಗಳನ್ನು ನಾನಾಪ್ರಥವಾಗಿ ಸಂತೈಸಿದಳು. ಅಳಿಯ ನವಾಬ್ ಫರೂಕ್‌ನ ಐಶ್ವರ್ಯವನ್ನು ಬಣ್ಣಿಸಿದಳು. ನವಾಬನ ಪತ್ನಿಯ ಅಂತಸ್ತನ್ನು ವರ್ಣಿಸಿದಳು. ಒಂದೂ ಫಲವಾಗಲಿಲ್ಲ. ದುರೇಷಳು ತಾಯಿಯ ಕೋಣೆಯಲ್ಲಿಯೇ ಅಸ್ತವ್ಯಸ್ತವಾಗಿ ಬಿದ್ದಿದ್ದಳು.

ಖುಸ್ರುವು ದುರೇಷಳ ಶೈಯ್ಯಾಗೃದಲ್ಲಿ ಎಚ್ಚೆತ್ತನು. ಸೂರ್ಯಕಿರಣ ಗಳು ಪ್ರಖರವಾಗಿ ಕೋಣೆಯಲ್ಲಿ ಬಿದ್ದಿದ್ದು. ಗಾಬರಿಯಿಂದ ಎದ್ದು ಕುಳಿತನು ತಾನೆಲ್ಲಿದ್ದೇನೆಂದು ಕ್ಷಣಹೊತ್ತು ನೆನೆದುಕೊಂಡನು. ಹಿಂದಿನ ರಾತ್ರಿಯ ಚಿತ್ರಗಳೆಲ್ಲವೂ ಅವನ ಕಣ್ಣಿಗೆ ಕಟ್ಟಿದವು. ತೆಳುವಾಗಿ ಬಳುಕುವ ಶರೀರ. ದಂತದ ಬಣ್ಣದ ಕಪೋಲಗಳು. ಕಾಂತಿಮಯ ನೇತ್ರಯುಗ್ಮ ಆ ಮಧುರಾ ಧರ. ಆ ಬಿಚ್ಚಿದ ಕೇಶರಾಶಿ, ಇಂಥಾ ಸೌಂದರ್ಯಮೂರ್ತಿಯಲ್ಲದೇಅವನ ಮನಸ್ಸಿನಲ್ಲಿ ಮತ್ತಾವುದೂ, ಹೊಳೆಯದೇ ಹೋಯಿತು. ಪರ್ಯಂಕದಿಂದ ಇಳಿದು ಸುತ್ತಲೂ ನೋಡಿದನು. ಎಲ್ಲವೂ ಶೂನ್ಯವಾಗಿ ಕಂಡಿತು. ಕಳ್ಳನಂತೆ, ಇಣುಕಿ ನೋಡುತ್ತಾ ಹೊರಗೆ ಬಂದನು. ಮೆಲ್ಲಮೆಲ್ಲಗೆ ಸರಿಯುತ್ತಾ ಭಯ ದಿಂದ ಮೆಟ್ಟಲುಗಳನ್ನು ಇಳಿದು ಕೆಳಗೆ ಬಂದನು. ದೂರದಲ್ಲಿ ಹೊರಬಾಗಿಲು ಕಂಡಿತು. ಆತುರ ಆತುರದಿಂದ ಹೊರಗೆ ಹೋದನು. ಅಲ್ಲಿದ್ದ ಕೆಲವು ಕಣ್ಣುಗಳು ಅವನನ್ನು ನೋಡುತ್ತಿದ್ದವು. ಆ ನೋಟವು ಅರ್ಥಗರ್ಭಿತವಾಗಿ ದ್ದಿತು. ಅತಿ ಪ್ರಯಾಸದಿಂದ ಮಹಲನ್ನು ಬಿಟ್ಟು ಹೊರಟು ಹೋದನು.

ದುರೇಷಳ ತಂದೆ ತಾಯಿಗಳು ಅಂತರಂಗದಲ್ಲಿ ಯೋಚನೆ ಮಾಡಿದರು. ಮುಂದೇನು ಮಾಡುವುದು. ಫೀರೋಜ್‌ಷಹನು ಏನು ಬಂದರೂ ಅನುಭವಿಸಲೇಬೇಕು. ಈ ಹುಡುಗಿಯರು ಏನುಮಾಡಿದರೂ ತಂದೆ ತಾಯಿಗಳಿಗೆ ಅಪಖ್ಯಾತಿ ತರಲೇಕೂಡದು. ಗವಾಯಿಯೊಡನೆ ಪ್ರತ್ಯಕ್ಷ ವಿವಾಹವೆಂದರೆ ದರಬಾರಿನಲ್ಲಿ ಅದಕ್ಕಿಂತಲೂ ಹಾಸ್ಯಾಸ್ಪದ ಸಂಗತಿ ಬೇರೊಂದಿಲ್ಲ. ಎಂದು ಹೇಳಿದನು. ದಂಪತಿಗಳಿಬ್ಬರೂ ದುಃಖದಲ್ಲಿ ಮುಳುಗಿದರು.

ಒಂದು ವಾರವಾಯಿತು. ಸಮಾಚಾರವು ಅರಮನೆಗೂ ಮುಟ್ಟಿತು. ಸುಲ್ತಾನಿ ಬಾರಿಷಾಹೀಬಾಳ ಕಿವಿಗೆ ಈ ಪ್ರಸಂಗವು ಮುಟ್ಟಿತು. ಷಹೀಬಾ ರಾಣಿಯು ಸಖಿಯರನ್ನು ಕಳಿಸಿ" ದುರೇಷಳನ್ನು ಅರಮನೆಗೆ ಕರಸಿದಳು. ಅವಳನ್ನು ಪ್ರೀತಿಯಿಂದ ಮಾತನಾಡಿಸಿದಳು. ಷಹೀಬಳಿಗೆ ಇಂತಹ ಹೆಣ್ಣುಗಳ ಕಥೆಗಳೆಷ್ಟೋ ಅನುಭವವಿತ್ತು. ಅವಳು ಅದರಲ್ಲಿ ಚೋದ್ಯವಿಲ್ಲವೆಂದೂ ಸಹಜವೆಂದೂ ಭಾವಿಸಿಕೊಂಡಳು.

ರಾಣಿಯ ಆದರ ವಿಶ್ವಾಸಗಳು ದುರೇಷಳಿಗೂ ಅರ್ಥವಾಯಿತು. ಅವಳಿಗೆ ಧೈರ್ಯಬಂತು.

ಇಬ್ಬರೂ ಮನ ಬಿಚ್ಚಿ ಮಾತನಾಡಿದರು.

ರಾಣಿಯು ದುರೇಷಾ,ನಿನ್ನ ಅಭಿಲಾಷೆಯು ಸಹಜವಾಗಿಯೇ ಇದೆ. ಆದರೆ ಈ ನವಾಬರುಗಳ ಅಂತಃಪುರದ ರೀತಿಯು ವಿಚಿತ್ರವಾಗಿದೆ. ಅದು ಈಗತಾನೇ ನಿನ್ನ ಪ್ರಥಮ ಅನುಭವಕ್ಕೆ ಬಂದಿದೆ. ಇಂಥಾಪ್ರಸಂಗಗಳು ಸ್ವಾಭಾವಿಕವೇ. ಆದರೆ ಕೆಲವುಕಾಲ ಕಾದು ನೋಡಬೇಕು. ಹಾಗೆ ಕಾದು ನೋಡಿದರೆ ಮಾತ್ರವೇ ಭವಿಷ್ಯವು ಸ್ಪಷ್ಟವಾಗಿ ಕಾಣುತ್ತದೆ. ನೀನು ನನ್ನ ಮಾತನ್ನು ಕೇಳು ಎಂದು ಉಪದೇಶ ಮಾಡಿದಳು. ದುರೇಷಳನ್ನ ಸಂತೈಸಿ, ಅಂತಃಪುರದಲ್ಲಿಯೇ ಇಟ್ಟುಕೊಂಡಳು. ಪುನಃ ಖುಸ್ರುವಿಗೂ ದುರೇಷಳಿಗೂ ಭೇಟಿಯಾಗಲಿಲ್ಲ. ಒಂದೆರೆಡು ತಿಂಗಳುಗಳು ಕಳೆದವು. ರಾಣಿಯವರು ದುರೇಷಳನ್ನು ಒಪ್ಪಿಸಿದರು. ಸರಿಯಾದ ಬೆಂಗಾವಲು ದಳದೊಡನೆ ದುರೇಷಳನ್ನು ಮ್ಯಾನಾದಲ್ಲಿ ಕುಳ್ಳಿರಿಸಿ, ಪುರಂಧರಘಢಕ್ಕೆ ಕಳುಹಿಸಿ ಕೊಟ್ಟಳು.

ದುರೇಷಳು ತನ್ನ ಮನೆಗೆ ಹಿಂತಿರುಗಿದಳು. ಖುಸ್ರುವನ್ನು ಮರೆತಿದ್ದಂತೆಯೇ ಇದ್ದಳು.

ನವಾಬ ಫರೂಕನಿಗೆ ತೌರುಮನೆಯಿಂದ ಬಂದ ಮಡದಿಯನ್ನು ನೋಡಿ ಅತ್ಯಾನಂದವಾಯಿತು. ಅವನ ಪ್ರೇಮ ಪ್ರವಾಹವು ಸ್ವಚ್ಛವಾಗಿ ಹರಿಯು ತ್ತಿದ್ದಿತು.

ಖುಸ್ರುವು ಬೀಜಾಪುರದಲ್ಲಿ ಪುನಃ ದುರೇಷಳ ದರ್ಶನ ಮಾಡಲಾಗದೇ ಹುಚ್ಚನಂತಾಗಿದ್ದನು. ಅವನಿಗೆ ದುರೇಷಳು ಪುರಂಧರಘಢಕ್ಕೆ ಹೊರಟ್ಟು ಹೋದ ಸಮಾಚಾರವು ಖಚಿತವಾಗಿ ತಿಳಿಯಿತು. ಅವನು ಅವಶ್ಯವಾಗಿ ಎಲ್ಲಿಗೋ ಹೋಗುತ್ತೇನೆಂದುಕೊಂಡು ಬಿಜಾಪುರವನ್ನು ಬಿಟ್ಟು ಹೊರಟು ಹೋದನು.

ಎಲ್ಲಿಗೆ ಹೊಗುವುದು ಅವನಿಗೆ ಉದ್ದೇಶ್ಯವಿತ್ತೋ ಇಲ್ಲವೋ ಪುರಂಧರ ಘಢಕ್ಕೆ ಬಂದೇಬಿಟ್ಟಿದ್ದನು. ಸುಮಾರು ಆರು ತಿಂಗಳ ಕಾಲ ಉರುಳಿ ಹೋಗಿರಬಹುದು. ಮತ್ತೆ ಮತ್ತೆ ಮಳೆಯ ಮೋಡಗಳು ಆಕಾಶದಲ್ಲಿ ಒಟ್ಟುಗೂಡುತ್ತಿದ್ದವು. ಒಂದು ದಿನ ಹೊಟ್ಟೆಗಿಲ್ಲದೆ ಖುಸ್ರುವು ಹಾಡಿಕೊಂಡು ಬೀದಿಯಲ್ಲಿ ಭಿಕ್ಷೆಗಾಗಿ ಅಲೆಯುತ್ತಿದ್ದನು. ಅರಮನೆಯ ಮುಂದೆ ಆ ಖುಸ್ರು ವಿನ ಕಂಠಧ್ವನಿಯು ದಿಗಂತ ವ್ಯಾಪಿಯಾಗಿ ಕೇಳಿಸಿತು.

ದುರೇಷಳು ಚಕಿತಳಾಗಿ ಆ ಧ್ವನಿಯನ್ನು ಆಲಿಸಿ ಕೇಳಿದಳು. ಪರಿ ಚಾರಿಕೆಯನ್ನು ಕರೆದು ಆ ಭಿಕ್ಷುಕನನ್ನು ಕರೆತರುವಂತೆ ಹೇಳಿದಳು.

ಖುಸ್ರುವು ಅಂತಃಪುರದ ಬಾಗಿಲಿಗೆ ಬಂದನು.

ಅವನ ಅವಸ್ಥೆಯನ್ನು ನೋಡಿ ದುರೇಷಳ ಕಣ್ಣುಗಳಲ್ಲಿ ನೀರು ತುಂಬಿತು. ದುರೇಷಳು ಅವನಿಗೆ ಭಿಕ್ಷೆನೀಡಿದಳು. ಅದು ಧಾನ್ಯದ ಮುಷ್ಟಿ ಯಲ್ಲ. ಚಿನ್ನದ ವರಹಗಳ ಮುಷ್ಟಿ. ಅಮೂಲ್ಯ ರೇಷ್ಮೆಯ ವಸ್ತ್ರಗಳನ್ನು ಕೊಟ್ಟಳು. ಅವನು ದುರೇಷಳ ಮುಖವನ್ನು ನೋಡಿದನು. ರಾಣಿಯವರೇ ತಿರುಪೆವೆತ್ತುವ ನನಗೆ ಈ ಅನರ್ಘ ವ್ಯಸನಗಳೇಕೆ ? ಎಂದು ಕೇಳಿದನು.

ದುರೇಷಳು ನೀನು ಗವಾಯಿ ಖುಸ್ರು ಅಲ್ಲವೆ ? ಎಂದು ಕೇಳಿದಳು.

ಖುಸ್ರುವು ಅವಳ ಮುಖವನ್ನೇ ದಿಟ್ಟಿಸಿ ಹೌದು, ನಾನು ಖುಸ್ರು ಎಂದನು.

ದುರೇಷಳು ನೀನೇಕೆ ಈ ಅವಸ್ಥೆಗೆ ಬಂದೆ, ಎಂದು ಕೇಳಿದಳು.

ಖುಸ್ರುವು ನಾನು ಗಾಯಕ, ಗಾನದೇವಿ ದುರೇಷಳು ನಿರಾಕರಿಸಿದಳು.

ಇನ್ನು ನನಗುಳಿದಿರುವುದು ಭಿಕ್ಷಾಪಾತ್ರೆ ಎಂದು ಹೇಳಿದನು.

ದುರೇಷಳು ಖಿನ್ನಳಾಗಿ ಅಂತಃಪುರದೊಳಗೆ ಹೊರಟು ಹೋದಳು.

ಭಿಕ್ಷುಕನನ್ನು ಪರಿಚಾರಿಕೆಯರು ಹೊರಗೆ ಕಳಿಸಿದರು.

ನವಾಬನಿಗೆ ಈ ವಿಚಿತ್ರ ಭಿಕ್ಷುಕನ ವಿಚಾರವು ತಿಳಿಯಿತು. ಇವನಾರು? ಇವನಾರು ? ಎಂದು ವಿಚಾರಿಸಿದನು. ದುರೇಷಳನ್ನೇ ಪ್ರತ್ಯಕ್ಷ ಕೇಳುವ ಧೈರ್ಯ ಬರಲಿಲ್ಲ. ಅಂತರಂಗದಲ್ಲಿ ಪರಿಚಾರಿಕೆಯನ್ನು ಕರೆದು ಈ ಭಿಕ್ಷುಕನನ್ನು ಬಲ್ಲೆಯ ? ಎಂದು ಕೇಳಿದನು.

ಅವಳು ಹೆದರುತ್ತಾ ಹೆದರುತ್ತಾ "ಬಲ್ಲೆ ಹುಜೂರ್. ಇವನು ಬಿಜಾಪುರದ ದರಬಾರಿನ ಸುಪ್ರಸಿದ್ಧ ಗಾಯಕ."

ನವಾಬನಿಗೆ ಸಂಶಯವು ಅಂಕುರಿಸಿತು. ಪರಿಚಾರಕಳನ್ನು ತೀಕ್ಷ್ಣ ದೃಷ್ಟಿಯಿಂದ ದಿಟ್ಟಿಸಿ ನೋಡಿ ಬಾಂದಿ, ನೀನು ಬೀಜಾಪುರದಿಂದ ಬಂದವಳು ನಿಜವನ್ನು ಹೇಳು ಇಲ್ಲದಿದ್ದರೆ ಚಿತ್ರವಧೆಯಾಗುತ್ತದೆ. ಈ ಗವಾಯಿಯು ನಿಮ್ಮ ರಾಣೀಸಾಹೇಬಳ ಅಂತರಂಗ ಪ್ರಿಯಯಿಯೇ ? ಎಂದು ಪ್ರಶ್ನೆ ಮಾಡಿದನು.

ಪರಿಚಾರಿಕೆಯು ನಡುಗುತ್ತಾ ಕೈಮುಗಿದು ನಿಂತಳು.

ನವಾಬನು ಅವಳ ಕಂಠವನ್ನು ಬಲವಾಗಿ ಹಿಡಿದು ನಿಜವನ್ನು ಹೇಳದಿದ್ದರೆ ಸಾಯುವೆ ಎಂದು ಗರ್ಜಿಸಿದನು. ನವಾಬನ ಮುಖವು ವಿವರ್ಣವಾಗಿದ್ದಿತು. ಕೊಲೆಗಡುಕನ ರೌದ್ರಾವೇಶವು ಅವನ ಮುಖದಲ್ಲಿ ಕಾಣಿಸುತ್ತಿದ್ದಿತು.

ಪರಿಚಾರಿಕೆಯು ಆರ್ತಳಾಗಿ "ಕೊರಳು ಬಿಡಿ ಹೇಳುತ್ತೇನೆ" ಎಂದು ಹೇಳಿ ಬಿಜಾಪುರದಲ್ಲಿ ತಾನು ನೋಡಿದ ತಾನು ಕೇಳಿದ ಕಥೆಯನ್ನೆಲ್ಲಾ ಹೇಳಿದಳು.

ನವಾಬನು ಅವಳ ಕೈತುಂಬಾ ಚಿನ್ನದ ಮೊಹರುಗಳನ್ನು ಕೊಟ್ಟು ಹೊರಟು ಹೋಗು. ಈ ಅರಮನೆಯಲ್ಲಿರಬೇಡ. ಯಾರಲ್ಲಿಯೂ ಈ ಸಮಾಚಾರ ಬಾಯಿಬಿಡಬೇಡ ಎಂದು ಅಪ್ಪಣೆಮಾಡಿ ಕಳುಹಿಸಿದನು.

ಸಂಧ್ಯಾಕಾಲದಲ್ಲಿ ಗುಪ್ತ ಭಟರನ್ನು ಕರೆದು ಆ ವಿಚಿತ್ರ ಭಿಕ್ಷುಕನನ್ನು ಕರೆತರುವಂತೆ ಅಪ್ಪಣೆ ಮಾಡಿದನು.

ಅವರು ಖುಸ್ರುವನ್ನು ಹುಡುಕಿ ಕರೆತಂದರು.

ನವಾಬನು ಅಂತರಂಗ ಗೃಹದಲ್ಲಿ ಗಂಭೀರವಾಗಿ ಕುಳಿತಿದ್ದನು.

ರಾಜಭಟರು ಖುಸ್ರುವನ್ನು ನವಾಬನ ಸಮ್ಮುಖಕ್ಕೆ ಕರೆತಂದರು.

ಖುಸ್ರುವು ಸಲಾಂಮಾಡಿ ನಿಂತುಕೊಂಡನು.

ನವಾಬನು " ನೀನು ಬೀಜಾಪುರದ ದರಬಾರಿನ ಗವಾಯಿಯಲ್ಲವೇ ? " ಎಂದು ಪ್ರಶ್ನೆ ಮಾಡಿದನು.

"ಹುಜೂರ್ ಹೌದು ನಾನು ಗವಾಯಿ ಖುಸ್ರು "

"ನೀನೇಕೆ ದರಬಾರನ್ನು ಬಿಟ್ಟು ಬಂದೆ. ಈ ಭಿಕ್ಷಾವೃತ್ತಿಯನ್ನು ಏಕೆ ಅವಲಂಬಿಸಿದೆ " ಎಂದು ಕೇಳಿದನು.

ನಿರುತ್ತರ.

" ಈ ಕೋಟೆಗೆ ಏಕೆ ಬಂದೆ ? "

ನಿರುತ್ತರ.

ಅವನನ್ನು ಹೊರಗೆ ಕರೆದುಕೊಂಡು ಹೋಗುವಂತೆ ಸನ್ನೆಮಾಡಿದನು. ಭಟರು ಹೊರಗೆ ಕರೆದೊಯ್ದರು.

ಪರಿಚಾರಿಕೆಯನ್ನು ಕಳಿದು ರಾಣೀ ದುರೇಷಾರವರನ್ನು ಕರೆತರುವಂತೆ ಅಪ್ಪಣೆಮಾಡಿದನು.

ದುರೇಷಾ, ನವಾಬನ ಅಂತರ್ಗೃಹಕ್ಕೆ ಬಂದಳು. ಅವಳಿಗೆ ವಿದ್ಯಮಾನ ಗಳೆಲ್ಲಾ ಸಿತಾಸಿತವಾಗಿ ತಿಳಿದು ಹೋಗಿತ್ತು. ಧೈರ್ಯದಿಂದ ಬಂದು ನಿಂತಳು.

ಫರೂಕ್ ಕುಳಿತುಕೊಳ್ಳುವಂತೆ ಹೇಳಿದನು.

ಅವಳು ಕುಳಿತುಕೊಳ್ಳಲಿಲ್ಲ. ಗಂಭಿರವಾಗಿ ಅಚಲಳಾಗಿ ನಿಂತಿದ್ದಳು.

ನವಾಬನು. ಖುಸ್ರುವನ್ನು ಕರೆಸಿ, ಎದುರಿಗೆ ನಿಲ್ಲಿಸಿದನು. ಭಟರಿಗೆ ಸನ್ನೆ ಮಾಡಿದನು. ಬಾಗಿಲು ಮುಚ್ಚಿತು.

" ದುರೇಷಾ ಈ ಭಿಕ್ಷುಕನನ್ನು ಬಲ್ಲೆಯಾ ? "

ದುರೇಷಳು ಅವನ ಕಡೆ ನೋಡಿ, "ಬಲ್ಲೆ. ಇವನು ಸುಪ್ರಸಿದ್ಧ ಗವಾಯಿ ಖುಸ್ರು. "

ಆ ಮಾತು ಫರೂಕ್ ಹೃದಯದಲ್ಲಿ ಇರಿದಂತಾಯಿತು. ಅವನು ಸಣ್ಣ ಧ್ವನಿಯಿಂದ "ಇವನು ನಿನ್ನ ಪ್ರಣಯಿಯೋ ?" ಎಂದು ಕೇಳಿದನು.

ದುರೇಷಳು, ಹೌದು ಅದನ್ನು ದೇವರು ಬಲ್ಲ. ಅವನು ನನ್ನ ಪ್ರಾಣ ಪ್ರಿಯ ಎಂದು ಹೇಳಿದಳು.

ಫರೂಕನು ಕತ್ತಿಯನ್ನು ಹಿರಿದು ಖುಸ್ರುವಿನ ತಲೆಯನ್ನು ಕಡಿದು ಹಾಕಿ. ದುರೇಷಳ ಕಡೆಗೆ ತಿರುಗಿ ಬಿರುಗಣ್ಣಿನಿಂದ ನೋಡುತ್ತಾ ಏಕಟವಾಗಿ ನಕ್ಕು ನಿನ್ನ ಪ್ರಣಯಕ್ಕೆ ತಕ್ಕ ಪ್ರಾಯಶ್ಚಿತ್ತ ಎಂದನು.

ದುರೇಷಳು ಅದು ಪ್ರಾಯಶ್ಚಿತ್ತವಲ್ಲ ವರಪ್ರಧಾನ ಎಂಧು ಹೇಳಿನಕ್ಕಳು.

ಫರೂಕನು ಹಿಡಿದುಕೊಳ್ಳಲು ಹೋದನು. ಭೂಮಿಯ ಮೇಲೆ ಅವಳ ಶರೀರವು ಬಿದ್ದಿತು. ಮುಖದಲ್ಲಿ ಅದೇ ಮಂದಹಾಸ, ಅದೇ ಉಜ್ವಲ ಕಾಂತಿ, ಪ್ರಾಣವು ಹಾರಿಹೋಗುವ ಕ್ಷಣ ಬಂದಿದ್ದಿತು. ವಿಷವೇಗವು ಆಪಾದಮಸ್ತಕ ವ್ಯಾಪಿಸಿದ್ದಿತು. ಫರೂಕನು ಬಗ್ಗಿ ನೋಡಿದನು. ಮುಖದ ಹತ್ತಿರ ಮುಖವಿಟ್ಟು ನೋಡಿದನು.

“ಫರೂಕ್ ನಾನೆಂದೂ ನಿನ್ನನ್ನು ಪ್ರೀತಿಸಿಲ್ಲ. ಪ್ರೀತಿಸಿದ ಹೆಣ್ಣಿಗೆ ಸಿಕ್ಕುವ ಬಹುಮಾನವಿದು.” ಎಂದು ಹೇಳಿ ನಕ್ಕಳು.

ಪ್ರಾಣವು ಹಾರಿಹೋಯಿತು.

ಫರೂಕನು ಒಂದು ಬಾರಿ ಆ ಖುಸ್ರುವಿನ ಕಡಿದ ರುಂಡವನ್ನು ನೋಡಿದನು. ಆ ಬಿಚ್ಚುಗಣ್ಣುಗಳು ಅವನನ್ನು ಹೆದುರಿಸುವಂತಿದ್ದುವು. ದುರೇಷಳ ಮುಖವನ್ನು ದಿಟ್ಟಿಸಿ ನೋಡಿದನು. ಆ ಮುಚ್ಚಿದ ಕಣ್ಣುಗಳು ಲೋಕಾಸ್ತಮಾನವಾದಂತೆ ಕಾಣಿಸಿದುವು. ಫರೂಕನು ಕೈಲಿದ್ದ ಕತ್ತಿಯನ್ನು ತೆಗೆದು ತನ್ನ ಎದೆಯಲ್ಲಿ ಧೈರ್ಯವಾಗಿ ಚುಚ್ಚಿಕೊಂಡನು.

೩

ನವಾಬ ಫರೂಕನಿಗೆ ಮೂವರು ಮಕ್ಕಳಿದ್ದರು. ಮೊದಲನೆಯ ಹೆಂಡತಿಯ ಮಗ ಅಬ್ದುಲ್‌ಖಾನ್. ಅವನು ಹುಟ್ಟುತ್ತಲೇ ಮಾತೃವಿಯೋಗವಾಗಿತ್ತು. ಎರಡನೆಯ ಹೆಂಡತಿ ಗೋಲ್ಕೊಂಡದ ಶ್ರೀಮಂತರ

ಮಗಳು. ಅವಳ ಮಕ್ಕಳು ಇಬ್ಬರು. ರಷೀದ್, ಮಸೂದ್. ಈ ಮೂವರು ಮಕ್ಕಳೂ ಪ್ರಾಯದ ವಯಸ್ಸಿಗೆ ಬಂದಿದ್ದರು. ದುರೇಷಳು ಮೂರನೆಯ ಮಡದಿ. ಅವಳು ನವಾಬನ ಪ್ರೇಮದ ಪುತ್ಥಳಿ. ನವಾಬನಿಗೆ ಮೂವರು ಮಕ್ಕಳಲ್ಲಿಯೂ ಅಭಿಮಾನವಿರಲಿಲ್ಲ. ನವಾಬನು ಆ ಮಕ್ಕಳಿಗೆ ಜಹಗೀರಿಗಳನ್ನು ಕೊಟ್ಟು ಕಳುಹಿಸಿಬಿಡಬೇಕೆಂದು ಯೋಚಿಸಿದ್ದನು. ನವಾಬನ ಪರ್ಯವಸಾನವು ಆಕಸ್ಮಿಕವಾಗಿ ಸಂಭವಿಸಿತು. ಮೂವರು ರಾಜ್ಯದ ಗಾದಿಗಾಗಿ ಹೋರಾಡಲಾರಂಭಿಸಿದರು. ನವಾಬನಿಗೆ ಆಪ್ತರಾದವರ ಮಾತುಗಳನ್ನು ಮೂವರೂ ಕೇಳಲಿಲ್ಲ. ಯಾವುದೂ ಇತ್ಯರ್ಥಕ್ಕೆ ಬರಲಿಲ್ಲ. ಮೂವರೂ ಗಾದಿಯ ಅಧಿಕಾರಕ್ಕಾಗಿ ಬಿಜಾಪುರದ ದರಬಾರಿಗೆ ಭಿನ್ನಹ ಮಾಡಿಕೊಂಡರು. ಅದನ್ನು ಸಾಧಿಸಲು ಮೂವರೂ ಬಿಜಾಪುರಕ್ಕೆ ಹೋದರು.

ಆ ದರಬಾರು ಹೊರನೋಟಕ್ಕೆ ಅತ್ಯಂತ ಪ್ರಭಾವಶಾಲಿಯಾಗಿ ಕಾಣುತ್ತಿದ್ದಿತು. ಅದು ಹಿಂದಿನ ಸುಲ್ತಾನರುಗಳ ಪ್ರಭಾವ.

ಈಗ ಸಿಂಹಾಸನದಲ್ಲಿರುವ ಅಹಮದಾಲಿಯು ರುಗ್ಣ ಶೈಯ್ಯೆಯಲ್ಲಿಯೇ ಇದ್ದನು. ಅವನನ್ನು ಮಂತ್ರಿಗಳಾಗಲೀ ಸರದಾರರಾಗಲೀ ಭೇಟಿಮಾಡುವುದು ಅತಿ ದುರ್ಲಭ್ಯವಾಗಿತ್ತು. ಭೇಟಿ ಮಾಡಿದರೂ ರಾಜಕೀಯ ಸಮಸ್ಯೆಗಳನ್ನು ಮುಂದಿಡಲು ಎಲ್ಲರಿಗೂ ಭಯ. ಇಂಥಾ ಅವಸ್ಥೆಯಲ್ಲಿ ಪುರಂದರದ ನವಾಬ ಕುಮಾರರು ಮೂವರೂ ದರಬಾರಿನ ಅಧಿಕಾರಿಗಳನ್ನು ಭೇಟಿ ಮಾಡಿ ಆಶ್ರಯಿಸಿ ತುಂಬಾ ಹಣ ಸುರಿದು ವಿಫಲಮನೋರಥರಾದರು. ಏನೂ ಫಲವಾಗಲಿಲ್ಲ.

ಬಿಜಾಪುರದ ಖಾಜಿಯವರು ನೀವು ಜಗಳ ಮಾಡಿಕೊಳ್ಳಬೇಡಿರಿ. ಬಿಜಾಪುರದಲ್ಲಿ ನಿಮ್ಮ ಜಗಳ ಪರಿಹಾರವಾಗುವುದೇ ಇಲ್ಲ. ನೀವೇ ನಿಮ್ಮ ಊರಿಗೆ ಹೋಗಿ ಆಪ್ತರನ್ನು ಇಟ್ಟುಕೊಂಡು ಇತ್ಯರ್ಥಪಡಿಸಿಕೊಳ್ಳಿರಿ. ಇಲ್ಲವೇ ಮೂವರೂ ಒಪ್ಪಂದ ಮಾಡಿಕೊಂಡು ರಾಜ್ಯವನ್ನು ಹಂಚಿಕೊಂಡು ಅನುಭವಿಸಿರಿ, ವೃಥಾ ಇಲ್ಲಿ ಕಾಲಹರಣ ಮಾಡಬೇಡಿರಿ, ಎಂದು ಬುದ್ಧಿವಾದವನ್ನು ಹೇಳಿ ಕಳುಹಿಸಿದರು.

ಮೂವರೂ ಬೇಸತ್ತು ಪುರಂಧರಗಢಕ್ಕೆ ಹಿಂತಿರುಗಿದರು.

ಆಪ್ತಾಲೋಚನೆ ಮಾಡಿದರು. ಆ ಪ್ರಾಂತ್ಯದಲ್ಲೆಲ್ಲಾ ಶಿವಾಜಿಯ ಪ್ರಭಾವವು ವ್ಯಾಪಿಸಿದ್ದಿತು. ಮಧ್ಯಸ್ಥಿಕೆ ಮಾಡಿ ತಮ್ಮ ವ್ಯವಹಾರವನ್ನು ಇತ್ಯರ್ಥಪಡಿಸಿಕೊಡಬೇಕೆಂದು ಶಿವಾಜಿಗೆ ಪತ್ರ ಬರೆದು ಕಳುಹಿಸಿದರು. ಶಿವಾಜಿಯು ಸಂತೋಷದಿಂದ ಒಪ್ಪಿಕೊಂಡನು. ಮಿತಪರಿವಾರದೊಡನೆ ಪುರಂಧರಗಢಕ್ಕೆ ಬಂದು ಅರಮನೆಯಲ್ಲಿಯೇ ಅತಿಥಿಯಾಗಿ ಬಿಡಾರಮಾಡಿದನು.

ನವಾಬನ ಮಕ್ಕಳೂ ಮೂವರೂ ಅವರ ಆಪ್ತರುಗಳೂ ಅರಮನೆಯ ದಿವಾನ್‌ಖಾನೆಯಲ್ಲಿ ಬಂದುನೆಲೆಸಿದರು. ಶಿವಾಜಿಯು ಬಂದು ಕುಳಿತುಕೊಂಡನು

ಶಿವಾಜಿಯು ನಾವೂ ನೀವು ಅಕ್ಕಪಕ್ಕದ ಕೋಟೆಯವರು. ನಮ್ಮದು ಸಣ್ಣ ಜಮಿನ್ದಾರಿ ನಿಮ್ಮದು ಸ್ವಲ್ಪ ದೊಡ್ಡರಾಜ್ಯ. ನಾವು ಸಹೋದರರಂತೆ ಬಾಳಬೇಕು ಸ್ನೇಹದಿಂದ ಬದುಕಬೇಕು. ನೀವಾದರೂ ನಿಮ್ಮ ನಿಮ್ಮಲ್ಲೇ ಏಕೆ ಜಗಳವಾಡುತ್ತೀರಿ ಎಂದು ಕೇಳಿದನು.

ನವಾಬರ ದೊಡ್ಡಮಗ ಅಬ್ದುಲ್ಲಾಖಾನನು ಜಗಳಕ್ಕೆ ಕಾರಣವೇ ಇಲ್ಲ ನಾನು ನಮ್ಮ ತಂದೆಯವರ ಹಿರಿಯ ಮಗ. ಅವರ ಅಧಿಕಾರವು ನನಗೇ ಬರಬೇಕು. ಈ ರಷೀದ್ ಮತ್ತು ಮಸೂದ್ ಇವರಿಬ್ಬರೂ ನನ್ನ ತಮ್ಮಂದಿರು ನನ್ನೊಡನೆ ವಿಹಿತವಾಗಿದ್ದುಕೊಂಡು ಮಾನ ಮರ್ಯಾದೆಗಳನ್ನು ಪಡೆದು ಸುಖವಾಗಿ ಬಾಳಬೇಕು. ಇದನ್ನು ಬಿಟ್ಟು ತಮಗೇ ನವಾಬಗಿರಿ ಬೇಕೆನ್ನುತ್ತಾರೆ. ಇದೆಲ್ಲಾದರೂ ಲೋಕದಲ್ಲಿ ಉಂಟೆ? ನೀವೇ ಹೇಳಿರಿ ಎಂದನು.

ತಮ್ಮನಾದ ರಷೀದನು ಈ ನ್ಯಾಯವೆಲ್ಲಾ ಮೊದಲೇ ಮುಗಿದು ಹೋಗಿದೆ. ಈ ಅಬ್ದುಲ್ಲಾಖಾನರು ತಂದೆಗೆ ವಿಧೇಯರಾಗಿದ್ದಿದ್ದರೆ ನಾವೂ ಇವರಿಗೆ ವಿಧೇಯರಾಗಬೇಕಿತ್ತು. ಈ ಲೋಕನ್ಯಾಯ ಆಗಲೇ ಒಡೆದು ಹೋಯಿತು. ಇಲ್ಲದಿದ್ದರೆ ನವಾಬರೇ ಇವರಿಗೆ ಯುವರಾಜಪಟ್ಟವನ್ನು ಕಟ್ಟಿ ಬಿಜಾಪುರದ ದರಬಾರಿನಿಂದಲೇ ಮೊಕರೂರು ಮಾಡಿಸುತ್ತಿದ್ದರು. ಈ ಖಾನ್‌ಸಾಹೇಬರು ಶೂರರಾಗಿದ್ದಿದ್ದರೆ ಅಂದೇ ಬಿಜಾಪುರದ ದರಬಾರಿನಲ್ಲಿ ಅಧಿಕಾರವೂ ಸಿಕ್ಕುತ್ತಿತ್ತು. ಇದಕ್ಕೆಲ್ಲಾ 'ನಾಲಾಯಕ್' ಎಂದೇ ನವಾಬರು ಇವರನ್ನು ಆಗಲೇ ದೂರಪಿಟ್ಟಿದ್ದರು. ಈಗಲೂ ಅಷ್ಟೆ, ಎಲ್ಲಾ ಸರಿಯಾಗಿದ್ದಿದ್ದರೆ ನಾವೇಕೆ ನವಾಬ್‌ಗಿರಿ ಬೇಕೆನ್ನುತ್ತಿದ್ದೆವು. ಬಿಜಾಪುರಕ್ಕೊ ಡೆಲ್ಲಿಗೆ ಹೋಗಿ ಅಧಿಕಾರ ಸಂಪಾದಿಸುತ್ತಿದ್ದೆವು ಎಂದು ಹೇಳಿದನು.

ಅಬ್ದುಲ್ಲಾಖಾನನ ಕಡೆ ರಘುನಾಥಸಾಹೇಬ್ ಎಂಬುವರು ಆದಿಲ್ಲಾ ನವಾಬರ ಅರಮನೆಯ ಕಥೆ ನವಾಬರು ಅನ್ಯಾಯವಾಗಿ ಸತ್ತುಹೋದರು. ಅವರ ಸಂಸಾರದ ಮಾತನ್ನು ಎತ್ತಿ ಆಡುವುದು ಈಗ ತರವಲ್ಲ. ಈ ಖಾನ್ ಸಾಹೇಬರು ಜನ್ಮ ತಾಳುತ್ತಲೇ ಮಾತೃವಿಯೋಗವಾಯಿತು. ಗೋಲ್ಕಂಡದ ಬೇಗಂಸಾಹೇಬರು ಈ ರಷೀದ್‌ಖಾನ್, ಮಸೂದ್‌ಖಾನರ ಮಾತೃಶ್ರೀಯವರು. ಅವರ ಪ್ರೇರಣೆಯಿಂದ ಅಬ್ದುಲ್ಲಾಖಾನರು ಮೂಗನಾದರು. ಅದರಲ್ಲಿ ಅಬ್ದುಲ್ಲಾಖಾನರ ತಪ್ಪೇನಿದೆ. ಅವರ ಹಕ್ಕು ಹೇಗೆ ಹೋಗುತ್ತದೆ. ಈ ತಮ್ಮಂದಿರು ಏನಾದರೂ ನ್ಯಾಯವಿದ್ದಿದ್ದರೆ ಬಿಜಾಪುರದಲ್ಲಿಯೇ ಠಾವಾಗುತ್ತಿತ್ತು. ನ್ಯಾಯವೆಲ್ಲಿದೆ? ಇವರಿವರ ಜಗಳದಲ್ಲಿ ನಮ್ಮಂಥ ಪ್ರಭು ಭಕ್ತರು ಊರುಕೇರಿಗಳನ್ನು ಬಿಟ್ಟು ದೇಶಾಂತರ ಹೋಗುವ ಗತಿ ಬಂದಿದೆ ಎಂದನು.

ಶಿವಾಜಿಯು ಹಿಂದೆ ನಡೆದದ್ದೆಲ್ಲಾ ಕಳೆದುಹೋಗಿದೆ. ಅಪ್ರಿಯವಾದರೂ ಖಾನ್‌ಸಾಹೇಬನು ದೊಡ್ಡವುಗ ಅವನು ನವಾಬನಾಗಲಿ. ರಷೀದ್ ಖಾನನು ದಿವಾನನಾಗಲಿ, ಮಸೂದನು ಸೇನಾಪತಿಯಾಗಲಿ ತಮ್ಮಂದಿರಿಬ್ಬರಿಗೂ ಜಹಗೀರಿಗಳನ್ನು ಕೊಟ್ಟುಬಿಡೋಣ. ಆ ಜಹಗೀರಿಗಳು ವಂಶ ಪಾರಂಪರ್ಯವಾಗಿ ನಡೆಯಬೇಕಲಿ ಎಂದು ಹೇಳಿದನು.

ಎಲ್ಲರೂ ಸರಿಯಾಗಿದೆ ಎಂದರು.

ಅಬ್ದುಲ್ಲಾಖಾನನು ತಲೆಯಲ್ಲಾಡಿಸಿದನು. "ಇದು ಹೇಗಾಗಬೇಕು. ಕಾರ್ಯ ನಡೆಸುವುದು ಹೇಗೆ? ಹೆಸರು ಮಾತ್ರಕ್ಕೆ ನಾನು ನವಾಬ. ಅಧಿಕಾರವೆಲ್ಲಾ ಈ ತಮ್ಮಂದಿರ ಕೈಲಿರುತ್ತದೆ. ನನ್ನ ಮಾತು ಹಾಗಿರಲಿ, ಇವರಲ್ಲೇ ಜಗಳ ಬಂದರೆ ಆಗ ತೀರ್ಮಾನ ಮಾಡುವುದು ಹೇಗೆ? ಅಷ್ಟೇ ಅಲ್ಲ ಬಿಜಾಪುರಕ್ಕೆ ವರ್ಷ ವರ್ಷ ಪೊಗದಿ ಸಲ್ಲಬೇಕು ಅದರ ಜವಾಬ್ದಾರೀ ನನ್ನ ತಲೆಯಮೇಲೆ ಬೀಳುತ್ತೆ. ಇವರು ಸರ್ಕಾರದ ಬೊಕ್ಕಸದಿಂದ ಹಣ ಸಲ್ಲಿಸದಿದ್ದರೆ ನನ್ನ ತಲೆ ಹೋಗುತ್ತೆ" ಎಂದು ಹೇಳಿದನು.

ರಷೀದನು "ಯಾವ ನ್ಯಾಯಕ್ಕಾಗಿ ಒಪ್ಪುತ್ತೇವೆ. ಇಲ್ಲದಿದ್ದರೆ ನಮ್ಮನ್ನೇಕೆ ಕರೆಸುತ್ತಿದ್ದರು. ನಮ್ಮ ಅಣ್ಣ ಖಾನ್‌ಸಾಹೇಬರದು ದುರುದ್ದೇಶ್ಯ. ಅವರು ನಮ್ಮನ್ನು ಈ ಪುರಂಧರಗಢದಿಂದಲೇ ಓಡಿಸಿಬಿಡಬೇಕೆಂದು ಮಸಲತ್ ಮಾಡಿದ್ದಾರೆ." ಎಂದು ಹೇಳಿದನು.

ಶಿವಾಜಿಯು ನಗುತ್ತಾ ಇಬ್ಬರೂ ಬಿಸಿಯಾಗಿದ್ದೀರಿ. ನ್ಯಾಯ ತೀರ್ಮಾನವಾಗುವುದಿಲ್ಲ. ನನ್ನ ಅಭಿಪ್ರಾಯ ಹೇಳಿದ್ದೇನೆ. ನೀವು ಯಾವ ದರ್ಬಾರಿಗೆ ಹೋದರೂ ಈ ನ್ಯಾಯವೇ ಮಂಜೂರಾಗುತ್ತದೆ. ದೀಪಾವಳಿ ಹಬ್ಬವು ಸಮೀಪಿಸುತ್ತಿದೆ. ನಾನು ಹಬ್ಬಕ್ಕೆ ಪುಣೆಗೆ ಹೋಗುತ್ತೇನೆ. ಹಬ್ಬ ನಡೆಯಲ್ಲಿ. ಹಬ್ಬದಲ್ಲಿ ಅನ್ಯೋನ್ಯತೆಯಿಂದ ನಡೆದುಕೊಳ್ಳಿ. ಹಬ್ಬವಾದ ಮೇಲೆ ನೀವು ಅಪೇಕ್ಷಿಸಿದರೆ ನಾನೇ ಬರುತ್ತೇನೆ. ಎಲ್ಲವನ್ನು ಸಮಾಧಾನದಿಂದ ವ್ಯವಸ್ಥೆ ಮಾಡೋಣ ಎಂದು ಹೇಳಿದನು.

ಅಂದಿನ ಪಂಚಾಯಿತಿ ಭರಕಾಸ್ತಾಯಿತು.

ಸಂಧ್ಯಾಕಾಲ ರಷೀದ್‌ನು ಶಿವಾಜಿಯನ್ನು ತಮ್ಮ ಮನೆಗೆ ಮೇಜುವಾನಿ ಸ್ವೀಕರಿಸಬೇಕೆಂದು ಹೇಳಿದನು. ಶಿವಾಜಿಗೆ ಆದಿನ ರಷೀದರ ಮಹಲಿನಲ್ಲಿ ಸಂಭ್ರಮದ ಮೇಜುವಾನಿ, ನಗರದ ಪ್ರಮುಖರೆಲ್ಲಾ ಸೇರಿದ್ದರು. ಗಾನ ನರ್ತನಗಳು ನಡೆದವು. ಹಿರಿಯ ಅಣ್ಣ ಅಬ್ದುಲ್ಲಾ ಖಾನನನ್ನು ಕರೆದಿದ್ದರು ಅವನು ಆ ಮೇಜುವಾನಿಗೆ ಬರಲಿಲ್ಲ. ಎಲ್ಲವೂ ಪೂರೈಸಿದ ನಂತರ ಶಿವಾಜಿಯು ಕಾಲುನಡುಗೆಯಲ್ಲಿಯೇ ಅರಮನೆಗೆ ಬಂದನು. ದೀವಟಿಗೆಗಳನ್ನು ಹಿಡಿದು ಕೊಂಬು ಕಹಳೆಗಳನ್ನು ಊದಿ ಮರ್ಯಾದೆಯಿಂದ ಅರಮನೆಗೆ ಕರೆತಂದು ಬಿಟ್ಟರು.

ರಾತ್ರಿ ರಷೀದನೂ ಅವನ ತಮ್ಮನು ಶಿವಾಜಿಯನ್ನು ಅಂತರಂಗದಲ್ಲಿ ಭೇಟಿಮಾಡಿ ಎರಡು ಸಾವಿರ ಪಗೋಡಗಳ ಗುಪ್ತ ಕಾಣಿಕೆ ಮಾಡಿದರು "ಈ ನ್ಯಾಯ ನಮ್ಮ ಕಡೆಗೇ ಆಗಬೇಕು. ನಮ್ಮಲ್ಲಿ ಸೈನ್ಯವಿಲ್ಲ. ಅಲ್ಪ ಸ್ವಲ್ಪ ಜನರಿದ್ದಾರೆ ತಮ್ಮ ಸೈನ್ಯವನ್ನಾದರೂ ತಂದು ಕೋಟೆಯನ್ನು ವಶ ಮಾಡಿಕೊಡಬೇಕು. ನಾವು ಹತ್ತು ಸಹಸ್ರ ಪಗೋಡಗಳನ್ನು ಕೊಡುತ್ತೇವೆ. ಎಂದು ಕೇಳಿಕೊಂಡರು.

ಶಿವಾಜಿಯು ವಿಶ್ವಾಸದಿಂದ ಕಾಣಿಕೆಯನ್ನು ನಿರಾಕರಿಸಿದನು. ಹಣ ದೊಡ್ಡದಲ್ಲವಯ್ಯಾ. ನಮ್ಮ ಜಾತಿಯಲ್ಲಿ ರುಣ ದೊಡ್ಡದು. ನಾವುಗಳು ಅಕ್ಕಪಕ್ಕದವರು. ನೀವು ಕಡೆಯವರೆಗೆ ರುಣಿಗಳಾಗಿದ್ದರೆ ಅಷ್ಟೆ ಸಾಕು. ಎಂದು ಹೇಳಿ ಕಳುಹಿಸಿದನು.

ಎರಡು ಕಡೆಯವರು ಶಿವಾಜಿಯನ್ನು ಬಿಟ್ಟುಕೊಡಲು ಒಪ್ಪಲಿಲ್ಲ. ಹಬ್ಬ ಪೂರೈಸುವವರಿಗೂ ಪುರಂಧರಗಢದಲ್ಲಿಯೇ ಇರಬೇಕೆಂದು ನಿರ್ಬಂಧ ಪಡಿಸಿದರು.

ಶಿವಾಜಿಯು ಒಪ್ಪಿಕೊಂಡನು.

ಮಾತೂಶ್ರೀ ಜೀಜಾಬಾಯಿಯವರಿಗೆ ಪತ್ರ ಬರೆದು ಕಳುಹಿಸಿದನು. ಮನೆಯಲ್ಲಿ ಹಬ್ಬ ನಡೆಯಲಿ ಪುರಂಧರದಲ್ಲಿ ನವಾಬರ ಮಕ್ಕಳು ನನ್ನ ಮೇಲೆ ಬಹಳ ಪ್ರೀತಿ ವಿಶ್ವಾಸಗಳನಿಟ್ಟಿದ್ದಾರೆ, ಹಬ್ಬಕ್ಕೆ ಇಲ್ಲಿಯೇ ಇರಬೇಕೆಂದು ನಿರ್ಬಂಧಪಡಿಸುತ್ತಾರೆ. ನನಗೆ ಇಲ್ಲಿಯೇ ಹಬ್ಬ ನೆರೆ ವೇರಿಸಲು ಅಪ್ಪಣೆ ಕೊಡಿ, ಎಂದು ಪತ್ರ ಬರೆದು ಕಳುಹಿಸಿದನು. ದಾದಾಜೀ ಕೊಂಡದೇವನಿಗೂ ಯಥೋಚಿತ ಪತ್ರ ಬರೆದನು. ತನ್ನ ಜೊತೆಗಾರರಾದ ತರುಣ ಮುಖಂಡರಿಗೂ ಪುರಂಧರಕ್ಕೆ ಹಬ್ಬಕ್ಕೆ ಬರಬೇಕೆಂದು ಅನುಚರರೊಡನೆ ಹೇಳಿಕಳುಹಿಸಿದನು.

ಕೊಂಡದೇವನು ಮಾತೂಶ್ರೀ ಜೀಜಾಬಾಯಿಯೊಡನೆ ನೊಂದು ಕೊಂಡು "ಶಿವಾಜಿ ಇನ್ನೂ ತರುಣ ದೊಡ್ಡ ವ್ಯವಹಾರಕ್ಕೆ ಕೈಹಾಕುತ್ತಿದ್ದಾನೆ. ಇದರಿಂದ ನಮ್ಮ ನೆರೆಯವರಾದ ಪುರಂಧರ ನವಾಬರ ಮಕ್ಕಳಿಗೂ ನಮಗೂ ವಿರೋಧಬರುತ್ತದೆ ಹಾಳು ತುರುಕರ ಸಹವಾಸ, ಅವರವರ ದಾಯಾದಿ ಮತ್ಸರ. ಯಾರ ಕೈ ಮೇಲಾಗುತ್ತೋ ಅವರು ಮತ್ತೊಬ್ಬರ ತಲೆ ಕಡಿದು ಹಾಕುತ್ತಾರೆ. ಬಿಜಾಪುರಕ್ಕೆ ಸುಳ್ಳು, ನಿಜ ಎಲ್ಲಾ ಬೆರೆತು ಕಟ್ಟುಕಥೆ ಹೋಗುತ್ತದೆ. ಇದೆಲ್ಲಾ ಶಿವಾಜಿಯ ತಲೆಗೆ ಬರುತ್ತದೆ. ಶಿವಾಜಿಯು ಹೇಳಿದ ಮಾತು ಕೇಳುವುದಿಲ್ಲ. ಅವನಿಗೆ ಅಪಾಯ ತಟ್ಟಿದರೆ ಈ ವೃದ್ಧಾಪ್ಯ ದಲ್ಲಿ ನನಗೆ ಪ್ರಾಣಸಂಕಟ. ಏನೋ ಮನಸ್ಸು ಅಳುಕುತ್ತಲೇ ಇದೆ" ಎಂದು ಹೇಳಿಕೊಂಡನು.

ಶಿವಾಜಿಯ ಸಂಗಡಿಗರಾದ ತರುಣ ದಳಪತಿಗಳು ಪುರಂಧರದಲ್ಲಿ ಉತ್ಸಾಹದಿಂದ ಜಮಾಯಿಸಿದರು. ಪ್ರತಿದಿನವೂ ನವಾಬರ ಮಕ್ಕಳ ಕಡೆ ಯವರು ಬಂದು ಅಂತರಂಗ ಸಮಾಲೋಚನೆಮಾಡಿ ಹೋಗುತ್ತಿದ್ದರು. ರಾಜೀ ಪ್ರಸ್ತಾಪವೂ ಹೋಗಿಯೇಬಿಟ್ಟಿತು. ಶಿವಾಜಿಯನ್ನು ತಮ್ಮ ತಮ್ಮ

ಕಡೆಗೆ ಎಳೆದುಕೊಳ್ಳುವ ಉಪಾಯಗಳು, ಲಂಚರುಷತ್ತುಗಳ ಪ್ರಚೋದನೆ. ಹೀಗೆಯೇ ಪ್ರತಿ ದಿನ ಸಮಾಲೋಚನೆಗಳು ನಡೆಯುತ್ತಿದ್ದವು.

ಮಳೆಗಾಲವು ಮುಗಿದಿತ್ತು. ಮಳೆ ಬಿದ್ದು ಊರಿನ ಮನೆಗಳೆಲ್ಲಾ ವರ್ಷೇ ವರ್ಷೇ ರಿಪೇರಿಯಾಗುವ ಪದ್ಧತಿ. ಕಾರೇಗಾರರು ಬಂದು ಮಣ್ಣಿನ ಕೆಲಸ ಗಾರೆ ಕೆಲಸ ಹುಲ್ಲಿನ ಕೆಲಸಗಳನ್ನು ಮಾಡುತ್ತಾರೆ. ಹಳ್ಳಿಯ ಜನರಿಗೆ ಇದೊಂದು ದೊಡ್ಡ ವಾರ್ಷಿಕ ಸಂಪಾದನೆ. ಕಾರೆಗಾರರು ಕೂಲಿಗಾರರು ತಂಡ ತಂಡವಾಗಿ ಬರಲಾರಂಭಿಸಿದರು. ಪುರಂಧರಘಡದಲ್ಲಿ ಎಲ್ಲ ವರ್ಷಗಳಿಗಿಂತ ಈ ವರ್ಷ ಹೆಚ್ಚು ಕೆಲಸ. ದೀಪಾವಳಿ ಉತ್ಸವ ಕೆಲಸಗಳು. ಈ ಬಾರಿ ಉತ್ಸವ ಬಹಳ ಭರ್ಜರಿಯಾಗಿ ನಡೆಯುತ್ತದೆ. ಕೂಲಿಗಾರರು ಮನೆಗಳಿಗೆ ಹೊದಿಸಲು ದೊಡ್ಡ ದೊಡ್ಡ ಹುಲ್ಲಿನ ಹೊರೆಗಳನ್ನು ಹೊತ್ತುಕೊಂಡು ಬರುತ್ತಿದ್ದರು. ಕೋಟೆಯ ಕಾವಲುಗಾರರಿಗೂ ಹಬ್ಬದ ಸಮಯ. ಹುಲ್ಲು ಹೊರೆಯ ಕೂಲಿಗಳೆಲ್ಲಾ ಚಿಲ್ಲರೆ ದುಡ್ಡು ಕೊಟ್ಟು ಕಾವಲುಗಾರರ ಪ್ರಸಾದ ಸಂಪಾದಿಸುತ್ತಿದ್ದರು ಅದು ಮಾಮೂಲಿ. ಕಾವಲುಗಾರರು ಒಳಗೆ ಬಿಡದಿದ್ದರೆ ಕಾರೇಗಾರರು ಕೂಲಿಗಾರರಿಗೆ ಪ್ರವೇಶವಿಲ್ಲ. ಅವರಿಗೂ ದುಡ್ಡು ಸಿಕ್ಕುವ ಸಂಭ್ರಮ

ಹುಲ್ಲುಹೊರೆಗಳಲ್ಲಿ ಶಸ್ತ್ರಾಸ್ತ್ರಗಳು ಅಡಗಿಕೊಂಡಿರುತ್ತಿದ್ದವು. ಕಾರೇಗಾರರು ಮನೆಗೆಲಸ–ಊರಿನ ಅಚ್ಚುಗಟ್ಟಿನ ಕೆಲಸ, ಸುಣ್ಣಬಣ್ಣದ ಕೆಲಸ ಮಾಡುತ್ತಿದ್ದರೂ ಅವರೆಲ್ಲರೂ ಶಿವಾಜಿಯ ಸೈನಿಕರು. ಮಾವಳರು. ಹಬ್ಬದ ಹೊತ್ತಿಗೆ ಈ ಸೈನ್ಯವು ಪುರಂಧರ ಕೋಟೆಯಲ್ಲಿ ಕಿಕ್ಕಿರಿದು ಹೋಗಿದ್ದಿತು. ಶಸ್ತ್ರಾಸ್ತ್ರಗಳನ್ನೆಲ್ಲಾ ಗೋಪ್ಯವಾಗಿಟ್ಟುಕೊಂಡಿದ್ದರು.

ಹಬ್ಬವು ವೈಭವದಿಂದ ಆರಂಭವಾಯಿತು. ದೀಪಾವಳಿಯಲ್ಲಿ ಹಿಂದು ಮುಸ್ಲಿಂ ಭೇದವಿಲ್ಲ. ಎಲ್ಲರಿಗೂ ಸಮಾನವಾದ ಹಬ್ಬ. ಹಿಂದುಗಳು ದೀಪಗಳನ್ನು ಹಚ್ಚುತ್ತಿದ್ದರು ಮುಸಲ್ಮಾನರೂ ದೀಪಗಳನ್ನು ಹಚ್ಚುತ್ತಿದ್ದರು. ಬಾಣಬಿರುಸುಗಳನ್ನು ತಯಾರು ಮಾಡಿ ಹಾರಿಸುತ್ತಿದ್ದರು. ಒಬ್ಬರ ಮನೆಗೊಬ್ಬರು ಮಿಠಾಯಿಗಳನ್ನು ಕೊಡುತ್ತಿದ್ದರು ಒಂದು ವಿಧವಾಗಿ ಅದು ದೀಪಗಳ ಹಬ್ಬ. ಬಾಣ ಬಿರುಸುಗಳ ಹಬ್ಬ. ಮಿಠಾಯಿ ಹಬ್ಬ ಎನ್ನಬಹುದು ನವಾಬರ ಮಕ್ಕಳು ಅರಮನೆಯಲ್ಲಿ ವೈಭವವನ್ನು ಪ್ರದರ್ಶನ

ಮಾಡಲು ಪೈಪೋಟಿಯಿಂದ ಹಬ್ಬವನ್ನು ನಡೆಸುತ್ತಿದ್ದರು. ಮಿಠಾಯಿಗಳ ಸುರಿಮಳೆಯೇ ಆಗಿದ್ದಿತು. ಮೂರು ದಿವಸಗಳ ಹಬ್ಬ. ಸಂಧ್ಯಾಕಾಲ ವಾಗುತ್ತಲೇ ಎಲ್ಲೆಲ್ಲಿಯೂ ಮದ್ಯ ಸಾರಾಯಿಗಳ ಪಾನಕ ಪೂಜೆ ನಡೆಯು ತ್ತಿದ್ದಿತು. ಎಲ್ಲರಿಗೂ ಯಥೇಚ್ಛ. ಬಿಟ್ಟೀ ಕುಡಿತ–ಕುಣಿತ ಗಾನಗಳು, ತಮಟೆ ಗಳು, ರಾತ್ರಿಯೆಲ್ಲಾ ಹಗಲಿನಂತೆಯೇ ಜಗಜಗಿಸುತ್ತಿದ್ದಿತು. ನವಾಬರ ಮನೆಗಳಲ್ಲಿ ಗಾನ ನರ್ತನಗಳು ಬೆಳಗಿನವರೆಗೂ ನಡೆಯುತ್ತಿದ್ದುವು. ಹಬ್ಬದ ಸಂತೋಷದಲ್ಲಿ ಎಲ್ಲರೂ ಮುಳುಗಿದ್ದರು. ರಷೀದನೂ ಮಸೂದನೂ ಆ ದಿನ ಹಬ್ಬವನ್ನು ಅಣ್ಣನ ಮನೆಯಲ್ಲಿಯೇ ನಡೆಸಿದರು. ಅಲ್ಲಿಯೇ ಔತಣದ ಭೋಜನ. ರಾತ್ರಿಯೆಲ್ಲಾ ಗಾನ–ನರ್ತನಗಳು, ಪ್ರಮುಖರೆಲ್ಲರೂ ಹಬ್ಬಕ್ಕೆ ಬಂದು ಶಿವಾಜಿಯ ಪ್ರೇರಣೆಯಿಂದ ಅಣ್ಣ–ತಮ್ಮಂದಿರು ಮಿಳಿತವಾಗಿ ಹೋದರು, ಎಂದು ಸಂತೋಷಪಟ್ಟುಕೊಂಡರು.

ಅಬ್ದುಲ್ಲಾಖಾನನು ಕುಡಿತದಲ್ಲಿ ನಿಸ್ಸೀಮ. ಹೆಣ್ಣುಗಳ ಹಂಬಲ. ತಮ್ಮಂದಿರು ಪುರಂಧರಗಢದ ಉತ್ತಮ ವಾರಾಂಗನೆಯರನ್ನೆಲ್ಲಾ ತಾವೇ ಕರೆತಂದು ಅಣ್ಣನಿಗೆ ಕಾಣಿಕೆ ಮಾಡಿದರು. ಒಂದು ಕಡೆ ತಮ್ಮಂದಿರು ವಶವರ್ತಿಗಳಾದರೆಂಬ ಸಂತೋಷ. ಮತ್ತೊಂದು ಕಡೆ ಉತ್ಸವದ ಸಂಭ್ರಮ ಗಳು. ಮದ್ಯದ ಅಮಲು. ಸುತ್ತುಗಟ್ಟಿದ ವಾರಾಂಗನೆಯರ ಸಂಭ್ರಮ. ಈ ಸಂತೋಷದಲ್ಲಿ ಖಾನನು ಮೈಮರೆತನು. ತಮ್ಮಂದಿರಿಗೆ ನನ್ನ ಔದಾರ್ಯವನ್ನು ನೀವರಿಯಿರಿ ನಾನು ಹಠಕ್ಕೆ ಹೋರಾಡಿದೆ. ನೀವು ಸಂಪೂರ್ಣ ವಶವರ್ತಿಗಳಾಗಿದ್ದೀರಿ ಇನ್ನು ಮೇಲೆ ಈ ರಾಜ್ಯವೇ ನಿಮ್ಮದು ಎಂದು ಹೇಳಿ ಮದ್ಯ ಪಾತ್ರೆಯಮೇಲೆ ಆಣೆಯಿಟ್ಟು ಪಾನ ಮಾಡಿದನು. ಸಮಯವನ್ನು ನೋಡಿ ವಾರಾಂಗನೆಯರು ಅಬ್ದುಲ್ಲಾಖಾನನಿಗೆ ಚಿನ್ನದ ಸರ ಪಣಿಗಳನ್ನು ತೊಡಿಸಿ ಬಂಧಿಸಿದರು. ಅವರೇ ಅವನನ್ನು ಶಿವಾಜಿಯಿದ್ದ ಅರಮನೆಗೆ ಹೊತ್ತುಕೊಂಡು ಹೋದರು ತಮ್ಮಂದಿರಿಬ್ಬರೂ ಉಸ್ತುವಾರಿ ಯಿಂದ ಹಿಂದೆ ಹೋದರು. ಅವರು ಪಾನಮಾಡಿದ್ದರು. ಆದರೆ ಮೈಮರೆ ತಿರಲಿಲ್ಲ. ಖಾನನನ್ನು ಶಿವಾಜಿಯ ಮುಂದೆ ನಿಲ್ಲಿಸಿದರು.

ಖಾನನು ತೊದಲು ನುಡಿಯಿಂದ "ಶಿವಾಜಿ ಮಹಾರಾಜರೇ ತಮ್ಮ ಅನುಗ್ರಹದಿಂದ ನಮ್ಮ ರಾಜಿಯಾಯಿತು. ನಾವು ಅಣ್ಣ ತಮ್ಮಂದಿರು

ಒಂದಾಗಿ ಬಿಟ್ಟಿವು. ಈ ರಾಜಿಗೆ ಇವರೆಲ್ಲರೂ ಸಾಕ್ಷಿಗಳು ಎಂದು ತನ್ನ ಸುತ್ತಲೂ ಸುತ್ತುಗಟ್ಟಿದ್ದ ವಾರಾಂಗನೆಯುವರನ್ನು ತೋರಿಸಿದನು ನೀವು ನಿಮ್ಮ ಊರಿಗೆ ಹೊರಟುಹೋಗಿ" ಎಂದು ಹೇಳಿ ಆ ವಾರಾಂಗನೆಯರೊಂದಿಗೆ ಹಿಂತಿರುಗಿದನು.

ನೇರವಾಗಿ ಅರಮನೆಯ ನೆಲಮಾಲಿಗೆಯ ಕಾರಾಗೃಹದಲ್ಲಿ ಅವನನ್ನು ಬಂಧಿಸಿದರು. ಖಾನನಿಗೆ ಎಲ್ಲಿದ್ದೇನೆಂಬ ಅರಿವಾಗಲಿಲ್ಲ. ಮತ್ತೆ ಪಾನಪಾತ್ರೆಗಳಿಂದ ಮದ್ಯವನ್ನು ಸುರಿದರು. ಅವನು ನೆಲದಮೇಲೆ ಪ್ರಶಾಂತ ನಾಗಿ ಮಲಗಿದನು. ಬಾಗಿಲು ಭದ್ರಮಾಡಿ ಬೀಗಗಳನ್ನು ಹಾಕಿ ಬಲವಾದ ಕಾವಲಿಟ್ಟು ಎಲ್ಲರೂ ಹೊರಟುಹೋದರು. ರಷೀದನೂ ಮಸೂದನೂ ಶಿವಾಜಿಯ ಸಮೀಪಕ್ಕೆ ಬಂದು ಹಬ್ಬದ ವೈಭವದಲ್ಲಿ ನಮ್ಮ ಕಾರ್ಯ ಜಯ ವಾಯಿತು. ಇದು ತಮ್ಮ ಅನುಗ್ರಹ. ಅರಮನೆಯಲ್ಲಿ ಖಜಾನೆಯಲ್ಲಿ ಕಛೇರಿಗಳಲ್ಲಿ ಕೋಟೆಕೊತ್ತಲುಗಳಲ್ಲಿ ನಮ್ಮ ಕಡೆಯ ಸಶಸ್ತ್ರ ಭಟರು ಕಾವಲಿದ್ದಾರೆ, ಎಂದು ಹರ್ಷದಿಂದ ನುಡಿದರು.

ಶಿವಾಜಿಯು ಅವರನ್ನು ಸಂತೈಸಿ ಮನೆಗಳಿಗೆ ಕಳುಹಿಸಿದನು

ಬೆಳಕು ಹರಿಯುವವರೆಗೆ ಕೋಟೆಯಲ್ಲಿ ಉತ್ಸವಗಳು ನಡೆಯುತ್ತಲೇ ಇದ್ದುವು. ಬೆಳಕು ಹರಿಯಿತು. ಖಾನನ ಬಂಧನವು ಗೋಪ್ಯವಾಗಿಯೇ ಇದ್ದಿತು. ರಷೀದನೂ ಮಸೂದನೂ ಶಿವಾಜಿಯನ್ನೂ ಸ್ನಾನಕ್ಕೆ ಕರೆದುಕೊಂಡು ಹೋಗುವ ಏರ್ಪಾಡು ಮಾಡಿದ್ದರು ಅವರುಗಳು ಕೋಟೆಯಿಂದ ದೂರ ದಲ್ಲಿರುವ ಒಂದು ಉದ್ಯಾನಕ್ಕೆ ಹೋದರು ನವಾಬನು ಆ ಉದ್ಯಾನಕ್ಕೆ ಬಹಳ ಖರ್ಚುಮಾಡಿ ರಮ್ಯವಾಗಿ ನಿರ್ಮಿಸಿದ್ದನು. ಪುಷ್ಕರಿಣಿ, ಅದರ ಪಾವಟಿಗೆಗಳು, ಮೇಲುಗಡೆ ಸೊಗಸಾದ ಮಂಟಪ ಲತಾಗೃಹಗಳೂ ರಮಣೀಯವಾಗಿ ನಿರ್ಮಿಸಲ್ಪಟ್ಟಿದ್ದುವು. ನವಾಬನು ಬಿಜಾಪುರದ ಶ್ರೀಮಂತ ಪುತ್ರಿ ದುರೇಷಳನ್ನು ಮದುವೆಯಾದ ಮೇಲೆ ಅವಳಿಗಾಗಿ ನಿರ್ಮಾಣ ಮಾಡಿಸಿದ್ದ ಉದ್ಯಾನ, ಪುಷ್ಕರಿಣಿಗಳಿವು. ಬಿಜಾಪುರದಲ್ಲಿ ಇಂತಹ ಪುಷ್ಕರಿಣಿ ಗಳು ಎಷ್ಟೋ ಇದ್ದುವು. ಒಂದಕ್ಕಿಂತ ಒಂದು ಮನೋಹರವಾಗಿ ನಂದನ ವನದಂತೆ ಭಾಸವಾಗುತ್ತಿದ್ದುವು. ಬಿಜಾಪುರದ ಶ್ರೀಮಂತರೂ, ರಾಣಿವಾಸಿ ಗಳೂ ಬೇಸಿಗೆಯ ಕಾಲದಲ್ಲಿ ಆ ತಟಾಕಗಳಲ್ಲಿ ಪ್ರಾತಃಕಾಲದಿಂದ ಸಂಜೆಯ

ವರಿಗೆ ಜಲಕ್ರೀಡೆಗಳನ್ನಾಡುತ್ತಿದ್ದರು. ಬಿಜಾಪುರದ ನಾಗರೀಕ ಜೀವನದ ವೈಭವಗಳಲ್ಲಿ ಅದೊಂದು ಮುಖ್ಯವಾದಭಾಗ. ಅದನ್ನು ಅನುಸರಿಸಿ ಪುರಂಧರದ ನವಾಬನು ಈ ಉದ್ಯಾನ ಪುಷ್ಕರಿಣಿಗಳನ್ನು ನಿರ್ಮಾಣ ಮಾಡಿಸಿದ್ದನು. ದುರೀಷಾ ಎಷ್ಟೋ ಬಾರಿ ಸಂತೋಷದಿಂದ "ಇಂಥಾ ರಮ್ಯ ಉದ್ಯಾನವು ಬಿಜಾಪುರದಲ್ಲಿ ಇಲ್ಲ" ಎಂದು ಹೇಳಿದ್ದಳು. ಉದ್ಯಾನದ ಆ ತಟಾಕದಲ್ಲಿ ಶಿವಾಜಿಯೂ ಅವನ ಸಂಗಡಿಗರೂ ನವಾಬರ ಚಿಕ್ಕ ಮಕ್ಕಳೂ ಬಹಳ ಹೊತ್ತು ಈಜಾಡುತ್ತಿದ್ದರು. ಎಲ್ಲರೂ ಸಮವಯಸ್ಕರು. ಅವರ ತೃಪ್ತಿಗೆ ಪಾರವೇ ಇಲ್ಲ.

ಹೊತ್ತು ಕಳೆದುಕೊಂಡುದನ್ನು ಯಾರೂ ಕಂಡುಕೊಳ್ಳಲಿಲ್ಲ. ಎಲ್ಲರೂ ಸಂತೋಷದಿಂದ ಕೋಟೆಗಭಿಮುಖವಾಗಿ ಬರುತ್ತಿದ್ದರು. ಕೋಟೆಯೂ ಸಮೀಪಿಸಿತು. ನವಾಬನ ಮಕ್ಕಳು ತಲೆ ಎತ್ತಿನೋಡಿದರು. ಹಾರಾಡುತ್ತಿದ್ದ ಅರ್ಧಚಂದ್ರ ಧ್ವಜವು ಕಾಣುತ್ತಿರಲಿಲ್ಲ. ಅದಕ್ಕೆ ಬದಲಾಗಿ ಹಿಂದುಗಳ ಧ್ವಜವು ಮೆರೆಯುತ್ತಿದ್ದಿತು. ಹಿಂದೂ ಸೈನಿಕರೂ ಸೇನಾಧಿಪತಿಗಳೂ ಸಶಸ್ತ್ರರಾಗಿ ಕೋಟೆಯನ್ನು ಕಾಯುತ್ತಿದ್ದರು. ನವಾಬನ ಮಕ್ಕಳು ಚಕಿತರಾದರು. ಭಯಭೀತರಾದರು. ಶಿವಾಜಿಯ ಕಡೆ ತಿರುಗಿ "ರಾಜಾ. ನೀನೆಂತಹ ದ್ರೋಹ ಮಾಡಿದೆ. ವಿಶ್ವಾಸದಿಂದ ನಂಬಿದವರಿಗೆ ದ್ರೋಹಮಾಡಬಹುದೇ ? ದೇವರಿಲ್ಲವೆ ? ಧರ್ಮವಿಲ್ಲವೇ ?" ಎಂದು ಆರ್ತರಾಗಿ ಗುಡುಗುಡಿಸಿದರು.

ಶಿವಾಜಿಯು ನಗುನಗುತ್ತಾ "ದೇವರು ಧರ್ಮ ಇವುಗಳು ನಿಮ್ಮ ಕೈಗೊಂಬೆಯಲ್ಲ. ನಿನ್ನೆಯ ರಾತ್ರಿ ನಿಮ್ಮಣ್ಣ ಖಾನನಿಗೆ ನೀವು ಮಾಡಿದ ಮರ್ಯಾದೆಯನ್ನು ಈಗ ನೀವು ಅನುಭವಿಸಬೇಕು " ಎಂದು ಹೇಳಿ ನಕ್ಕನು.

ಮತ್ತೊಮ್ಮೆ ಅವರ ಕಡೆ ತಿರುಗಿ "ನವಾಬಕುಮಾರರೇ. ನಿಮ್ಮ ಜಗಳ ಬಗೆಹರಿಯುವುದಿಲ್ಲ. ಅಣ್ಣ ತಮ್ಮಂದಿರು ಹೋರಾಡಿ ಎಲ್ಲರೂ ಸಾಯುತ್ತಿದ್ದೀರಿ. ಈ ಪುರಂಧರಗಡವನ್ನು ಸ್ಮಶಾನವಾಗಿ ಮಾಡುತ್ತಿದ್ದೀರಿ. ಮೊಗಲ್ ಫೌಜುದಾರರು ಬಂದು ಕೋಟೆಯನ್ನು ನುಂಗಿಹಾಕುತ್ತಿದ್ದರು. ನಿಮ್ಮನ್ನು ತೋಪಿನ ಬಾಯಿಗೆ ಕಟ್ಟಿಸುತ್ತಿದ್ದರು. ನೀವು ಸಮರ್ಥರಲ್ಲ. ನಾನು ಮರ್ಯಾದೆಯಿಂದ ನಿಮ್ಮನ್ನು ಕಾಪಾಡಬಲ್ಲೆ. ಕೋಟೆಯಲ್ಲಿ ಒಂದು ನೊಣವೂ ನಿಮ್ಮ ಕಡೆಗಿಲ್ಲ. ಎಲ್ಲವೂ ನಮ್ಮ ಕೈವಶವಾಗಿದೆ. ಮರ್ಯಾದೆಯಿಂದ ಮನೆಗಳಿಗೆ ಸೇರಿಕೊಳ್ಳಿರಿ. ಸಭ್ಯಗೃಹಸ್ಥರಂತೆ ಬಾಳಿರಿ." ಎಂದು ಹೇಳಿಕಳಿಸಿದನು.

ಶಿವಾಜಿಯು ಅರಮನೆಗೆ ಬಂದು ಸೇರಿದನು. ಖಜಾನೆ, ಶಸ್ತ್ರಾಗಾರ, ಅನರ್ಘ್ಯವಸ್ತ್ರಾಭರಣಗಳು ಎಲ್ಲವೂ ಶಿವಾಜಿಯ ಕೈವಶವಾದುವು. ಭಂಡಾರ ದಲ್ಲಿ ಇಪ್ಪತ್ತು ಲಕ್ಷ ಚಿನ್ನದ ವರಹಗಳಿದ್ದುವು. ಶಿವಾಜಿಯು ತನ್ನ ಸೈನಿಕರಿಗೂ ಸೇನಾಧಿಪತಿಗಳಿಗೂ ವಸ್ತ್ರಭೂಷಣಗಳನ್ನು ಕೊಟ್ಟನು. ಚಿನ್ನದ ವರಹ ಗಳನ್ನು ಕೈತುಂಬಾ ಉದಾರವಾಗಿ ಕೊಟ್ಟನು ನವಾಬಕುಮಾರರು ಮೂವರನ್ನು ತನ್ನ ದರಬಾರಿಗೆ ಕರೆಸಿದನು. ಅವರಿಗೆ ಆ ರಾಜ್ಯದ ಹೊರಗೆ ಮೂರು ದೊಡ್ಡ ಜಹಗೀರುಗಳು ಕೊಡಲ್ಪಡುತ್ತವೆ. ಅವರವರ ಮನೆಗಳಲ್ಲಿ ರುವ ಧನಕನಕಗಳನ್ನು ಅವರೇ ತೆಗೆದುಕೊಂಡು ಹೋಗಬಹುದು. ಆ ಜಹ ಗೀರಿಗಳಲ್ಲಿ ಸುರಕ್ಷಿತವಾಗಿ ಸುಖವಾಗಿರಬಹುದು ಎಂದು ಅಪ್ಪಣೆ ಮಾಡಿದನು

ಮೂವರೂ ತಲೆಬಾಗಿ ಆ ಪುರಸ್ಕಾರವನ್ನು ಅಂಗೀಕರಿಸಿದರು ಸರಿಯಾದ ಸೈನ್ಯದ ಬೆಂಗಾವಲಿನೊಡನೆ ಅವರವರ ಜನಾನಾ, ಖಜಾನೆಗಳನ್ನು ಆಯಾ ಜಹಗೀರುಗಳಿಗೆ ಕಳುಹಿಸಿಕೊಟ್ಟನು.

ಪುರಂಧರಗಢದಿಂದ ಶಿವಾಜಿಯು ಬುದ್ಧಿವಂತರಾದ ತನ್ನ ಆಪ್ತ ರಾಯ ಭಾರಿಗಳನ್ನು ಬಿಜಾಪುರಕ್ಕೆ ಕಳುಹಿಸಿ ಕೊಟ್ಟನು. ಸುಲ್ತಾನರಿಗೆ ಶಿವಾಜಿಯು ಬರೆದುಕೊಟ್ಟ ವಿಜ್ಞಾಪನಾಪತ್ರಿಕೆಯನ್ನು ಆ ರಾಯಭಾರಿಗಳು ಬಿಜಾಪುರಕ್ಕೆ ತೆಗೆದುಕೊಂಡುಹೋಗಿ ಸುಲ್ತಾನರಿಗೆ ಒಪ್ಪಿಸಿದರು

"ಷಹಾ‌ಷಾ, ಆದಿಲ್‌ಷಾಹೀ ಸುಲ್ತಾನರವರ ಹುಜೂರಿಗೆ

"ಪುರಂಧರಗಢದ ನವಾಬನು ಬಿಜಾಪುರದ ಶ್ರೀಮಂತ ಫಿರೋಜ್‌ಷಹಾ ರವರಪುತ್ರಿ ದುರೇಷಾರಾಣಿಯವರನ್ನು ಕೊಂದು ಆತ್ಮಹತ್ಯೆ ಮಾಡಿಕೊಂಡಿದ್ದು ಹುಜೂರಿಗೆ ವರದಿಯಾಗಿರಬಹುದು.

"ಪುರಂಧರಕೋಟೆಯಲ್ಲಿ ಮೂವರು ಸೋದರರೂ ಗಾದಿಗಾಗಿ ಹೋರಾಡಿಕೊಂಡು ರಾಜಧಾನಿಗೆ ಅಹವಾಲು ತಂದಿದ್ದರು. ಏನೂ ತೀರ್ಮಾನ ವಾಗದೇ ವಿಮುಖರಾಗಿಪುರಂಧರಗಢಕ್ಕೆ ಬಂದರು. ಒಬ್ಬರ ತಲೆಯನ್ನು ಮತ್ತೊ ಬ್ಬರು ಕಡಿದುಹಾಕುವ ವಿದ್ವೇಷದಿಂದ ಪ್ರಕೋಪಸ್ಥಿತಿಯು ಪ್ರಾಪ್ತವಾಯಿತು. ಆಪ್ತೇಷ್ಟರೂ ಸಹೋದರರೂ ನನ್ನನ್ನು ಮಧ್ಯಸ್ತಿಕೆಗೆ ಕೋರಿದರು. ಪಂಚಾ ಯಿತಿ ಫಲಿಸಲಿಲ್ಲ. ಆಪ್ತೇಷ್ಟರೂ, ಪರಂಪರೆಯಿಂದ ಈ ರಾಜ್ಯದಲ್ಲಿ ಸೇವೆ ಮಾಡುತ್ತಿರುವ ಅಧಿಕಾರಿಗಳೂ, ನವಾಬನ ಕುಮಾರರೂ ಸೇರಿ ಕೋಟೆಯನ್ನು

ನನಗೆ ಒಪ್ಪಿಸಿದ್ದಾರೆ. ಆ ಮೂವರೂ ತಮ್ಮ ತಮ್ಮ ಜಹಗೀರುಗಳಿಗೆ ಹೊರಟುಹೋಗಿದ್ದಾರೆ. ಈ ಕೋಟೆ, ಈ ಅರಮನೆ, ಈ ಬರಿದಾದ ಭಂಡಾರ ಇಷ್ಟನ್ನೂ ನನ್ನ ವಶಕ್ಕೆ ಬಿಟ್ಟು ಹೋಗಿದ್ದಾರೆ. ನವಾಬರು ವರ್ಷಕ್ಕೆ ಒಂದು ಲಕ್ಷ ಹೊನ್ನು ಬಿಜಾಪುರದ ಸುಲ್ತಾನರ ಭಂಡಾರಕ್ಕೆ ಒಪ್ಪಿಸುತ್ತಿದ್ದರು. ನಾನು ಇನ್ನು ಮುಂದೆ ವರ್ಷಕ್ಕೆ ಎರಡು ಲಕ್ಷ ಹೊನ್ನುಗಳನ್ನು ಕಾಣಿಕೆ ಮಾಡುತ್ತೇನೆ ಸುಲ್ತಾನರ ಸೇವಕನಾಗಿ ಈ ಗಡಿ ಪ್ರದೇಶವನ್ನು ರಕ್ಷಣೆಮಾಡುತ್ತೇನೆ. ಹುಜೂರಿಗೆ ಹೇಗೆ ಚಿತ್ತ ಬರುತ್ತದೆಯೋ ಹಾಗೆ ಮಾಡಿಸಬಹುದು. ನವಾಬರ ಮಕ್ಕಳಲ್ಲಿ ಯಾರಿಗಾದರೂ ರಾಜ್ಯ ಕೋಟೆಗಳನ್ನು ವಹಿಸಬಹುದು. ಅದು ವರಗೆ ಈ ರಕ್ಷಣೆಯ ಭಾರವು ತಮ್ಮ ಸೇವಕನದಾಗಿರುತ್ತದೆ."

ಶಿವಾಜಿಯ ಪತ್ರದ ಒಕ್ಕಣೆಯು ಈ ಪರಿಯಾಗಿದ್ದಿತು. ಸುಲ್ತಾನರಿಗೆ ಸುಲಾವಣೆಯಾಯಿತು. ಅಧಿಕಾರಿಗಳಿಗೆ ರಾಯಭಾರಿಗಳು ಸುವರ್ಣ ಮುದ್ರೆಗಳನ್ನು ಧಾರೆಯೆರೆದಿದ್ದರು. ನವಾಬರ ಕಡೆ ವಾದಿಸುವವರೇ ಇಲ್ಲ. ಮಹಾರಾಣಿ ಬಾರಿಷಾ ಬೇಗಮಳು ಪುರಂಧರದ ಮೇಲೆ ಕೋಪಗೊಂಡಿದ್ದಳು. ಅವಳ ಪ್ರೇಮಪಾತ್ರಳಾದ ಬಿಜಾಪುರದ ಸ್ತ್ರೀರತ್ನ ದುರೇಷಳ ಮೇಲೆ ಅಪವಾದ ಹೊರಿಸಿ ಪುರಂಧರ ನವಾಬನು ಕೊಲೆ ಮಾಡಿದ್ದನು. ಆ ಕಲಂಕವು ಬಿಜಾಪುರದ ಶ್ರೀಮಂತ ಕುಲಕ್ಕೆ ತಟ್ಟಿಸಂಘದು. ಎಲ್ಲರೂ ಪುರಂಧರದ ನವಾಬ, ಅವನ ಕುಲವನ್ನೇ ದೂಷಿಸುವರು. ಸುಲ್ತಾನನು ಏನು ಮಾಡುವಂತಿರಲಿಲ್ಲ. ಶಿವಾಜಿಯು ಬಲವಂತನಾಗುತ್ತಿರುವುದು ಅವನಿಗೆ ಸಹನೆಯಿರಲಿಲ್ಲ. ಆದರೂ ಶಿವಾಜಿಯ ಬಿನ್ನಹವನ್ನು ಸವ್ಯಕ್ಕೆ ಒಪ್ಪಿಕೊಂಡನು.

ಆ ರೀತಿಗೆ ಸುಲ್ತಾನರ ಫರ್ಮಗಳು ಹೊರಟವು. ರಾಯಭಾರಿಗಳು ಪುರಂಧರಗಢಕ್ಕೆ ಜಯಶಾಲಿಗಳಾಗಿ ಹಿಂದಿರುಗಿದರು.

ಮೊಗಲ್ ಮತ್ತು ಬಿಜಾಪುರದ ಗಡಿಪ್ರದೇಶದ ಅರ್ಧರಾಜ್ಯವೆಲ್ಲಾ ಶಿವಾಜಿಯ ವಶಕ್ಕೆ ಬಂದಿದ್ದಿತು. ಒಂಭತ್ತು ಭದ್ರವಾದ ಕೋಟೆಗಳೂ ಆ ಕೋಟೆಗಳಲ್ಲಿದ್ದ ಅತುಲೈಶ್ವರ್ಯಭರಿತವಾದ ಭಂಡಾರಗಳೂ ಶಸ್ತ್ರಾಸ್ತ್ರಗಳೂ ಕುದುರೆಗಳೂ ಒಂಟೆಗಳೂ ಶಿವಾಜಿಯ ವಶವಾಗಿದ್ದವು.

೪

ಪುರಂಧರಗಢವು ಶಿವಾಜಿಯ ವಶವಾಗುತ್ತಲೇ ಶಿವಾಜಿಯು ಎಲ್ಲ ರಾಜ್ಯ ವ್ಯವಸ್ಥೆಗಳನ್ನು ಮಾಡಿದ್ದನು. ರಾಜ್ಯವೆಂದುಕೊಳ್ಳುವಂಥಾ ವಿಶಾಲ

ಭೂಭಾಗವು ಈಗಲೇ ಅವನ ಕೈವಶವಾಗಿದ್ದಿತು. ಪುಣೆಯಿಂದ ಶಿವಾಜಿಗೆ ಮಾತೂಶ್ರೀ ಜೀಜಾಬಾಯಿಯವರ ಕರೆ ಬಂದಿತು. ಶಿವಾಜಿಯು ಅವಸರದಿಂದ ಒಂದೇ ದಿನದಲ್ಲಿ ಪುಣೆಗೆ ತಲುಪಿದನು. ಕೊಂಡದೇವನು ರೋಗಗ್ರಸ್ತನಾಗಿ ನರಳುತ್ತಿದ್ದನು. ವೈದ್ಯರು ಬಹು ಪ್ರಯಾಸದಿಂದ ಚಿಕಿತ್ಸೆಮಾಡುತ್ತಿದ್ದರು. ಶಿವಾಜಿಯು ಔಷಧೋಪಚಾರಗಳನ್ನು ಮಾಡಲು ತಾನೇ ನಿಂತು ಕೊಂಡನು. ತನ್ನ ಗುರುವಾದ ಕೊಂಡದೇವನಿಗೆ ಭಕ್ತಿಯಿಂದ ಉಪಚರಿಸುತ್ತಿದ್ದನು. ಶಿವಾಜಿಯ ಮನೆಯಲ್ಲಿ ತಾಯಿ ಜೀಜಾಬಾಯಿ ಮತ್ತು ಶಿವಾಜಿಯ ಪತ್ನಿ ಸಾಯಿಬಾಯಿ ಇಬ್ಬರೇ ಇದ್ದರು. ಅವರು ನಿತ್ಯವೂ ದೇವತಾರಾಧನೆ ಮಾಡುತ್ತಾ ಬಡಬಗ್ಗರಿಗೆ ಅನ್ನದಾನ ಮಾಡುತ್ತಾ ತಪೋವನದಋಷಿಪತ್ನಿಯರ ಜೀವನವನ್ನು ಸಾಗಿಸುತ್ತಿದ್ದರು. ಶಿವಾಜಿಯ ಮನೆಯಲ್ಲಿಯೇ ದಾದಾಜಿ ಕೊಂಡದೇವನಿಗೆ ಔಷಧೋಪಚಾರಗಳೂ ಶುಶ್ರೂಷೆಯೂ ನಡೆಯುತ್ತಿತ್ತು.

ಶಿವಾಜಿಯು ತಾಯಿಯೊಡನೆ “ಅಮ್ಮಾಜೀ. ಪುರಂಧರಗಢವು ನಮ್ಮವಶ ವಾಗಿದೆ. ಸಾವುನೋವುಗಳೇನೂ, ಹೆಚ್ಚಾಗಿಲ್ಲ ಭಗವಂತನ ಅನುಗ್ರಹವೆನ್ನ ಬೇಕು. ತೋರಣ, ಸಿಂಹಗಢ, ಪ್ರತಾಪಗಢ, ಪುರಂಧರಗಢ ಈ ಕೋಟೆಗಳು ಸಂಪೂರ್ಣವಾಗಿ ನಮ್ಮ ವಶವಾಗಿವೆ ಸಹ್ಯಾದ್ರಿಯ ಅರ್ಧ ದುರ್ಗಗಳು ನಮ್ಮ ವಶದಲ್ಲಿವೆ ಇವೆಲ್ಲಾ ಮಹಾರಾಷ್ಟ್ರದ ಕೋಟೆಗಳೇ. ಹಿಂದೆ ಪೂರ್ವಕಾಲದ ರಾಜರು ಕಟ್ಟಿದ ಕೋಟೆಗಳು. ಎಲ್ಲವೂ ತುರುಷ್ಕರಿಂದ ಆಕ್ರಾಂತವಾಗಿದ್ದಿತು ಕಷ್ಟವಿಲ್ಲ, ಯುದ್ಧವಿಲ್ಲ, ವಿಶೇಷ ಸಾವು ನೋವುಗಳಿಲ್ಲ, ಅವೆಲ್ಲವೂ ನಮ್ಮ ವಶವಾಗಿವೆ” ಎಂದು ಸಂತೋಷದಿಂದ ಹೇಳಿದನು.

ಜೀಜಾಬಾಯಿಯು “ಭವಾನಿಯ ಅನುಗ್ರಹವಪ್ಪಾ ಬಾಳಾ. ಹಿಂದೂ ಧರ್ಮದ ರಹಸ್ಯಗಳು ಎರಡಿವೆ. ಯುದ್ಧದ ಮಾತು ಬೇರೆ. ಯುದ್ಧವಿಲ್ಲದ ಸಮಯಗಳಲ್ಲಿ ಅನ್ಯಾಯವಾಗಿ ಮನುಷ್ಯರ ಕೊಲೆಯಾಗಬಾರದು. ಯಾವ ಜಾತಿಯವರಾದರೂ ಸ್ತ್ರೀಯರ ಮೇಲೆ ಅತ್ಯಾಚಾರವಾಗಬಾರದು. ಇದ ಕ್ಕಿಂತಲೂ ಪಾಪವು ಬೇರೊಂದಿಲ್ಲ ” ಎಂದು ಹೇಳಿದಳು

ಶಿವಾಜಿಯು “ಅಮ್ಮಾಜೀ ನಾನೆಂದೂ ಸುಳ್ಳು ಹೇಳಿಲ್ಲ. ಭವಾನಿಯ ಆಣೆಗೂ ಹೇಳುತ್ತೇನೆ. ನಾವಾಗಲೀ ನಮ್ಮ ಸೈನಿಕರಾಗಲೀ ಯಾವ ಹೆಂಗಸಿನ

ಮೇಲೆಯು ಕೈಹಾಕಿಲ್ಲ. ಕೆಟ್ಟ ಕಣ್ಣಿನಿಂದನೋಡಿಲ್ಲ. ಅನಾಥರಾಗಿ ನಮ್ಮ ಕೈಗೆ ಸಿಕ್ಕಿದ ಮುಸಲ್ಮಾನರ ಸ್ತ್ರೀಯರನ್ನು ಕೂಡ ಬಹು ಮರ್ಯಾದೆಯಿಂದ ಅವರ ಬಂಧು ಬಳಗದವರ ಮನೆಗಳಿಗೆ ಸೇರಿಸಿದ್ದೇವೆ ನೋಡು, ಅಮ್ಮಾಜೀ. ತೋರಣ ಕೋಟೆಯು ನಮ್ಮ ವಶವಾಯಿತು ಫೌಜುದಾರನು ಮಳೆ ಚಳಿಗಳಿಗೆ ಹೆದರಿ ಬಿಜಾಪುರದ ಸುಲ್ತಾನರಿಗೂ ತಿಳಿಸದೇ ಬಯಲುಸೀಮೆಗೆ ಹೊರಟು ಹೋದನು ಮಳೆ ಚಳಿಗಳಿಗೆ ಹೆದರುವವರು ಸೈನ್ಯದ ಸಿಪಾಯಿಗಳು, ಫೌಜುದಾರರು ಎಂದರೆ ನಗು ಬರುತ್ತದೆ ದರ್ಬಾರಿನ ಅಪ್ಪಣೆಯಿಲ್ಲದೇ ಕೋಟೆಯನ್ನು ಬಿಟ್ಟು ಹೋದುದು ಸ್ವಾಮಿನಿಷ್ಠೆಯಾದೀತೆ? ಅವರು ಸ್ವಭಾವತಃ ಬಿಟ್ಟು ಹೋದ ಕೋಟೆಯನ್ನು ನಾವು ವಶಮಾಡಿಕೊಂಡೆವು. ಶಸ್ತ್ರಾಸ್ತ್ರಗಳು ಸಿಕ್ಕಿದವು. ಸ್ವರ್ಣ ಭಂಡಾರಗಳು ಸಿಕ್ಕಿದವು. ಮುಸಲ್ಮಾನರಾಗಿದ್ದರೆ ಸಾವಿರಾರು ಜನರನ್ನು ಕೊಲೆಮಾಡುತ್ತಿದ್ದರು. ನಾವು ಆ ಜನರಿಗೆಲ್ಲಾ ತುಂಬಾ ಹಣಕೊಟ್ಟು ಕಳಿಸಿದ್ದೇವೆ. ಸಿಂಹಗಢ, ಪ್ರತಾಪಗಢಗಳು ಅಷ್ಟೇ. ಪುರಂಧರಗಢವು ಸ್ವಲ್ಪ ದೊಡ್ಡ ರಾಜ್ಯ ಗಾದಿಗೆ ಮೂವರು ಅಣ್ಣತಮ್ಮಂದಿರು ಹೋರಾಡುತಿದ್ದರು ಒಬ್ಬರ ತಲೆ ಒಬ್ಬರು ತೆಗೆಯುತ್ತಿದ್ದರು. ಅಥವಾ ಎಲ್ಲರೂ ಸತ್ತು ಹೋಗುತ್ತಿದ್ದರು. ಬಿಜಾಪುರಕ್ಕೆ ಹೋಗಿ ನ್ಯಾಯಕ್ಕೆ ದೂರು ಕೊಟ್ಟರು. ಕೇಳುವವರೇ ಇಲ್ಲ. ಹಾಲ್ ಅಹವಾಲುಗಳೇ ಇಲ್ಲ. ಇದೆಂಥ ರಾಜ್ಯಭಾರ ಸುಲ್ತಾನರದು ಪುರಂಧರಗಢದ ನವಾಬನ ಮಕ್ಕಳನ್ನು ಸಮಾಧಾನ ಪಡಿಸಿದೆ ಅವರಿಗೆ ಜಹಗೀರುಗಳನ್ನು ಕೊಟ್ಟು ಅವರವರ ಐಶ್ವರ್ಯವನ್ನು ಆನೆಗಳ ಮೇಲೆ ಹೇರಿ, ಅವರುಗಳನ್ನು ಮರ್ಯಾದೆಯಿಂದ ಕಳುಹಿಸಿಕೊಟ್ಟೆ. ನಮಗೆ ಅಲ್ಲಿ ಬಹಳ ಹಣ ಸಿಕ್ಕಿತು. ಒಂದಕ್ಕೆರಡು ಪೊಗದಿ ಕೊಡುವುದಾಗಿ ಬರೆದು ಕಳುಹಿಸಿದೆ. ಬಿಜಾಪುರದ ದರ್ಬಾರಿನಿಂದ ಒಪ್ಪಿಗೆ ಕೊಟ್ಟು ಫರ್ಮಾನ್ ಕಳುಹಿಸಿದ್ದಾರೆ. ಈಗ ನಮ್ಮಲ್ಲಿ ದೊಡ್ಡ ಸೈನ್ಯವಿದೆ. ಭಂಡಾರವಿದೆ." ಎಂದು ಹೇಳಿದನು.

ತಾಯಿಯು ಅತ್ಯಂತ ಸಂತೋಷದಿಂದ ಮಗನನ್ನು ಹರಸಿದಳು.

ಕೊಂಡದೇವನ ಖಾಯಿಲೆಯು ದಿನದಿನಕ್ಕೆ ವಿಷಮಿಸುತ್ತಾ ಬಂದಿತು. ಅವನು ತಾನಿನ್ನು ಬದುಕುವುದಿಲ್ಲವೆಂದು ನಿಶ್ಚಯಮಾಡಿಕೊಂಡನು.

ಶಿವಾಜಿಯನ್ನು ಹತ್ತಿರಕ್ಕೆ ಕರೆದು "ಶಿವಾಜಿ. ನಾನು ನಿನ್ನನ್ನು ಬಲು ಕಷ್ಟಪಟ್ಟು ಬೆಳೆಸಿದ್ದೇನೆ. ವಿದ್ಯೆ ಹೇಳಿಕೊಟ್ಟಿದ್ದೇನೆ. ಯುದ್ಧವಿದ್ಯೆಗಳನ್ನು ಕಲಿಸಿಕೊಟ್ಟಿದ್ದೇನೆ. ದೇವರ ಅನುಗ್ರಹ, ನೀನು ಮಹಾತೇಜಸ್ವಿಯಾಗಿರುವೆ. ಅಜಾನುಬಾಹುವಾಗಿರುವೆ. ನಿನ್ನ ಮುಖದಲ್ಲಿ ರಾಜಕಳೆಯಿದೆ. ನೀನು ಬಿಜಾಪುರದ ದರಬಾರಿನಲ್ಲಿಯೋ ಡೆಲ್ಲಿಯ ದರಬಾರಿನಲ್ಲಿಯೋ ಮಹೋನ್ನತ ಪದವಿಗೇರುವ ಅದೃಷ್ಟವಿದೆ. ಆ ವೈಭವವನ್ನು ನನ್ನ ಕಣ್ಣಾರೆ ಕಾಣಬೇಕೆಂಬ ಆಸೆಯಿತ್ತು ಅದಕ್ಕೆ ನನಗೆ ಅದೃಷ್ಟವಿಲ್ಲ. ನಿನ್ನನ್ನು ಚೆನ್ನಾಗಿ ಪರೀಕ್ಷಿಸಿ ನೋಡಿದ್ದೇನೆ ನೀನು ಸತ್ಯವಂತ, ಶೂರ. ಆದರೆ ಮಗು, ನಿನಗೆ ಈ ತುರಷ್ಕರ ಮೇಲೆ ಬಹಳ ದ್ವೇಷವಿದೆ. ತುರಷ್ಕರು ಮಹಾಬಲಿಷ್ಟರು. ನಾನು ಬಿಜಾಪುರ ದರ್ಬಾರನ್ನು ನೋಡಿದ್ದೇನೆ. ಅಬ್ಬಾ. ಅದೊಂದು ಇಂದ್ರಲೋಕ. ಅತುಲೈಶ್ವರ್ಯ ಭೂಮಿ. ತುರ್ಕಿಯರು, ಅರಬ್ಬರು, ಅಬಿಸೀನಿಯನ್ನರು, ಯೂರೋಪಿಯನ್ನರು. ಎಲ್ಲ ದೇಶದವರು ಅವರ ಅಧೀನದಲ್ಲಿ ಇದ್ದಾರೆ. ಭೂಮಂಡಲವೇ ಅವರ ಕೈಯಲ್ಲಿದೆಯೆಂದು ಹೇಳಬಹುದು. ನಾನು ಕಣ್ಣಾರೆ ನೋಡಿದ್ದೇನೆ. ನೀನು ಅತಿ ಚಿಕ್ಕ ವಯಸ್ಸಿನಲ್ಲಿ ಬಿಜಾಪುರವನ್ನು ಕಂಡಿದ್ದೀ. ನಿನಗೆ ಅದೆಲ್ಲಾ ತಿಳಿದುಕೊಳ್ಳುವ ಸಾಮರ್ಥ್ಯವಿರಲಿಲ್ಲ. ಡೆಲ್ಲಿಯನ್ನು ನಾನೇ ನೋಡಿಲ್ಲ. ಡೆಲ್ಲಿಯ ಐಶ್ವರ್ಯವೈಭವಗಳನ್ನು ಕಥೆ ಕಥೆಯಾಗಿ ಕೇಳಿದ್ದೇನೆ. ಚಕ್ರವರ್ತಿ ಷಹಜಹಾನ್‌ನೆಂದರೆ ಅವನಿಗೆ ಸಮನಾದವನು ಈ ಭೂಮಂಡಲದಲ್ಲಿ ಯಾರೂ ಇಲ್ಲ. ತುರುಕರು ರಜಪೂತರು, ಹಿಂದುಗಳು, ಬ್ರಾಹ್ಮಣರು ಎಲ್ಲರೂ ಡೆಲ್ಲಿಯ ರಬಾರಿನಲ್ಲಿ ಗೌರವವನ್ನು ಪಡೆಯುತ್ತಿದ್ದಾರೆ. ತುರುಷ್ಕ ರಾಜ್ಯಗಳು ಇಂಥಾ ಮಹೋನ್ನತ ಸ್ಥಿತಿಯಲ್ಲಿವೆ. ನೀನು ತುರುಷ್ಕ ದ್ವೇಷವನ್ನು ಕಟ್ಟಿಕೊಂಡು ಈ ಗಿರಿಕಂದರುಗಳಲ್ಲಿ ಅಲೆಯುತ್ತಿದ್ದರೆ ಏನಾಯಿತು ? ಮ್ಲೇಛರು ವಿಧರ್ಮೀಯರು. ಭರತ ಖಂಡದಲ್ಲಿ ಅವರ ನಾಶವಾಗಬೇಕಾದರೆ ಸಾಕ್ಷಾತ್ ಮಹಾವಿಷ್ಣುವು ಅವತಾರಮಾಡಬೇಕು. "ಮ್ಲೇಚ್ಛಾಂದಾರಯತೇ" ಎಂದು ದೊಡ್ಡವರು ಹೇಳುವುದಿಲ್ಲವೇ ? ಅದು ಭಗಂತನ ಅವತಾರಕಾರ್ಯ. ನಿನ್ನಂಥ ಮನುಜರಿಂದ ಸಾಧ್ಯವಿಲ್ಲಪ್ಪಾ. ತುರುಷ್ಕರಲ್ಲಿ ವಿರೋಧ ಕಟ್ಟಿಕೊಳ್ಳ ಬೇಡ. ಇದೇ ನಾನು ನಿನಗೆ ಸಾಯುವಾಗ ಹೇಳುವ ಬುದ್ಧಿವಾದ. ಗಟ್ಟಿ

ಯಾಗಿಟ್ಟುಕೋ" ಎಂದು ಹೇಳಿದನು.

ಶಿವಾಜಿಯು "ದಾದಾಜೀ. ನೀವು ಪರಲೋಕಕ್ಕೆ ಹೋಗುತ್ತಿರುವಾಗ ಸಂತೋಷದಿಂದ ಹೋಗಿರಿ. ಮನಸ್ಸಿನಲ್ಲಿ ಖೇದವನ್ನು ಇಟ್ಟುಕೊಳ್ಳಬೇಡಿರಿ. ನಿಮ್ಮ ಶಿಷ್ಯನು ಎಂದಿಗೂ ಅಧರ್ಮಕ್ಕೆ ಅನ್ಯಾಯಗಳಿಗೆ ಎಂದಿಗೂ ಹೋಗುವಿಲ್ಲ. ನೀವು ಕಲಿಸಿಕೊಟ್ಟ ವಿದ್ಯೆಯು ಸಾರ್ಥಕವಾಗದೇ ವ್ಯರ್ಥವಾಗುದಿಲ್ಲ. ಭವಾನಿಯ ಮೇಲೆ ಆಣೆಯಿಟ್ಟು ಹೇಳುತ್ತೆನೆ. ದಾದಾಜೀ. ನೀವು ಖಿನ್ನರಾಗಬೇಡಿರಿ, ವ್ಯಸನಪಡಬೇಡಿರಿ. ಸಂತೋಷವಾಗಿ ಪ್ರಾಣ ಬಿಡಿರಿ. ನಿಮ್ಮ ಹೆಸರಿನಲ್ಲಿ ಬ್ರಾಹ್ಮಣರಿಗೆ ದಾನಧರ್ಮಗಳನ್ನು ಮಾಡುತ್ತೇನೆ. ದೇವಾಲಯಗಳಲ್ಲಿ ಪೂಜೆಗಳನ್ನು ಮಾಡಿಸುತ್ತೇನೆ. ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನವಿಟ್ಟು ದಕ್ಷಿಣೆಗಳನ್ನು ಕೊಡುತ್ತೇನೆ. ಗೋದಾನ-ಭೂದಾನಗಳನ್ನು ಕೊಡುತ್ತೇನೆ. ನೀವು ಸಂತೋಷವಾಗಿ ವೈಕುಂಠಕ್ಕೆ ತೆರಳಿರಿ" ಎಂದು ಹೇಳಿದನು

ದಾದಾಜಿಯ ಕಣ್ಣುಗಳಲ್ಲಿ ನೀರು ಸುರಿಯುತ್ತಿತ್ತು. ಅವನ ನಡುಗುತ್ತಿದ್ದ ಎರಡು ಹಸ್ತಗಳನ್ನು ಶಿವನ ತಲೆಯಮೇಲಿಟ್ಟು ಆಶೀರ್ವದಿಸಿದನು. ಗಂಗೆಯನ್ನು ತರಿಸಿ ತೀರ್ಥ ತೆಗೆದುಕೊಂಡನು. ತುಳಸಿಯ ಮೃತ್ತಿಕೆಯನ್ನು ತಲೆಯ ಮೇಲೆ ಇಟ್ಟುಕೊಂಡನು. ತುಳಸೀ ದಳವನ್ನು ಬಾಯಿಗೆ ಹಾಕಿಕೊಂಡನು. ನಾರಾಯಣ ಸ್ಮರಣೆ ಮಾಡುತ್ತಾ ಪ್ರಾಣ ನೀಗಿದನು.

ಶ್ರೋತ್ರಿಯರಾದ ಬ್ರಾಹ್ಮಣರು ಕರ್ಮಗಳನ್ನು ಶ್ರದ್ಧೆಯಿಂದ ನೆರವೇರಿಸಿದರು. ದಾನ ಧರ್ಮಗಳಾದವು. ಮೃಷ್ಟಾನ್ನ ಭೋಜನಗಳಾದವು. ಭೂರಿ ದಕ್ಷಿಣೆಗಳು ಕೊಡಲ್ಪಟ್ಟವು.

ಕೊಂಡದೇವನ ಮರಣದ ವೃತ್ತಾಂತವನ್ನು ಪತ್ರಮುಖೇನ ಬಿಜಾಪುರದಲ್ಲಿದ್ದ ಷಾಜೀ ಮಹಾರಾಜನಿಗೆ ತಿಳಿಸಲಾಯಿತು. ಷಾಜಿಯು ಆ ಬ್ರಾಹ್ಮಣನ ಸ್ವಾಮಿನಿಷ್ಠೆ ಮತ್ತು ಪ್ರೇಮಕ್ಕಾಗಿ ಕಣ್ಣೀರಿಟ್ಟನು.

ಶಿವಾಜಿಯು ತಾಯಿ ಜೀಜಾಬಾಯಿಯನ್ನು ಪುರಂಧರಗಢಕ್ಕೆ ಬರಬೇಕೆಂದು ಪ್ರಾರ್ಥನೆ ಮಾಡಿದನು.

ಜೀಜಾಬಾಯಿಯು " ಇದು ನಮ್ಮ ಪೂರ್ವಿಕರ ಮನೆ. ನಾನು



ಆಮರಣಾಂತ ಈ ಮನೆಯನ್ನು ಬಿಟ್ಟು ಬರುವುದಿಲ್ಲ ವೆಂದು ಹೇಳಿ ಮಗನಿಗೆ ಪುರಂಧರಗಢಕ್ಕೆ ಹೋಗಲು ಅಪ್ಪಣೆಯಿತ್ತಳು.

ಶಿವಾಜಿಯು ಪುರಂಧರಗಢಕ್ಕೆ ಹೋದನು. ಗುರು ದಾದಾಜಿಯ ಸ್ಮರಣೆಯು ಶಿವಾಜಿಗೆ ಆಮರಣಾಂತ ಜಾಗರಿತವಾಗಿದ್ದಿತು.

ಶಿವಾಜಿಯು ಪುರಂಧರಗಢಕ್ಕೆ ಬರುತ್ತಲೇ ಅವನ ಸೈನಿಕರಿಗೆ ಅನ್ನ ಬಟ್ಟೆಗಳಿಗೆ ಸಂಬಳ ಸಾರಿಗೆಗಳಿಗೆ ಹಣ ಸಾಲದೆಂಬ ಚಿಂತೆಯು ಬಂದಿತು. ಅವನ ಬೇಹುಗಾರರು ನಾಲ್ಕಾರು ಗಾವುದಗಳವರೆಗೂ ಸಂಚರಿಸುತ್ತಿದ್ದರು.

ಆ ಗುಡ್ಡ ಗಾಡಿನ ಬೇಹುಗಾರರು ಬಂದು "ಮಹಾರಾಜರೇ. ಕಣಿವೆಯ ಮಾರ್ಗವಾಗಿ ಕೆಲವು ಜನ ತುರುಷ್ಕ ಸೈನಿಕರು ಪ್ರಯಾಣ ಮಾಡುತ್ತಾ ಇದ್ದಾರೆ ನಾಲ್ಕು ಒಂಟೆಗಳ ಮೇಲೆ ಹಣ ಹೇರಿಕೊಂಡು ಹೋಗುತ್ತಿದ್ದಾರೆ." ಎಂದು ಅರಿಕೆ ಮಾಡಿದರು.

ಶಿವಾಜಿಯ ಜೊತೆಗಾರರು ಉತ್ಸಾಹದಿಂದ ಕುದುರೆಗಳನ್ನೇರಿ ಹೊರಟರು. ಸಮೀಪದಲ್ಲಿ ಹೋಗಿ ರಸ್ತೆಗಳ ಪಕ್ಕದಲ್ಲಿ ಶಿವಾಜಿಯ ಜನರು ಔತುಕೊಂಡಿದ್ದರು. ಒಬ್ಬಿಬ್ಬರು ರಸ್ತೆಯಲ್ಲಿ ಎಲ್ಲಿಗೋ ಪ್ರಯಾಣ ಮಾಡುವವರಂತೆ ಎದುರಾಗಿ ಹೋದರು.

ಸೀಪಾಯಿಗಳು ಅವರನ್ನು "ಯಾರೋ ಈ ಕಾಡುದಾರಿಯಲ್ಲಿ ಹೋಗುತ್ತಿರುವವರು" ಎಂದು ಕೂಗಿ ನಿಲ್ಲಿಸಿದರು.

ಅವರನ್ನು ಅವಲ್ದಾರರ ಎದುರಿಗೆ ಕರೆತಂದರು.

ಹವಲ್ದಾರನು " ನೀವಾರು ಎಲ್ಲಿಗೆ ಹೋಗುತ್ತೀರಿ ? "ಎಂದು ದರ್ಪದಿಂದ ವಿಚಾರಣೆ ಮಾಡಿದನು.

" ಇಲ್ಲಿ ಕಲ್ಯಾಣವೆಂಬ ದುರ್ಗದಕೋಟೆಯಿದೆಯಂತೆ. ಅತ್ತ ಕಡೆ ಏನಾದರೂ ನೌಕರಿ ಹುಡುಕಿಕೊಂಡು ಹೊರಟಿದ್ದೇವೆ " ಎಂದು ಉತ್ತರ ಕೊಟ್ಟರು.

" ಆಳು ಭರ್ತಿಇಟ್ಟೇರಿ. ನಿವೇನು ಕೆಲಸ ಮಾಡಬಲ್ಲಿರಿ ?"

" ಅಲ್ಲ ಸಾಹೇಬರೇ. ಈ ನಿಮ್ಮ ಸೈನಿಕರು ಮಾಡುವ ಕೆಲಸ ನಾವು ಮಾಡಲಾರೆವೇ ? ನೋಡಿ. ಇವರರಾರನ್ನಾದರೂ ನಮ್ಮ ಮೇಲೆ ಕುಸ್ತಿಗೆ ಬಿಡಿ. ಆಗ ಗೊತ್ತಾಗುತ್ತದೆ.

ಸಿಪಾಯಿಯೊಬ್ಬನು "ಬಾಯಿಮುಚ್ಚೋ, ಮುಖದ ಮೇಲೆ ಉಗುಳಿ ಬಿಟ್ಟೇನು. ಕುಸ್ತಿ ಮಾಡುತ್ತಾನಂತೆ ಕುಸ್ತಿ. ಇದೇನು ಗರಡಿಯ ಮನೆಯೇನೋ ? ಫೌಜುದಾರರಲ್ಲಿ ಹೇಗೆ ಮಾತನಾಡಬೇಕೋ ಹಾಗೇ ಮಾತನಾಡಬೇಕು. ಸವಾಲು ಹಾಕುತ್ತೀ. ನೀನಾವ ಜಾತಿಯವನೋ ?"

" ಜಾತಿಯ ಮಾತು ನಿನಗೇಕೆ ? ನಾವು ಮರಾಠರು."

"ಓಹೋ ! ಮರಾಠರು ಸೊಕ್ಕಿಹೋಗಿದ್ದಾರೆ. ಕಟ್ಟಿಹಾಕು "ಎಂದು ಹವಲ್ದಾರನು ಅಪ್ಪಣೆ ಮಾಡಿದನು.

ಅವರ ಕೈಕಾಲುಗಳನ್ನು ಕಟ್ಟಿ ಗಾಡಿಯ ಮೇಲೆ ಹಾಕಿದರು.

ಹವಲ್ದಾರನು ಸಿಪಾಯಿಗಳಿಗೆಲ್ಲಾ ಅಪ್ಪಣೆ ಮಾಡಿದನು. " ಈ ಕಣಿವೆ ದಾಟುವವರೆಗೆ ಎಲ್ಲರೂ ಎಚ್ಚರಿಕೆಯಿಂದ ಹೋಗಬೇಕು. ಇಲ್ಲಿ ಗುಡ್ಡಗಾಡು ಜನರ ಹಾವಳಿಯಿದೆ" ಎಂದು ಎಚ್ಚರಿಸಿದನು.

ಸೈನಿಕರು " ಇದೇನು ಹುಜೂರ್. ಎಂದೂ ಇಲ್ಲದ ಮಾತು ಇಂದು ಆಡುತ್ತೀರಿ. ನಾವು ಎಷ್ಟೋಬಾರಿ ಇತ್ತ ಓಡಾಡಿದ್ದೇವೆ. ಕಾಡುಜನ ಮರಾಠರು ನಮ್ಮನ್ನು ನೋಡಿದರೆ ಓಡಿಹೋಗುತ್ತಾರೆ. ಎದುರಿಗೆ ಮರಾಠರು ಸಿಕ್ಕಿದರೆ ತಮಾಷೆ ತೋರಿಸುತ್ತೇವೆ. ನಮ್ಮ ಗಂಟು ಮೂಟೆಗಳನ್ನು ಹೊತ್ತುಕೊಳ್ಳುವುದಕ್ಕೆ ಪ್ರಾಣಿಗಳು ಸಿಕ್ಕಿದಂತಾಯಿತು. " ಎಂದು ಹೇಳಿದರು.

ಆ ಸಲ್ತ್ರ ಸ್ವಲ್ಪ ದೂರ ಮುಂದೆ ಹೋಯಿತು. ಪಕ್ಕದ ಮರಗಳ ಗುಂಪಿನಿಂದ ಏನೋ ಮರಮರ ಸದ್ದು ಕೇಳಿಸಿತು. ಸೈನಿಕರು ಕಿವಿಗೊಟ್ಟು ಕೇಳಿದರು. ಒಬ್ಬ "ಕಾಡುಮೃಗಗಳ ಸದ್ದಿರಬಹುದು."ಎಂದನು ಮತ್ತೊಬ್ಬನು ಕುದುರೆಯಿಂದ ಇಳಿದು ಅತ್ತ ಕಡೆ ನೋಡಿದನು. "ಮೃಗಗಳಲ್ಲ ಮನುಷ್ಯರು ಬರುತ್ತಿರುವುದು ಕಾಣಿಸುತ್ತಿದೆ."ಎಂದು ಕೂಗಿಕೊಂಡನು. ಎಲ್ಲರೂ ಅತ್ತ ಕಡೆ ತಿರುಗಿ ಗಿಡಗಳಲ್ಲಿ ನುಗ್ಗಲು ಹೊರಟರು.

ಎದುರುಗಡೆಯಿಂದ "ಸುಯ್ ಸುಯ್"ನೆ ಬಾಣಗಳು ವೇಗವಾಗಿ ಬಂದವು.

ಕುದುರೆಯ ಕಣ್ಣುಗಳಿಗೆ ತಗುಲಿದವು. ಕುದುರೆಗಳು ಝೇಂಕರಿಸುತ್ತಾ ನೆಗೆದವು.

ಸಿಪಾಯಿಗಳ ಕಣ್ಣಿಗೆಗುರಿಯಿಟ್ಟು ಅಂಬುಗಳನ್ನು ಹೊಡೆದರು. ಕಲ್ಲುಗಳ ಪೆಟ್ಟು ಬೀಳಲಾರಂಭಿಸಿತು. ಸಿಪಾಯಿಗಳು ಕಣ್ಣು ಕಾಣದೇ ತತ್ತರಿಸಿ ಬೀಳುತ್ತಿದ್ದರು.

ಕುದುರೆಯ ಸವಾರರು ಬಂದು ಮುತ್ತಿದರು. ಹೆಚ್ಚು ಹೋರಾಟವೇನೂ ನಡೆಯಲಿಲ್ಲ. ಹಿಂದಿದ್ದ ಸಿಪಾಯಿಗಳು ತಮ್ಮ ಕುದುರೆಗಳನ್ನೋಡಿಸಿಕೊಂಡು ಮುಂದೆನುಗ್ಗಿದರು. ಮರಾಠಯೋಧರು ಕೆಲವು ಸಿಪಾಯಿಗಳನ್ನು ಕಡಿದು ಹಾಕಿದರು. ಕೆಲವರನ್ನು ಹಿಡಿದರು. ಕುದುರೆಗಳನ್ನು ತಮ್ಮ ವಶಕ್ಕೆ ತೆಗೆದು ಕೊಂಡರು.

ಒಂಟೆಯ ರಾಹುತರನ್ನು ಹೊಡೆದು ಹಾಕಿ ಮರಾಠರು ಒಂಟೆಗಳ ಮೇಲೇರಿ ನೋಡಿದರು. ನಾಲ್ಕು ಒಂಟೆಗಳ ಮೇಲೆಯೂ ಚಿನ್ನದ ಪಗೋಡಾ ಥೈಲಿಗಳು ಹೇರಲ್ಪಟ್ಟಿದ್ದುವು. ಬಂದಿಗಳನ್ನೂ ಒಂಟೆಗಳ ಹಣದ ಹೇರುಗಳನ್ನೂ ಪುರಂಧರಗಢದ ಕಡೆಗೆ ಸಾಗಿಸಿದರು. ಹವಾಲ್ದಾರನು ಬಂದಿಯಾಗಿದ್ದನು. ಗಾಡಿಯ ಮೇಲೆ ಕಟ್ಟಿಹಾಕಿದ್ದ ಮವಾಳ ಸೈನಿಕರ ಬಂಧನಗಳನ್ನು ಬಿಚ್ಚಿದರು. ಅವರು "ಈ ಹವಾಲ್ದಾರನನ್ನು ನಮ್ಮ ಕೈಗೆ ಕೊಡಿ" ಎಂದು ಹಿಡಿದುಕೊಂಡು ಹೊರಟರು. ಗಾಡಿಗಳಲ್ಲಿ ಆ ಸಿಪಾಯಿಗಳ ಹೆಂಗಸರಿದ್ದರು. ಆ ಗಾಡಿಗಳನ್ನೂ ಪುರಂಧರದ ಕೋಟೆಯೊಳಗೆ ಹೊಡೆದರು. ಅವರುಗಳು ಸೂರೆ ಮಾಡಿ ತಂದಿದ್ದ ಥೈಲಿಗಳನ್ನೆಲ್ಲಾ ಖಜಾನೆಗೆ ಸಾಗಿಸಿದರು. ಮುತ್ಸದ್ದಿಗಳು ಬಿಚ್ಚಿಹಾಕಿ ನೋಡಿದರು. ಆ ಥೈಲಿಗಳಲ್ಲಿ ನಾಲ್ಕು ಲಕ್ಷ ಹೊನ್ನು ಕರಾರುವಾಕ ಇದ್ದಿತು. ಎಲ್ಲ ಥೈಲಿಗಳಿಗೂ ಕಲ್ಯಾಣ್ ಫೌಜುದಾರನ ಮೊಹರಿತ್ತು. ಅದನ್ನೆಲ್ಲಾ ಖಜಾನೆಗೆ ಸೇರಿಸಿಕೊಂಡರು. ಶಿವಾಜಿಯು ಆ ಬಂಧಿಸಲ್ಪಟ್ಟಿದ್ದ ಸೈನಿಕರಿಗೆ ಹಣಕೊಟ್ಟು ಎಲ್ಲರನ್ನೂ ಬಿಡುಗಡೆಮಾಡಿಸಿದನು.

ಕೆಲವು ಸೈನಿಕರು "ನಾವು ನಿಮ್ಮ ಸೈನ್ಯದ ಹುದ್ದೆಯಲ್ಲಿಯೇ ಸೇರಿಕೊಳ್ಳುತ್ತೇವೆಂದು ಕೇಳಿಕೊಂಡರು.

ಶಿವಾಜಿಯು "ನಾವು ತುರುಕರನ್ನು ಸೈನ್ಯಕ್ಕೆ ಸೇರಿಸುವುದಿಲ್ಲ" ಎಂದು ಹೇಳಿ ಅವರನ್ನೆಲ್ಲಾ ಕೋಟೆಯಿಂದ ಹೊರಕ್ಕೆ ಅಟ್ಟುವಂತೆ ಅಪ್ಪಣೆ ಮಾಡಿದನು.

ಅವರ ಹೆಂಗಸರನ್ನೆಲ್ಲಾ ಮರ್ಯಾದೆಯಿಂದ ಕಳುಹಿಸಿಕೊಟ್ಟರು.

ಕೂಡಲೇ ಮರಾಠಾ ಸೈನ್ಯಗಳು ಕಲ್ಯಾಣ್‌ದುರ್ಗದ ಕಡೆಗೆ ಹೊರಟವು. ಕಲ್ಯಾಣದಲ್ಲಿ ಒಳ್ಳೆಯ ಮಧ್ಯಾಹ್ನ ಸಮಯ. ರಾಜಮಾರ್ಗದಲ್ಲಿ ಜನರೇ ಇರಲಿಲ್ಲ. ಕಾವಲುಗಾರರು ತೂಕಡಿಸುತ್ತಿದ್ದರು. ಮರಾಠಾ ಸೈನಿಕರು ಕಾವಲುಗಾರರನ್ನು ಕಡಿದು ಹಾಕಿ ಕಲ್ಯಾಣ್‌ದುರ್ಗವನ್ನು ಹೊಕ್ಕರು. ನವಾಬನ ಸೈನಿಕರು ಬಂದು ಹೋರಾಡಿದರು ಬೀದಿಗಳಲ್ಲಿಯೇ ಹೋರಾಟ ನಡೆಯಿತು. ಸಂಧ್ಯಾಕಾಲದ ಹೊತ್ತಿಗೆ ಎಲ್ಲವೂ ಶಾಂತವಾಯಿತು. ಬೀದಿಗಳಲ್ಲೆಲ್ಲಾ ಹೆಣಗಳು ಬಿದ್ದಿದ್ದವು. ಕೋಟೆಯ ಮನೆಗಳಲ್ಲಿ ಜನರು ಹೆದರಿ, ಬಾಗಿಲುಗಳನ್ನು ಭದ್ರವಾಗಿ ಮುಚ್ಚಿ ಕಂಡಿಗಳಿಂದ ನೋಡುತ್ತಿದ್ದರು. ಮನೆಗಳಲ್ಲಿಯೇ "ಇವರೆಲ್ಲಾ ಮರಾಠಾ ಸೈನಿಕರು ಶಿವಾಜಿಯು ನವಾಬರ ಮೇಲೆ ಯುದ್ಧಕ್ಕೆ ಬಂದಿದ್ದಾನೆ" ಎಂದು ಮಾತನಾಡಿಕೊಳ್ಳುತ್ತಿದ್ದರು. ಅರಮನೆಯನ್ನು ಮರಾಠಾ ಸೈನಿಕರು ಮುತ್ತಿದರು. ಸರದಾರರು ಎಲ್ಲೆಲ್ಲಿಯೂ ನವಾಬನನ್ನು ಹುಡುಕಿದರು. ನವಾಬನು ಸಿಕ್ಕಲಿಲ್ಲ. ಅವನು ಕೋಟೆಯಿಂದ ಮಧ್ಯಾಹ್ನದ ಮುಂಚೆಯೇ ಪಲಾಯನಮಾಡಿ ಹೋಗಿದ್ದನು. ಅರಮನೆಯ ಕಾವಲುಗಾರರು ಹೋರಾಟವಿಲ್ಲದೇ ಮರಾಠಾರಿಗೆ ಅರಮನೆಯನ್ನು ಒಪ್ಪಿಸಿದರು.

ಮರಾಠಾ ಸರದಾರರು "ನಿಮ್ಮ ನವಾಬರೆಲ್ಲಿ! ಅವರ ಹೆಸರೇನು ? ಎಂದು ಕೇಳಿದರು.

"ಅವರ ಹೆಸರು ಮೌಲಾನಾ ಅಹಮದ್ ಸಾಹೇಬ್. ಅವರು ಮಧ್ಯಾಹ್ನವೇ ಕುದುರೆಯ ಮೇಲೇರಿ ಹೊರಟಿದ್ದಾರೆ. ರಾಜಮಾರ್ಗದಲ್ಲಿ ಸತ್ತುಬಿದ್ದಿರಬೇಕು. ಅಥವಾ ತಪ್ಪಿಸಿಕೊಂಡು ಓಡಿಹೋಗಿರಬೇಕು. ಅರಮನೆಯಲ್ಲಿ ಒಂದು ಗಂಡುಪಿಳ್ಳೆಯೂ ಇಲ್ಲ. ಅರಮನೆಗೆ ಚಿಕ್ಕರಾಣಿಯವರೇ ಯಜಮಾನಿ. ಅವರು ನವಾಬರ ಸೊಸೆ. ಅವರ ಅಪ್ಪಣೆಯಂತೆ ನಾವು ಈ ಅರಮನೆಯನ್ನು ನಿಮಗೆ ಒಪ್ಪಿಸಿದ್ದೇವೆ" ಎಂದು ಹೇಳಿದರು.

ಮರಾಠಾ ಸೇನಾಧಿಪತಿಗೆ ಆಶ್ಚರ್ಯವಾಯಿತು. ಇದರಲ್ಲೇನೋ ಕೃತ್ರಿಮವಿದೆಯೆಂದು ಸಂದೇಹಪಟ್ಟನು. ಶಿವಾಜಿಗೆ ಅರಮನೆಯ ವಿಷಯಗಳನ್ನೆಲ್ಲಾ ವರದಿಮಾಡಿದನು

"ಇದೊಂದು ನಾಟಕದಂತಿದೆ, ಬಾಬಾಜೀ. ಈ ಅರಮನೆಯಲ್ಲಿ ಗಂಡು ಪಿಳ್ಳೆ ಒಂದೂ ಇಲ್ಲವೆಂಬುದು ನಿಜ. ನವಾಬನು ತಪ್ಪಿಸಿಕೊಂಡಿದ್ದಾನೆ. ಅವನ ಸೊಸೆ ಚಿಕ್ಕ ರಾಣಿಯಂತೆ. ಅವಳ ಹೆಸರು ಮೆಹರುನ್ನೀಸಾ ಎಂದು ಪರಿಚಾರಿಕೆಯರು ಹೇಳುತ್ತಾರೆ. ಈ ಹೆಂಗಸರು ಸೇರಿಕೊಂಡು ನಮ್ಮನ್ನು ವಂಚಿಸುವ ನಾಟಕ ಕಟ್ಟಿರುವಂತಿದೆ. ಅರಮನೆಯಲ್ಲಿ ರೋಧನ ಧ್ವನಿಯು ಕೇಳಿಸುವುದಿಲ್ಲ. ಭಯವು ಕಾಣುವುದಿಲ್ಲ" ವೆಂದು ಹೇಳಿದನು.

ಶಿವಾಜಿಯು ಆಶ್ಚರ್ಯದಿಂದ "ಇರಲಿ ಒಂದೆರಡು ದಿನಗಳು ನಿರೀಕ್ಷಿಸಿ ನೋಡೋಣ. ಏನಾಗುತ್ತದೋ ನೋಡೋಣ. ಒಬ್ಬ ಮರಾಠಾ ಸೈನಿಕನೂ ಅರಮನೆಯೊಳಗೆ ಕಾಲಿಡಕೂಡದು ಸುತ್ತಲೂ ಬಲವಾದ ಕಾವಲನ್ನು ಇಡಿರಿ" ಎಂದು ಅಪ್ಪಣೆ ಮಾಡಿದನು.

ಕೋಟೆಯೊಳಗೆ ಮರಾಠಾ ಶಿಬಿರವು ಠಾಣ ಹಾಕಿತು. ಊರಿನ ಬೀದಿಗಳಲ್ಲಿ ಹೆಣಗಳನ್ನು ತೆಗೆದು ಚೊಕ್ಕಟಮಾಡಿದರು. ಮರಾಠಾ ಸೈನಿಕರು ಊರಿನಲ್ಲೆಲ್ಲಾ ಡಂಗೂರ ಹೊಡೆದರು. "ಕೋಟೆಯಲ್ಲಿ ತುರುಷ್ಕರು ಯಾರೂ ಇರಕೂಡದು, ಎಲ್ಲರೂ ಕೋಟೆಯನ್ನು ಬಿಟ್ಟು ಹೊರಟುಹೋಗಬೇಕು. ಅವರ ನಗನಾಣ್ಯಗಳಿದ್ದರೆ ತೆಗೆದುಕೊಂಡು ಹೋಗಬಹುದು. ಮುಸಲ್ಮಾನ್ ಸ್ತ್ರೀಯರು ಮಕ್ಕಳಿದ್ದರೆ ಅವರಿಗೇನೂ ಅಪಾಯವಿಲ್ಲ ಭಯವಿಲ್ಲ"ವೆಂದು ಸಾರಿದರು.

ಮನೆಗಳಲ್ಲಿ ಶೋಧಿಸಿ ಮುಸಲ್ಮಾನ್ ಹೆಂಗಸರು ಮಕ್ಕಳನ್ನು ಅವರವರ ಬಂಧುಗಳಿರುವ ಊರುಗಳಿಗೆ ಸುರಕ್ಷಿತವಾಗಿ ಕಳಿಸಿಕೊಟ್ಟರು.

ಅರಮನೆಯಿಂದ ಶಿವಾಜಿಗೆ ಕರೆಬಂದಿತು. ಚಿಕ್ಕರಾಣಿ ಮೆಹರುನ್ನೀಸಳು ಅರಮನೆಯ ಬ್ರಾಹ್ಮಣ ಮುತ್ಸದ್ದಿಗಳನ್ನು ಶಿವಾಜಿಯ ಸಮ್ಮುಖಕ್ಕೆ ಕಳಿಸಿದಳು.

ಆ ಮುತ್ಸದ್ದಿಗಳು "ನಾವು ವಂಶಪಾರಂಪರ್ಯವಾಗಿ ಅರಮನೆಯ ಮುತ್ಸದ್ದಿಗಳು. ಅರಮನೆಯಲ್ಲಿ ನವಾಬರು ಇಲ್ಲ. ಕೋಟೆಯಲ್ಲಿಯೂ ಅವರಿರುವಂತೆ ಕಾಣುವುದಿಲ್ಲ. ಚಿಕ್ಕ ರಾಣಿ ಮೆಹರುನ್ನೀಸಾರವರು ಅರಮನೆಗೆ ಶಿವಾಜಿ ಮಹಾರಾಜರು ಖುದ್ದಾಗಿ ಭೇಟಿಕೊಡಬೇಕೆಂದು ಪ್ರಾರ್ಥನೆ ಕಳುಹಿಸಿದ್ದಾರೆ"

ಎಂದು ವಿನಯದಿಂದ ಹೇಳಿದರು.

ಶಿವಾಜಿಯು ಸ್ವಲ್ಪಹೊತ್ತು ಯೋಚನೆ ಮಾಡಿದನು.

"ನಾವು ಅರಮನೆಗೆ ಬರದಿದ್ದರೆ ಏನಾಗುತ್ತದೆ" ಎಂದು ಕೇಳಿದನು.

ಮುತ್ಸದ್ದಿಗಳು "ಮಹಾರಾಜರೇ, ಅದನ್ನು ನಾವು ಹೇಗೆ ಹೇಳಬಲ್ಲೆವು? ಚಿಕ್ಕರಾಣಿಯವರು ಶಿವಾಜಿ ಮಹಾರಾಜರಲ್ಲದೇ ಬೇರಾರಿಗೂ ಅರಮನೆಯನ್ನು ಒಪ್ಪಿಸುವುದಿಲ್ಲವೆನ್ನುತ್ತಾರೆ" ಎಂದು ಭಯಪಡುತ್ತಾ ಹೇಳಿದರು.

ಶಿವಾಜಿಗೆ ಸಂಕಟಕ್ಕಿಟ್ಟುಕೊಂಡಿತು. ನನಗೆ ಎಂದೂ ಇಂಥಾ ಪ್ರಸಂಗ ಬಂದಿಲ್ಲ. ತುರುಷ್ಕರ ಅಂತಃಪುರದ ಕಡೆ ನಾನೆಂದೂ ಕಣ್ಣೆತ್ತಿ ನೋಡಿಲ್ಲ. ಇದೇನೋ ಪರೀಕ್ಷೆಗೆ ಬಂದಿದೆ ಎಂದುಕೊಂಡು ತಾನೇ ಅರಮನೆಗೆ ಬರುವುದಾಗಿ ಮುತ್ಸದ್ದಿಗಳೊಡನೆ ಹೇಳಿ ಕಳುಹಿಸಿದನು.

ಸೌಮ್ಯ ವೇಷದಿಂದ ಪಲ್ಲಕ್ಕಿಯಲ್ಲಿ ಕುಳಿತು ಅರಮನೆಯ ಬಾಗಿಲಿಗೆ ಹೋದನು. ಅಂಗರೇಖುಗಳಲ್ಲಿ ಗುಪ್ತಾಯುಧಗಳನ್ನು ಧರಿಸಿದ್ದನು. ಪರಿಚಾರಿಕೆಯರು ಬಂದು ದ್ವಾರದಲ್ಲಿ ಸ್ವಾಗತಿಸಿದರು. ಶಿವಾಜಿಯ ಜೊತೆಯಲ್ಲಿ ಬಂದಿದ್ದ ಸರದಾರರನ್ನು ಕೈಮುಗಿದು ಬಾಗಿಲಲ್ಲಿ ತಡೆದರು. ಶಿವಾಜಿಯೊಬ್ಬನೇ ಧೈರ್ಯದಿಂದ ಅರಮನೆಯೊಳಗೆ ಹೋದನು. ಹೊರಗಡೆ ಸರದಾರರ ಹೃದಯಗಳು ಡವಡವನೆ ಬಡಿದುಕೊಳ್ಳುತ್ತಿದ್ದವು. ಶಿವಾಜಿಯ ಮನಸ್ಸೂ ಚಂಚಲವಾಗಿದ್ದಿತು. ಈ ಅರಮನೆಯಲ್ಲಿ ಏನಾದರೂ ಗುಪ್ತಸಂಚನ್ನಿಟ್ಟು ತನ್ನ ಪರೀಕ್ಷೆಯಾಗುತ್ತಿದೆಯೋ ಎಂದುಕೊಂಡನು.

ಹೊರಗಿನ ಹಜಾರದಲ್ಲಿಯೇ ಚಿಕ್ಕರಾಣಿಯು ವಸ್ತ್ರಾಲಂಕಾರಭೂಷಿತಳಾಗಿ ನಗುಮೊಗದಿಂದ ಶಿವಾಜಿಯನ್ನು ಎದುರುಗೊಂಡಳು. ಮುಖಪರದೆ ಇರಲಿಲ್ಲ.

ಅವಳು ಕೈ ಮುಗಿದು "ಶಿವಾಜೀ ಮಹಾರಾಜರೇ, ಅರಮನೆಗೆ ಬರಲು ಎರಡು ದಿವಸಗಳಿಂದ ಹೆದರಿ ಕುಳಿತಿದ್ದಿರೇನು?" ಎಂದು ಹಾಸ್ಯಮಾಡಿ "ಶಿವಾಜಿ ಮಹಾರಾಜರೇ, ನೀವು ಈ ಸಾಮ್ರಾಟರ ಮೇಲೆ ಯುದ್ಧ ಮಾಡಬಲ್ಲಿರಾ?" ಎಂದಳು.

ಶಿವಾಜಿಗೆ ಅವಳ ಧೈರ್ಯವನ್ನು ನೋಡಿ ಆಶ್ಚರ್ಯವಾಯಿತು.

"ಮಹಾರಾಣಿಯವರೇ, ನಾನು ರಾಜನೂ ಅಲ್ಲ. ಮಹಾರಾಜನೂ ಅಲ್ಲ. ಮುಸಲ್ಮಾನ್ ಸಾಮ್ರಾಟರ ಮೇಲೆ ಯುದ್ಧಮಾಡುತ್ತೇನೆಂದು ಡಂಗೂರ ಹೊಡೆಸಿಲ್ಲ. ಅರಮನೆಗೆ ಬರಲು ಭಯವಿಲ್ಲ. ನಮ್ಮ ಜನರು ಸ್ತ್ರೀಯರನ್ನು ಬಹಳವಾಗಿ ಗೌರವಿಸುತ್ತಾರೆ. ಅದು ಹಿಂದೂ ಪದ್ಧತಿ. ಅದರಿಂದ ಅರಮನೆ ಯೊಳಗೆ ಒಬ್ಬ ಸೈನಿಕನೂ ತಲೆಯಿಟ್ಟಿಲ್ಲ" ಎಂದು ಹೇಳಿದನು.

ಚಿಕ್ಕರಾಣಿಯು ನಗುತ್ತಾ "ಈ ಅರಮನೆ ತಮ್ಮದೇ ಇದೆ. ಈಗ ಈ ಅರಮನೆಗೆ ನಾನು ಯಜಮಾನಿ. ಇದನ್ನು ಇಲ್ಲಿ ತುಂಬಿರುವ ಐಶ್ವರ್ಯ ದೊಡನೆ ತಮಗೆ ಒಪ್ಪಿಸಿದ್ದೇನೆ. ಇನ್ನು ಮುಂದೆ ತಾವು ಯಜಮಾನರು. ಈ ಅಂತಃಪುರ, ಈ ಪರಿಚಾರಿಕೆಯರು,ಈ ದಾಸದಾಸಿಯರು ಎಲ್ಲರೂ ತಮ್ಮ ಸೇವಕರು" ಎಂದು ಹೇಳಿದಳು.

ಶಿವಾಜಿಗೆ ಏನೂ ಉತ್ತರ ಕೊಡಲು ತೋಚಲಿಲ್ಲ.

ಅವನು "ರಾಣಿಯವರೇ, ತಮ್ಮ ಧೈರ್ಯಕ್ಕೆ ನಾನು ಮೆಚ್ಚಿದ್ದೇನೆ. ಈ ಅರಮನೆಯನ್ನು ನಾನು ವಹಿಸಿಕೊಂಡಿದ್ದೇನೆ. ತಾವು ಎಲ್ಲಿಗೆ ಹೋಗ ಬೇಕೆಂದರೆ ಅಲ್ಲಿಗೆ ಮರ್ಯಾದೆಯಿಂದ ಕಳುಹಿಸಿ ಕೊಡುತ್ತೇನೆ" ಎಂದು ಹೇಳಿದನು.

ಚಿಕ್ಕರಾಣಿ ಮೆಹರುನ್ನೀಸಳು "ನಾನು ತಮ್ಮ ಪರಾಕ್ರಮಗಳನ್ನು ಎರಡು ವರ್ಷಗಳಿಂದ ಕೇಳುತ್ತಿದ್ದೇನೆ. ನೀವು ರಾಜರಲ್ಲವೆಂದು ಹೇಳುತ್ತೀರಿ. ಈ ಕಲ್ಯಾಣದುರ್ಗವು ನಿಮ್ಮ ವಶವಾದ ಮೇಲೆ ಈ ಇಡೀ ಗಡಿನಾಡಿಗೆ ನೀವೇ ರಾಜರು. ನಾನು ಮನಸಾರ ನಿಮ್ಮನ್ನು ವರಿಸಿದ್ದೇನೆ. ಈ ಅರಮನೆಯನ್ನು ಮಾತ್ರವಲ್ಲ, ಈ ಅರಮನೆ, ಈ ಸಂಪತ್ತು, ನನ್ನನ್ನೂ ಸಹ ನೀವು ಸ್ವೀಕರಿಸ ಬೇಕು" ಎಂದು ಹೇಳಿದಳು.

ಶಿವಾಜಿಯು ಕೈಮುಗಿದು ನಿಂತನು.

"ಮಹಾರಾಣಿಯವರೇ, ನಿಜವಾಗಿಯೂ ನೀವು ಅತ್ಯಂತ ರೂಪವತಿ, ಯೌವನವತಿ. ನಮ್ಮ ತಾಯಿ ಜೀಜಾಬಾಯಿಯವರ ಹೆಸರು ನೀವು ಕೇಳಿರ ಬಹುದು. ನೀವೇ ನನ್ನ ತಾಯಿಯಾಗಿದ್ದರೆ ನಾನು ಇನ್ನೂ ಸುಂದರಾಕಾರ ನಾಗಿ ಹುಟ್ಟುತ್ತಿದ್ದೆ. ನೀವು ನಮ್ಮ ತಾಯಿಗೆ ಸಮಾನರು" ಎಂದು ಹೇಳಿದನು.

  

ಚಿಕ್ಕರಾಣಿಯು "ಮಹಾರಾಜರೇ, ನಾನು ಮುಸಲ್ಮಾನ್ ತರುಣಿ ಯೆಂದು ನೀವು ನಿರಾಕರಿಸುತ್ತಿದ್ದೀರಿ. ಅಲ್ಲವೆ? ಮೊಗಲ್ ಸಿಂಹಾಸನದ ಯುವರಾಜರು ಕೂಡಾ ನನ್ನನ್ನು ವರಿಸಲು ಎಷ್ಟೋ ಪ್ರಯತ್ನ ಪಟ್ಟಿದ್ದಾರೆ. ನೀವು ನಿರಾಕರಿಸುತ್ತೀರಿ. ನಾನೂ ಹಿಂದೂ ತರುಣಿಯಾಗಿ ಹುಟ್ಟಿದ್ದರೆ ಪರಿಗ್ರಹಿಸುತ್ತಿದ್ದಿರಲ್ಲವೆ" ಎಂದು ಕೇಳಿದಳು.

ಶಿವಾಜಿಯು ವಿನಯದಿಂದ ಕೈಮುಗಿದು "ರಾಣಿಯವರೇ, ಸ್ತ್ರೀಯರಲ್ಲಿ ಹಿಂದುಗಳಾದರೂ ಮುಸಲ್ಮಾನರಾದರೂ ಒಂದೇ. ನಾನು ಪರಸ್ತ್ರೀಯರನ್ನು ಕಣ್ಣೆತ್ತಿ ನೋಡುವುದಿಲ್ಲವೆಂದು ಭವಾನಿಯ ಎದುರಿನಲ್ಲಿ ನಮ್ಮ ತಾಯಿಗೆ ಆಣೆಮಾಡಿ ಕೊಟ್ಟಿದ್ದೇನೆ" ಎಂದು ಹೇಳಿದನು.

ಚಿಕ್ಕರಾಣಿಯು "ನೀವು ಏನೇ ಹೇಳಿರಿ, ಇಂಥಾ ಪ್ರಸಂಗವು ನಿಮಗೆ ಎಂದೂ ಬಂದಿಲ್ಲ. ಪರೀಕ್ಷೆಯಾಗಿದ್ದರಲ್ಲವೆ ನಿಮ್ಮ ಪ್ರಮಾಣದ ಬೆಲೆ"ಎಂದಳು.

ಶಿವಾಜಿಯು "ಈಗ ಪರೀಕ್ಷೆಯಾಯಿತು, ತಾಯಿ. ನಾನು ನಮ್ಮ ತಾಯಿಯ ಮುಂದೆ ಮಾಡಿದ ಆಣೆಯನ್ನು ಈಗ ಪರೀಕ್ಷಿಸಿನೋಡಿದ್ದಾಯಿತು. ಇನ್ನು ನೀವು ನನ್ನನ್ನು ಪರೀಕ್ಷೆಮಾಡಬೇಡಿರಿ. ನಿಮ್ಮನ್ನು ನಿಮ್ಮ ಬಂಧುಗಳ ಮನೆಗೆ ಮರ್ಯಾದೆಯಿಂದ ಕಳುಹಿಸಿ ಕೊಡುತ್ತೇನೆ" ಎಂದು ಹೇಳಿದನು.

ಚಿಕ್ಕರಾಣಿಯು ನನ್ನನ್ನು ನೀವು ಮದುವೆಯಾಗುವುದಿಲ್ಲ. ಬಂಧಿಸಿ ಕಾರಾಗ್ರಹದಲ್ಲಿಯೂ ಇಡುವುದಿಲ್ಲ. ಬಂಧುಗಳ ಮನೆಗೆ ಕಳುಹಿಸುತ್ತೀರಿ. ನಾನು ಬದುಕಿದ್ದರೆ ಛಲದಿಂದ ನಿಮ್ಮ ಶತ್ರುವಾಗುತ್ತೇನೆಂದು ನಿಮಗೆ ಭಯ ವಿಲ್ಲವೇ?" ಹೆಂಗಸಿನ ಶತೃತ್ವವು ಬಹಳ ಕ್ರೂರವಾದುದೆಂದು ನೀವೂ ಪಾಠ ಕಲಿತಿಲ್ಲವೆ.ಎಂದು ಕೇಳಿದಳು.

"ಇಲ್ಲ ರಾಣಿಯವರೇ, ಅಂತಹ ಸಂದೇಹಕ್ಕೆ ಎಡೆಯೇ ಇಲ್ಲ. ಅಂತಹ ಪ್ರಸಂಗ ಬಂದರೆ ನಮ್ಮ ತಾಯಿಯಂತೆ ನೀವು ರಕ್ಷಿಸುತ್ತೀರೆಂಬ ಭರವಸೆಯಿದೆ" ಎಂದು ಹೇಳಿದನು.

ಅಂದಿನ ದಿನವೇ ಬೇಕಾದ ಏರ್ಪಾಟುಗಳನ್ನು ಮಾಡಿ ಚಿಕ್ಕರಾಣಿಯವರ ಅಪೇಕ್ಷೆಯಂತೆ ಗೋಲ್ಕೊಂಡಕ್ಕೆ ಅವರನ್ನು ಕಳುಹಿಸಿಕೊಟ್ಟನು. ಅವರು ತಮ್ಮ ಜೊತೆಯಲ್ಲಿ ಬೇಕಾದಷ್ಟು ವಸ್ತ್ರಭೂಷಣಗಳನ್ನೂ ಹೊನ್ನನ್ನೂ ತೆಗೆದು ಕೊಂಡು ಹೋಗಬಹುದೆಂದು ಶಿವಾಜಿಯು ಅಪ್ಪಣೆ ಮಾಡಿದನು.

ಅರಮನೆಯು ಶಿವಾಜಿಯ ವಶವಾಯಿತು. ಭಂಡಾರದಲ್ಲಿ ಶೇಖರಿಸಿಟ್ಟಿದ್ದ ಚಿನ್ನದ ಗಟ್ಟಿಗಳು ಶಿವಾಜಿಯ ವಶವಾದವು.

ಬಿಜಾಪುರದಲ್ಲಿ ಸುಲ್ತಾನನಿಗೆ ಈ ಕಲ್ಯಾಣಕೋಟೆಯ ಸಮಾಚಾರವೆಲ್ಲವೂ ತಿಳಿದುಬಂದಿತು.

ಸುಲ್ತಾನನು ದರಬಾರಿನಲ್ಲಿ ಸಿಂಹಾಸನದ ಮೇಲೆ ಕುಳಿತಿದ್ದಾಗ ಕಲ್ಯಾಣದ ನವಾಬ್‌ನಾದ ಮೌಲಾನಾ ಅಹ್ಮದ್‌ನು ಆಪಾದಮಸ್ತಕವಾಗಿ ಫಕೀರರ ವೇಷವನ್ನು ಧರಿಸಿಕೊಂಡು ದರ್ಬಾರಿಗೆ ಬಂದನು. ಬಿಜಾಪುರದಲ್ಲಿ ಮುಸಲ್ಮಾನ್ ಫಕೀರರಿಗೆ ಬಹಳ ಗೌರವವಿದ್ದಿತು. ಯಾರೂ ತಡೆಯಲಿಲ್ಲ. ಮೌಲಾನಾ ಆಹಮದ್‌ನು ಸುಲ್ತಾನನ ಪಾದಗಳ ಮೇಲೆ ಬಿದ್ದು ಗಟ್ಟಿಯಾಗಿ ರೋಧಿಸಿದನು. ಫಕೀರನು ಕಾಲು ಮೇಲೆ ಬಿದ್ದದ್ದು ಅಪಶಕುನವೆಂದು ಸುಲ್ತಾನನು ಭಯಪಟ್ಟನು.

"ಷರ್ಹಾಷಹಾ, ನಾನು ಕಲ್ಯಾಣದ ನವಾಬ ಮೌಲಾನಾ ಅಹಮದ್. ನನ್ನ ಕೋಟೆ ಹೋಯಿತು. ಅರಮನೆ ಹೋಯಿತು. ಭಂಡಾರವು ಹೋಯಿತು. ಸೈನ್ಯವು ಚೂರುಚೂರಾಗಿ ಹೋಯಿತು. ನಾನು ನಿಜವಾಗಿಯೂ ಫಕೀರನೇ ಆಗಿದ್ದೇನೆ" ಎಂದು ದರಬಾರಿನಲ್ಲಿ ಗಟ್ಟಿಯಾಗಿ ರೋಧಿಸಿದನು.

ಸುಲ್ತಾನನು ಅವನನ್ನು ಸಂತೈಸಿ, "ನಿನಗೆ ಬೇಕಾದಷ್ಟು ಹಣ ಕೊಡಿಸುತ್ತೇನೆ. ನೀನು ಈ ರಾಜಧಾನಿಯಲ್ಲಿರು. ಸೈನ್ಯವನ್ನು ಕಳಿಸಿ ನಿನ್ನ ಕೋಟೆಯನ್ನು ಸ್ವಾಧೀನಪಡಿಸಿಕೊಡುತ್ತೇವೆ" ಎಂದು ವಚನವಿತ್ತನು.

"ಇಲ್ಲ, ಹುಜೂರ್. ಇಷ್ಟು ಅಪಮಾನವಾದ ಮೇಲೆ ನಾನು ಈ ರಾಜ್ಯದಲ್ಲಿ ಮುಖ ತೋರಿಸುವುದಿಲ್ಲ. ಮಕ್ಕಾಕ್ಕೆ ಹೋಗುತ್ತೇನೆ. ನನಗೆ ಅಪ್ಪಣೆ ಕೊಡಿರಿ. ಆದರೆ ಈ ಶಿವಾಜಿಯಿಂದ ಈ ರಾಜ್ಯಕ್ಕೆ ಕ್ಷೇಮವಿಲ್ಲ. ಗಡಿನಾಡಿನ ಒಂಬತ್ತು ಕೋಟೆಗಳೂ ಅವನ ವಶವಾಗಿವೆ. ಆದಿಲ್‌ಷಾಹಿಗೆ ಆ ಪರ್ವತ ಪ್ರಾಂತದಲ್ಲಿ ಇನ್ನಾವ ಅಧಿಕಾರವು ಇಲ್ಲ" ಎಂದು ಹೇಳಿದನು.

ಸುಲ್ತಾನನು ಅರಮನೆಯೊಳಗೆ ಹೊರಟು ಹೋದನು.

೫

ಸುಲ್ತಾನನು ತನ್ನ ಮಂತ್ರಿಗಳನ್ನೂ ಸೇನಾಧಿಪತಿಗಳನ್ನೂ ಕರೆಕಳುಹಿಸಿ ಮಂತ್ರಾಲೋಚನೆ ಮಾಡಿದನು. ಆ ಮಂತ್ರಾಲೋಚನೆಗೆ ಶಿವಾಜಿಯ ತಂದೆ ಷಾಜೀಯನ್ನೂ ಕರೆಸಿದ್ದನು.

"ಶಿವಾಜಿಯು ಕೋಟೆಯ ಮೇಲೆ ಕೋಟೆಗಳಂತೆ ವಶಪಡಿಸಿಕೊಂಡಿದ್ದಾನೆ. ಸರಕಾರಕ್ಕೆ ಬರುವ ಪೊಗದೀ ಹಣಗಳನ್ನು ಲೂಟಿ ಮಾಡಿದ್ದಾನೆ. ಸಹಸ್ರ ಸಹಸ್ರ ಸಂಖ್ಯೆಯ ಗುಡ್ಡಗಾಡು ಜನರನ್ನು ಸೇರಿಸಿಕೊಂಡು ಲೂಟಿ ದರೋಡೆಗಳನ್ನು ಮಾಡುತ್ತಿದ್ದಾನೆ. ನಮ್ಮ ದರಬಾರಿಗೆ ಪ್ರತ್ಯಕ್ಷ ಅಪಚಾರ ಮಾಡಿದ್ದಾನೆ. ಎದುರು ಬಿದ್ದಿದ್ದಾನೆ. ಇದಕ್ಕೆ ತಕ್ಕ ಶಿಕ್ಷೆ ಮಾಡದಿದ್ದರೆ ನಮ್ಮ ದರಬಾರಿನ ಗೌರವಕ್ಕೆ ಬಹಳ ಕುಂದುಕವಾಗುತ್ತದೆ. ನೀವೇನು ಹೇಳುತ್ತೀರಿ?" ಎಂದು ಸುಲ್ತಾನನು ನುಡಿದನು.

ಮಂತ್ರಿಗಳೂ ಸೇನಾಧಿಪತಿಗಳೂ ಷಾಜಿಯ ಕಡೆಗೆ ನೋಡಿದರು.

ಷಾಜಿಯು ತಾನೇ ಮೊದಲು ಮಾತನಾಡಬೇಕೆಂದು ಇವರೆಲ್ಲರೂ ಅಭಿಪ್ರಾಯ ಪಡುತ್ತಾರೆಂದು ಅರ್ಥಮಾಡಿ ಕೊಂಡನು. "ಷಹಾಷಹಾ, ನಾನು ತಮ್ಮ ದರ್ಬಾರಿನಲ್ಲಿ ಉನ್ನತ ಸ್ಥಾನದಲ್ಲಿದ್ದೇನೆ. ಅದು ತಮ್ಮ ಅನುಗ್ರಹ. ಆದರೆ ನನ್ನ ಮಗನಿಂದಲೇ ಈ ದರ್ಬಾರಿಗೆ ಅಪಚಾರವಾಗುತ್ತಿರುವುದು ನನಗೆ ಖೇದವಾಗುತ್ತದೆ. ಮತ್ತು ಕಲಂಕಪ್ರಾಯವಾಗಿದೆ. ನನ್ನ ಸಂಗಡಿಗರಾದ ಈ ಮಂತ್ರಿ ಸೇನಾಧಿಪತಿಗಳು ನನ್ನ ಮೇಲೆ ಸಂದೇಹಪಡುತ್ತಾರೆ. ಅದೂ ಸಹಜವೇ ಆಗಿವೆ. ಖಾವಂದವರಿಗೆ ನನ್ನ ಮೇಲೆ ಅಸ್ರುಹ ಬರದಿರುವುದು ನನ್ನ ಭಾಗ್ಯ. ಎಷ್ಟು ದಿನಗಳು ಹೀಗಿದ್ದೀತು? ನಾನು ತಮ್ಮ ಅಪ್ಪಣೆಯನ್ನು ಪಡೆದು ನನ್ನ ಅಧಿಕಾರ ಐಶ್ವರ್ಯಗಳನ್ನು ತೊರೆದು ಬೈರಾಗಿಯಾಗಿ ಹೋಗಬೇಕೆನ್ನುವಷ್ಟು ನನಗೆ ಬೇಸರಿಕೆಯಾಗಿದೆ.

ಆದರೆ ನಾನು ಹೊರಟುಹೋಗುವ ಮುನ್ನ ಅಂತರಂಗ ಶುದ್ಧಿಯಿಂದ ತಮ್ಮಲ್ಲಿ ಮನ ಬಿಚ್ಚಿ ಹೇಳಿ ಅಪ್ಪಣೆಯನ್ನು ಬೇಡುತ್ತೇನೆ. ಹುಜೂರ್. ನನಗೆ ಚಿಕ್ಕಂದಿನಲ್ಲಿ ಮದುವೆಯಾಯಿತು. ನಮ್ಮ ಮಾವನವರು ಮೋರೆ ದರ್ಬಾರಿನಲ್ಲಿ ಬಲುದೊಡ್ಡ ಸರದಾರರು. ನಮ್ಮ ತಂದೆ ಸಾಮಾನ್ಯ ಸರದಾರ. ಬಾಲ್ಯದಲ್ಲಿಯೇ ನನಗೆ ಮದುವೆಯಾಯಿತು. ಬುದ್ಧಿ ಬಂದಂದಿನಿಂದ ನಮ್ಮ ದಂಪತಿಗಳಲ್ಲಿ ಪ್ರೇಮವಿರಲಿಲ್ಲ. ಆ ಸಮಯದಲ್ಲಿ ನಾನು ನಮ್ಮ ಜಹಗೀರಿನಲ್ಲಿ ಇದ್ದೆ. ಆಗಲೇ ಈ ಶಿವಾಜಿಯು ಹುಟ್ಟಿದ್ದು. ಮೊಗಲರು ನಮ್ಮ ಜಹಗೀರನ್ನು ಲೂಟಿ ಮಾಡಿದರು. ನಾನು ತಲೆ ತಪ್ಪಿಸಿಕೊಂಡು ಬಂದು ತಮ್ಮ ದರಬಾರಿನಲ್ಲಿ ಸೇರಿದೆ. ಶಿವಾಜಿ ಅವನ ತಾಯಿ ಅವರು ಅನಾಥರಾಗಿ ಗುಡ್ಡಗಾಡು ಜನರಲ್ಲಿ ಸೇರಿಹೋದರು. ಮೊಗಲರು ಆ ತಾಯಿ ಮಕ್ಕಳನ್ನು ಹಿಡಿಯಬೇಕೆಂದು ಗುಡ್ಡಗಾಡುಗಳಲ್ಲೆಲ್ಲಾ ಹುಡುಕಿದರು. ಆ ತಾಯಿಮಕ್ಕಳು ವನದಿಂದ ವನಕ್ಕೆ ಬೆಟ್ಟದಿಂದ ಬೆಟ್ಟಕ್ಕೆ ಅಲೆದಾಡಿದರು. ನಾನು ಬೇರೊಂದು ವಿವಾಹ ಮಾಡಿಕೊಂಡು ಈ ರಾಜಧಾನಿಯಲ್ಲಿ ಇದ್ದೆ. ಅವರು ಹೇಗೆಯೋ ಬಂದು ಇಲ್ಲಿಗೆ ಸೇರಿದರು. ಇಲ್ಲಿ ಆ ಹುಡುಗನಿಗೆ ವಿದ್ಯೆ ಕಲಿಸಲು ಏರ್ಪಾಟು ಮಾಡಿದೆ. ಈ ದರ್ಬಾರಿನ ಮಾನ ಮರ್ಯಾದೆಗಳನ್ನು ಕಲಿಸಲು ಪ್ರಯತ್ನ ಮಾಡಿದೆ. ನನ್ನ ಪ್ರಯತ್ನವೆಲ್ಲಾ ವ್ಯರ್ಥವಾಯಿತು. ನಿರಾಶೆಗೊಂಡು ಅವರನ್ನು ಪುನಃ ಆ ಗುಡ್ಡಗಾಡಿಗೇ ಸಾಗಿಸಿಬಿಟ್ಟೆ. ಅಲ್ಲಿ ಒಬ್ಬ ಬ್ರಾಹ್ಮಣ ಉಪಾಧ್ಯಾಯನು ಶಿಕ್ಷಣ ಕೊಡುತ್ತಿದ್ದ. ಅವನೂ ಕೂಡ ಸತ್ತುಹೋಗಿದ್ದಾನೆ. ಅವನು ಈ ಹುಡುಗನ ಅವಿನಯ ದುಷ್ಟತನಗಳಿಗಾಗಿ ನೊಂದುಕೊಂಡು ಬರೆದಿರುವ ಪತ್ರಗಳು ನನ್ನಲ್ಲಿ ಬೇಕಾದಷ್ಟಿವೆ. ಅದೇ ಕೊರಗಿನಲ್ಲಿ ಆ ಬ್ರಾಹ್ಮಣನೂ ಸತ್ತುಹೋದ. ಈ ಶಿವಾಜಿಯು ಹುಟ್ಟುತ್ತಲೇ ನನ್ನನ್ನು ಆಗಲಿದ್ದಾನೆ. ಆವನ ಮೇಲಿನ ಅಭಿಮಾನವು ನನಗೆ ಲವಲೇಶವೂ ಇಲ್ಲ. ಸುಲ್ತಾನರವರು ಅವನನ್ನು ಹಿಡಿತರಿಸಿ ಬಂಧನದಲ್ಲಿಡಿಸಬಹುದು. ಶೂಲಕ್ಕೇರಿಸಬಹುದು. ಅವನು ರಾಜ್ಯಾಂಗವನ್ನೇ ಅರಿಯದ ಮೂಢ. ಹಳ್ಳಿಯ ಗಮಾರ್ ಬಿಜಾಪುರದ ದರ್ಬಾರಿನೊಡನೆ ಸೆಣಸಾಡಲು ಅವನಿಗೆ ಶಕ್ತಿಯೆಲ್ಲಿ ಬರಬೇಕು?" ಎಂದು ಹೇಳಿದನು.

ಸುಲ್ತಾನನು ತಲೆದೂಗಿದನು.

ಇನ್ನುಳಿದ ಸರದಾರರು "ಶಿವಾಜಿಯು ಇನ್ನೂ ಇಪ್ಪತ್ತು ಇಪ್ಪತ್ತೆರಡು ವಯಸ್ಸಿನ ಹುಡುಗ. ವಿದ್ಯಾಬುದ್ಧಿಗಳಿಲ್ಲ. ಅವನು ದೊಡ್ಡ ಕಳ್ಳರ ಗುಂಪಿನಲ್ಲಿ ಸೇರಿಕೊಂಡಿರುವಂತೆ ಕಾಣುತ್ತದೆ. ಅವನನ್ನು ದರ್ಬಾರಿಗೆ ಕರೆತರಿಸಬೇಕು. ವಿಚಾರಣೆ ನಡೆಸಬೇಕು. ನಿರಪರಾಧಿಯೆಂದು ಕಂಡರೆ ನಮ್ಮ ಸೈನ್ಯದಲ್ಲಿ ಹುದ್ದೆಯನ್ನು ಕೊಡಬಹುದು. ಅಪರಾಧವು ಸಾಬೀತಾದರೆ ಕಾರಾಗೃಹದಲ್ಲಿಡಬಹುದು. ಶೂಲಕ್ಕೇರಿಸುವಂಥಾ ಅಪರಾಧವೇನೂ ಕಾಣುವುದಿಲ್ಲ. ಪುರಂಧರ, ಕಲ್ಯಾಣ ಕೋಟೆಗಳಿಂದ ಓಡಿಬಂದಿರುವ ನಮ್ಮ ಸೈನಿಕರು ಶಿವಾಜಿಯ ಗುಂಪಿನವರ ಕೈಗೆ ಸಿಕ್ಕಿದಾಗಲೂ ಶಿವಾಜಿಯು ಎಷ್ಟೋ ಮರ್ಯಾದೆಯಿಂದ ನಡೆದು ಕೊಂಡಿದ್ದಾನೆಂದು ಹೊಗಳುತ್ತಾರೆ. ಕಲ್ಯಾಣದ ನವಾಬ ಮೌಲಾನಾ ಅಹಮದ್‌ರು ಗೋಳಿಟ್ಟದ್ದು ನಿಜ. ಆದರೆ ಅವರ ಸೊಸೆ ಮೆಹರುನ್ನೀಸಾಬೇಗಂರವರನ್ನು ಅತ್ಯಂತ ಗೌರವದಿಂದ ಗೋಲ್ಕಂಡಕ್ಕೆ ಕಳುಹಿಸಿಕೊಟ್ಟನೆಂದು ಗುಪ್ತ ಚಾರರು ಹೇಳುತ್ತಾರೆ. ಸ್ತ್ರೀಯರನ್ನೆಲ್ಲಾ ಮರ್ಯಾದೆಯಿಂದ ಅವರವರ ತವರುಮನೆಗಳಿಗೆ ಕಳುಹಿಸಿದ್ದಾನೆಂದು ಗುಪ್ತಚಾರರು ವರದಿಮಾಡುತ್ತಾರೆ. ಹುಜೂರ್.ಮನಸ್ಸಿಗೆ ಕೋಪತಂದುಕೊಳ್ಳಬಾರದು. ಆ ಗಡಿನಾಡನ್ನು ನಮ್ಮ ದರ್ಬಾರಿನವರು ಅಲಕ್ಷ್ಯಮಾಡಿದ್ದಾರೆ. ಫೌಜುದಾರರೂ ನವಾಬರೂಖಿಲ್ಲೇದಾರರೂ ಎಂದು ದೊಡ್ಡ ಹೆಸರಿಟ್ಟುಕೊಂಡು ಗಡಿಯನ್ನು ರಕ್ಷಣೆಮಾಡಲಾರದ ಹೇಡಿಗಳು ಅಲ್ಲಿದ್ದವರು. ಅವರಿಗೆ ತಕ್ಕ ಪ್ರಾಯಶ್ಚಿತ್ತವಾಯಿತು. ಶಿವಾಜಿಯು ಎರಡು ಮೂರು ವರ್ಷಗಳಿಂದಲೂ, ಆಯಾ ಕೋಟೆಗಳಿಂದ ಸರಿಯಾಗಿ ಪೊಗದಿ ಕಳುಹಿಸುತ್ತಿದ್ದಾನೆ. ಮೊಗಲ್ ಸೈನಿಕರು ಬಂದು ಹಾವಳಿ ಮಾಡಿದಾಗ ಅವರನ್ನು ಎದುರಿಸಿ ಓಡಿಸಿದ ವೀರನೊಬ್ಬನೂ ಇಲ್ಲ. ದೆ ಗುಡ್ಡಗಾಡಿನ ಜನ ಒರಟು ಜನ. ಅವರಿಗೆ ಹೊಟ್ಟೆಗೆ ಇಲ್ಲ. ಮತ್ತೇನು ಮಾಡುತ್ತಾರೆ. ಅಭದ್ರವಾದ ನಮ್ಮ ಕೋಟೆಯನ್ನೇ ಲೂಟಿ ಮಾಡಿದ್ದಾರೆ. ಶಿವಾಜಿಯನ್ನು ಕರೆತರಿಸಿ, ವಿಚಾರಣೆ ಮಾಡಿಸಬೇಕು. ಸಮರ್ಥರಾದ ಫೌಜುದಾರರನ್ನು ಆ ಕೋಟೆಗಳಲ್ಲಿ ನೇಮಿಸಬೇಕು. ಈ ವಂಶಪಾರಂಪರ್ಯವಾದ ಹಕ್ಕನ್ನು ವಜಾಮಾಡಬೇಕು" ಎಂದು ಹೇಳಿದರು.

ಸುಲ್ತಾನನು "ನಿಮ್ಮ ಸಲಹೆಯು ಬಹಳ ಸರಿಯಾಗಿದೆ. ಶಿವಾಜಿಗೆ ಪತ್ರ ಬರೆದು ಬುದ್ಧಿವಂತನಾದ ಫೌಜುದಾರನೊಬ್ಬನನ್ನು ಕಳುಸಿಕೊಡಿ. ಶಿವಾಜಿಯನ್ನು ಮರ್ಯಾದೆಯಿಂದ ಕರೆತರುವಂತೆ ಹೇಳಿಕಳುಹಿಸಿರಿ. ಅವನು ದರ್ಬಾರಿಗೆ ವಿರುದ್ಧವಾಗಿ ನಡೆದುಕೊಂಡಿದ್ದರೂ ಕಾಗದಪತ್ರಗಳನ್ನು ವಿನಯ ಪೂರ್ವಕ ಬರೆಯುತ್ತಾನೆ. ಪೋಗದೀ ಹಣ ಕಳುಹಿಸುತ್ತಾನೆ. ಕರಾರುವಾಕ್ಕಾ ಮನುಷ್ಯನಂತೆ ನಡೆದುಕೊಳ್ಳುತ್ತಾನೆ. ಅವನೇ ಎದುರಿಗೆ ಬಂದು ವಿವರಿಸಿ ದಲ್ಲದೆ ಈ ಅಭೇದ್ಯ ಸಮಸ್ಯೆಯು ಬಗೆಹರಿಯುವಂತಿಲ್ಲ" ಎಂದು ಹೇಳಿದನು.

ಶಿವಾಜಿಗೆ ದರ್ಬಾರಿನಿಂದ ಪತ್ರಿಕೆಯನ್ನು ತೆಗೆದುಕೊಂಡು ಅಬ್ದುಲ್ ಕಲಾಮಿಯು ಪುರಂಧರಗಡಕ್ಕೆ ಪ್ರಯಾಣಮಾಡಿದನು.

ಪುರಂಧರಗಢದಲ್ಲಿ ಬಿಜಾಪುರದಿಂದ ರಾಯಭಾರಿಯು ಬಂದಿದ್ದಾನೆಂದು ಶಿವಾಜಿಗೆ ತಿಳಿಯಿತು. ಶಿವಾಜಿಯು ಫೌಜುದಾರ್ ಅಬ್ದುಲ್ ಕಲಾಮಿಯನ್ನು ಮರ್ಯಾದೆಯಿಂದ ಅರಮನೆಗೆ ಕರೆಸಿಕೊಂಡನು. ಅಬ್ದುಲ್ ಕಲಾಮಿಯು ಶಿವಾಜಿಗೆ ಸುಲ್ತಾನರ ಪತ್ರವನ್ನು ಕೊಟ್ಟನು.

ಮಾತುಕತೆಗಳು ಬಹಳಗಾಂಭೀರ್ಯದಿಂದ ನಡೆದವು.

ಕಲಾಮಿಯು "ಶಿವಾಜಿಯವರೇ. ಸುಲ್ತಾನರು ನಿಮ್ಮ ವಿಚಾರವಾಗಿ ನಾನಾವಿಧವಾದ ವಾರ್ತೆಗಳನ್ನು ಕೇಳಿದ್ದಾರೆ. ಈ ದುರ್ಗಗಳನ್ನೆಲ್ಲಾ ನೀವು ಹಿಡಿದುಕೊಂಡುದು ಅವರ ಮನಸ್ಸಿಗೆ ಖೇದಕರವಾಗಿತ್ತು. ಆದರೆ ದರಬಾರಿನ ದೊಡ್ಡ ದೊಡ್ಡ ಸರದಾರರೆಲ್ಲರೂ ನಿಮ್ಮ ಕಡೆಗೇ ಶಿಫಾರ್ಸುಮಾಡುತ್ತಾರೆ. ಪೋಗದಿಯ ಹಣ ಕರಾರುವಾಕಾಗಿ ಬರುತ್ತಿರುವುದು ಸುಲ್ತಾನರಿಗೆ ಸಮಾಧಾನ ಕರವಾಗಿದೆ. ನಿಮ್ಮನ್ನು ಕರೆತರಬೇಕೆಂದು ಅಪ್ಪಣೆಮಾಡಿ ನನ್ನನ್ನು ಕಳುಹಿ ಸಿದ್ದಾರೆ. ನೀವು ನನ್ನ ಜೊತೆಯಲ್ಲಿಯೇ ಹೊರಡಬೇಕು. ಬಿಜಾಪುರದ ದರಬಾರಿನಲ್ಲಿ ನಿಮ್ಮ ತಂದೆಯವರಂತೇ ನಿಮಗೂ ಉನ್ನತಾಧಿಕಾರವೂ ಮಾನ ಮನ್ನಣೆಗಳೂ ದೊರೆಯುತ್ತವೆ. ನಿಮ್ಮ ಅದೃಷ್ಟ ಖುಲಾಯಿಸಿದೆ" ಎಂದು ಹೇಳಿದನು.

ಶಿವಾಜಿಯು ಸುಲ್ತಾನರ ಪತ್ರವನ್ನು ಅತ್ಯಂತ ಗೌರವದಿಂದ ಸ್ವೀಕರಿಸಿ ದನು. ಯಾವ ಉತ್ತರವನ್ನೂ ಕೊಡಲಿಲ್ಲ.

ಅಬ್ದುಲ್ ಕಲಾಂಸಾಹೇಬರಿಗೆ ಅಸಹ್ಯ್ಯವಸ್ತ್ರಾಭರಣಗಳನ್ನು ಉಡು ಗೊರೆಯಾಗಿ ಕೊಟ್ಟು ಗೌರವಿಸಿದನು. ಕಲಾಮಿಯ ಜೊತೆಯಲ್ಲಿ ಬಂದಿದ್ದ ವರಿಗೆಲ್ಲಾ ವಸ್ತ್ರಗಳನ್ನೂ ಹೊನ್ನುಗಳನ್ನೂ ಬಹುಮಾನವಾಗಿ ಕೊಟ್ಟನು.

"ನೋಡಿ, ಫೌಜ್‌ದಾರ್ ಕಲಾಮಿ ಸಾಹೇಬರವರೇ. ನಮ್ಮ ತಾಯಿ ಯವರು ಪುಣೆಯಲ್ಲಿ ಬಹಳ ಅಸ್ವಸ್ಥರಾಗಿದ್ದಾರೆ. ಅಪರಿಂದ ನನಗೆ ಕರೆ ಬಂದಿದೆ. ಚಿಕ್ಕಂದಿನಿಂದಲೂ ಕಷ್ಟಪಟ್ಟ ನನ್ನ ತಾಯಿಗೆ ಕಡೆಗಾಲವು ಬಂದಿರು ವಂತೆ ಕಾಣುತ್ತದೆ. ನನ್ನ ತಂದೆ ಷಾಜಿಯವರು ಅವರನ್ನು ಪರಿತ್ಯಜಿಸಿ ಅಂದಿ ನಿಂದಲೂ ಕೊರಗುವಂತೆ ಮಾಡಿದ್ದಾರೆ. ಈ ಕಡೆಗಾಲದಲ್ಲಿ ನಾನೂ ಅವರನ್ನು ಅಸಡ್ಡೆಮಾಡಿ ಬಿಜಾಪುರದ ದರ್ಬಾರಿನ ಅಧಿಕಾರದ ಆಸೆಯಿಂದ ಹೊರಟು ಹೋದರೆ ಅವರು ದುಃಖಿಸುತ್ತಾ ಸಾಯುತ್ತಾರೆ. ಒಂದು ಬಾರಿ ಅವರ ದರ್ಶನಮಾಡಿ ಬಂದು ಬಿಡುತ್ತೇನೆ. ನೀವು ಮುಂದೆ ಹೊರಡಿರಿ. ನಾನು ಹಿಂದೆಯೇ ಬಂದೆನೆಂದು ಭಾವಿಸಿರಿ" ಎಂದು ಹೇಳಿದನು.

ಕಲಾಮಿಯು ನಿರಾಶನಾದನು.

"ಶಿವಾಜಿಯವರೇ. ನೀವು ಹೇಳಿದ್ದು ಯುಕ್ತವಾಗಿಯೇ ಇದೆ. ಬಿಜಾ ಪುರದ ದರ್ಬಾರಿನ ಸ್ಥಿತಿ ನಿಮಗೆ ಗೊತ್ತೇ ಇರಬಹುದು.ನಾನೂ ನೀವೂ ಒಟ್ಟಿಗೆ ಹೋದರೆ ಇಬ್ಬರಿಗೂ ಒಳಿತಾದೀತು. ನಾನೊಬ್ಬನೇ ಹೋದರೆ ನನಗೂ ಅಪಮಾನ. ನಿಮಗೂ ಕೆಡಕಾಗಬಹುದು. ಆದರೆ ತಾಯಿಯವರ ಅಂತ್ಯ ಕಾಲವೆಂದರೆ ನೀವು ಹೊರಟು ಹೋಗಬಹುದು. ನೀವು ಪುಣೆಗೆ ಹೋಗಿ ತಾಯಿಯವರಿಗೆ ಬಿಜಾಪುರದಿಂದ ಬಂದಿರುವ ಆಹ್ವಾನವನ್ನು ತಿಳಿಸಿರಿ. ಅಲ್ಲಿ ನಿಮಗೆ ಬಹಳ ಗೌರವ ದೊರೆಯುವುದೆಂದು ಹೇಳಿ ಅವರ ಮನಸ್ಸಿನ ಕಷ್ಟ ವೆಲ್ಲವೂ ಪರಿಹಾರವಾದಂತಾಗುತ್ತದೆ. ನೀವು ಇಲ್ಲಿಗೆ ಹಿಂತಿರುಗಿ ಬರುತ್ತಲೇ ಇಬ್ಬರೂ ಬಿಜಾಪುರಕ್ಕೆ ಹೋಗೋಣ" ಎಂದು ಹೇಳಿದನು.

ಶಿವಾಜಿಯು ಯಾವ ಉತ್ತರವನ್ನು ಕೊಡಲಿಲ್ಲ. ಫೌಜುದಾರ ಕಲಾಮಿಯು ಬಿಡಾರಕ್ಕೆ ತೆರಳಿದನು.

ಶಿವಾಜಿಗೆ ಸಂಶಯವು ಹುಟ್ಟಿತು. ಕಲಾಮಿಯ ಮನಸ್ಸಿನಲ್ಲಿ ಸಂಶಯ ವಿದ್ದೇ ಇದ್ದಿತು. ಶಿವಾಜಿಯು ಕಲಾಮಿಯ ಜೊತೆಯಲ್ಲಿ ಬಂದಿದ್ದ ಮುತ್ಸದ್ದಿ ರಾಮಚಂದ್ರ ಭಿಡೆಯನ್ನು ಅಂತರಂಗವಾಗಿ ಕರೆಸಿಕೊಂಡನು.

ಶಿವಾಜಿಯು ಭಿಡೆಯನ್ನು ಕುರಿತು "ನೀನು ಬ್ರಾಹ್ಮಣ, ಏನೋ ಮುಸಲ್ಮಾನರ ಸೇವೆಯಲ್ಲಿದ್ದೀ. ಅದು ನಿನುಗೆ ವಂಶಪಾರಂಪರ್ಯವಾಗಿ ಬಂದ ಶಾಪ. ಆದರೂ ಧರ್ಮವನ್ನು ಬಿಡಬಾರದು. ನೀನು ನಿಜವನ್ನು ಹೇಳು. ಬಿಜಾಪುರದಲ್ಲಿ ಏನು ನಡೆದಿದೆ ಹೇಳು" ಎಂದು ಕೇಳಿದನು.

ಭಿಡೆಯು ಭಯಪಡುತ್ತಾ "ಸ್ವಾಮಿ ಮಹರಾಜರೇ. ನನ್ನ ಸಂಸಾರವೆಲ್ಲಾ ಬಿಜಾಪುರದಲ್ಲಿದೆ. ನನ್ನ ಮೇಲೆ ಸಂದೇಹ ಬಂದರೆ ತಲೆ ಬೋಳಿಸಿ ಜಾತಿ ಕೆಡಿಸಿ, ಮುಸಲ್ಮಾನ್ ಮತಕ್ಕೆ ಸೇರಿಸಿಬಿಡುತ್ತಾರೆ. ಕುಲಗೋತ್ರವೆಲ್ಲಾ ಹೋಗಿಬಿಡುತ್ತದೆ. ಆದರೂ ಒಂದು ಮಾತು ಹೇಳುತ್ತೇನೆ. ನೀವು ಈಗ ಬಿಜಾಪುರಕ್ಕೆ ಹೋದರೆ ಒಳಿತಾಗುವುದಿಲ್ಲ. ಮಹಾರಾಜರೇ, ನಿನುಗಲ್ಲಿ ಭರವಸೆಯಿಲ್ಲ" ಎಂದು ಹೇಳಿದನು.

ಮೂರನೆಯ ದಿನ ಶಿವಾಜಿಯು ಫೌಜುದಾರನನ್ನು ಕರೆಸಿದನು. ಮರ್‍ಯಾದೆಯಿಂದ ಅವನಿಗೆ ತಿಳಿಸಿದನು. "ಫೌಜುದಾರ್ ಸಾಹೇಬರೇ. ನೀವು ಹೇಳಿದ್ದೆಲ್ಲಾ ಒಳ್ಳೆತಾಗಿಯೇ ಇದೆ. ಸುಲ್ತಾನರ ಪತ್ರವು ಹೆಚ್ಚು ಆಶಾದಾಯಕವಾಗಿದೆ. ಆದರೆ ನಾವಿಬ್ಬರೂ ಸೇರಿ ಗಂಡಾಂತರಕ್ಕೆ ಸಿಕ್ಕಬಾರದು. ಈ ಕೋಟೆ ನನ್ನದಲ್ಲ. ಬಿಜಾಪುರದ ದರ್ಬಾರಿಗೆ ಸೇರಿದ್ದು. ನಾನು ಈ ಕೋಟೆಯನ್ನು ಬಿಟ್ಟು ಹೋದರೆ ಸಮೀಪದಲ್ಲಿರುವ ಮೊಗಲ್ ಸೇನಾಧಿಪತಿಯು ಈ ಕೋಟೆಯನ್ನು ಹಿಡಿದುಬಿಡುತ್ತಾನೆ. ನಾವಿಬ್ಬರೂ ಬಿಜಾಪುರವನ್ನು ಸೇರುವುದರೊಳಗೆ ಈ ಸಮಾಚಾರ ದರಬಾರಿಗೆ ವರದಿಯಾಗುತ್ತದೆ. ನಮ್ಮಿಬ್ಬರ ಮೇಲೆಯೂ ತುಫಾನ್ ಬರುತ್ತದೆ. ನೀವು ಬಿಜಾಪುರಕ್ಕೆ ಹೋಗಿರಿ. ಬಿಜಾಪುರದಿಂದ ಯಾರಾದರೂ ದೊಡ್ಡ ಸೇನಾಧಿಪತಿಗಳು ಬಂದು ಈ ಕೋಟೆಗಳನ್ನು ವಹಿಸಿಕೊಳ್ಳಲಿ. ಆ ಮೇಲೆ ನಾನು ಸುಲ್ತಾನರ ಸೇವೆಗೆ ಸಿದ್ಧನಾಗಿ ಬರುತ್ತೇನೆ. ಹೆಚ್ಚು ಕಡಿಮೆ ಈ ಗಡಿನಾಡೆಲ್ಲವೂ ನನ್ನ ರಕ್ಷಣೆಯಲ್ಲಿದ್ದಂತಿದೆ. ಇದನ್ನು ಅನಾಯಕವಾಗಿ ಬಿಟ್ಟು ಬರುವಂತಿಲ್ಲ" ಎಂದು ಹೇಳಿದನು.

ಕಲಾಮಿಯು "ಶಿವಾಜಿಯವರೇ, ಸುಲ್ತಾನರ ದರ್ಬಾರಿಗೆ ಹೋಗುವ ಮಾತು ಖಚಿತವಾಗಿರಬೇಕು. ಅಡ್ಡಗೋಡೆಯ ಮೇಲಿನ ದೀಪದಂತಿರಬಾರದು. ಬರುವಿರಾದರೆ ಸುಲ್ತಾನರ ಆಜ್ಞೆಯಂತೆ ನನ್ನೊಡನೆ ಬನ್ನಿ. ಬರುವುದಿಲ್ಲವೆಂದರೆ ಅದನ್ನೇ ಖಡಾಖಂಡಿತವಾಗಿ ಹೇಳಿರಿ. ತಮ್ಮನ್ನು ಬಲಾತ್ಕಾರ

ಮಾಡುವ ಅಧಿಕಾರವಾಗಲೀ ಸಾಮರ್ಥ್ಯವಾಗಲೀ ನನಗಿಲ್ಲ. ನಾನು ರಾಯಭಾರಿಯಾಗಿ ಬಂದಿದ್ದೇನೆ. ಅಷ್ಟೇ" ಎಂದ.

"ಈಗ ಸುಲ್ತಾನರ ಸಂಮುಖಕ್ಕೆ ಬರುವುದಕ್ಕಾಗುವುದಿಲ್ಲ."

ಹೀಗೆ ಶಿವಾಜಿಯ ಉತ್ತರವು ಬಂದಿತು.

ಫೌಜುದಾರನು ಗಂಭೀರವಾಗಿ ಬಿಜಾಪುರಕ್ಕೆ ಹಿಂತಿರುಗಿ ಹೋದನು.

ಬಿಜಾಪುರದ ಸುಲ್ತಾನರಲ್ಲಿ ನಡೆದ ಮಾತು ಕಥೆಗಳನ್ನೆಲ್ಲಾ ಅಕ್ಷರಶಃ ನಿವೇದಿಸಿದನು.

ಸುಲ್ತಾನನು "ಕಲಾಮಿ.ನಿನ್ನ ಅಭಿಪ್ರಾಯವೇನು?" ಎಂದು ಕೇಳಿದನು.

ಕಲಾಮಿಯು "ಖಾವಂದರವರೇ. ಆ ಮನುಷ್ಯನ ಮನುಸ್ಸನ್ನು ಕಂಡು ಹಿಡಿಯಲು ಯಾರಿಂದಲೂ ಸಾಧ್ಯವಿಲ್ಲ. ಮಾತಿನಲ್ಲಿ ನಯ. ನಡತೆಯಲ್ಲಿ ಮರ್‍ಯಾದೆ. ಕೈಯಲ್ಲಿ ಔದಾರ್ಯ. ಮನಸ್ಸಿನಲ್ಲಿ ಮತ್ಸರ. ಇದು ನನಗೆ ಕಂಡು ಬಂದ ಗುಣಗಳು. ನಾನು ಪುರಂಧರದಲ್ಲಿ ಮೂರು ರಾತ್ರಿಗಳನ್ನು ಕಳೆದೆ. ಆ ಕೋಟೆಯಲ್ಲಿ ಒಬ್ಬ ಮುಸಲ್ಮಾನನೂ ಇಲ್ಲ. ಇದ್ದ ಅರಮನೆಯ ಮಸೀದಿಯನ್ನು ಮುಚ್ಚಿಬಿಟ್ಟಿದ್ದಾರೆ. ಅವನನ್ನು ಆ ಪ್ರಾಂತವೆಲ್ಲೆಲ್ಲಾ ರಾಜ-ರಾಜ ಎಂದು ಕರೆಯುತ್ತಾರೆ. ಹನ್ನೆರಡು ಸಾವಿರ ಕುದುರೆಯ ಬಲವಿದೆ, ಇಪ್ಪತ್ತು ಸಹಸ್ರ ದಂಡಾಳುಗಳಿದ್ದಾರೆ. ಯಥೇಚ್ಛವಾಗಿ ಶಸ್ತ್ರಾಸ್ತ್ರಗಳಿವೆ. ಭಂಡಾರವು ಹೊನ್ನಿನಿಂದ ತುಂಬಿದೆ. ಅವನು ದಡ್ಡನಲ್ಲ. ಅವಿವೇಕಿಯಲ್ಲ. ಅವನಿಗೆ ಗಡಿನಾಡಿನ ಪ್ರಭುವಾಗುವ ಮಹಾತ್ಮಾಕಾಂಕ್ಷೆಯಿದೆ. ಅಷ್ಟೇ ಅಲ್ಲ. ನಮಗೂ ಅವನಿಗೂ ಬಹುದೂರವಿದೆ. ಮೊಗಲ್ ಸರ್ವಾಧಿಕಾರಿಯು ಸಮೀಪದಲ್ಲಿಯೇ ಇದ್ದಾನೆ. ಅವನು ಈ ಹಿಂದೂ ದಳಪತಿಯನ್ನು ಸಹಿಸಿರುವುದು ಹೇಗೆ ? ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಶಿವಾಜಿಗೂ ಮೊಗಲ್ ಸರ್ವಾಧಿಕಾರಿಗೂ ಒಪ್ಪಂದವಾಗಿರುವಂತಿದೆ. ಏನು ಮಾಡಿದರೂ ಆ ಶಿವಾಜಿಯು ಬಿಜಾಪುರಕ್ಕೆ ಬರುವುದಿಲ್ಲ. ಅವನ ತಂದೆ ಷಾಜಿಯವರಿಗೆ ಸಮಾನವಾದ ಅಧಿಕಾರ ಗೌರವಗಳನ್ನು ಅವನಿಗೆ ಕೊಟ್ಟರೂ ಅವನಿಲ್ಲಿಗೆ ಬರುವುದಿಲ್ಲ. ಇಲ್ಲಿ ಅವನು ಅಸ್ವತಂತ್ರ. ಅಲ್ಲಿ ಅವನು ಸ್ವತಂತ್ರ. ನನಗೆ ತಿಳಿದಿದ್ದನ್ನೆಲ್ಲಾ ಅರಿಕೆ ಮಾಡಿದ್ದೇನೆ. ಮಹಾ ಪ್ರಭುಗಳು ಚಿತ್ತಕ್ಕೆ ಬಂದಂತೆ ಮಾಡಬಹುದು" ಎಂದು ಹೇಳಿದನು.

ಸುಲ್ತಾನನು ರೊಚ್ಚಿಗೆದ್ದನು. ಕರ್ತವ್ಯ ಮೂಢನಾದನು. ಸೇನಾಧಿಪತಿಗಳನ್ನು ಒಬ್ಬೊಬ್ಬರನ್ನಾಗಿ ಕರೆಸಿ ಆಲೋಚನೆಮಾಡಿದನು.

"ಈಗ ಗಡಿನಾಡಿನಲ್ಲಿ ಸೈನ್ಯವನ್ನು ತೆಗೆದುಕೊಂಡು ಹೋಗುವುದು ಸುಭದ್ರವಲ್ಲ,ಕ್ಷೇಮವಲ್ಲ. ಮೊಗಲ್ ಸರ್ವಾಧಿಕಾರಿಯಾದ ಮುರಾದ್‌ಭಕ್ಷನು ನಮ್ಮ ಮೇಲೆ ದಂಡೆತ್ತಿ ಬರಲು ಸಿದ್ಧನಾಗಿದ್ದಾನೆ. ನಾವು ಮೊಗಲರೊಡನೆ ಯುದ್ಧಮಾಡಲು ಹಿಂಜರಿಯುವುದಿಲ್ಲ. ಗಡಿನಾಡಿನ ಯುದ್ಧವೆಂದರೆ ಸಾಮಾನ್ಯವಲ್ಲ. ಆದರೆ ಬ್ರಹ್ಮಾಂಡ ಸೈನ್ಯಗಳು ಹೊರಡಬೇಕು. ಹುಜೂರಿನ ಅಪ್ಪಣೆಯಂತೆ ನಡೆಯುತ್ತೇವೆ" ಎಂದು ಹೇಳಿದರು.

ಸುಲ್ತಾನನು ಖಿನ್ನನಾಗಿ ಚಿಂತಾಮಗ್ನನಾದನು. ಪುನಃ ಅವನಿಗೆ ಪದೇಪದೇ ಮುಚ್ಛಾ೯ವಸ್ಥೆಯು ಬರಲಾರಂಭವಾಯಿತು.

ಮಂತ್ರವಾದಿ ಹಷೀಂ ಉಲೂವಿಯು ಬಂದು ಸುಲ್ತಾನರಿಗೆ ಉಪದೇಶ ಮಾಡಿದನು

"ಸುಲ್ತಾನರೇ. ಈಗ ಮೊಗಲರೊಡನೆ ವಿರೋಧವು ಒಳ್ಳೆಯದಲ್ಲ. ನೀವು ಅವನೊಡನೆ ಯುದ್ಧಕ್ಕೆ ಹೋದರೆ ನಿಮಗೆ ಗಡಿನಾಡಿನಲ್ಲಿ ಜಯವಾದರೂ ಡೆಲ್ಲಿಯವರೆಗೆ ಜಯದ ಮೇಲೆ ಜಯವನ್ನು ಹೊಂದುವುದು ದುರ್ಲಭ. ಗಡಿನಾಡಿಗೂ ಡೆಲ್ಲಿಗೂ ಬಲುದೂರ. ನೀ ವು ಸೋತು ಹೋದರೆ ಆದಿಲ್‌ಷಾಹಿಯೇ ಮುಳುಗಿ ಹೋಗುತ್ತದೆ. ನಿಮಗೆ ಇದು ಒಳ್ಳೆಯ ಕಾಲವಲ್ಲ. ಯುದ್ಧವೇಬೇಡ. ಏನೇ ಆಗಲಿ, ಡೆಲ್ಲಿಯ ಬಾದಷಹರೊಂದಿಗೆ ವಿರೋಧವು ಸರ್ವಥಾಬೇಡ"

ಸುಲ್ತಾನನು ಯುದ್ಧದ ಆಸೆಯನ್ನು ಪೂರ್ಣವಾಗಿ ಪರಿತ್ಯಜಿಸಿದನು. ಈ ಸಂದರ್ಭದಲ್ಲಿ ದರಬಾರಿನಲ್ಲಿ ಮತ್ತೊಂದು ಅವಾಂತರವೆದ್ದಿತು. "ಟರ್ಕಿಯವರು, ಅಬಿಸೀನಿಯನ್ನರು, ಆರಬ್ಬರು ದೊಡ್ಡ ಸೇನಾಧಿಪತಿಗಳಿದ್ದಾರೆ. ಇಷ್ಟೆಲ್ಲಾ ಇದ್ದು ಶಿವಾಜಿಯನ್ನು ಕರೆಸಲಾಗದಿದ್ದರ ದರ್ಬಾರಿಗೆ ಆಗೌರವ" ವೆಂದು ಆ ದೊಡ್ಡ ಸೇನಾಧಿಪತಿಗಳೆಲ್ಲಾ ಸುಲ್ತಾನರಿಗೆ ಹೇಳಿದರು. "ಏನಾದರೊಂದು ಉಪಾಯವನ್ನು ಮಾಡಬೇಕು" ಎಂಬ ನಿರ್ಧಾರಕ್ಕೆ ಬಂದರು. ಆಗ "ಷಾಜಿಯವರನ್ನು ಕರೆಸಿ ನಿರ್ಬಂಧದಿಂದ ಹೇಳಬೇಕು. ದರ್ಬಾರಿಗೆ ವಿರುದ್ಧಾಚಾರಣೆ ಮಾಡಿರುವ ಮಗನನ್ನು ಅವರು ಕರೆಸಿಕೊಡಬೇಕು. ಅಲ್ಲಿ ಮಗನು

ಸರ್ಕಾರಕ್ಕೆ ದ್ರೋಹ ಮಾಡುತ್ತಿರುವುದು, ಇಲ್ಲಿ ತಂದೆಯು ಮಹೋನ್ನತ ಪದವಿಯಲ್ಲಿರುವುದು ಇದನ್ನು ನೋಡಿ ಇಡೀ ಪ್ರಪಂಚದಲ್ಲಿರುವ ಮುಸಲ್ಮಾನ ಜನಾಂಗವೆಲ್ಲವೂ ನಗುತ್ತದೆ. ಅಪಹಾಸ್ಯ ಮಾಡುತ್ತದೆ. ಹಿಂದುಗಳಿಂದ ಇಂಥಾ ಅಪಮಾನವನ್ನು ಅನುಭವಿಸುತ್ತಾ ನಾವು ಈ ದರಬಾರಿನಲ್ಲಿರುವುದಿಲ್ಲ" ವೆಂದು ಹೇಳಿದರು.

ಸುಲ್ತಾನನಿಗೆ ಆ ಮಾತುಗಳು ರುಚಿಕರವಾಗಿದ್ದವು. ಬಿಸಿ ಹತ್ತಿತು. ಸುಲ್ತಾನನು ಷಾಜಿಯನ್ನು ದರಬಾರಿಗೆ ಬರುವಂತೆ ಹೇಳಿ ಕಳಿಸಿದನು.

ಷಾಜಿಯು ಸಂದರ್ಭಗಳನ್ನೆಲ್ಲಾ ಚೆನ್ನಾಗಿ ಅರಿತುಕೊಂಡಿದ್ದನು ಅವನು ಧೈರ್ಯದಿಂದ ಬಂದು ದರಬಾರಿನಲ್ಲಿ ಪದ್ಧತಿಯ ಪ್ರಕಾರ ಮುಜುರೆ ಮಾಡಿ ಸುಲ್ತಾನರ ಆಪ್ಪಣೆಯಂತೆ ಆಸನದಲ್ಲಿ ಕುಳಿತುಕೊಂಡನು.

ಸುಲ್ತಾನನು ಫೌಜುದಾರ್ ಅಬ್ದುಲ್ ಕಲಾಮಿಯನ್ನು ಕರೆದು "ಪುರಂಧರದ ಕೋಟೆಯಲ್ಲಿ ನಡೆದ ವಿದ್ಯಮಾನಗಳನ್ನೆಲ್ಲಾ ಷಾಜಿಯವರಿಗೆ ಹೇಳು" ಎಂದು ಅಪ್ಪಣೆ ಮಾಡಿದನು.

ಕಲಾಮಿಯು "ಷಾಜಿಯವರೇ. ಶಿವಾಜಿಯನ್ನು ದರಬಾರಿಗೆ ಮರ್ಯಾದೆ ಯಿಂದ ಕರೆತರಬೇಕೆಂದು ಸುಲ್ತಾನರ ಅಪ್ಪಣೆಯಾಗಿತ್ತು. ದರಬಾರಿನಿಂದ ಶಿವಾಜಿಗೆ ಪತ್ರವನ್ನು ಬರೆಸಿ ಕೊಡಲಾಗಿತ್ತು. ನಾನು ಆ ಪತ್ರವನ್ನು ತೆಗೆದು ಕೊಂಡು ಹೋಗಿ ಶಿವಾಜಿಯನ್ನು ಕಂಡು ಮಾತನಾಡಿದೆ. ಮಾತುಕಥೆ ಗಳೆಲ್ಲಾ ಬಲು ಗಂಭೀರವಾಗಿ ನಡೆದವು. ಶಿವಾಜಿಯು ಅತ್ಯಂತ ಬುದ್ಧಿಶಾಲಿ. ನನಗೆ ಅಮೂಲ್ಯ ವಸ್ತ್ರಾಭರಣಗಳನ್ನು ಉಡುಗೊರೆಯಾಗಿ ಕೊಟ್ಟನು. ಮತ್ತು ಒಂದು ಸಾವಿರ ಹೊನ್ನನ್ನು ಪುರಸ್ಕಾರವಾಗಿ ಕೊಟ್ಟನು. ಅವೆಲ್ಲವನ್ನೂ ದರಬಾರಿಗೆ ತಂದು ಒಪ್ಪಿಸಿದ್ದೇನೆ"ಎಂದು ಸಿಂಹಾಸನದ ಮುಂದಿಟ್ಟಿದ್ದ ತಟ್ಟೆಗಳ ಕಡೆ ಕೈತೋರಿಸಿ "ನಾನು ಒಂದು ಕಾಸನ್ನು ಮುಟ್ಟಿಲಿಲ್ಲ. ಎಲ್ಲವನ್ನು ತಂದು ಸುಲ್ತಾನರ ಪಾದಕ್ಕೆ ಒಪ್ಪಿಸಿದ್ದೇನೆ. ಆದರೆ ದರಬಾರಿಗೆ ಬರುವುದ ಕ್ಕಾಗುವುದಿಲ್ಲವೆಂದು ಹೇಳಿದ" ಎಂದನು.

ಷಾಜಿಯು "ಸುಲ್ತಾನರ ಅಪ್ಪಣೆಯನ್ನು ನಿರಾಕರಿಸಿದನೆ ?" ಎಂದು ಗಾಬರಿಯಿಂದ ಕೇಳಿದನು.

"ಇಲ್ಲ ನಯವಾದ ಮಾತುಗಳಿಂದ ಸುಣುಚಿಕೊಂಡ. ಅಪ್ಪಣೆಯಂತೆ ಅವನನ್ನು ಕರೆತರಲು ಸಾಧ್ಯವಾಗಲಿಲ್ಲ."

ಸುಲ್ತಾನನು ಷಾಜಿಯ ಕಡೆಗೆ ತಿರುಗಿ "ಷಾಜಿಯವರೇ ಈಗೇನು ಮಾಡಬೇಕು. ನೀವೇ ಹೇಳಿರಿ" ಎಂದನು.

ಷಾಜಿಯು ಎದ್ದು ನಿಂತು ತಲೆಬಾಗಿಸಿ ಮೌನವಾಗಿದ್ದನು.

ಸುಲ್ತಾನನಿಗೆ ಕೋಪ ಬಂದಿತು. "ಷಾಜಿಯವರೇ. ನೀವು ನಮ್ಮ ದರ್ಬಾರಿನ ಉನ್ನತಾಧಿಕಾರಿಗಳು. ಈಗ ನಮ್ಮ ದರ್ಬಾರಿಗೆ ವಿಶೇಷ ಅಗೌರವವಾಗಿದೆ. ನಿಮ್ಮ ಮಗ ಒಬ್ಬ ಪ್ರತ್ಯಕ್ಷ ವಿದ್ರೋಹಿಯಾಗಿದ್ದಾನೆ. ದರಬಾರಿಗೆ ಬರಬೇಕೆಂದು ಪತ್ರ ಕಳುಹಿಸಿದರೆ ನಿರಾಕರಿಸಿದ್ದಾನೆ. ಇದಕ್ಕೆ ನಿವೇ ಹೊಣೆ. ಇವನನ್ನು ನೀವೆ ಹಿಡಿತರಿಸಿಕೊಡಬೇಕು" ಎಂದು ಹೇಳಿದನು.

ಷಾಜಿಯು "ಶಿವಾಜಿಯು ಅವಿನೀತ, ವಿದ್ರೋಹಿ. ಅವನಿಗೆ ಶಿಕ್ಷೆ ಯಾಗಲೇಬೇಕು ಹುಜೂರಿನಿಂದಲೇ ಅವನನ್ನು ಹಿಡಿತರಿಸಲಾಗದ ಮೇಲೆ ನನ್ನಿಂದ ಹೇಗಾದೀತು ? ನಾನು ಬಹುಕಾಲದ ಹಿಂದೆಯೇ ಅವನು ದುರ್ವಿ ನೀತನೆಂದು ಅವನನ್ನು ತ್ಯಾಗಮಾಡಿದ್ದೇನೆ. ಅವನ ಹೊಣೆಗಾರಿಕೆಯು ನನಗೆಲ್ಲಿ ಬಂದಿತು ?" ಎಂದು ಹೇಳಿ ಕೈಮುಗಿದನು.

ತುರುಷ್ಕ ಮಂತ್ರಿಗಳೂ, ಸೇನಾಧಿಪತಿಗಳೂ "ಮಗನು ವಿದ್ರೋಹಿ, ತಂದೆಯು ವಂಚಕ. ದರಬಾರಿನಲ್ಲಿ ಬಹುಕಾಲದಿಂದ ಉನ್ನತ ಪದವಿಯಲ್ಲಿ ರುವ ಈ ಷಾಜಿಯು ಹೊಣೆಗಾರಿಕೆ ಇಲ್ಲವೆನ್ನುತ್ತಾನೆ. ಇವನು ವಂಚಕ. ಇವನಿಗೆ ಶಿಕ್ಷೆಯಾಗಬೇಕು. ಷಾಜಗೆ ಶಿಕ್ಷೆ ವಿಧಿಸಿದರೆ ಶಿವಾಜಿಯು ತಾನಾಗಿ ಬಂದು ಸುಲ್ತಾನರ ಪಾದದಲ್ಲಿ ಬೀಳುತ್ತಾನೆ" ಎಂದು ಹೇಳಿದನು.

ದರ್ಬಾರಿನ ಖಾಜಿಯವರು "ಷಾಜಿಯವರದೇ ಹೊಣೆಗಾರಿಕೆ. ಅವರು ಇಷ್ಟು ದಿನಗಳು ಸುಮ್ಮನಿದ್ದುದೇ ತಪ್ಪು, ಮಗನು ದರ್ಬಾರಿಗೆ ವಿರೋಧಿ ಯಾಗಿದ್ದರೆ ತಂದೆಯು ದರ್ಬಾರಿನ ಉನ್ನತಾಧಿಕಾರದಲ್ಲಿ ಇದ್ದುಕೊಂಡು ತನ್ನ ಹೊಣೆಗಾರಿಕೆ ಇಲ್ಲವೆಂದರೆ ಲೋಕವು ನಗುತ್ತದೆ. ಷಾಜಿಗೆ ಶಿಕ್ಷೆಯಾಗಲೇ ಬೇಕು" ಎಂದು ಹೇಳಿದರು.

ಸುಲ್ತಾನನು ಷಾಜಿಯ ಕಡೆ ತಿರುಗಿ "ಷಾಜಿ, ಶಿಕ್ಷೆಯೆಂದರೆ ಸಾಮಾನ್ಯ ಶಿಕ್ಷೆ ಎಂದುಕೊಳ್ಳಬೇಡ. ದೊಡ್ಡವರ ತಪ್ಪಿಗೆ ದೊಡ್ಡ ಶಿಕ್ಷೆ

ಯಾಗಬೇಕು” ಎಂದು ಹೇಳಿ ವಜೀರನ ಕಡೆ ತಿರುಗಿ, “ಷಾಜಿಯನ್ನು ಕೋಟೆಯ ಗೋಡೆಗೆ ಸೇರಿಸಿ. ಮತ್ತೊಂದು ಗೋಡೆಯನ್ನು ಹಾಕಿರಿ, ಒಂದು ತಿಂಗಳ ಅವಧಿಯಲ್ಲಿ ಶಿವಾಜಿಯನ್ನು ಕರೆಸಿಕೊಟ್ಟರೆ ಸರಿ. ಇಲ್ಲದಿದ್ದರೆ ಮೇಲೆ ಇಟ್ಟಿಗೆ ಗಾರೆಗಳಿಂದ ಮುಚ್ಚಿ ಸಜೀವ ಸಮಾಧಿ ಮಾಡಿಸಿರಿ” ಎಂದು ಅಪ್ಪಣೆ ಮಾಡಿದನು.

ಷಾಜಿಯ ಮೇಲಿನ ದ್ವೇಷಾಸೂಯೆಗಳಿಂದ ಕುದಿಯುತ್ತಿದ್ದ ತುರುಷ್ಕ ಸೇನಾಧಿಪತಿಗಳು ಅವನನ್ನು ದರ್ಬಾರಿನಲ್ಲಿ ನೆಲದ ಮೇಲೆ ದರದರನೆ ಎಳೆಯುತ್ತಾ ಹಿಡಿದುಕೊಂಡು ಹೋದರು.

ಬಿಜಾಪುರದಲ್ಲೆಲ್ಲಾ ಮೆರವಣಿಗೆ ಮಾಡಿಸಿ, ಕೋಟೆಯ ಗೋಡೆಗೆ ಆನಿಸಿ ನಿಲ್ಲಿಸಿ, ಇಟ್ಟಿಗೆ ಗಾರೆಗಳಿಂದ ಗೋಡೆ ಹಾಕಿದರು. ಉಸಿರಾಡುವುದಕ್ಕೂ ಆಹಾರವನ್ನು ಕೊಡುವುದಕ್ಕೂ ಕಂಡಿಗಳನ್ನು ಮಾಡಿ ಬಲವಾದ ಕಾವಲಿಟ್ಟರು.

ಷಾಜಿಯು ಒಂದು ಮಾತನ್ನು ಆಡಲಿಲ್ಲ. ಕಲ್ಲಿನ ಪ್ರತಿಮೆಯಂತೆ ಇದ್ದನು.

ಈ ಸಮಾಚಾರವು ವಿದ್ಯುದ್ವೇಗದಿಂದ ಪುರಂಧರದ ಕೋಟೆಗೆ ಮುಟ್ಟಿತು. ಶಿವಾಜಿಯು ತನ್ನ ಸರದಾರರೊಂದಿಗೆ ಈ ಸಮಾಚಾರವನ್ನು ಕೇಳಿದನು. ಅವನು ಖಿನ್ನನಾಗಲಿಲ್ಲ. ವ್ಯಸನಪಡಲಿಲ್ಲ. “ಮುಸಲ್ಮಾನ್ ದರ್ಬಾರಿನಲ್ಲಿ ಪದವಿಗಳಿಗೆ ಆಸೆಪಡುವ ಹಿಂದೂಜನಕ್ಕೆ ತಕ್ಕ ಪಾಠ ಕಲಿಸಿದಂತಾಯಿತು. ನನ್ನ ತಂದೆ ಷಾಜಿಯವರು ಸತ್ತುಹೋಗುತ್ತಾರೆ. ಅವರ ಸಜೀವ ಗೋರಿಯು ಶಾಶ್ವತವಾಗಿರುತ್ತದೆ. ಅದು ಹಿಂದುಗಳಿಗೆ ಜ್ವಲಂತ ದೃಷ್ಟಾಂತವಾಗಿ ನಿಂತಿರುತ್ತದೆ” ಎಂದು ಹೇಳಿದನು.

ಸ್ನೇಹಿತರೆಲ್ಲರೂ ಬೆರಗಾದರು.

“ಇದಕ್ಕೆ ನಾವು ಮೌನವಾಗಿರಕೂಡದು. ಒಂದು ಪ್ರತಿಕ್ರಿಯೆಯನ್ನು ಮಾಡಲೇಬೇಕೆಂದು” ಸಂಗಡಿಗರು ಶಿವಾಜಿಗೆ ಒತ್ತಾಯಪಡಿಸಿದರು.

ಶಿವಾಜಿಯು ಚಿಂತೆಯಲ್ಲಿ ಮುಳುಗಿದನು. ತಂದೆಗೆ ಬಂದಿರುವ ಆಪತ್ತನ್ನು ಚಿಂತಿಸಿದನು. ತನ್ನಿಂದಲೇ ತನ್ನ ತಂದೆಗೆ ಈ ಅಪಮಾನವಾಯಿತೆಂದು ಶಿವಾಜಿಯ ಮನಚುಚ್ಚಿತು.



ಸಂಗಡಿಗರು ಎಡೆಬಿಡದೇ ಒತ್ತಾಯಪಡಿಸಿದರು.

ಶಿವಾಜಿಯು ಮೊಗಲ್ ಸಾಮ್ರಾಟ್ ಷಹಜಹಾನ್‌ನ ಮಗನಾದ ಮುರಾದ್‌ಭಕ್ಷನಿಗೆ ಒಂದು ಪತ್ರ ಬರೆದು ಕಳುಹಿಸಿದನು.

ಈ ಪತ್ರವು ಈಪರಿಯಾಗಿದ್ದಿತು.

"ಷಹಾನ್‌ಷಾಹಾ ಡೆಲ್ಲಿಯ ಬಾದಷಹರವರ ಸನ್ನಿಧಾನಕ್ಕೆ ಮರಾಠಾ ಸರದಾರ್ ಶಿವಾಜಿಯು ಬಿನ್ನಹ ಮಾಡಿಕೊಳ್ಳುತ್ತಾನೆ. ಜಹಪನಾ, ನಾನು ಅತಿ ಪ್ರಯಾಸದಿಂದ ಸಾಹಸ ಮಾಡಿ ಮೊಗಲ್ ಮತ್ತು ಬಿಜಾಪುರದ ಗಡಿಯಲ್ಲಿರುವ ಮುಖ್ಯವಾದ ಕೋಟೆಗಳನ್ನೆಲ್ಲಾ ವಶಪಡಿಸಿಕೊಂಡಿದ್ದೇನೆ. ತೋರಣ, ಪ್ರತಾಪಗಢ, ವಜ್ರಗಢ, ಪುರಂಧರಗಢ, ಕಲ್ಯಾಣದುರ್ಗ ಈ ಕೋಟೆಗಳು ನನ್ನ ವಶದಲ್ಲಿವೆ. ಇವೆಲ್ಲಾ ಬಿಜಾಪುರ ರಾಜಕ್ಕೆ ಸೇರಿದವುಗಳು. ಇವುಗಳನ್ನೆಲ್ಲಾ ಮೊಗಲಾ ಸಾಮ್ರಾಜ್ಯಕ್ಕೆ ಒಪ್ಪಿಸುತ್ತೇನೆ. ನನ್ನ ಅಧೀನದಲ್ಲಿ ತರಬೇಕಾದ ಬಲಿಷ್ಠ ಮಹಾರಾಷ್ಟ್ರ ಸೈನ್ಯವಿದೆ. ಇಂದಿನಿಂದ ಆ ಸೈನ್ಯ ಸಮೇತ ನಾನು ಮೊಗಲ್ ಸಾಮ್ರಾಟರ ಅಧೀನನಾಗುತ್ತೇನೆ. ಇದಕ್ಕೆ ಪ್ರತಿಯಾಗಿ ಬಾದಷಹರವರಲ್ಲಿ ನಾನೊಂದು ಪುರಸ್ಕಾರವನ್ನು ಯಾಚಿಸುತ್ತೇನೆ. ನನ್ನ ತಂದೆ ಷಾಜಿಯನ್ನು ಗೋಡೆಹಾಕಿ ಬಿಜಾಪುರದಲ್ಲಿ ಸಜೀವ ಸಮಾಧಿ ಮಾಡಿಸಲು ಸುಲ್ತಾನರು ಹುಕ್ಕುಂ ಮಾಡಿರುತ್ತಾರೆ. ಆ ಷಾಜಿಯವರನ್ನು ಮರ್ಯಾದೆಯಿಂದ ಬಿಡುಗಡೆ ಮಾಡಿಸಿ ಕೊಡಬೇಕು. ಈ ಉಪಕಾರಕ್ಕಾಗಿ ಆಮರಣಾಂತ ಮೊಗಲ್ ದರ್ಬಾರಿನ ಸೇವಕನಾಗಿ ನಿಷ್ಠೆಯಿಂದ ದುಡಿಯುತ್ತೇನೆ.

ಇತಿ–ತಮ್ಮ ಸೇವಕ,

"ಶಿವಾಜಿ"

ಈ ಪತ್ರವನ್ನು ರಘುನಾಥ ಬಲ್ಲಾಳ ಕೊರ್ವೆಯೆಂಬ ಮರಾಠಿ ಸರದಾರನು ಅಹಮದ್ ನಗರಕ್ಕೆ ತೆಗೆದುಕೊಂಡು ಹೋದನು.

ಆ ಕಾಲದಲ್ಲಿ ಅಹಮದ್ ನಗರವು ಡೆಲ್ಲಿ ಬಾದಷಹರ ದಕ್ಕನ ರಾಜಧಾನಿ. ಡೆಲ್ಲಿಯು ಎಷ್ಟು ವೈಭವದಿಂದ ಇದ್ದಿತೋ ಅಹಮದ್‌ನಗರವು ಅಷ್ಟೇ ವೈಭವದಿಂದ ಕಳಕಳಿಸುತ್ತಿದ್ದಿತು. ಸಾಮ್ರಾಟ್ ಷಹಜಹಾನನ ಮಗ ಮುರಾದ ಭಕ್ಷನು ಡಕ್ಕನ್ನಿನ ಸರ್ವಾಧಿಕಾರಿಯಾಗಿದ್ದನು. ಶಿವಾಜಿಯು

ಸಂಗಡಿಗ ರಾಮಚಂದ್ರ ಕರ್ವೆಯು ಪ್ರತಾಪಗಢದಿಂದ ಬಂದು ಭೇಟಿಗೆ ಕಾದಿದ್ದಾನೆಂದು ದರ್ಬಾರಿನ ಅಧಿಕಾರಿಗಳು ಮುರಾದಭಕ್ಷನಿಗೆ ತಿಳಿಸಿದರು. ಮುರಾದನಿಗೆ ಆಶ್ಚರ್ಯವಾಯಿತು. ಶಿವಾಜಿಯ ಹೆಸರು ಡೆಲ್ಲಿಯವರೆಗೆ ಕೇಳಿ ಬರುತ್ತಿದ್ದಿತು. ಇಡೀ ಹಿಂದೂಸ್ಥಾನದಲ್ಲಿ ಮೊಗಲ್ ದರ್ಬಾರಿನ ಶಂಕೆಗೆ ಶಿವಾಜಿಗಿಂತಲೂ ಮತ್ತಾವನೂ ಕಾರಣನಾಗಿರಲಿಲ್ಲ. ಆ ಶಿವಾಜಿಯು ತಾನಾಗಿ ರಾಯಭಾರಿಯನ್ನು ಕಳಿಸಿದ್ದಾನೆ–ಎಂದು ಆಶ್ಚರ್ಯದಿಂದ ರಾಯ ಭಾರಿಯನ್ನು ಸಂದರ್ಶನಕ್ಕೆ ಅಪ್ಪಣೆಕೊಟ್ಟನು. ರಾಯಭಾರಿಯು ಸರ್ವಾಧಿ ಕಾರಿಯ ಮುಂದೆ ಮರಾಠಾ ಪದ್ಧತಿಯಂತೆ ಸಲಾಂ ಮಾಡಿ ನಿಂತುಕೊಂಡನು.

"ನೀನು ಮರಾಠಾ ಸರದಾರನೋ?"

"ಹೌದು, ಸರ್ವಾಧಿಕಾರಿಗಳೇ. ನಾನು ಮರಾಠಾ ಸರದಾರ. ಶಿವಾಜಿ ರಾಜರ ಕಡೆಯಿಂದ ಬಂದಿರುವ ಮುತ್ಸದ್ದಿ."

ಮುರಾದ ಭಕ್ಷನು ನಕ್ಕು "ಶಿವಾಜೀರಾಜರವರೋ? ಈ ಬಿರುದು ಕೊಟ್ಟವರು ಯಾರು? ಎಂದ.

"ನಮ್ಮ ಜನರು, ನಮ್ಮ ನಾಡು, ನಮ್ಮ ದೇಶ. ಆ ಹೆಸರಿಗೆ ಪ್ರತಿ ಹೇಳುವವರು ಗಡಿನಾಡಿನಲ್ಲಿ ಯಾರೂ ಇಲ್ಲ."

ಮುರಾದಭಕ್ಷನು ನಕ್ಕನು.

"ಒಳ್ಳೆಯದು, ಈಗ ಏನು ರಾಯಭಾರವನ್ನು ತಂದಿದ್ದೀ?" ಎಂದು ಕೇಳಿದನು

ಮರಾಠಾ ಸರದಾರನು ಶಿವಾಜಿಯ ಪತ್ರವನ್ನು ತೆಗೆದು ಎರಡು ಕೈ ಗಳಿಂದಲೂ ಸರ್ವಾಧಿಕಾರಿಗೆ ಒಪ್ಪಿಸಿದನು. ಮುರಾದ ಭಕ್ಷನು ಮುತ್ಸದ್ದಿ ಯನ್ನು ಕರೆಸಿ, ಓದಿಸಿ, ಕೇಳಿದನು.

"ಒಳ್ಳೆಯದು ನೀನು ಇಲ್ಲಿ ಒಂದೆರಡು ವಾರಗಳಿರು. ಸರಿಯಾದ ಉತ್ತರ ಕೊಡಿಸುತ್ತೇವೆ" ಎಂದು ಹೇಳಿ ಕಳುಹಿಸಿದನು.

ದರಬಾರಿನ ಅಧಿಕಾರಿಯನ್ನು ಕರೆದು "ಆ ಮರಾಠಾ ರಾಯಭಾರಿಗೆ ಗೌರವದಿಂದ ಬಿಡಾರಮಾಡಿ ಊಟ ಉಪಚಾರಗಳಿಗೆ ವ್ಯವಸ್ಥೆ ಮಾಡಬೇಕು" ಎಂದು ಅಪ್ಪಣೆಮಾಡಿ ಕಳುಹಿಸಿದನು.

ಮುರಾದನು ಅಂತರಂಗದಲ್ಲಿ ನುತ್ತೊಮ್ಮೆ ಶಿವಾಜಿಯ ಪತ್ರವನ್ನು ಓದಿಸಿ ಕೇಳಿದನು. ತಕ್ಷಣ ಪತ್ರ ಬರೆದು ಡೆಲ್ಲಿಗೆ ಕಳುಹಿಸಿಕೊಟ್ಟನು.

"ಶಿವಾಜಿಯು ಸುಲಭವಾಗಿ ನಮ್ಮ ಕೈಗೆ ಸಿಕ್ಕಿದ್ದಾನೆ. ಇವನು ರಾಜ ಪುತ್ರರಿಗಿಂತಲೂ ಸಾಹಸವಂತ. ಅವನಲ್ಲಿ ಬಲವಾದ ಸೈನ್ಯವಿದೆ ಗಡಿ ನಾಡಿನ ಕೋಟೆಗಳೆಲ್ಲವೂ ಇವನ ವಶದಲ್ಲಿವೆ. ಇವನು ನಮ್ಮ ದರ್ಬಾರಿನ ಅಧಿಕಾರಿಯಾದರೆ ಬಿಜಾಪುರವು ಸುಲಭವಾಗಿ ನಮ್ಮ ಅಧೀನವಾದಂತೆ ಆಗುತ್ತದೆ. ಈ ಸಮಯವನ್ನು ಬಿಡಬಾರದು" ಎಂದು ಡೆಲ್ಲಿಗೆ ಪತ್ರ ಬರೆದು ಕಳುಹಿಸಿದನು.

ಡೆಲ್ಲಿಯ ದರ್ಬಾರಿನಿಂದ ಒಂಟೆಯ ರಾಹುತರು ಮಂಜೂರು ಆಜ್ಞೆ ಯನ್ನು ತಂದರು.

ಬಿಜಾಪುರದ ಸುಲ್ತಾನನಿಗೆ ಡೆಲ್ಲಿಯಿಂದ ಪತ್ರ ಬಂದಿದ್ದಿತು.

"ಷಹಾ‌ಷಾಹಾ ಡೆಲ್ಲಿಯ ಬಾದಷಹರವರಿಂದ ಬಿಜಾಪುರದ ಸುಲ್ತಾನರಿಗೆ ತಿಳಿಯಪಡಿಸುವುದೇನೆಂದರೆ, ಬಾದಷಹರು ಸುಲ್ತಾನರ ಕ್ಷೇಮ ಸಮಾ ಚಾರಗಳನ್ನು ಆದರದಿಂದ ವಿಚಾರಿಸಿದ್ದಾರೆ. ಪ್ರಕೃತ ಸಹ್ಯಾದ್ರಿಯ ಗುಡ್ಡ ಗಾಡುಗಳಲ್ಲಿರುವ ಮರಾಠಾ ಜನರ ದಳಪತಿಶಿವಾಜಿಯವಿಷಯ ಸುಲ್ತಾನರಿಗೂ ತಿಳಿದಿರಬಹುದು. ಅವನ ತಂದೆ ಷಾಜಿಯವರು ಬಿಜಾಪುರದಲ್ಲಿ ಬಂಧನ ದಲ್ಲಿಡಲ್ಪಟ್ಟಿದ್ದಾರೆಂದು ಬಾದಷಹರವರಿಗೆ ಬಿನ್ನಹ ಮಾಡಲ್ಪಟ್ಟಿದೆ. ಆ ಷಾಜಿ ಯವರನ್ನು ತಕ್ಷಣ ಮರ್ಯಾದೆಯಿಂದ ಬಿಡುಗಡೆ ಮಾಡಬೇಕೆಂದು ಖುದ್ದ ಬಾದಷಹರವರು ಅಪೇಕ್ಷಿಸುತ್ತಾರೆ. ಡೆಲ್ಲಿಯ ದರಬಾರಿನಿಂದ ಷಾಜಿಯವರಿಗೆ ಮರ್ಯಾದಾರ್ಥ ಪಟ್ಟಾಂಕನಗಳನ್ನು ಕಳುಹಿಸಿಕೊಡಲಾಗಿದೆ. ಅವುಗಳನ್ನು ಸುಲ್ತಾನರ ದರ್ಬಾರಿನಲ್ಲಿ ಷಾಜಿಯವರಿಗೆ ಬಾದಷಹರವರ ಹೆಸರಿನಲ್ಲಿ ದಯ ಪಾಲಿಸತಕ್ಕದ್ದು. ಸುಲ್ತಾನರ ವಿಷಯದಲ್ಲಿ ಯಾವಾಗಲೂ ಬಾದಷಹರವರ ಪ್ರೀತಿ ವಿಶ್ವಾಸಗಳು ಬೆಳೆಯುತ್ತಿರುತ್ತವೆ.

"ಇತಿ—ದರ್ಬಾರ್ ಭಕ್ಷಿ
ಅಬ್ದುಲ್ಲಾ ಖಾನ್ ಬಹದೂರ್."

ಈ ಪತ್ರವನ್ನು ಮುರಾದ್ ಭಕ್ಷನು ಓದಿ ನೋಡಿಕೊಂಡನು. ದೊಡ್ಡ ಲಕ್ಕೋಟೆಯಲ್ಲಿ ಆ ಪತ್ರವನ್ನಿಟ್ಟು ಮೊಹರುಮಾಡಿ ಕಿಂಕಾಪಿನ ಚೀಲದಲ್ಲಿಟ್ಟು ಅಹಮುದಾಬಾದಿನ ಫೌಜುದಾರ್ ಖಾಸಿಂ ಆಲಿಯವರನ್ನು ಕರೆಸಿ, "ಈ ಡೆಲ್ಲಿಯ ಬಾದಷಹರವರ ಹುಕ್ಕುಂನಾಮೆಯನ್ನು ಬಿಜಾಪುರದ ಸುಲ್ತಾನರಿಗೆ ಮರ್ಯಾದೆಯಿಂದ ಜಾರಿಮಾಡಿ ಬಾ" ಎಂದು ಆಜ್ಞೆಯಿತ್ತನು.

ಶಿವಾಜಿಯ ಕಡೆಯಿಂದ ಬಂದಿದ್ದ ರಘುನಾಥ ಬಲ್ಲಾಳ ಕರ್ವೆಯನ್ನು ಕರೆಸಿ, "ಶಿವಾಜಿಯ ಸರದಾರನೇ, ನಿನ್ನ ದಳಪತಿಯ ಪ್ರಾರ್ಥನೆಯನ್ನು ಬಾದಷಹರವರು ಮಂಜೂರ್ ಮಾಡಿದ್ದಾರೆ. ನಮ್ಮ ಫೌಜುದಾರರು ಬಾದ ಷಹರವರ ಪತ್ರಿಕೆಯನ್ನು ಬಿಜಾಪುರಕ್ಕೆ ತೆಗೆದುಕೊಂಡು ಹೋಗುತ್ತಿದ್ದಾರೆ. ನೀನೂ ಅವರ ಸಂಗಡ ಹೋಗಬಹುದು" ಎಂದು ಹೇಳಿ "ಬಿಜಾಪುರಕ್ಕೆ ಹೋಗಲು ನಿನಗೆ ಭಯವಿಲ್ಲವಷ್ಟೆ" ಎಂದು ಹಾಸ್ಯದಿಂದ ಹೇಳಿದನು.

ಕೊರ್ವೆಯು ಸರ್ಪದಂತೆ ತಲೆ ಎತ್ತಿ "ಸರ್ವಾಧಿಕಾರಿಗಳೇ, ಭಯವೆಂದ ರೇನು ? ನಮ್ಮಲ್ಲಿ ಅಂಥಾ ಅಂಜಪುರಕನು ಒಬ್ಬನೂ ಇಲ್ಲ. ಈ ಫೌಜು ದಾರರೇಕೆ?ಪತ್ರವನ್ನು ನನ್ನ ಕೈಯಲ್ಲಿ ದಯಪಾಲಿಸಿರಿ. ಸುಲ್ತಾನರಿಗೆ ನಾನೇ ಖುದ್ದು ಹುಕ್ಕುಂ ಜಾರಿಮಾಡಿ ಅವರಿಗೆ ಬುದ್ಧಿ ಕಲಿಸಿ ಬರುತ್ತೇನೆ" ಎಂದು ಹೇಳಿದನು,

ಮುರಾದನು ನಸುನಕ್ಕು "ಈ ಮರಾಠರೆಲ್ಲ ಹೀಗೆಯೇ ಬಿಚ್ಚುಮಾತಿನ ಶೂರರು. ಇವರ ನಿರ್ಭಯ ಪ್ರವೃತ್ತಿಯನ್ನು ನೋಡಿದರೆ ಎಷ್ಟೋ ಹರ್ಷ ವಾಗುತ್ತದೆ. ದರ್ಬಾರಿನ ಪದ್ಧತಿಗಳು ಮರ್ಯಾದೆಗಳು ಈ ಜನರಿಗೆ ಗೊತ್ತಿಲ್ಲ. ಆದರೆ ಸಮಯ ಬಂದಾಗ ಪ್ರಾಣದಮೇಲೆ ಹಂಗು ತೊರೆದು ಕಾರ್ಯಸಾಧಿಸುವ ಸಾಹಸಿಗಳಿವರು" ಎಂದುಕೊಂಡನು.

ಫೌಜುದಾರ್ ಖಾಸಿಂ ಆಲಿಯು ರಘುನಾಥ ಬಲ್ಲಾಳ ಕೋರ್ವೆಯನ್ನು ಜೊತೆಯಲ್ಲಿ ಕರೆದುಕೊಂಡು ಬಿಜಾಪುರಕ್ಕೆ ಪ್ರಯಾಣ ಮಾಡಿದನು.

ಬಿಜಾಪುರದ ಸುಲ್ತಾನರಿಗೆ ಡೆಲ್ಲಿಯ ಬಾದಷಹರ ಕಡೆಯಿಂದ ಫೌಜು ದಾರನು ಪತ್ರತಂದಿದ್ದಾನೆಂದು ದರ್ಬಾರಿನ ಭಕ್ಷಿಗಳು ವರದಿಮಾಡಿದರು.

ಸುಲ್ತಾನನು ದರ್ಬಾರಿಗೆ ಬಂದು ಡೆಲ್ಲಿಯ ರಾಯಭಾರಿಯನ್ನುಮರ್ಯಾದೆ ಯಿಂದ ಕರೆಸಿಕೊಂಡನು.

ಫೌಜುದಾರ್ ಖಾಸಿಂ ಆಲಿಯು ದರ್ಬಾರಿಗೆ ಬಂದು ಮರ್ಯಾದೆಯಿಂದ ಮುಜುರೆಮಾಡಿ ಬಾದಷಹರ ಸನ್ನಿಧಾನದಿಂದ ಸುಲ್ತಾನರವರಿಗೆ ರಾಯಸ ವನ್ನು ಕಳುಹಿಸಿದ್ದಾರೆ" ಎಂದು ಹೇಳಿ ಸುಲ್ತಾನರವರಿಗೆ ಮರ್ಯಾದೆಯಿಂದ ಒಪ್ಪಿಸಿದನು.

ಸುಲ್ತಾನನು ಎದ್ದು ನಿಂತು ಗೌರವದಿಂದ ಪರಿಗ್ರಹಿಸಿದನು. ಲಕ್ಕೋಟೆ ಯನ್ನು ಬಿಚ್ಚಿ ಪತ್ರವನ್ನು ತೆಗೆದು ಸುಲಾವಣೆ ಮಾಡುವಂತೆ ಮುತ್ಸದ್ದಿಗಳ ಕೈಗೆ ಕೊಟ್ಟನು.

ಮುತ್ಸದ್ದಿಯು ಓದಿ ಹೇಳುತ್ತಿರುವಾಗ ದರ್ಬಾರಿಗಳೆಲ್ಲರೂ ಬೆಚ್ಚಿ ಬಿದ್ದು "ಹಾ ಹಾ" ಎಂದು ಆಶ್ಚರ್ಯ ಧ್ವನಿಮಾಡಿದರು.

ಫೌಜುದಾರನ ಅನುಯಾಯಿಗಳು ವಿಶಾಲವಾದ ತಟ್ಟೆಗಳಲ್ಲಿ ಡೆಲ್ಲಿಯ ದರ್ಬಾರಿನಿಂದ ಕಳುಹಿಸಲ್ಪಟ್ಟಿರುವ ಖಿಲ್ಲತ್ತುಗಳನ್ನೂ ಪಟ್ಟಾಂಕಿತಗಳನ್ನು ಸುಲ್ತಾನರಿಗೆ ಒಪ್ಪಿಸಿದರು.

ಸುಲ್ತಾನನು ಎರಡು ಕೈಗಳಿಂದಲೂ ಮುಟ್ಟಿ ಗೌರವಿಸಿದನು.

ಡೆಲ್ಲಿಯ ಫೌಜುದಾರನು "ಸುಲ್ತಾನರವರೇ, ಇದು ಷಾಜಿಯವರಿಗಾಗಿ ಬಾದಷಹರಿಂದ ದಯಪಾಲಿಸಲ್ಪಟ್ಟಿರುವ ಖಿಲ್ಲತ್ತು, ಪಟ್ಟಾಂಕಿತಗಳು" ಎಂದು ಹೇಳಿ ಸುಲ್ತಾನರವರಿಗೆ ಒಪ್ಪಿಸಿದನು.

ದರಬಾರೆಲ್ಲವೂ ಮೋಡ ಕವಿದಂತಾಯಿತು. ಎಲ್ಲರಿಗೂ ಅಪಮಾನ ವಾಯಿತು. ಯಾರೂ ಮಾತನಾಡಲಿಲ್ಲ. ಡೆಲ್ಲಿಯಿಂದ ಬಂದಿದ್ದ ಫೌಜು ದಾರನಿಗೆ ಮರ್ಯಾದೆಯಿಂದಔಚಿತ್ಯ ಉಪಚಾರಗಳನ್ನುನಡೆಸುವಂತೆ ಸುಲ್ತಾನನು ಅಧಿಕಾರಿಗಳಿಗೆ ಅಪ್ಪಣೆ ಮಾಡಿದನು.

ಅಂತರಂಗದಲ್ಲಿ ಮಂತ್ರಿಗಳೂ ಸೇನಾಧಿಪತಿಗಳೂ ಸಭೆ ಸೇರಿದರು. "ಏನಾದರೂ ಮಾಡಿ ಈ ಫೌಜುದಾರನಿಗೆ ವಿಶೇಷ ಲಂಚಕೊಟ್ಟು ನಮ್ಮ ಕಡೆಗೆ ತಿರುಗಿಸಿಕೊಳ್ಳಬೇಕು. ಡೆಲ್ಲಿಯ ಬಾದಷಹನ ಅಪ್ಪಣೆಯನ್ನು ಜಾರಿ ಮಾಡದೇ ಉಪಾಯಾಂತರಗಳಿಂದ ಕಾಲ ತಳ್ಳಬೇಕು. ಅಷ್ಟರಲ್ಲಿ ಶಿವಾಜಿ ಯನ್ನು ಹಿಡಿತರಿಸಬೇಕು" ಎಂದು ಸಲಹೆಮಾಡಿದರು.

ಅವರುಗಳೆಲ್ಲಾ ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದ ಮೇಲೆ ಮಂತ್ರವಾದಿ ಹಷೀಂ ಉಲೂಮಿಯು ಸುಲ್ತಾನನ ಭೇಟಿಮಾಡಿದನು.

"ಸುಲ್ತಾನನೇ, ನನ್ನದೇನೂ ಏನೂ ಇಲ್ಲ. ದೇವರ ಆಜ್ಞೆ ಆಗಿದೆ. ನೀನು ಬಾದಷಹರ ಅಪ್ಪಣೆಯಂತೆ ನಡೆದುಕೋ. ಈ ನಿನ್ನ ಮಂತ್ರಿಗಳಸೇನಾಧಿಪತಿಗಳ ಮಾತು ಕೇಳಬೇಡ. ಅವರೆಲ್ಲರೂ ನಿನ್ನನ್ನು ಹಳ್ಳಕ್ಕೆ ಹಾಕುತ್ತಾರೆ. ದೇವರೊಬ್ಬನೇ ಮೇಲಕ್ಕೆ ಎತ್ತುವವನು" ಎಂದು ಬುದ್ಧಿ ವಾದ ಹೇಳಿದನು.

ಸುಲ್ತಾನನು ಮುಸ್ತಫಾಖಾನ್ ಎಂಬ ಖಿಲ್ಲೇದಾರನನ್ನು ಕರೆಸಿ "ತಕ್ಷಣ ಗೋಡೆಗಳನ್ನು ಒಡೆಸಿ, ಷಾಜಿಯವರನ್ನು ಬಿಡುಗಡೆಮಾಡಬೇಕು. ಅವರ ಮನೆಗೆ ಕರೆದುಕೊಂಡು ಹೋಗಿ ಸ್ನಾನಾದಿಗಳನ್ನು ಮಾಡಿ ವಸ್ತ್ರಭೂಷಣಗಳಿಂದ ಅಲಂಕರಿಸಿಕೊಳ್ಳುವಂತೆ ಹೇಳಿ ಮರ್ಯಾದೆಗಳೊಂದಿಗೆ ದರಬಾರಿಗೆ ಕರೆತರಬೇಕು" ಎಂದು ಅಪ್ಪಣೆ ಮಾಡಿದನು.

ಖಿಲ್ಲೇದಾರ್ ಮುಸ್ತಫಾಖಾನನು ಷಾಜಿಯನ್ನು ಬಂಧನದಿಂದ ಬಿಡಿಸಿ ಮರ್ಯಾದೆಯಿಂದ ದರಬಾರಿಗೆ ಕರೆದುಕೊಂಡು ಬಂದನು.

ಸುಲ್ತಾನನ ಅಪ್ಪಣೆಯಂತೆ ಡೆಲ್ಲಿಯ ಫೌಜುದಾರ್ ಖಾಸಿಂ ಅಲಿಯೂ ದರಬಾರಿಗೆ ಬಂದಿದ್ದನು.

ಸುಲ್ತಾನನ ದರಬಾರಿನಲ್ಲಿ "ಷಾಜಿಯವರೇ, ಡೆಲ್ಲಿಯ ಬಾದಷಹರು ತಮ್ಮನ್ನು ಬಿಡುಗಡೆ ಮಾಡುವಂತೆ ಪ್ರಾರ್ಥನೆ ಮಾಡಿದ್ದಾರೆ. ಎಲ್ಲದಕ್ಕಿಂತಲೂ ಬಾದಷಹರವರ ಸ್ನೇಹವಿಶ್ವಾಸಗಳು ನಮಗೆ ಅಮೂಲ್ಯವಾದವುಗಳು. ನಿಮ್ಮದೇನೂ ದೋಷವಿಲ್ಲ. ನಿಮ್ಮ ಮಗನ ಅಪರಾಧಕ್ಕಾಗಿ ಇದುವರೆಗೆ ನೀವು ಶಿಕ್ಷೆಯನ್ನು ಅನುಭವಿಸಬೇಕಾಯಿತು. ನಿಮಗೆ ನಮ್ಮ ದರಬಾರಿನಲ್ಲಿದ್ದ ಎಲ್ಲ ಸ್ಥಾನ, ಮಾನ, ಗೌರವಗಳೂ ನಡೆಸಿಕೊಂಡು ಬರಲಾಗುತ್ತದೆ. ಬಾದಷಹರವರು ನಿಮ್ಮ ಮೇಲೆ ಅನುಗ್ರಹ ಮಾಡಿ ಈ ಖಿಲ್ಲತ್ತುಗಳನ್ನೂ ಪಟ್ಟಾಂಕನಗಳನ್ನು ಕಳುಹಿಸಿಕೊಟ್ಟಿದ್ದಾರೆ. ಅದನ್ನು ಸ್ವೀಕರಿಸಿ" ಎಂದು ಹೇಳಿದನು.

ದರ್ಬಾರು ಭಕ್ಷಿಯು ಆ ಖಿಲ್ಲತ್ತುಗಳನ್ನು ಪಟ್ಟಾಂಕನಗಳನ್ನು ಷಾಜಿಗೆ ಒಪ್ಪಿಸಿದನು.

ಷಾಜಿಯು ಗಂಭೀರ ಭಾವದಿಂದ ಅವುಗಳನ್ನು ಸ್ವೀಕರಿಸಿ, ಸುಲ್ತಾನರಿಗೆ ಮುಜುರೆ ಮಾಡಿ ತನ್ನ ಮನೆಗೆ ತೆರಳಿದನು.

ಷಾಜಿಯು ಮನೆಗೆ ಹೋಗುವಾಗ ಡೆಲ್ಲಿಯಿಂದ ಬಂದಿದ್ದ ಫೌಜುದಾರರನ್ನು ತನ್ನ ಮನೆಗೆ ಕರೆದುಕೊಂಡುಹೋದನು.

ಡೆಲ್ಲಿಯ ಫೌಜುದಾರನಿಗೆ ರಾಜಯೋಗ್ಯವಾದ ಸತ್ಕಾರಗಳನ್ನು ನಡೆಸಿ ಕೃತಜ್ಞತೆಯನ್ನು ವ್ಯಕ್ತಪಡಿಸಿದನು.

ಷಾಜಿಗೆ ತನ್ನ ಬಿಡುಗಡೆಯ ಬಗ್ಗೆ ಏನೊಂದೂ ಸೂಕ್ಷ್ಮಗಳೂ ತಿಳಿಯ ಲಿಲ್ಲ. ಅವನು ಆಶ್ಚರ್ಯ ಸಂತೋಷಗಳಲ್ಲಿ ಮಗ್ನನಾಗಿದ್ದನು. ಫೌಜುದಾರ ನನ್ನು ತನ್ನ ಬಿಡುಗಡೆಯ ಕಾರಣವೇನೆಂಬುದನ್ನು ಹೇಳಬೇಕೆಂದು ಅಂತರಂಗ ದಲ್ಲಿ ಬೇಡಿಕೊಂಡನು.

ಖಾಸಿಂ ಅಲಿಯು "ಷಾಜಿಯವರೇ, ತಾವು ವಿದ್ವೇಷಿಗಳ ಪಿತೂರಿ ಯಿಂದ ಬಂಧನಕ್ಕೆ ಒಳಗಾಗಿದ್ದಿರಿ. ಈ ದರಬಾರಿನಲ್ಲಿಯೂ ತಮ್ಮ ಸ್ಥಾನವು ಬಲು ದೊಡ್ಡದು. ಅಷ್ಟೇ ಅಲ್ಲ, ತಮ್ಮ ಅದೃಷ್ಟವು ಖುಲಾಯಿಸಿದಂತಿದೆ. ಡೆಲ್ಲಿಯ ದರಬಾರಿಗೆ ತಮ್ಮನ್ನು ಬರಮಾಡಿಕೊಳ್ಳುವ ಸಂಭವವಿದೆ. ಬಿಜಾ ಪುರದಲ್ಲಿ ತಮ್ಮ ಬಿಡುಗಡೆಯ ಅಂತರಂಗ ಕಾರಣವನ್ನು ಯಾರಿಗೂ ತಿಳಿಸ ಬಾರದೆಂದು ಮೊಗಲ್ ಬಾದಷಹರ ಮಕ್ಕಳು ದಕ್ಕನ್ ಸರ್ವಾಧಿಕಾರಿ, ಮುರಾದ ಭಕ್ಷರವರು ನನಗೆ ಕಟ್ಟಪ್ಪಣೆ ಮಾಡಿದ್ದಾರೆ. ಈ ವಿಷಯ ಕೊಂಚ ಹೊರಬಿದ್ದರೂ ನನಗೆ ಕ್ರೂರ ದಂಡನೆಯಾಗುತ್ತದೆ. ಆದರೂ ನಿಮಗೆ ಈಗ ಅತ್ಯಂತ ಸಂತೋಷದ ಕಾಲ. ನಾನು ತಿಳಿಸಲೇಬೇಕು. ನಿಮ್ಮ ಮಗ ಶಿವಾಜಿಯೂ ಸರ್ವಾಧಿಕಾರಿ ಮುರಾದ್ ಭಕ್ಷರೂ ಸ್ನೇಹಿತರಾಗಿದ್ದಾರೆ. ಆದುದರಿಂದ ನಿಮ್ಮ ಬಿಡುಗಡೆಯಾಗಿದೆ" ಎಂದು ತಿಳಿಸಿದನು.

ಷಾಜಿಯು ಫೌಜುದಾರನಿಗೆ ಅತ್ಯಂತ ಕೃತಜ್ಞತಾಪೂರ್ವಕ ವಂದನೆ ಗಳನ್ನು ಅರ್ಪಿಸಿ ಕಳುಹಿಸಿಕೊಟ್ಟನು.

ಫೌಜುದಾರನ ಜೊತೆಯಲ್ಲಿ ಬಂದಿದ್ದ ಮರಾಠಾ ಸರದಾರ ರಘುನಾಥ ಬಲ್ಲಾಳ ಕೋರ್ವೆಯು ಷಾಜಿಯವರ ದರ್ಶನ ತೆಗೆದುಕೊಂಡನು. ತಾನು ಶಿವಾಜಿಯ ಸಂಗಡಿಗನೆಂದು ಹೆಮ್ಮೆಯಿಂದ ಹೇಳಿಕೊಂಡನು.

"ಮಹಾರಾಜರೇ, ಗಡಿನಾಡಿನ ಕೋಟೆಗಳೆಲ್ಲವೂ ನಮ್ಮ ವಶವಾಗಿವೆ. ನಮ್ಮ ಸೈನ್ಯಗಳನ್ನು ಯುದ್ಧದಲ್ಲಿ ಜಯಿಸುವಂಥ ಶಕ್ತಿಯು ಈ ಬಿಜಾಪುರದ ಸೈನ್ಯಗಳಿಗಿಲ್ಲ. ಅದನ್ನು ತಿಳಿದುಕೊಂಡು ಹೋಗವುದಕ್ಕೆ ಈ ಡೆಲ್ಲಿಯ ರಾಯಭಾರಿಯೊಡನೆ ಇಲ್ಲಿಗೆ ಬಂದಿದ್ದೇನೆ. ಮೊಗಲ್ ಸೈನ್ಯಕ್ಕೂ ನಮ್ಮೊಡನೆ

ಯುದ್ಧಕ್ಕೆ ನಿಲ್ಲುವ ಧೈರ್ಯವಿದೆಯೋ ಇಲ್ಲವೋ ಸಂದೇಹವಾಗಿದೆ. ಏನೇ ಆಗಲಿ, ನಾವು ನಮ್ಮ ಬಲದಿಂದ ಹಿಂದೂ ರಾಜ್ಯವನ್ನು ಸುಸ್ಥಿರವಾಗಿ ಕಟ್ಟುತ್ತೇವೆ” ಎಂದು ಹೇಳಿದನು.

ಷಾಜಿಗೆ ಆ ತರುಣನ ಮಾತುಗಳನ್ನು ಕೇಳಿ ಆಶ್ಚರ್ಯವಾಯಿತು.

“ಇದು ನಿಜವೇ? ಇದು ಸಾಧ್ಯವೇ?” ಎಂದು ತನ್ನ ಮನದಲ್ಲಿಯೇ ಯೋಚಿಸಿಕೊಂಡನು.

“ರಘುನಾಥ ಬಲ್ಲಾಳ ಕೊರ್ವಿ ನೀನು ಹೇಳುವುದೆಲ್ಲವೂ ನಮಗೆ ಸಂತೋಷಪ್ರದವಾಗಿದೆ. ಶಿವಾಜಿಗೆ ನಮ್ಮ ಆಶೀರ್ವಾದಗಳನ್ನು ತಿಳಿಸು” ಎಂದು ಹೇಳಿಕಳುಹಿಸಿದನು.



ಫೌಜುದಾರನು ಬಿಜಾಪುರದಿಂದ ಹೊರಟು ಹೋದ ಮೇಲೆ ಷಾಜಿಯ ವಿರೋಧಿಗಳಾದ ಮಂತ್ರಿ ಸೇನಾಪತಿಗಳೆಲ್ಲರಿಗೂ ಮನಸ್ಸಿನ ಗಲಿಬಿಲಿಗೆ ಆರಂಭವಾಯಿತು. ಅವರುಗಳು ವಿಮುಖರಾಗಿ ಅರಮನೆಯ ಕಡೆಗೆ ಬರುವುದನ್ನೇ ಬಿಟ್ಟುಬಿಟ್ಟರು. ಸುಲ್ತಾನನಿಗೂ ರಾಜ್ಯಾಧಿಕಾರದಲ್ಲಿ ಏನೇನೂ ಆಸಕ್ತಿಯಿರಲಿಲ್ಲ. ಅವನು ಯಾವಾಗಲೂ ರೋಗಪೀಡಿತನಾಗಿಯೇ ಇರುತ್ತಿದ್ದನು. ಆದರೇನು, ಬಿಜಾಪುರದ ವೈಭವಕ್ಕೆ ಎಣೆಯಿಲ್ಲ. ಹೊರಗಿನ ಯಾತ್ರಿಕರು ಬಂದು ನೋಡಿ ಆಶ್ಚರ್ಯಪಡುತ್ತಿದ್ದರು. ಸುಲ್ತಾನರ ಮಹಿಮೆಯನ್ನು ಕೊಂಡಾಡುತ್ತಿದ್ದರು. ಹಿಂದಿನ ಸುಲ್ತಾನರುಗಳ ಪ್ರಭಾವವೇ ಈಗಲೂ ಬೆಳಗುತ್ತಿದ್ದಿತು. ಷಾಜಿಯು ಪ್ರಯತ್ನಪುರಸ್ಸರವಾಗಿ ಸುಲ್ತಾನರ ಭೇಟಿಮಾಡಿದನು. ಸುಲ್ತಾನನು ಆದರದಿಂದ ಕಂಡು ಮಾತಾಡಿಸಿದನು. ಷಾಜಿಯು ಸುಲ್ತಾನರಿಗೆ ನಮ್ರತೆಯಿಂದ ತಿಳಿಸಿದನು.

“ಸುಲ್ತಾನರವರೇ. ತಾವು ನನ್ನ ಶತ್ರುಗಳ ಮಾತುಗಳಿಗೆ ಕಿವಿಗೊಟ್ಟು

ನನ್ನನ್ನು ಅತ್ಯಂತ ಕ್ರೂರವಾಗಿ ಶಿಕ್ಷಿಸಿದಿರಿ. ಅದನ್ನು ನಾನು ಮನಸ್ಸಿಗೆ ಹಚ್ಚಿ ಕೊಂಡಿಲ್ಲ. ಹಾಗೆಯೇ ನನ್ನ ಮೇಲೆ ಕೃಪೆಮಾಡಿ ಬಿಡುಗಡೆ ಮಾಡಿದಿರಿ. ಅದು ನಿಮ್ಮ ಔದಾರ್ಯ. ಆದರೆ ನನಗೆ ಈ ರಾಜಧಾನಿಯಲ್ಲಿರಲು ಸುತರಾಂ ಇಷ್ಟವಿಲ್ಲ. ಒಂದು ದಿನವಲ್ಲ, ಒಂದು ದಿನ ನನ್ನ ಸರಿಸಮಾನಸ್ಥರಾದ ಮಂತ್ರಿ ಸೇನಾಧಿಪತಿಗಳಿಗೂ ನನಗೂ ಇರುವ ವೈಮನಸ್ಯವು ಪ್ರಕೋಪ ಸ್ಥಿತಿಗೆ ಬರುತ್ತದೆ. ಅದರಿಂದ ತಮ್ಮ ಕೀರ್ತಿಗೆ ಕಲಂಕ ತಟ್ಟುತ್ತದೆ. ನನಗೆ ತಾವು ಅಪ್ಪಣೆ ಕೊಡಿರಿ. ನಾನು ಈ ರಾಜಧಾನಿಯನ್ನು ಬಿಟ್ಟು ಎಲ್ಲಿಗಾದರೂ ಹೋಗುತ್ತೇನೆ." ಎಂದು ಹೇಳಿದನು.

ಸುಲ್ತಾನನು "ಷಾಜಿಯವರೇ. ಮೊದಲು ನೀವು ನನನ್ನು ಕ್ಷಮಿಸಿರಿ. ನಾನು ರೋಗಗ್ರಸ್ತನಾಗಿದ್ದೇನೆ. ಎಂದೋ ಈ ಪ್ರಪಂಚವನ್ನು ಬಿಟ್ಟು ಹೋಗ ಬೇಕಾಗಿದ್ದಿತು. ಈ ರಾಜ್ಯವನ್ನು ಸ್ಥಾಪಿಸಿದ ಆದಿಲ್ ಷಾರವರ ಪುಣ್ಯದಿಂದ ನಡೆಯುತ್ತಿದೆ. ನಾನು ಬದುಕಿರುವವರೆಗೂ ಹೀಗೆಯೇ ನಡೆಯುವುದು ದೇವರ ಇಚ್ಛೆಯೆಂದು ನಂಬಿದ್ದೇನೆ. ನಿಮ್ಮಿಂದ ಈ ರಾಜ್ಯಕ್ಕೆ ಕ್ಷೇಮ ವಾಗುವುದೆಂಬ ಭರವಸೆಯಿದೆ. ನಾನು ಬದುಕಿರುವವರೆಗೆ ನನನ್ನು ಅಗಲಿ ಹೋಗುವುದಿಲ್ಲವೆಂದು ನನಗೆ ವಚನಕೊಡಿರಿ" ಎಂದು ದೈನ್ಯದಿಂದ ಬೇಡಿದನು.

ಷಾಜಿಯ ಕಣ್ಣುಗಳಲ್ಲಿ ನೀರು ತೊಟ್ಟಿಕ್ಕಿತು. ಅವನು ಗದ್ಗದ ಕಂಠ ದಿಂದ ಸುಲ್ತಾನರಿಗೆ ಸ್ನೇಹ ಹಸ್ತವನ್ನು ನೀಡಿ ಅಭಿವಚನವನ್ನು ಇತ್ತನು.

ಫೌಜುದಾರನು ಅಹಮದ್ ನಗರಕ್ಕೆ ಹೋಗಿ ಎಲ್ಲವನ್ನೂ ವರದಿ ಮಾಡಿದನು. ಅಷ್ಟರಲ್ಲಿ ಶಿವಾಜಿಯ ಕಡೆಯಿಂದ ಸರ್ವಾಧಿಕಾರಿ ಮುರಾದ ಭಕ್ಷನಿಗೆ ಪತ್ರ ಬರೆದು ಬಂದಿತ್ತು.

"ಡೆಲ್ಲಿಯ ಬಾದಷಹರ ಮಕ್ಕಳಾದ ಸರ್ವಾಧಿಕಾರಿ ಮುರಾದ್ ಭಕ್ಷ ರವರಿಗೆ ನನ್ನ ಮೇಲೆ ಬಾದಷಹರ ಅನುಗ್ರಹವಾಗುವಂತೆ ತಾವು ಮಾಡಿಸಿದ್ದ ಕ್ಕಾಗಿ ಅನಂತ ಧನ್ಯವಾದಗಳು. ತಮ್ಮ ಅನುಗ್ರಹದಿಂದ ನಮ್ಮ ತಂದೆ ಷಾಜಿ ಯವರ ಬಿಡುಗಡೆಯಾಗಿದೆ. ನಾನು ಮೊದಲಿನಿಂದಲೂ ಬಾದಷರ ಸೇವೆಗೆ ಬರಬೇಕೆಂದು ಅತ್ಯುತ್ಸಾಹಿತನಾಗಿದ್ದೇನೆ. ಆದರೆ ನನ್ನ ಸಾಮರ್ಥ್ಯವನ್ನು ಅವರಿಗೆ ತೋರದೇ ಯಾವ ಧೈರ್ಯದಿಂದ ಡೆಲ್ಲಿಯ ದರ್ಬಾರಿನಲ್ಲಿ ಅಧಿಕಾರ ವನ್ನು ಬೇಡಲಿ ? ತಮ್ಮ ವಿಶ್ವಾಸದಿಂದ ನನ್ನ ವಿಷಯವು ಬಾದಷಹರವರಿಗೆ

ಮುಟ್ಟಿದೆ. ಈ ಗಡಿನಾಡಿನ ಕೋಟೆಗಳು ಒಂದು ವಿಧವಾಗಿ ಆಯುಕಟ್ಟಿನ ಕೋಟೆಗಳು. ಅದು ನನ್ನ ವಶದಲ್ಲಿದ್ದರೂ ತಮ್ಮ ಅಧೀನದಲ್ಲಿದ್ದಂತೆಯೇ. ನನಗೆ ದರ್ಬಾರಿನಿಂದ ಯಾವುದಾದರೊಂದು ವಿಧವಾಗಿ ಅಧಿಕಾರ ಪತ್ರವನ್ನು ಕೊಡಿಸಿ ಬಿಟ್ಟರೆ ನಾನು ಈ ಕೋಟೆಗಳನ್ನೆಲ್ಲಾ ಡೆಲ್ಲಿಯ ದರ್ಬಾರಿಗೆ ಒಪ್ಪಿಸಿ ಬಿಡುತ್ತೇನೆ. ಇದರಿಂದ ಮೊಗಲಾಯಿ ರಾಜ್ಯದ ಗಡಿ ಪ್ರದೇಶವು ಸುಭದ್ರ ವಾಗುತ್ತದೆ. ದಕ್ಕನ್‌ನ್ನಿನ ಸರ್ವಾಧಿಕಾರಿಗಳಾದ ತಾವು ಒಂದು ಬಾರಿ ಪುರಂಧರಗಢಕ್ಕೆ ಬಂದು ದರ್ಶನವಿತ್ತು ನಮ್ಮ ಆತಿಥ್ಯವನ್ನು ಸ್ವೀಕರಿಸ ಬೇಕೆಂದು ಪ್ರಾರ್ಥಿಸುತ್ತೇನೆ" ಎಂದು ಪತ್ರಬರೆದು ಮರಾಠಾ ಸರದಾರರ ಕೈಲಿಕೊಟ್ಟು ಅಹಮದ್ ನಗರಕ್ಕೆ ಕಳುಹಿಸಿದನು.

ಸರ್ವಾಧಿಕಾರಿ ಮುರಾದ್‌ಭಕ್ಷನು ಶಿವಾಜಿಗೆ ಸಮಯೋಚಿತವಾದ ಪತ್ರವನ್ನು ಬರೆದು ಶಿವಾಜಿಯ ಪತ್ರವನ್ನು ಡೆಲ್ಲಿಯ ಬಾದಷಹರವರಿಗೆ ಕಳುಹಿಸಿದನು.

ಶಿವಾಜಿಯ ಸೇನಾಧಿಪತಿಗಳಾದ ನೇತಾಜಿ ಮತ್ತು ರಘೋಜಿಯೆಂಬು ವರು ಕೊಂಕಣ ದೇಶದಲ್ಲಿ ಸಂಚಾರ ಮಾಡಿಕೊಂಡು ಬಂದಿದ್ದರು. ಶಿವಾಜಿಗೆ ಕೊಂಕಣದ ಕಡೆ ಹೋಗಬೇಕೆಂದೂ ಗೋವಾದವರಿಗೆ ಆಕ್ರಮಣ ಮಾಡ ಬೇಕೆಂದೂ ಅಭಿಲಾಷೆಯಿದ್ದಿತು. ಆ ಪ್ರಾಂತವನ್ನು ನೋಡಿಕೊಂಡು ಬರಲು ನೇತಾಜಿ ಮತ್ತು ರಘೋಜಿ ಇಬ್ಬರನ್ನೂ ಕಳುಹಿಸಿಕೊಟ್ಟಿದ್ದನು. ಅವರು ಎಲ್ಲ ಪ್ರದೇಶಗಳನ್ನೂ ಚೆನ್ನಾಗಿ ನೋಡಿಕೊಂಡು ಬಂದು ಶಿವಾಜಿಗೆ ತಿಳಿಸಿದರು.

"ಮಧ್ಯದಲ್ಲಿ ಜಾವಳಿ ಎಂಬ ಕೋಟೆಯಿದೆ. ಅಲ್ಲಿ ಮೋರೆ ಮನೆತನದ ರಾಜರು ಆಳುತ್ತಿದ್ದಾರೆ. ಅವರನ್ನು ಗೆದ್ದು ಆ ರಾಜ್ಯವನ್ನು ವಶಪಡಿಸಿಕೊಂಡ ಲ್ಲದೇ ನಾವು ಕೊಂಕಣಕ್ಕೆ ಹೋಗುವುದು ಅಪಾಯಕರ" ಎಂದು ಹೇಳಿದರು.

ಶಿವಾಜಿಯು "ಅವರ ಸೈನ್ಯವೆಷ್ಟಿದೆ, ಬಲವೆಷ್ಟಿದೆ?" ಎಂದು ಕೇಳಿದನು.

"ಸೈನ್ಯವು ತುಂಬಾ ಇದೆ. ಯುದ್ಧ ಮಾಡಿದರೂ ಮಾಡಬಹುದು. ಏನಾ ದರೂ ಉಪಾಯವನ್ನೂ ಮಾಡಿದರೂ ಮಾಡಬಹುದು" ಎಂದು ತಿಳಿಸಿದನು.

ಶಿವಾಜಿಯು ಯಾತ್ರೆಯ ನೆಪದಿಂದ ಮಹಾಬಲೇಶ್ವರಕ್ಕೆ ಹೋದನು. ನಾಲ್ಕು ಸಾವಿರ ಕುದುರೆಯ ಸೈನಿಕರು, ಆರುಸಾವಿರ ಪದಾತಿ ಸೈನ್ಯಗಳೂ ಮಹಾಬಲೇಶ್ವರದ ಸುತ್ತಲೂ ವಸತಿ ಮಾಡಿದವು. ಶಿವಾಜಿಯು ಮಹಾಬಲೇ

ಶ್ವರದಲ್ಲಿ ಬ್ರಾಹ್ಮಣರನ್ನು ಕರೆಸಿ, ಹೋಮಹವನಗಳನ್ನು ಮಾಡಿಸುತ್ತಿದ್ದನು. ಬ್ರಾಹ್ಮಣರಿಗೆ ಮೃಷ್ಟಾನ್ನ ಸಮಾರಾಧನೆ ದೊರೆಯುತ್ತಿದ್ದಿತು. ದಕ್ಷಿಣೆಗಳು ಧಾರಾಳವಾಗಿ ದೊರೆಯುತ್ತಿದ್ದುವು. ಆ ಪ್ರಾಂತದಲ್ಲೆಲ್ಲಾ ಶಿವಾಜಿಯ ಕೀರ್ತಿಯನ್ನು ಹೊಗಳುತ್ತಿದ್ದರು.

ಒಂದು ದಿನ ಅತ್ಯಂತ ಸಮಾರಂಭದೊಡನೆ ಒಂದು ಮ್ಯಾನಾದಲ್ಲಿ ರಾಜಸ್ತ್ರೀಯೊಬ್ಬಳು ಪರಿವಾರ ಸಮೇತ ದೇವಾಲಯಕ್ಕೆ ಬಂದು ದೇವರ ದರ್ಶನ ಮಾಡುತ್ತಿದ್ದಳು. ಅವಳು ಚಾವಳಿಯ ರಾಜ ಚಂದ್ರರಾಯನ ಮಗಳು. ಹೆಸರು ಚಾರುಶೀಲಾ, ಮಹಾಬಲೇಶ್ವರದಲ್ಲಿ ನಡೆಯುತ್ತಿರುವ ಚಂಡೀಯಾಗವನ್ನು ನೋಡಿ, ಈ ಯಾಗಯಜ್ಞಗಳನ್ನು ಯಾರು ನಡೆಸುತ್ತಿದ್ದಾರೆ ? ಇಷ್ಟೊಂದು ಅನ್ನಧಾನ, ದಕ್ಷಿಣೆಗಳು ನಡೆಯುತ್ತಿವೆ. ಯಾವ ಪುಣ್ಯಾತ್ಮನು ಈ ಧರ್ಮಗಳನ್ನು ನಡೆಸುತ್ತಾನೆ ?" ಎಂದು ದೇವಾಲಯದ ಅರ್ಚಕರನ್ನು ವಿಚಾರಿಸಿದಳು.

ಅರ್ಚಕರು "ಪುರಂಧರಗಢದ ರಾಜ ಶಿವಾಜಿಯು ಇಲ್ಲಿಗೆ ಬಂದಿದ್ದಾನೆ. ಆ ರಾಜನು ನಾನಾ ದೇಶಗಳಿಂದ ಬ್ರಾಹ್ಮಣರನ್ನು ಕರೆಸಿ ಈ ಹೋಮಹವನಗಳನ್ನೂ, ದಾನಧರ್ಮಗಳನ್ನೂ ನಡೆಸುತ್ತಿದ್ದಾನೆ" ಎಂದು ಹೇಳಿದರು.

ಚಾರುಶೀಲಾದೇವಿಯು ಕುತೂಹಲದಿಂದ ಯಾಗಶಾಲೆಗೆ ಹೋಗಿ ಯಜ್ಞೇಶ್ವರನನ್ನೂ ಬ್ರಾಹ್ಮಣರನ್ನೂ ದರ್ಶನ ಮಾಡಿದಳು. ಎಲ್ಲರಿಗೂ ದಕ್ಷಿಣೆಗಳನ್ನು ಕೊಟ್ಟಳು.

ಅವಳು ಯಜ್ಞಶಾಲೆಯಿಂದ ಹೊರಡುವ ಸಮಯಕ್ಕೆ ಸರಿಯಾಗಿ ಶಿವಾಜಿಯು ಮಡಿ ಮಾಡಿಕೊಂಡು ಪಟ್ಟೆಯ ಮೊಗಟೆಗಳನ್ನು ಉಟ್ಟು ತನ್ನ ಸಂಗಡಿಗರೊಂದಿಗೆ ಯಾಗಶಾಲೆಗೆ ಬರುತ್ತಿದ್ದನು. ಅವನು ಯಾಗಶಾಲೆಯಿಂದ ಹೊರಡುತ್ತಿರುವ ಯುವತಿಯು ಯಾರೆಂದು ವಿಚಾರಿಸಿದನು. "ಅವಳ ಹೆಸರು ಚಾರುಶೀಲಾದೇವಿ. ಚಾವಳಿಯ ಮೋರೆ ರಾಜರ ಮಗಳು" ಎಂದು ತಿಳಿಸಿದರು.

ಶಿವಾಜಿಯೂ ಚಾರುಶೀಲದೇವಿಯೂ ಪರಸ್ಪರ ನೋಡಿದರು.

ಶಿವಾಜಿಯು "ಹುಡುಗಿಯು ಗೌರವಸ್ಥರ ಮನೆಯವಳು. ಲಾವಣ್ಯವಿದೆ. ಗಾಂಭೀರ್ಯವಿದೆ" ಎಂದು ತನ್ನ ಸಂಗಡಿಗರರೊಂದಿಗೆ ಮೆಲ್ಲನೆಯ ಧ್ವನಿಯಿಂದ ನುಡಿದನು.

ಶಿವಾಜಿಯ ಸಂಗಡಿಗರು ಯಾಗಶಾಲೆಯಲ್ಲಿ ಚಾರುಶೀಲಾದೇವಿ ಇದ್ದೆಡೆಗೆ ಹೋಗಿ ಮರ್‍ಯಾದೆಯಿಂದ ಅವಳ ಯೋಗಕ್ಷೇಮಗಳನ್ನು ವಿಚಾರಿಸಿದರು.

ಜೊತೆಯಲ್ಲಿದ್ದ ಪರಿಚಾರಿಕೆಯು "ಇವರು ಮೋರೆ ಚಂದ್ರರಾಯರ ಮಗಳು. ದೇವರ ದರ್ಶನಕ್ಕೆ ಬಂದಿದ್ದರು. ಹಾಗೆಯೇ ಇಲ್ಲಿ ಚಂಡೀಯಾಗವು ನಡೆಯುತ್ತಿದೆಯೆಂದೂ ಶಿವಾಜಿ ಮಹಾರಾಜರೂ ನಡೆಸುತ್ತಿದ್ದಾರೆಂದೂ ತಿಳಿಯಿತು. ನಮ್ಮ ರಾಜಕುಮಾರಿಯವರು ಯಾಗವನ್ನು ನೋಡಲು ಕುತೂಹಲದಿಂದ ಈ ಯಾಗಶಾಲೆಗೆ ಬಂದರು. ಯಾಗವನ್ನೂ ನೋಡಿದಹಾಗಾಯಿತು. ಶಿವಾಜಿ ಮಹಾರಾಜರನ್ನೂ ನೋಡಿದಹಾಗಾಯಿತು" ಎಂದು ಹೇಳಿದರು.

ಅವಳ ವ್ಯಂಗೋಕ್ತಿಯನ್ನು ಕೇಳಿ ರಾಜಕುಮಾರಿಯು ನಾಚಿಕೆಯಿಂದ ತಲೆ ತಗ್ಗಿಸಿದಳು.

ಶಿವಾಜಿಯ ಸಂಗಡಿಗರು ಕುತೂಹಲದಿಂದ "ಒಳ್ಳೆಯದಾಯಿತು. ನಮಗೂ ರಾಜಕುಮಾರಿಯವರ ದರ್ಶನವಾದಂತಾಯಿತು. ಇವರ ಪತಿಯವರು ಯಾವ ರಾಜಕುಲಕ್ಕೆ ಸೇರಿದವರೋ" ಎಂದು ಅರ್ಥೋಕ್ತಿಯಿಂದ ಪ್ರಶ್ನೆ ಮಾಡಿದರು.

ಆ ರಾಜಕುವರಿಯ ಸಖಿಯು "ನಮ್ಮ ಚಾರುಶೀಲಾದೇವಿ ಇನ್ನೂ ಅವಿವಾಹಿತೆ" ಎಂದು ಹೇಳಿದಳು.

ಶಿವಾಜಿಯ ಸಂಗಡಿಗರು ಅವರುಗಳಿಗೆ ಉಪಚಾರೋಕ್ತಿಗಳನ್ನು ಹೇಳಿ ಯಾಗಶಾಲೆಯ ನೈವೇದ್ಯ ಪ್ರಸಾದಗಳನ್ನು ಕೊಡಿಸಿ ಕಳುಹಿಸಿದರು.

ದೇವಾಲಯದ ಸಮೀಪದಲ್ಲಿ ಮ್ಯಾನಾ ಮತ್ತು ಪರಿಜನರು ಕಾದಿದ್ದರು. ಚಾರುಶೀಲೆಯು ತನ್ನ ಸಖಿಯರೊಂದಿಗೆ ಪ್ರಯಾಣೋನ್ಮುಖಳಾಗಿ ದೇವಾಲಯದ ದ್ವಾರಕ್ಕೆ ಹೋದಳು.

ಸಖಿಯು ಚಾರುಶೀಲೆಯ ಕಿವಿಯಲ್ಲಿ "ದೇವರು ವರಪ್ರದಾನವನ್ನೂ ಮಾಡಬಾರದೇ ?" ಎಂದು ಹಾಸ್ಯಮಾಡಿದಳು.

ಚಾರುಶೀಲೆಯ ಹುಬ್ಬು ಗಂಟಿಕ್ಕಿ "ನಾಚಿಕೆಯಿಲ್ಲ ನಿನಗೆ ಚಂದ್ರಾ" ಎಂದು ಅವಳನ್ನು ಗದ್ದರಿಸಿದಳು.

ಸಖೀ ಚಂದ್ರಾವತಿಯು "ಶಿವಾಜಿಯು ಮಹಾ ಪರಾಕ್ರಮಶಾಲಿಯೆಂದು ನಾವು ಕೇಳಿಲ್ಲವೇ? ಅಂಥವನನ್ನು ಮದುವೆಯಾಗಲು ಪುಣ್ಯ ಪಡೆದಿರಬೇಕು, ದೇವರ ದಯವಿದ್ದರೆ ಕ್ಷಿಪ್ರದಲ್ಲಿಯೇ ವರಪ್ರಸಾದವು ದೊರೆಯುತ್ತದೆ" ಎಂದು ಹೇಳಿದಳು.

ಚಾರುಶೀಲೆಯು ನಾಚಿಕೆಯಿಂದ ತಲೆ ಬಾಗಿಸಿ ಮ್ಯಾನಾದಲ್ಲಿ ಹೋಗಿ ಕುಳಿತುಕೊಂಡಳು. ಸಖಿ ಚಂದ್ರಾವತಿಯೂ ಕುಳಿತಳು. ಬೋಯಿಗಳು ಮ್ಯಾನಾವನ್ನು ಹೊತ್ತುಕೊಂಡು ಹೊರಟಳು. ಪರಿಜನರು ಹಿಂದೆ ಹೊರಟರು.

ಮ್ಯಾನಾದಲ್ಲಿ ಚಂದ್ರಾವತಿಯು ರಾಜಕುವರಿಯನ್ನು ಹಾಸ್ಯಮಾಡಿದಳು ಆ ಹಾಸ್ಯವು ಮುಗಿದು ನಾಚಿಕೆಯು ಅಳಿದು ಅವರಿಬ್ಬರೂ ಶಿವಾಜಿಯ ಮಾತನೆತ್ತಿ ಎಷ್ಟೋ ಸ್ತುತಿಗೈದರು.

ಶಿವಾಜಿಯನ್ನು ಮದುವೆಯಾಗುವ ಆಸೆಯಲ್ಲಿ ಚಾರುಶೀಲೆಯು ನಿಸ್ಸಂಕೋಚವಾಗಿ ಹೇಳಿಕೊಂಡಳು.

ಚಂದ್ರಾವತಿಯು "ನಾನು ಮದುವೆಗೆ ತಕ್ಕ ಸಂಧಾನವನ್ನು ಕಲ್ಪಿಸುತ್ತೇನೆ" ಎಂದಳು.

"ಹೇಗೆ ಕಲ್ಪಿಸುತ್ತಿ?" ಎಂದು ರಾಜಕುವರಿಯು ಪ್ರಶ್ನೆಮಾಡಿದಳು.

"ನಾನು ಮಹಾರಾಜರಲ್ಲಿ ಹೇಳುತ್ತೇನೆ. ನಾವು ಮಹಾಬಲೇಶ್ವರ ದರ್ಶನಕ್ಕೆ ಹೋಗಿದ್ದೆವೆಂದು ಹೇಳುತ್ತೇನೆ. ಯಾಗಶಾಲೆಯ ಮಾತೆತ್ತಿ ಮಹಾಬಲೇಶ್ವರದಲ್ಲಿ ಚಂಡೀ ಯಾಗವು ನಡೆಯುತ್ತಿದೆ. ಅನೇಕ ದೇಶದ ಬ್ರಾಹ್ಮಣರು ಋತ್ವಿಜರಾಗಿ ಸೇರಿದ್ದಾರೆ. ಶಿವಾಜೀ ಮಹಾರಾಜನು ತಂದೆ ಷಾಜಿಯವರ ಕ್ಷೇಮಾರ್ಥವಾಗಿ ಯಾಗ ಮಾಡಿಸುತ್ತಿದ್ದಾನೆ. ಬ್ರಾಹ್ಮಣ ಭೋಜನ. ಭಾರಿ ದಕ್ಷಿಣೆಗಳು ಕೊಡಲ್ಪಡುತ್ತಿವೆ ಮಹಾರಾಜರವರೂ ಹೋಗಿ ಆ ಯಾಗವನ್ನು ನೋಡಿಕೊಂಡು ಬರಬಾರದೇಕೆ—ಎಂದು ಹೇಳುತ್ತೇನೆ. ಆ ಶಿವಾಜಿಯು ನಮ್ಮ ದೇವಿಯವರಿಗೆ ವರನಾಗಬಾರದೇಕೆ—ಎಂದು ಹೇಳುತ್ತೇನೆ."

ಚಾರುಶೀಲಳು "ಹಾಗೆಲ್ಲಾ ಹೇಳಬೇಡ. ನನ್ನ ಮಾನ ಹೋದಂತೆ ಆಗುತ್ತದೆ. ನಾವೇ ವರನನ್ನು ಹುಡುಕಿಕೊಂಡು ಬಂದೆವೆಂಬುದು ಎಷ್ಟು

ಅಪಮಾನಕರ. ಅಂಥಾ ಹುಚ್ಚು ಮಾತುಗಳನ್ನು ಯಾರೊಡನೆಯೂ ಆಡ ಬೇಡ. ಚಂಪ್ರಾವತಿ" ಎಂದು ಹೇಳಿದಳು.

ರಾಜಾಕುವರಿಯ ತಾಯಿ ಸುಮಿತ್ರಾದೇವಿಯುವರಿಗೆ ಈ ಸಮಾಚಾರವು ತಿಳಿಯಿತು. ಅವರು ಮಹಾರಾಜರೊಡನೆ ಪ್ರಸ್ತಾಪ ಮಾಡಿದರು.

ರಾಜಾ ಚಂದ್ರರಾಯನು ತನ್ನ ತಮ್ಮನಾದ ಸೂರ್ಯರಾಯನೊಡನೆ ಪ್ರಸ್ತಾಪ ಮಾಡಿದನು

ಸೂರ್ಯರಾಯನು "ಶಿವಾಜಿಯು ಪ್ರತಾಪಶಾಲಿ ಎಂದು ಕೇಳಿದ್ದೇನೆ. ಅವನು ಗಡಿನಾಡಿನ ಕೋಟೆಗಳನ್ನು ಹಿಡಿದು ಬಿಜಾಪುರದವ ರಲ್ಲಿಯೂ ಮೊಗಲರಲ್ಲಿಯೂ ವಿರೋಧ ಕಟ್ಟಿಕೊಂಡಿದ್ದಾನೆ. ಶಿವಾಜಿಯ ಮೇಲಿನ ಆಗ್ರಹಕ್ಕಾಗಿ ಅವನ ತಂದೆ ಷಾಜಿಯನ್ನು ಬಿಜಾಪುರದ ಸುಲ್ತಾನನು ಬಂಧನದಲ್ಲಿಟ್ಟದ್ದನು. ಶಿವಾಜಿಯು ಏನೋ ತಂತ್ರಮಾಡಿ ಬಿಡಿಸಿದ್ದಾನೆ. ಅದಕ್ಕಾಗಿಯೇ ಈ ಹೋಮ ಹವನಗಳನ್ನು ಈ ಮಹಾಬಲೇಶ್ವರದಲ್ಲಿ ನಡೆಸು ತ್ತಿದ್ದಾನೆಂದು ಗುಪ್ತಚಾರರು ಹೇಳುತ್ತಾರೆ. ಮುಸಲ್ಮಾನರೊಡನೆ ಬಲವ ದ್ವಿರೋಧ ಕಟ್ಟಿಕೊಂಡಿರುವವನಿಗೆ ಹೆಣ್ಣು ಕೊಟ್ಟರೆ ಹೇಗೆ! ಅವನು ಪರಾ ಕ್ರಮ ಶಾಲಿಯೇನೋ ಹೌದು. ಪರಾಕ್ರಮದಿಂದ ಗಡಿನಾಡಿನ ಕೋಟೆ ಗಳನ್ನು ವಶಪಡಿಸಿಕೊಂಡಿದ್ದಾನೆ. ಸಾಮಾನ್ಯ ಜಮೀನ್ದಾರರ ಮಗ. ರಾಜ ನೆಂದು ಕರೆಯುತ್ತಾರೆ. ಮೊಗಲರೋ ಬಿಜಾಪುರದವರೋ ಆ ಕೋಟೆಗಳನ್ನು ಕಿತ್ತುಕೊಂಡು ಓಡಿಸುತ್ತಾರೆ. ಆಗ ಶಿವಾಜಿಯು ಭಿಕಾರಿಯಾಗುತ್ತಾನೆ. ಅಂತಹ ಅಳಿಯನನ್ನು ಮನೆಯಲ್ಲಿ ತಂದಿಟ್ಟುಕೊಳ್ಳಬೇಕಾಗುತ್ತದೆ. ಇದೆಲ್ಲಾ ಎಲ್ಲಿಯ ಹವ್ಯಾಸ. ನಮ್ಮಲ್ಲಿಯೇ ಬುದ್ಧಿವಂತನಾದ ರೂಪಲಕ್ಷಣ ಸಂಪನ್ನ ನಾದ ಜಹಗೀರ್‌ದಾರರ ಮಗನೊಬ್ಬನನ್ನು ನೋಡಿ ಮದುವೆಮಾಡಿ ಕೊಟ್ಟರೆ ನಮಗೂ ಸುಖ. ಆ ದಂಪತಿಗಳೂ ಸುಖವಾಗಿರುತ್ತಾರೆ" ಎಂದು ಹೇಳಿದನು.

ಚಂದ್ರರಾಯನಿಗೆ ಧರ್ಮಸಂಕಟಕ್ಕೆ ಬಂದಿತು.

"ಹೆಂಡತಿ ಮಗಳು ಶಿವಾಜಿಯನ್ನು ಒಪ್ಪಿ ಬಿಟ್ಟಿರುವಂತಿದೆ. ಈ ಸಹೋದರನು ಪ್ರತಿಕೂಲನಾಗಿದ್ದಾನೆ. ಏನು ಮಾಡುವುದು" ಎಂದು ಯೋಚನೆಗಿಟ್ಟುಕೊಂಡಿತು.

ಶಿವಾಜಿಯ ಜೊತೆಗಾರರೆಲ್ಲಾ ಸೇರಿ ಆಲೋಚನೆ ಮಾಡಿದರು. "ನಾವು ಈ ಜಾವಳಿಯ ಮೇಲೆ ಯುದ್ಧಮಾಡಬೇಕೆಂದಿದ್ದೇವೆ. ಅವರಿಗೂ ಬಲವತ್ತರವಾದ ಸೈನ್ಯವಿದೆ. ಸಹಸ್ರಾರು ಪ್ರಾಣಗಳು ನಾಶವಾಗುತ್ತವೆ. ಏನಾದರೂ ಉಪಾಯಮಾಡಿ ಜಾವಳಿಯ ಅರಸರಾದ ಚಂದ್ರರಾಯ, ಸೂರ್ಯರಾಯ ಇವರಿಬ್ಬರನ್ನೂ ಕೊಂದುಹಾಕಿಬಿಟ್ಟರೆ ಸುಲಭವಾಗಿ ಈ ರಾಜ್ಯವು ಕೈಸೇರುತ್ತದೆ" ಎಂದು ಹೇಳಲಾರಂಭಿಸಿದರು.

ಶಿವಾಜಿಯು "ಆಲೋಚನೆಯೇನೋ ಸರಿಯಾಗಿದೆ. ಆದರೆ ಯಾವ ಉಪಾಯದಿಂದ ಆ ರಾಜನನ್ನು ಕೊಲೆಮಾಡಬೇಕು?" ಎಂದು ಕೇಳಿದನು.

ತರುಣ ಸೇನಾಧಿಪತಿಗಳು "ಅದಕ್ಕೊಂದು ಉಪಾಯವಿದೆ, ಮಹಾರಾಜ್, ಅಂದು ಆ ರಾಜಕುಮಾರಿಯು ಯಾಗಶಾಲೆಗೆ ಬಂದಳಲ್ಲ, ಅವಳನ್ನು ನಮ್ಮ ಶಿವಾಜೀ ಮಹಾರಾಜರಿಗೆ ಮದುವೆಮಾಡಿಕೊಡಿಯೆಂದು ಸಂಧಾನ ನಡೆಸುವುದಕ್ಕೆ ಹೋಗುವುದು, ಉಪಾಯವಾಗಿ ಏಕಾಂತದಲ್ಲಿ ರಾಜನೊಡನೆ ಮಾತನಾಡುತ್ತಾ ಮೇಲೆ ಬಿದ್ದು ಕೊಂದುಬಿಡುವುದು. ಆಮೇಲೆ ನಮಗೂ ಅವರಿಗೂ ಯುದ್ಧವಾದರೂ ಚಿಂತೆಯಿಲ್ಲ" ಎಂದು ಸಲಹೆಕೊಟ್ಟರು.

ಶಿವಾಜಿಯು "ಹಾ ಹಾ, ಎಂತಹ ವಂಚನೆ. ನಾವು ಹಾಗೆ ಮಾಡಿದರೆ ಎಂದೂ ಅಳಿಸಲಾಗದ ಕಳಂಕವು ನಮ್ಮ ಮೇಲೆ ಬೀಳುವುದು. ಒಂದು ಪಕ್ಷ ನಮ್ಮ ಕಲ್ಪನೆಗಳೆಲ್ಲಾ ಭಂಗವಾದರೆ ಅಪಕ್ಷಾತಿಯು ಒಂದು ಕಡೆ. ಆಗಲೂ ಯುದ್ಧವು ಅನಿವಾರ್ಯ, ಅದಕ್ಕಿಂತಲೂ ರಾಜಾರೋಷವಾಗಿ ಯುದ್ಧಮಾಡುವುದೇ ವೀರರ ಲಕ್ಷಣ" ಎಂದು ಹೇಳಿದನು.

ಯೋಚನೆಯು ಬಗೆಹರಿಯಲಿಲ್ಲ.

ಸಂಗಡಿಗರು ಹಿಡಿದ ಹಠವನ್ನು ಬಿಡಲಿಲ್ಲ.

ಶಿವಾಜಿಯು ಮತ್ತೆ ಅವರನ್ನು ಸೇರಿಸಿ ಆಲೋಚನೆ ಮಾಡಿದನು.

"ನಾವು ಕೇಳಿದಂತೆ ಅವರು ಮದುವೆಗೊಪ್ಪಿದರೆ ಏನುಮಾಡುತೀರಿ, ಆಗ ಇನ್ನೂ ಸಂಕಟಕ್ಕೆ ಇಟ್ಟುಕೊಳುತ್ತದೆ. ಯುದ್ಧದಲ್ಲಿ ಗೆದ್ದ ಮೇಲೆಯೂ ಆ ರಾಜಕುಮಾರಿಯು ಮದುವೆ ಮಾಡಿಕೊಳ್ಳಬೇಕೆಂದು ನನ್ನಲ್ಲಿ ಹಠಹಿಡಿದರೆ ಆಗೇನು ಮಾಡುವುದು?" ಎಂದು ಕೇಳಿದನು.

ಸಂಗಡಿಗರು "ಮಹಾರಾಜರೇ, ಅದಕ್ಕೇನು ಅಡ್ಡಿ. ಹಿಂದೂರಾಜರು ಎಷ್ಟೋ ಮದುವೆಗಳನ್ನ ಮಾಡಿಕೊಂಡ ನಿದರ್ಶನಗಳಲಿಲ್ಲವೆ? ನಮ್ಮ ಪುರಾಣ ಪದ್ಧತಿಯೇ ಹಾಗೆ. ಗೆದ್ದ ರಾಜ್ಯದ ರಾಜಕುವರಿಯರನ್ನು ಮದುವೆಯಾಗು ವುದು ಹಿಂದೂರಾಜರ ಅನೂಚಾನ ಪದ್ಧತಿ" ಎಂದು ಹೇಳಿದರು.

ಶಿವಾಜಿಯು ತಿರಸ್ಕಾರದ ನಗುವನ್ನು ನಕ್ಕನು "ನಾನು ಮಹಾರಾಜನೂ ಅಲ್ಲ; ಸಾರ್ವಭೌಮನೂ ಅಲ್ಲ. ಹುಚ್ಚು ಕಲ್ಪನೆಗಳನ್ನು ಮಾಡಿಕೊಳ್ಳ ಬೇಡಿರಿ. ನಾವು ಎಲ್ಲಿಯೋ ಒಂದು ಕಡೆ ರಾಜ್ಯವನ್ನು ಕಟ್ಟಿಕೊಂಡು ಐಹಿಕ ಭೋಗಗಳನ್ನು ಅನುಭವಿಸುತ್ತಾ ಇರಲು ಹುಟ್ಟಿಲ್ಲ. ನಮ್ಮ ಸಂಕಲ್ಪ ಗಳು ಮಹತ್ತರಗಳಾಗಿವೆ. ಬಿಜಾಪುರದ ಸುಲ್ತಾನನೂ, ಡೆಲ್ಲಿಯ ಬಾದ ಷಹನೂ ನಮ್ಮನ್ನು ಸುಮ್ಮನೆ ಬಿಡುವುದಿಲ್ಲ. ಹೆಜ್ಜೆ ಹೆಜ್ಜೆಗೆ ಕ್ಷಣ ಕ್ಷಣಕ್ಕೆ ಯುದ್ಧಗಳು ಕಾದಿವೆ. ನಮ್ಮ ಕೋಟೆಕೊತ್ತಲಗಳು ಶಾಶ್ವತವಲ್ಲ. ಇಬ್ಬರು ಬೇಟೆಗಾರರ ನಡುವೆ ಸಿಕ್ಕಿರುವ ಹಕ್ಕಿಯಂತಿದ್ದೇವೆ ನಾವು, ಎರಡು ಬಾಣ ಗಳೂ ಒಮ್ಮೆ ಬಿದ್ದವೆಂದರೆ ನಾವು ಛಿನ್ನಛಿನ್ನವಾಗಿ ಬೀಳುತ್ತೇವೆ. ಆ ವ್ಯಾಧರ ಬಾಣಗಳೇ ಒಬ್ಬರ ಬಾಣಗಳು ಮತ್ತೊಬ್ಬರಿಗೆ ತಗುಲಿ ಇಬ್ಬರೂ ಸತ್ತುಬಿದ್ದರೆ ಮಾತ್ರ ಹಕ್ಕಿಯು ಆಕಾಶದಲ್ಲಿ ಸ್ವತಂತ್ರವಾಗಿ ಹಾರಾಡಬಹುದು. ನಮ್ಮ ಭಂಡಾರವಾದರೂ ಎಷ್ಟಿದೆ ಎಂದುಕೊಂಡಿದ್ದೀರಿ. ನಮ್ಮ ಸೈನ್ಯಕ್ಕೆಲ್ಲಾ ಹೊಟ್ಟೆತುಂಬಾ ಒಂದು ವರ್ಷದ ಊಟಕೊಡುವುದಕ್ಕೂ ಸಾಕಷ್ಟಿಲ್ಲ. ನಾನು ಭಿಕಾರಿಯಾಗಿ ಈ ಮಾವನ ಮನೆಯ ಅಳಿಯನಾಗಲು ಸಿದ್ಧನಾಗಿಲ್ಲ. ನನ್ನ ಕೊರಳು ರಾಜಕನ್ಯೆಯರ ಪುಷ್ಪಮಾಲಿಕೆಯನ್ನು ಎದುರು ನೋಡುತ್ತಿಲ್ಲ. ರಣಕ್ಷೇತ್ರದಲ್ಲಿ ತುರುಷ್ಕ ಸೇನಾಪತಿಗಳ ಅಸಿಧಾರೆಯನ್ನು ಎದುರಿಸಲು ಸಿದ್ಧ ವಾಗಿದೆ" ಎಂದು ಹೇಳಿದನು.

ಪುನಃ ಮಾತು ಮುರಿಯಿತು.

ಯಾಗವು ನಡೆಯುತ್ತಲೇ ಇದ್ದಿತು. ಪೂರ್ಣಾಹುತಿಯಾಗಿ ಯಾಗವು ಮುಕ್ತಾಯವಾಗುವವರೆಗೆ ಮುಂದಿನ ಆಲೋಚನೆಗೆ ಎಡೆಯಿರಲಿಲ್ಲ.

ಅಷ್ಟರಲ್ಲಿ ಜಾವಳಿಯ ಚಂದ್ರರಾಯನು ತನ್ನ ಮುತ್ಸದ್ದಿಗಳನ್ನು ಮಹಾ ಬಲೇಶ್ವರಕ್ಕೆ ಕಳುಹಿಸಿಕೊಟ್ಟನು.

ವಿಠಲರಾವ್ ಶಾವಡೆಯವರು ವಂಶಪಾರಂಪರ್ಯದಿಂದ ಅಧಿಕಾರದಲ್ಲಿರುವ ಅರಮನೆಯ ಖಾಸ್ ಮುತ್ಸದ್ದಿಗಳು. ಅವರು ಮಹಾಬಲೇಶ್ವರಕ್ಕೆ ಬಂದು ಶಿವಾಜಿಯ ಬಿಡಾರದಲ್ಲಿ ಶಿವಾಜಿಯ ಸಂಗಡಿಗರನ್ನು ಭೇಟಿ ಮಾಡಿದರು.

ಪರಸ್ಪರ ಪ್ರಶ್ನೋತ್ತರಗಳಿಂದ ಪರಿಚಯವಾದಮೇಲೆ ಮತ್ಸದ್ದಿ ವಿಠಲರಾವ್ ಶಾವಡೆಯವರು "ನಾವು ಜಾವಳಿಯ ಅರಮನೆಯವರು. ನನ್ನ ಹೆಸರು ವಿಠಲರಾವ್ ಶಾವಡೆ. ನಮ್ಮ ರಾಜಕುಮಾರಿಯವರ ವಿವಾಹ ಪ್ರಸ್ತಾಪವನ್ನು ಮಾಡಲು ಬಂದ್ದೇವೆ" ಎಂದು ಹೇಳಿದನು.

ಸಂಗಡಿಗರು ಅತ್ಯಂತ ಸಂತೋಷಪಟ್ಟರು. "ನಾವಾಗಿ ಬಯಸಿದ ಬೇಟೆಯು ತಾನಾಗಿ ಸಿಕ್ಕಿದೆ" ಎಂದು ಆ ಮುತ್ಸದ್ದಿಗಳಿಗೆ ಶಿವಾಜಿಯ ಭೇಟಿಮಾಡಿಸಿದರು.

ಶಿವಾಜಿಯ ಯಥೋಚಿತ ಕುಶಲಪ್ರಶ್ನೆಗಳನ್ನು ಮಾಡಿದನು.

ಶಿವಾಜಿಯ ಕಡೆಯಿಂದ ರ ಘು ನಾ ಥ ಬ ಲ್ಲಾ ಳ ಕೋರ್ವಿ ಎಂಬ ಸರದಾರನು ಜಾವಳಿಗೆ ಹೋಗಿ ರಾಜನನ್ನು ಕಂಡು ಮಾತನಾಡಿ ಬರುವುದೆಂದು ನಿಷ್ಕರ್ಷೆಯಾಯಿತು.

ಬಲ್ಲಾಲ ಕೋರ್ವಿಯು ಒಂದೆರಡು ಬಾರಿ ಜಾವಳಿಯ ಅರಮನೆಗೆ ಹೋಗಿಬಂದನು. ಅವನ ಸೌಮ್ಯವೇಷ, ಮೃದುಭಾಷೆ ನುಡಿಗಳನ್ನು ನೋಡಿ ಚಂದ್ರರಾಯನು ಮೆಚ್ಚಿಕೊಂಡನು.

ಚಂದ್ರರಾಯನು "ಶಿವಾಜಿಯವರನ್ನೇ ಮಿತಪರಿವಾರದೊಂದಿಗೆ ನಮ್ಮ ಅರಮನೆಗೆ ಒಂದು ಬಾರಿ ಕರೆತನ್ನಿರಿ. ನಮಗೆ ಅತ್ಯಂತ ಗೌರವ ಮಾಡಿದಂತಾಗುತ್ತದೆ" ಎಂದು ಹೇಳಿದನು.

ಬಲ್ಲಾಲ ಕೋರ್ವಿಯು "ಮಹಾರಾಜರೇ, ಶಿವಾಜಿ ಮಹಾರಾಜರು ಯಾಗಶಾಲೆಯಲ್ಲಿ ರಾಜಕುವರಿಯನ್ನು ದರ್ಶನ ಮಾಡಿದ್ದಾರೆ. ಅವರವರ ಪರಸ್ಪರ ದರ್ಶನಗಳಾಗಿವೆ. ವಿವಾಹದ ಪ್ರಸ್ತಾಪವು ನಿಮ್ಮ ಕಡೆಯಿಂದಲೇ ಬಂದಿದೆ. ಶಿವಾಜಿಯವರಿಗೆ ಬಾಲ್ಯದಲ್ಲಿಯೇ ಒಂದು ಬಡತನದ ವಿವಾಹವಾಗಿದೆ. ಇದನ್ನೆಲ್ಲಾ ನಿಮ್ಮ ಅರಮನೆಯವರು ಯೋಚನೆ ಮಾಡಿ ನಿಷ್ಕರ್ಷೆ

ಮಾಡಬೇಕು. ನಮ್ಮ ಸಂಗಡಿಗರು ನಾಲ್ಕಾರು ಮಂದಿ ಇದ್ದಾರೆ. ಮತ್ತೊಮ್ಮೆ ಅವರನ್ನು ಕರೆತರುತ್ತೇನೆ. ತಮ್ಮ ರಾಜ ಕುಟುಂಬದವರೂ ಸೇರಿ, ಮಾತ ನಾಡೋಣ. ಮಾತು ನಿಶ್ಚಯವಾದನಂತರ ಶಿವಾಜಿಯವರನ್ನು ಇಲ್ಲಿಗೆ ಕರೆತರುತ್ತೇನೆ. ಇದು ಒಳ್ಳೆಯದು. ಮೊದಲೇ ಶಿವಾಜಿಯವರು ಬಂದು ಮಾತು ಮುರಿದುಹೋದರೆ ವೃಥಾ ವಿರೋಧಕ್ಕೆ ಕಾರಣವಾಗುತ್ತದೆ" ಎಂದು ಹೇಳಿದನು.

ಚಂದ್ರರಾಯನು "ಅದೂ ನ್ಯಾಯವಾಗಿದೆ. ನೀವು ಮುಂದಿನ್ನ ಶುಕ್ರವಾರ ಬನ್ನಿರಿ. ಪುರೋಹಿತರನ್ನು ಕರೆಸಿ ಮಾತನಾಡಿ ನಿಶ್ಚಯ ಮಾಡಿ ಬಿಡೋಣ. ಆಮೇಲೆ ಶಿವಾಜಿ ಮಹಾರಾಜರ ಸ್ವಾಗತಕ್ಕೆ ತಕ್ಕ ಸಿದ್ಧತೆ ಮಾಡುತ್ತೇವೆ" ಎಂದು ಹೇಳಿದನು.

ಬಳ್ಳಾಲ ಕೋರ್ಡೇಯು ಮಹಾಬಲೇಶ್ವರಕ್ಕೆ ಹಿಂತಿರುಗಿ ಬಂದನು. ತನ ಸಂಗಡಿಗರೊಂದಿಗೆ ಮಾತನಾಡಿದನು.

ನೂರೈವತ್ತು ಜನ ಕಟ್ಟಾಳುಗಳು ತನ್ನೊಡನೆ ಸೌಮ್ಯವೇಶದಿಂದ ಬರ ಬೇಕೆಂದೂ, ಉಳಿದ ಸೈನ್ಯವೆಲ್ಲವೂ ಹತಾರಿಗಳೊಡನೆ ಜಾವಳಿಯ ಸಮೀಪಕ್ಕೆ ಬಂದು ಜಮಾಯಿಸಿರಬೇಕೆಂದು ಮಾತನಾಡಿಕೊಂಡರು.

ಶುಕ್ರವಾರದ ದಿನ ಬಳ್ಳಾಲ ಕೋರ್ಡೇಯು ವೇಶಭೂಷಣಗಳನ್ನು ಧರಿಸಿ ಕೊಂಡು, ನಾಲ್ಕಾರು ಸಂಗಡಿಗರೊಡನೆ ಜಾವಳಿಗೆ ಹೊರಟನು. ನೂರೈವತ್ತು ಜನ ಭಟರು ವೇಷಮಾರ್ಪಡಿಸಿಕೊಂಡು ಹಿಂಬಾಲಿಸಿದರು.

ಶಿವಾಜಿಯ ಸಂಗಡಿಗರು ಸೊಂಟದಲ್ಲಿ ಕತ್ತಿಯನ್ನೂ ಕಠಾರಿಯನ್ನೂ ಗುಪ್ತಾಸ್ತ್ರಗಳನ್ನೂ ಅಂಗರೇಖುಗಳಲ್ಲಿಯೇ ಬಚ್ಚಿಟ್ಟುಕೊಂಡಿದ್ದರು. ಅರಮನೆಯ ಬಾಗಿಲಿನಲ್ಲಿ ಮುತ್ಸದ್ದಿಯು ಈ ತರುಣ ಸರದಾರರುಗಳನ್ನು ಎದುರುಗೊಂಡು ಮಹಾರಾಜರ ಅಂತರಂಗ ವಿಲಾಸಕ್ಕೆ ಕರೆದೊಯ್ದನು.

ಮಹಾರಾಜನು ಜೋತಿಷ್ಯ ಪುರೋಹಿತರೊಡನೆ ಕುಳಿತಿದ್ದನು.

ತರುಣಸರದಾರರು ಆ ಹಜಾರಕ್ಕೆ ಬಂದು ರಾಜರನ್ನೂ ರಾಜಪುರೋಹಿತ ರನ್ನೂ ಅಭಿವಂಧಿಸಿ, ಕುಳಿತುಕೊಂಡರು. ಮಾತು ಕಥೆಗಳಿಗೆ ಆರಂಭ ವಾಯಿತು.




ಚಂದ್ರರಾಯನ ತಮ್ಮ ಸೂರ್ಯರಾಯನಿಗೆ ಈ ವಿವಾಹ ಪ್ರಕರಣವು ಪ್ರಿಯವಾಗಿರಲಿಲ್ಲ. ಅವನ ಹೆಂಡತಿ ಕೌಸಲ್ಯಾದೇವಿಯೂ ಇದಕ್ಕೆ ಅಡ್ಡಿಯಾಗಿದ್ದಳು. ಅವಳು ರಾಜಕುಮಾರಿ ಚಾರುಶೀಲಾ ದೇವಿಯನ್ನು ಚಿಕ್ಕಂದಿನಿಂದಲೂ ಬಹುಪ್ರೇಮದಿಂದ ಸಾಕಿದ್ದಳು. ತಾಯಿಗಿಂತಲೂ ಈ ಚಿಕ್ಕತಾಯಿಯ ಪ್ರೇಮ ವಾತ್ಸಲ್ಯಗಳೇ ರಾಜಕುವರಿಗೆ ಅತಿಶಯವಾಗಿದ್ದವು. ರಾಜಕುವರಿಯು ಪ್ರಾಪ್ತವಯಸ್ಕಳಾಗಿದ್ದಾಳೆ. ತನ್ನ ತಮ್ಮ ಜಗನ್ನಾಥರಾವ್ ಜಡೆಯೆಂಬುವವನಿಗೆ ರಾಜಕುವರಿಯನ್ನು ಕೊಟ್ಟು ಮದುವೆ ಮಾಡಿಸಬೇಕೆಂದು ಆ ಕೌಸಲ್ಯಾದೇವಿಯು ಬಹುದಿನಗಳ ಬಯಕೆಯನ್ನು ಇಟ್ಟುಕೊಂಡಿದ್ದಳು. ಅವಳ ಗಂಡ ಸೂರ್ಯರಾಯನಿಗೂ ಇದು ಅಭಿಮತವಾಗಿದ್ದಿತು.

ಈ ಮಾತುಕಥೆಗಳು ಅರಮನೆ ಅಂತಃಪುರಗಳಲ್ಲಿ ಬೇಕಾದಷ್ಟು ನಡೆಯುತ್ತಲೇ ಇದ್ದವು. ಶಿವಾಜಿಯ ಕಡೆ ಸರದಾರ ಬಳ್ಳಾಲಕೋರ್ವಿಯು ಬಂದು ಹೋಗುತ್ತಿರುವುದು ಮದುವೆಯ ಮಾತು ಕಥೆಗಳು ಮುಂದುವರಿಯುತ್ತಿರುವುದು ಸೂರ್ಯರಾಯನಿಗೆ ತಿಳಿದಿತ್ತು.

ಕೌಸಲ್ಯಾದೇವಿಯು ಪತಿಯೊಡನೆ "ಈ ದಿನ ಅರಮನೆಯಲ್ಲಿ ಚಂದ್ರವಿಲಾಸದಲ್ಲಿ ಮದುವೆಯ ಮಾತು ನಿಷ್ಕರ್ಷೆಯಾಗುವಂತಿದೆ. ಜೋಯಿಸರು ಪುರೋಹಿತರು ಹೋಗಿದ್ದಾರೆ. ಶಿವಾಜಿಯ ಕಡೆಯ ಐದಾರು ಮಂದಿ ತರುಣ ಸರದಾರರೂ ಬಂದಿದ್ದಾರೆ. ಮಾತು ಮಿಂಚಿ ಹೋದರೆ ಆಮೇಲೆ ಕಷ್ಟವಾಗುತ್ತದೆ. ಅನ್ಯಾಯವಾಗಿ ವಿರೋಧ ಬರುತ್ತದೆ. ಆಗ ಶಿವಾಜಿಯೊಡನೆ ಪ್ರತ್ಯಕ್ಷ ವಿರೋಧ ಕಟ್ಟಿಕೊಂಡಂತಾಗುತ್ತದೆ" ಎಂದು ಗಂಡನನ್ನು ಉಬ್ಬಿಸಿದಳು.

ಸೂರ್ಯರಾಯನು ವೀರಪುರುಷ ಬೋಳಾ ಮನುಷ್ಯ. ಅವನು ಹಠತೊಟ್ಟು ಚಂದ್ರವಿಲಾಸಕ್ಕೆ ಬಂದನು.

ಅಣ್ಣನ ಸಮೀಪದಲ್ಲಿ ಬಂದು ಕುಳಿತು "ಅಣ್ಣಾಜಿಯವರೇ, ಈ ವಿವಾಹವು ನನಗೆ ಸಮ್ಮತವಿಲ್ಲ. ನಾನು ಇದಕ್ಕೆ ಒಪ್ಪುವುದಿಲ್ಲ" ಎಂದು ಹೇಳಿದನು.

ಚಂದ್ರರಾಯನು "ತಮ್ಮಾಜೀ, ಹುಡುಗಿ ಶಿವಾಜಿಯನ್ನು ಮೆಚ್ಚಿ ಕೊಂಡಿದ್ದಾಳೆ. ಮನಸಾ ಒಪ್ಪಿದ್ದಾಳೆ. ನಮ್ಮ ಅಂತಃಪುರದವರೆಲ್ಲರಿಗೂ ಅದೇ ಅಭಿಮತ. ನಾವೇಕೆ ಅಡ್ಡಿ ಮಾಡಬೇಕು? ಶುಭಕಾರ್ಯವು ನಡೆಯಲಿ. ಮುಂದೆ ಹುಡುಗಿಯ ಅದೃಷ್ಟದಂತೆ ಬದುಕಿಕೊಳ್ಳಲಿ" ಎಂದು ಹೇಳಿದನು.

ಸೂರ್ಯರಾಯನು "ಅಣ್ಣಾಜೀ, ಇಲ್ಲಿ ಶಿವಾಜೀ ಮಹಾರಾಜನ ಕಡೆ ಯವರಿದ್ದಾರೆ. ನಾವು ಅಣ್ಣ ತಮ್ಮಂದಿರು ಈ ಮಾತನ್ನು ಬೆಳೆಸುವುದು 'ಚಲೋ' ಅಲ್ಲ. ನೀವು ಹವ್ಯಾಸವನ್ನು ಬಿಟ್ಟುಬಿಡಿರಿ. ನಾನು ನೋಡಿ ಕೊಳ್ಳುತ್ತೇನೆ" ಎಂದು ಹೇಳಿದನು.

ವಿಷಮ ಸಮಯ. ಚಂದ್ರರಾಯನು ಜಗ್ಗಲಿಲ್ಲ. ತಮ್ಮನ ಮಾತನ್ನು ಲಕ್ಷ್ಯ ಮಾಡಲಿಲ್ಲ.

ಸೂರ್ಯರಾಯನು ವಿಮುಖನಾಗಿ "ಅಣ್ಣಾಜಿಯವರೇ, ನಿಮಗೂ ನನಗೂ ಈ ವಿಷಯದಲ್ಲಿ ಹರಿದುಹೋಯಿತು. ನಿಮ್ಮ ಇಷ್ಟದಂತೆ ಮಾಡ ಬಹುದು. ಆದರೆ ನನ್ನನ್ನು ಪರಿತ್ಯಜಿಸಿ ನೀವು ಬೇಕಾದ್ದು ಮಾಡಬಹುದು" ಎಂದು ಹೇಳಿ ಎದ್ದು ನಿಂತನು.

ಬಳ್ಳಾಲ ಕೊರ್ವಿ್‌ಯ ಹಸನ್ಮುಖದಿಂದ, ವಿನಯದಿಂದ "ರಾಯರೇ, ಕುಳಿತುಕೊಳ್ಳಿರಿ. ನಾವು ಒಪ್ಪದೇ ಮದುವೆಯಾಗಲಾರದು. ನಿಮ್ಮ ಅಣ್ಣ ತಮ್ಮಂದಿರಲ್ಲಿ ವಿರೋಧವನ್ನು ಹುಟ್ಟಿಸುವ ಮದುವೆಯ ಪ್ರಸ್ತಾಪವನ್ನು ನಾವೇಕೆ ಒಪ್ಪುತ್ತೇವೆ? ಕುಳಿತುಕೊಳ್ಳಿರಿ" ಎಂದು ಸೂರ್ಯರಾಯನನ್ನು ಆಸನದ ಮೇಲೆ ಕುಳ್ಳಿರಿಸಿದನು.

ಸೂರ್ಯರಾಯನಿಗೆ ಸ್ವಲ್ಪ ಸಮಾಧಾನವಾಯಿತು. ಅವನು ಕುಳಿತುಕೊಂಡನು.

ಚಂದ್ರರಾಯನು ರೋಷದಿಂದ ಹೇಳಿದನು.

"ಮದುವೆಯ ಮಾತು ಪೂರೈಸಿಹೋಯಿತು. ನನ್ನ ಮಗಳು ಚಾರುಶೀಲಾದೇವಿಯು ಈ ಕ್ಷಣದಿಂದ ಶಿವಾಜಿಯ ಪತ್ನಿ. ವಾಚಾದತ್ತ ಳಾದವಳು. ನಾನು ಮಾತು ಕೊಟ್ಟಿದ್ದೇನೆ. ವಿವಾಹವಾಗಲೀ ಬಿಡಲೀ,

ಆವಳು ಆಮರಣಾಂತ ಅವಿವಾಹಿತ ಕನ್ಯೆಯಾಗಿಯೇ ಇರಲಿ, ನನ್ನ ಮಾತು ಇಷ್ಟೆ."

ಸೂರ್ಯರಾಯನಿಗೂ ಕೋಪವು ಛಡಾಯಿಸಿತು.

"ಅಣ್ಣಾಸವರೇ, ನನ್ನ ಮಾತನ್ನೂ ಹೇಳಿಬಿಡುತ್ತೇನೆ. ನೀವು ಕೇಳಿರಿ. ಈ ಸರದಾರರುಗಳೂ ಕೇಳಲಿ. ಶಿವಾಜಿಗೆ ಒಂದು ವಿವಾಹವಾಗಿದೆ. ಇದು ಎರಡನೆಯ ವಿವಾಹ. ಶಿವಾಜಿಯು ರಾಜನಾದರೂ ಆ ಮೊದಲನೆಯ ಹೆಂಡತಿಯೇ ಮಹಾರಾಣಿಯಾಗುವವಳು."

ಬಳ್ಳಾಲ ಕೊರ್ಪಿಡೇಯು "ಸತ್ಯ ಸತ್ಯ! ಆ ಮಾತನ್ನು ಮೊದಲೇ ಹೇಳಿದ್ದೇನೆ" ಎಂದನು.

ಚಂದ್ರರಾಯನು ತಲೆದೂಗಿದನು.

ಸೂರ್ಯರಾಯನು "ಅಷ್ಟೇ ಅಲ್ಲ. ನಾನು ಚೆನ್ನಾಗಿ ವಿಚಾರಿಸಿದ್ದೇನೆ. ಈ ಶಿವಾಜಿಯ ಆಚಾರವಿಚಾರ ಚೆನ್ನಾಗಿಲ್ಲ. ಅವರು ಮಾವಳರು, ಬಿಲ್ಲರು ಎಲ್ಲರೂ ಒಂದೇ ಜಾತಿಯಾಗಿ ಸೇರಿ ಹೋಗಿದ್ದಾರೆ. ಅಲ್ಲದೇ ನಮ್ಮ ಕುಲಕ್ಕೂ, ಅವರ ಕುಲಕ್ಕೂ ಬಹಳ ವ್ಯತ್ಯಾಸವಿದೆ. ನಾವು ವಂಶಪಾರಂಪರ್ಯವಾಗಿ ಉಚ್ಚ ರಾಜ ಕುಲದವರು. ಶಿವಾಜಿಯ ತಂದೆ ಷಾಜಿಯವರು ಇಪ್ಪತ್ತೈದು ವರ್ಷಗಳಿಂದ ಬಿಜಾಪುರದ ಸುಲ್ತಾನರ ದರ್ಬಾರಿನಲ್ಲಿದ್ದಾರೆ. ಅವರ ಆಚಾರ ವ್ಯವಹಾರಗಳೆಲ್ಲ ತುರುಷ್ಕರಂತೆಯೇ ಇದೆ. ಅವರು ಅರ್ಧ ತುರುಷ್ಕರೇ ಆಗಿದ್ದಾರೆ. ನೋಡಿ ನೋಡಿ, ತುರುಷ್ಕರ ಮನೆಗೆ ನಾವು ಹೆಣ್ಣು ಕೊಟ್ಟಂತಾಗುತ್ತದೆ. ಈ ತುರುಷ್ಕ ಬಾಂಧವ್ಯವನ್ನು ನಾವು ಒಪ್ಪಲಾಗುವುದೇ" ಎಂದನು.

ಶಿವಾಜಿಯ ಕಡೆ ತರುಣ ಸರದಾರರೆಲ್ಲರೂ ಹಾಹಾಕಾರ ಮಾಡಿದರು.

"ಸೂರ್ಯರಾಯ, ಬಾಯಿ ಮುಚ್ಚು. ನಾಲಿಗೆಯು ಸೀಳಿ ಹೋದೀತು. ನಿಮ್ಮ ಹೆಣ್ಣು ಹೊಲೆಯರ ಮನೆಯ ಬಾಂದಿಯಾಗಲಿ, ತುರುಕರ ಮನೆಯ ತೊತ್ತಾಗಲಿ, ನಮ್ಮ ಮಹಾರಾಜರ ಹೆಸರೆತ್ತುವ ಯೋಗ್ಯತೆ ನಿನಗೆಲ್ಲಿ ಬರಬೇಕು" ಎಂದು ಗರ್ಜಿಸಿದರು.

ತಕ್ಷಣ ಹುಲಿಗಳಂತೆ ಹಾರಿ ಮೇಲೆ ಬಿದ್ದರು.

ಕ್ಷಣದಲ್ಲಿ ಸೂರ್ಯರಾಯನು ಆರ್ತನಾದಮಾಡಿ ಬೊಬ್ಬರಿಸಿದನು. ಚಂದ್ರರಾಯನ ಎದೆಯಲ್ಲಿ ಕಠಾರಿಯು ಆಳವಾಗಿ ಹೊಕ್ಕಿತ್ತು.

ಗದ್ದಲವು ಹೊರಗೆ ಕೇಳುವುದರೊಳಗೆ ತರುಣ ಸರದಾರರ ಹಿಂದೆ ಬಂದಿದ್ದ ಮರಾಠಾ ಸೈನಿಕರು ಅರಮನೆಯೊಳಗೆ ಹೊಕ್ಕು ದ್ವಾರಪಾಲಕರನ್ನೆಲ್ಲಾ ಕಡಿದು, ಅರಮನೆಯನ್ನು ಮುತ್ತಿದರು. ಜಾವಳಿಯ ಕೋಟೆಯಲ್ಲಿದ್ದ ಸೈನಿಕರು ಅರಮನೆಯ ಕಡೆಗೆ ಧಾವಿಸಿ ಬಂದರು. ಕೋಟೆಯ ಹೊರಗೆ ಸಿದ್ಧರಾಗಿದ್ದ ಮರಾಠಾ ಸೈನಿಕರು ನುಗ್ಗಿ ಬಂದರು. ಅರಮನೆಯ ಮುಂದೆ ರಣಾರಣಿ ಹೋರಾಟವಾಗುತ್ತಿತ್ತು. ಕತ್ತಲೆಯು ಕವಿದಿತ್ತು. ಶಿವಾಜಿಯ ಸೈನಿಕರು ಅರಮನೆಯ ಮಹಡಿಯ ಮೇಲೆ ಹೊರಗಿನ ಬಿಸಿಲು ಮಹಡಿಯಲ್ಲಿ ಪಂಜುಗಳನ್ನು ಹಿಡಿದು ಬಂದು ನಿಂತರು

ಬಳ್ಳಾಲ ಕೋರ್ಡೆಯು ಚಂದ್ರರಾಯ, ಸೂರ್ಯರಾಯರ ತಲೆಗಳನ್ನು ಕಡಿದು ಬಲ್ಲೆಗೆ ಸಿಕ್ಕಿಸಿ ಮುಂದೆ ತಂದು ಮೆರೆಸಿದನು. ಆ ಪಂಜುಗಳ ಬೆಳಕಿನಲ್ಲಿ ಅಣ್ಣ ತಮ್ಮಂದಿರ ತಲೆಗಳನ್ನು ನೋಡಿ ಜಾವಳಿಯ ಸೈನಿಕರು ಹಾಹಾಕಾರಮಾಡಿದರು.

ಶಿವಾಜಿಯ ಸೈನಿಕರು ಹರ್ಷೋದ್ಗಾರಗಳನ್ನು ಮಾಡಿದರು.

ರಾತ್ರಿಯೆಲ್ಲಾ ರಾಜಬೀದಿಗಳಲ್ಲಿ ರಕ್ತವು ಚೆಲ್ಲಾಡಿತು. ಹೆಣಗಳು ಉರುಳಾಡಿದವು. ಬೆಳಕು ಹರಿಯುವ ಹೊತ್ತಿಗೆ ಎಲ್ಲವೂ ಶಾಂತವಾಯಿತು.

ಜಾವಳಿಯ ಕೋಟೆ, ಅರಮನೆ, ಖಜಾನೆ ಎಲ್ಲವೂ ಮರಾಠಾ ಸೈನಿಕರ ವಶವಾದವು.

ಶಿವಾಜಿಯು ಮಹಾಬಲೇಶ್ವರದಿಂದ ಪಲ್ಲಕ್ಕಿಯಲ್ಲಿ ಕುಳಿತು ಜಾವಳಿಗೆ ಬಂದು ಸೇರಿದನು.

ಅರಮನೆಯಲ್ಲಿ ಅಂತಃಪುರಸ್ತ್ರೀಯರೆಲ್ಲರೂ ರೋಧನ ಮಾಡುತ್ತಿದ್ದರು. ಊರುಜನರೆಲ್ಲರೂ ದುಃಖದಲ್ಲಿ ಮುಳುಗಿದ್ದರು.

ಶಿವಾಜಿಯನ್ನೂ ಅವನ ದಳಪತಿಗಳನ್ನೂ ಜನರು ವಾಚಾಮಗೋಚರವಾಗಿ ದೂಷಿಸುತ್ತಿದ್ದರು. ಶಿವಾಜಿಯು ತನ್ನ ಸೈನಿಕರನ್ನು ಅರಮನೆಗೂ ಕೋಟೆಗೂ ಬಲವಾದ ಕಾವಲಿಟ್ಟು ಜಾವಳಿ ಊರು ಮುಂದಿನ ಬೈಲಿನಲ್ಲಿ ಶಿಬಿರವನ್ನು ಹಾಕಿಕೊಂಡು ನಿಂತನು.

ಜಾವಳಿಯಲ್ಲಿ ಅರಮನೆಯಲ್ಲಿ ಕರ್ಮಾಂತರಗಳೆಲ್ಲಾ ನಡೆಸಬಹುದೆಂದು ಆ ರಾಜರ ಕೈ ಕೆಳಗಿದ್ದ ಅಧಿಕಾರಿಗಳಿಗೆ ಶಿವಾಜಿಯು ಅಪ್ಪಣೆಯಿತ್ತನು. ಎಲ್ಲವೂ ಪೂರೈಸಿದನಂತರ ರಾಜರ ಅಂತಃಪುರದವರೆಲ್ಲರೂ ಅರಮನೆಯಲ್ಲಿಯೇ ಇರಬಹುದೆಂದೂ ಅರಮನೆಯನ್ನು ವಶಪಡಿಸಿಕೊಳ್ಳುವುದಿಲ್ಲವೆಂದೂ ಶಿವಾಜಿಯು ಹೇಳಿಕಳುಹಿಸಿದನು. ರಾಜರ ಊರ್ಧ್ವಕರ್ಮಗಳೆಲ್ಲವೂ ಪೂರೈಸಿದ ಮೇಲೆ ಚಾರುಶೀಲಾದೇವಿಯು ಕಾಲುನಡಿಗೆಯಿಂದಲೇ ಬಂದು ಶಿವಾಜಿಯ ಭೇಟಿ ಮಾಡಿದಳು.

ಶಿವಾಜಿಯು ರಾಜಕುಮಾರಿಗೆ ಸಾಂತ್ವ ವಚನಗಳನ್ನು ಹೇಳಿದನು.

ಚಾರುಶೀಲೆಯು ದುಃಖಿಸುತ್ತಿರಲಿಲ್ಲ. ಧೈರ್ಯ ಕೆಟ್ಟಿರಲಿಲ್ಲ.

ಅವಳು "ಮಹಾರಾಜನೇ.ರಾಜ್ಯದ ಯುದ್ಧ ವಿಗ್ರಹಗಳು ಹೇಗಾದರೂ ಇರಬಹುದು. ನಾನು ನಿಮ್ಮನ್ನು ವರಿಸಿದ್ದೇನೆ. ನಿಮ್ಮ ಸಂಗಡಿಗರ ಮೂಲಕ ನೀವು ವಿವಾಹಕ್ಕೆ ಒಪ್ಪಿದ್ದೀರಿ. ನೀವು ನನ್ನನ್ನು ಮದುವೆಯಾಗಬೇಕು" ಎಂದು ಹೇಳಿದಳು.

ಶಿವಾಜಿಯು "ಈ ಮದುವೆಯ ಮಾತು ಆಶ್ಚರ್ಯಕರವಾಗಿದೆ. ಈ ಜಾವಳಿಯ ರಾಯರು ನಮ್ಮ ಸರದಾರರೊಂದಿಗೆ ರಾಜಕೀಯ ಸಂಧಾನ ಮಾಡುತ್ತಿದ್ದಾರೆಂದು ನಾನು ಭಾವಿಸಿದ್ದೆ. ಈ ಮದುವೆಯ ಪ್ರಸ್ತಾಪವನ್ನೇ ನಾನರಿಯೆ. ಈ ಅನಾಹುತಗಳೆಲ್ಲ ಆಗಿಹೋದ ಮೇಲೆ ಇಲ್ಲಿ ಅನೇಕ ಮಾತುಗಳನ್ನು ಕೇಳಿದೆ. ನಿಮ್ಮ ಅಧಿಕಾರಿಗಳು ನನ್ನಲ್ಲಿಗೆ ಬಂದು ಈ ಮದುವೆಯ ಪ್ರಸ್ತಾಪದಿಂದಲೇ ಮಾತುಗಳು ಪ್ರಕೋಪಸ್ಥಿತಿಗೆ ಬಂದು ಈ ಅನಾಹುತಗಳು ನಡೆದುಹೋದುವು ಎಂದು ಹೇಳುತ್ತಾರೆ. ನಮ್ಮ ಸರದಾರರನ್ನು ವಿಚಾರಿಸುವಲ್ಲಿ ನಾವು ಕೊಂಕಣಕ್ಕೆ ಸೈನ್ಯ ತೆಗೆದುಕೊಂಡು ಹೋಗುತ್ತೇವೆಂದೂ ಕೊಂಕಣಕ್ಕೆ ಹೋಗಬೇಕಾದರೆ ನಿಮ್ಮ ರಾಜ್ಯದ ಮೇಲೆಯೇ ಹೋಗಬೇಕೆಂದೂ ಅದಕ್ಕಾಗಿ ಅಪ್ಪಣೆ ಕೊಡಬೇಕೆಂದು ಚಂದ್ರರಾಯರಲ್ಲಿ ಪ್ರಾರ್ಥನೆ ಮಾಡಲು ನಮ್ಮ ಸರದಾರರು ಬಂದಿದ್ದರೆಂದು ನಮ್ಮವರು ಹೇಳುತ್ತಾರೆ. ನನಗೆ ಮದುವೆಯಾಗಿದೆ. ಒಬ್ಬ ಹೆಂಡತಿ ಇದ್ದಾಳೆ. ನಾನು ಏಕಪತ್ನೀವ್ರತಸ್ಥ ಉಳಿದ ಹೆಂಗಸರನ್ನೆಲ್ಲಾ ತಾಯಿಗೆ ಸಮಾನವಾಗಿ ನೋಡುತ್ತೇನೆ. ಇದು

ಈ ಇಡೀ ಮಹಾರಾಷ್ಟ್ರದಲ್ಲಿ ಎಲ್ಲಕಡೆಯೂ ಪ್ರಸಿದ್ಧವಾಗಿದೆ. ಇಲ್ಲದಿದ್ದರೆ ನನಗೆ ಇಷ್ಟರೊಳಗೆ ಅನೇಕ ಪತ್ನಿಯರಿರುತ್ತಿದ್ದರು" ಎಂದು ಹೇಳಿದನು.

ರಾಜಕುವರಿಯು ಎಷ್ಟೋ ಹೇಳಿದಳು. ಅಣೆಗಳನ್ನಿಟ್ಟು ಹೇಳಿದಳು.

"ಮಹಾಬಲೇಶ್ವರಕ್ಕೆ ನಾನು ಬಂದಂದಿನಿಂದ ಈ ಮಾತುಗಳು ನಡೆಯುತ್ತಿವೆ. ನಿಮ್ಮ ಸರದಾರರು ಆಸ್ಥಾನಕ್ಕೆ ಬಂದಾಗಲೆಲ್ಲಾ ಈ ಮಾತುಕತೆಗಳು ನಡೆದಿವೆ. ನಮ್ಮ ಚಿಕ್ಕ ತಂದೆಯು ಕಟ್ಟಕಡೆಯಲ್ಲಿ ಈ ವಿವಾಹಕ್ಕೆ ಒಪ್ಪಲಿಲ್ಲ. ನಾವು ಅಂತಃಪುರದ ಸ್ತ್ರೀಯರೆಲ್ಲರೂ ಈ ವಿವಾಹದ ಮಾತುಕತೆಗಳು ನಡೆಯುತ್ತಿರುವುದನ್ನು ಅಂತಃಪುರದಲ್ಲಿ ಕಿಟಕಿಗಳಿಂದ ಕೇಳುತ್ತಿದ್ದೆವು. ನೋಡುತ್ತಿದ್ದೆವು. ನಮ್ಮ ಕಣ್ಣು ಮುಂದೆಯೇ ಅಣ್ಣತಮ್ಮಂದಿರ ಜಗಳವು ಆರಂಭವಾಯಿತು. ವಿಕೋಪಕ್ಕೆ ಬಂದಿತು. ನಿಮ್ಮ ಸಂಗಡಿಗರು ಆ ಮಾತುಗಳಲ್ಲಿ ಭಾಗಿಗಳಾಗಿ ರಾಯರಿಬ್ಬರನ್ನೂ ಕೊಲೆ ಮಾಡಿದರು. ಯಾರೂ ಪರಾಕ್ರಮದಿಂದ ಯುದ್ಧ ಮಾಡಲಿಲ್ಲ ಮೋಸ, ವಂಚನೆ, ಘಾತುಕತನಗಳಿಂದ ಜಯಿಸಿದರು ಆ ಜಯಾಪಜಯಗಳ ಮಾತು ಕಳೆದುಹೋದ ಮಾತು. ಮದುವೆಯ ಮಾತು ಮೊದಲಿಂದಲೂ ಆರಂಭವಾಗಿ ಬೆಳೆದು ಒಪ್ಪಿಗೆಯಾದ ಮಾತು. ನಿಮಗೆ ಒಂದು ವಿವಾಹವಾಗಿದೆಯೆಂದೂ ನನಗೆ ನಮ್ಮ ತಂದೆಯವರು ತಿಳಿಸಿದರು. ನಾನು ಒಪ್ಪಿಕೊಂಡಿದ್ದೆ. ನೀವು ನಮ್ಮ ರಾಯರಿಗೆ ಮೋಸಮಾಡಿದರೂ ನನ್ನಲ್ಲಿ ಮಾತಿಗೆ ತಪ್ಪುವಂತಿಲ್ಲ. ಇದು ಶಾಸ್ತ್ರ ನಿಷಿದ್ಧವೂ ಅಲ್ಲ."

"ತಾಯೀ ! ಈ ಮಾತುಗಳು ವಿಚಿತ್ರವಾಗಿದೆ. ನಮ್ಮ ತಾಯಿ ಜೀಜಾಬಾಯಿಯವರು ಈ ದ್ವಿತೀಯ ವಿವಾಹದಿಂದ ನೊಂದರು. ಇನ್ನೂ ನೋಯುತ್ತಿದ್ದಾರೆ. ನಮ್ಮ ತಂದೆಯವರು ದ್ವಿತೀಯ ವಿವಾಹ ಮಾಡಿಕೊಂಡು ಅವರನ್ನು ಕಾಡುಪಾಲು ಮಾಡಿದರು. ಅಂದಿನಿಂದ ನಾವು ಕಡು ಕಷ್ಟಗಳನ್ನು ಪಟ್ಟಿದ್ದೇವೆ. ನಮ್ಮ ವಂಶದಲ್ಲಿಯೇ ಇನ್ನಾರೂ ಎರಡನೆಯ ಮದುವೆ ಮಾಡಿಕೊಳ್ಳಕೂಡದೆಂದು ನಾನೂ ನಮ್ಮ ತಾಯಿಯೂ ಭವಾನಿಯ ಎದುರಿನಲ್ಲಿ ಪ್ರಮಾಣ ಮಾಡಿದ್ದೇವೆ. ನೀನು ನಿನಗೆ ಇಷ್ಟ ಬಂದ ವರನನ್ನು ಮದುವೆಯಾಗು. ನಾನು ನಿನ್ನ ಪತಿಗೆ ಜಹಗೀರನ್ನು ಕೊಡುತ್ತೇನೆ. ನಿಮ್ಮ ಅರಮನೆಯ ಐಶ್ವರ್ಯವನ್ನೆಲ್ಲಾ ಕೊಡುತ್ತೇನೆ."

ಚಾರುಶೀಲೆಯು "ಸಾಯುವವರೆವಿಗೂ ನಾನೂ ಪಣತೊಟ್ಟಿದ್ದೇನೆ. ಮದುವೆಯಾದರೆ ನಿನ್ನೊಬ್ಬನನ್ನು ಮದುವೆಯಾಗಬೇಕು. ಇಲ್ಲದಿದ್ದರೆ ಆಮರಣಾಂತ ಬ್ರಹ್ಮಚಾರಿಣಿಯಾಗಿ ಕಳೆಯಬೇಕು. ಇದನ್ನು ನಾನು ಶಪಥ ಮಾಡಿದ್ದೇನೆ." ಎಂದು ಹೇಳಿದಳು.

ಶಿವಾಜಿಯು ತಲೆಯಲ್ಲಾಡಿಸಿದನು. ಮಾತನಾಡಲಿಲ್ಲ.

ರಾಜಕುವರಿಯು ಕೋಪಗೊಂಡು "ಶಿವಾಜಿ, ನಿನ್ನಿಂದ ನನ್ನ ಬಾಳು ಹಾಳಾಯಿತು. ನಿನ್ನ ಜೀವನದಲ್ಲಿ ಪ್ರತಿಯೊಂದು ಘಟ್ಟದಲ್ಲಿಯೂ ಈ ಪಾಪವು ನಿನ್ನನ್ನು ಮೆಟ್ಟುತ್ತದೆ. ನಾನು ನಿನಗೆ ಶಾಪಕೊಟ್ಟಿದ್ದೇನೆ. ತಂದೆಯನ್ನು ಕಳೆದುಕೊಂಡು, ರಾಜ್ಯ ಐಶ್ವರ್ಯಗಳನ್ನೆಲ್ಲಾ ಕಳೆದುಕೊಂಡು, ಧಗಧಗಿ ಸುತ್ತಿರುವ ಹೃದಯದಿಂದ ಎದ್ದು ಬಂದಿರುವ ಈಮಾತುಗಳು ವ್ಯರ್ಥವಾಗವು" ಎಂದು ಹೇಳಿ ಹೊರಟು ಹೋದಳು.

ಶಿವಾಜಿಯು ಅರಮನೆಯವರಿಗೆಲ್ಲಾ ಬೆಳ್ಳಿ ಬಂಗಾರಗಳನ್ನೂ ಐಶ್ವರ್ಯವನ್ನೂ ಕೊಟ್ಟನು. ರಾಜಮಹಿಷಿಯರಿಗೆ ಜಹಗೀರುಗಳನ್ನು ಕೊಟ್ಟನು. ರಾಜ್ಯವು ಶಿವಾಜಿಯ ಸ್ವಾಧೀನವಾಯಿತು. ಎಂಟು ತಲೆಮಾರುಗಳಿಂದ ಶೇಖರಿಸಿ ಬಂದಿದ್ದ ಅತುಲೈಶ್ವರ್ಯ ಪೂರ್ಣವಾದ ರಾಜಭಂಡಾರವು ಶಿವಾಜಿಯ ವಶವಾಯಿತು.

ಜಾವಳಿಯ ಸೈನ್ಯಗಳನ್ನೆಲ್ಲಾ ಒಟ್ಟುಗೂಡಿಸಿ, ಮರಾಠ ಸೈನ್ಯದೊಳಗೆ ಸೇರಿಸಿದನು. ಹನ್ನೆರಡು ಸಹಸ್ರ ಕುದುರೆಯ ಸೈನ್ಯವು ಶಿವಾಜಿಯ ಸೈನ್ಯದೊಂದಿಗೆ ಸೇರಿತು. ಶಿವಾಜಿಯು ತನ್ನ ಸರದಾರರುಗಳನ್ನು ಸೇನಾಧಿಪತಿಗಳಾಗಿ ನೇಮಿಸಿದನು. ಜಾವಳಿಯ ಅಧಿಕಾರ ವ್ಯವಸ್ಥೆಯನ್ನೆಲ್ಲಾ ಏರ್ಪಡಿಸಿ ತನ್ನ ಸೇನಾಧಿಪತಿ ನೇತಾಜಿಯನ್ನು ಜಾವಳಿಯ ಸರ್ವಾಧಿಕಾರಿಯಾ' ನೇಮಿಸಿದನು.

ಅಲ್ಲಿಂದ ಸೈನ್ಯ ಸಮೇತ ಪುರಂಧರಗಡಕ್ಕೆ ಹಿಂತಿರುಗಿದನು.

ಡೆಲ್ಲಿಯ ಅಧಿಕಾರಿಗಳಲ್ಲಿ ವ್ಯತ್ಯಾಸವಾಯಿತು. ಮುರಾದ್ ಭಕ್ಷನು ಬಂಗಾಳದ ಸರ್ವಾಧಿಕಾರಿಯಾಗಿ ಹೊರಟುಹೋಗಿದ್ದನು. ಔರಂಗಸೇಬನು ದಕ್ಕನ್ನಿನ ಸರ್ವಾಧಿಕಾರಿಯಾಗಿ ಅಧಿಕಾರ ವಹಿಸಿಕೊಂಡನು.

ಶಿವಾಜಿಯು ತನ್ನ ಸೇನಾಧಿಪತಿಯಾದ ಬಾಜೀಪ್ರಭು ಎಂಬುವನೊಡನೆ ಔರಂಗಸೇಬನಿಗೆ ಪತ್ರವನ್ನು ಕಳುಹಿಸಿಕೊಟ್ಟನು. ಶಿವಾಜಿಯ ಪತ್ರವು ಬಹಳ ಗೌರವವನ್ನು ಪ್ರದರ್ಶನ ಮಾಡಿದ್ದಿತು. ತಾನು ಮೊಗಲ್ ಸಾಮ್ರಾಜ್ಯದ ಭಕ್ತನೆಂದೂ, ಬಾದಷಹರು ತನ್ನ ತಂದೆಯನ್ನು ಬಂಧನದಿಂದ ಬಿಡಿಸಿ ಗೌರವ ದಿಂದ ರಕ್ಷಿಸಿದ್ದಕ್ಕಾಗಿ ಆಮರಣಾಂತಕೃತಜ್ಞನಾಗಿರುವುದಾಗಿಯೂ ಶಿವಾಜಿಯು ಬರೆದಿದ್ದನು. ಔರಂಗಸೇಬನು ದಕ್ಕನ್ನಿಗೆ ಬಂದಾಗಿನಿಂದಲೂ ಶಿವಾಜಿಯ ಚಲನವಲನಗಳನ್ನು ವಿಚಾರಿಸಿ ತಿಳಿದುಕೊಂಡಿದ್ದನು. ಶಿವಾಜಿಯ ಕೈಕೆಳಗೆ ಇಪ್ಪತ್ತೈದು ಸಹಸ್ರ ಕುದುರೆಯ ಸೈನ್ಯವನ್ನು ಕಟ್ಟಿಕೊಂಡಿದ್ದಾನೆಂದೂ ಐವತ್ತು ಸಹಸ್ರ ಕಾಲಾಳು ಬಲವಿದೆಯೆಂದೂ, ಈ ಸೇನಾಧಿಪತಿಗಳೆಲ್ಲರೂ ಪ್ರಾಣದ ಹಂಗು ತೊರೆದು ಹೋರಾಡುತ್ತಾರೆಂದೂ ತಿಳಿದುಕೊಂಡಿದ್ದನು.

ಶಿವಾಜಿಯ ಈ ಅತಿ ವಿನಯದ ಪತ್ರವನ್ನು ನಿರಾಕರಿಸಿದನು.

"ನೀನು ನಮ್ಮ ರಾಜ್ಯದ ಒಬ್ಬ ಜಮೀನ್ದಾರನ ಮಗ. ಡೆಲ್ಲಿ ಬಾದ ಷಹರ ದಕ್ಕನ್ ಸರ್ವಾಧಿಕಾರಿಗೆ ಸಮಾನಸ್ಕಂಧತೆಯಿಂದ ಪತ್ರ ಬರೆಯಲು ನಿನಗೆ ಅಧಿಕಾರವಿಲ್ಲ. ಸರಿಯಾದ ಸಂದರ್ಭದಲ್ಲಿ ನಿನ್ನ ವಿಚಾರಣೆಯಾಗು ತ್ತದೆ" ಎಂದು ಉತ್ತರ ಬರೆದು ಕಳುಹಿಸಿದನು.

ಆ ಪತ್ರವನ್ನು ನೋಡಿ ಶಿವಾಜಿಯು ಸಂತೋಷಪಟ್ಟನು. ತಂದೆಯ ಬಿಡುಗಡೆಯನ್ನು ಹೊಂದಲು ತಾನು ತನ್ನ ಕೋಟೆಗಳನ್ನೆಲ್ಲಾ ಮೊಗಲರಿಗೆ ಒಪ್ಪಿಸುವುದಾಗಿ ಬರೆದಿದ್ದನು. ತಾನು ಮೊಗಲ್ ಸಾಮ್ರಾಟರ ಅಧಿಕಾರಿ ಯಾಗುವುದಾಗಿ ಬರೆದಿದ್ದನು. ಔರಂಗಸೇಬನ ಈ ಪತ್ರದಿಂದ ತಂಟೆ ಹರಿದು ಹೋಯಿತು. ಧರ್ಮಸಂಕಟವು ತಪ್ಪಿಹೋಯಿತು. ಇನ್ನು ಮೊಗಲರ

ಕಡೆಯುವರು ಬಂದು ಕೇಳಿದರೆ ಔರಂಗಸೇಬನ ಕಡೆ ಕೈ ತೋರಿಸಿದರಾಯಿತು. ಈ ಪತ್ರವನ್ನೇ ಅವರ ಮುಖಕ್ಕೆ ಹಿಡಿದರಾಯಿತು ಎಂದು ನಿರ್ಧಾರ ಮಾಡಿಕೊಂಡನು.

ಶಿವಾಜಿಯು ತನ್ನ ಸಂಗಡಿಗರೊಂದಿಗೆ "ಈ ಔರಂಗಸೇಬನು, ತಾಜಾ ಮುಸಲ್ಮಾನ ಅವನ ಖಡಾಖಂಡಿತವಾದ ಮಾತು ನನಗೆ ಒಪ್ಪಿದೆ. ಇನ್ನು ಶಕ್ತಿ ಸಾಮರ್ಥ್ಯಗಳ ಮಾತು. ನಮಗೂ ಅವರಿಗೂ ಯುದ್ಧವಾದರೂ ನಿಂತು ಹೋರಾಡುವ ಸಾಮರ್ಥ್ಯವು ಇಂದು ನಮಗಿದೆ. ಮೊಗಲರ ದಂಡು ಅತ್ಯಂತ ದೊಡ್ಡದು. ನಾವು ಅದನ್ನು ಮರೆಯಬಾರದು ಆದರೆ ಆ ದಂಡು ಅತ್ತ ಕಡೆ ಬಂಗಾಳಕ್ಕೆ ಹರಿಯುತ್ತಿದೆ. ಬಂಗಾಳದಲ್ಲಿ ವಿದ್ವೇಷವು ಪ್ರಬಲ ವಾಗಿ ಎದ್ದಿದೆ. ಮತ್ತೊಂದು ಮೊಗಲ್ ಸೈನ್ಯವು ಗುಜರಾತಿಗೆ ಪ್ರವೇಶ ಮಾಡಿದೆ. ರಾಜಪುತಾಣವು ಶಾಂತವಾಗಿದೆ ಎಂದು ಹೇಳುವಂತಿಲ್ಲ. ಅದು ಮೊಗಲ್ ಸಾಮ್ರಾಜ್ಯದ ಕುತ್ತಿಗೆಯಲ್ಲಿಯೇ ನೇತುಬಿದ್ದಿರುವ ಉರುಳಿನಂತಿದೆ. ಈ ದಖನ್ನಿನಲ್ಲಿರುವ ಸೈನ್ಯವು ಇಂದು ನಮಗೆ ಸರಿಸಾಟಿಯಲ್ಲ" ಎಂದು ಧೈರ್ಯ ಮಾಡಿಕೊಂಡನು.

ನಾವಾಗಿ ಔರಂಗಸೇಬನ ಮೇಲೆ ಬೀಳುವ ಕಾಲವಿನ್ನೂ ಬಂದಿಲ್ಲ. ನೋಡೋಣ ಎಂದು ಸಮಾಧಾನ ಮಾಡಿಕೊಂಡನು.

ಔರಂಗಸೇಬನು ಶಿವಾಜಿಯ ಮೇಲೆ ಯುದ್ಧ ಮಾಡಬೇಕೆ, ಬಿಜಾ ಪುರದ ಮೇಲೆ ಯುದ್ಧ ಮಾಡಬೇಕೆ? ಎಂಬ ದ್ವಂದ್ವದಲ್ಲಿ ಬಿದ್ದನು. ಔರಂಗ ಸೇಬನು ಅತಿ ಬುದ್ಧಿವಂತ. ಈ ಪ್ರಪಂಚದಲ್ಲಿ ಮತ್ತೊಬ್ಬರೊಡನೆ ಆಲೋಚನ ಮಾಡುವಂಥಾ ವಿಷಯವೇ ಇಲ್ಲವೆಂದು ನಂಬಿದಂಥಾ ಮನುಷ್ಯ. ದೊಡ್ಡ ದೊಡ್ಡ ರಾಜರು ಚಕ್ರವರ್ತಿಗಳು ಆಲೋಚನೆ ಮಾಡುತ್ತಾರಲ್ಲ, ಅದೇಕೆ? ಅದು ಅವರ ನಿಶ್ಶಕ್ತಿ. ಇದೇ ಔರಂಗಸೇಬನ ತೀರ್ಮಾನ.

ಶಿವಾಜಿಗೆ ಇರುವ ರಾಜ್ಯವಾದರೂ ಎಷ್ಟು? ಸಹ್ಯಾದ್ರಿಯ ಕೋಗಿನಲ್ಲಿ ಒಂದು ಪಟ್ಟಿ.

ಬಿಜಾಪುರದ ರಾಜ್ಯವು ಅಂಥದಲ್ಲ. ದಖನ್ ಎಲ್ಲವನ್ನೂ ಆವರಿಸಿ ಕೊಂಡಿರುವ ರಾಜ್ಯ. ಸಂಪದ್ಭರಿತವಾದ ರಾಜ್ಯ. ಮೂರು ನಾಲ್ಕು ಶತ ಮಾನಗಳಿಂದ ಬೇರೂರಿರುವ ರಾಜ್ಯ. ಅವರು ನಿಜವಾಗಿಯೂ ನಮಗೆ

ಅಧೀನರಲ್ಲ. ಉಪಚಾರಕ್ಕಾಗಿ ಡೆಲ್ಲಿಯ ಬಾದಷಹನನ್ನು ಗೌರವಿಸುತ್ತಾರೆ. ಬಿಜಾಪುರವನ್ನು ಹೊಡೆದುಹಾಕಿದರೆ ದಕ್ಷಿಣದಲ್ಲಿ ರಾಮೇಶ್ವರದವರೆಗೆ ಡೆಲ್ಲಿಯ ಚಕ್ರಾಧಿಪತ್ಯವು ಬೆಳೆದಂತಾಗುತ್ತದೆ. ಆಗಲೀಗ ನಾವು ಮೊಗಲ್ ಚಕ್ರಾಧಿಪತ್ಯವು ಜಗತ್ತಿನಲ್ಲಿಯೇ ದೊಡ್ಡದು ಎಂದು ಹೇಳಿಕೊಳ್ಳುವುದು ಒಪ್ಪುತ್ತದೆ. ಇಲ್ಲದಿದ್ದರೆ ಬರೀ ಬಡಾಯಿ. ಎಷ್ಟು ದಿನ ಬಯಲಾಗದೇ ಇದ್ದೀತು? ಬಿಜಾಪುರವನ್ನು ನಾವು ಗೆದ್ದುಬಿಟ್ಟರೆ ಬಿಜಾಪುರ ಮತ್ತು ಮೊಗಲ್ ರಾಜ್ಯದಲ್ಲಿ ಮಧ್ಯದಲ್ಲಿ ಶಿವಾಜಿಯು ಸಿಕ್ಕಿಕೊಂಡು ಬೋನಿನಲ್ಲಿ ಸಿಕ್ಕಿಕೊಂಡ ಇಲ್ಲಿಯಂತಾಗುತ್ತಾನೆ ಎಂದು ಆಲೋಚನೆ ಮಾಡಿಕೊಂಡನು.

ಸೈನ್ಯಗಳನ್ನೆಲ್ಲಾ ಬಿಜಾಪುರದ ಕಡೆ ಹೊರಡುವಂತೆ ಆಜ್ಞೆ ಮಾಡಿದನು. ಆನೆಗಳು, ಕುದುರೆಯ ಸೈನ್ಯಗಳು, ಒಂಟೆಯ ಸೈನ್ಯಗಳು, ಕಾಲಾಳು ಭಟರು ಆಯುಧಗಳ ಸಮೇತವಾಗಿ ದಕ್ಷಿಣಕ್ಕೆ ಹೊರಟರು ಅವರವರ ಹೆಂಡಿರನ್ನು ಕಟ್ಟಿಕೊಂಡು ಸಾಮಾನುಗಳನ್ನು ತಲೆಯಮೇಲೆ ಹೊತ್ತುಕೊಂಡು ಸೈನಿಕರು ಹೊರಟರು. ಆ ಕಾಲದ ಪದ್ಧತಿಯು ಹಾಗೆಯೇ ಇದ್ದಿತು ಫಿರಂಗಿ ಗಾಡಿಗಳು ಹೊರಟವು. ಅವುಗಳನ್ನು ಹಾರಿಸುವ ಯೋಧರು ಟರ್ಕಿಯವರು, ಯೂರೋಪಿಯನ್ನರು. ಅವರೆಲ್ಲರೂ ಮುಂದೆ ಮುಂದೆ ಹೊರಟರು. ಅಂಗಡಿಗಳವರೂ, ಆಟಪಾಟಗಳವರೂ ಹೊರಟರು ಆ ಸೈನ್ಯವು ಹೊರಡುವ ದೃಶ್ಯವನ್ನು ನೋಡಿದರೆ ನಗರಕ್ಕೆ ನಗರವೇ ಎದ್ದು ನಡೆಯುವಂತೆ ಭಾಸವಾಗುತ್ತಿದ್ದಿತು.

ಔರಂಗಸೇಬನ ಸೈನ್ಯಗಳು ಬಿಜಾಪುರದ ಕಡೆಗೆ ಹೊರಟವೆಯೆಂದು ಸುಲ್ತಾನನಿಗೆ ವರದಿಯಾಯಿತು. ಸುಲ್ತಾನನು ದಕ್ಕನ್ ಸರ್ವಾಧಿಕಾರಿ ಔರಂಗಸೇಬನಿಗೆ ವಿನಯದಿಂದ ಪತ್ರ ಬರೆದನು.

"ಡೆಲ್ಲಿಯ ಬಾದಷಹರ ಅನುಗ್ರಹವು ಬಿಜಾಪುರದ ಮೇಲಿದೆ. ನಮಗೂ ಬಾದಷಹರವರಿಗೂ ಸ್ನೇಹ ಸೌಜನ್ಯಗಳಿವೆ. ಬಾದಷಹರ ಪುತ್ರರಾದ ನೀವು ನಮ್ಮ ಮೇಲೆ ಯುದ್ಧಕ್ಕೆ ಬರುವುದು ತರವಲ್ಲ. ನಾವು ನಿಮ್ಮೊಡನೆ ಎಂದೆಂದಿಗೂ ಯುದ್ಧ ಮಾಡುವವರಲ್ಲ. ಅಲ್ಲದೆ ನಾವೂ ನೀವೂ ಮುಸಲ್ಮಾನ್ ಸೋದರರೆಂಬುದನ್ನು ಮರೆಯಬಾರದು" ಎಂದು ಸುಲ್ತಾನನು ಪತ್ರ ಬರೆದಿದ್ದನು.

ಆ ಪತ್ರವು ಅಹಮದ್‌ನಗರದಲ್ಲಿ ಔರಂಗಸೇಬನ ಕೈಸೇರಿತು. ಔರಂಗ ಸೇಬನು ಪತ್ರವನ್ನು ಪರಿಶೀಲಿಸಿದನು. ಆ ಪತ್ರದಲ್ಲಿ "ಆಲೋಚಿಸುವಂಥಾ ವಿಷಯುಗಳೇನೂ ಇಲ್ಲ" ಎಂದು ಹೇಳಿ ರಾಯಭಾರಿಗಳನ್ನು ಹಿಂದಕ್ಕೆ ಕಳುಹಿಸಿದನು.

ಡೆಲ್ಲಿಯ ದರ್ಬಾರಿನ ಖಾಜೀ ಸಾಹೇಬರು ಬಂದು ಔರಂಗಸೇಬನಿಗೆ ಭೇಟಿಯಿತ್ತರು. ಔರಂಗಸೇಬನು ಅತ್ಯಂತ ಗೌರವದಿಂದ ಖಾಜೀಸಾಹೇಬ ರನ್ನು ಭೇಟಿಮಾಡಿದನು.

ಖಾಜೀ ಸಾಹೇಬರು "ಔರಂಗಸೇಬ್ ! ಬಿಜಾಪುರದ ಮೇಲೆ ನೀನೇಕೆ ಯುದ್ಧಕ್ಕೆ ಹೊರಟಿದ್ದೀ ? ಅವರಿಂದ ನಮ್ಮ ದರ್ಬಾರಿಗೆ ಏನು ಅಪಚಾರ ನಡೆದಿದೆ? ಅಥವಾ ರಾಜ್ಯವನ್ನು ಆಕ್ರಮಿಸುವ ಅಭಿಲಾಷೆಯಿಂದ ಹೊರಟ ದ್ದೀಯಾ ? ಅದು ಹಿಂದುಗಳ ರಾಜ್ಯವಾಗಿದ್ದರೆ ನಿನ್ನ ಆಭಿಲಾಷೆ ನ್ಯಾಯ ವಾಗುತ್ತಿತ್ತು. ಅದೂ ಮುಸಲ್ಮಾನ್ ರಾಜ್ಯ. ಆ ಸುಲ್ತಾನನು ಮೊದಲಿ ನಿಂದಲೂ ನಮಗೆ ಅಧೀನನಾಗಿಯೇ ಇದ್ದಾನೆ. ಅವನ ಮೇಲೆ ಯುದ್ಧ ಮಾಡುವುದು ಧರ್ಮಪಾದೀತೆ ?" ಎಂದು ಹೇಳಿದರು.

ಔರಂಗಸೇಬನು "ಖಾಜೀ ಸಾಹೇಬರೆ ! ನೀವು ಹೀಗೆ ಹೇಳಿದ ಮೇಲೆ ನಾನೇನು ಹೇಳುವುದು. ಬಹುಷಃ ಬಾದಷಹರವರು ತಮ್ಮನ್ನು ಕಳುಹಿಸಿ ಕೊಟ್ಟಿರಬಹುದು. ಬಾದಷಹರವರಿಗೂ ತಮಗೂ ಯಾವಾಗಲೂ ನನ್ನ ಗೌರವವು ಸಲ್ಲುತ್ತದೆ. ಬಾದಷಹರು ಶಾಂತಿಪ್ರಿಯರು. ಶಾಂತಿಯು ನಿಜ ವಾದ ಶಾಂತಿಯಾಗಿರಬೇಕು. ಮುಸಲ್ಮಾನರೆಂದರೆ ಎಲ್ಲರೂ ಮುಸಲ್ಮಾನರೇ ಆಗುತ್ತಾರೆಯೇ? ಅದರಲ್ಲಿ ಪುಣ್ಯಾಪಾಪಗಳನ್ನು ಪರಿಶೀಲಿಸುವ ಆಗತ್ಯವೇ ಇಲ್ಲವೇ ತಪ್ಪುನೆಪ್ಪುಗಳನ್ನು ನೋಡಬೇಡವೆ? ಅಕ್ಬರ್ ಚಕ್ರವರ್ತಿಗಳ ಕಾಲದಲ್ಲಿ ಕೂಡಾ, ಎಷ್ಟೋ ಮಂದಿ ಮುಸಲ್ಮಾನರನ್ನು ಶೂಲಕ್ಕೇರಿಸಿಲ್ಲವೆ? ನೀವು ಹೇಳುವುದರಲ್ಲಿ ನ್ಯಾಯವಿರಬೇಡವೆ, ಖಾಜೀ ಸಾಹೇಬರೇ?" ಎಂದನು.

"ಔರಂಗಸೇಬ್ ! ನಿನ್ನ ಅಂತರಂಗವನ್ನು ನಾನು ಬಲ್ಲೆ. ಬಿಜಾಪುರದ ಸುಲ್ತಾನನು ಷಿಯಾ ಗುಂಪಿಗೆ ಸೇರಿದವನೆಂದು ನಿನಗೆ ತಿರಸ್ಕಾರ. ಈ ರಾಜ್ಯ ದಲ್ಲಿ ಷಿಯಾ–ಸುನ್ನಿ ವಿರೋಧವು ಕ್ಷೇಮಕಾರಿಯಲ್ಲ. ಮುಸಲ್ಮಾನರಲ್ಲಿಯೇ

ಒಡಕು ಬಂದು ಚಕ್ರಾಧಿಪತ್ಯವು ಚೂರುಚೂರಾಗಿಹೋಗುತ್ತದೆ. ಅಲ್ಲಾನ ದೃಷ್ಟಿಯಿಂದ ಮುಸಲ್ಮಾನರೆಲ್ಲರೂ ಒಂದೇ. ನಮ್ಮ ಸೇನಾಧಿಪತಿಗಳಲ್ಲಿಯೂ ಷಿಯಾಗಳಿದ್ದಾರೆ. ಆ ಭೇದವನ್ನು ಅಷ್ಟಾಗಿ ಎಣಿಸಬಾರದು "

"ಖಾಜೀ ಸಾಹೇಬರೇ! ಹೆಸರಿಗೆ ಮುಸಲ್ಮಾನರೆಂದುಕೊಂಡರೆ ಆಯಿತೇ! ನನಗೆ ಷಿಯಾರ ಮೇಲೆ ವಿರೋಧವಿಲ್ಲ, ವಿದ್ವೇಷವಿಲ್ಲ. ನಿಮಗೇನೂ ಭಯವಿಲ್ಲ. ನೀವು ಬಿಜಾಪುರಕ್ಕೆ ಹೋಗಿಬನ್ನಿರಿ. ಆ ಜನರನ್ನು ನೋಡಿ ಬನ್ನಿರಿ. ಅವರಲ್ಲಿ ಮುಸಲ್ಮಾನ ಧರ್ಮದ ಲವಲೇಶವೂ ಇಲ್ಲ. ಆಕಾರ, ವೇಷಗಳು ಮುಸಲ್ಮಾನರದಾಗಿದ್ದರೆ ಆಯಿತೆ? ಸುಲ್ತಾನನಾಗಲಿ ಮತ್ತಾವ ಸರದಾರನಾಗಲೀ ಮಸೀದಿಗೆ ಹೋಗುವುದೇ ಇಲ್ಲ. ಪ್ರಾರ್ಥನೆ ಮಾಡುವುದಿಲ್ಲ ಹೆಂಗಸರಿಗೆ ಮುಖ ಪರದೆಗಳಿಲ್ಲ. ಮದುವೆಯ ವ್ಯವಸ್ಥೆಯಿಲ್ಲ. ರಾಜಕುಲದ ಹೆಂಗಸರು ನಿರ್ಲಜ್ಜ ಸ್ತ್ರೀಯರು. ಅವರು ಸ್ನಾನ ಮಾಡುವುದಕ್ಕಾಗಿ ಸುಂದರವಾದ ಕೊಳಗಳನ್ನು ಕಟ್ಟಿದ್ದಾರೆ. ಆ ಕೊಳಗಳಲ್ಲಿ ಬೆತ್ತಲೆ ಜಲಕ್ರೀಡೆಯಾಡುತ್ತಾರೆ. ಬಿಜಾಪುರದ ದರ್ಬಾರು ಐಶ್ವರ್ಯ, ಭೋಗ, ಅಲಂಕಾರ, ವ್ಯಭಿಚಾರಗಳಿಂದ ತುಂಬಿಹೋಗಿದೆ. ಅವರನ್ನು ಮುಸಲ್ಮಾನರೆನ್ನಲಾದೀತೆ? ಗೋಲ್ಕಂಡದವರೂ ಅವರೂ ಸಮಜೋಡಿ. ಆ ಜನರಲ್ಲಿ ದೇವರಲ್ಲಿ ಭಯವಿದೆಯೇ? ಖುರಾನಿನಲ್ಲಿ ನಂಬಿಕೆಯಿದೆಯೇ? ನೀವೇ ಹೋಗಿ ನೋಡಿಬನ್ನಿರಿ. ಮುಸಲ್ಮಾನರ ವೇಷಭೂಷಣಗಳನ್ನು ನೋಡಿ ಭ್ರಮಿಸಬಾರದು. ಹೆಂಗಸರಲ್ಲಿ ಅದೂ ಇಲ್ಲ. ರಾಜಸ್ತ್ರೀಯರು ಹಿಂದೂ ಹೆಂಗಸರಂತೆ ಅಲಂಕರಿಸಿಕೊಳ್ಳುತ್ತಾರೆ. ಅಬ್ಬಬ್ಬಾ! ಬಿಜಾಪುರ, ಗೋಲ್ಕಂಡಗಳು ಮುಸಲ್ಮಾನ ಧರ್ಮಕ್ಕೆ ಅಣಕಿಸುವ ಸೈತಾನಿಗಳಂತಿವೆ. ಅದಕ್ಕಾಗಿಯೇ ಮೊದಲು ಆ ರಾಜ್ಯಗಳ ಮೇಲೆ ಯುದ್ಧ ಮಾಡಬೇಕೆಂದು ನಿಶ್ಚಯಿಸಿದ್ದೇನೆ. ಈ ಸೈನ್ಯವನ್ನು ತೆಗೆದುಕೊಂಡು ನಾನೇ ಹೊರಟಿದ್ದೇನೆ. ತಾವೂ ನನ್ನೊಡನೆ ಬನ್ನಿರಿ. ಆ ರಾಜ್ಯದಲ್ಲಿ ತಾಜಾ ಮುಸಲ್ಮಾನನೊಬ್ಬನಿದ್ದರೆ ನಾನು ಬಿಟ್ಟು ಹಿಂದಕ್ಕೆ ಬರುತ್ತೇನೆ. ನೀವೇ ಸಾಕ್ಷಿ'

ಖಾಜಿಯವರು ಮುಂದೆ ಮಾತನಾಡಲಾಗಲಿಲ್ಲ.

"ಯುವರಾಜ, ನಾನು ನಿನ್ನೊಡನೆ ಬರಲೊಪ್ಪುವುದಿಲ್ಲ. ಹೇಗಾದರೂ ಮುಸಲ್ಮಾನರ ನಡುವೆ ಯುದ್ಧವನ್ನು ನೋಡಿ ನಾನು ಸಹಿಸಲಾರೆ. ಈ

ಯುದ್ಧದಲ್ಲಿ ಸಾವಿರಗಟ್ಲೆ ಮುಸಲ್ಮಾನರ ವಧೆಯಾಗುತ್ತದೆ. ಡೆಲ್ಲಿಯಲ್ಲಿಯೂ ಸುಖಭೋಗಗಳಲ್ಲಿ ಮುಳುಗಿರುವವರಿದ್ದಾರೆ. ಬಿಜಾಪುರದಲ್ಲಿಯೂ ಸುಲ್ತಾನರೂ ಅವರು ಸಂಗಡಿಗರೂ ಹಾಗಿರಬಹುದು. ಐಶ್ವರ್ಯದಲ್ಲಿ ಆ ದೋಷಗಳು ಅರಿಯದೆಯೇ ಹುಟ್ಟಿಕೊಳ್ಳುತ್ತವೆ. ಅಷ್ಟು ಮಾತ್ರದಿಂದ ಮುಸಲ್ಮಾನ್ ರಾಜ್ಯವೇ ಅಲ್ಲವೆಂದು ನಾನೊಪ್ಪಲಾಗುವುದಿಲ್ಲ. ನೀನು ಯುದ್ಧ ಮಾಡಿ ಗೆದ್ದು ಸುಲ್ತಾನನನ್ನು ಹೊಡೆದುಹಾಕುತ್ತಿ ಎಂದು ಎಂದುಕೊಳ್ಳೋಣ. ಅಲ್ಲಿ ಒಬ್ಬ ಫೌಜುದಾರನನ್ನೋ ಮತ್ತು ಒಬ್ಬ ಮಹೋನ್ನತ ಅಧಿಕಾರಿಯನ್ನೋ ನೇಮಿಸುತ್ತೀರಿ. ಅದರಿಂದ ಮುಸಲ್ಮಾನ್ ಧರ್ಮದ ಉದ್ಧಾರವಾಗುವುದೆಂದು ನೀನೂ ನಂಬಲಾರೆ, ನಾನೂ ನಂಬುವು ದಿಲ್ಲ. ನಿನ್ನ ಮನಸ್ಸಿನಲ್ಲಿ ಒಂದು ಬಾರಿ ದ್ವೇಷವು ಹುಟ್ಟಿದ ಮೇಲೆ ಅದು ಪೂರೈಸಲೇಬೇಕು. ಅದು ನಿನ್ನ ಸ್ವಭಾವ. ಬಾದಷಹರು ನನ್ನನ್ನು ಪ್ರೇರಿಸಿ, ಕಳುಹಿಸಿಕೊಟ್ಟರು. ನಾನು ಬಂದೆ ನನಗೆ ವಿಫಲನಾದೆನೆಂದು ವಿಷಾದವಿಲ್ಲ, ನನ್ನ ಕರ್ತವ್ಯವನ್ನು ನಾನು ಮಾಡಿದ್ದೇನೆ. ನಿನಗೆ ಅತ್ಯಂತ ಕೋಪ ಬಂದಾಗ, ನಿನ್ನ ಹೃದಯದಲ್ಲಿ ರೋಷಾಗ್ನಿಯು ಜ್ವಲಿಸುತ್ತಿರುವಾಗ ನನ್ನ ಮಾತುಗಳನ್ನು ಸ್ಮರಣೆಮಾಡಿಕೋ. ಅಷ್ಟೇ ನಾನು ನಿನ್ನಲ್ಲಿ ಬೇಡುವ ಯಾಚನೆ." ಎಂದು ಹೇಳಿ ಡೆಲ್ಲಿಗೆ ಪ್ರಯಾಣ ಮಾಡಿದರು.

ಔರಂಗಸೇಬನು ಮುಂದೆ ಮುಂದೆ ಪ್ರಯಾಣ ಬೆಳೆಸಿದನು.

ಸುಲ್ತಾನನು ಮಧ್ಯೆ ಮಧ್ಯೆ ನಾಲ್ಕಾರು ಪ್ರಾರ್ಥನಾ ಪತ್ರಗಳನ್ನು ಕಳುಹಿಸಿದನು. ಎಲ್ಲವೂ ವ್ಯರ್ಥ. ಬಿಜಾಪುರದ ಸೈನ್ಯಗಳು ಎಲ್ಲಿಯೂ ಔರಂಗಸೇಬನನ್ನು ಎದುರಿಸಲಿಲ್ಲ. ಆದರೆ ಬಿಜಾಪುರದ ಸೇನಾಧಿಪತಿಗಳು ನಿರಾಶೆಯಿಂದ ಇರಲಿಲ್ಲ.

ಸೇನಾಧಿಪತಿಗಳೆಲ್ಲರೂ ಸುಲ್ತಾನನ ದರಬಾರಿನಲ್ಲಿ ಸೇರಿದರು. "ಜಹಪನಾ, ತಮಗೆ ಭಯವು ಅಂಕುರಿಸಿರುವಂತಿದೆ. ನಾವುಗಳು ನಿರ್ವೀರ್ಯರಲ್ಲ. ನಮ್ಮ ಸೈನ್ಯಬಲವು ಪ್ರಚಂಡವಾಗಿದೆ. ನಿಜವಾಗಿಯೂ ನಮ್ಮ ತೋಪುಗಳಿಗೆ ಸಮಾನವಾದ ತೋಪುಗಳು ಮೊಗಲ್ ಸೈನ್ಯದಲ್ಲಿಲ್ಲ. ನಾವು ಟರ್ಕಿ, ಅಬಿಸೀನಿಯಾ, ಅರಬ್, ಅಫ್‌ಗನ್ ರಾಷ್ಟ್ರಗಳಿಂದ ತಮ್ಮ ಸೇವೆಗೆ ಬಂದಿದ್ದೇವೆ. ಆದಿಲ್‌ಷಾಹಿಯ ಖ್ಯಾತಿಯು ಆ ರಾಜ್ಯಗಳಲೆಲ್ಲಾ

ಹರಡಿ ನಮ್ಮನ್ನು ಇಲ್ಲಿಗೆ ಆಕರ್ಷಿಸಿದೆ. ನಮ್ಮ ಸೈನ್ಯಗಳು ಮೊಗಲ್ ಸೈನ್ಯಗಳಿಗಿಂತ ಯಾವ ಭಾಗದಲ್ಲಿಯೂ ಕಡಿಮೆಯಾಗಿಲ್ಲ. ನಮಗೆ ಅಪ್ಪಣೆಕೊಡಿ. ನಾವು ಕಟ್ಟಕಡೆಯವರಿಗೆ ಯುದ್ಧಮಾಡುತ್ತೇವೆ. ಔರಂಗಸೇಬನು ಓಡಿಹೋಗದಿದ್ದರೆ ನಮ್ಮ ಕೈಲಿ ಸೆರೆ ಸಿಕ್ಕಬೀಳುತ್ತಾನೆ. ಆಕಸ್ಮಾತ್ ರಣಕ್ಷೇತ್ರದಲ್ಲಿ ಮಡಿದರೆ ದಕ್ಕನ್‌ರಾಜ್ಯವು ನಿಷ್ಕಂಟಕವಾಯಿತು" ಎಂದು ಹೇಳಿದರು.

ಸುಲ್ತಾನನು ಇಷ್ಟವಿರಲಿ ಇಲ್ಲದಿರಲಿ ಒಪ್ಪಿಕೊಳ್ಳಲೇಬೇಕಾಯಿತು.

ಬಿಜಾಪುರದ ಸೇನಾಧಿಪತಿಗಳು ಯುದ್ಧಕ್ಕೆ ಸಿದ್ಧರಾದರು. ತೋಪುಗಳನ್ನು ಸಿದ್ಧಪಡಿಸಿದರು. ಕೋಟೆಯನ್ನು ಭದ್ರಪಡಿಸಿದರು. ಕಂದಕಗಳನ್ನು ಸರಿಪಡಿಸಿ ಜಡಭರ್ತಿ ಮಾಡಿದರು. ಐವತ್ತು ಅಡಿ ಅಗಲದ ಎರಡು ಕಂದಕಗಳು ಕೋಟೆಯ ಸುತ್ತಲೂ ಹೆಬ್ಬಾವು ಬುಸುಗುಟ್ಟುವಂತೆ ಮೊರೆಯಲಾರಂಭಿಸಿತು. ಸೈನಿಕರನ್ನು ಹುರಿದುಂಬಿಸಿದರು. ಬಿಜಾಪುರದ ಸೈನ್ಯವು ಪ್ರಚಂಡ ಸೈನ್ಯ. ಬಿಜಾಪುರದ ಸೈನಿಕರು ಯುದ್ಧದಲ್ಲಿ ಹೆಸರುವಾಸಿಯಾದವರು. ಸೇನಾಧಿಪತಿಗಳು ಅವರುಗಳಿಗೆ ಕೈತುಂಬಾ ಹೊನ್ನು ಕೊಟ್ಟು ಉತ್ತೇಜನಗೊಳಿಸಿದ್ದರು.

ಔರಂಗಸೇಬನ ಸೈನ್ಯವು ಬಿಜಾಪುರದ ಕೋಟೆಯನ್ನು ಸುತ್ತುಗಟ್ಟಿತು. ಅಲ್ಲಲ್ಲಿ ಕಲ್ಲುಮಣ್ಣುಗಳನ್ನು ತುಂಬಿ ಕಂದಕಗಳನ್ನು ಮುಚ್ಚಿ ದಾರಿಮಾಡಲು ಸಾವಿರಾರು ಮೊಗಲ್ ಸೈನಿಕರು ಹೊರಟರು. ಕೋಟೆಯ ಎದುರಿನಲ್ಲಿ ಮಣ್ಣುಕಲ್ಲುಗಳ ರಾಶಿಹಾಕಿ ಅದರ ಮೇಲೆ ಅಟ್ಟಣಿಕೆಗಳನ್ನು ಕಟ್ಟಿ ಫಿರಂಗಿಗಳನ್ನು ಏರಿಸಲು ಸಾಹಸಮಾಡುತ್ತಿದ್ದರು. ಬಿಜಾಪುರದ ಅಶ್ವಸೈನ್ಯಗಳು ಪ್ರಸಿದ್ಧವಾದವುಗಳು. ಅರಬ್, ಅಬಿಸೀನಿಯನ್ ಸೈನಿಕರು ಕುದುರೆಗಳನ್ನೇರಿ ಧೈರ್ಯದಿಂದ ಮೊಗಲ್ ಸೈನ್ಯದ ಮೇಲೆ ಬೀಳುತ್ತಿದ್ದರು. ಮೊಗಲ್ ಸೈನ್ಯಕ್ಕೆ ಒಂಟೆಗಳ ಮೇಲೆ ಒದಗುತ್ತಿದ್ದ ಆಹಾರ ಸಾಮಗ್ರಿಗಳನ್ನು ಲೂಟಿಮಾಡುತ್ತಿದ್ದರು.

ವಾರಗಳು ಕಳೆದವು. ತಿಂಗಳುಗಳು ಹೊರಳಿದವು. ಔರಂಗಸೇಬನಿಗೆ ಜಯದ ಚಿಹ್ನೆಗಳೇ ಕಾಣಬಾರದಾದವು. ಅವನು ಹಿಂಜರಿಯಲಿಲ್ಲ. ಮತ್ತೂ ಉದ್ವೇಗದಿಂದ ಮೊಗಲ್ ಸೈನಿಕರನ್ನು ಹುರಿದುಂಬಿಸುತ್ತಿದ್ದನು.

ಶುಕ್ರವಾರ ಸಂಧ್ಯಾಕಾಲದಲ್ಲಿ ಔರಂಗಸೇಬನು ತನ್ನ ಗುಡಾರದಲ್ಲಿ ಪ್ರಾರ್ಥನೆ ಮಾಡುತ್ತಿದ್ದನು.

ಅವನ ಪ್ರಾರ್ಥನೆಯು ಪೂರೈಸುವ ಸಮಯಕ್ಕೆ ಸರಿಯಾಗಿ ಮಂತ್ರವಾದಿ ಹಷೀಂ ಉಲೂವಿಯು ತನ್ನ ಶಿಷ್ಯರಾದ ನಾಲ್ಕು ಮಂದಿ ಫಕೀರರೊಡನೆ ಔರಂಗಸೇಬನ ಪಟಭವನದ ಮುಂದೆ ಕಾಲುನಡಗೆಯಲ್ಲೇ ಬರುತ್ತಿದ್ದನು.

ಔರಂಗಸೇಬನು ದೂರದಿಂದಲೇ ಅವರನ್ನು ಕಂಡನು ವೇಷಗಳಿಂದ ಫಕೀರರೆಂದು ಅರಿತುಕೊಂಡನು.

ಅವನು ತನ್ನ ಅಂಗರಕ್ಷಕರನ್ನು ಕರೆದು "ಅಲ್ಲಿ ನೋಡಿರಿ, ಫಕೀರರು ಬರುತ್ತಿದ್ದಾರೆ. ಈ ಕಾಲದಲ್ಲಿ ಫಕೀರರನ್ನು ನಂಬುವುದಕ್ಕಿಲ್ಲ. ಫಕೀರ ವೇಷದಲ್ಲಿ ದಗಾಕೋರರಿದ್ದಾರೆ. ರಾಜಕಾರಣಿಗಳಿದ್ದಾರೆ. ಘಾತುಕರಿದ್ದಾರೆ. ಈ ಯುದ್ಧಕಾಲದಲ್ಲ ರಣಕ್ಷೇತ್ರದಲ್ಲಿ ನಿಜವಾದ ಫಕೀರರಿಗೆ ಏನು ಕೆಲಸವಿದೆ? ಅವರು ಏನೋ ಮೋಸದ ಸಂಚಿನಿಂದ ನನ್ನಲ್ಲಿ ಬರುತ್ತಿದ್ದಾರೆ. ನೀವು ಹೋಗಿ ಅವರನ್ನು ಚೆನ್ನಾಗಿ ಶೋಧಿಸಿರಿ. ಹೆದರಬೇಡಿರಿ. ಅವರು ನಿಜವಾದ ಫಕೀರರಾಗಿದ್ದರೆ ನನ್ನಲ್ಲಿಗೆ ಬರಲು ಆಕ್ಷೇಪಣೆಯಿಲ್ಲ. ಅವರು ಅಂತರಂಗ ಆಯುಧಗಳನ್ನು ಬಚ್ಚಿಟ್ಟುಕೊಂಡು ಬಂದಿಲ್ಲವೆಂದು ಖಾತ್ರಿಮಾಡಿಕೊಳ್ಳಬೇಕು. ಸಾಚಾ ಫಕೀರರೆಂದು ಖಾತ್ರಿಯಾದರೆ ನನ್ನಲ್ಲಿಗೆ ಕರೆತನ್ನಿರಿ" ಎಂದು ಹೇಳಿ ಕಳುಹಿಸಿದನು.

ಅಂಗರಕ್ಷಕರು ಓಡಿಬಂದು ಆ ಫಕೀರರ ಗುಂಪನ್ನು ತಡೆದು ನಿಲ್ಲಿಸಿದರು.

ಹಷೀಂ ಉಲೂವಿಯು ನಗುತ್ತಾ "ನಾವು ಯುವರಾಜರ ಭೇಟಿಗೆ ಹೋಗುತ್ತಿದ್ದೇವೆ. ನಮ್ಮನ್ನೇಕೆ ತಡೆಯುತ್ತೀರಿ?" ಎಂದು ಪ್ರಶ್ನೆ ಮಾಡಿದನು.

ಆ ಅಂಗರಕ್ಷಕರು "ನೀವು ಫಕೀರರಂತೆ ಕಾಣುತ್ತೀರಿ. ಈ ಯುದ್ಧ ಭೂಮಿಯಲ್ಲಿ ನಿಮಗೇನು ಕೆಲಸ?" ಎಂದರು.

"ಕೆಲಸವಿಲ್ಲದೆ ಬರುತ್ತಾರೆಯೇ? ನೀವು ಯುವರಾಜರಿಗೆ ತಿಳಿಸಿರಿ. ನಾವು ಐವರೂ ಅವರ ದರ್ಶನಾರ್ಥವಾಗಿ ಬಂದಿದ್ದೇವೆಂದು. ಅವರು ನಮ್ಮನ್ನು ಸಂತೋಷದಿಂದ ನೋಡಬಯಸುತ್ತಾರೆ."

ಅಂಗರಕ್ಷಕರಲ್ಲೊಬ್ಬನು "ಫಕೀರರೇ. ನೀವುಗಳು ಯುವರಾಜರ ಭೇಟಿ ಮಾಡುವುದಕ್ಕೆ ಯಾವಾಗಲೂ ಅಡ್ಡಿಯಿಲ್ಲ. ಇದು ಯುದ್ಧದ ಸಮಯ.

ಈ ಬಿಜಾಪುರದಲ್ಲಿ ಬಹಳ ಮಂದಿ ಮಾಯಾವಿಗಳು, ಮಂತ್ರಗಾರರು ಇದ್ದಾರೆಂದು ಕೇಳಿದ್ದೇವೆ. ಅದು ಹೇಗೆ ಇರಲಿ. ಯುದ್ಧದ ಶಿಸ್ತಿನಂತೆ ನಿಮ್ಮಗಳನ್ನು ಶೋಧನೆ ಮಾಡದೇ ಯುವರಾಜರ ಭೇಟಿಗೆ ಬಿಡುವಂತಿಲ್ಲ. ಅದು ನಮ್ಮ ಕರ್ತವ್ಯ" ಎಂದು ಹೇಳಿದನು.

ಉಲೂವಿಯು ನಗುತ್ತಾ, "ಹೌದು ಹೌದು. ಅವರವರ ಕರ್ತವ್ಯವನ್ನು ಅವರವರು ಪಾಲಿಸಬೇಕು. ಅದಕ್ಕೆ ಅಡ್ಡಿಯೇನಿದೆ, ಶೋಧನೆ ಮಾಡಿ" ಎಂದು ಹೇಳಿ ತಮ್ಮ ವಸ್ತುಗಳನ್ನೆಲ್ಲಾ ತೆಗೆದು ಬಿಸುಟು ದಿಗಂಬರರಾಗಿ ನಿಂತುಕೊಂಡರು.

"ಸರಿಯಾಗಿ ನೋಡಿರಿ. ನಮ್ಮಲ್ಲಿ ಗುಪ್ತ ಆಯುಧಗಳೇನೂ ಇಲ್ಲ. ನಾವು ಯುವರಾಜರ ವಿರೋಧಿಗಳಲ್ಲ. ಅವರ ಹಿತಾಕಾಂಕ್ಷಿಗಳು. ಅವರ ಪರಾಕ್ರಮದಿಂದಲೇ ನಾವಿಷ್ಟು ನಿರ್ಭಯರಾಗಿದ್ದೇವೆ. ಇಲ್ಲದಿದ್ದರೆ ನಾವೀ ರಾಜ್ಯದಲ್ಲಿರುತ್ತಿರಲಿಲ್ಲ" ಎಂದು ಹೇಳಿದನು.

ಅಂಗರಕ್ಷಕರು ಆ ವಸ್ತ್ರಗಳನ್ನೆಲ್ಲಾ ಪರೀಕ್ಷಿಸಿದರು. ಅದನ್ನೆಲ್ಲಾ ಧರಿಸಿಕೊಳ್ಳುವಂತೆ ಫಕೀರರನ್ನು ಪ್ರಾರ್ಥಿಸಿದರು. "ನಮ್ಮನ್ನು ಕ್ಷಮಿಸಬೇಕು. ನಮ್ಮ ಶಿಸ್ತು ಕಾಪಾಡಲು ತಮ್ಮನ್ನು ಶೋಧಿಸಿದೆವು" ಎಂದು ನೆಲ ಮುಟ್ಟಿ ಸಲಾಂ ಮಾಡಿದರು.

ಫಕೀರರು ವಸ್ತ್ರಗಳನ್ನು ಧರಿಸಿಕೊಂಡ ಮೇಲೆ "ನಮ್ಮ ಜೊತೆಯಲ್ಲಿ ಬನ್ನಿರಿ" ಎಂದು ಹೇಳಿ ಯುವರಾಜರ ಗುಡಾರದೊಳಗೆ ಕರೆದೊಯ್ದರು.

ಯುವರಾಜನು ತೀಕ್ಷ್ಣದೃಷ್ಟಿಯಿಂದ ಅವರುಗಳನ್ನು ನೋಡಿ "ಬನ್ನಿರಿ ನೀವು ಯಾವ ರಾಜ್ಯದವರು? ಯಾವ ಅಪೇಕ್ಷೆಯಿಂದ ನಮ್ಮಲ್ಲಿಗೆ ಬಂದಿದ್ದೀರಿ?" ಎಂದು ಪ್ರಶ್ನೆ ಮಾಡಿದನು.

ಉಲೂವಿಯು ನಗುತ್ತಾ ಯುವರಾಜನನ್ನು ಹರಸಿದನು. "ಯುವರಾಜ! ನಾವು ಅಲ್ಲಾನ ರಾಜ್ಯದವರು. ಧರ್ಮದ ಮೇಲೆ ಆಣೆಯಿಟ್ಟು ಎರಡು ಹಿತವಚನಗಳನ್ನು ಹೇಳಿ ಹೋಗಲು ಬಂದಿದ್ದೇವೆ" ಎಂದು ಹೇಳಿದನು.

"ಹೇಳಿರಿ. ಏನು ಹೇಳಬೇಕೆಂದಿರುವಿರೋ ಅದನ್ನು ಸ್ಪಷ್ಟವಾಗಿ ಹೇಳಿರಿ. ಭಯಪಡಬೇಡಿರಿ. ದೇವರನ್ನು ನಂಬಿದವರಿಗೆ ನಮ್ಮಲ್ಲಿ ಯಾವ ಭಯವೂ ಇಲ್ಲ."

ಅವರುಗಳನ್ನು ಆಸನಗಳ ಮೇಲೆ ಕುಳಿತುಕೊಳ್ಳುವಂತೆ ಸನ್ನೆ ಮಾಡಿದನು.

"ಯುವರಾಜ, ಈ ಬಿಜಾಪುರವು ಮುಸಲ್ಮಾನ ರಾಜ್ಯ. ಉತ್ತರದಲ್ಲಿ ಡೆಲ್ಲಿಯು ಎಷ್ಟು ಮಟ್ಟಿಗೆ ಮುಸಲ್ಮಾನ್ ಧರ್ಮಕ್ಕೆ ಆಧಾರವಾಗಿದೆಯೋ ಬಿಜಾಪುರವೂ ಅಷ್ಟೇಮಟ್ಟಿಗೆ ಧರ್ಮಕ್ಕೆ ಆಕರವಾಗಿದೆ. ಸುಲ್ತಾನನು ಬಹಳ ದಿನಗಳಿಂದ ವ್ಯಾಧಿಗ್ರಸ್ತನಾಗಿದ್ದಾನೆ. ಅವನ ದೋಷವು ಲವಲೇಶವೂ ಕಂಡು ಬರುವುದಿಲ್ಲ. ನೀವು ಮಾಡುತ್ತಿರುವ ಯುದ್ಧವು ಧರ್ಮಯುದ್ಧವಲ್ಲ ಯುದ್ಧವನ್ನು ನಿಲ್ಲಿಸಿ ಸುಲ್ತಾನನನ್ನು ಹರಸಿ, ನೀವು ಡೆಲ್ಲಿಗೆ ಹಿಂತಿರುಗಿ ಹೋಗುವುದು ಶ್ರೇಯಸ್ಕರವೆಂದು ನಾನು ಖಚಿತವಾಗಿ ಹೇಳುತ್ತೇನೆ. ದೇವರ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಇಷ್ಟು ಮಾತುಗಳನ್ನು ಮುಸಲ್ಮಾನ್ ಧರ್ಮದ ಆಧಾರಸ್ತಂಭದಂತಿರುವ ಯುವರಾಜನಲ್ಲಿ ಹೇಳಲು ಬಂದಿದ್ದೇನೆ".

ಔರಂಗಜೇಬನು ಗಂಭೀರಭಾವವನ್ನು ತಾಳಿ "ಧರ್ಮಶ್ರವಣದ ಕಾಲವು ಮೀರಿಹೋಗಿದೆ. ಈಗ ಯುದ್ಧವು ನಡೆಯುತ್ತಿರುವ ಸಮಯ. ಧರ್ಮದ ವಿಚಾರಕ್ಕೂ ಯುದ್ಧದ ವ್ಯವಹಾರಗಳಿಗೂ ಬಹಳ ದೂರವಿದೆ.ನಾನು ಸುಲ್ತಾನನ ಪ್ರಾಣವನ್ನು ಹರಣ ಮಾಡಲು ಬಂದಿಲ್ಲ. ರಾಜ್ಯವನ್ನು ಕಿತ್ತು ಕೊಂಡು ಹೋಗಲೂ ನಾನು ಬ ದಿಲ್ಲ. ಮೊಗಲ್ ಬಾದಷಹರ ಸೈನ್ಯಕ್ಕೆ ಎಂದೂ ಅಪಜಯದ ಶಂಕೆಯೇ ಇಲ್ಲ. ಯುದ್ಧವೆಂದರೆ ಬೆಣ್ಣೆ ಮುದ್ದೆಯನ್ನು ನುಂಗುವುದಲ್ಲ. ಕಠಿಣವಾಗುತ್ತದೆ. ಕಠೋರ ಪರಿಸ್ಥಿತಿಗಳು ಬರುತ್ತವೆ. ಏನೇ ಆಗಲಿ ಜಯವು ನಮ್ಮದು. ಯುದ್ಧವು ಪೂರೈಸಿದ ನಂತರ ನಾನೇ ಖುದ್ದಾಗಿ ಬಂದು ಸುಲ್ತಾನನನ್ನು ನೋಡಿ ಸಹಸ್ರ ಆಶೀರ್ವಾದಗಳಿಂದ ಹರಿಸಿ ಹೋಗುತ್ತೇನೆ. ಈ ರಾಜ್ಯವನ್ನು ಅವನಿಗೇ ಕೊಟ್ಟು ಹೋಗುತ್ತೇನೆ. ಧರ್ಮಸಾಕ್ಷ್ಯವನ್ನು ಆಗ ಪರೀಕ್ಷಿಸಿರಿ. ಈಗ ನಿಮಗೆ ವಂದನೆಗಳು. ಹಿಂತಿರುಗಿ ಹೋಗಿರಿ" ಎಂದು ಹೇಳಿದನು.

"ಯುವರಾಜ, ನಿನ್ನ ಮಾತುಗಳೆಲ್ಲವೂ ಸರಿಯಾಗಿದೆ. ಆದರೆ ಈ ಯುದ್ಧದಲ್ಲಿ ನಿನಗೆ ಜಯವಾಗುವುದಿಲ್ಲ"

ಔರಂಗಸೇಬನು ಕ್ರುದ್ಧನಾಗಿ "ನೀವು ಜೋತಿಷ್ಕರೋ ?" ಎಂದು ವ್ಯಗ್ರವಾಗಿ ಪ್ರಶ್ನೆ ಮಾಡಿದನು.

"ನಾನು ಜೋತಿಷ್ಕನಲ್ಲ. ಇದು ದೇವರ ಆಜ್ಞೆ. ಅದನ್ನು ನಾನು ಕಿವಿಗಳಿಂದ ಕೇಳುತ್ತಿದ್ದೇನೆ. ಕಣ್ಣುಗಳಿಂದ ಪ್ರತ್ಯಕ್ಷವಾಗಿ ನೋಡುತ್ತಿದ್ದೇನೆ ಯುವರಾಜ, ನೀನು ದೇವರ ರಾಜ್ಯದಿಂದ ದೂರವಾಗಿರುವೆ ಆ ದೈವವಾಣಿಯು ನಿನಗೆ ಕೇಳುವುದಿಲ್ಲ. ಅದನ್ನು ನೋಡಲಾರೆ"

ಔರಂಗಸೇಬನು ಕೋಪೋದ್ರೇಕದಿಂದ ಬೆಂಕಿಯನ್ನು ಕಾರುತ್ತಾ "ದೇವರು ಸುಲ್ತಾನನ ಕಡೆಗಿದ್ದಾನೆಂದು ನನಗೆ ಹೇಳಲು ಈ ವೇಷವನ್ನು ಧರಿಸಿ ನೀವು ಬಂದಿದ್ದೀರೋ ? ನಿಮ್ಮ ಮಾತಿನಲ್ಲಿ ನಿಜವಿದ್ದರೆ ಆ ದೇವರೇ ಸುಳ್ಳು" ಎಂದನು.

ಉಲೂಮಿಯು ನಗುತ್ತಾ "ಯುವರಾಜ, ನೀನು ಕೋಪದಿಂದ ಮೋಹದಿಂದ ಅಧಿಕಾರ ಮದದಿಂದ ನಾಸ್ತಿಕನಾಗುತ್ತಿರುವೆ. ದೇವರಿದ್ದಾನೆ. ದೇವರ ಮಾತುಗಳು ನನ್ನ ಕಿವಿಯಲ್ಲಿ ಬಿದ್ದು ಬಾಯಿಯಲ್ಲಿ ಆಡಿಸುತ್ತಿವೆ. ಪರೀಕ್ಷೆ ಮಾಡೋಣ" ಎಂದು ಶಾಂತ್ಯದಿಂದ ನುಡಿದನು.

"ಪರೀಕ್ಷೆ ! ಪರೀಕ್ಷೆಯಾಗುವುದಾದರೆ ನನಗೂ ಸಂತೋಷ. ದೇವರನ್ನು ಪರೀಕ್ಷೆ ಮಾಡುವ ಅಗತ್ಯವಿಲ್ಲ. ನಿಮ್ಮಂಥಾ ಪ್ರವಾದಿಗಳನು ಪರೀಕ್ಷಿಸಲೇಬೇಕು. ನಾನು ಪರೀಕ್ಷೆಗೆ ಸಿದ್ಧ".

"ಹಠವಿಲ್ಲ, ನನ್ನ ಮಾತು ಸಿದ್ಧ. ಒಂದೇ ಒಂದು ದಿನ. ನಾಳೆ ಸೂರ್ಯನು ಮುಳುಗುವುದರೊಳಗೆ ನನ್ನ ಪರೀಕ್ಷೆಯು ಪ್ರತ್ಯಕ್ಷವಾಗುತ್ತದೆ"

"ಫಕೀರನೇ ಈ ಯುದ್ಧಕ್ಕಿಂತಲೂ ನಿನ್ನ ಮಾತು ನನಗೆ ಕಠೋರವಾಗಿದೆ. ನಾನು ಬುದ್ಧಿ ಅರಿತಂದಿನಿಂದಲೂ ದೇವರನ್ನು ನಂಬಿದ ಮನುಷ್ಯ. ದೇವರ ಪ್ರೇರಣೆಯಾಗದೆ ಹೆಜ್ಜೆಯಿಡುವವನಲ್ಲ. ಇಂದು ಪ್ರಾರ್ಥನೆಯಲ್ಲಿಯೂ ದೇವರ ಪ್ರಸಾದವು ಲಭಿಸಿದೆ. ಫಕೀರನಾದ ನಿನ್ನೊಡನೆ ಒಡಾಯಿ ಕೊಚ್ಚುವುದಿಲ್ಲ. ನೀನು ಮೋಸಗಾರ. ಇಲ್ಲವೇ, ನಾನು ಭ್ರಾಂತ."

"ಹೌದು ಹೌದು ! ನೀನು ಭ್ರಾಂತ. ಅದನ್ನು ನೂರು ಬಾರಿ ಹೇಳು. ದೇವರು ಬಾದಷಹರ ಮನೆಯ ಪುರೋಹಿತನಲ್ಲ. ನಿನ್ನ ಪ್ರಾರ್ಥನೆಯಲ್ಲಿ

ನಿನಗೆ ದೊರೆತ ದೇವರ ಪ್ರಸಾದವು ಭ್ರಾಂತಿ. ಆ ಭ್ರಾಂತಿಯನ್ನು ಬಿಡಿಸುವುದಕ್ಕೆ ದೇವರು ನನ್ನನ್ನು ಇಲ್ಲಿಗೆ ಕಳುಹಿಸಿದ್ದಾನೆ"

"ವೃಥಾ ಮಾತುಗಳಿಂದ ಫಲವಿಲ್ಲ. ನಿನ್ನೊಡನೆ ಈ ಪರೀಕ್ಷೆಗೆ ಈಗ ಸಿದ್ಧನಾಗಿಲ್ಲ. ಮತ್ತೊಂದು ಅಪ್ಪಣೆಯಾಗುವವರೆಗೆ ನೀವುಗಳು ನಮ್ಮ ಶಿಬಿರದಲ್ಲಿ ಬಂಧಿಗಳಾಗಿರಬೇಕು. ನಿಮ್ಮ ಬಿಡುಗಡೆಯು ಆ ದೇವರ ಆಜ್ಞೆ ಬಂದಾಗ ಆಗುತ್ತದೆ."

"ಅಲ್‌ಬತ್ ! ನಾನು ನಿನ್ನನ್ನು ಪರೀಕ್ಷಿಸುತ್ತಿಲ್ಲ. ಆ ದೇವರು ಪರೀಕ್ಷಿಸುತ್ತಿದ್ದಾನೆ" ಎಂದು ಹೇಳಿ ಗುಡಾರದಿಂದ ಹೊರಟನು.

ರಾಜಭಟರು ಅವರುಗಳಿಗೆ ಬಂದೀಖಾನೆಯ ದಾರಿಯನ್ನು ತೋರಿದರು.

ಮಾರನೆಯ ದಿನ ಮಧ್ಯಾಹ್ನದ ಸಮಯಕ್ಕೆ ಡಿಲ್ಲಿಯಿಂದ ಸರದಾರನೊಬ್ಬನು ನಾಲ್ಕು ಮಂದಿ ಬೆಂಗಾವಲಿನೊಡನೆ ಶಿಬಿರಕ್ಕೆ ಬಂದು ಸೇರಿದನು. ತುರ್ತು ಯುವರಾಜರ ಭೇಟಿ ಮಾಡಬೇಕೆಂದು ಗಾಬರಿಯಿಂದ ಹೇಳಿದನು. ದ್ವಾರಪಾಲಕರು ಯುವರಾಜರ ಅಪ್ಪಣೆ ಪಡೆದು ಆ ಸರದಾರನನ್ನು ಡೇರೆಯೊಳಕ್ಕೆ ಕರೆದೊಯ್ದನು. ಅವನನ್ನು ನೋಡಿ ಯುವರಾಜನಿಗೆ ಆಶ್ಚರ್ಯವಾಯಿತು.

"ರಸೂಲ್, ಏನು ಬಂದಿದ್ದೀ ?" ಎಂದು ಪ್ರಶ್ನೆಮಾಡಿದನು.

ರಸೂಲನು ಒಂದು ಲಕೋಟೆಯನ್ನು ಕೊಟ್ಟು ಸಲಾಂಮಾಡಿದನು. "ಇದನ್ನು ತಮ್ಮ ಕೈಗೇ ಒಪ್ಪಿಸಬೇಕೆಂದು ಛಕ್ಷಿಯವರ ಹುಕ್ಕು ಆಗಿದೆ" ಎಂದು ಹೇಳಿದನು.

ರಸೂಲನು ಬಾದಷಹರವರ ಖಾಸಾ ಬಳಗಕ್ಕೆ ಸೇರಿದವನು.

ಔರಂಗಜೇಬನು ಲಕ್ಕೋಟೆಯನ್ನು ಬಿಚ್ಚಿ ಪತ್ರವನ್ನು ಓದಿಕೊಂಡನು. ಮತ್ತೊಮ್ಮೆ ಓದಿಕೊಂಡನು. ಮುಖವು ವಿವರ್ಣವಾಯಿತು.

"ಮುರಾದ್, ಷಾಜ್‌ನಿಗೂ ಹೀಗೆ ಪತ್ರಗಳು ಹೋಗಿವೆಯೋ ?" ಎಂದು ಪ್ರಶ್ನೆಮಾಡಿದನು.

ರಸೂಲನು "ಹೌದು ಖಾವಂದರೇ, ಅಲ್ಲಿಗೂ ತುರ್ತುಪತ್ರಗಳು ಹೋಗಿವೆ" ಎಂದು ಹೇಳಿ ಸಲಾಂ ಮಾಡಿದನು.

ಆ ಪತ್ರದ ಪರಿಯು ಈ ರೀತಿಯಾಗಿದ್ದಿತು.

"ಬಾದಷಹರ ಪ್ರಿಯಪುತ್ರರಾದ ಷಾ ಔರಂಗಸೇಬ್ ಬಹದ್ದೂರ್‌ರವರ ಹುಜೂರ್ ಸನ್ನಿಧಾನಕ್ಕೆ ಷಹಾನ್‌ಷಹಾ ಬಾದಷಹ ಷಹಜಹಾನ್‌ರವರಿಗೆದೇಹಾಲಸ್ಯವಾಗಿದೆ. ವ್ಯಾಧಿಯು ಅತಿವೇಗದಿಂದ ವಿಷಮಾವಸ್ಥೆಗೆ ಬರುತ್ತಿರುವಂತಿದೆ. ಹಕೀಂ ಹಜಾರ್ ಖಾನ್‌ರವರು ಕೂಡಾ ಕೈಬಿಟ್ಟಿರುವಂತೆ ತೋರುತ್ತದೆ. ಇಲ್ಲಿಯ ವ್ಯವಸ್ಥೆಗಳೆಲ್ಲಾ ಸರಿಯಾಗಿದೆ. ಈ ಸಮಯದಲ್ಲಿ ತಮ್ಮ ಸವಾರಿಯು ಇಲ್ಲಿದ್ದರೆ ಒಳಿತಾಗುತ್ತಿತ್ತು. ನಮ್ಮೆಲ್ಲರಿಗೂ ಧೈರ್ಯವಾಗಿರುತ್ತಿತ್ತು. ಬಾದಷಹರವರಿಗೆ ಜ್ಞಾನವು ಸರಿಯಾಗಿಯೇ ಇದೆ. ದೊಡ್ಡ ಖಾಜೀ ಅಬುಲ್ ಹಸನ್‌ರವರು ಬಾದಷಹರ ಸನ್ನಿಧಾನದಲ್ಲಿಯೇ ಇದ್ದಾರೆ ದೇವರ ಆಜ್ಞೆ ಹೇಗಿರುತ್ತದೆಂದು ಹೇಳಲಾಗುವುದಿಲ್ಲ."

ನಿಮ್ಮ ವಿಶ್ವಾಸೀ,
ಭಕ್ಷೀಗುಲಾಂ ಮಹಮದ್"

ಈ ಪತ್ರವನ್ನು ಮತ್ತೊಮ್ಮೆ ಓದಿಕೊಂಡನು.

ಸ್ವಲ್ಪಹೊತ್ತು ಯೋಚನೆ ಮಾಡುತ್ತಿದ್ದು "ಮತ್ತೇನಾದರೂ ಹೇಳಿಕೆಯುಂಟೇ?" ಎಂದು ಕೇಳಿದನು.

ರಸೂಲನು ಕಿಸೆಯಿಂದ ಮತ್ತೊಂದುಲಕ್ಕೋಟೆಯನ್ನು ತೆಗೆದು ಅದಬ್ಬಿನಿಂದ ಯುವರಾಜನಿಗೆ ಒಪ್ಪಿಸಿದನು.

ಆ ಲಕ್ಕೋಟೆಯನ್ನು ಔರಂಗಸೇಬನು ಕೈಗೆ ತೆಗೆದುಕೊಂಡುಆದರದಿಂದ ನೋಡಿದನು. ಮುಖದಲ್ಲಿ ಮಂದಹಾಸವು ಮಿಂಚಿತು. ಆತುರದಿಂದ ಲಕ್ಕೋಟೆಯನ್ನು ಬಿಚ್ಚಿ ಓದಿಕೊಂಡನು.

ಅದು ಅವನ ಪ್ರಿಯ ಸೋದರಿ ರೋಷನಾರ ಬರೆದಿದ್ದ ಪತ್ರ.

"ಪ್ರಾಣಪ್ರಿಯ ಷಹಾನ್‌ಷಹಾ ಅಣ್ಣನವರಿಗೆ, ಇಲ್ಲಿ ಬಾದಷಹನು ರುಗ್ಣಶಯ್ಯೆಯಲ್ಲಿದ್ದಾನೆ. ನಾನು ಎಡೆಬಿಡದೇ ಅವನ ಸನ್ನಿಧಾನದಲ್ಲಿಯೇ ಇದ್ದೇನೆ. ಈ ಬಾರಿ ದೇವರು ಕಣ್ಣುಬಿಟ್ಟು ನೋಡುವಂತೆ ತೋರುತ್ತಿಲ್ಲ. ಬಾದಷಹನು ಕಣ್ಣುಮುಚ್ಚುತ್ತಾನೆಂದು ನನಗೆ ಅನ್ನಿಸುತ್ತಿದೆ. ಇಲ್ಲಿ ದರಬಾರಿನಲ್ಲಿ ಯಾವುದೂ ಸರಿಯಾಗಿಲ್ಲ. ಹಿರಿಯಣ್ಣನ ಕಡೆಯವರು ಅತ್ಯಂತ ಸಾಹಸ ಮಾಡುತ್ತಿದ್ದಾರೆ. ಬಾದಷಹರ ಬಾಯಿಂದ ಹಿರಿಯಣ್ಣ ದಾರಾಸಿಗೆ ಪಟ್ಟ ಕಟ್ಟಬೇಕೆಂದು ಹೇಳಿಸಲು ಅಂತಃಪುರದಲ್ಲಿ ಅನೇಕರನ್ನು ಪುಸಲಾಯಿಸು

ತ್ತಿದ್ದಾರೆ. ಅವರ ಕಡೆಯವರು ಸಮಸ್ತ ಸನ್ನಾಹಗಳನ್ನೂ ಸಿದ್ಧಮಾಡಿ ಕೊಂಡಿದ್ದಾರೆ. ನಾನು ಸರ್ವಪ್ರಯತ್ನಗಳನ್ನು ಮಾಡಿ ನಮ್ಮ ಕಡೆಯವರನ್ನು ಜಮಾಯಿಸಿದ್ದೇನೆ. ಈ ಸಮಯಕ್ಕೆ ನೀನು ಡೆಲ್ಲಿಯಲ್ಲಿ ಇಲ್ಲದಿರುವುದು ನಮ್ಮ ದುರಾದೃಷ್ಟವೆಂದು ಭಾವಿಸುತ್ತೇನೆ. ನೀನು ತಕ್ಷಣ ಇಲ್ಲಿಗೆ ಹೊರಟು ಬರ ಬೇಕು. ನೀನು ಬರುವುದರೊಳಗೆ ಇಲ್ಲಿ ಏನಾದರೂ ವಿರೋಧವು ಎದ್ದರೆ ನಾನು ಪ್ರತ್ಯಕ್ಷವಾಗಿ ತಿರುಗಿಬಿದ್ದು ನನ್ನ ಸಾಹಸವೆಲ್ಲವನ್ನೂ ಮಾಡುತ್ತೇನೆ. ದುರದೃಷ್ಟವಶಾತ್ ಎಲ್ಲವೂ ವಿಫಲವಾದರೆ ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ. ನೀನು ಯಾವಾಗಲಾದರೂ ನಿನ್ನ ತಂಗಿಯನ್ನು ನೆನೆದು ಒಂದು ತೊಟ್ಟು ಕಣ್ಣೀರಿಟ್ಟರೆ ಅದೇ ನನ್ನ ಭಾಗ್ಯವೆಂದುಕೊಳ್ಳುತ್ತೇನೆ.

ಇತೀ—ನಿನ್ನ ಪ್ರಿಯತಂಗಿ
ರೋಷನಾರಾ"

ಈ ಪತ್ರವನ್ನು ಓದಿಕೊಂಡು ಔರಂಗಜೇಬನು ತಲೆಎತ್ತಿ ನೋಡಿದನು.

"ರಸೂಲ್, ಈ ಪತ್ರವನ್ನು ನಿನ್ನ ಕೈಗೆ ಯಾರು ಮುಟ್ಟಿಸಿದರು"ಎಂದು ಕೇಳಿದನು.

ರಸೂಲನು ತಲೆ ಬಾಗಿಸಿ "ಖುದ್ ಷಹಜಾದಾ ಸಾಹಿಬಾರವರು ಕೊಟ್ಟರು" ಎಂದು ಹೇಳಿದನು.

ಔರಂಗಸೇಬನು "ನನಗೆ ನಿನ್ನಲ್ಲಿ ಪೂರ್ಣ ನಂಬಿಕೆಯಿದೆ. ಈ ಪತ್ರದ ವಿಷಯ ಮತ್ತಾರಿಗೂ ತಿಳಿದಿಲ್ಲವೆಂದು ನಂಬುತ್ತೇನೆ" ಎಂದು ಹೇಳಿ, ರಸೂಲನು ಮುಖವನ್ನು ನೋಡಿದನು.

"ಹುಜೂರ್, ಮತ್ತಾರಿಗಾದರೂ ತಿಳಿದಿದ್ದರೆ ನಾನು ಇಲ್ಲಿಯವರೆಗೆ ಜೀವಂತನಾಗಿ ಬಂದು ಆ ಪತ್ರವನ್ನು ಒಪ್ಪಿಸಿ ಖಾವಂದರ ಸೇವೆ ಮಾಡುವುದ ಕ್ಕಾಗುತ್ತಿದ್ದಿತೇ ? ಷಹಜಾದಾರವರು ಆ ವಿಚಾರದಲ್ಲಿ ಎಲ್ಲ ಎಚ್ಚರಿಕೆಯನ್ನೂ ತೆಗೆದುಕೊಂಡಿದ್ದಾರೆ" ಎಂದು ಹೇಳಿ ಕೈಮುಗಿದನು.

ಔರಂಗಸೇಬನು ಅವನನ್ನು ಹೋಗಿ ಬಿಡಾರದಲ್ಲಿ ವಿಶ್ರಮಿಸಿಕೊಳ್ಳುವಂತೆ ಅಪ್ಪಣೆ ಮಾಡಿದನು.

ಸೇನಾಧಿಪತಿಗಳನ್ನು ಕರೆಸಿ, "ಡೆಲ್ಲಿಯಿಂದ ಪತ್ರ ಬಂದಿದೆ. ಬಾದಷಹ ರವರು ರೋಗಪೀಡಿತರಾಗಿದ್ದಾರೆ. ನನ್ನನ್ನು ತಕ್ಷಣ ಸನ್ನಿಧಾನಕ್ಕೆ ಬರ

ಬೇಕೆಂದು ಬರೆಸಿ ಕಳುಹಿಸಿದ್ದಾರೆ. ನಾನು ಇಂದೇ ಪ್ರಯಾಣ ಮಾಡುತ್ತೇನೆ. ನೀವು ಇನ್ನುಮುಂದೆ ಈ ಕೋಟೆಯ ಮೇಲೆ ಯುದ್ಧಮಾಡುವ ಅಗತ್ಯವಿಲ್ಲ. ಇನ್ನು ಹತ್ತು ದಿನಗಳುನಮ್ಮ ಸೈನ್ಯದಲ್ಲಾಗಲೀಬಿಜಾಪುರದ ಸೈನ್ಯದಲ್ಲಾಗಲಿ ಯುದ್ಧವು ನಿಂತಿದೆ ಎಂಬ ಸಮಾಚಾರವು ಪ್ರಕಾಶವಾಗದಂತೆ ಇಡಬೇಕು. ಆಮೇಲೆ ಹಿಂದಕ್ಕೆ ಸೈನ್ಯಗಳನ್ನು ಸಡಿಲಿಸಿ ಮೊಕ್ಕಾಂಗಳನ್ನುಮಾಡಿ ಅಹ್ಮದ್ ನಗರಕ್ಕೆ ಹೋಗಿ ತಲುಪತಕ್ಕದ್ದು. ಅಷ್ಟರಲ್ಲಿ ಎಲ್ಲ ವಿಷಯಗಳೂಲೋಕಕ್ಕೆಲ್ಲ ಪ್ರಕಾಶವಾಗುತ್ತವೆ." ಎಂದು ಹೇಳಿಕಳುಹಿಸಿದನು.

ದ್ವಾರಪಾಲಕರನ್ನು ಕರೆದು ಬಂಧನದಲ್ಲಿರುವ ಫಕೀರ—ಹಷೀಂಉಲೂಮಿ ಯನ್ನು ಕರೆತರಬೇಕೆಂದು ಅಪ್ಪಣೆಮಾಡಿದನು.

ಹಷೀಂ ಉಲೂಮಿಯು ಯುವರಾಜನ ಪಟಭವನಕ್ಕೆ ಬರುತ್ತಲೇ ಔರಂಗಸೇಬನು ಆಸನದಿಂದ ಎದ್ದು, ಅವನ ಕೈಕುಲುಕಿ ಆಲಿಂಗನವಿತ್ತು ತನ್ನ ಸಮೀಪದಲ್ಲಿ ಕುಳ್ಳಿರಿಸಿಕೊಂಡನು.

"ಫಕೀರಸಾಹೇಬರೇ, ನನ್ನ ಅಪರಾಧವನ್ನು ಮನ್ನಿಸುವಿರಾ ?" ಎಂದು ಕೇಳಿದನು.

ಫಕೀರನು ನಗುತ್ತಾ "ಯುವರಾಜ, ಅಪರಾಧವೆಂದರೇನು ? ತಪ್ಪು ನನ್ನದೇ ಇದೆ. ನಾನು ಆ ಹಂತಕ್ಕೆ ಇಳಿಯಬಾರದಾಗಿತ್ತು. ನಾನೇ ಅಷ್ಟು ಕೆಳಗಿನ ಹಂತಕ್ಕೆ ಇಳಿದ ಮೇಲೆ ದೇವರು ತಕ್ಷಣ ನನಗೆ ಎಚ್ಚರಿಸಲು ಶಿಕ್ಷೆಕೊಟ್ಟ. ಆದರಿಂದ ನನಗೆ ಪರಮಾನಂದವಾಗಿದೆ" ಎಂದು ಹೇಳಿದನು.

ಔರಂಗಸೇಬನು "ಹಾ ಹಾ, ನಿನ್ನ ತಪ್ಪೇನಿದೆ ?" ಎಂದು ಗಾಬರಿ ಯಿಂದ ಕೇಳಿದನು.

"ಯುದ್ಧವಾದರೇನು. ಯಾರು ಗೆದ್ದರೇನು, ಯಾರು ಸೋತರೇನು ? ನಾನು ಆಗ್ರಹದಿಂದ ಬಂದು ನಿನಗೇಕೆ ಹೇಳಬೇಕು. ನೀನು ಬಂದು ನನ್ನಲ್ಲಿ ದೇವರ ಆಜ್ಞೆಯೇನೆಂದು ಪ್ರಾರ್ಥಿಸಿಕೊಂಡೆಯಾ ? ನಾನಾಗಿ ಬಂದು ನಿನಗೆ ಹೇಳಿದ್ದು ತಪ್ಪು. ಬಾದಷಹನು ಕೈಗೆ ಕೊಟ್ಟ ಮುತ್ತಿನ ಹಾರವನ್ನು ತಂದು ಕಿತ್ತು ಬೀದಿಯಲ್ಲಿ ಚೆಲ್ಲಾಡಿ 'ಅದು ನನ್ನದು, ಇದು ನನ್ನದು' ಎಂದು ಜಗಳ ಮಾಡಿದಂತೆ ಆಯಿತು ನನ್ನ ಹಣೆಯ ಬರಹ. ದೇವರು ಕೊಟ್ಟ ಜ್ಞಾನವನ್ನು

ನಾನು ತಂದು ನಿನ್ನ ಮುಂದೆ ಅಹಂಕಾರದಿಂದ ಚೆಕ್ಕಿದೆ. ಅದು ನನ್ನ ತಪ್ಪಲ್ಲವೇ ಯುವರಾಜ ?"

ಯುವರಾಜನು ಭಕ್ತಿಭಾವದಿಂದ "ಫಕೀರನೇ, ನಿನ್ನ ಸರಿತಪ್ಪುಗಳನ್ನು ಅಳೆಯುವ ಶಕ್ತಿಯು ನನಗಿಲ್ಲ. ನಾನು ನಿನ್ನ ಸೇವಕನೆಂದು ಒಪ್ಪಿಕೊಳ್ಳುತ್ತೇನೆ. ನಿನ್ನ ಭವಿಷ್ಯವು ನಿಜವಾಯಿತು. ಹುಡುಗನಂತೆ ಚಪಲದಿಂದ ಕೇಳುತ್ತೇನೆ. ಕೋಪಿಸಿಕೊಳ್ಳಬೇಡ. ಒಂದೇ ಒಂದು ಮಾತು. ನೀನು ಬಲ್ಲೆ, ಹೇಳಿಬಿಡು. ನಾನು ನನ್ನ ಆಮರಣಾಂತ ಅದನ್ನು ನೆನಪಿನಲ್ಲಿಡುತ್ತೇನೆ" ಎಂದು ಬೇಡಿಕೊಂಡನು.

"ಯುವರಾಜ, ಒಂದೆರಡು ಮಾತುಗಳಿಂದ ಹೇಳುತ್ತೇನೆ. ಇನ್ನು ಮೇಲೆ ಮೇಲೆ ಪ್ರಶ್ನೆಗಳನ್ನು ಹಾಕಬೇಡ. ದೇವರ ಅಪ್ಪಣೆಯಿಲ್ಲ. ಕೇಳು. ಬಾದಷಹನು ಮರಣೋನ್ಮುಖನಾಗಿದ್ದಾನೆ. ಪಾಪದ ಹೊಗೆಯಿಂದ ಡೆಲ್ಲಿಯು ಕರಾಳ ರೂಪವನ್ನು ತಾಳುತ್ತದೆ. ನೀನು ಬಾದಷಹನಾಗುವಿ" ಎಂದು ಹೇಳಿ ಔರಂಗಸೇಬನ ತಲೆಯ ಮೇಲೆ ಎರಡು ಕೈಗಳನ್ನೂ ಇಟ್ಟು ಹರಿಸಿದನು.

ಔರಂಗಸೇಬನ ಕಣ್ಣುಗಳಿಂದ ಧಾರಾಕಾರವಾಗಿ ನೀರು ಸುರಿಯಿತು. ಅವನು ತನ್ನ ಶಿರಸನ್ನು ಉಲೂವಿಯ ಪಾದಗಳ ಮೇಲಿಟ್ಟು "ನೀನು ಜೋತಿಷ್ಯನಲ್ಲ, ಮಂತ್ರವಾದಿಯಲ್ಲ, ಫಕೀರನೂ ಅಲ್ಲ. ಸಾಕ್ಷಾತ್ ದೇವರು ನಿನ್ನ ರೂಪದಲ್ಲಿ ಬಂದು ದರ್ಶನ ಕೊಟ್ಟಿದ್ದಾನೆ. ನಾನು ಪಾಪಿ. ನನ್ನನ್ನು ಉದ್ರೇಕಗೊಳ್ಳುವಂತೆ ಮಾಡಿ ನನ್ನಿಂದ ಅಪಚಾರ ಮಾಡಿದ್ದೇನೆ. ಕರುಣಾಮಯನಾದ ಭಗವಂತನು ನಿನ್ನ ಕೈಗಳಿಂದ ಆಶೀರ್ವಾದ ಕೊಡಿಸಿದ್ದಾನೆ" ಎಂದು ಹೇಳಿ ಕೈಮುಗಿದನು.

ಉಲೂವಿಯು ಎದ್ದು ನಿಂತು "ಯುವರಾಜ, ನನಗೂ ನನ್ನ ಅನುಯಾಯಿಗಳಿಗೂ ಬಿಡುಗಡೆ ಕೊಟ್ಟಿದ್ದೀಯೆಂದು ನಂಬುತ್ತೇನೆ. ನಾನು ಹೋಗಲು ಅಪ್ಪಣೆ ನೀಡುವೆಯಷ್ಟೆ" ಎಂದನು.

"ಗುರುವೆ! ನಿನ್ನ ಅನುಯಾಯಿಗಳು ಈ ಪಟಭವನದ ಹೊರಗೆ ನಿನಗಾಗಿ ಕಾದಿದ್ದಾರೆ. ನೀನು ಇಷ್ಟ ಬಂದೆಡೆ ಹೋಗಬಹುದು. ನಿನ್ನ ಆಶೀರ್ವಾದವು ನನ್ನ ತಲೆಯ ಮೇಲಿದೆ. ನನಗೆ ಅತ್ಯಂತ ಕಷ್ಟ ಬಂದಾಗ,

ದುಃಖವು ಆವರಿಸಿಕೊಂಡಾಗ ನಿನ್ನ ಸ್ಮರಣೆ ಮಾಡುತ್ತೇನೆ. ದರ್ಶನ ಕೊಡು" ಎಂದು ಕೈ ಮುಗಿದನು.

ಉಲೂವಿಯು ನಗುತ್ತಾ "ಮುಂದೇನು ಯುವರಾಜನೇ ?" ಎಂದು ಕೇಳಿದನು.

"ನೀನು ಮಹಾಪುರುಷನೇ ಹೌದು. ಆದರೆ ಇನ್ನು ನನನ್ನು ವಂಚಿಸಲಾರೆ, ಮುಂದೇನೆಂಬುದು ನಿನ್ನ ಕಣ್ಣಿಗೆ ಕಟ್ಟಿದಂತಿದೆ. ನಾನು ಅದನು ಅರಿಯದೇ ತತ್ತರಿಸುತ್ತಾ ಹುಡುಕಿಕೊಂಡು ಹೋಗುತ್ತಿದ್ದೇನೆ."

ಉಲೂವಿಯು ಪಟಭವನದಿಂದ ಹೊರಗೆ ಬಂದು ಸಂಗಡಿಗರನ್ನು ಸೇರಿಕೊಂಡು ಬಿಜಾಪುರದ ಕೋಟೆಯೊಳಗೆ ಹೊರಟುಹೋದನು.

## ೮

ಔರಂಗಸೇಬನು ಡೆಲ್ಲಿಗೆ ಹೋಗಿ ತಂದೆಯ ದರ್ಶನ ಮಾಡಿದನು. ಷಹಜಹಾನನು ಅಂತ್ಯಾವಸ್ಥೆಯಲ್ಲಿರುವಂತೆ ತೋರಿತು. ಆದರೆ ಜ್ಞಾನವು ಚೆನ್ನಾಗಿದ್ದಿತು. ಔರಂಗಸೇಬನು ತಂದೆಯ ಕಾಲುಬಳಿ ಕುಳಿತು ಕಣ್ಣೀರು ಸುರಿಸಿದನು. ಪ್ರಾತಃಕಾಲ ಸಂಧ್ಯಾಕಾಲಗಳಲ್ಲಿ ಪ್ರಾರ್ಥನೆಗಳನ್ನು ಮಾಡಿ ದೇವರನ್ನು ಬೇಡಿಕೊಳ್ಳುತ್ತಿದ್ದನು. ಷಹಜಹಾನನಿಗೆ ಸಲ್ಪ ಗುಣಮುಖ ತೋರಿದಂತಾಯಿತು. ಷಹಜಹಾನನು ಮಕ್ಕಳೆಲ್ಲರನ್ನೂ ಸಮೀಪಕ್ಕೆ ಬರಮಾಡಿಕೊಂಡನು. ದಾರಾ, ಮುರಾದ್, ಷೂಜಾ, ಔರಂಗಸೇಬ್ ಎಲ್ಲರೂ ಬಂದು ಸೇರಿದರು. ಹೆಣ್ಣು ಮಕ್ಕಳಾದ ರೋಷನಾರಾ, ಜಹನಾರಾಗಳು ತಂದೆಯ ಸನ್ನಿಧಿಯಲ್ಲಿದ್ದರು. ದೊಡ್ಡ ಖಾಜಿಯವರು ಸಮೀಪದಲ್ಲಿದ್ದರು.

ಆ ಸಮಯದಲ್ಲಿ ಷಹಜಹಾನನು ಹಾಸಿಗೆಯ ಮೇಲೆಯೇ ಎದ್ದು ಕುಳಿತುದೇವರ ಪ್ರಾರ್ಥನೆ ಮಾಡಿದನು. ಅನಂತರ ಮಕ್ಕಳೆಲ್ಲರನ್ನೂ ಹತ್ತಿರಕ್ಕೆ ಕರೆದು ಅವರೆಲ್ಲರನ್ನೂ ಆಲಿಂಗಿಸಿ ತಲೆ ತಡವಿ ಆಶೀರ್ವದಿಸಿದನು.

"ನಾನು ಈ ರೋಗದಿಂದ ಪಾರಾಪಂತಿದೆ. ಆದರೂ ಇನ್ನು ನನಗೆ ಉಳಿದಿರುವ ಆಯುಶ್ಯೇಷವು ಸ್ವಲ್ಪವೇ ಎಂದು ನಾನು ನಂಬಿದ್ದೇನೆ. ಈ ಡೆಲ್ಲಿಯ ದರಬಾರಿನ ರಾಜಕೀಯಗಳು ನನಗೆ ಬೇಸರಿಕೆಯನ್ನುಂಟು ಮಾಡಿವೆ ನನ್ನ ಮಕ್ಕಳಾದ ನೀವುಗಳು ಸಮರ್ಥರೂ ವಿದ್ಯಾವಂತರೂ ಆಗಿದ್ದೀರಿ. ಪರಾಕ್ರಮಶಾಲಿಗಳೂ ಹೌದು. ನಿಮ್ಮಂಥಾ ಮಕ್ಕಳನ್ನು ಪಡೆದಿರುವುದು ನನ್ನ ಭಾಗ್ಯವೆಂದು ಸಂತೋಷವಾಗಿದೆ. ಎಲ್ಲವೂ ಚೆನ್ನಾಗಿದ್ದರೂ ನನ್ನ ಮನಸ್ಸಿಗೆ ಇನ್ನೂ ಶಾಂತಿ ಬಂದಿಲ್ಲ. ನೀವೆಲ್ಲರೂ ಪರಸ್ಪರ ಸೌಹಾರ್ದದಿಂದ ಇಲ್ಲ ಇದಕ್ಕೆ ಸ್ವಕಾರ್ಯ ಸಾಧಕರಾದ ನಿಮ್ಮ ನಿಮ್ಮ ಗೆಳೆಯರುಗಳೇ ಕಾರಣ. ಮೊಗಲ್ ಸಾಮ್ರಾಜವು ಬಹು ವಿಸ್ತಾರವಾಗಿದೆ. ಈ ಪ್ರಪಂಚದಲ್ಲಿ ಯಾವ ರಾಜ್ಯದಲ್ಲಿಯೂ ಇಲ್ಲದಷ್ಟು ಐಶ್ವರ್ಯವು ನಮ್ಮಲ್ಲಿದೆ. ನಿಮ್ಮಲ್ಲಿ ಯಾವನೊಬ್ಬನೇ ಆದರೂ ಈ ಸಾಮ್ರಾಜ್ಯವನ್ನು ಆಳಲು ಸಾಧ್ಯವಾಗುವುದಿಲ್ಲ. ನೀವೆಲ್ಲರೂ ಒಗ್ಗಟ್ಟಿನಿಂದ ಸೇರಿಕೊಂಡರೆ ಸಾಮ್ರಾಜ್ಯವು ಶಾಶ್ವತನಾಗಿ ಉಳಿಯುತ್ತದೆ. ನೀವು ನಾಲ್ವರೂ ಅಭಯ ಕೊಟ್ಟರೆ ನಾನು ಸುಖವಾಗಿ ಆಗ್ರದಲ್ಲಿದ್ದು ಕಡೆಗಾಲವನ್ನು ಆನಂದದಿಂದ ಕಳೆಯುತ್ತೇನೆ.

ಮೊದಲು ಔರಂಗಸೇಬನೆದ್ದು ತಂದೆಯ ಕಾಲಿಗೆ ಬಿದ್ದು "ಅಲ್ಲಾನ ಮೇಲೆ ಆಣೆಯಿದೆ. ನಾನು ಈ ರಾಜಕೀಯದ ಗೊಡವೆಗೇ ಹೋಗುವುದಿಲ್ಲ. ತಂದೆಯವರು ಜೀವಂತವಾಗಿರುವವರೆಗೆ ಅವರ ಸೇವೆ ಮಾಡುತ್ತೇನೆ. ಆಮೇಲೆ ಮೆಕ್ಕಾ ಯಾತ್ರೆಗೆ ಹೊರಟುಹೋಗುತ್ತೇನೆ" ಎಂದು ಹೇಳಿದನು.

ಬಾಜಿಯವರಿಗೆ ಬಹಳ ಸಮಾಧಾನವಾಯಿತು. ಅವರು ಆಶೀರ್ವದಿಸಿದರು.

ಷಹಜಹಾನನೂ ಕಣ್ಣುಗಳಲ್ಲಿ ಆನಂದಾಶ್ರುಗಳನ್ನು ಸುರಿಸುತ್ತಾ ಔರಂಗಸೇಬನನ್ನು ಆಲಂಗಿಸಿ ಆಶೀರ್ವದಿಸಿದನು.

ಉಳಿದ ಸೋದರರೂ ಹರ್ಷಚಿತ್ತರಾದರು. ಅವರಿಗೆ ಇದ್ದುದು ಔರಂಗಸೇಬನ ಭಯ. ರಾಜಕಾರ್ಯಗಳನ್ನು ಮೂವರು ಸೋದರರೂ ನೋಡಿಕೊಳ್ಳುವುದೆಂದು ಗೊತ್ತಾಯಿತು.

ಷಹಜಹಾನನು ಆಗ್ರಾಕ್ಕೆ ಪ್ರಯಾಣ ಬೆಳೆಸಿದನು. ಆಗ್ರಾ ಅರಮನೆಯೂ ಅವನಿಗೆಷ್ಟೋ ಸವಿನೆನಪುಗಳನ್ನು ಕೊಡುತ್ತಿದ್ದಿತು. ಮುಮ್ತಾಜಳಿಗಾಗಿ ಅವನು ಆಗ್ರಾ ಅರಮನೆಯನ್ನು ಸ್ವರ್ಗಸದೃಶವಾಗಿ ಮಾಡಿದ್ದನು. ಮುಮ್ತಾಜಳು ನಗುನಗುತ್ತಲೇ ಷಹಜಹಾನನ ಅಂಕದಲ್ಲಿ ತಲೆಯಿಟ್ಟು ಮಲಗಿ ಪರಲೋಕವನ್ನೈದಿದ್ದಳು. ಮುಮ್ತಾಜಳ ಮೇಲಿನ ಪ್ರೇಮದ ಗೋಪುರದಂತೆ ಅವಳ ಸಮಾಧಿಯ ಮೇಲೆ ತಾಜ್‌ಮಹಲನ್ನು ನಿರ್ಮಾಣ ಮಾಡಿಸಿದ್ದನು. ಅವನು ಯಾವಾಗಲೂ ತಾಜ್‌ಮಹಲನ್ನು ನೋಡಿ ಸುಪ್ರೀತನಾಗುತ್ತಿದ್ದನು.

ಆಗ್ರಾನಿವಾಸವು ಷಹಜಹಾನನಿಗೆ ಅತ್ಯಂತ ಸುಖಪ್ರದವಾಗಿದ್ದಿತು. ಮಗಳು ರೋಷನಾಳು ಅತ್ಯಂತ ಬುದ್ಧಿಮತಿ. ಅವಳು ತಂದೆಯ ಸಮೀಪದಲ್ಲಿಯೇ ಇದ್ದು ಕಾವ್ಯಗಳನ್ನು ಓದುತ್ತಾ ಕಥೆಗಳನ್ನು ಹೇಳುತ್ತಾ ತಂದೆಯನ್ನು ನೆರಳಿನಂತೆ ಅನುವರ್ತಿಸುತ್ತಿದ್ದಳು.

ಔರಂಗಜೇಬನು ತನ್ನ ವಿರಕ್ತ ಭಾವವನ್ನು ದಿನ ದಿನಕ್ಕೆ ಅತಿಶಯವಾಗಿ ಪ್ರದರ್ಶನ ಮಾಡುತ್ತಾ ತಂದೆಯ ಪೂರ್ಣಾಭಿಮಾನಕ್ಕೆ ಕಾತುರನಾಗಿದ್ದನು.

ಡೆಲ್ಲಿಯಲ್ಲಿ ದಾರನು ಮಂತ್ರಿಗಳ ಸಹಾಯದಿಂದ ದರ್ಬಾರಿನ ಕಾರ್ಯಗಳನ್ನು ನಡೆಸುತ್ತಿದ್ದನು. ಅವನೇ ಬಾದಷಹನ ದೊಡ್ಡಮಗ. ಮುಂದೆ ಸಾಮ್ರಾಟ್ ಸಿಂಹಾಸನವನ್ನೇರುವ ಮಹಾಪುರುಷ. ಅವನು ಅತ್ಯಂತ ವಿದ್ಯಾವಂತ, ಬುದ್ಧಿವಂತ.

ಜಹನಾರಳು ಯಾವಾಗಲೂ ಅಣ್ಣನ ಪ್ರೇಮವನ್ನು ಸೂರೆಗೊಳ್ಳುತ್ತಿದ್ದ ಸಹೋದರಿ. ಜಹನಾರಳು ರೂಪಲಾವಣ್ಯಗಳಲ್ಲಿ ಡೆಲ್ಲಿಯಲೆಲ್ಲಾ ಹೆಸರುವಾಸಿಯಾಗಿದ್ದ ಹೆಣ್ಣು. ಕಾವ್ಯ ಕವನ ಸಂಗೀತಗಳಲ್ಲಿ ಹಾಗೆಯೇ ಎತ್ತಿದ ಕೈ. ಆ ಅಣ್ಣ ತಂಗಿಯರ ಪ್ರೇಮವು ಪವಿತ್ರ ಪ್ರೇಮ. ಹಾಲು ಸಕ್ಕರೆಗಳಂತೆ ಬೆರೆತ ಸ್ನೇಹ.

ಆದರೆ ದಾರನು ಯಾವಾಗಲೂ ಸುಖಭಿಲಾಷಿ. ಪಾನಾಸಕ್ತ. ಅವನು ರಾಜಕಾರ್ಯಗಳ ಕಡೆಗೆ ಗಮನ ಕೊಡುತ್ತಲೇ ಇರಲಿಲ್ಲ. ಅಸಡ್ಡೆ ಮಾಡುತ್ತಿದ್ದನು. ಅಷ್ಟೇ ಅಲ್ಲ. ಮುಸಲ್ಮಾನ್ ಧರ್ಮದ ಆಚಾರ ವ್ಯವಹಾರಗಳಲ್ಲಿ ಅವನಿಗೆ ವಿಶೇಷ ಶ್ರದ್ಧೆಯಿರಲಿಲ್ಲ.

ಮುರಾದನೂ ಗಟ್ಟಿಗ. ಆದರೆ ಸ್ತ್ರೀಲೋಲ. ರಾಜಕಾರ್ಯಗಳು ಸಡಿಲವಾಗುತ್ತಿವೆಯೆಂದು ಮಂತ್ರಿಗಳೂ ಮತ್ತಿತರ ದರ್ಬಾರಿಗಳೂ ಆಗಾಗ

ಆಗ್ರಕ್ಕೆ ಬಂದು ದೂರು ಹೇಳುತ್ತಿದ್ದರು ದೊಡ್ಡ ಖಾಜಿಯವರೂ ದರ್ಬಾರಿನ ವಿಷಯದಲ್ಲಿ ಅಪ್ರಸನ್ನರಾದರು. ಅವರು ಆಗ್ರಾಕ್ಕೆ ಬಂದು ಬಾದಷಹನೊಂದಿಗೆ ಹೇಳಿದರು.

"ಮಹಾಪ್ರಭುವೇ ! ದ ರ್ಬಾ ರಿ ನ ವಿದ್ಯಾಮಾನಗಳು ಅಷ್ಟೇನೂ ಚೆನ್ನಾಗಿಲ್ಲ. ನಿನ್ನ ಮಕ್ಕಳ ದೋಷವೇನೂ ಅಷ್ಟಾಗಿ ಕಾಣುವುದಿಲ್ಲ. ದರ್ಬಾರಿನ ಉನ್ನತಾಧಿಕಾರಿಗಳು ಸ್ವಾರ್ಥಪರರಾಗಿ ದರ್ಬಾರಿಗೆ ಕಳಂಕ ತರುತ್ತಿದ್ದಾರೆ. ಯುವರಾಜ ದಾರನು ಸುಖಲೋಲುಪನಾಗಿ ರಾಜಕಾರ್ಯ ಗಳನ್ನು ಅಸಿಡ್ಡೆ ಮಾಡುತ್ತಾನೆ. ಅವನು ಗುಣಾಢ್ಯ. ಸರಳ ಸ್ವಭಾವದವನು. ದರ್ಬಾರಿನವರೆಲ್ಲರೂ ಅವನನ್ನು ಪ್ರೀತಿಸುತ್ತಾರೆ. ಎಲ್ಲಕ್ಕಿಂತಲೂ ಅತಿ ಶಯವಾಗಿ ಡೆಲ್ಲಿಯಲ್ಲಿ ಕತ್ತಲೆ ಕವಿದಂತಾಗಿದೆ. ಮುಸಲ್ಮಾನ್ ಧರ್ಮವು ಮೋಡಗಳಲ್ಲಿ ಮುಚ್ಚುತ್ತಿರುವಂತಿದೆ. ಮೊಗಲ್ ಸಾಮ್ರಾಜ್ಯವು ಸ್ಥಾಪಿತ ವಾದದ್ದು ಮುಸಲ್ಮಾನ್ ಧರ್ಮಕ್ಕಾಗಿ. ಧರ್ಮವು ಬೆಳೆದರೆ ಸಾಮ್ರಾಜ್ಯವು ಬೆಳೆಯುತ್ತದೆ. ಧರ್ಮವು ನಶಿಸಿಹೋದರೆ ಸಾಮ್ರಾಜ್ಯವು ನಶಿಸಿಹೋಗು ತ್ತದೆ. ಇದು ದೇವರ ಆಜ್ಞೆ. ನಾವೆಲ್ಲರೂ ಆ ದಾರಿತಪ್ಪಿ ಹೋಗಿದ್ದೇವೆಂದು ನನ್ನ ಭಾವನೆ. ಬಾದಷಹನಾದ ನಿನ್ನಲ್ಲಿ ಹೇಳಿ ಸಮಾಧಾನ ಮಾಡಿ ಕೊಳ್ಳೋಣವೆಂದು ನಾನು ಬಂದಿದ್ದೇನೆ" ಎಂದು ಹೇಳಿದನು.

ಷಹಜಹಾನನು "ನೀವು ದೊಡ್ಡವರು. ದೇವರ ಕೃಪೆಗೆ ಪಾತ್ರರಾದ ವರು. ನಿಮ್ಮ ಮಾತು ಸತ್ಯ. ಇದಕ್ಕೇನು ಮಾಡಬೇಕೆನ್ನುತ್ತೀರಿ ? ಅದನ್ನು ಹೇಳಿರಿ" ಎಂದು ಕೇಳಿದನು.

ಖಾಜೀಸಾಹೇಬನು "ನೀವು ರಾಜಧಾನಿಗೆ ಬಂದುಬಿಟ್ಟರೆ ಎಲ್ಲವೂ ಸರಿ ಹೋಗುತ್ತದೆಂದು ನನ್ನ ಭಾವನೆ" ಎಂದು ಹೇಳಿದನು.

ಷಹಜಹಾನನೂ ಖಾಜೀ ಸಾಹೇಬರೇ ! ನಾನು ಇಲ್ಲಿ ಸುಖ ವಾಗಿದ್ದೇನೆ. ಶಾಂತವಾಗಿದ್ದೇನೆ. ಆ ಡೆಲ್ಲಿಯ ದರಬಾರಿನ ಗೊಂದಲದಲ್ಲಿ ನನ್ನನ್ನು ಸಿಕ್ಕಿಸಬೇಡಿರಿ. ಕೃಪೆ ಮಾಡಿರಿ" ಎಂದು ಪ್ರಾರ್ಥನೆ ಮಾಡಿದನು.

ಷಹಜಹಾನನೂ ಖಾಜೀ ಸಾಹೇಬನೂ ಯೋಚನೆ ಮಾಡಿದರು. ಔರಂಗಸೇಬನ ವಿರಕ್ತಭಾವವು ಅವರ ಮನಸ್ಸಿಗೆ ಬಹಳ ಮೆಚ್ಚಿಗೆ ಯಾಗಿದ್ದಿತು.

ಷಹಜಹಾನನು ಔರಂಗಸೇಬನನ್ನು ಕುರಿತು "ಔರಂಗಸೇಬ್, ನೀನು ಸಮರ್ಥ. ಡೆಲ್ಲಿಗೆ ಹೋಗಿ ಇದನ್ನೆಲ್ಲಾ ಸರಿಪಡಿಸಿ ಬಾ" ಎಂದು ಹೇಳಿದನು.

"ಜಹಪನಾ, ತಾವು ಬಾದಷಹರಾಗಿದ್ದೀರಿ. ಡೆಲ್ಲಿಯಲ್ಲಿರಲಿ, ಆಗ್ರಾದಲ್ಲಿರಲಿ, ಬಾದಷಾಹಿಯು ತಮ್ಮದು. ಈಗ ಮೊಗಲ್ ಸಾಮ್ರಾಜ್ಯದಲ್ಲಿ ಎಲ್ಲಿಯೂ ಅಷ್ಟು ಶತ್ರುಗಳ ಕಾಟವಿಲ್ಲ. ಡೆಲ್ಲಿಯಲ್ಲಿ ನಮ್ಮ ಅಣ್ಣ ತಮ್ಮಂದಿರು ನೋಡಿಕೊಳ್ಳುತ್ತಿದ್ದಾರೆ. ದೊಡ್ಡ ದರ್ಬಾರು, ರಾಜಕಾರ್ಯಗಳು ತನ್ನಷ್ಟಕ್ಕೆ ತಾನೇ ನಡೆದುಕೊಂಡು ಹೋಗುತ್ತವೆ. ಇಂದು ಮಸಕಾಗಿದ್ದರೆ, ನಾಳೆ ಬೆಳಕಾಗುತ್ತದೆ. ತಾವೇಕೆ ತಲೆ ಕೆಡಿಸಿಕೊಳ್ಳಬೇಕು! ಡೆಲ್ಲಿಯಿಂದ ಇಲ್ಲಿಗೆ ಬಂದು ಯಾರೂ ದೂರು ಹೇಳದಂತೆ ಕಟ್ಟಪ್ಪಣೆ ಮಾಡಿಬಿಡೋಣ. ಅವರೆಲ್ಲಾ ಏಕೆ ಇಲ್ಲಿಗೆ ಬರುತ್ತಾರೆ? ಅವರವರ ಸ್ವಾರ್ಥಕ್ಕಾಗಿ ಬರುತ್ತಾರೆ. ಸಾಮ್ರಾಜ್ಯದ ಹಿತರಕ್ಷಣೆಗಾಗಿ ಯಾರೂ ತಮ್ಮ ಸನ್ನಿಧಾನಕ್ಕೆ ಬರುತ್ತಿಲ್ಲ. ನಾನು ಡೆಲ್ಲಿಗೆ ಹೋದರೆ ಪರಿಸ್ಥಿತಿಯು ವಿಷಮಿಸುತ್ತದೆ. ತಪ್ಪಿತಸ್ಥರನ್ನು ಹೊಡೆದೋಡಿಸಬೇಕಾಗುತ್ತದೆ. ಪುನಃ ನಮ್ಮ ಅಣ್ಣ ತಮ್ಮಂದಿರಲ್ಲಿ ಕಲಬಿಲಿ ಹುಟ್ಟುತ್ತದೆ. ಎಲ್ಲ ದೋಷಗಳೂ ನನ್ನ ತಲೆಯ ಮೇಲೆ ಬಂದು ಬೀಳುತ್ತವೆ. ಇದೆಲ್ಲಾ ನನಗೇಕೆ ಹವ್ಯಾಸ? ತಮ್ಮ ಪಾದಸೇವೆಯೇ ಸಾಕು ಎಂದು ಹೇಳಿದನು.

ಬಾದಷಹನು ಬಲಾತ್ಕರಿಸಿ ಔರಂಗಸೇಬನನ್ನು ಡೆಲ್ಲಿಗೆ ಕಳುಹಿಸಿದನು.

ರೋಷನಾರಳೇ ಬಾದಷಹನನ್ನು ನೋಡಿಕೊಳ್ಳುವ ಯಜಮಾನಿಯಾದಳು.

ಔರಂಗಸೇಬನು ವಿರಕ್ತನ ಸೋಗಿನಿಂದ ಡೆಲ್ಲಿಗೆ ಹೋದನು. ಮುರಾದನೊಡನೆ ಅಂತರಂಗವಾಗಿ ಮಾತನಾಡಿದನು. ದಾರನ ಮೇಲೆ ಅವನಿಗೂ ದ್ವೇಷವಿತ್ತು. ಅವನೂ, ಔರಂಗಸೇಬನ ಗೂಢತಂತ್ರಕ್ಕೆ ಒಳಗಾದನು. ಔರಂಗಸೇಬನ ಈ ತಂತ್ರವು ವಿಶಾಲವಾದ ಕಥೆ. ಘೋರಪಾತಕಗಳ ನರಕದ ಕಥೆ. ಮುರಾದನನ್ನು ತಂತ್ರದಿಂದ ಬಂಧಿಸಿದನು. ದಾರನನ್ನು ಕೊಲೆ ಮಾಡಿಸಿದನು. ಷೂಜನು ಓಡಿಹೋದನು. ದರಬಾರಿನಲ್ಲಿ ಬಹುಮಂದಿ ಔರಂಗಸೇಬನ ಕಡೆಯಾಗಿದ್ದರು. ಕೆಲವರು ಮೋಸ ಹೋದವರು. ಮತೆ

ಕೆಲವರು ಔರಂಗಸೇಬನ ಕ್ರೂರಕರ್ಮಗಳಲ್ಲಿ ಸಂತೋಷದಿಂದ ಭಾಗಿಗಳಾದ ವರು. ಔರಂಗಸೇಬನು ನಿಷ್ಕಂಟಕನಾಗಿ ಸಿಂಹಾಸನವನ್ನೇರಿದನು. ತಂದೆ ಷಹ ಜಹಾನನನ್ನು ಬಂಧನದಲ್ಲಿ ಇಡಿಸಿದನು.

ಬಿಜಾಪುರಕ್ಕೆ ಔರಂಗಸೇಬನು ಬಾದಷಹನಾದನೆಂಬ ಸುದ್ದಿಯು ಬಂದಿತು. ಸುಲ್ತಾನನು ಅತ್ಯಂತ ಭಯಗ್ರಸ್ತನಾದನು.

ಹಷೀಂ ಉಲೂವಿಯು "ಹೆದರಬೇಡ. ನೀನು ಜೀವಂತನಾಗಿರುವ ವರೆಗೆ, ನಾನು ಇಲ್ಲಿರುವವರೆಗೆ ಬಾದಷಹನು ಇತ್ತ ಬರಲು ಧೈರ್ಯ ಮಾಡು ವುದಿಲ್ಲ" ಎಂದು ಭರವಸೆಯಿತ್ತು. ಸುಲ್ತಾನನನ್ನು ಸಮಾಧಾನಗೊಳಿಸಿದನು.

ಶಿವಾಜಿಯು ಔರಂಗಸೇಬನ ಅಧಿಕಾರವನ್ನೂ ಕೇಳಿ ಚಲಿಸಲಿಲ್ಲ. ಅವ ನಿಗೆ ಔರಂಗಸೇಬನಾದರೂ ಒಂದೇ. ಷಹಜಹಾನಾದರೂ ಒಂದೇ. ಒಂದು ಕಡೆ ಮೊಗಲರ ರಾಜ್ಯ ಮತ್ತೊಂಡೆಡೆ ಬಿಜಾಪುರದ ರಾಜ್ಯ. ಈ ಮಧ್ಯ ದಲ್ಲಿ ಹಿಂದೂ ರಾಜ್ಯ ನಿರ್ಮಾಣ ಮಾಡಬೇಕು. ಶಿವಾಜಿಯು ಸ್ವಜನರ ಮೇಲೆಯೇ ಅವಲಂಬಿಸಿದ್ದನು.

ಮಹಾರಾಷ್ಟ್ರವು ಎಚ್ಚರಿತ್ತಿತ್ತು. ಮಹಾರಾಷ್ಟ್ರದಲ್ಲಿ ಹಿಂದೂಧರ್ಮದ ಭಾವನೆಯು ಉಜ್ವಲಿಸುತ್ತಿತ್ತು. ಆ ಸಮಯದಲ್ಲಿ ಮಹಾರಾಷ್ಟ್ರದಲ್ಲಿ ಅನೇಕ ಭಕ್ತಾಗ್ರೇಸರರು ಜನ್ಮವೆತ್ತಿದ್ದರು. ತುಕಾರಾಂ ಮಹಾರಾಷ್ಟ್ರರ ಜನ ಜೀವನವನ್ನೇ ಒಂದು ಹೊಸದಾರಿಯಲ್ಲಿ ಉದಾರಪಂಥದಲ್ಲಿ ಸೆಳೆದಿದ್ದನು. ತುಕಾರಾಂನು ಪಂಡರಾಪುರದಲ್ಲಿ ಇರುತ್ತಿದ್ದನು. ಆದರೆ ಮಹಾರಾಷ್ಟ್ರದಲ್ಲಿ ಎಲ್ಲೆಲ್ಲಿಯೂ ಜನಗಳಿಗೆ ಅವನ ದರ್ಶನವಾಗುತ್ತಿದ್ದಿತು. ಜನಜಳಿಂಗುಳಿಯಲ್ಲಿ ಅವನ ಕವನಗಳನ್ನು ಎಲ್ಲರೂ ಹಾಡುತ್ತಿದ್ದರು. ಆ ಕವಿತೆಯನ್ನು ಕೇಳಿ ಶಿವಾಜಿಯು ಅತ್ಯಂತ ಪ್ರಭಾವಿತನಾದನು.

ತನ್ನ ಸಂಗಡಿಗರೊಡನೆ ಒಂದು ದಿನ ಮನಬಿಚ್ಚಿ ಹೇಳಿದನು.

"ನಾವು ನಮ್ಮ ಐಶ್ವರ್ಯಗಳಿಗಾಗಿ ಸುಖಭೋಗಗಳಿಗಾಗಿ ಈ ರಾಜ್ಯ ವನ್ನು ಕಟ್ಟುತ್ತಿಲ್ಲ. ಹಿಂಧೂಧರ್ಮದ ಉದ್ಧಾರಕ್ಕಾಗಿ ನಾವು ಸಾಹಸ ಮಾಡುತ್ತಿದ್ದೇವೆ. ಹಿಂಧೂ ಧರ್ಮವು ಬೆಳಗಬೇಕಾದರೆ ನಮಗೊಬ್ಬ ಗುರು ವಿರಬೇಕು. ಇಲ್ಲದಿದ್ದರೆ ಅದು ಬೆಳೆಯುವುದಿಲ್ಲ."

ಸಂಗಡಿಗರು "ಶಿವಪ್ರಭು, ನೀನೇ ನಮ್ಮ ಗುರು. ಗುರುವೆಂದರೆ ಕಾಷಾಯ ವಸನಗಳನ್ನು ಧರಿಸಿದ ಗುರುವೇ ಇರಬೇಕೊ ? ನಾವು ಧರ್ಮಾಧರ್ಮಗಳಲ್ಲಿ ಚಾಚೂ ತಪ್ಪಿ ನಡೆಯುತ್ತಿಲ್ಲ. ಮರಾಠಾ ಸೈನಿಕರು ಒಬ್ಬ ಸತ್ಪುರುಷನ ಧನವನ್ನು ಅಪಹರಿಸಿದ ಉದಾಹರಣೆಯು ಒಂದಾದರೂ ಇಲ್ಲ. ಪರಸ್ತ್ರೀಯರ ಮೇಲೆ ಕಣ್ಣುಹಾಕಿ ಕೆಡಿಸಿದ ನಿದರ್ಶನವು ಸ್ವಪ್ನದಲ್ಲಿಯೂ ಇಲ್ಲ. ನಮಗೆ ಬೇರೊಬ್ಬ ಗುರುವೇಕೆ ? ಪ್ರಭು, ನಿನಗೇಕೆ ಸಂಶಯ ? ನೀನೇ ಗುರು" ಎಂದು ಹೇಳಿದರು.

ಶಿವಾಜಿಯು ಮೌನವನ್ನು ಧಾರಣೆ ಮಾಡಿದನು. ಅಲ್ಲಲ್ಲಿ ತುಕಾರಾಂನ ವಚನಗಳನ್ನು ಕೇಳುತ್ತಿದ್ದನು. ತುಕಾರಾಮನಿಗೆ ಶಿವಾಜಿಯು ಒಂದು ಪತ್ರವನ್ನು ಬರೆದು ಕಳುಹಿಸಿದನು.

"ಸಂತ ಮಹಾರಾಜ ತುಕಾರಾಂಜೀ,

ನಾನೊಬ್ಬ ಗುಡ್ಡಗಾಡಿನ ಮರಾಠಾ ಸೈನಿಕ. ನನ್ನನ್ನು ಶಿವಾ ಎಂದು ಕರೆಯುತ್ತಾರೆ. ನಾವು ಸಾವಿರಾರು ಜನ ಮರಾಠಾ ತರುಣರು ಸೇರಿ ಒಂದು ರಾಜ್ಯವನ್ನು ಕಟ್ಟುವ ಸಂಕಲ್ಪ ಮಾಡಿದ್ದೇವೆ. ಹಿಂದೂ ಧರ್ಮದ ರಕ್ಷಣೆಗಾಗಿ, ಉದ್ಧಾರಕ್ಕಾಗಿ ನಾವು ಪ್ರಯತ್ನಿಸಿದ್ದೇವೆ. ಗಡಿನಾಡಿನ ಕೋಟೆಗಳೆಲ್ಲವೂ ನಮ್ಮ ವಶವಾಗಿದೆ. ನಮ್ಮ ಸಂಕಲ್ಪಕ್ಕೆ ತಕ್ಕಂತೆ ಇದುವರೆಗೆ ನಮಗೆ ಎಲ್ಲಿಯೂ ಸೋಲಾಗಿಲ್ಲ. ಇದೆಲ್ಲಾ ನಮ್ಮ ಪರಾಕ್ರಮವೆಂದು ನಮ್ಮಲ್ಲಿಯೇ ಕೆಲವರ ಹೆಮ್ಮೆ ಇದೆ. ನಾನು ನಮ್ಮ ರಾಜ್ಯದಲ್ಲಿರುವ ಸತ್ಪುರುಷರುಗಳ ತಪಃ ಪ್ರಭಾವದ ಮಹಿಮೆಯೆಂದು ನಂಬಿದ್ದೇನೆ. ಮಾತೆಯರ ಪತಿವ್ರತಾ ಧರ್ಮದ ಮಹಿಮೆಯೆಂದು ನಂಬಿದ್ದೇನೆ. ಆ ಮಾತೆಯ ಗರ್ಭದಲ್ಲಿ ಜನಿಸಿದ ಶುದ್ಧ ಸಂತಾನರು ಎಚ್ಚತ್ತು ಧರ್ಮೋದ್ಧಾರಕ್ಕಾಗಿ ಟೊಂಕಕಟ್ಟಿ ನಿಂತಿದ್ದಾರೆ. ಇವರಿಗೆ ಮಾರ್ಗದರ್ಶಕನಾದ ಗುರು ಬೇಕು. ಮಹಾತಪಸ್ಸಿನಿಂದ ಭಗವಂತನ ದಿವ್ಯರೂಪವನ್ನು ಸಂದರ್ಶನಮಾಡಿದ ಗುರುವು ಬೇಕು. ಅವನ ಆಶೀರ್ವಾದವು ಬೇಕು. ಭಗವಂತನ ಪ್ರೇರಣೆಯು ನನ್ನನ್ನು ತಮ್ಮ ಕಡೆಗೆ ಆಕರ್ಷಿಸಿದೆ. ತಮ್ಮಂಥಾ ಸತ್ಪುರುಷರು ಭಗವದ್ಭಕ್ತರು ಇಂದು ಈ ಜಗತ್ತಿನಲ್ಲಿ ಮತ್ತಾರೂ ಕಂಡುಬರುತ್ತಿಲ್ಲ. ತಾವು ದಯಮಾಡಿ ನಮ್ಮ ರಾಜಧಾನಿಯಾದ ಪುರಂಧರ ಗಢಕ್ಕೆ ದರ್ಶನವೀಯಬೇಕು. ಇಲ್ಲಿ ನಮ್ಮ ಸರ್ವಸ್ವವನ್ನೂ ತಮ್ಮ ಪಾದ

ಗಳಲ್ಲಿ ಸಮರ್ಪಿಸಿ ನಾವು ಸೇವೆಗೆ ಸಿದ್ಧರಾಗಿದ್ದೇವೆ. ಇಲ್ಲಿರುವ ಐಶ್ವರ್ಯ ಅರಮನೆಗಳು ಎಲ್ಲವೂ ತಮಗೆ ಸಮರ್ಪಿತವಾಗಿವೆ" ಎಂದು ಪತ್ರ ಬರೆದು ಕಳುಹಿಸಿದನು.

ತುಕಾರಾಂನು ಆ ಪತ್ರವನ್ನು ತಂದುಕೊಟ್ಟ ತರುಣ ಸರದಾರರ ಮುಖಗಳನ್ನು ದಿಟ್ಟಿಸಿ ನೋಡಿದನು.

ನಕ್ಕು "ನನಗೆ ಗೊತ್ತಾಗಿದೆ. ಈ ಪತ್ರದಿಂದ ನನ್ನನ್ನು ಸೆಳೆದೊಯ್ಯಲು ಬಂದಿರುವ ರಾಜದೂತರು ನೀವು" ಎಂದು ಹೇಳಿ ಪತ್ರ ಓದಿಕೊಂಡನು.

ಅದಕ್ಕೆ ಉತ್ತರ ಬರೆದು ಕಳುಹಿಸಿದನು.

"ಶಿವಾಜಿ, ನಿನ್ನ ಪತ್ರವು ಸಂತಸವನ್ನುಂಟುಮಾಡಿತು. ನಿಮ್ಮ ಧರ್ಮಶ್ರದ್ಧೆಯು ನನ್ನ ಮನಸ್ಸಿಗೆ ಹರ್ಷವನ್ನುಟುಮಾಡುತ್ತದೆ. ಪಂಡರಿನಾಥನ ಅನುಗ್ರಹವು ನಿಮಗಿದೆ. ಸಂಸಾರವನ್ನು ಸಂತೋಷದಿಂದ ತ್ಯಾಗಮಾಡಿ ಬಂದಿರುವ ನನ್ನನ್ನು ಪುನಃ ನೀನು ಸಂಸಾರಿಯಾಗಿ ಮಾಡಲು ಪ್ರಯತ್ನ ಮಾಡಿದ್ದೀಯೆ. ರಾಜ್ಯ, ಐಶ್ವರ್ಯ, ಮೃಷ್ಟಾನ್ನಭೋಜನ, ಹಂಸತೂಲಿಕಾತಲ್ಪ, ದಾಸದಾಸಿಯರು, ಇವೆಲ್ಲವನ್ನೂ ನೀನು ಕೊಡಬಲ್ಲೆ. ಅದು ಒಂದು ದೊಡ್ಡ ಸಂಸಾರವೆಂಬುದನ್ನು ನೀನರಿಯೆ ಈ ಭೂಮಿಯು ನನ್ನ ತಲ್ಪ. ಆಕಾಶವೇ ನನ್ನ ಅರಮನೆ. ಪಂಡರಿನಾಥನ ಪ್ರಸಾದವೇ ಅಷ್ಟೈಶ್ವರ್ಯಗಳು. ಇಲ್ಲಿರುವ ತರು ವೃಕ್ಷಗಳು ನನ್ನ ಸಂಗಡಿಗರು. ವಿಠಲನಾಥನು ನನ್ನ ಗುರು. ಭಜನೆಯೇ ನನ್ನ ಅಮೃತ. ಇಲ್ಲಿ ಬಿಟ್ಟು ನಾವೆಲ್ಲಿಗೆ ಬಂದರೂ ನನಗೆ ಸುಖವಾಗುವುದಿಲ್ಲ. ಆನಂದವಿಲ್ಲ. ನಾನು ನಿನಗೆ ಆಶೀರ್ವದಿಸುತ್ತೇನೆ. ನಿನ್ನಿಂದ ಧರ್ಮವು ಉದ್ಧಾರವಾಗಲಿ." ಎಂದು ಪ್ರತ್ಯುತ್ತರ ಬರೆದು ಕಳುಹಿಸಿದನು.

ಶಿವಾಜಿಯು ತುಕಾರಾಂನ ಪತ್ರವನ್ನು ಓದಿಕೊಂಡನು. ಅವನಿಗೆ ದಿಗ್ಭ್ರಮೆ ಹಿಡಿದಂತಾಯಿತು. "ರಾಜ್ಯ, ಐಶ್ವರ್ಯಗಳೆಲ್ಲವೂ ಸಂಸಾರ. ಸಂಸಾರವು ದುಃಖಮಯ. ದುಃಖದಿಂದ ಧರ್ಮವು ಬೆಳಗದು. ಈ ರಾಜ್ಯ ಕೋಶ ಸೇನಾ ಬಲಗಳಿಂದಲೂ ಧರ್ಮವು ಬೆಳಗದು ಇದು ಸಂತರ ಆಶೀರ್ವಾದ. ಹಾಗಾದ ಮೇಲೆ ನಾವೇಕೆ ಇಲ್ಲಿರಬೇಕು ?" ಎಂದು ಚಿಂತಿಸತೊಡಗಿದನು.

ಸಂಗಡಿಗರೊಬ್ಬರಿಗೂ ಹೇಳದಂತೆ ಮಾಯವಾದನು.

ಪಂಡರಪುರದಲ್ಲಿ ರಾಜಯೋಗ್ಯವಾದ ವಸ್ತ್ರಗಳನ್ನೆಲ್ಲಾ ತೆಗೆದಿಟ್ಟು ಕೌಪೀನ ವಸನಗಳನ್ನು ಧರಿಸಿಕೊಂಡು ತುಕಾರಾಂನ ದರ್ಶನ ಮಾಡಿ ಸಾಷ್ಟಾಂಗ ನಮಸ್ಕಾರ ಮಾಡಿದನು.

ತುಕಾರಾಂನು "ಶಿವಾಜೀ ಪ್ರಭು, ನೀನು ವೇಷ ಮರೆಸಿಕೊಂಡು ಬಂದರೆ ಸನ್ಯಾಸಿಯಾಗುವೆಯಾ? ನನಗೆ ಅಂಗರೇಖು, ಕಿರೀಟ, ಮುಕ್ತಾ ಹಾರಗಳಿಂದ ಅಲಂಕರಿಸಿದರೆ ನಾನು ರಾಜನಾಗುವೆನೇ? ನೀನು ಪ್ರಭು ವಾಗಲು ಜನ್ಮವೆತ್ತಿದ್ದೀ. ಹೀಗೇಕೆ ಬಂದೆ? ನಿಜವಾಗಿಯೂ ಸಂಸಾರವನ್ನು ತೊರೆದು ಬಂದಿರುವೆಯಾ?" ಎಂದು ಕೇಳಿದನು.

ಶಿವಾಜಿಯು ಅಪ್ರತಿಭನಾದನು.

"ನಾನು ಏಕಾಂಗಿಯಾಗಿ ಬಂದಿದ್ದೇನೆ. ಸಾಧಾರಣ ಮಾನ ಮುಚ್ಚು ವಷ್ಟು ಬಟ್ಟೆ ನನ್ನ ಮೈಮೇಲಿದೆ. ನನ್ನನ್ನು ಈ ಸಂತನು ಹೇಗೆ ಕಂಡುಹಿಡಿದ?" ಎಂದು ಮನಸ್ಸಿನಲ್ಲಿಯೇ ಆಶ್ಚರ್ಯಪಟ್ಟನು.

"ಸಂತ್ ಮಹಾರಾಜ್, ತಮ್ಮ ಪ್ರತ್ಯುತ್ತರವು ಬಂದಿತು. ನನ್ನ ಮನಸ್ಸಿನಲ್ಲಿ ಜಿಜ್ಞಾಸೆಗೆ ಆರಂಭವಾಯಿತು. ರಾಜ್ಯಕೋಶಗಳೆಲ್ಲವೂ ಸಂಸಾರ. ಸಂಸಾರದಿಂದ ಧರ್ಮೋದ್ಧಾರವಾಗುವುದಿಲ್ಲ. ಸರಿಯೋ ತಪ್ಪೋ ತಮ್ಮ ಪತ್ರದಿಂದ ನನಗರ್ಥವಾದುದು ಇಷ್ಟೇ ತಾವು ಈ ಮೀಮಾಂಸೆಯನ್ನು ಪರಿಹರಿಸಿಕೊಡಬೇಕು. ನನ್ನ ವೇಶಭೂಷಣಗಳನ್ನು ಕಿತ್ತೊಗೆದು ಬಂದುದ್ದು ವೈರಾಗ್ಯದಿಂದಲೂ ಅಲ್ಲ, ವೇಶಾಂತರವೂ ಅಲ್ಲ. ತಮ್ಮಂಥಾ ಮಹಾ ಪುರುಷರ ಸನ್ನಿಧಾನಕ್ಕೆ ಬರುವಾಗ, ಇಂಥಾ ಸಂತಗೋಷ್ಟಿಗೆ ಬರುವಾಗ ರಾಜರ ವೇಷಭೂಷಣ ಅಲಂಕಾರಗಳಿಂದ ಬರುವುದು ಅವಿನಯವೆಂದು ಕೊಂಡೆ. ಅಹಂಕಾರವೆಂದುಕೊಂಡೆ. ದರ್ಪವನ್ನು ಪ್ರದರ್ಶನ ಮಾಡಿ ದಂತೆ ಆಗುತ್ತದೆಂದುಕೊಂಡೆ. ಅದರಿಂದ ಈ ಸೌಮ್ಯ ವೇಷದಿಂದ ತಮ್ಮ ದರ್ಶನಕ್ಕೆ ಬಂದಿದ್ದೇನೆ. ರಾಜಮಾರ್ಗ—ಅಥವಾ ಸಂತಮಾರ್ಗ— ಇದರಲ್ಲಿ ಯಾವುದು ಶ್ರೇಷ್ಠವೊ ಅದನ್ನು ನನಗೆ ಉಪದೇಶ ಕೊಡಿರಿ— ರಾಜಮಾರ್ಗದಿಂದ ಧರ್ಮೋದ್ಧಾರವಾಗುವುದೆಂದು ಮನಗಂಡರೆ ತಾವು ನನ್ನೊಡನೆ ಬರಬೇಕು. ಸಂತಮಾರ್ಗದಿಂದಲೇ ಧರ್ಮವು ಬೆಳಗುವು

ದಾದರೆ ನನನ್ನು ಈ ಗೋಷ್ಠಿಯಲ್ಲಿ ಸೇರಿಸಿಕೊಳ್ಳಬೇಕು." ಎಂದು ಹೇಳಿ ನಮಸ್ಕರಿಸಿದನು.

ತುಕಾರಾಂ ನಕ್ಕನು. "ಈ ವಿಷಯ ಜಿಜ್ಞಾಸೆಗೇ ಮಹಾ ಮಹಾಶಾಸ್ತ್ರಗಳು ಬೆಳೆದಿವೆ. ಅದರಲ್ಲಿ ಒಂದು ಪಂಕ್ತಿಯೂ ನನಗೆ ಅರ್ಥವಾಗಿಲ್ಲ. ನೀನು ಅದೇ ಶಾಸ್ತ್ರದ ಜಿಜ್ಞಾಸೆಯನ್ನು ತಂದು ಒಡ್ಡುತ್ತಿರುವೆ. ಅದೂ ಸಾಧುವಾದುದೇ. ಆದರೆ ನೀನು ಭಜನೆ ಮಾಡು. ಈ ಪಂಡರಿನಾಥನು ನಿನ್ನ ಜಿಜ್ಞಾಸೆಯನ್ನು ಬಗೆಹರಿಸಿ ದಾರಿ ತೋರುವನು" ಎಂದು ಹೇಳಿದನು.

ಶಿವಾಜಿಯು ಎಲ್ಲವನ್ನೂ ಮರೆತು ಸಂತರ ಗೋಷ್ಠಿಯಲ್ಲಿ ಬೆರೆತು ಹೋದನು. ಭಕ್ತರಾರಿಗೂ ಇವನಾರೆಂದು ವ್ಯಕ್ತವಾಗಲಿಲ್ಲ. ತುಕಾರಾಂನು ಶಿವಾಜಿಯನ್ನು ಕಣ್ಣಿಟ್ಟು ಗಮನಿಸುತ್ತಿದ್ದನು. ಅವನ ಆಚಾರ ವ್ಯವಹಾರಗಳು, ದೈವನಿಷ್ಠೆ, ಸಂತರಲ್ಲಿ ಭಕ್ತಿ ಇವೆಲ್ಲವೂ ತುಕಾರಾಂನನ್ನು ವಿಸ್ಮಯಗೊಳಿಸುತ್ತಿದ್ದವು. ಪ್ರತಿದಿನವೂ ತುಕಾರಾಂನು ತನ್ನ ಗೀತೆಗಳ ಕೆಲವು ಭಾಗಗಳನ್ನು ಶಿವಾಜಿಗೆ ಹೇಳುತ್ತಿದ್ದನು. ಶಿವಾಜಿಯು ಮೌನದಿಂದ ಕೇಳುತ್ತಿದ್ದನು. ಕ್ರಮಕ್ರಮವಾಗಿ ಶಿವಾಜಿಯು ಯಾರೊಂದಿಗೂ ಮಾತನಾಡುತ್ತಿರಲಿಲ್ಲ. ತುಕಾರಾಂನು ಶಿವಾಜಿಯನ್ನು ಮಾತನಾಡಿಸುತ್ತಿರಲಿಲ್ಲ. ಗುರುಶಿಷ್ಯರಿಬ್ಬರೂ ಹಠ ತೊಟ್ಟಿರುವಂತೆ ಭಾಸವಾಗುತ್ತಿದ್ದಿತು.

ತುಕಾರಾಂನು ಒಂದೆರೆಡು ಬಾರಿ ಏಕಾಂತದಲ್ಲಿ, "ಶಿವಾಜಿ ಪ್ರಭು, ನೀನು ನಿನ್ನ ರಾಜ್ಯಕ್ಕೆ ಹೋಗು. ಅಲ್ಲಿಯೇ ಪಂಡರಿನಾಥನು ಅನುಗ್ರಹಿಸುವನು. ನನ್ನಿಂದ ನೀನು ತಿಳಿದುಕೊಳ್ಳಬೇಕಾದ ಭಕ್ತಿ ಜ್ಞಾನಗಳೇನೂ ಇಲ್ಲ. ಪಂಡರಿನಾಥನೇ ನಿನಗೆ ಎಲ್ಲವನ್ನೂ ಉಪದೇಶಿಸುವನು" ಎಂದು ಹೇಳಿದನು.

ಶಿವಾಜಿಯು ಪ್ರತ್ಯುತ್ತರ ಕೊಡಲಿಲ್ಲ. ಸ್ಥಳಬಿಟ್ಟು ಕದಲಲೂ ಇಲ್ಲ.

ಶಿವಾಜಿಯ ಸಂಗಡಿಗರು ಶಿವಾಜಿಯನ್ನು ಎಲ್ಲೆಲ್ಲಿಯೂ ಹುಡುಕಿದರು. ಶಿವಾಜಿ ಮಹಾರಾಜನು ರಾಜಧಾನಿಯಲ್ಲಿ ಇಲ್ಲವೆಂಬ ಸುಳಿವು ಯಾರಿಗೂ ತಿಳಿಯದಂತೆ ಗೋಪ್ಯವಾಗಿಟ್ಟರು. ಶಿವಾಜಿಯನ್ನು ಎಲ್ಲೆಲ್ಲಿಯೂ ಹುಡುಕಲಾರಂಭಿಸಿದರು. ಬಿಜಾಪುರದವರೋ, ಮೊಗಲ್ ಬಾದಷಹನ ಕಡೆಯವರೋ ಅಪಹರಿಸಿಕೊಂಡು ಹೋಗಿರಬೇಕೆಂದು ಸಂಶಯ ಪಟ್ಟರು. ಭಯ

ಪಟ್ಟರು. ಇಲ್ಲ, ಇಲ್ಲ. ಶಿವಾಜಿ ಮಹಾರಾಜನು ಹಾಗೆಲ್ಲ ಶತ್ರುಗಳ ಕೈಗೆ ಸಿಗುಸವವಲ್ಲಿ ಏನಾದರೂ ಮೋಸದಿಂದ ಪರರ ಕೈಗೆ ಸಿಕ್ಕಿದ್ದರೂ ನಮಗೆ ಹೇಗಾದರೂ ಸುಳಿವು ಸೂಕ್ಷ್ಮಗಳನ್ನು ತಿಳಿಸುತ್ತಿದ್ದ. ತಿಂಗಳುಗಳಾದರೂ ಸಮಾಚಾರವೇ ಇಲ್ಲ. ಶಿವಾಜಿ ಪ್ರಭು ಯಾವುದೋ ಮಹಾತ್ಕಾರ್ಯಕ್ಕೆ ಹೋಗಿದ್ದಾನೆ ಎಂದು ನಿರ್ಧಾರ ಮಾಡಿಕೊಂಡರು. ಆದರೆ ಸುಮ್ಮನೆ ಕೂಡುವು ದೆಂತು ಎಂದು ವನ-ದುರ್ಗಗಳಲ್ಲಿ,-ಕಂದರಗಳಲ್ಲಿ, ಜರಿ-ನಿರ್ಜರಿಗಳಲ್ಲಿ ಹುಡುಕಿದರು. ಆಕಸ್ಮಾತ್ ಪಂಡರಪುರದಲ್ಲಿ ಶಿವಾಜಿಯನ್ನು ದರ್ಶನ ಮಾಡಿ ದರು. ಆ ದೇಹವನ್ನು ನೋಡಿ ಅವರ ಕಣ್ಣೀರಿಟ್ಟರು. ಶಿವಾಜಿಯನ್ನು ತಬ್ಬಿಕೊಂಡು ಸಂತೋಷಪಟ್ಟರು. ಅವನ ಕಾಲಿಗೆರಗಿ ಬರಬೇಕೆಂದ್ಯ ಬೇಡಿದರು. ಎಲ್ಲವೂ ನಿರರ್ಥಕವಾಯಿತು.

ಶಿವಾಜಿಯು ಏನೊಂದು ಉತ್ತರವನ್ನು ಕೊಡಲಿಲ್ಲ.

ಸಂಗಡಿಗರು. "ನಮ್ಮ ಮುಂದಿನ ಗತಿಯೇನು ? ಇದಕ್ಕೆಲ್ಲಾ ನೀನೇ ಕಾರಣಕರ್ತನಲ್ಲವೆ ? ನೀನೇ ಪ್ರೇರಕನಲ್ಲವೆ ? ನಮ್ಮ ದುರ್ಗ ನಗರಗಳನ್ನು ರಾಜ್ಯಗಳನ್ನು ತುರುಕರಿಗೆ ಬಿಟ್ಟು ನಾವೂ ಇಲ್ಲಿಗೆ ಬಂದುಬಿಡುತ್ತೇವೆ" ಎಂದು ಹೇಳಿದರು.

ಶಿವಾಜಿಯು "ಸೋದರರುಗಳಿರಾ, ನಾನೇ ಕಾರಣನೆಂದುಕೊಂಡಿದ್ದೆ. ನಾನೇ ಪ್ರೇರಕನೆಂದುಕೊಂಡಿದ್ದೆ. ಅದೆಲ್ಲವೂ ಭ್ರಾಂತಿ. ಪಂಡರೀನಾಥ ನಮ್ಮೆಲ್ಲರಿಗೂ ಕಾರಣಕರ್ತನು. ಪ್ರೇರಕನು. ಅವನ ಇಚ್ಛೆಯಂತೆ ಆಗುತ್ತದೆ. ನಾವು ಸಂಗ್ರಾಹಿಸಿದ ರಾಜ್ಯಗಳನ್ನೆಲ್ಲಾ ಪಂಡರೀನಾಥನ ಪಾದ ಗಳಲ್ಲಿ ಅರ್ಪಣ ಮಾಡಿ ಬಿಟ್ಟಿದ್ದೇನೆ. ಅದನ್ನು ತುರುಷ್ಕರಿಗೆ ಬಿಟ್ಟುಕೊಡ ಬೇಕೇ, ನೀವೇ ರಕ್ಷಣೆ ಮಾಡಬೇಕೇ, ಎಂಬುದನ್ನು ಸಂತ್ ಮಹಾರಾಜ್ ತುಕಾರಾಂರಲ್ಲಿ ಕೇಳಿರಿ. ಅವರು ಉತ್ತರ ಕೊಡುತ್ತಾರೆ. ಅವರ ಅಪ್ಪಣೆಯು ನಿನಗೂ ನನಗೂ ಶಿರೋಧ್ಯಾರ" ಎಂದು ಹೇಳಿದನು.

ಸಂಗಡಿಗರು ತಪಬಡಿಸಿದರು. ನಿರಾಶರಾದರು.

ತುಕಾರಾಂ ಸಾಧುಗಳಲ್ಲಿ "ಶಿವಾಜೀ ಮಹಾಪ್ರಭುವು ಸಂತ ಪಂಥದಲ್ಲಿ ಸೇರಿಹೋಗಿದ್ದಾನೆ. ನಾವು ಕಟ್ಟಿರುವ ರಾಜ್ಯಗಳು ತುರುಷ್ಕರ ಅಧೀನ

ವಾಗುತ್ತವೆ. ಅವರನ್ನು ಅಪ್ಪಣೆ ಕೊಟ್ಟು ಕಳುಹಿಸಿಕೊಡಿರಿ." ಎಂದು ಪ್ರಾರ್ಥನೆಮಾಡಿದರು.

ತುಕಾರಾಂ ನಕ್ಕು "ನಿಮ್ಮ ಪ್ರಭುವು ಏನು ಹೇಳುತ್ತಾನೆ?" ಎಂದು ಕೇಳಿದನು.

ಅವರು ಖಿನ್ನರಾಗಿ "ನಮ್ಮ ಪ್ರಭುವು ಸಂತಸಂಘಕ್ಕೆ ಸೇರಿಹೋಗಿದ್ದಾನೆ. ಇದಕ್ಕೆ ನೀವೇ ಕಾರಣರು. ಈ ಪಾಪವೆಲ್ಲ ನಿಮ್ಮ ತಲೆಗೇ ಹತ್ತುತ್ತದೆ." ಎಂದು ಹೇಳಿದರು.

ತುಕಾರಾಂನು "ಅಹುದು, ನಿಜ. ಲೋಕದ ಪಾಪವೆಲ್ಲವೂ ನಮ್ಮ ತಲೆಗೇ ಹತ್ತುತ್ತದೆ. ಅದರಿಂದಲೇ ಬ್ರಹ್ಮನಿಷ್ಠ ಸನ್ಯಾಸಿಗಳ ತಲೆಯು ಬೋಳಾಗಿದೆ. ಶಿವಾಜಿಯು ಪಂಡರಿನಾಥನ ಆಜ್ಞೆಯಾದಾಗ ಬರುತ್ತಾನೆ. ನಿಮಗೆ ಎಂದಿಗೂ ಪರಾಜಯವಿಲ್ಲ. ಧರ್ಮಕ್ಕೆ ಚ್ಯುತಿಯಿಲ್ಲ. ಶಿವಾಜಿಯು ಮಹಾಪುರುಷ. ನಾನು ಅವನನ್ನು ಸಂತಗೋಷ್ಠಿಗೆ ಸೇರಿಸಿಲ್ಲ. ಅವನು ಪಂಡರಿನಾಥನನ್ನು ಬಲವಾಗಿ ಹಿಡಿದಿದ್ದಾನೆ. ಅವನ ಯುದ್ಧವು ಪಂಡರಿನಾಥನೊಡನೆ ನಡೆದಿದೆ. ನಾನು ಸಾಕ್ಷೀಭೂತನಾಗಿ ನೋಡುತ್ತಿದ್ದೇನೆ. ಅರ್ಜುನನು ಪರಮೇಶ್ವರನೊಡನೆ ಹೋರಾಡಿ ಪಾಶುಪತವನ್ನು ಪಡೆದಂತೆ ಶಿವಾಜಿಯು ಪಂಡರಿನಾಥನೊಡನೆ ಹೋರಾಟವನ್ನು ನಡೆಸುತ್ತಿದ್ದಾನೆ. ನೀವು ನಿಮ್ಮ ಸ್ಥಳಗಳಿಗೆ ಹೋಗಿರಿ. ನಿಮ್ಮ ಕರ್ತವ್ಯವನ್ನು ಪಾಲಿಸಿರಿ." ಎಂದು ಹೇಳಿಕಳುಹಿಸಿದನು.

ಶಿವಾಜಿಯ ಸಂಗಡಿಗರು ಪುಣೆಗೆ ಹೋಗಿ ಜೀಜಾಬಾಯಿಯ ದರ್ಶನ ಮಾಡಿ ಮೊರೆಯಿಟ್ಟರು.

"ಅಮ್ಮಾಜೀ, ಶಿವಾಜೀ ಪ್ರಭುವು ಸಂತ ಪಂಥವನ್ನು ಸೇರಿ ಹೋಗಿದ್ದಾನೆ. ನಮಗೆ ರಾಜನಿಲ್ಲದೇ ಪರಿತಪಿಸುತ್ತಿದ್ದೇವೆ. ಇಷ್ಟು ದಿನಗಳಿಂದ ಗೋಪ್ಯವಾಗಿಟ್ಟಿದ್ದೆವು. ಮೊಗಲರು ಬಂದು ನಮ್ಮ ದುರ್ಗಗಳನ್ನು ಸುಲಭವಾಗಿ ವಶಪಡಿಸಿಕೊಳ್ಳುತ್ತಾರೆ. ನಾವೆಲ್ಲ ಕಾಡು ಪಾಲಾಗಿ ಓಡಿ ಹೋಗಬೇಕಾಗಿದೆ" ಎಂದು ಒಬ್ಬೊಬ್ಬನೂ ಹೇಳಿಕೊಂಡನು.

ಜೀಜಾಬಾಯಿಯು ಧೈರ್ಯಗೆಡಲಿಲ್ಲ.

ಹಾಗೆಂದರೇನು? ಶಿವನು ಎಲ್ಲಿಯೋ ಹೋಗಿದ್ದಾನೆ. ಯಾವುದೋ ಮಹತ್ಕಾರ್ಯವನ್ನು ಸಾಧಿಸಿಕೊಂಡು ಬರುತ್ತಾನೆ. ನನಗೆ ನಿನ್ನೆ ತಾನೇ

ಒಳ್ಳೆಯ ಸ್ವಪ್ನವಾಗಿದೆ. ಅವನು ಬೇಗ ಹಿಂತಿರುಗಿ ಬಾರದುದನ್ನು ಕಂಡು ನೀವು ಗಾಬರಿಗೊಂಡಿದ್ದೀರಿ. ಶಿವನು ಕೋಟೆಗಳ ಕಡೆಗೆ ಗಮನವಿಟ್ಟೇ ಇದ್ದಾನೆ. ಅಪಾಯವೇನಾದರೂ ಸಂಭವಿಸುವುದಾದರೆ ನಿಮಗಿಂತಲೂ ಮುಂಚಿತವಾಗಿಯೇ ಅವನಿಗೆ ತಿಳಿಯುತ್ತದೆ."

"ಅಮ್ಮಾಜೀ, ಊಹಾಪೋಹದಿಂದು ನಾವು ಹೇಳುತ್ತಿಲ್ಲ. ಪ್ರತ್ಯಕ್ಷ ನೋಡಿ ಬಂದಿದ್ದೇವೆ. ಶಿವಪ್ರಭುವು ಫಂಡರಪುರದಲ್ಲಿ ಇದ್ದಾನೆ ಸಂತ ತುಕಾರಾಂನ ಶಿಷ್ಯನಾಗಿದ್ದಾನೆ. ಸಾಧುಗಳಂತೆ ಕೌಪೀನ ವಸನ ಧಾರಣೆ ಮಾಡಿದ್ದಾನೆ. ಭಿಕ್ಷಾನ್ನ ತಿನ್ನುತ್ತಾನೆ. ಸಂತರಗುಂಪಿನಲ್ಲಿ ಸೇರಿಕೊಂಡು ಭಜನೆ ಮಾಡಿ ಕುಣಿದಾಡುತ್ತಾನೆ. ನಾವೆಲ್ಲಾ ಹೋಗಿ ಪ್ರಾರ್ಥನೆ ಮಾಡಿದೆವು. ಶಿವಪ್ರಭುವು ನಾನು ನಿಮ್ಮೊಂದಿಗೆ ಬರಲೊಲ್ಲೆನೆಂದು ನಿರಾಕರಿಸಿದನು. ಸಂತ ತುಕಾರಾಂನಲ್ಲಿಯೂ ನಾವು ಹೋಗಿ "ಸಂತ ಮಹಾರಾಜರೇ, ಇವನು ಎಲ್ಲರಂತೆ ಗೋಷ್ಠಿಗೆ ಸೇರತಕ್ಕವನಲ್ಲ. ಶಿವಾಜಿ ಮಹಾಪ್ರಭು ಇವನು. ನಾವೆಲ್ಲಾ ಇವನ ಸೇನಾಧಿಪತಿಗಳು. ಮೊಗಲರು ಇಂದೋ ನಾಳೆಯೋ ನಮ್ಮ ಕೋಟೆಗಳನ್ನು ಮುತ್ತಿ ಧೂಳೀಪಟವೆಬ್ಬಿಸುತ್ತಾರೆ. ನಮ್ಮ ಹಿಂದೂಜನಕ್ಕೆ ಉಳಿಗಾಲವಿಲ್ಲ. ಈ ಪಾಪವೆಲ್ಲವೂ ನಿಮಗೆ ತಟ್ಟುತ್ತದೆ. ಶಿವಪ್ರಭುವನ್ನು ಆಶೀರ್ವದಿಸಿ ಕಳುಹಿಸಿಕೊಡಿರಿ" ಎಂದು ಕೇಳಿಕೊಂಡೆವು. ಆ ಸಂತನು ನಮ್ಮ ಮಾತಿಗೆ ಕಿವಿಗೊಡಲಿಲ್ಲ. ಶಿವಾಜಿಯ್ಯು ನಿಜವಾಗಿ ಸಂತನೇ ಆಗಿದ್ದಾನೆ. ದಿಕ್ಕು ತೋರದೆ ನಾವಿಲ್ಲಿಗೆ ಬಂದಿದ್ದೇವೆ."

ಜೀಜಾಬಾಯಿಯು "ಭಗವಂತನ ಇಚ್ಛೆಯು ಹಾಗೆಯೇ ಇದ್ದರೆ ನಾನೇನು ಮಾಡಲಾದೀತು?" ಎಂದು ನಿಟ್ಟುಸಿರು ಬಿಟ್ಟಳು.

"ಹಾಗಲ್ಲ, ತಾಯಿ. ನೀವೊಬ್ಬರೇ ನಮ್ಮನ್ನು ಉದ್ಧಾರಮಾಡಬಲ್ಲಿರಿ. ಶಿವಾಜಿ ಪ್ರಭುವು ಗುರುವಿಗಿಂತಲೂ, ದೇವರಿಗಿಂತಲೂ ನಿಮ್ಮಲ್ಲಿ ಹೆಚ್ಚು ಭಕ್ತಿಯಿಟ್ಟಿದ್ದಾನೆ. ನೀವು ಪಂಡರಪುರಕ್ಕೆ ಬಂದು ನಮ್ಮ ಶಿವಾಜಿಯನ್ನು ನಿಮ್ಮೊಡನೆ ಕರೆತಂದುಕೊಡಬೇಕು. ಇಲ್ಲದಿದ್ದರೆ ನಿಮ್ಮ ಮನೆಯ ಹಜಾರದಲ್ಲಿ ನಾವು ಉಪವಾಸ ಮಾಡುತ್ತೇವೆ. ನಿಮ್ಮ ಆಶೀರ್ವಾದ, ದೇವರ ಅನುಗ್ರಹ ಶಿವಾಜಿಯ ಮುಂದಾಳುತನ, ಈ ಮೂರೂ ಇಲ್ಲದಿದ್ದರೆ ನಮ್ಮ ಆಟವೇನೂ

ಸಾಗುವುದಿಲ್ಲ. ನೀವು ಹಿಂದೆ-ಮುಂದೆ ನೋಡುತ್ತಾ ಆಲಸ್ಯಮಾಡಿದರೆ ಕಾರ್ಯವು ಮಿಂಚಿಹೋಗುತ್ತದೆ. ಮರಾಠರ ಹೆಸರಿಲ್ಲದೆ ಹೋಗುತ್ತದೆ."

ಜೀಜಾಬಾಯಿಯು ಆ ತರುಣ ಸರದಾರರೊಂದಿಗೆ ಹೊರಟಳು.

ಅವರೆಲ್ಲರೂ ಕಾಲು ನಡಿಗೆಯಲ್ಲಿಯೇ ಪಂಡರಪುರವನ್ನು ಸೇರಿದರು. ನದಿಯಲ್ಲಿ ಸ್ನಾನ ಮಾಡಿ ಜೀಜಾಬಾಯಿಯು ಪಂಡರಿನಾಥನ ದೇವಾಲಯಕ್ಕೆ ಹೋಗುವ ಸಮಯದಲ್ಲಿ ಪಂಡರಿನಾಥನಿಗೆ ಆರತಿಯಾಗುತ್ತಿದ್ದಿತು. ಭಕ್ತರೆಲ್ಲರೂ ಭಜನೆ ಮಾಡುತ್ತಿದ್ದರು. ತುಕರಾಂನು ಭಕ್ತರ ವೃಂದದಲ್ಲಿ ಸೇರಿ ಹೋಗಿದ್ದನು.

ಮಂಗಳಾರತಿಯು ಪೂರೈಸುತ್ತಲೇ ಜೀಜಾಬಾಯಿಯು ತೇಜಸ್ಸಿನಿಂದ ಜ್ವಲಿಸುತ್ತಿರುವ ಸಂತ ತುಕರಾಂನನ್ನು ದರ್ಶನ ಮಾಡಿದಳು. ಆ ದೇವರ ಸಾನ್ನಿಧ್ಯದಲ್ಲಿ ಆ ತುಕರಾಂನ ದರ್ಶನದಿಂದ ಧನ್ಯಳಾದೆನೆಂದು ಭಾವಿಸಿದಳು.

ತುಕರಾಂ ನು ಅವಳೆದುರಿಗೆ ನಿಂತು "ವೀರಮಾತೆ, ನೀನು ಇಲ್ಲಿಗೇಕೆ ಬಂಧೆ?" ಎಂದು ಪ್ರಶ್ನೆ ಮಾಡಿದನು.

ಜೀಜಾಬಾಯಿಯು ಕಣ್ತೆರೆದು ಎದುರುಗಿರುವ ಪಂಡರಿನಾಥನನ್ನು ನೋಡಿದಳು. ಆ ದೇವಮೂರ್ತಿಯು ನಗುತ್ತಿರುವಂತೆ ಅವಳು ಕಂಡಳು. ಆ ದರ್ಶನದಿಂದ ಜೀಜಾಬಾಯಿಯು ಮೈಮರೆತು ಸಾಷ್ಟಾಂಗ ಪ್ರಣಾಮ ಮಾಡಿದಳು.

ಭಕ್ತರೆಲ್ಲರೂ ಸ್ತಂಭೀಭೂತರಾಗಿ ನೋಡುತ್ತಿದ್ದರು.

ಜೀಜಾಬಾಯಿಯು ಎದ್ದು ತನ್ನೆದುರಿಗೆ ನಿಂತಿರುವ ತುಕರಾಂನನ್ನು ನೋಡಿ "ಗುರುದೇವಾ, ನಾನು ಧನ್ಯಳಾಗಿದ್ದೇನೆ. ನನ್ನ ಮಗ ಶಿವಪ್ರಭುವನ್ನು ದಾನಬೇಡಲು ಬಂದಿದ್ದೇನೆ" ಎಂದು ಹೇಳಿದಳು.

ಶಿವಪ್ರಭುವು ತಾಯಿಯ ಪಾದಗಳಲ್ಲಿ ತಲೆಯಿಟ್ಟು ನಮಸ್ಕರಿಸಿದನು.

ತಾಯಿಯು ಮಗನನ್ನು ಎತ್ತಿ "ಶಿವಪ್ರಭು! ನೀನು ಸಂತನಲ್ಲ. ನೀನು ನನ್ನ ಮಗ. ನನ್ನ ಋಣವು ಇನ್ನೂ ತೀರಿಲ್ಲ. ಗುರುಗಳ ಅಪ್ಪಣೆಯಾಗಿದೆ. ಫಂಡರಿನಾಥನ ಅಪ್ಪಣೆಯಾಗಿದೆ. ಧರ್ಮೋದ್ಧಾರಕ್ಕಾಗಿ ನಿನ್ನ ಜೀವನವು ಮೀಸಲು. ಈ ಮಹಾಪುರುಷನಾದ ತುಕರಾಂ ಮಹಾರಾಜನು ನಿನಗೆ ಅನುಗ್ರಹಿಸಿದ್ದಾನೆ. ನನ್ನೊಡನೆ ಬಾ" ಎಂದು ಹೇಳಿದಳು.



ಶಿವಾಜಿಯು ಗುರುವಿನ ಕಡೆಗೆ ನೋಡಿದನು.

ತುಕಾರಾಮನು ಆ ತಾಯಿ ಮಕ್ಕಳಿಬ್ಬರನ್ನು ನೋಡುತ್ತಾ ಇದ್ದನು.

“ಶಿವಾಜಿ, ನೀನು ಪುಣ್ಯಪುರುಷ. ನಿನ್ನ ಜಿಜ್ಞಾಸೆಯು ಪೂರ್ತಿಯಾಗಿದೆ. ಪಂಡರೀನಾಥನೇ ಆಜ್ಞೆ ಕೊಟ್ಟಿದ್ದಾನೆ. ನಿನ್ನ ಕರ್ಮಕ್ಷೇತ್ರವು ಬೇರೊಂದು ಕಡೆ ಸಿದ್ಧವಾಗಿದೆ. ಹೋಗು. ತಾಯಿಯ ಆಜ್ಞೆಯನ್ನು ಪಾಲಿಸು. ಪಂಡರಿನಾಥನ ಅನುಗ್ರಹವು ನಿನ್ನ ಮೇಲೆ ಪರಿಪೂರ್ಣವಾಗಿದೆ. ನೀನು ಧರ್ಮರಾಜ್ಯವನ್ನು ಸ್ಥಾಪನೆ ಮಾಡುವೆ. ಅದಕ್ಕಾಗಿಯೇ ನೀನು ಜನ್ಮವೆತ್ತಿದ್ದೀಯೆ” ಎಂದು ಹೇಳಿ ಆಶೀರ್ವದಿಸಿದನು.

ಶಿವಾಜಿಯು “ಗುರುದೇವಾ, ಮಾತೆಯ ಆಜ್ಞೆಯಾಗಿದೆ. ಭಗವಂತನ ಅನುಗ್ರಹವೂ ದೊರೆತಿದೆ. ತಮ್ಮ ಆಶೀರ್ವಾದ ಬಲವೂ ಇದೆ. ಆದರೂ ನನಗೆ ಧೈರ್ಯವಿಲ್ಲ. ಈ ರಾಜ್ಯಸೂತ್ರಗಳನ್ನು ದೃಢವಾಗಿ ಧರಿಸಬಲ್ಲ ಧೈರ್ಯವಿಲ್ಲ. ನನಗೊಬ್ಬ ಮಹಾಪುರುಷನು ಗುರುವಾಗಿರಬೇಕು. ಆ ಇಷ್ಟವು ಇನ್ನೂ ಪೂರ್ತಿಯಾಗಿಲ್ಲ” ಎಂದನು.

ತುಕರಾಮನು “ಆ ವಾಂಛೆಯು ಯುಕ್ತವಾದದ್ದು. ಸಹಜವಾದದ್ದು. ಧನಂಜಯನಿಗೆ ಗುರು ಶ್ರೀ ಕೃಷ್ಣನು ಜೊತೆಯಲ್ಲಿದ್ದಂತೆ ನಿನ್ನ ಜೊತೆಯಲ್ಲಿ ಗುರುವಿರಬೇಕು. ಅಂಥಾ ಒಬ್ಬ ಗುರುವು ನಿನ್ನಲ್ಲಿಗೆ ಬರುತ್ತಾನೆ” ಎಂದು ಆಶೀರ್ವದಿಸಿದನು.

ಶಿವಾಜಿಯು ಗುರುವನ್ನು ನಮಸ್ಕರಿಸಿ, ಪಂಡರಿನಾಥನನ್ನು ಸ್ತುತಿಸಿ, ತಾಯಿಯ ಹಿಂದೆ ಪುರಂಧರಗಢಕ್ಕೆ ಪ್ರಯಾಣ ಬೆಳೆಸಿದನು.

ಮರಾಠರೆಲ್ಲರೂ ಸಂತೋಷದಿಂದ ನಲಿದಾಡಲಾರಂಭಿಸಿದರು. ಎಲ್ಲರ ಬಾಯಿಯಲ್ಲಿಯೂ “ಶಿವಾಜಿ ಪ್ರಭುವಿಗೆ ಸಂತ ತುಕರಾಂರ ಆಶೀರ್ವಾದ ವಾಗಿದೆ. ಪಂಡರೀನಾಥನ ಅನುಗ್ರಹವಾಗಿದೆ” ಎಂಬ ಮಾತುಗಳು ನಲಿಯುತ್ತಿದ್ದುವು.

ಮನೆಮನೆಯಲ್ಲಿಯೂ ಈ ಮಾತುಗಳು ಪ್ರತಿಧ್ವನಿಸುತ್ತಿದ್ದುವು.

ಶಿವಾಜಿಯ ಜೀವನದಲ್ಲಿ ವಿಶೇಷ ಪರಿವರ್ತನೆಯುಂಟಾಯಿತು. ಅವನು ರಾಜನಾಗಿದ್ದರೂ ಯಾವಾಗಲೂ ವಿರಕ್ತಭಾವದಿಂದ ಇರುತ್ತಿದ್ದನು. ನೆಲದ ಮೇಲೆ ಮಲಗುತ್ತಿದ್ದನು. ಪ್ರಾತಃಕಾಲವಲ್ಲಿ ನಿತ್ಯವೂ ಶೀತಜಲದಲ್ಲಿ

ಸ್ನಾನ ಮಾಡುತ್ತಿದ್ದನು. ಭಗವಂತನ ಪೂಜೆ ಮಾಡಿ, ಪ್ರಸಾದವನ್ನು ತಲೆಯಲ್ಲಿ ಧಾರಣ ಮಾಡಿ ಕಾರ್ಯಕ್ಕೆ ತೊಡಗುತ್ತಿದ್ದನು. ರಣಕ್ಷೇತ್ರದಲ್ಲಿಯೂ ಶಿವಾಜಿಯು ಈ ನಿತ್ಯವಿಧಿಯನ್ನು ಅನುಷ್ಠಾನ ಮಾಡುತ್ತಿದ್ದನು.

ಶಿವಾಜಿಯು ಪಂಡರಪುರದಲ್ಲಿ ಸಂತಗೋಷ್ಠಿಯಲ್ಲಿ ಬೆಳೆಸಿದ್ದ ಗಡ್ಡ ಮೀಸೆಗಳನ್ನು ಧಾರಣೆಮಾಡಿಯೇ ಇದ್ದನು.

ಶಿವಾಜಿಯ ಅನುಯಾಯಿಗಳೆಲ್ಲರೂ, ಶಿವಾಜಿಯು ಸಂತ ತುಕರಾಂನ ಪರಮಭಕ್ತನೆಂದೂ ತುಕರಾಂನ ಆಜ್ಞೆಯಂತೆಯೇ ನಡೆಯುತ್ತಿದ್ದಾನೆಂದೂ ನಂಬಿ, ಶಿವಾಜಿಯನ್ನು ವಿಶೇಷ ಗೌರವದಿಂದ ಕಾಣುತ್ತಿದ್ದರು.

ಶಿವಾಜಿಯು ಪುರಂಧರಗಢಕ್ಕೆ ಬಂದ ಮೇಲೆ ಎಲ್ಲ ದುರ್ಗಗಳನ್ನೂ ಅಚ್ಚುಕಟ್ಟು ಮಾಡಿಸಿದನು. ಪ್ರತಿಯೊಂದು ಕೋಟೆಯಲ್ಲಿಯೂ ದೇವಾಲಯಗಳನ್ನು ನಿರ್ಮಾಣ ಮಾಡುವಂತೆ ಆಜ್ಞೆಮಾಡಿದನು. ಎಲ್ಲ ಕಡೆಯೂ ದೇವಾಲಯ–ತಟಾಕ ನಿರ್ಮಾಣ ಕಾರ್ಯಗಳಿಗೆ ಆರಂಭವಾದವು. ಮಹಾರಾಷ್ಟ್ರದ ಎಲ್ಲ ಕಡೆಗಳಿಂದಲೂ, ಜನಗಳು ವಿಶೇಷವಾಗಿ ಪುರಂಧರಗಢಕ್ಕೆ ಬಂದು ಹೋಗಲು ಆರಂಭವಾಯಿತು.

ಶಿವಾಜಿಯು ಪಂಡರಪುರದಿಂದ ಹಿಂತಿರುಗಿದ ಮೇಲೆ ಸಂತ್ ತುಕರಾಂನು ಯಾವಾಗಲೂ ಧ್ಯಾನಾಸಕ್ತನಾಗಿರುತ್ತಿದ್ದನು. ಭಕ್ತವೃಂದಗಳಲ್ಲಿ ಸೇರಿ ಭಜನೆ ಮಾಡುತ್ತಿರಲಿಲ್ಲ. ಏಕಾಂತದಲ್ಲಿ ದೇವಾಲಯಕ್ಕೆ ಹೋಗಿ ಪಂಡರಿನಾಥನ ದರ್ಶನ ಮಾಡಿ ಬರುತ್ತಿದ್ದನು. ಭಕ್ತವೃಂದವು ಭಜನೆ ಮಂಗಳಾರತಿಗಳಾದ ಮೇಲೆ ಸಂತ್ ತುಕರಾಂನ ದರ್ಶನ ಮಾಡಿಕೊಂಡು ಹೋಗುತ್ತಿದ್ದಿತು. ಇದ್ದಕ್ಕಿದ್ದಂತೆ ತುಕರಾಂನ ಅವಸಾನ ಕಾಲವು ಪ್ರಾಪ್ತವಾಯಿತು. ತುಕರಾಂನು ಪಂಡರಿನಾಥನನ್ನು ಭಜನೆ ಮಾಡುತ್ತಾ ಇಹಲೋಕ ವ್ಯಾಪಾರವನ್ನು ತ್ಯಜಿಸಿದನು.

ಈ ಸಮಾಚಾರವು ತಿಳಿಯುತ್ತಲೇ ಶಿವಾಜಿಯು ಅತ್ಯಂತ ದುಃಖದಲ್ಲಿ ಮುಳುಗಿದನು. ರಾಜಕಾರ್ಯಗಳನ್ನೆಲ್ಲಾ ತೊರೆದು ದುಃಖಮಗ್ನನಾಗಿದ್ದನು.

ತುಕರಾಂನು ಶಿವಾಜಿಯ ಸ್ವಪ್ನದಲ್ಲಿ ದರ್ಶನವಿತ್ತು "ನಿನಗೆ ಬೇರೊಬ್ಬ ರಾಜಗುರುವಿದ್ದಾನೆ. ಅವನ ದರ್ಶನ ಮಾಡಿದರೆ ಕೃತಾರ್ಥನಾಗುವೆ ಎಂದು ಹೇಳಿದಂತೆ ಬೋಧೆಯಾಯಿತು.

೯

ಔರಂಗಸೇಬ ಬಾದಷಹನು ಡೆಲ್ಲಿಯ ಸಿಂಹಾಸನವನ್ನು ಏರಿದ್ದನು. ಆದರೆ ಅವನು ಡೆಲ್ಲಿಯನ್ನು ಬಿಟ್ಟುಬರುವಂತಿರಲಿಲ್ಲ. ಆಗ್ರಾದಲ್ಲಿ ಬಾದಷಹ ಷಹಜಹಾನನನ್ನು ಬಂಧನದಲ್ಲಿಟ್ಟಿದ್ದನು.

ದಾರನ ಕೊಲೆಯಾದ ಮೇಲೆ ಜಹನಾರಳು ಹೋಗಿ ತಂದೆಯ ಸಮೀಪ ದಲ್ಲಿ ಸೇರಿಕೊಂಡಳು

ಷಹಜಹಾನನ ಮನಸ್ಸಿನ ಸ್ಥಿತಿಯು ಸರಿಯಾಗಿರಲಿಲ್ಲ. ಅವನು ಎಷ್ಟೋ ಬಾರಿ ಡೆಲ್ಲಿಗೆ ಹೋಗಿ ಔರಂಗಸೇಬನನ್ನು ಶಿಕ್ಷೆ ಮಾಡಬೇಕೆಂದು ಕೋಪದಿಂದ ಹೇಳುತ್ತಿದ್ದನು. ಡೆಲ್ಲಿಗೆ ಹೋಗಿದ್ದರೆ ಏನಾಗುತ್ತಿತ್ತೋ ಅದನ್ನು ಹೇಳುವುದು ಅಸಾಧ್ಯ. ಜಹನಾರಳು ಮಾತ್ರ ಅನೇಕ ತಂತ್ರಗಳನ್ನು ಮಾಡುತ್ತಲೇ ಇದ್ದಳು. ಇಂಥಾ ಸಂದರ್ಭದಲ್ಲಿ ಔರಂಗಸೇಬನಿಗೆ ಡೆಲ್ಲಿಯನ್ನು ಬಿಟ್ಟುಹೋದರೆ ತನಗೆ ಸಿಂಹಾಸನವು ತಪ್ಪಿಹೋಗುತ್ತದೆಂಬ ಭಯವು ಯಾವಾಗಲೂ ಮನಸ್ಸಿನಲ್ಲಿ ಇದ್ದೇ ಇದ್ದಿತು.

ಆದರೆ ಔರಂಗಸೇಬನು ಶಿವಾಜಿಯನ್ನು ಮಾತ್ರ ಮರೆತಿರಲಿಲ್ಲ. ಯಾವಾಗಲೂ ಶಿವಾಜಿಯ ಕಡೆ ಬಾದಷಹನ ಕಣ್ಣು ಇದ್ದೇ ಇದ್ದಿತು. ಷಾ ಆಲಂನನ್ನು ದಕ್ಕನ್ನಿನ ಸರ್ವಾಧಿಕಾರಿಯಾಗಿ ನೇಮಿಸಿ ಕಳುಹಿಸಿದ್ದನು. ಶಿವಾಜಿಯನ್ನು ಹತೋಟಿಯಲ್ಲಿಡಬೇಕೆಂದು ಷಾ ಆಲಂನಿಗೆ ಅನೇಕ ಪತ್ರ ಗಳನ್ನು ಬರೆದು ಕಳುಹಿಸುತ್ತಿದ್ದನು

ಷಾ ಆಲಂನು ವಿದ್ಯಾವಂತ. ಕಲಾಪ್ರೇಮಿ. ಅವನಿಗೆ ಡೆಲ್ಲಿಯಲ್ಲಿ ಮನಶ್ಶಾಂತಿ ಇರಲಿಲ್ಲ. ಅಹಮದ್ ನಗರವು ಡೆಲ್ಲಿಯಿಂದ ದೂರವಾಗಿದ್ದಿತು. ಡೆಲ್ಲಿಯ ದರಬಾರಿನ ಸ್ಥಿತಿಗಳೆಲ್ಲವೂ ಆಲಂನಿಗೆ ಚೆನ್ನಾಗಿ ಮನದಟ್ಟಾಗಿತ್ತು. ಡೆಲ್ಲಿಯಲ್ಲಿ ಖಾಜಿಗಳು, ಉಮ್ರಾಗಳು, ನರಪತಿಗಳು ಎಲ್ಲರೂ ಔರಂಗಸೇಬನ ಪರಮ ವಿರೋಧಿಗಳೆಂದು ಆಲಂನಿಗೆ ಚೆನ್ನಾಗಿ ತಿಳಿದಿತ್ತು. ಔರಂಗಸೇಬನ

ಶಕ್ತಿಯೇನು? ಅವನ ಪ್ರತಾಪವು ಎಂಥದು ಎಂದು ಆಲಂನು ಆಗಾಗ ಚಿಂತಿಸುತ್ತಿದ್ದನು. ಕ್ರೂರಕರ್ಮಿಗಳು, ಹೀನ ಜನರು, ಘೋರ ಪಾತಕಿಗಳು ಔರಂಗಜೇಬನ ಅಂತರಂಗ ಭಕ್ತರೆಂದು ಅವನು ತಿಳಿದುಕೊಂಡಿದ್ದನು. ವಿದ್ಯಾವಂತರಿಗೆ, ಸದ್ಗುಣಿಗಳಿಗೆ ಗೌರವವಿಲ್ಲ; ಕೀಳು ಜನ, ಜಘನ್ಯ ಕೃತ್ಯಗಳಿಗೆ ಹೇಸದ ಜನ, ಇವರುಗಳು ಔರಂಗಜೇಬನ ಪ್ರೇಮಪಾತ್ರರು. ಆಲಂನಿಗೆ ಬಾದಷಹನ ಜೀವನವು ಅಸಹ್ಯಕರವಾಗಿ ಕಾಣುತ್ತಿದ್ದಿತು. ಷಹಜಹಾನನ್ನು ಆಗ್ರಾದಲ್ಲಿ ತನ್ನ ತಂದೆಯು ಬಂಧನದಲ್ಲಿಟ್ಟಿದ್ದಾನೆಂದು ಜ್ಞಾಪಿಸಿಕೊಂಡಾಗ ಆಲಂನ ಮೈ ನಡುಗುತ್ತಿತ್ತು. ಬಾದಷಹನು ಇಂದು ತಂದೆಗೆ ಮಾಡಿದ ಶಾಸ್ತಿಯನ್ನೇ ನಾಳೆ ಮಕ್ಕಳಾದ ನಮಗೂ ಮಾಡಲು ಹೇಸುವುದಿಲ್ಲ ಎಂದುಕೊಳ್ಳುತ್ತಿದ್ದನು. ಒಂದೊಂದು ಬಾರಿ ವ್ಯಾಕುಲಚಿತ್ತನಾಗಿ ಇಂಥಾ ಬಾದಷಹನ ಮಗನಾಗಿ ಹುಟ್ಟುವುದಕ್ಕಿಂತಲೂ ಒಬ್ಬ ಗರೀಬನ ಹೊಟ್ಟೆಯಲ್ಲಿ ಹುಟ್ಟಬಾರದಾಗಿತ್ತೇ—ಎಂದುಕೊಳ್ಳುತ್ತಿದ್ದನು.

ಜಹನಾರಳು ಸಾಮಾನ್ಯಳಲ್ಲ. ಅವಳ ತಂತ್ರವು ಡೆಲ್ಲಿಯಲ್ಲಿ ವ್ಯಾಪಕವಾಗಿಯೇ ಇದ್ದಿತು. ಅವಳ ಆಜ್ಞೆಗೆ ತಲೆಬಾಗುವ ಪ್ರಾಣಗಳನ್ನೊಪ್ಪಿಸುವ ವೀರ ಪುರುಷರು ಡೆಲ್ಲಿಯ ದರ್ಬಾರಿನಲ್ಲಿ ಅನೇಕರಿದ್ದರು. ಸಮಯ ಸಿಕ್ಕಿದಾಗ ಔರಂಗಜೇಬನನ್ನು ಕೊಲೆ ಮಾಡಿಸಬೇಕೆಂದು ಅವಳು ಸಂಕಲ್ಪ ಮಾಡಿದ್ದಳು. ಷಾ ಆಲಂನ ಮೇಲೆ ಜಹನಾರಳ ಪ್ರೀತಿಯಿತ್ತು. ಜಹನಾರಳು ಆಲಂನನ್ನು ಸಿಂಹಾಸನಕ್ಕೇರಿಸಿದರೆ ರಾಜ್ಯವು ಸುಭಿಕ್ಷವಾಗುತ್ತದೆಂದು ಭಾವಿಸಿದ್ದಳು.

ಆಲಂನು ಇದೆಲ್ಲವನ್ನೂ ಬಲ್ಲವನಾಗಿದ್ದನು. ಡೆಲ್ಲಿಯಲ್ಲಿ ಎಂದಾದರೂ ತನ್ನ ತಲೆಯು ನೆಲಕ್ಕೆ ಉರುಳಬಹುದೆಂದು ಅವನ ಸಂಶಯ, ತಂದೆ ಔರಂಗಜೇಬನ ಕೊಲೆಯಾಗಿ ತನಗೆ ಸಿಂಹಾಸನವು ದೊರೆತರೂ ಆ ರಕ್ತಸಿಕ್ತ ಸಿಂಹಾಸನವು ಬೇಡವೆಂದು ಅವನ ನಿಶ್ಚಯವಿತ್ತು. ಇದೆಲ್ಲ ಪರಿಸ್ಥಿತಿಗಳಿಂದ ಅವನು ಅಹಮದ್ ನಗರವೇ ಸ್ವರ್ಗಲೋಕವೆಂದು ಭಾವಿಸಿದ್ದನು.

ಅವನಿಗೆ ನಾಲ್ವರು ಪತ್ನಿಯರಿದ್ದರು. ಅವರಲ್ಲೆಲ್ಲಾ ಮೆಹರುನ್ನೀಸಳೇ ಆಲಂಗೆ ಅತ್ಯಂತ ಪ್ರೇಮಪಾತ್ರಳು. ಮೆಹರುನ್ನೀಸಳು ತನ್ನ ಅಕ್ಕತಂಗಿಯು

ಜೊತನೆ ಅತ್ಯಂತ ಪ್ರೇಮದಿಂದ ನಡೆದುಕೊಳ್ಳುತ್ತಿದ್ದಳು.ಅವರು ಒಂದೊಂದು ಬಾರಿ ಆಲಂನ ಮೇಲೆ ಕೋಪಗೊಂಡು ತಿರಸ್ಕರಿಸಿದರೂ ಮೆಹರುನ್ನೀಸಳನ್ನು ವಿಶ್ವಾಸ ಗೌರವಗಳಿಂದ ಕಾಣುತ್ತಿದ್ದರು. ಆ ಸವತಿಯರೇ ಮೆಹರುನ್ನೀಸಳು ಡೆಲ್ಲಿಯ ಮಹಾರಾಣಿಯಾಗಲು ಅರ್ಹಳು, ಎಂದು ಮುಕ್ತಕಂಠದಿಂದ ಹೊಗಳುತ್ತಿದ್ದರು.

ಷಾ ಆಲಂನು ದಕನ್ನಿನ ಸರ್ವಾಧಿಕಾರಿಯಾದ ಮೇಲೆ ಶಿವಾಜಿಯ ಆಸ್ಥಾನಕ್ಕೆ ತನ್ನ ಕಡೆಯ ಮುತ್ಸದ್ದಿಯನ್ನು ಕಳುಹಿಸಿ ಕೊಟ್ಟಿದ್ದನು.

ಆ ಮುತ್ಸದ್ದಿಯು ಬ್ರಾಹ್ಮಣ. ಅವನ ಹೆಸರು ಜಗನ್ನಾಥರಾಯ. ಜಗನ್ನಾಥರಾಯನು ಪುರಂಧರಘಡಕ್ಕೆ ಬಂದು ಶಿವಾಜಿಯ ಭೇಟಿ ಮಾಡಿದನು.

ಶಿವಾಜಿ ಆ ಮೊಗಲ್ ರಾಯಭಾರಿಯನ್ನು ಅತ್ಯಂತ ಗೌರವದಿಂದ ಕಂಡು ಮನ್ನಣೆ ಮಾಡಿದನು. ರಾಜಯೋಗ್ಯವಾದ ಔತಣಗಳಿಂದಲೂ ಉಪಚಾರಗಳಿಂದಲೂ ಜಗನ್ನಾಥರಾಯನನ್ನು ಗೌರವಿಸಿ ಅವನ ಸ್ನೇಹವನ್ನು ಸಂಪಾದಿದನು. ಆ ರಾಯಭಾರಿಯನ್ನು ಕರೆದುಕೊಂಡು ಹೋಗಿ ತನ್ನ ಕೋಟೆಗಳೆಲ್ಲವನ್ನೂ ತೋರಿಸಿದನು. ಜಾವಳಿಯ ಅರಮನೆಯಲ್ಲಿ ಜಗನ್ನಾಥರಾಯನನ್ನು ಇಳಿಸಿ ರಾಜಯೋಗ್ಯವಾದ ಮರ್ಯಾದೆಗಳನ್ನು ಮಾಡಿಸಿದನು.

ಅಲ್ಲಿ ಬಾಜೀಪ್ರಭುವು ಅಧಿಕಾರಿಯಾಗಿದ್ದನು. ಹಿಂದೆ ಮೋರೆ ಚಂದ್ರರಾಯರ ರಾಜ್ಯದಲ್ಲಿಯೂ ಬಾಜೀಪ್ರಭುವು ಸೇನಾಧಿಪತಿಯಾಗಿದ್ದನು. ಅವನನ್ನು ನೋಡಿ ಜಗನ್ನಾಥರಾಯನು ಅತ್ಯಂತ ಮೆಚ್ಚಿಕೊಂಡನು. "ಬಾಜೀಪ್ರಭು, ನೀನು ಮಹಾಪರಾಕ್ರಮಿಯೆಂದು ಕೇಳಿದ್ದೇನೆ. ..ಅಹಮದ್ ನಗರಕ್ಕೆ ಬಂದರೆ ನಿನಗೆ ದೊಡ್ಡ ಅಧಿಕಾರವನ್ನು ಕೊಡಿಸುತ್ತೇನೆ" ಎಂದು ಹೇಳಿದನು.

"ಶಿವಾಜಿಯನ್ನು ಒಪ್ಪಿಸುವ ಭಾರವು ನನ್ನದಾಗಿರಲಿ" ಎಂದು ಭರವಸೆ ಇತ್ತನು. ಶಿವಾಜಿಯ ಆ ಕೋಟೆಗಳು, ಆ ಕೋಟೆಗಳಲ್ಲಿ ನಿರ್ಮಾಣ ಮಾಡಿಸಿದ್ದ ದೇವಾಲಯಗಳು ಅವುಗಳನ್ನೆಲ್ಲಾ ನೋಡಿ ಜಗನ್ನಾಥರಾಯನು

ಮೆಚ್ಚಿಕೊಂಡನು.ಎಲ್ಲವನ್ನೂ ಪೂರೈಸಿಕೊಂಡು ಶಿವಾಜಿಯು ಪುರಂದರಘಡಕ್ಕೆ ಜಗನ್ನಾಥರಾಯರನ್ನು ಕರೆತಂದು ಅವನೊಡನೆ ಆಪ್ತಾಲೋಚನೆಮಾಡಿದನು. ಶಿವಾಜಿಯ ಸಾಹಸವನ್ನೂ ದೈವಭಕ್ತಿಯನ್ನೂ ನೋಡಿ ಜಗನ್ನಾಥರಾಯನು ಮೆಚ್ಚಿಕೊಂಡಿದ್ದನು.

ಶಿವಾಜಿಯು "ಜಗನ್ನಾಥರಾವ್, ನೀನು ಮೊಗಲ್ ಸರ್ವಾಧಿಕಾರಿಯ ಕಡೆಯಿಂದ ಬಂದಿರುವ ರಾಯಭಾರಿ. ಆ ಪ್ರಭುಭಕ್ತಿಯು ಇರಬೇಕು. ಬ್ರಾಹ್ಮಣಜಾತಿಯಲ್ಲಿ ಹುಟ್ಟಿದವನು. ಧರ್ಮಶ್ರದ್ಧೆಯು ಇರಬೇಕು. ನಾನು ಈ ದುರ್ಗಗಳನ್ನೆಲ್ಲಾ ಹಿಂದೂ ಧರ್ಮದ ಉದ್ಧಾರಕ್ಕಾಗಿ ನಿರ್ಮಾಣ ಮಾಡಿದ್ದೇನೆ. ನಾನು ಸಂತ ತುಕಾರಾಂ ಭಕ್ತನಾಗಿದ್ದೇನೆ. ತುಕಾರಾಂರು ಪರಲೋಕಯಾತ್ರೆ ಮಾಡಿದ್ದಾರೆ. ಆದರೂ ಅವರು ನನಗೆ ಪ್ರತ್ಯಕ್ಷದೇವರು. ಈ ಕೋಟೆಗಳನ್ನೂ ರಾಜ್ಯವನ್ನೂ ಮೊಗಲರಿಗೆ ಒಪ್ಪಿಸಿ, ನಾನು ಪಂಡರಪುರದಲ್ಲಿ ಭಕ್ತರ ಗೋಷ್ಠಿಯಲ್ಲಿ ಭಕ್ತನಾಗಿರಬೇಕೆಂದು ಬಯಸಿದ್ದೇನೆ. ಈ ಕೋಟೆಗಳೆಲ್ಲಾ ಮೊಗಲರಿಗೆ ಒಪ್ಪಿಸಿಬಿಡಬೇಕೆ? ಹಿಂದೂ ಧರ್ಮವು ಉಳಿಯಬೇಕೆ? ಅದನ್ನು ನೀನು ಅಂತರಾತ್ಮ ಸಾಕ್ಷಿಯಾಗಿ ನಿಶ್ಚಯಿಸಿಕೋ. ಬಾದಷಹನು ನಮ್ಮ ತಂದೆಯನ್ನು ಬಂಧನದಿಂದಬಿಡಿಸಿ ನನ್ನನ್ನು ಋಣಿಯಾಗಿ ಮಾಡಿದ್ದಾನೆ. ಆದರೆ ದುರ್ದೈವವಶಾತ್ ಆ ಬಾದಷಹನೇ ಬಂಧನದಲ್ಲಿದ್ದಾನೆ ಆ ಮಾತುಗಳಿಂದ ಈಗೇನು ಫಲ? ನಿನಗೆ ನನ್ನ ಪರವಾದ ಎಲ್ಲ ಅಧಿಕಾರಗಳನ್ನೂ ಕೊಡುತ್ತೇನೆ. ಸರ್ವಾಧಿಕಾರಿ ಆಲಂನಿಗೆ ತಿಳಿಸಿ, ನೀನೇ ಇತ್ಯರ್ಥ ಮಾಡಿಬಿಡು. ನಿನ್ನ ಜೊತೆಯಲ್ಲಿ ಬಾಜೀ ಪ್ರಭುವನ್ನು ಕಳುಹಿಸಿಕೊಡುತ್ತೇನೆ. ನೋಡು ಜಗನ್ನಾಥರಾವ್, ಬಾದಷಹರೂ ನಾನೂ ಇಲಿ ಬೆಕ್ಕುಗಳಂತೆ ಕಾದಾಡಬಾರದು. ಹುಡುಗರಂತೆ ಕಣ್ಣಾಮುಚ್ಚಾಲೆ ಆಟವನ್ನೂ ಆಡಬಾರದು. ಸ್ನೇಹವೆಂದರೆ ನಿಜವಾದ ಸ್ನೇಹ. ವಿರೋಧವೆಂದರೆ ಪ್ರತ್ಯಕ್ಷ ವಿರೋಧ. ಅದು ಯುದ್ಧ. ಮರಾಠಾ ಸೈನ್ಯವನ್ನು ನೀನು ಕಣ್ಣಾರ ಕಂಡಿದ್ದೀಯೇ. ನಲವತ್ತು ಸಾವಿರ ಕುದುರೆಯ ಬಲವಿದೆ. ನಲವತ್ತು ಸಾವಿರ ಕಾಲಾಳು ಬಲವಿದೆ. ಅಸ್ತ್ರಶಸ್ತ್ರಗಳಿವೆ, ಫಿರಂಗಿಗಳಿವೆ. ಇವೆಲ್ಲವನ್ನೂ ನೀನು ಕಣ್ಣಾರ ಕಂಡಿದ್ದೀಯೆ. ನಮ್ಮ ಸೇನಾಧಿಪತಿಗಳೆಲ್ಲರೂ

ಯುದ್ಧಕ್ಕೆ ಸಿದ್ಧವಾಗಿದ್ದಾರೆ. ಸ್ನೇಹವೆಂದರೆ ನನ್ನೊಡನೆ ಸ್ನೇಹವಲ್ಲ. ಈ ದಕನ್ನಿನಲ್ಲಿ ಹಿಂದುಗಳ ಕೂದಲು ಕೊಂಕಕೂಡದು. ಹಿಂದೂ ದೇವಾಲಯಗಳಿಗೆ ಆಪತ್ತು ಬರಕೂಡದು. ಅಂಥಾ ರಕ್ಷಣೆಯನ್ನು ಕೊಟ್ಟರೆ ಅದೇ ಸ್ನೇಹಹಸ್ತದಿಂದ ಈ ಕೋಟೆಗಳೆಲ್ಲವನ್ನೂ ಬಾದಷಹರಿಗೆ ಒಪ್ಪಿಸುತ್ತೇನೆ. ವೈಕುಂಠದಲ್ಲಿರುವ ಸಂತ ತುಕಾರಾಂರ ಮೇಲೆ ಆಣೆಯಿಟ್ಟು ಹೇಳಿದ್ದೇನೆ. ದೇವರು ಪ್ರೇರಣೆಮಾಡಿದಂತೆ ಮಾಡು" ಎಂದು ಹೇಳಿದನು.

ಬಾಜೀ ಪ್ರಭುವನ್ನು ಜಗನ್ನಾಥರಾಯನೊಡನೆ ಕಳುಹಿಸಿಕೊಟ್ಟನು. ಅನರ್ಘ್ಯವಾದ ಖಿಲ್ಲತ್ತುಗಳನ್ನು ಸರ್ವಾಧಿಕಾರಿಗೆ ಕಳುಹಿಸಿಕೊಟ್ಟನು.

ಜಗನ್ನಾಥರಾಯನು ಸರ್ವಾಧಿಕಾರಿಯ ಸನ್ನಿಧಾನಕ್ಕೆ ಹಿಂತಿರುಗುವ ವೇಳೆಗೆ ಪೂರ್ಣ ಹದಿನಾರಾಣೆ ಹಿಂದುವಾಗಿ ಬಿಟ್ಟಿದ್ದನು. ಅವನು ತುಕಾರಾಂನ ಹೆಸರು ಕೇಳಿದ್ದನು. ನಡೆ–ನುಡಿ, ಆಚಾರ-ವ್ಯವಹಾರಗಳಲ್ಲಿ ಶಿವಾಜಿಯು ತುಕಾರಾಂನಿಗೆ ಸಮಾನನಾಗಿದ್ದಾನೆಂದು ಜಗನ್ನಾಥರಾಯನು ಭಾವಿಸಿದನು. ಇಷ್ಟು ರಾಜವೈಭವಗಳಿದ್ದು, ಇಷ್ಟು ಸೇನಾಬಲವಿದ್ದು ಸಂತನಂತೆ ಇರುವುದು ಅತಿ ಕಷ್ಟವೆಂದು ಜಗನ್ನಾಥರಾಯನು ಚಿಂತಿಸಿದನು. ಅವನು ಷಾ ಅಲಂನ ಭೇಟಿ ಮಾಡಿ ತನ್ನ ರಾಯಭಾರದ ವಿವರಗಳನ್ನೆಲ್ಲಾ ಅರಿಕೆ ಮಾಡಿದನು.

"ಸರ್ವಾಧಿಕಾರಿಗಳೇ, ಶಿವಾಜಿಯು ಸಾಮಾನ್ಯನಲ್ಲ. ಅವನು ಯಾವುದನ್ನೂ ಬಚ್ಚಿಡಲಿಲ್ಲ. ಪ್ರತಿಯೊಂದು ಕೋಟೆಗೂ ನನ್ನನ್ನು ಕರೆದುಕೊಂಡು ಹೋಗಿ ತೋರಿಸಿದನು. ಆ ಮರಾಠಾ ಸೈನ್ಯಗಳನ್ನು ತೋರಿಸಿದನು. ಎಲ್ಲ ಅಧಿಕಾರಿಗಳನ್ನೂ ಪರಿಚಯ ಮಾಡಿಸಿದನು. ಈ ಎಲ್ಲ ಕೋಟೆಗಳನ್ನೂ ಒಂದೇ ರಾಯಸದಿಂದ ಮೊಗಲ್ ಸಾಮ್ರಾಟರಿಗೆ ಒಪ್ಪಿಸಿ ತಾನು ಪಂಡರಪುರಕ್ಕೆ ಹೋಗಿ ಪಂಡರೀನಾಥನ ಸೇವಿಯಲ್ಲಿ ಜನ್ಮ ಕಳೆಯುವುದಾಗಿ ಹೇಳಿದನು. ಒಂದೇ ಒಂದು ಷರತ್ತು. ಹಿಂದುಗಳಿಗೆ ನೋವಾಗಬಾರದು. ಅವರ ದೇವಾಲಯಗಳಿಗೆ ಆಪತ್ತು ಬರಕೂಡದು. ಇಂಥಾ ವಾಗ್ದಾನವನ್ನು ಶಿವಾಜಿಯು ಕೇಳುತ್ತಾನೆ. ಮೊಗಲರೊಡನೆ ಯುದ್ಧ ಮಾಡುವುದಕ್ಕಿಂತಲೂ

ಆ ವಾಗ್ದಾನಕ್ಕೆ ಹೆಚ್ಚು ಬೆಲೆಯಿದೆಯೆಂದು ಅವನು ನಂಬುತ್ತಾನೆ. ನಾನು ಹಿಂದೂ ಎಂದು ನೀವು ಸಂದೇಹ ಪಡಬೇಡಿರಿ. ಮೊಗಲ್ ಸಾಮ್ರಾಟರ ವಾಗ್ದಾನವೆಂದರೆ ಶಿವಾಜಿಗೆ ಕೊಡುವ ವಾಗ್ದಾನವಲ್ಲ. ಮಹಾರಾಷ್ಟ್ರ ಜನಕ್ಕೆ ಕೊಡುವ ಭರವಸೆಯಿಲ್ಲ. ಇಡೀ ದಖನ್ನಿನಲ್ಲಿರುವ ಹಿಂದೂ ಜನಾಂಗಕ್ಕೆ ಕೊಡುವ ಭರವಸೆ. ಅದು ಅಂತರಂಗದ ಒಪ್ಪಂದವಲ್ಲ. ಜಗತ್ತಿನಲ್ಲಿ ಸಾರಿ ಹೇಳುವ ಘೋಷಣೆ. ತಮಗೆ ಯಾವುದು ಒಪ್ಪಿಗೆಯಾದರೆ ಅದನ್ನು ಮಾಡಬಹುದು. ಎಲ್ಲವನ್ನೂ ಹೇಳಿದ್ದೇನೆ. ಇನ್ನು ಒಂದೇ ಒಂದು ಮಾತಿದೆ ದಖನ್ನಿನಲ್ಲಿರುವ ಮೊಗಲ್ ಸೈನ್ಯವನ್ನೆಲ್ಲಾ ಜಮಾಯಿಸಿ ಶಿವಾಜಿಯ ಮೇಲೆ ಯುದ್ಧ ಹೂಡಿದರೂ ನಾವು ಅವನನ್ನು ಗೆಲ್ಲುವುದಕ್ಕಾಗುವುದಿಲ್ಲ. ಮರಾಠಾ ಸೈನಿಕನಾಗಲೀ, ಸೇನಾಧಿಪತಿಯಾಗಲೀ ಒಬ್ಬನೂ ಮದ್ಯಪಾಯಿಯಲ್ಲ. ಸ್ತ್ರೀಯರ ಕಡೆಗೆ ಕಣ್ಣೆತ್ತಿ ನೋಡುವವರಲ್ಲ. ಯಾವನಾದರೂ ಈ ಧರ್ಮವನ್ನು ಮೀರಿದರೆ ಮಹಾರಾಷ್ಟ್ರದಲ್ಲಿ ಅವನ ಶಿರಚ್ಛೇದವಾಗುತ್ತದೆ. ನೀವೇ ಯೋಚಿಸಿ ತೀರ್ಮಾನಿಸಿರಿ. ಶಿವಾಜಿಯ ಸೇನಾಧಿಪತಿಯೊಬ್ಬನನ್ನು ಕರೆತಂದಿದ್ದೇನೆ. ಅವನ ಹೆಸರು ಬಾಜೀಪ್ರಭು. ನೀವು ಅವನನ್ನೇ ಸನ್ನಿಧಾನಕ್ಕೆ ಕರೆಸಿಕೊಂಡು ಮಾತುಕಥೆಗಳನ್ನು ನಡೆಸಬಹುದು. ತಮ್ಮ ಅಪ್ಪಣೆಯೇ ಆಖೈರು ತೀರ್ಮಾನ ಅದನ್ನು ಆ ಸೇನಾಧಿಪತಿಗೆ ಬಿಚ್ಚು ಮಾತುಗಳಿಂದ ಹೇಳಿ ಕಳುಹಿಸಬಹುದು."

ಷಾ ಆಲಂನು ಎರಡು ಮೂರು ದಿನಗಳು ಅಹೋರಾತ್ರಿ ಯೋಚನೆ ಮಾಡಿದನು. "ಶಿವಾಜಿಯು ಹೇಳಿ ಕಳುಹಿಸಿರುವ ಮಾತುಗಳು ನಿಜವೇ –ಸುಳ್ಳೇ ? ಒಂದು ಪಕ್ಷ ನಿಜವೆಂದುಕೊಳ್ಳೋಣ. ಬಾದಷಹನಿಂದ ಆಜ್ಞೆಯನ್ನು ತರಿಸಿಕೊಡುವುದು ಸಾಧ್ಯವೆಂದುಕೊಳ್ಳೋಣ. ಇಂಥಾ ಷರತ್ತನ್ನು ಬಾದಷಹನು ನಡೆಸುವನೆಂಬ ನಂಬಿಕೆ ನನಗೇ ಇಲ್ಲ. ಇನ್ನು ಶಿವಾಜಿಯು ಸುಳ್ಳು ಹೇಳುತ್ತಾನೆಂದು ನಾನು ಭಾವಿಸುವುದು ಹೇಗೆ ? ಶಿವಾಜಿಯ ಮಾತುಗಳು ಚಿನ್ನದಷ್ಟು ಚೊಕ್ಕನಾಗಿವೆ. ಅದು ಇಡೀ ಭಾರತವರ್ಷದಲ್ಲಿ ಹಿಂದೂ ಮುಸ್ಲಿಂಮರ ನಿಜವಾದ ಸೌಹಾರ್ದ. ಅಂಥಾ ಕಾಲವು ಬಂದರೆ ಅದು ಮೊಗಲ್ ಸಾಮ್ರಾಟರಿಂದಲೇ ಸಿದ್ಧಿಸಿದರೆ ಸೂರ್ಯಚಂದ್ರರು ಇರುವವರೆಗೆ ಮೊಗಲ್ ಸಾಮ್ರಾಜ್ಯವು ಬೆಳಗುತ್ತದೆ" ಎಂದುಕೊಂಡನು.

ಉತ್ತರ ಕ್ಷಣದಲ್ಲಿಯೇ ನಿರಾಶನಾಗಿ ನಿಟ್ಟುಸಿರುಬಿಟ್ಟನು.

ಮರುದಿನ ಪ್ರಾತಃಕಾಲ ಬಾಜೀ ಪ್ರಭುವನ್ನು ಕರೆಸಿ ಮರ್ಯಾದೆಯಿಂದ ಮಾತನಾಡಿಸಿದನು.

"ಬಾಜೀ ಪ್ರಭು, ನೀನು ಒಳ್ಳೆಯ ಸರದಾರನಂತೆ ಕಾಣುತ್ತೀ. ನಿನ್ನಂತಹ ಸೇನಾಧಿಪತಿಗಳಿರುವುದರಿಂದಲೇ ಶಿವಾಜೀ ರಾಜನು ಇಷ್ಟು ಹೆಸರು ಪಡೆದಿದ್ದಾನೆ. ನಿಮ್ಮಂಥ ತರುಣರೆಲ್ಲರೂ ಸೇರಿ ಈ ಗಡಿ ಪ್ರದೇಶಗಳನ್ನು ಭದ್ರ ಪಡಿಸಿದ್ದೀರಿ. ಇಲ್ಲಿದ್ದ ಅರಾಜಕತೆಯೂ ಈಗಿಲ್ಲ. ಉತ್ತರಕ್ಕೆ ಮೊಗಲ್ ಸಾಮ್ರಾಜ್ಯ. ದಕ್ಷಿಣಕ್ಕೆ ಆದಿಲ್‌ಷಾಹೀ ರಾಜ್ಯ. ಈ ನಡುವೆ ಈ ಗಡಿ ರಾಜ್ಯವು ಅನಾಯಕವಾಗಿ ಅಭದ್ರವಾಗಿ ಕಾಡು ಮೃಗಗಳಿಂದ ತುಂಬಿತ್ತು. ಜನರೂ ಕಾಡುಮೃಗಗಳಂತೆ ವರ್ತಿಸುತ್ತಿದ್ದರು. ಇಂಥಾ ಜನರನ್ನು ಉದ್ಧಾರ ಮಾಡಿ ನೀವುಗಳು ಭದ್ರತೆಯನ್ನು ಕಾಪಾಡಿದ್ದೀರಿ. ಇದು ನಮಗೆಷ್ಟೋ ಸಂತೋಷ ಪ್ರದವಾಗಿದೆ. ನಿಮ್ಮ ಶಿವಾಜೀ ರಾಜರ ಪತ್ರವು ನಮ್ಮ ಮನಸ್ಸಿಗೆ ಅತ್ಯಂತ ಒಪ್ಪಿಗೆಯಾಗಿದೆ. ಅದನ್ನು ಬಾದಷಹರಿಗೆ ಕಳುಹಿಸಿಕೊಡುತ್ತೇವೆ. ನಿಮ್ಮ ಕೋಟೆಗಳನ್ನೂ ರಾಜ್ಯವನ್ನೂ ನಮಗೊಪ್ಪಿಸುವ ಮಾತು ಬೇಡ. ನಾನು ಧೈರ್ಯದಿಂದ ಹೇಳುತ್ತೇನೆ. ನಿಮ್ಮ ದೇವಾಲಯಗಳು ಉಳಿಯಬೇಕಾದರೆ ನಿಮ್ಮ ರಾಜರೇ ಇರಬೇಕು. ಅವರಿಗೆ ರಾಜ್ಯ–ಕೋಶ–ಸೈನ್ಯಗಳು ಇರಬೇಕು. ಇಲ್ಲದಿದ್ದರೆ ನಿಮ್ಮ ಜನರೇ ಹಾಳುಮಾಡಿಬಿಡಬಹುದು. ಬಾದಷಹರು ರಕ್ಷಣೆಯ ಅಭಿವಚನವನ್ನಿತ್ತರೂ ಮೊಗಲ್ ಸೈನಿಕರು ಅವುಗಳನ್ನು ನಾಶ ಮಾಡಬಹುದು. ಕೈ ಮಿಂಚಿಹೋದ ಮೇಲೆ ಯಾರೇನು ಮಾಡಲಾದೀತು? ಈ ಗಡಿನಾಡಿನ ರಾಜ್ಯವು ನಿಮ್ಮದಾಗಿಯೇ ಇರಲಿ, ನೀವೇ ರಾಜರಾಗಿರಿ, ಮೊಗಲ್ ಸಾಮ್ರಾಜ್ಯಕ್ಕೆ ಅಧೀನರೆಂದು ಅಂಕಿತಮಾಡಿಕೊಂಡರೆ ಸಾಕು. ಮಾಮೂಲಿನಂತೆ ಕಪ್ಪಕಾಣಿಕೆಗಳನ್ನು ಕೊಡುತ್ತಾ ಬಂದರೆ ಸಾಕು. ಬಾಜೀ ಪ್ರಭು, ಮತ್ತೊಂದು ಮಾತಿದೆ. ಅದು ಅಂತರಂಗದ ಮಾತು. ಸುಮಾಸು ಪತ್ರದ ಹೆಗ್ಗುರುತು. ನಾವು ನಿಮ್ಮ ಶಿವಾಜೀ ರಾಜರ ಗುಣಶೀಲಗಳನ್ನು ಬಹಳವಾಗಿ ಮೆಚ್ಚಿಕೊಂಡಿದ್ದೇವೆ. ಅವರು ನಮ್ಮ ಆತ್ಮೀಯರೆಂದು ಭಾವಿಸುತ್ತೇವೆ. ಯಾವಾಗಲೂ ಈ ಸ್ನೇಹ, ವಿಶ್ವಾಸ, ಆತ್ಮೀಯತೆಗಳು ಶಾಶ್ವತವಾಗಲಿ ಎಂದು ಆಶಿಸುತ್ತೇವೆ. ಶಿವಾಜೀ ರಾಜನು ನಮ್ಮ ಅಂತರಂಗ ಮಿತ್ರನೆಂದು

ನಾನು ಭಾವಿಸಿದ್ದೇನೆ. ಈ ಮಾತುಗಳನ್ನು ಖುರಾನಿನ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಇದನ್ನು ನಿಮ್ಮ ರಾಜನಿಗೆ ಸ್ಪಷ್ಟವಾಗಿ ತಿಳಿಸಿರಿ. ಒಂದು ಬಾರಿ ನಮ್ಮ ರಾಜಧಾನಿಗೆ ಬಂದು ದರ್ಶನವಿತ್ತರೆ ಬಹಳ ಸಂತೋಷಪಡುತ್ತೇನೆಂದು ತಿಳಿಸಿರಿ. ಅಂಥಾ ವೀರನನ್ನು ಒಮ್ಮೆ ಪ್ರತ್ಯಕ್ಷ ಬೇಟಿ ಮಾಡಬೇಕೆಂದು ನಮ್ಮ ಆಸೆಯಿದೆಯೆಂದು ಹೇಳಿರಿ” ಎಂದು ಹೇಳಿ ಬಾಜೀಪ್ರಭುವಿಗೆ ಅರ್ಘ್ಯವಾದ ದರ್ಬಾರಿನ ಖಿಲ್ಲತ್ತುಗಳನ್ನು ಕೊಡಿಸಿ ಕಳುಹಿಸಿಕೊಟ್ಟನು.

ಪುರಂಧರಘಡದಲ್ಲಿ ಶಿವಾಜಿಯು ಸಂಗಡಿಗರೆಲ್ಲರೂ ಕುಳಿತು ಸಮಾಲೋಚನೆ ಮಾಡುತ್ತಿರುವ ಸಮಯಕ್ಕೆ ಬಾಜೀಪ್ರಭುವು ಅಹಮದ್‌ನಗರದಿಂದ ಹಿಂತಿರುಗಿ ಬಂದು ಅಲ್ಲಿಯ ವಿದ್ಯಮಾನಗಳೆಲ್ಲವನ್ನೂ ವಿಶದವಾಗಿ ಹೇಳಿದನು. ಯುವರಾಜ ಷಾ ಆಲಂನು ಆಡಿದ ಮಾತುಗಳೆಲ್ಲವನ್ನೂ ಅಕ್ಷರಶಃ ವಿವರಿಸಿದನು. ಸಂಗಡಿಗರೆಲ್ಲರೂ ಮೌನವಾಗಿ ಕೇಳುತ್ತಿದ್ದು ಶಿವಾಜಿಯ ಕಡೆ ತಿರುಗಿ ನೋಡಿದರು.

ನೇತಾಜಿಯು “ಶಿವಾಜಿ ಪ್ರಭು, ಈ ವಿದ್ಯಮಾನಗಳನ್ನೆಲ್ಲಾ ಕೇಳಿದಿಷ್ಟೆ. ನೀವೇನು ಹೇಳುವಿರಿ ?” ಎಂದು ಪ್ರಶ್ನೆಮಾಡಿದನು.

ಸಂಗಡಿಗರ ಮನಸ್ಸಿನಲ್ಲೆಲ್ಲಾ ಅದೇ ಪ್ರಶ್ನೆಯು ಮಿಡಿಯುತ್ತಿದ್ದಿತು.

ಶಿವಾಜಿಯು ಮೃದು ನುಡಿಗಳಿಂದ “ಮಾತುಗಳೆಲ್ಲವೂ ಚೆನ್ನಾಗಿವೆ. ಮಧುರವಾಗಿವೆ. ಷಾ ಆಲಂನ ವಿಚಾರವಾಗಿ ಬಹಳವಾಗಿ ಕೇಳಿದ್ದೇನೆ. ಅವನು ವಿದ್ಯಾವಂತ. ಸರಳ ಸ್ವಭಾವದವನು. ಇವೆಲ್ಲವೂ ಬಲು ಚೆನ್ನಾಗಿವೆ ಆದರೆ ರಾಜಕೀಯವು ಅಂಥದಲ್ಲ. ಅಗ್ನಿ ಕುಂಡದಲ್ಲಿ ತುಪ್ಪವನ್ನು ಸುರಿದರೆ ಬೆಂಕಿಯು ಆರುವುದಿಲ್ಲ. ಅಗ್ನಿಯು ಜ್ವಾಲಮಾಲಕುಲವಾಗಿ ಮೇಲೆ ಮೇಲಕ್ಕೆ ಏಳುತ್ತದೆ. ಅದೇ ರಾಜಕೀಯದ ರಹಸ್ಯ. ಮೊಗಲರ ಅಗ್ನಿಕುಂಡದಲ್ಲಿ ನಮ್ಮ ಮಾತುಗಳು ತುಪ್ಪವನ್ನು ಸುರಿದಂತೆ. ನಾವು ನಮ್ಮ ಬಿಕ್ಕಟ್ಟನ್ನು ಬಿಟ್ಟುಕೊಡಬಾರದು. ಈಗ ಸಮಯ ಸಾಧನೆಯು ಅನುಕೂಲವಾದಂತಾಯಿತು. ಷಾ ಆಲಂನ ಒಳ್ಳೆಯತನವು ನಮಗೆ ಅನುಕೂಲವಾಯಿತು. ಡೆಲ್ಲಿ ಬಾದಷಹ ಔರಂಗಜೇಬನ ಕ್ರೌರ್ಯವನ್ನು ನಾವು ಮರೆಯಬಾರದು. ಅವನು ಬದುಕಿರುವವರೆಗೆ ನಮಗೆ ನಿಸ್ತಾರವಿಲ್ಲ. ಸದ್ಯಕ್ಕೆ ನಮ್ಮ ಆಲೋಚನೆಯು ಫಲಿಸಿದಂತಾಯಿತು” ಎಂದು ಹೇಳಿದನು.

ರಾಮಚಂದ್ರನು ಅವರೆಲ್ಲೆಲ್ಲಾ ಬುದ್ಧಿವಂತನೆನಿಸಿಕೊಂಡಿದ್ದವನು. ಅವನು "ಶಿವಾಜಿಯ ಮಾತು ಸತ್ಯ. ತುರುಕರನ್ನು ಯಾವಾಗಲೂ ನಾವು ನಂಬಬಾರದು. ಅವರ ಸ್ನೇಹವೆಂದರೆ ಅದು ಸ್ನೇಹವಲ್ಲ. ತುರುಕರು ನಮ ಗಿಂತಲೂ ಬಲು ಗಟ್ಟಿಗರೆಂದುಕೊಂಡಿದ್ದಾರೆ. ನಮ್ಮ ಮುಂದೆ ಎರಡು ಮಹಾ ಯುದ್ಧಗಳು ಕಾದಿವೆ. ಒಂದು ಕಡೆ ಬಿಜಾಪುರದವರೊಡನೆ ಯುದ್ಧ, ಮತ್ತೊಂದು ಕಡೆ ಪ್ರಚಂಡ ಸೈನ್ಯದಿಂದ ಕೂಡಿದ ಮೊಗಲ್ ಸಾಮ್ರಾಟರೊಡನೆ ಯುದ್ಧ. ಇವೆರಡು ಅಗ್ನಿ ಪರ್ವತಗಳನ್ನು ಅಣಗಿಸಿದಲ್ಲದೇ ನಮ್ಮ ರಾಜ್ಯಕ್ಕೆ ಶಾಂತಿಯಿಲ್ಲ. ನಮಗೆಷ್ಟು ಶಕ್ತಿಯಿದ್ದರೂ ಉಪಾಯದ ಮಾರ್ಗವೇ ಮೇಲು. ಬೀಸುವ ದೊಣ್ಣೆ ತಪ್ಪಿದರೆ ಸಾವಿರ ವರ್ಷ ಆಯಸ್ಸು ಎಂಬ ಗಾದೆಯು ಸುಳ್ಳಲ್ಲ. ಈ ಆಲಂನ ಸ್ನೇಹದ ಹೆಸರಿನಲ್ಲಿ ಒಂದು ಅಪಾಯವನ್ನು ಸ್ವಲ್ಪ ದೂರವಿಡಬಹುದು. ಮತ್ತೊಂದು ಬಿಜಾಪುರ. ನಮ್ಮ ಮೇಲೆ ದೈವಾನು ಗ್ರಹವಿದೆಯೆಂಬುದಕ್ಕೆ ಇದೊಂದೇ ಶುಭಸೂಚನೆ. ಮೊಗಲರೂ, ಬಿಜಾಪುರ ದವರೂ ಎಂದೆಂದಿಗೂ ಒಂದಾಗುವುದಿಲ್ಲ" ಎಂದು ಹೇಳಿದನು.

ಎಲ್ಲರೂ "ರಾಮಚಂದ್ರನ ಮಾತು ಸತ್ಯ. ಈ ಮಾತುಗಳು ನನ್ನನ್ನು ಕಾಯುವಾ ರಕ್ಷಣಾ ಮಂತ್ರಗಳು" ಎಂದು ಹೇಳಿದರು.

ಶಿವಾಜಿಯು "ಸದ್ಯಕ್ಕೆ ಯುದ್ಧವಿಲ್ಲವೆಂದು ನೀವೆಲ್ಲರೂ ಒಪ್ಪುತ್ತೀ ರಿಷ್ಟೆ ?" ಎಂದು ಪ್ರಶ್ನೆ ಮಾಡಿದನು.

ಎಲ್ಲರೂ ತಲೆದೂಗಿದರು.

ಶಿವಾಜಿಯು "ನಮ್ಮ ಸೈನ್ಯಗಳು, ಕೋಟೆ ಕೊತ್ತಲುಗಳು, ವೀರರಾದ ನೀವು–ಇದಿಷ್ಟರಿಂದಲೇ ಡೆಲ್ಲಿ ಸಾಂಮ್ರಾಟರನ್ನು ಬಗ್ಗಿಸಲು ಸಾಧ್ಯವಿಲ್ಲ ಹಿಂದೂಧರ್ಮವು ಉಜ್ಜ್ವಲ ರೂಪವನ್ನು ತಾಳಿದಲ್ಲದೇ ನಮ್ಮ ಧ್ಯೇಯಸಾಧನೆ ಯಾಗುವುದಿಲ್ಲ. ಪ್ರತಿಯೊಬ್ಬ ಹಿಂದುವೂ ತಾನು ಹಿಂದು, ತನಗೊಂದು ಕರ್ತವ್ಯವಿದೆ, ಧರ್ಮವಿದೆ ಎಂದುಕೊಳ್ಳಬೇಕು. ಆಗ ಹಿಂದೂ ಪಾದ ಷಾಹಿಯು ಸ್ಥಾಪಿತವಾಗುತ್ತದೆ. ಅದಕ್ಕೆ ಒಬ್ಬ ಮಹಾತಪಸ್ವಿಯಾದ ಮಹಾ ಪುರುಷನ ಅನುಗ್ರಹವು ಬೇಕು. ಅವನ ಕ್ರಿಯಾಸಿದ್ಧಿಯಿಂದ ಹಿಂದೂ ಸಾಮ್ರಾಜ್ಯದ ಸ್ಥಾಪನೆಯಾಗಬೇಕು. ನಾವೆಲ್ಲರೂ ನಿಮಿತ್ತ ಮಾತ್ರ. ನಾನು ಸಂತ ತುಕಾರಾಂರ ದರ್ಶನಮಾಡಿದೆ. ರಾಮಾಯಣದಲ್ಲಿ ಋಶ್ಯಶೃಂಗ

ಮಹಾಮುನಿಯನ್ನು ಅಯೋಧ್ಯೆಗೆ ಕರೆತಂದಂತೆ ಕರೆತರಬೇಕೆಂದಿದ್ದೆ. ನೀವುಗಳು ಅವಸರಪಟ್ಟು ನನ್ನನ್ನು ಇಲ್ಲಿಗೆ ಎಳೆತಂದಿರಿ. ಆ ಮಹಾಪುರುಷ ನನ್ನ ಪಂಡರಿನಾಥನು ಸಾಯುಜ್ಯದಲ್ಲಿ ಸೇರಿಸಿಕೊಂಡನು. ನನ್ನ ಮನಸ್ಸಿಗೆ ಕತ್ತಲೆಕವಿದಂತಾಯಿತು. ಆದರೆ ಆ ಮಹಾಪುರುಷನ ದಿವ್ಯವಾಣಿಯೊಂದು ನನ್ನ ಹೃದಯದಲ್ಲಿ ಬೆಳಗುತ್ತಿದೆ. 'ನಿನಗೆ ತಕ್ಕ ಸದ್ಗುರುವು ಸಿಕ್ಕುತ್ತಾನೆಂದು' ಸಂತ ಮಹಾರಾಜರು ಅಪ್ಪಣೆ ಕೊಡಿಸಿದ್ದರು. ಆ ಮಾತು ಸುಳ್ಳಾಗದು.

"ಗೋದಾವರಿಯ ತೀರದಲ್ಲಿ ಭದ್ರಾಚಲದಲ್ಲಿ ರಾಮದಾಸ ಪ್ರಭುಗಳ ತಪಸ್ಸು ಬೆಳಗುತ್ತಿದೆ. ಅವರ ಸನ್ನಿಧಿಗೆ ಹೋಗಬೇಕೆಂದಿದ್ದೇನೆ ಸುಮ್ಮ ಸುಮ್ಮನೆ ಅವರ ಅನುಗ್ರಹ ದೊರೆಯುವುದಿಲ್ಲ. ಕ್ಷೀರಸಾಗರವಾದರೂ ನಿಮ್ಮ ಬೊಗಸೆಯಲ್ಲಿ ಎತ್ತಿದಷ್ಟೇ ಹಾಲು ದೊರೆಯುತ್ತದೆ. ತನು ಮನ ಧನಗಳನ್ನು ನನ್ನ ಸರ್ವಸ್ವವನ್ನೂ ಅವರಲ್ಲಿ ಅರ್ಪಣೆ ಮಾಡಬೇಕಾಗುತ್ತದೆ. ಅಂಥವರೂ ನಮ್ಮ ಸತ್ವಪರೀಕ್ಷೆಮಾಡುತ್ತಾರೆ. ಅದೂ ಸರಿಯೇ. ಶಿಷ್ಯರು ನೂರು ಬಾರಿ ಪರೀಕ್ಷೆಮಾಡಿ ಗುರುವನ್ನು ವರಿಸಬೇಕು. ಆಮೇಲೆ ಅಚಲವಾದ ಭಕ್ತಿಯಿರಬೇಕು. ಸದ್ಗುರುವು ಶಿಷ್ಯನನ್ನು ಸಹಸ್ರ ಕಣ್ಣುಗಳಿಂದ ಪರೀಕ್ಷೆಮಾಡುತ್ತಾನೆ. ಆಗಲೇ ಶಿಷ್ಯನ ಇಷ್ಟಾರ್ಥವು ಸಿದ್ಧಿಸುತ್ತದೆ. ನೀವೆಲ್ಲರೂ ಏಕಮನಸ್ಸಿನಿಂದ ಏಕವಾಕ್ಯತೆಯಿಂದ ಅಪ್ಪಣೆಕೊಟ್ಟರೆ ನಾನು ಆ ರಾಮದಾಸ ಮಹಾರಾಜರ ದರ್ಶನಕ್ಕೆ ಹೋಗುತ್ತೇನೆ ಈ ಕೋಟೆಗಳು ನಿಮ್ಮ ರಕ್ಷಣೆಗೆ ಸೇರಿವೆ. ಈ ಸೈನ್ಯದ ಶಿಸ್ತು ನಿಮ್ಮ ಕೈಯಲ್ಲಿದೆ. ಧರ್ಮದ ದೃಷ್ಟಿಯನ್ನು ಇಡಬೇಕು" ಎಂದು ಹೇಳಿದನು.

ಎಲ್ಲರೂ ಒಪ್ಪಿಗೆಯನ್ನಿತ್ತರು,

ರಾಮಚಂದ್ರನು "ಭಯವಿಲ್ಲ. ನೀವುಗಳು ಹೊಣೆಯನ್ನು ಹೊರಬಲ್ಲಿರಿ. ಶಿವಾಜಿಯು ಗುರುವಿನ ಅನುಗ್ರವನ್ನು ಸಂಪಾದಿಸಿಕೊಂಡು ಬರಲಿ, ಶ್ರೀರಾಮಚಂದ್ರನು ವಿಶ್ವಾಮಿತ್ರನ ಶಿಷ್ಯನಾಗದಿದ್ದರೆ ಈ ಭೂಮಿಯು ರಾಮನಾಮದಿಂದ ಪವಿತ್ರವಾಗುತ್ತಿರಲಿಲ್ಲ" ಎಂದು ಹೇಳಿದನು.

ಎಲ್ಲರೂ ಸಂತೋಷದಿಂದ ಶಿವಾಜಿಯನ್ನು ಬೀಳ್ಕೊಟ್ಟರು.

ಶಿವಾಜಿಯು ಕಾಲುನಡೆಯಲ್ಲಿಯೇ ಭದ್ರಾಚಲಕ್ಕೆ ಹೊರಟನು.

# ೧೮

ಭದ್ರಾಚಲ ಕ್ಷೇತ್ರದಲ್ಲಿ ಭಕ್ತವೃಂದವು ನಿಬಿಡವಾಗಿತ್ತು. ಶ್ರೀರಾಮ ಚಂದ್ರನ ದೇವಾಲಯದಲ್ಲಿ ನಾಲ್ಕಾರು ಭಜನೆ ಕೂಟಗಳು ಸೇರಿದ್ದವು, "ರಾಮ ರಾಮ ಸೀತಾರಾಂ, ಜಾನಕೀ ವಲ್ಲಭ ಜಯ ಜಯರಾಂ" ಈ ರಾಮ ಧ್ಯಾನದ ನಾದವು ಬಹುದೂರದವರೆಗೆ ಕೇಳಿಬರುತ್ತಿದ್ದಿತು

ಶಿವಾಜಿಯು ದೇವಾಲಯದ ಮುಂದೆ ಹೋಗಿ ನಿಂತು ಪ್ರದಕ್ಷಿಣೆಮಾಡಿ, ನಿತ್ಯಕರ್ಮಗಳನ್ನು ತೀರಿಸಿಕೊಂಡು ಬಂದನು, ಭಕ್ತಿಭಾವದಿಂದ ದೇವಾಲಯ ದೊಳಗೆ ಪ್ರವೇಶ ಮಾಡಿದನು ಶ್ರೀರಾಮಚಂದ್ರನ ದರ್ಶನ ಮಾಡಿ ತಾನೂ ಆ ಭಕ್ತವೃಂದದೊಡನೆ ಭಜನೆ ಮಾಡಲು ಆರಂಭಿಸಿದನು.

ಅವನ ಮನಸ್ಸೆಲ್ಲವೂ ರಾಮದಾಸರನ್ನು ದರ್ಶನ ಮಾಡಬೇಕು ಎಂಬ ಕುತೂಹಲದಿಂದ ಕೆರಳಿದ್ದಿತು.

ಪ್ರಾತಃಕಾಲ ಒಂಭತ್ತು ಗಂಟೆಯ ಸಮಯಕ್ಕೆ ಸರಿಯಾಗಿ ಕೌಪೀನ ಧಾರಿ ರಾಮದಾಸನು ದೇವಾಲಯದೊಳಗೆ ಪ್ರವೇಶ ಮಾಡಿದನು ಆ ತೇಜಸ್ವೀ ಮಹಾಪುರುಷನನ್ನು ಕಾಣುತ್ತಲೇ ಇವನೇ ರಾಮದಾಸನೆಂದು ಶಿವಾಜಿಯು ಕಂಡುಕೊಂಡನು.

ತಕ್ಷಣ ಭಕ್ತಿಯಿಂದ ಹೋಗಿ ರಾಮದಾಸನ ಪಾದಗಳಿಗೆ ದೀರ್ಘದಂಡ ಪ್ರಣಾಮ ಮಾಡಿದನು.

ರಾಮದಾಸನು ನಗುತ್ತಾ "ನೀನು ಶಿವಾಜಿ ಮಹಾರಾಜನೆಂದು ಕಾಣು ತ್ತದೆ. ನಿನ್ನ ಬರುವನ್ನು ನಾನು ನಿರೀಕ್ಷಿಸುತ್ತಿದ್ದೆ. ರಾಮರ ಆಜ್ಞೆ. ಬಂದೆಯಾ ?" ಎಂದು ಆದರದಿಂದ ಮಾತನಾಡಿಸಿದನು.

ಶಿವಾಜಿಯು ಕೈಮುಗಿದು, "ಹೌದು, ಮಹಾರಾಜ್, ನಾನು ಬಹು ದಿವಸಗಳಿಂದಲೂ ತಮ್ಮ ದರ್ಶನಾಕಾಂಕ್ಷಿಯಾಗಿದ್ದೆ. ಇಂದು ಆ ಪಾದ ದರ್ಶನವು ನನಗೆ ಲಭ್ಯವಾಯಿತು. ಸಂತ ತುಕಾರಾಂರು ಆಜ್ಞೆ ಮಾಡಿದ್ದರು

ತಮ್ಮ ದರ್ಶನ ಮಾಡಿದರೆ ಕಷ್ಟಗಳೆಲ್ಲವೂ ಪರಿಹಾರವಾಗುವುದೆಂದು ಅಪ್ಪಣೆ ಮಾಡಿದ್ದರು. ಇಷ್ಟು ದಿನಗಳು ತಡವಾಗಿ ಬಂದಿದ್ದೇನೆ, ಕ್ಷಮಿಸಿರಿ" ಎಂದು ಕೈಮುಗಿದನು.

ರಾಮದಾಸರು "ಕಷ್ಟಸುಖಗಳೆಂಬುದು ಮಾನವರಿಗೆ ಸರ್ವದಾ ಇರುವ ವೇದನೆಗಳೇ ಆಗಿವೆ ಕಷ್ಟಸುಖಗಳಿಗೆ ಕುಗ್ಗಿ ಹಿಗ್ಗದಿರುವುದೇ ಭಕ್ತನ ಲಕ್ಷಣ" ಎಂದು ಹೇಳಿದರು.

ಅನಂತರ ಶ್ರೀರಾಮನ ಮುಂದೆ ಹೋಗಿ ನಿಂತು ನಿಮೀಲಿತನಯನರಾಗಿ ಧ್ಯಾನಾಸಕ್ತರಾದರು. ಕ್ಷಣ ಹೊತ್ತಾದ ಮೇಲೆ "ರಾಮ ರಾಮ ಸೀತಾರಾಂ ಜಾನಕೀವಲ್ಲಭ ಜಯ ಜಯ ರಾಂ, ಪತಿತಪಾವನ ಸೀತಾರಾಂ..." ಎಂದು ಅವರ ಬಾಯಿಂದ ಧ್ಯಾನಾಮೃತವು ಹೊರಹೊಮ್ಮಿತು.

ಭಕ್ತರೆಲ್ಲರೂ ಉಪದೇಶವನ್ನು ಸ್ವೀಕರಿಸಿ, ತಾವೂ ನಾಮಾಮೃತವನ್ನು ಭಜನೆಯನ್ನು ಮಾಡಲಾರಂಭಿಸಿದರು. ಅವರ ಜೊತೆಯಲ್ಲಿ ಶಿವಾಜಿಯೂ ಕಂಠವನ್ನು ಸೇರಿಸಿದನು. ಅರ್ಚಕರು ಮಂಗಳಾರತಿ ಎತ್ತಿದರು. ಸ್ತ್ರೀ ವೃಂದವು ಮಂಗಳ ಶ್ಲೋಕಗಳನ್ನು ಹಾಡಿತು. ರಾಮದಾಸರು ಶ್ರೀರಾಮ ದೇವಾಲಯದಲ್ಲಿ ಹೊರಗಡೆಯಿರುವ ಬದರೀ ವೃಕ್ಷದ ಕೆಳಗೆ ಹೋಗಿ ಯೋಗಾಸನದ ಕುಳಿತರು. ಭಕ್ತರೆಲ್ಲರೂ ರಾಮದಾಸ ಸ್ವಾಮಿಗಳನ್ನು ನಮಸ್ಕರಿಸಿ ಆಶೀರ್ವಾದಪಡೆದು ಹೋಗುತ್ತಿದ್ದರು.

ಶಿವಾಜಿಯು ಅಚಲನಾಗಿ ಕೈಮುಗಿದು ನಿಂತಿದ್ದನು.

ರಾಮದಾಸರು "ಶಿವಾಜೀ ! ನೀನು ಏನಾದರೂ ಕಾರ್ಯಾರ್ಥಿಯಾಗಿ ಬಂದಿರುವೆಯೋ ?" ಎಂದು ಕೇಳಿದರು.

"ಇಲ್ಲ, ಮಹಾರಾಜ್, ಎಲ್ಲ ಸಂಕೋಲೆಗಳಿಂದಲೂ ಬಿಡುಗಡೆ ಹೊಂದಿ ತಮ್ಮ ಸೇವೆಗೆ ಬಂದಿದ್ದೇನೆ".

ರಾಮದಾಸರು ಅವನ ಉತ್ತರದಿಂದ ಸಂತೋಷಪಟ್ಟರು.

"ನೀನು ಸಾರ್ವಭೌಮನಾಗುವಿ. ನಿನ್ನ ಕೋಟೆಗಳೆಲ್ಲವೂ ಸುರಕ್ಷಿತವಾಗಿರುವುದು. ಶತ್ರುಗಳಿಗೆ ಅಜೇಯವಾದ ಅಶ್ವಬಲವು ನಿನಗೆ ಲಭಿಸುವುದು" ಎಂದು ಆಶೀರ್ವಾದ ಮಾಡಿದರು.

ಶಿವಾಜಿಯು ದಿನದಿನವೂ ರಾಮದಾಸರ ಸೇವೆ ಮಾಡುತ್ತಾ ರಾಮಭಜನೆ ಮಾಡುತ್ತಾ ಕಾಲ ಕಳೆಯುತ್ತಿದ್ದನು. ಪ್ರತಿದಿನವೂ ರಾಮದಾಸರ ಬೋಧಾಮೃತವನ್ನು ಶ್ರವಣ ಮಾಡುತ್ತಿದ್ದನು. ಹೀಗೆ ತಿಂಗಳುಗಳು ಕಳೆದು ಹೋದವು.

ರಾಮದಾಸರು ಶಿವಾಜಿಯನ್ನು ಕುರಿತು, "ನೀನು ಮಹಾರಾಜನೆಂಬುದನ್ನು ಮರೆತುಬಿಟ್ಟೆಯಾ ?" ಎಂದು ಪ್ರಶ್ನೆ ಮಾಡಿದರು.

"ಹೌದು ಮಹಾರಾಜ್, ಎಲ್ಲವನ್ನೂ ಮರೆಯುವುದಕ್ಕೇ ತಮ್ಮ ಪಾದದೆಡೆಗೆ ಬಂದಿದ್ದೇನೆ. ಎಲ್ಲವನ್ನೂ ಸಂಪೂರ್ಣವಾಗಿ ಮರೆತಿದ್ದೇನೆ. ಈ ಭಕ್ತವೃಂದದ ಸಹವಾಸ, ಈ ಭಜನೆ, ಶ್ರೀರಾಮನ ದರ್ಶನ, ತಮ್ಮ ಪಾದಸೇವೆ, ಬೋಧಾಮೃತ ಇವುಗಳಿಗಿಂತಲೂ ಬೇರೆ ಪ್ರಪಂಚದ ನೆನಪು ನನಗೆ ಗೋಚರವಾಗುತ್ತಿಲ್ಲ."

ರಾಮದಾಸರು ನಗುತ್ತಾ "ರಾಮನು ಬೇರೆಯಲ್ಲ, ರಾಮಾಯಣವೂ ಬೇರೆಯಲ್ಲ. ನೀನು ರಾಮಾಯಣವನ್ನು ಪಠಿಸಿದ್ದೀಯಲ್ಲವೆ ?" ಎಂದು ಪ್ರಶ್ನೆ ಮಾಡಿದರು.

"ಹೌದು ಮಹಾರಾಜ್, ಚಿಕ್ಕಂದಿನಲ್ಲಿಯೇ ದಾದಾಜೀ ಗುರುವು ರಾಮಾಯಣವನ್ನು ಪಾಠಮಾಡಿಸಿದನು."

"ಅದರ ಅರ್ಥವನ್ನು ಅರಿತಿರುವೆಯಾ ?"

ಶಿವಾಜಿಯು ಕೈಮುಗಿದು "ಅದರ ಅರ್ಥವು ಬಹಳವಾಗಿದೆ. ಸಮಗ್ರ ವೇದಶಾಸ್ತ್ರಗಳ ಅರ್ಥವು ಅದರಲ್ಲಿ ಅಡಗಿದೆಯೆಂದು ನನ್ನ ಗುರುವು ಹೇಳಿದ್ದಾನೆ. ಈ ಬ್ರಹ್ಮಾಂಡದ ಉತ್ಪತ್ತಿ ಸ್ಥಿತಿಲಯಗಳ ರಹಸ್ಯವು ರಾಮಾಯಣದಲ್ಲಿ ಅಡಗಿದೆಯೆಂದು ಹೇಳಿಕೊಟ್ಟಿದ್ದಾನೆ. ಪಾಮರನಾದ ನಾನು ಆ ಮಹಾಕಾವ್ಯದ ಅರ್ಥವನ್ನು ಸಂಪೂರ್ಣವಾಗಿ ಅರಿಯುವುದು ಹೇಗೆ ?" ಎಂದು ಹೇಳಿದನು.

"ರಾಮಾಯಣದಲ್ಲಿರುವ ರಹಸ್ಯವು ಕರ್ತವ್ಯಪಾಲನೆ. ಶ್ರೀರಾಮಚಂದ್ರನನ್ನು ಮಾನವನಂತೆ ಬಣ್ಣಿಸಿ ಮಹರ್ಷಿ ವಾಲ್ಮೀಕಿಯು ಮಾನವ ಕರ್ತವ್ಯವನ್ನು ನಿರೂಪಿಸಿದ್ದಾನೆ. ಮಗುವು ತಾಯಿ ತಂದೆಗಳಲ್ಲಿ ಹೇಗಿರಬೇಕು, ಶಿಷ್ಯನು ಗುರುವಿನಲ್ಲಿ ಹೇಗೆ ನಡೆಯಬೇಕು, ಗುರುವು ಶಿಷ್ಯನಿಗೆ

ಹೇಗೆ ವಿದ್ಯೆಗಳನ್ನು ದಾನ ಮಾಡಬೇಕು, ಗುರುಹಿರಿಯರಲ್ಲಿ ಮಾನವನು ಹೇಗೆ ನಡೆದುಕೊಳ್ಳಬೇಕು. ಮಾತಾಪಿತೃಗಳ ಆಜ್ಞೆಯನ್ನು ಹೇಗೆ ಪಾಲನೆ ಮಾಡಬೇಕು, ಸ್ವಧರ್ಮವನ್ನು ಹೇಗೆ ರಕ್ಷಿಸಬೇಕು, ರಾಜರು ಹೇಗೆ ಪ್ರಜಾ ಪಾಲನೆ ಮಾಡಬೇಕು ಸತ್ಯ ಧರ್ಮಗಳನ್ನು ಸರ್ವಕಾಲದಲ್ಲಿಯೂ ಹೇಗೆ ಪರಿ ಪಾಲನೆ ಮಾಡಬೇಕು ಎಂಬುದನ್ನು ಶ್ರೀರಾಮಚಂದ್ರನು ಮನುಷ್ಯರೂಪದಿಂದ ಅವತರಿಸಿ, ನಡೆನುಡಿಗಳಲ್ಲಿ ತೋರಿಸಿಕೊಟ್ಟಿದ್ದಾನೆ. ಅದನ್ನೇ ಮಹರ್ಷಿಯು ರಾಮಾಯಣರೂಪದಿಂದ ಗ್ರಥಿಸಿದ್ದಾನೆ. ರಾಮಾಯಣದ ಆದರ್ಶವು ಕರ್ತವ್ಯಪಾಲನೆ. ನೀನು ರಾಜಧರ್ಮೋದ್ಧಾರಕ್ಕಾಗಿ ವ್ರತ ತೊಟ್ಟಿರುವ ಮಹಾಪುರುಷ. ನಿನ್ನಂಥವನು ಈ ದೇವರ ಮುಂದೆ ಭಜನೆ ಮಾಡುತ್ತಾ ಕುಳಿತಿದ್ದರೆ ಕರ್ತವ್ಯಪಾಲನೆ ಮಾಡಿದಂತಾಗುವುದೇ ?"

"ಮಹಾರಾಜ್, ನನ್ನ ಜ್ಞಾನವೆಲ್ಲವೂ ಕಲಿತ ಪಾಠ. ತಮ್ಮ ಸೇವೆ ಯೊಂದೇ ನಿಜವಾದ ಸಂಕಲ್ಪ. ನಾನು ಈ ಸೇವಾದೀಕ್ಷೆಯನ್ನು ವಹಿಸಿದ್ದೇನೆ. ತಾವು ಏನು ಬೇಕಾದರೂ ಆಜ್ಞೆ ಮಾಡಬಹುದು. ನನ್ನ ತನುಮನಧನಗಳು ತಮ್ಮ ಪಾದಾರವಿಂದಗಳಲ್ಲಿ ಅರ್ಪಿತವಾಗಿವೆ. ನೀವು ಸನ್ನಿಧಾನದಿಂದ ನನ್ನನ್ನು ದೂರವಿಡಬೇಡಿರಿ. ನಾನು ತಮ್ಮ ನೆರಳಿನಂತೆ ಇರತಕ್ಕವನು. ಸಂತ ತುಕರಾಂರು ನನಗಿತ್ತಿರುವ ಉಪದೇಶವೇ ಇದು."

"ನಿನ್ನ ರಾಜ್ಯ,—ಕೋಶ ಕೋಟೆ ಕೊತ್ತಲೆಗಳು ಅದನ್ನೆಲ್ಲಾ ಏನು ಮಾಡುವಿ ?"

"ಅವುಗಳೆಲ್ಲ ಶತ್ರುಗಳ ಭಯದಿಂದ ಚಂಚಲವಾಗಿವೆ. ಅದೆಲ್ಲವನ್ನೂ ತಮ್ಮಲ್ಲಿ ಅರ್ಪಣೆಮಾಡಿ, ಅಭಯ ಪ್ರಧಾನಮಾಡಬೇಕೆಂದು ಪ್ರಾರ್ಥನೆ ಮಾಡುತ್ತೇನೆ. ಮಹಾರಾಜ್, ಆ ರಾಜ್ಯವೆಲ್ಲವೂ ತಮ್ಮ ಸೇವೆಗಾಗಿಯೇ ಕಟ್ಟಲ್ಪಟ್ಟವುಗಳು. ತಾವು ಧರ್ಮಸ್ವರೂಪರು ತಮ್ಮ ತಪಸ್ಸಿನಿಂದಲೇ ಧರ್ಮವು ಉದ್ಧಾರವಾಗಬೇಕು."

"ಒಳ್ಳೆಯದು. ಅದೂ ಪರಮಭಕ್ತನ ಲಕ್ಷಣ. ನೀನು ನಿನ್ನದೆಲ್ಲ ವನ್ನೂ ಶ್ರೀರಾಮನ ಪಾದಾರವಿಂದಗಳಲ್ಲಿ ಸಮರ್ಪಿಸಿಬಿಡು. ಶ್ರೀರಾಮ ಚಂದ್ರನ ಸೇವಕನಾಗಿ ರಾಜಕಾರ್ಯಗಳನ್ನು ನಿರ್ವಹಿಸು. ಇಂದಿನಿಂದ ಈ ರಾಜ್ಯವು ಶ್ರೀರಾಮಚಂದ್ರನ ರಾಜ್ಯವಾಗಲಿ."

ಶಿವಾಜಿಯು ಗುರುವಿನ ಅಪ್ಪಣೆಯಂತೆ ತನ್ನ ರಾಜ್ಯವೆಲ್ಲವನ್ನೂ ಬರೆದು ಸಹಿಮಾಡಿ ಶ್ರೀರಾಮಚಂದ್ರನ ಮುಂದೆ ಒಪ್ಪಿಸಿದನು.

ರಾಮದಾಸರು "ಈ ಕಾಗದದಲ್ಲಿ ಜೀವವಿಲ್ಲ. ನಿನ್ನ ಮನಸ್ಸಿನಲ್ಲಿ ಇದನ್ನು ಬರೆದಿಟ್ಟುಕೋ. ಎಂದಿನವರೆಗೆ ಈ ರಾಮರಾಜ್ಯವೆಂಬ ಭಾವನೆಯು ನಿನ್ನ ಹೃದಯದಲ್ಲಿ ಜಾಜ್ವಲ್ಯಮಾನವಾಗಿರುತ್ತದೋ ಅಂದಿನವರೆಗೆ ಈ ರಾಜ್ಯವು ಧರ್ಮರಾಜ್ಯವಾಗಿರುತ್ತದೆ" ಎಂದು ಆಶೀರ್ವದಿಸಿದರು.

ಶಿವಾಜಿಯನ್ನು ಪುರಂಧರಘಢಕ್ಕೆ ಪ್ರಯಾಣ ಬೆಳೆಸುವಂತೆ ಅಪ್ಪಣೆಯಿತ್ತರು.

ಶಿವಾಜಿಯು "ಗುರುಮಹಾರಾಜ್, ತಮ್ಮ ಪಾದಗಳನ್ನು ಮುಂದೆ ಬೆಳೆಸಬೇಕು. ತಮ್ಮ ಹಿಂದೆ ನಾನು ಬರುತ್ತೇನೆ. ಅದೇ ಸೇವಕನ ಲಕ್ಷಣ, ಶಿಷ್ಯನ ಭಕ್ತಿ" ಎಂದು ಹೇಳಿದನು

ರಾಮದಾಸರು ಸಂತೋಷದಿಂದ ಪುರಂಧರಘಢಕ್ಕೆ ಹೊರಟರು.

ಶಿವಾಜಿಯು ಅವರ ಹಿಂದೆ ಹೊರಟನು. ಗುರುಶಿಷ್ಯರಿಬ್ಬರೂ ಪುರಂಧರ ಘಢಕ್ಕೆ ಹೋಗಿ ಸೇರಿದರು.

ಮಹಾರಾಷ್ಟ್ರದ ಸೇನಾಧಿಪತಿಗಳೆಲ್ಲರೂ ಬಂದು ಗುರುಶಿಷ್ಯರನ್ನು ಎದುರುಗೊಂಡು ನಮಸ್ಕರಿಸಿ ಆಶೀರ್ವಾದಗಳನ್ನು ಪಡೆದರು.

ಅರಮನೆಯಿಂದ ರಾಮದಾಸರಿಗಾಗಿಯೇ ನಿರ್ಮಿತವಾಗಿದ್ದ ಪಲ್ಲಕ್ಕಿಯನ್ನು ತಂದು ರಾಮದಾಸರನ್ನು ಕುಳ್ಳಿರಿಸಿ, ಪುಷ್ಪ ವೃಷ್ಟಿಮಾಡಿದರು. ವಾದ್ಯಘೋಷಗಳೊಡನೆ ಅರಮನೆಗೆ ಉತ್ಸವಮಾಡಿ ಕರೆತಂದರು. ಅರಮನೆಯ ಬಹಿರಾವರಣದಲ್ಲಿ ನಿರ್ಮಿಸಲ್ಪಟ್ಟಿದ್ದ ಪರ್ಣಕುಟೀರದಲ್ಲಿ ರಾಮದಾಸರನ್ನು ಇಳಿಸಿದರು.

ಶಿವಾಜಿಯು ಬಾಗಿಲಿನಲ್ಲಿಯೇ ಕಾದಿದ್ದನು.

ಶಿವಾಜಿಯು ಸಂಗಡಿಗರೆಲ್ಲರೂ ರಾಮದಾಸರೊಡನೆ ಪ್ರಾರ್ಥನೆ ಮಾಡಿದರು. ಈ ಪುರಂಧರಘಢದಲ್ಲಿಯೇ ಶ್ರೀ ರಾಮಚಂದ್ರನ ದೇವಾಲಯವನ್ನು ಸ್ಥಾಪಿಸಬೇಕೆಂದು ಅನುಜ್ಞೆ ಬೇಡಿದರು. ರಾಮದಾಸರು ರಾಮಚಂದ್ರ ದೇವಾಲಯ ಸ್ಥಾಪನೆಗೆ ಅನುಜ್ಞೆಯಿತ್ತರು. ಮಹಾರಾಷ್ಟ್ರದೇಶದ ನಾನಾ ಕಡೆಗಳಿಂದ ಬಂದು ಭಕ್ತರು ರಾಮದಾಸರ ದರ್ಶನ ಮಾಡುತ್ತಿದ್ದರು.

ಶಿವಾಜಿಯು "ಈ ರಾಜ್ಯವು ಶ್ರೀ ರಾಮಚಂದ್ರನದು. ಎಲ್ಲ ಕಾರ್ಯ ಶ್ರೀರಾಮನ ಹೆಸರಿನಿಂದಲೇ ನಡೆಯಬೇಕು" ಎಂದು ಅಪ್ಪಣೆ ಮಾಡಿದನು.

ಎಲ್ಲರ ಬಾಯಿಯಲ್ಲಿಯೂ ರಾಮನಾಮವು ಮೊದಲು ಉಚ್ಚರಿಸಲ್ಪಡುತ್ತಿತ್ತು. ಆಮೇಲೆ ಮಾತುಕತೆಗಳು. ಪರಸ್ಪರ ವಂದಿಸುವಾಗಲೂ, "ರಾಮ್, ರಾಮ್" ಎಂದು ಹೇಳುತ್ತಿದ್ದರು.

ಇಡೀ ಮಹಾರಾಷ್ಟ್ರದಲ್ಲಿ ರಾಮನಾಮಾಮೃತವು ಹರಡಿತು.

ಶಿವಾಜಿಯು ರಾಮದಾಸರನ್ನು ಪ್ರತಾಪಘಡಕ್ಕೆ ಕರೆದೊಯ್ದನು.

ರಾಮದಾಸರು "ಈ ಸ್ಥಳವು ಬಹಳ ರಮ್ಯವಾಗಿದೆ" ಎಂದು ಸಂತೋಷಪಟ್ಟರು. ಆ ಸ್ಥಳದಲ್ಲಿಯೇ ಕೆಲವು ಕಾಲ ನೆಲಸಿದರು. ಅಲ್ಲಿ ಭವಾನೀ ದೇವಾಲಯವನ್ನು ನಿರ್ಮಾಣಮಾಡಿಸಿ, ಭವಾನೀ ಮೂರ್ತಿಯನ್ನು ಪ್ರತಿಷ್ಠೆ ಮಾಡಿಸಿದರು. ಬಹುಮಂದಿ ವೇದ ವಿದ್ಯಾಪಾರಂಗತರು, ಅಗ್ನಿಹೋತ್ರಿಗಳು ಅಲ್ಲಿಗೆ ಬಂದುಸೇರಿದರು. ಸದಾಶಿವತ್ರ್ಯಂಬಕ ಭಟ್ಟನು ಆ ದೇಶದಲ್ಲಿಯೇ ವಿದ್ವಾಂಸನೆಂದೂ ಕರ್ಮಾನುಷ್ಠಾನಪರನೆಂದು ಪ್ರಸಿದ್ಧಿ ಹೊಂದಿದ್ದನು. ರಾಮದಾಸರು ಅಲ್ಲಿ ವಿದ್ಯಾಪೀಠವನ್ನು ಸ್ಥಾಪಿಸಿ ಅವನನ್ನು ಆಚಾರ್ಯನನ್ನಾಗಿ ಪಟ್ಟ ಕಟ್ಟಿದರು.

ಅದು ಶ್ರಾವಣಮಾಸ. ಶ್ರಾವಣ ಮಾಸದಲ್ಲಿಯೇ ಪ್ರತಿವರ್ಷವೂ ವಿದ್ಯಾವಂತರು ಅಲ್ಲಿಗೆ ಬಂದು ಸೇರಬೇಕೆಂದು ಅಪ್ಪಣೆ ಮಾಡಿದರು. ಆ ಆಚಾರ್ಯನು ವಿದ್ವಾಂಸರನ್ನು ಪರೀಕ್ಷೆಮಾಡಿ ಅವರ ಯೋಗ್ಯತೆಗೆ ತಕ್ಕಷ್ಟು ಹೊನ್ನುಗಳನ್ನು ದಕ್ಷಿಣೆಯಾಗಿ ಕೊಡಬೇಕೆಂದು ವಿಧಿಸಲ್ಪಟ್ಟಿತು. ಬಹುಮಂದಿ ವಿದ್ವಾಂಸರನ್ನು ಅಲ್ಲಿಯೇ ನೆಲೆಸುವಂತೆ ರಾಮದಾಸರು ಅಪ್ಪಣೆ ಮಾಡಿದರು. ಪ್ರತಾಪಘಢವು ಮಹಾರಾಷ್ಟ್ರದಲ್ಲೆಲ್ಲಾ ಸರಸ್ವತೀ ಪೀಠವೆಂದು ಪ್ರಖ್ಯಾತವಾಯಿತು. ರಾಮದಾಸರು "ಈ ಭವಾನೀ ದೇವಿಯು ಈ ರಾಜ್ಯದ ಅಧಿಷ್ಠಾತ್ರಿ. ಇಲ್ಲಿ ಸರ್ವಶಕ್ತಿಯ ಆವಾಹನೆಯಾಗಿದೆ" ಎಂದು ಶಕ್ತಿಪೂಜೆಯನ್ನು ಉಪದೇಶಮಾಡಿದರು.

ಅಲ್ಲಿಂದ ಮಹಾರಾಷ್ಟ್ರದಲ್ಲೆಲ್ಲಾ ಪಾದಯಾತ್ರೆ ಮಾಡಿಕೊಂಡು ಪುರಂಧರಘಢಕ್ಕೆ ಹಿಂತಿರುಗಿದರು. ಶಿವಾಜಿಯು ಅವರ ಜೊತೆಯಲ್ಲಿಯೇ ಸಂಚಾರ ಮಾಡಿದನು.

ದೇಶಸಂಚಾರ ಕ್ರಮದಲ್ಲಿ ರಾಮದಾಸನು ಪುಣೆಗೆ ದರ್ಶನವಿತ್ತನು. ಜೀಜಾಬಾಯಿಯವರ ಮನೆಯಲ್ಲಿಯೇ ವಸತಿ ಮಾಡಿ ಸಂತೋಷದಿಂದ ಅವರ ಆತಿಥ್ಯವನ್ನು ಸ್ವೀಕರಿಸಲು ಒಪ್ಪಿದನು. ಜೀಜಾಬಾಯಿಯು ರಾಮದಾಸ ನನ್ನು ಮಣೆಯ ಮೇಲೆ ಕುಳ್ಳಿರಿಸಿ ಪುಷ್ಪಾಕ್ಷತೆಗಳಿಂದ ಆ ಗುರುದೇವನ ಪಾದ ಗಳಿಗೆ ಪೂಜೆ ಮಾಡಿ ಮಂಗಳಾರತಿ ಮಾಡಿದಳು.

"ಗುರುದೇವಾ, ಶ್ರೀರಾಮಚಂದ್ರನು ಶಬರಿಯ ಗುಹೆಗೆ ಬಂದು ಅನು ಗ್ರಹಿಸಿದಂತೆ ತಾವು ನನ್ನ ಕುಟೀರಕ್ಕೆ ಬಂದು ದರ್ಶನವಿತ್ತಿದ್ದೀರಿ. ನಾವು ಧನ್ಯರಾದೆವು. ಕೃತ್ಯಕೃತ್ಯರಾದೆವು. ಆಮರಣಾಂತ ತಮ್ಮ ಸೇವೆ ಮಾಡಿ ಕೊಂಡು ಶ್ರೀರಾಮಚಂದ್ರನ ನಾಮಾಮೃತ ಭಜನೆ ಮಾಡಿಕೊಂಡು ಕಾಲ ಕಳೆಯುವಂತೆ ಆಶೀರ್ವದಿಸಬೇಕು" ಎಂದು ಪ್ರಾರ್ಥನೆ ಮಾಡಿದಳು.

ರಾಮದಾಸರು "ಜೀಜಾಬಾಯಿ, ನೀನು ಸುಪುತ್ರನನ್ನು ಪಡೆದಿರುವೆ. ಪೂರ್ವಪುಣ್ಯ ಸುಕೃತದಿಂದ ನಿನ್ನ ಮಗನು ಧರ್ಮೋದ್ಧಾರಕ್ಕಾಗಿ ಜನ್ಮವೆತ್ತಿ ರುವನು, ಅವನಿಗೆ ತಕ್ಕ ತಾಯಿ ನೀನು. ನಿನ್ನ ಮಗ ಸಾರ್ವಭೌಮ ನಾಗುವನು" ಎಂದು ಆಶೀರ್ವದಿಸಿದರು.

"ಈ ಪುಣೆಯು ಪುಣ್ಯಪಟ್ಟಣವಾಗುವುದು" ಎಂದು ಹರಸಿದರು.

ಜೀಜಾಬಾಯಿಯನ್ನೂ ಸಾಯಿಬಾಯಿಯನ್ನೂ ಆಶೀರ್ವದಿಸಿ ಪ್ರಯಾಣ ಬೆಳೆಸಿದರು.

ಪ್ರತಾಪಘಢಕ್ಕೆ ಗುರುಶಿಷ್ಯರಿಬ್ಬರೂ ನವರಾತ್ರಿಯ ಸಮಯಕ್ಕೆ ಬಂದು ಸೇರಿದರು. ದೇವಿಯ ಸ್ತವನ ಪಾರಾಯಣಗಳೂ ಚಂಡೀಯಾಗವೂ ಬ್ರಾಹ್ಮಣ ಸಂತರ್ಪಣೆಯೂ ಭವಾನೀ ದೇವಾಲಯದಲ್ಲಿ ಶಾಸ್ತ್ರೋಕ್ತವಾಗಿ ನಡೆಯಿತು.

ಅದೇ ವಿಜಯದಶಮಿಯ ದಿನ ಪುರಂಧರಘಡದಲ್ಲಿ 'ಶ್ರೀರಾಮಚಂದ್ರ ದೇವಾಲಯ ಪ್ರತಿಷ್ಠೆಯು ರಾಮದಾಸರ ಅಜ್ಞೆಯಂತೆ ನೆರವೇರಿಸಲ್ಪಟ್ಟಿತು.

ರಾಮದಾಸನು ಶ್ರೀರಾಮಚಂದ್ರನ ಸನ್ನಿಧಾನದಲ್ಲಿ ವಿದ್ವತ್‌ಗೋಷ್ಠಿ ಯನ್ನೂ ಶಿವಾಜಿಯ ಸಂಗಡಿಗರಾದ ದಳಪತಿಗಳ ವೀರಗೋಷ್ಠಿಯನ್ನೂ ನೆರೆಸುವಂತೆ ಅಪ್ಪಣೆ ಮಾಡಿದನು.

ಆ ಸಭೆಯಲ್ಲಿ "ನೀವೆಲ್ಲರೂ ಸೇರಿ ಈ ರಾಜ್ಯದಿಂದ ತುರುಷ್ಕರನ್ನು ಓಡಿಸಿ ಹಿಂದೂ ರಾಜ್ಯವನ್ನು ನಿರ್ಮಾಣ ಮಾಡಿದ್ದೀರಿ. ಇದೆಲ್ಲವನ್ನೂ ಶಿವಾಜಿ ಮಹಾರಾಜನು ಶ್ರೀರಾಮಚಂದ್ರನ ಪಾದಾರವಿಂದಗಳಲ್ಲಿ ಸಮರ್ಪಣೆ ಮಾಡಿದ್ದಾನೆ. ಈ ರಾಜ್ಯವು ರಾಮರಾಜ್ಯವಾಗಿ ಬಾಳಲಿ. ಧರ್ಮದ ದೃಷ್ಟಿಯಿಂದ ಎಲ್ಲರೂ ಸಮಾನರು. ಯಾರೊಬ್ಬರೂ ತ್ರಿಕರಣ ಪೂರ್ವಕವಾಗಿ ಭೇದವನ್ನು ಎಣಿಸಬೇಡಿರಿ. ಚಾತುರ್ವರ್ಣ ಧರ್ಮಗಳನ್ನು ಅವರವರು ಅನುಷ್ಠಾನ ಮಾಡಲಿ. ಕೀಳು ಮೇಲುಗಳ ಭಾವನೆಯು ತೊಡೆದುಹೋಗಲಿ. ರಾಮನಾಮವು ಸರ್ವರನ್ನೂ ಪವಿತ್ರಗೊಳಿಸುತ್ತದೆ. ಎಲ್ಲರನ್ನೂ ಉದ್ಧಾರ ಮಾಡುತ್ತದೆ. ಅಧಿಕಾರದಲ್ಲಿಯೂ ಹಾಗೆಯೇ ನಡೆಯಲಿ. ಸಣ್ಣ ದೊಡ್ಡ ಅಧಿಕಾರಗಳೆಂದು ಭೇದವೆಣಿಸಬೇಡಿರಿ. ನೀವೆಲ್ಲರೂ ಸಹೋದರರಂತೆ ನಡೆಯಿರಿ. ಪರಸ್ಪರ ದ್ವೇಷಾಸೂಯೆಗಳನ್ನು ಮಾಡಿದರೆ ಧರ್ಮವು ಕುಸಿದು ಬೀಳುತ್ತದೆ. ಸತ್ಯ ಧರ್ಮಗಳೇ ರಾಮರಾಜ್ಯದ ಮೂಲಮಂತ್ರಗಳು. ಎಲ್ಲರೂ ಸತ್ಯ ಧರ್ಮಗಳನ್ನು ಬಿಡದೇ ನಡೆಯಿರಿ. ಶ್ರೀರಾಮಚಂದ್ರನು ನಿಮ್ಮೆಲ್ಲರನ್ನೂ ಅನುಗ್ರಹಿಸುತ್ತಾನೆ. ಸರ್ವತ್ರ ನಿಮಗೆ ಜಯವಾಗುತ್ತದೆ. "ಜಾನಕಿ ವಲ್ಲಭ ಜಯ ಜಯರಾಂ" ಎಂದು ಉಪದೇಶ ಮಾಡಿದರು.

ಶಿವಾಜಿಯನ್ನು "ನೀನು ಈ ರಾಜ್ಯದ ರಾಜನಾಗಿ ಈ ದಳಪತಿ ಸೇನಾಧಿಪತಿಯಾಗಿ ಸರ್ವಜನರ ಸೇವಕನಾಗಿ ನಡೆಯಬೇಕು. ಅದೇ ಶ್ರೀರಾಮಚಂದ್ರರ ಆಜ್ಞೆ. ನೀನು ನನ್ನನ್ನು ಹಿಂಬಾಲಿಸಿ ಬರುವ ಅಗತ್ಯವಿಲ್ಲ. ನೀನು ನೆನೆದಲ್ಲಿ ನಾನು ಬಂದು ದರ್ಶನವೀಯುತ್ತೇನೆ. ಶ್ರೀರಾಮಚಂದ್ರನು ಸರ್ವದಾ ನಿನ್ನನ್ನು ರಕ್ಷಿಸುತ್ತಾನೆ" ಎಂದು ಆಶೀರ್ವದಿಸಿದರು.

ರಾಮದಾಸನು ಅಲ್ಲಿಂದ ಏಕಾಂಗಿಯಾಗಿ ನಡೆದು ಭದ್ರಾಚಲಕ್ಕೆ ಹೋಗಿ ಸೇರಿದನು.

ಶಿವಾಜಿಯು ರಾಮಚಂದ್ರನ ಸೇವಕನಂತೆ ರಾಜಕಾರ್ಯಗಳನ್ನು ನಡೆಸುತ್ತಿದ್ದನು.

ವಿದ್ವಜ್ಜನರು ಬಂದು ಶಿವಾಜಿಯಲ್ಲಿ ಪ್ರಾರ್ಥನೆ ಮಾಡಿದರು. "ಶಿವಾಜಿ ಪ್ರಭು, ಈ ರಾಜ್ಯಾಂಗದ ವ್ಯವಸ್ಥೆಯನ್ನು ಮಾಡಬೇಕು. ಮಂತ್ರಿಗಳು, ಸೇನಾಧಿಪತಿಗಳು, ಅಧಿಕಾರಿಗಳು ಎಲ್ಲರನ್ನೂ ಯೋಗ್ಯತಾನುಸಾರ ನಿಯಮಿಸ

ಬೇಕು. ಗ್ರಾಮಗ್ರಾಮಗಳಲ್ಲಿಯೂ ರಾಜ್ಯದ ನ್ಯಾಯಸ್ಥಾನಗಳನ್ನೂ ಅಧಿಕಾರ ಸ್ಥಾನಗಳನ್ನೂ ಸ್ಥಾಪಿಸಬೇಕು" ಎಂದು ಹೇಳಿದರು.

ಶಿವಾಜಿಯು ಅವರೆಲ್ಲರಿಗೂ ಅಭಿವಂದನೆ ಮಾಡಿ "ತಮ್ಮ ಮಾತುಗಳು ಶಾಸ್ತ್ರಸಮ್ಮತವಾಗಿವೆ ತಮ್ಮ ಸಲಹೆಗಳನ್ನು ಶಿರಸಾ ವಹಿಸಿ, ನೆರವೇರಿಸಲು ನಾನು ಸಿದ್ಧನಾಗಿದ್ದೇನೆ. ಆದರೆ ಇನ್ನೂ ಅದಕ್ಕೆ ಕಾಲವು ಬಂದಿಲ್ಲ. ಗುರುವಿನ ಆಜ್ಞೆ ಆಗಿಲ್ಲ. ಶ್ರೀರಾಮಚಂದ್ರನ ಪ್ರೇರಣೆಯಾಗಿಲ್ಲ. ಅದು ವರೆಗೆ ಶ್ರೀರಾಮಚಂದ್ರನೇ ರಕ್ಷಣೆ ಶಿಕ್ಷಣೆಗಳ ಭಾರವನ್ನು ಹೊತ್ತಿದ್ದಾನೆ. ರಾಮಚಂದ್ರನು ರಾಕ್ಷಸರನ್ನು ಸಂಹಾರಮಾಡಿ ಧರ್ಮವನ್ನು ಸ್ಥಾಪಿಸಿದಂತೆ ರಾಮದಾಸರ ಅನುಗ್ರಹದಿಂದ ತುರುಷ್ಕರನ್ನು ಓಡಿಸಿ ಧರ್ಮ ರಾಜ್ಯಸ್ಥಾಪನೆ ಮಾಡಬೇಕು. ಮೊಗಲ್ ಸಾಮ್ರಾಟನೂ ಬಿಜಾಪುರದ ಸುಲ್ತಾನನೂ, ರಾವಣ ಕುಂಭಕರ್ಣರಂತೆ ಧರ್ಮಕಂಟಕರಾಗಿದ್ದಾರೆ. ಆ ದುಷ್ಟರ ದಮನ ವಾಹಲ್ಲದೆ ಧರ್ಮರಾಜ್ಯ ಸ್ಥಾಪನೆಯಾಗದು. ದುಷ್ಟನಿಗ್ರಹಕ್ಕಾಗಿ ನೀವೆಲ್ಲರೂ ಭಗವಂತನಲ್ಲಿ ಪ್ರಾರ್ಥನೆ ಮಾಡಬೇಕು. ಆಗ ಶುಭಕಾಲವು ಸನ್ನಿಹಿತ ವಾಗುತ್ತದೆ" ಎಂದು ಹೇಳಿದನು.

## ೧೧

ಬಿಜಾಪುರದಲ್ಲಿ ಸುಲ್ತಾನನು ಪರಲೋಕವನ್ನೈದಿದನೆಂಬ ವಾರ್ತೆಯು ಶಿವಾಜಿಯ ಕಿವಿಗೆ ಮುಟ್ಟಿತು. ಶಿವಾಜಿಯು ತನ್ನ ಸಂಗಡಿಗರೊಡನೆ ಈ ಸಮಯದಲ್ಲಿ ಬಿಜಾಪುರದ ಕೋಟೆಯನ್ನು ವಶಪಡಿಸಿಕೊಳ್ಳಬೇಕೆಂದು ಸಮಾಲೋಚನೆ ಮಾಡಿದನು.

ರಾಮಚಂದ್ರನನ್ನು ಸರ್ವಾಧಿಕಾರಿ ಷಾ ಆಲಂನ ದರ್ಬಾರಿಗೆ ಕಳುಹಿಸಿದನು.

ಷಾ ಆಲಂನು ಅತ್ಯಂತ ಆದರ ವಿಶ್ವಾಸಗಳಿಂದ ರಾಮಚಂದ್ರನನ್ನು ಬರಮಾಡಿಕೊಂಡು ಮಾತುಕತೆಗಳನ್ನಾಡಿದನು.

"ರಾಮಚಂದ್ರರಾವ್, ನಿನ್ನಂಥಾ ಮೇಧಾವಿಗಳೂ ರಾಜನೀತಿ ನಿಪುಣರೂ ಡೆಲ್ಲಿಯ ದರ್ಬಾರಿನಲ್ಲಿಯೂ ಯಾರೂ ಇಲ್ಲ. ನಾನು ಮುಖ ಸ್ತುತಿಗಾಗಿ ಹೇಳುವುದಿಲ್ಲ. ಬಹಳವಾಗಿ ಪರೀಕ್ಷೆ ಮಾಡಿ ನೋಡಿದ್ದೇನೆ. ನೀನು ಯಾವ ರಾಜಕೀಯ ಸಮಾಲೋಚನೆಯನ್ನು ನಡೆಸಲು ಬಂದಿದ್ದೀ?" ಎಂದು ಕೇಳಿದನು.

ರಾಮಚಂದ್ರನು "ಯುವರಾಜರೇ, ನನ್ನ ಮೇಲೆ ತಮ್ಮ ಅಭಿಮಾನವು ಬಹಳವಾಗಿದೆ. ಅದರಿಂದ ನಾನು ಧನ್ಯನೆಂದು ಭಾವಿಸುತ್ತೇನೆ. ಈಗ ನಮಗೆ ಒಂದು ಸುಯೋಗವು ಲಭಿಸಿದೆ. ಅದನ್ನು ಸಕಾಲದಲ್ಲಿ ಉಪಯೋಗಿಸಿ ಕೊಳ್ಳದಿದ್ದರೆ ಬಹಳ ಅನರ್ಥಗಳಿಗೆ ಕಾರಣವಾಗುತ್ತದೆ" ಎಂದನು.

"ಅಂಥದೇನು? ಹೇಳು ನಿನ್ನ ಮಾತಿಗೆ ನಿಜವಾಗಿ ಮನ್ನಣೆ ಕೊಡುತ್ತೇನೆ."

"ಬಿಜಾಪುರದ ರಾಜಕೀಯವು ಯಾವಾಗಲೂ ಒಂದು ತೊಡಕಿನ ಸಮಸ್ಯೆಯಾಗಿದೆ. ಮೊದಲಿನಿಂದಲೂ ನಮ್ಮ ಸರಹದ್ದು ಬಿಜಾಪುರಕ್ಕೆ ಸೇರಿದ್ದೆಂದು ಡೆಲ್ಲಿಯ ಮೊಗಲ್ ದರ್ಬಾರಿನವರೇ ಒಪ್ಪಿಕೊಂಡಿದ್ದಾರೆ ಆದರೆ ಡೆಲ್ಲಿಯವರು ಪದೇ ಪದೇ ನಮ್ಮ ಮೇಲೆ ಅಧಿಕಾರ ನಡೆಸುತ್ತಾರೆ. ನಮಗೆ ಇತ್ತಲೂ ಇಲ್ಲ, ಅತ್ತಲೂ ಇಲ್ಲ. ಯಾವುದಾದರೊಂದು ಇತ್ಯರ್ಥವಾಗಿ ಬಿಟ್ಟರೆ ಉಭಯತಾಪಿ ಕ್ಷೇಮವಲ್ಲವೆ?"

ಆಲಂನು ನಕ್ಕನು. "ರಾಮಚಂದ್ರರಾವ್! ಇದು ಹೊಸ ಸಮಸ್ಯೆಯಲ್ಲ, ನನಗೆ ತಿಳಿದಂತೆ ಬಾದಷಹ ಷಹಜಹಾನರವರ ಕಾಲದಿಂದಲೂ ಇದು ನಡೆದೇ ಬರುತ್ತಿದೆ" ಎಂದನು.

"ಹಾಗಲ್ಲ, ಯುವರಾಜರೇ. ಬಿಜಾಪುರದ ದರ್ಬಾರಿಗೂ ಮೊಗಲ್ ಸಾಮ್ರಾಟರಿಗೂ ಪ್ರಬಲವಾದ ವೈಷಮ್ಯವಿದೆ. ಬಾದಷಹ ಔರಂಗಜೇಬರವರೇ ಖುದ್ದು ಬಿಜಾಪುರದ ಮೇಲೆ ಯುದ್ಧ ಹೂಡಿದರು. ಆಗ ಸಂದರ್ಭವು ಸರಿಹೋಗಲಿಲ್ಲ. ಕೈಬಿಟ್ಟು ಹೊರಟುಹೋದನು. ಬಿಜಾಪುರದ ಸುಲ್ತಾನನು ಹತ್ತು ವರ್ಷಗಳಿಂದಲೂ ರೋಗಗ್ರಸ್ತನಾಗಿದ್ದ. ಈಗ ಪರಲೋಕವನ್ನೈದಿದ. ಬಿಜಾಪುರದಲ್ಲಿ ಎಲ್ಲವೂ ಅವ್ಯವಸ್ಥೆ. ಒಂದು ಕಡೆ ಬೇಗಂಸಾಹೇಬರ

ಅಧಿಕಾರ. ಮತ್ತೊಂದು ಕಡೆ ಸೇನಾಧಿಪತಿಗಳ ಸರ್ವಾಧಿಕಾರ. ಈ ಸಮಯ ದಲ್ಲಿ ನಾವು ಯುದ್ಧ ಮಾಡಿದರೆ ಸುಲಭವಾಗಿ ಜಯವಾಗುವುದು."

"ಮತ್ತೆ ಯುದ್ಧ! ಆದರಿಂದ ಲಾಭವಾಗುವುದೆಂದು ನನಗೆ ತೋರುವುದಿಲ್ಲ."

"ಲಾಭವಾಗುತ್ತದೆ. ಒಂದು ಕಡೆ ಬಲವಾದ ಯುದ್ಧವನ್ನು ಹೂಡಿ, ಮತ್ತೊಂದು ಕಡೆ ಸೇನಾಧಿಪತಿಗಳಿಗೆ ಹಣದ ಪ್ರಲೋಭವನ್ನು ತೋರಿ, ಜಹಗೀರಿಗಳನ್ನು ಕೊಟ್ಟು ಬಿಜಾಪುರವನ್ನು ಸುಲಭವಾಗಿ ಕೈಗೆ ತೆಗೆದುಕೊಂಡು ಬಿಡಬಹುದು. ಇಂಥಾ ಸಮಯವು ಬೇರೆ ಸಿಕ್ಕಲಿಕ್ಕಿಲ್ಲ.

"ಹೌದು, ಯುಕ್ತಿಯು ಚೆನ್ನಾಗಿದೆ. ಆದರೆ ಯಾರು ಯುದ್ಧ ಮಾಡಬೇಕು?"

"ನಾವೂ ನೀವೂ ಸೇರಿ ಯುದ್ಧ ಮಾಡಬೇಕು."

"ನಿಮ್ಮಲ್ಲಿ ಸೈನ್ಯವಿದೆ, ಹಣವಿದೆ. ನೀವೇ ಯುದ್ಧ ಮಾಡಬಾರದೇಕೆ?"

"ಸೈನ್ಯವಿದೆ! ಯುವರಾಜರೇ, ಹಣ ಅಷ್ಟೊಂದಾಗಿ ನಮ್ಮಲ್ಲಿಲ್ಲ. ನಾವು ಒಂಟಿಯಾಗಿ ಯುದ್ಧ ಮಾಡಿ ಗೆಲ್ಲುವುದೂ ಕಷ್ಟ. ಪ್ರತ್ಯಕ್ಷವಾಗಿ ನಿಮ್ಮ ಬೆಂಬಲವಿದ್ದರೆ ಸುಲಭವಾಗಿ ಕಾರ್ಯಸಾಧನೆಯಾಗುತ್ತದೆ."

"ರಾಮಚಂದ್ರರಾವ್, ಡೆಲ್ಲಿಯ ದರ್ಬಾರಿನ ನಿಜಸ್ವರೂಪವನ್ನು ನೀನರಿಯೆ! ನೀವು ಗೆದ್ದರೂ ಡೆಲ್ಲಿಯ ದರ್ಬಾರಿಗೂ ನಿಮಗೂ ತಕ್ಷಣ ಪ್ರಬಲ ವಿರೋಧವು ಬಂದೇ ಬರುತ್ತದೆ. ಈಗ ನಿನಗೆ ಮಾತುಕೊಟ್ಟು ಆಗ ನಾನು ಕೊಟ್ಟ ಮಾತನ್ನು ನಡೆಸಿಕೊಡಲಾರದೇ ಪರಿತಪಿಸಬೇಕಾಗುತ್ತದೆ. ನೀವು ಬಿಜಾಪುರವನ್ನು ಗೆದ್ದರೆ, ಈ ದಕ್ಕನ್ ಎಲ್ಲವೂ ಹಿಂದೂ ರಾಜ್ಯವೆನ್ನಿಸಿ ಕೊಳ್ಳುತ್ತದೆ. ಆಗ ಡೆಲ್ಲಿಯ ದರ್ಬಾರು ನಿಮಗೆ ಆಶೀರ್ವಾದ ಮಾಡುತ್ತಾ ಕುಳಿತಿರುತ್ತದೆಯೆಂದು ಭಾವಿಸುತ್ತೀಯಾ?"

ರಾಮಚಂದ್ರನು ತಲೆಬಾಗಿ ಮೌನವಾಗಿ ಕುಳಿತುಕೊಂಡನು.

ಸ್ವಲ್ಪ ಹೊತ್ತಿನನಂತರ, "ಯುವರಾಜರೇ! ನಾನು ಹೇಳುವುದನ್ನು ಹೇಳಿಬಿಟ್ಟಿದ್ದೇನೆ. ನಾವು ಎಂಥಾ ಕಷ್ಟವನ್ನಾದರೂ ಸಹಿಸಲು ಸಿದ್ಧರಿದ್ದೇವೆ. ಇಬ್ಬರಿಗೂ ಶತ್ರುಗಳಾದವರನ್ನು ಈ ಸಂದರ್ಭದಲ್ಲಿ ನಾಶಮಾಡಿಬಿಡುವುದು ಒಳ್ಳೆಯದು ಎಂದು ಹೇಳಿದೆ. ಒಂದು ಪಕ್ಷ ನಮ್ಮ ಮೇಲೆ ಬಿಜಾಪುರದವರು

ದುರಾಕ್ರಮಣ ಮಾಡಿದರೆ ನಾವು ಹಿಂಜರಿಯುವುದಿಲ್ಲ. ಕಡೆಯವರೆಗೆ ಯುದ್ಧ ಮಾಡುತ್ತೇವೆ.ಆಗ ನಿಮ್ಮ ಬೆಂಬಲವು ಇರುವುದೆಂಬುದನ್ನು ನಂಬಬಹುದೇ?" ಎಂದನು.

ಆಲಂಸು ರಾಮಚಂದ್ರನ ಕೈ ತೆಗೆದುಕೊಂಡು ಕೈಮೇಲೆ ಕೈ ತಟ್ಟಿ "ನಾನು ವಚನ ಕೊಡುತ್ತೇನೆ, ರಾಮಚಂದ್ರ. ನಾನು ಸರ್ವಾಧಿಕಾರಿಯಾಗಿರುವವರೆಗೆ, ಕಡೆಯ ತನಕ, ತ್ರಿಕರಣ ಪೂರ್ವಕವಾಗಿ ನಿಮಗೆ ಬೆಂಬಲ ಕೊಡುತ್ತೇನೆ. ಆದರೆ ಪ್ರತ್ಯಕ್ಷವಾಗಿಯಾಗಲೀ ಪರೋಕ್ಷವಾಗಿಯಾಗಲೀ ನೀವು ಮೊಗಲ್ ಸಾಮ್ರಾಜ್ಯಕ್ಕೆ ವಿರೋಧವೆಸಗಿದರೆ ಮಾತ್ರ ನನ್ನ ಸ್ನೇಹ ಹಸ್ತವನ್ನು ಹಿಂತೆಗೆದುಕೊಳ್ಳುತ್ತೇನೆ" ಎಂದನು.

"ಯುವರಾಜರೇ, ಜೀ ಮಾತು ಸರಿಯಾಗಿದೆ. ದೇವರ ಮಾತಿನಂತಿದೆ."

ಷಾ ಆಲಂಸು "ರಾಮಚಂದ್ರ, ನೀವು ಬಿಜಾಪುರದ ಮೇಲೆ ಯುದ್ಧಕ್ಕೆ ಸಿದ್ಧರಾಗಿದ್ದೀರೇನು ?" ಎಂದು ನಗುತ್ತಾ ಕೇಳಿದನು.

"ಹೌದು, ಯುವರಾಜರೇ, ನಾವು ಯುದ್ಧಕ್ಕೆ ಸರ್ವದಾ ಸಿದ್ಧರಾಗಿಯೇ ಇರಬೇಕು. ಬಿಜಾಪುರದಿಂದ ನಮಗೆ ಅನೇಕ ವಿಧವಾದ ಸುದ್ದಿಗಳು ಬರುತ್ತಿವೆ. ಯಾವುದು ನಿಜವೋ ಯಾವುದು ಸುಳ್ಳೋ ಹೇಗೆ ಹೇಳುವುದು? ಆದರೆ ಒಂದು ಮಾತು ನಿಜ. ಬಿಜಾಪುರದವರಿಗೆ ಮೊಗಲ್ ಸಾಮ್ರಾಜ್ಯದ ಮೇಲೆ ಬೀಳುವಷ್ಟು ಧೈರ್ಯ ಸಾಹಸಗಳು ಎಂದೆಂದಿಗೂ ಇಲ್ಲ. ಅವರು ಯಾವಾಗಲೂ ನಮ್ಮ ಮೇಲೆ ಕಾರಖದ್ದು ನಡೆಸಲು ಹೊಂಚು ಹಾಕುತ್ತಲೇ ಇದ್ದಾರೆ."

"ಏಕೆ ? ನೀವು ದುರ್ಬಲರೆಂದು ಅವರು ಭಾವಿಸಿದ್ದಾರೇನು ? ನೀವು ಒಂದರ ಮೇಲೊಂದರಂತೆ ಕೋಟೆಗಳನ್ನು ವಶಪಡಿಸಿಕೊಳ್ಳುವಾಗ ಅವರಿಗೆ ನಿಮ್ಮ ಸಾಮರ್ಥ್ಯವು ತಿಳಿಯಲಿಲ್ಲವೇನು ? ವೃಥಾ ನಿಮ್ಮನ್ನು ಕೆಣಕುವಷ್ಟು ಅವರು ಬುದ್ಧಿಹೀನರೇನು ?

"ಯುವರಾಜ, ಮಾಫ್ ಮಾಡಬೇಕು. ನಾವು ಹಿಂದೂಗಳು. ಮುಸಲ್ಮಾನರೆಲ್ಲರಿಗೂ ನಾವು ದುರ್ಬಲರೆಂಬ ಭಾವನೆಯಿದೆ.ಅದು ಬಿಜಾಪುರದ

ವರಿಗೂ ಇವೆ. ಡೆಲ್ಲಿಯವರಿಗೂ ಇವೆ ಇಷ್ಟು ಅನರ್ಥಗಳಿಗೆ ಅವೇ ಮೂಲ.

ಆಲಂನು ಗಹಗಹಿಸಿ ನಕ್ಕನು.

"ರಾಮಚಂದ್ರ, ಸರಿಯಾಗಿ ತಿಳಿದುಕೊಂಡಿದ್ದೀಯೇ.ಹಿಂದೂ ಮುಸ್ಲಿಂ ಎಂಬ ಭೇದದಿಂದಲೇ ಬಲಾಬಲಗಳನ್ನೂ ಅಳೆಯುವುದು ಶುದ್ಧ ಮೂರ್ಖತನ. ನಮ್ಮ ಸಾಮ್ರಾಜ್ಯದ ಸೇನಾಬಲವು ಬಹುಕಾಲದಿಂದ ಕಟ್ಟಲ್ಪಟ್ಟದ್ದು ಬೇಕಾದಷ್ಟು ಆಯುಧಗಳ ಶೇಖರಣೆಯಿದೆ, ಫಿರಂಗಿಗಳಿವೆ. ನಾನಾ ರಾಷ್ಟ್ರಗಳ ಯೋಧರು ಬಂದು ಸೈನ್ಯದಲ್ಲಿ ಸೇರಿದ್ದಾರೆ. ಅತ್ಯಂತ ಸಾಮರ್ಥ್ಯಶಾಲಿಗಳಾದ ಹಿಂದೂ ಸೇನಾಧಿಪತಿಗಳ ಇದ್ದಾರೆ. ಇದೆಲ್ಲಾ ಬಹುಕಾಲದಿಂದ ಶೇಖರಿಸಿ ಬಂದದ್ದು. ನೀವು ಹೊಸ ಸೈನ್ಯವನ್ನು ಕಟ್ಟಿದ್ದೀರಿ. ಆಯುಧ ಬಲ, ಧನ ಬಲವು ನಿಮ್ಮಲ್ಲಿ ಕಡಿಮೆಯಾಗಿರಬಹುದು. ಆದರೆ ಜನಬಲವು ಅಪಾರವಾಗಿದೆ. ನಿಮ್ಮ ಸೈನಿಕರಲ್ಲಿ ಶಿಸ್ತು ಇದೆ. ಅನೀತಿಯ ಸೋಂಕಿಲ್ಲ. ಹಣಕ್ಕಾಗಿ ನಿಮ್ಮ ಸೈನಿಕರು ಯುದ್ಧಮಾಡುವುದಿಲ್ಲ. ದೇಶ ಭಕ್ತಿಗಾಗಿ ಯುದ್ಧಮಾಡುತ್ತಾರೆ. ನಿಮ್ಮ-ನಮ್ಮ ಬಲಾಬಲಗಳನ್ನು ಸರಿಯಾಗಿ ಅಳೆಯಲು ಯಾರಿಂದಲೂ ಸಾಧ್ಯವಿಲ್ಲ. ಆದರೆ ಬಲವಿದೆಯೆಂದು ವೃಥಾಯುದ್ಧ ಮಾಡಬಾರದು.

"ನೀವು ಹೇಳುವುದು ಸರಿಯಾಗಿದೆ. ನಾನು ಬಂದ ಕಾರ್ಯವು ಅರ್ಧ ಸಾಧಿಸಲ್ಪಟ್ಟಂತಾಯಿತು. ನೀವೂ-ನಾವೂ ಸೇರಿ ಬಿಜಾಪುರದ ಮೇಲೆ ಯುದ್ಧಮಾಡುವುದನ್ನು ನೀನು ಒಪ್ಪುವುದಿಲ್ಲ. ನಾವು ಯುದ್ಧಕ್ಕೆ ಇಳಿದರೆ ನಿಮ್ಮ ಬೆಂಬಲವಿದೆ. ಇಷ್ಟು ನಮ್ಮ ಸಂಧಾನದ ಖಚಿತಾರ್ಥವೆಂದು ಭಾವಿಸಬಹುದಲ್ಲವೇ ?"

"ಹೌದು ಪುನಃ ಅದನ್ನೇ ಹೇಳುತ್ತೇನೆ. ನೂರು ಬಾರಿ ನೂರು ವಿಧಗಳಿಂದ ನೀನು ಕೇಳಿದಾಗ್ಯೂ ಅದೇ ನನ್ನ ಉತ್ತರ."

ರಾಮಚಂದ್ರನು ಸರ್ವಾಧಿಕಾರಿಯ ಅಪ್ಪಣೆ ಪಡೆದು ಪುರಂಧರಗಢಕ್ಕೆ ಹಿಂತಿರುಗಿದನು.

ಪ್ರತಾಪಘಡದಲ್ಲಿ ನವರಾತ್ರಿಯ ಉತ್ಸವವನ್ನು ವೈಭವದಿಂದ ನಡೆಸುವ ಏರ್ಪಾಡಾಗಿತ್ತು. ಮರಾಠಾ ಸರದಾರರೆಲ್ಲರೂ ಉತ್ಸಾಹಭರಿತರಾಗಿ ಬಂದು

ಸೇರಿದ್ದರು. ನಾನಾ ದೇಶಗಳಿಂದ ವೈದಿಕ ಬ್ರಾಹ್ಮಣರು ಬಂದಿದ್ದರು. ಪ್ರತಿ ವರ್ಷವೂ ಪ್ರತಾಪಘಡದಲ್ಲಿ ನವರಾತ್ರಿ ಉತ್ಸವಗಳು ನಡೆಯುತ್ತವೆಂಬುದು ಮಹಾರಾಷ್ಟ್ರ ದೇಶದಲ್ಲೆಲ್ಲಾ ಪ್ರಸಿದ್ಧವಾಗಿದ್ದಿತು. ಅದು ನಾಡುಹಬ್ಬ. ನಾಡಿನ ಜನರೆಲ್ಲರಿಗೂ ಆ ಉತ್ಸವವನ್ನು ನೋಡುವ ಆಕಾಂಕ್ಷೆ. ಎಲ್ಲದಕ್ಕಿಂತಲೂ ಅತಿಶಯವಾಗಿ ಸಮರ್ಥರಾಮದಾಸರು ಆ ಉತ್ಸವಕ್ಕೆ ಬರುತ್ತಾರೆ. ಆ ಮಹಾಪುರುಷನ ದರ್ಶನಮಾಡಿ ಆಶೀರ್ವಾದ ಪಡೆಯುವುದು ಒಂದು ಸುಯೋಗ. ನಾನಾ ಕಡೆಗಳಿಂದ ಜನರು ಬಂದು ಸೇರಲಾರಂಭಿಸಿದ್ದರು. ಭವಾನಿ ದೇವಾಲಯವು ಚಪ್ಪರಗಳಿಂದಲೂ ತಳಿರು ತೋರಣಗಳಿಂದಲೂ ಅಲಂಕರಿಸಲ್ಪಟ್ಟಿತ್ತು. ವಿಸ್ತಾರವಾದ ಯಾಗಶಾಲೆ, ಭೋಜನಶಾಲೆ, ಅತಿಥಿ ಶಾಲೆಗಳು ನಿರ್ಮಾಣ ಮಾಡಲ್ಪಟ್ಟಿದ್ದವು. ಶಿವಾಜಿಯ ಸಂಗಡಿಗರೆಲ್ಲರೂ ಅಲ್ಲಿ ಸೇರಿದ್ದರು. ಬ್ರಾಹ್ಮಣರಿಗೆ ದೇವತಾದರ್ಶನ,ಚಂಡೀಯಾಗದ ದರ್ಶನ, ವಿದ್ವತ್ ಗೋಷ್ಠಿಗಳು, ಭವಾನಿಯ ದರ್ಶನ, ಸಮರ್ಥ ರಾಮದಾಸರ ದರ್ಶನ ಮೃಷ್ಟಾನ್ನ ಭೋಜನ, ಕೈತುಂಬಾ ದಕ್ಷಿಣೆ, ಇದಕ್ಕಿಂತಲೂ ಇಹಪರ ಸಾಧಕವಾದ ಪುಣ್ಯಕಾರ್ಯಗಳು ಮತ್ತೇನು ಬೇಕು ?

ರಾಜಕೀಯನಾಗಿ ಸರದಾರರೆಲ್ಲರಿಗೂ ಸಮಾಲೋಚನೆ, ಉತ್ಸವಗಳು, ಸಂಧ್ಯಾಕಾಲದಲ್ಲಿ ಕುಸ್ತಿ, ಕತ್ತಿಯ ವರಸೆ ಇವೇ ಮುಂತಾದ ಆಟಪಾಟಗಳು. ಇಂಥಾ ಸರ್ವಜನಾದರಣೀಯವಾದಉತ್ಸವವು ಮಹಾರಾಷ್ಟ್ರದಲ್ಲಿಬೇರೆಲ್ಲಿಯೂ ಇಲ್ಲ. ಮಹಾರಾಷ್ಟ್ರದಲ್ಲೇ ಏಕೆ ? ಇಡೀ ಹಿಂದೂಸ್ಥಾನದಲ್ಲಿ ಮತ್ತೆಲ್ಲಿಯೂ ಆ ಕಾಲದಲ್ಲಿ ನವರಾತ್ರಿ ಉತ್ಸವವು ಇಷ್ಟೊಂದು ವೈಭವದಿಂದ ನಡೆಯುತ್ತಿರಲಿಲ್ಲ. ಎಲ್ಲೆಲ್ಲಿಯೂ ತುರುಕರ ಹಾವಳಿ. ಹಿಂದುಗಳು ಯಾವ ಉತ್ಸವವನ್ನು ನಡೆಸಿದರೂ ಮುಸಲ್ಮಾನರಿಗೆ ಕಣ್ಣು ಕೆಂಪಾಗುತ್ತಿದ್ದಿತು. ಯಾವುದಾದರೊಂದು ಕೀಟಲೆ ಜಗಳವನ್ನೆತ್ತಿ ಉತ್ಸವಗಳನ್ನು ಹಾಳುಮಾಡುತ್ತಿದ್ದರು ಇಂಥಾ ಪರಿಸ್ಥಿತಿಯಲ್ಲಿ ವೈಭವದಿಂದ ಉತ್ಸವವನ್ನು ನಡೆಸಲು ಯಾರಿಗೆತಾನೆ ಧೈರ್ಯ ? ಮಹಾರಾಷ್ಟ್ರದ ವಾತಾವರಣವೇ ಬೇರೆಯಾಗಿದ್ದಿತು.ಎಲ್ಲೆಲ್ಲಿಯೂ ನವರಾತ್ರಿ ಉತ್ಸವ, ರಾಮನವಮಿ, ಕೃಷ್ಣಾಷ್ಟಮಿಯ ಉತ್ಸವಗಳು, ಕಾಮನ ಹಬ್ಬ, ಯುಗಾದಿ, ದೀವಳಿಗೆಗಳು ವಿಶೇಷಉತ್ಸಾಹದಿಂದ ನಡೆಸಲ್ಪಡುತ್ತಿದ್ದವು

ತುರಕರ ಭಯವಿಲ್ಲ. ತುರುಕರು ಕೂಡ ಈ ಉತ್ಸವಗಳನ್ನು ನೋಡಿ ಸಂತೋಷಪಡುತ್ತಿದ್ದರು. ತಮ್ಮ ಕೈಲಾದ ಸಹಾಯಗಳನ್ನೆಲ್ಲಾ ಮಾಡಿ ಕೊಡುತ್ತಿದ್ದರು. ಪ್ರತಾಪಘಡದ ನವರಾತ್ರಿ ಉತ್ಸವಕ್ಕೆ ಒಂದು ವೈಶಿಷ್ಟ್ಯ ವಿದ್ದಿತು. ಶಿವಾಜಿ ಮಹಾರಾಜನು ಸ್ವತಃ ನಿಂತು ನಡೆಸುವ ಉತ್ಸವ. ಸಮರ್ಥ ರಾಮದಾಸರು ಭಾಗವಹಿಸುವ ಉತ್ಸವ. ಮಹಾರಾಷ್ಟ್ರದ ಸಕಲ ಸಂಪದ್ವೈಭವಗಳನ್ನೂ ಅಲ್ಲಿ ಕಾಣಬಹುದಿತ್ತು.

ಶಿವಾಜಿಯ ಸಂಗಡಿಗರೆಲ್ಲರೂ ಪ್ರತಿದಿನವೂ ಬೈಟಕ್ ಸೇರಿ, ಸಮಾಲೋಚನೆ ನಡೆಸುತ್ತಿದ್ದರು. ಬಿಜಾಪುರದ ಸುಲ್ತಾನನು ಸತ್ತುಹೋಗಿದ್ದಾನೆ. ಆ ರಾಜ್ಯದಲ್ಲಿ ಕಸಿವಿಸಿಯಾಗುತ್ತಿದೆ. ಸೇನಾಧಿಪತಿಗಳು ವಜೀರಅಧಿಕಾರಕ್ಕೆ ಮೇಲಾಟವಾಡುತ್ತಾರೆ. ಇಂಥಾ ಸಂದರ್ಭದಲ್ಲಿ ನಾಲ್ಕಾರು ಗುಂಪುಗಳಾಗುತ್ತವೆ. ತುರುಷ್ಕ ಸೇನಾಧಿಪತಿಗಳು ಒಬ್ಬರನ್ನೊಬ್ಬರು ಮೂಲೋತ್ಪಾಟನ ಮಾಡುವ ಹಂಚಿಕೆ ಮಾಡುತ್ತಾರೆ. ಸೈನ್ಯಗಳ ಬಿಕ್ಕಟ್ಟು ಒಡೆದು ಹೋಗಿರುತ್ತದೆ. ಇಂತಹ ಸಮಯವನ್ನು ಬಿಟ್ಟರೆ ನಮಗೆ ಬೇರೆ ಸಮಯವು ದೊರೆಯುದೇ ಇಲ್ಲ—ಎಂದು ಸರದಾರರುಗಳು ಆಲೋಚನೆಗೆ ಮೊದಲಿಟ್ಟರು.

ನೇತಾಜಿ, ತಾನಾಜಿ, ಭೌಸ್ಲೆ, ಬಾಜೀಪ್ರಭು ಇವರುಗಳು ವಿಜಯ ದಶಮಿಯ ದಿನವೇ ಜೈತ್ರಯಾತ್ರೆ ಹೊರಡಬೇಕೆಂದು ಹೇಳಿದರು.

ಶಿವಾಜಿಯು "ನೀವುಗಳೆಲ್ಲಾ ಹೇಳಿದಂತೆ ಮಾಡುವವನು ನಾನು. ಆದರೆ ಗುರು ಸಮರ್ಥರಲ್ಲಿಯೂ ಆಲೋಚನೆ ಮಾಡಬೇಕು. ಗುರು ಕೃಪೆಯಿಲ್ಲದೇ ನಾವೆಷ್ಟು ಮಾಡಿದರೂ ಸಾರ್ಥಕವಾಗುವುದಿಲ್ಲ. ಗುರುಗಳಲ್ಲಿ ಹೋಗಿ ಎಲ್ಲವನ್ನೂ ವಿಜ್ಞಾಪನೆ ಮಾಡೋಣ" ಎಂದು ಹೇಳಿದ.

ತಾನಾಜಿಯು "ಗುರುಗಳ ಆಶೀರ್ವಾದವು ನಮ್ಮ ಮೇಲೆ ಇದ್ದೇ ಇದೆ. ಭವಾನಿಯ ಅನುಗ್ರಹವು ಸರ್ವದಾ ನಮ್ಮ ಮೇಲಿದೆ. ಯುದ್ಧವಿಗ್ರಹಗಳ ಬಗ್ಗೆ ನಾನೊಂದು ಮಾತು ಹೇಳುತ್ತೇನೆ. ಅದು ಅನುಭವದ ಮಾತು. ನಮ್ಮ ಸೈನ್ಯಗಳು ಸಿದ್ಧವಾಗಿವೆ. ತರಬೇತಾಗಿವೆ. "ತೇಜ್" ಆಗಿವೆ. ಇವರನ್ನು ಸುಮ್ಮನೆ ಕೂಡಿಸುವುದೆಂತು? ಅವರಿಗೆ ಬೇರೇನು ಕೆಲಸವಿದೆ? ಸುಮ್ಮನೆ ಕುಳಿತರೆ ಸಡಿಲವಾಗಿ ಹೋಗುತ್ತದೆ, ನೀತಿಯು ತಪ್ಪಿ ಹೋಗು

ತ್ತದೆ. ಯುದ್ಧ ಮಾಡಲೇಬೇಕು. ಅದೇ ಯೋಧರ ಧರ್ಮ. ಇಲ್ಲದಿದ್ದರೆ ಸೈನ್ಯಗಳನ್ನು ವಿಸರ್ಜನೆ ಮಾಡಿಬಿಟ್ಟು ಹೊಲ ಗದ್ದೆಗಳನ್ನು ಉತ್ತು ಬಿತ್ತಿ ಬೇಸಾಯ ಮಾಡುವುದಕ್ಕೆ ಹಚ್ಚಬೇಕು. ಯುದ್ಧಕ್ಕೆ ಬೇಕಾದಷ್ಟು ಅವಕಾಶವಿದೆ ನಾವು ಮಾಡಿರುವ ಸಂಕಲ್ಪ, ಶಪಥಗಳೇನು? ದಕ್ಷಿಣ ದಲ್ಲಿ ರಾಮೇಶ್ವರದವರೆಗೆ ಉತ್ತರದಲ್ಲಿ ಹಿಮಾಲಯದ ಮೇಲೆ ಕೈಲಾಸದವರೆಗೆ ಮುಸಲ್ಮಾನ್ ಪ್ರಭುತ್ವವನ್ನು ನಾಶಮಾಡುತ್ತೇವೆಂದು ಭವಾನಿಯ ಎದುರಿಗೆ ಪ್ರತಿದಿನವೂ ಪ್ರಮಾಣ ಮಾಡುತ್ತೇವೆ. ಒಂದಾಗುತ್ತಲೇ ಒಂದು ರಾಜ್ಯಗಳ ಮೇಲೆ ಜೈತ್ರಯಾತ್ರೆ ಮಾಡಲೇಬೇಕು. ಆದಕ್ಕೇನು ಹೇಳುವಿರಿ? ಸಮರ್ಥ ರಾಮದಾಸರು ಇದನ್ನು ಅರಿಯದವರೇನೂ ಅಲ್ಲವಷ್ಟೆ?" ಎಂದು ಹೇಳಿದ.

ಶಿವಾಜಿಯು ಸಂಗಡಿಗರೆಲ್ಲರೂ ರಾಮದಾಸನ ದರ್ಶನಕ್ಕೆ ಹೊರಟರು.

ಭವಾನಿ ದೇವಾಲಯದ ಪಶ್ಚಿಮಕ್ಕಿರುವ ತಟಾಕದ ಮೇಲೆ ರಾಮದಾಸರ ಕುಟೀರ. ಎದುರಿಗೆ ನೂರಾರು ಬೀಳುಗಳನ್ನು ಬಿಟ್ಟುಕೊಂಡು ಆಕಾಶಕ್ಕೇ ದೊಡ್ಡ ಛತ್ರಿಯನ್ನು ಹಿಡಿದಂತೆ ನಿಂತಿರುವ ಆಲದಮರ. ಅದರ ಬುಡದಲ್ಲಿ ರಾಮದಾಸರಿಗಾಗಿ ನಿರ್ಮಿಸಲ್ಪಟ್ಟಿದ್ದ ಗುರುಪೀಠ. ಸುತ್ತಲೂ ಅಚ್ಚುಗಟ್ಟು ಮಾಡಿದ್ದ ವಿಶಾಲವಾದ ಭೂಪ್ರದೇಶ. ಅಲ್ಲಿ ಸರದಾರರೆಲ್ಲರೂ ಹೋಗಿ ಭಕ್ತಿ ಭಾವದಿಂದ ರಾಮದಾಸರ ಆಗಮನವನ್ನು ನಿರೀಕ್ಷಿಸುತ್ತಿದ್ದರು. ರಾಮದಾಸರು ಆಹ್ನಿಕಗಳನ್ನು ಮುಗಿಸಿಕೊಂಡು ಬಂದು ಕಟ್ಟೆಯ ಮೇಲೆ ಗುರುಪೀಠದಲ್ಲಿ ಮಂಡಿಸಿದರು.

ಶಿವಾಜಿಯ ಸಂಗಡಿಗರ ಕಡೆಗೆ ತಿರುಗಿ ನೋಡಿ "ನೀವುಗಳೆಲ್ಲಾ ಹುರುಪಿ ನಿಂದ ಬಂದುಬಿಟ್ಟದ್ದೀರಿ. ಏನೋ ಜಯಗಳಿಸಿ ತಂದಿರುವಂತೆ ನಿಮ್ಮ ಪ್ರಪುಲ್ಲ ಮುಖಗಳು ಹೇಳುತ್ತಿವೆ. ಏನು? ಭವಾನಿಗೆ ನಿಮ್ಮೆಲ್ಲರ ಕಾಣಿಕೆ ಯೇನು?" ಎಂದು ಪ್ರಶ್ನೆ ಮಾಡಿದರು.

ಶಿವಾಜಿಯು ಭಕ್ತಿಭಾವದಿಂದ ಕೈಮುಗಿದು ನಿಂತುಕೊಂಡು, "ಗುರು ದೇವಾ ನಮ್ಮ ಕಾಣಿಕೆ. ಸರ್ವಸ್ವ ಸಮರ್ಪಣೆ, ಒಂದು ಬಾರಿಯಲ್ಲ. ಆಮರಣಾಂತ ರಾಮಚಂದ್ರನ ಸನ್ನಿಧಾನದಲ್ಲಿ ಒಂದೇ ಬಾರಿ ಸಮರ್ಪಣೆ

ಮಾಡಿಬಿಟ್ಟಿದೇವೆ. ಸಮರ್ಪಣೆಗೆ ಮತ್ತೇನಿದೆ? ಶ್ರೀರಾಮನ ಆಜ್ಞೆಯಂತೆ ನಡೆಯುವುದೊಂದೇ ನಮ್ಮ ಧರ್ಮ. ಆದಕ್ಕೆ ತಮ್ಮ ಅಪ್ಪಣೆ ಪಡೆಯಲು ಇವರೆಲ್ಲರೂ ಬಂದಿದ್ದಾರೆ" ಎಂದು ಹೇಳಿ ಹಿಂತಿರುಗಿ "ತಾನಾಜೀ, ಇತ್ತ ಬಾ, ಬಾಜೀ ಪ್ರಭು, ಮುಂದೆ ಬಾ. ಹೇಳಿರಿ, ನಿಮ್ಮ ಆಕಾಂಕ್ಷೆಗಳನ್ನು ಶ್ರೀರಾಮನ ಮುಂದೆ ಹೇಳಿರಿ" ಎಂದನು.

ತಾನಾಜಿಯು ಮುಂದೆ ಬಂದು ಗುರುವಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಎದ್ದು ನಿಂತು "ಗುರು ಮಹಾರಾಜ್' ನಾವು ವೀರವ್ರತವನ್ನು ಕೈಗೊಂಡ ದಿನವೇ ಪ್ರತಿಜ್ಞೆ ಮಾಡಿದ್ದೇವೆ. ನವರಾತ್ರಿಯ ವಿಜಯದಶಮಿಯ ದಿನ ನಾವುಗಳು ಒಂದು ವಿಜಯಯಾತ್ರೆಗೆ ಹೊರಡಲೇಬೇಕು. ಅದು ಪೊಳ್ಳುಯಾತ್ರೆಯಾಗಬಾರದು. ಆಟದ ವಿಜಯದಶಮಿಯಾಗಬಾರದು. ಒಂದು ದೊಡ್ಡ ವಿಜಯ ಗಳಿಸಲೇಬೇಕು. ಇದು ನಾವು ಮಾಡಿಕೊಂಡಿರುವ ಪ್ರತಿಜ್ಞೆ. ಗುರುದೇವಾ, ಬಿಜಾಪುರದತ್ತ ನೋಡಿರಿ. ಸುಲ್ತಾನನು ಸತ್ತು ಹೋದ. ಅಂತಃಕಲಹಗಳು ಮೇಲೆದ್ದಿವೆ. ನಾವು ಹಠಾತ್ತನೆ ಬಿಜಾಪುರದ ಮೇಲೆ ಬಿದ್ದು ಹೋರಾಡಬೇಕು. ತಮ್ಮ ಅನುಗ್ರಹದಿಂದ ಜಯವು ನಮ್ಮದು, ಈ ಇಡೀ ದಕ್ಕನ್ ರಾಜ್ಯವು ಹಿಂದೂ ರಾಜ್ಯವಾಗುತ್ತದೆ. ಆದಕ್ಕೆ ಅಪ್ಪಣೆಯಾಗಬೇಕು. ಅನುಗ್ರಹವಾಗಬೇಕು" ಎಂದು ಹೇಳಿದನು.

ರಾಮದಾಸನು ಗಂಭೀರವಾದ ನಗುವನ್ನು ನಕ್ಕು ಕಣ್ಣುಗಳನ್ನು ಮುಚ್ಚಿ ಧ್ಯಾನಾಸಕ್ತನಾದನು.

ಮರಾಠಾ ಸರದಾರರೆಲ್ಲರೂ ಗುರುದೇವನ ಕಡೆಗೆ ದಿಟ್ಟಿಸಿ ನೋಡುತ್ತಾ ನಿಶ್ಶಬ್ದವಾಗಿ ನಿಂತುಕೊಂಡರು. ಎಲ್ಲರ ಹೃದಯಗಳೂ ಮಿಡಿಯುತ್ತಿದ್ದವು. ಗುರುದೇವನ ತುಟಿಗಳು ಅಲುಗುವುದನ್ನೇ ನಿರೀಕ್ಷಿಸುತ್ತಾ ನಿಂತಿದ್ದರು.

ಬಹಳ ಹೊತ್ತಾದ ಮೇಲೆ ರಾಮದಾಸನು ಎಲ್ಲರ ಕಡೆಗೂ ಕಟಾಕ್ಷವನ್ನು ಬೀರಿದನು. ಮುಖವು ಸೌಮ್ಯವಾದ ಪ್ರಶಾಂತವಾದ ಕಳೆಯಿಂದ ತುಂಬಿದ್ದಿತು.

ಮೊದಲು ಶಿವಾಜಿಯ ಕಡೆಗೆ ನೋಡಿ, "ಶಿವ ಪ್ರಭು, ಈ ಶಮಣಿ ವೀರದರಿಗೆ ನೀನೇನು ಹೇಳಿದೆ?" ಎಂದು ಕೇಳಿದನು.

ಶಿವಾಜಿಯು "ಗುರುದೇವಾ. ನನ್ನ ಪರೀಕ್ಷೆಯು ಇನ್ನೂ ಪೂರೈಸಿಲ್ಲವೇ? ನಾನು ನನ್ನ ಇಷ್ಟದಂತೆ ಹೇಳುವ ಮಾತೆಲ್ಲಿ ಬಂದಿತು? ಗುರುವಿನ ಮಾತು ನಮ್ಮೆಲ್ಲರಿಗೂ ಶಿರೋಧಾರ್ಯ. ನಾನೇನೂ ಹೇಳಲಿಲ್ಲ. ಹೇಳುವುದಕ್ಕೆ ನನ್ನ ಬುದ್ಧಿಯಲ್ಲಿ ಏನೂ ಇಲ್ಲ. ಶ್ರೀರಾಮಚಂದ್ರನ ಇಚ್ಛೆ. ಗುರುವಿನ ಆಜ್ಞೆ. ಅಪ್ಪಣೆಕೊಡಿಸೋಣವಾಗಲಿ," ಎಂದು ಹೇಳಿದನು.

ರಾಮದಾಸನು "ತರುಣವೀರರೇ, ನಿಮ್ಮ ಸಂಕಲ್ಪವು ಶುದ್ಧವಾಗಿದೆ, ಅದಕ್ಕೆ ವಿಕಲ್ಪಬಾರದು ಯುದ್ಧಕ್ಕಾಗಿ ಬಿಜಾಪುರದ ಕಡೆಗೆ ನೀವು ಧಾವಿಸುವ ಕಾರಣವಿಲ್ಲ. ಬಿಜಾಪುರವೇ ಉರುಳಿ ಉರುಳಿ ನಮ್ಮ ಹತ್ತಿರ ಬರುತ್ತದೆ. ನೀವು ಸಿದ್ಧರಾಗಿರಬೇಕು. ಇದೇ ಶ್ರೀರಾಮಚಂದ್ರನ ಆಜ್ಞೆ. ಲೌಕಿಕ ವಾಗಿಯೂ ನಾವು ಯೋಚನೆಮಾಡಬೇಕು. ಬಿಜಾಪುರದ ಕೋಟೆಯು ಅಭೇದ್ಯವಾದ ಕೋಟೆ. ಪ್ರಚಂಡ ಸೈನವನ್ನು ತೆಗೆದುಕೊಂಡು ಹೋಗಿ ಔರಂಗಜೇಬ್ ಬಾದಷಹನು ವಿಮುಖನಾಗಿ ಬಂದಿದ್ದಾನೆ. "ಶಿರೋಚ್ಛೇದೇ ಮೂರ್ಛತಿ ಪಾರುತಸ್ಯ" ಎಂಬಂತೆ ಆಗಬಾರದು. ಕ್ಷಿಪ್ರದಲ್ಲಿಯೇ ನಿಮಗೆ ಬಿಜಾಪುರದವರೊಡನೆ ಸಂಗ್ರಾಮವು ಸಿದ್ಧವಾಗಿದೆ" ಎಂದು ಹೇಳಿದನು.

ಸರದಾರರೆಲ್ಲರೂ ಅಭಿವಂದನ ಮಾಡಿ ಹೊರಟರು.

ಯಾರ ಮನಸ್ಸಿಗೂ ತಣಿವಾಗಲಿಲ್ಲ. ಶಾಂತಿಯು ಲಭಿಸಲಿಲ್ಲ. ಎತ್ತಿದ ಕೈ ಕೆಳಗಿಳಿಸಲು ಮನಸ್ಸುಗಳು ಒಪ್ಪಲಿಲ್ಲ.

ಶಿವಾಜಿಯು ನಗುತ್ತಾ "ತಮ್ಮಗಳಿರಾ, ಮೆಲ್ಲಗೆ ಬರುವುದಕ್ಕೆ ತಲ್ಲಣ ವೇಕೆ? ಗುರುವಿನ ಆಜ್ಞೆಯು ಪ್ರತ್ಯಕ್ಷನಿದರ್ಶನಕ್ಕೆ ಬರುತ್ತದೆ. ಆಗ ನಿಮ್ಮ ಮನಸ್ಸುಗಳ ಚಾಂಚಲ್ಯವು ಹೋಗುತ್ತದೆ. ಸ್ಥಿರವಾಗುತ್ತದೆ. ಸ್ಥಿರವಾದ ಶಕ್ತಿಸಂಚಯವೇ ಜಯದ ಮೂಲ" ಎಂದು ಹೇಳಿದನು.

ನವರಾತ್ರಿಯು ಮುಗಿಯಿತು. ವಿಜಯದಶಮಿಯೂ ಆಯಿತು. ಭವಾನಿಗೆ ವಿಜಯೋತ್ಸವ ಮಾಡಿಸಿದರು.

ಸಮರ್ಥ ರಾಮದಾಸರು ಭಕ್ತಕೋಟಿಗೆಲ್ಲಾ ದರ್ಶನವಿತ್ತು ಆಶೀರ್ವದಿಸಿದರು. ಭವಾನಿಯ ಸಮ್ಮುಖದಲ್ಲಿ ಸ್ತುತಿಗೈದು ಶಿವಾಜಿಯನ್ನು ಸಂಗಡಿಗರೊಂದಿಗೆ ಆಶೀರ್ವದಿಸಿ, ದೇವಿಯ ಪ್ರಸಾದವನ್ನು ಇತ್ತು, ಭದ್ರಾ ಚಲಕ್ಕೆ ಪ್ರಯಾಣ ಬೆಳೆಸಿದರು.

## ೧೨

ಬಿಜಾಪುರವು ದಕ್ಕನ್ನಿನಲ್ಲಿ ಅತ್ಯಂತ ಸುಂದರವಾದ ನಗರ. ನಗರದ ಉದ್ಯಾನಗಳು, ಉದ್ಯಾನಗಳಲ್ಲಿ ತಟಾಕಗಳು, ತಟಾಕಗಳಲ್ಲಿ ಕಾರಂಜಿಗಳು ಶೋಭಿಸುತ್ತಿದ್ದುವು. ನಗರವೆಲ್ಲಾ ಅಂದವಾದ ದೊಡ್ಡ ಚಿಕ್ಕ ಮಹಲುಗಳಿಂದ ತುಂಬಿಹೋಗಿತ್ತು. ಕೋಟೆಯು ಬಲು ಭದ್ರವಾದ ಕೋಟೆ. ಇವೆಲ್ಲಾ ಆದಿಲ್ ಷಾಹನ ಸುಂದರ ನಿರ್ಮಾಣಗಳು. ಅವನ ಹೆಂಡತಿ ಲೋಕೋತ್ತರ ಸುಂದರಿ ಮುಮ್ತಾಜ್ ಬೇಗಂ. ನಗರದ ನಾಲ್ಕೈದು ಮೈಲಿಗಳ ದೂರದ ವರೆಗೆ ತೋಪುಗಳು. ಸಣ್ಣ ಸಣ್ಣ ಬೆಟ್ಟಗಳು. ಅವೆಲ್ಲವೂ ರಸಿಕರ ವಿಹಾರ ಭೂಮಿಗಳಾಗಿ ಅಚ್ಚುಕಟ್ಟು ಮಾಡಲ್ಪಟ್ಟಿದ್ದುವು. ಮುಮ್ತಾಜ್ ಬೇಗಂಳು ಕವಯಿತ್ರಿ. ಗಾನದಲ್ಲಿ ನಿಪುಣೆ. ದಾನಧರ್ಮಗಳಲ್ಲಿ ಎತ್ತಿದ ಕೈ. ಸುಲ್ತಾನನಿಗಿಂತಲೂ ಮುಮ್ತಾಜಳ ಪ್ರಶಂಸೆಯೇ ಹಿಂದೂಸ್ಥಾನದಲ್ಲೆಲ್ಲಾ ಹರಡಿತ್ತು. ಈ ಸುಲ್ತಾನರುಗಳು ಟರ್ಕಿಯಿಂದ ಬಂದ ಟರ್ಕೀ ಸುಲ್ತಾನನ ನೇರವಾದ ಬುಡಕಟ್ಟಿನವರೆಂದು ಹೆಮ್ಮೆ ಕೊಚ್ಚಿಕೊಳ್ಳುತ್ತಿದ್ದರು. ಮೊಗಲರಿಗಿಂತಲೂ ತಾವು ಮೇಲಂತಸ್ತಿನವರೆಂದು ಅವರು ನಂಬಿದ್ದರು. ನಿಜವಾಗಿಯೂ ಅವರ ವೈಭವ ಔದಾರ್ಯಗಳು ಹಾಗೆಯೇ ಇದ್ದುವು. ಹಿಂದೂಸ್ಥಾನದಲ್ಲಿ ಮುಸಲ್ಮಾನ್ "ತರುಣರು ಬಿಜಾಪುರಕ್ಕೆ ಹೋಗಬೇಕು. ಅಲ್ಲಿರಬೇಕು. ಇಲ್ಲದಿದ್ದರೆ ಹುಟ್ಟಿದಕ್ಕೆ ಸಾರ್ಥಕವೇನು?" ಎಂದುಕೊಳ್ಳುತ್ತಿದ್ದರು. ಹಿಂದುಗಳಿಗೂ ಹಾಗೆಯೇ ಆಶ್ರಯ ಸಿಕ್ಕುತ್ತಿತ್ತು. ಎಷ್ಟೋ ಹಿಂದೂ ನಟಗಾಯಕರುಗಳು ಬಿಜಾಪುರದ ಆಸ್ಥಾನದಲ್ಲಿ ಗೌರವವನ್ನು ಪಡೆದಿದ್ದರು.ಮುಮ್ತಾಜ್ ಬೇಗಂಳಿಗೆ ಜಾತಿಯೆಂದರೇನೋ ಅದರ ಪರಿವೆಯೇ ಇರಲಿಲ್ಲ. ಸುಂದರವಾದ ಸ್ತ್ರೀ ಪುರುಷರೆಲ್ಲರೂ ಒಂದು ಜಾತಿ. ವಿದ್ಯೆ ಕಲೆಗಳು ಆ ಜಾತಿಯ ಭೂಷಣಗಳು. ಕುರೂಪಿಗಳು, ಕುಂಟರು, ಕಿವುಡರು, ಕುರುಡರು, ಇವರೆಲ್ಲರೂ ಪಾಪ ಜನ್ಮಗಳು. ಇದು ಮುಮ್ತಾಜಳ ಕಲ್ಪನೆ. ಆ ಪಾಪ ಜನ್ಮಗಳಲ್ಲಿಯೂ

ಪ್ರಖರವಾದ ವಿದ್ಯಾಪಾಂಡಿತ್ಯ ಕಲಾನೈಪುಣ್ಯಗಳಿದ್ದರೆ ಅದು ದೇವರ ಅನುಗ್ರಹ. ಮಮ್ತಾಜಳು ಎಲ್ಲರೊಡನೆಯೂ ಮೃದು ಭಾಷೆಯಿಂದ ವಾದಿಸುವಳು. ವಿದ್ವಾಂಸರೊಡನೆಯೂ ಅವಳು ವಾದಿಸದೇ ಬಿಡುತ್ತಿರಲಿಲ್ಲ. ಈ ಪಾಪ ಪುಣ್ಯಗಳ ಜಿಜ್ಞಾಸೆಯನ್ನು ಬೇಗಂಸಾಹೇಬಳು, ಎಲ್ಲರೊಡನೆಯೂ ಹಚ್ಚುತ್ತಿದ್ದಳು. ಗೆಲುವು ಮಮ್ತಾಜಳದೇ ! ಬಿಜಾಪುರದ ಶ್ರೀಮಂತರು ಉನ್ನತಾಧಿಕಾರಿಗಳು ಕುಟುಂಬಗಳಲ್ಲಿ ವಿವಾಹಮಾಡಿಕೊಳ್ಳಬೇಕಾದರೂ ಮಮ್ತಾಜಳ ಒಪ್ಪಿಗೆಯನ್ನು ಪಡೆಯುತ್ತಿದ್ದರು. ಒಂದು ಬಾರಿ ನೋಡಿದರೆ ಅವಳು ವರ ಸಾಮ್ಯವನ್ನು ಹೇಳಿಬಿಡುತ್ತಿದ್ದಳು. ಎಷ್ಟೋ ತರುಣರ ಜೀವನವು ಹಾಗೆಯೇ ಸುಖಮಯವಾಗಿಯೇ ಕಳೆಯುತ್ತಿದ್ದವು. ಮಮ್ತಾಜಳು ವಿದ್ವಾಸರೊಡನೆ ಖಾಜಿಗಳೊಡನೆ ವಾದಮಾಡುವಾಗಲೂ ವರಸಾಮ್ಯವನ್ನು ಅರಿತು ಮದುವೆ ಮಾಡಿದರೆ ಸ್ತ್ರೀಯರಲ್ಲಿ ಕಳಂಕವೇ ಇರುವುದಿಲ್ಲವೆಂದು ಹೇಳುತ್ತಿದ್ದಳು. ಮದುವೆ ದೇವರು ಗಂಟುಹಾಕುತ್ತಾರೆಂದು ಹೇಳುವ ನಾಣ್ಣುಡಿಯ ಅರ್ಥವೇ ಇದೆಂದು ಮಮ್ತಾಜಳು ಹೇಳುತ್ತಿದ್ದಳು. ಅತ್ಯುನ್ನತ ಕುಲಸ್ತ್ರೀಯರಲ್ಲಿ ಮೊದಲು ಮುಖಪರದೆಯನ್ನು ತೆಗೆದೆಸೆದವಳು ಮಮ್ತಾಜಳು. ಮಮ್ತಾಜಳು ಈ ಐಶ್ವರ್ಯ ವೈಭವಗಳನ್ನು ಮಾತ್ರವೇ ನೋಡುತ್ತಿರಲಿಲ್ಲ. ಬಡವರ ಕಡೆಗೂ ಅವಳ ದೃಷ್ಟಿಯು ಇದ್ದೇ ಇದ್ದಿತು. ಬಿಜಾಪುರದಲ್ಲಿ ನೆಲೆಸುವ ಬಡವರಿಗೆಲ್ಲಾ ಹಬ್ಬಹಬ್ಬಗಳಲ್ಲಿಯೂ ವಸ್ತ್ರಾಲಂಕಾರಗಳನ್ನು ದಾನಮಾಡುವುದೇ ಶ್ರೀಮಂತರ ವೈಭವಕ್ಕೆ ಅಲಂಕಾರವೆಂದು ಮಮ್ತಾಜಳು ಹೇಳುತ್ತಿದ್ದಳು. ತಾನೂ ಹಾಗೆ ಮಾಡುತ್ತಿದ್ದಳು. ಹಿಂದುಗಳು ಹಬ್ಬಗಳಲ್ಲಿ ಬಾಗಿನಗಳನ್ನು ಕೊಡುವಂತೆ ಶ್ರೀಮಂತರು ಹಬ್ಬಹಬ್ಬಗಳಲ್ಲಿಯೂ ಯಥೇಚ್ಛ ಉಡುಗೊರೆಗಳನ್ನು ನೀಡುವ ವಾಡಿಕೆಯನ್ನು ಮಾಡಿಬಿಟ್ಟರು. ಸುಲ್ತಾನರ ಅನುಗ್ರಹ ಬೇಕಾದರೆ ಬೇಗಂ ಸಾಹೇಬಳ ಅನುಗ್ರಹವನ್ನು ಸಂಪಾದಿಸಬೇಕು. ಮಮ್ತಾಜಳ ಅನುಗ್ರಹವನ್ನು ಸಂಪಾದಿಸಬೇಕಾದರೆ ಬಡಬಗ್ಗರಿಗೆ ವಿಶೇಷ ದಾನಮಾಡಬೇಕು. ಇದು ಬಿಜಾಪುರದ ಮನೆ ಮಾತಾಗಿತ್ತು. ಆ ನಗರಿಯಲ್ಲಿ ಬಡವರ ಮನೆಗಳು ಇರಲಿಲ್ಲವೆಂದಲ್ಲ. ಅವುಗಳನ್ನು ಅಚ್ಚುಕಟ್ಟಾಗಿಡುವುದು ವಾಸಸ್ಥರ ಕರ್ತವ್ಯ. ಅವಕ್ಕೆ ಬೇಕಾದ ಸಲಕರಣೆಗಳನ್ನು ಕೊಡುವುದು ದರ್ಬಾರಿನಹೊಣೆ. ಹೀಗಿತ್ತು ಬಿಜಾಪುರದ ಪ್ರಾಚೀನ ವೈಭವ.

ಈ ಕತೆಯ ಕಾಲಕ್ಕೆ ಆ ಮಮ್ತಾಜಳು ಗೋಲ್ ಗುಂಬಜ್‌ನಲ್ಲಿ ಸಮಾಧಿಯಾಗಿದ್ದಳು ಆದರೆ ಬಿಜಾಪುರವು ಬಹುಕಾಲ ಮಮ್ತಾಜಳ ಮನೋವೈಶಾಲ್ಯದ ಸೌಂದರ್ಯೋಪಾಸದ ರಾಗರಂಜಿತವಾಗಿದ್ದಿತು.

ಬಿಜಾಪುರದ ಹೊರವಲಯದ ಉಪತ್ಯಕೆಯಲ್ಲಿ ಸಣ್ಣದೊಂದು ಮನೆ. ಮನೆಯು ಸಣ್ಣದಾದರೂ ಅಚ್ಚುಕಟ್ಟಾಗಿದ್ದಿತು ಸಣ್ಣ ಕೆಮ್ಮಣ್ಣುಗಳನ್ನು ಬಳಿದು ಕಣ್ಣಿನ ನೋಟಕ್ಕೆ ಡಿಕಾವಾಗಿ ಕಾಣುತ್ತಿತ್ತು.

ಹೊರಬಾಗಿಲಿನ ಸಣ್ಣ ಜಗಲಿಯ ಮೇಲೆ ಹಬೀದಾ ಬೀಬಿಯು ಕುಳಿತುಕೊಂಡು ಬಟ್ಟೆಗಳನ್ನು ಹೊಲೆಯುತ್ತಿದ್ದಳು. ಎಲೆ ಅಡಿಕೆಗಳನ್ನು ಸವಿಯುತ್ತಾ ಬಂದವರೊಡನೆ ಒಂದೊಂದು ಚಾಟೋಕ್ತಿಗಳನ್ನು ನುಡಿಯುತ್ತಾ ಹೊಲಿಗೆಯ ಕೆಲಸವನ್ನು ಮುಂದುವರಿಸುತ್ತಿದ್ದಳು.

ಹಬೀದಾ ಮೂವತ್ತು ವರ್ಷದ ಪ್ರಾಯದವಳು. ಸ್ವಲ್ಪ ಸ್ಥೂಲಾಂಗಿ, ಬಣ್ಣ ಎಣ್ಣೆಗೆಂಪು. ತಲೆಯ ಕೂದಲು ಹೆಚ್ಚಾಗಿಲ್ಲದಿದ್ದರೂ ಗುಂಗುರು ಗುಂಗುರಾಗಿ ಅವಳ ಅಗಲವಾದ ಮುಖಕ್ಕೆ ಅಂದ ಕೊಡುತ್ತಿದ್ದಿತು. ಕಣ್ಣುಗಳು ವಿಶಾಲವಾದ ಕಣ್ಣುಗಳು. ಆ ಕಣ್ಣುಗಳೇ ಅವಳ ಆಸ್ತಿ. ಅವಳ ಅಸ್ತ್ರವೂ ಅದೇ. ಕಣ್ಣು ಬಿಟ್ಟು ಸಣ್ಣ ಕೋಪವನ್ನು ವ್ಯಕ್ತಪಡಿಸಿದರೆ ಎಂಥಾ ಸರದಾರನಾದರೂ ಅಪಮಾನಿತನಾಗಿ ಓಡಿಹೋಗುತ್ತಿದ್ದನು.

ಶ್ರೀಮಂತರ ಕಡೆ ಕಾರಕೂನನೊಬ್ಬನು ಹಳೆಯ ಅಂಗರೇಖು ಪಗಡಿಗಳನ್ನು ಧರಿಸಿ, ಬಂದು ಬಾಗಿಲಲ್ಲಿ ನಿಂತುಕೊಂಡನು. ಕೈಯಲ್ಲಿ ದೊಣ್ಣೆಯಿತ್ತು. ಆ ದೊಣ್ಣೆಯೇ ಅವನ ಅಧಿಕಾರ ಮತ್ತು ಪ್ರತಾಪದ ಗುರ್ತು.

ಹಬೀದಳು ಸ್ವಲ್ಪಹೊತ್ತು ತನ್ನ ಹೊಲಿಗೆಯ ಕೆಲಸದಲ್ಲಿಯೇ ಮಗ್ನಳಾಗಿದ್ದಂತೆ ಅಭಿನಯಿಸಿದಳು.

ಕಾರಕೂನನು ಕೈಲಿದ್ದ ದೊಣ್ಣೆಯನ್ನು ನೆಲಕ್ಕೆ ಮೆಲ್ಲಗೆ ಬಡಿದು ಸದ್ದು ಮಾಡಿದನು.

ಹಬೀದಳು ತಲೆಎತ್ತಿ ನೋಡಿ. "ಓಹೋ ಕರೀಂ ಸಾಹೇಬರೇ ! ಏಕೆ ಮಾತನಾಡದೇ ನಿಂತಿದ್ದೀರಿ ? ಬನ್ನಿ ಕುಳಿತುಕೊಳ್ಳಿ" ಎಂದು ಹೇಳಿ ಎದುರು ಜಗುಲಿಯ ಕಡೆಗೆ ಕೈ ತೋರಿಸಿದಳು.

ಕರೀಮನು ಗಡ್ಡವನ್ನು ಸವರಿಕೊಳ್ಳುತ್ತಾ "ಬೀಬಿ, ಇದೆಲ್ಲಾ

ಸರಿಯಲ್ಲ ನೋಡು. ನನಗೆ ಬಹಳ ಕೆಲಸವಿದೆ. ಹೊತ್ತು ಮುಳುಗುತ್ತಿದೆ. ಮಹಲಿಗೆ ಬರೀ ಕೈಲಿ ಹೋಗುವಂತಿಲ್ಲ. ಏನಿದೆಯೋ ಅದನ್ನು ಬೇಗ ಕೊಟ್ಟುಬಿಡು. ಕುಳಿತುಕೊಳ್ಳುವುದಕ್ಕೆ ಪುರಸತ್ತಿಲ್ಲ," ಎಂದು ಹೇಳಿದ.

ಬೀಬಿಯು ನಮ್ರತೆಯನ್ನು ತೋರಿ, ಮಂದಹಾಸವನ್ನು ಬೀರಿ, "ಹೊತ್ತೇನೋ ಆಯಿತು, ಹಜರತ್ ಸಾಹೇಬರೇ ನೋಡಿ, ಅರಮನೆಯಲ್ಲಿ ಬಟವಾಡೆಯೇ ಆಗಿಲ್ಲ. ಯಾರನ್ನು ಬೇಕಾದರೂ ಕೇಳಿ. ನಾನೇ ಈ ಹೊಲಿಗೆಯನ್ನಾದರೂ ಪೂರೈಸಿ ಮಹಲಿಗೆ ತೆಗೆದುಕೊಂಡು ಹೋಗಿ ಕೊಟ್ಟ ನಾಲ್ಕು ಹಣ ತರೋಣವೆಂದರೆ ಇದೂ ಪೂರೈಸಿಲ್ಲ. ರಾತ್ರಿ ಹಗಲುಕೆಲಸ ಮಾಡಿದರೂ ಇದು ಪೂರೈಸುವುದಕ್ಕೆ ಇನ್ನೂ ಮೂರು ದಿನಗಳು ಬೇಕು. ದೊಡ್ಡ ಕೆಲಸ. ಮೆಹನತ್ ತೋರಿಸಬೇಕೆಂದು ಶ್ರೀಮಂತರ ಜನಾನದಿಂದ ತಂದುಬಿಟ್ಟೆ. ಇಂಥಾ ಬಟ್ಟೆ ಅವರು ಬೇರೆಯವರಿಗೆ ಕೊಡುವುದೂ ಇಲ್ಲ. ಯಾವುದೂ ಕೈಯಲ್ಲಿ ದುಡ್ಡೇ ಇಲ್ಲ. ಹೇಳಿಕೊಂಡರೆ ಮರ್ಯಾದೆ ಹೋಗತ್ತೆ. ಎಲೆ ಅಡಿಕೆಗೆ ಕೂಡ ದುಡ್ಡಿಲ್ಲ. ಕಿಸೆಯಲ್ಲಿ ಎರಡು ಹಣ ಇದ್ದರೆ ಕೊಟ್ಟು ಹೋಗಿ. ಮೂರು ದಿನಗಳಿಗೆ ಕೊಟ್ಟುಬಿಡುತ್ತೇನೆ. ನನ್ನ ಕೈಗೆ ಕೊಟ್ಟ ಹಣಕ್ಕೆ ಏನೂ ಭಯವಿಲ್ಲ. ನಿಂತೇ ಇದ್ದೀರಲ್ಲಾ, ಕುಳಿತುಕೊಳ್ಳಬಾರದೇ" ಎಂದಳು.

ಸಾಹೇಬನು ಜೋಬನ್ನು ತಟ್ಟಿ ಹಣ ಸದ್ದು ಮಾಡುತ್ತಾ ಹಣ, ಯಾರ ಹಣ ಅಂದುಕೊಂಡಿದ್ದೀಯೇ, ಬೀಬಿ. ಶ್ರೀಮಂತರ ಹಣ. ನಾನು ಒಂದು ಕಾಸೂ ಅತ್ತಿತ್ತ ಮಾಡುವನಲ್ಲ. ಹಾಗಿದ್ದರೆ ಆ ಮುದುಕಪ್ಪ ಇಷ್ಟು ದಿನ ನನ್ನನ್ನು ಇಟ್ಟುಕೊಳ್ಳುತ್ತಿದ್ದನೇ ? ಎಲ್ಲ ಆಡಳಿತವೂ ನನ್ನ ಕೈಯಲ್ಲೇ ಇದೆ ಅಂದುಕೋಂ ಎನ್ನುತ್ತಾ ಠೇಂಕಾರದಿಂದ ಎದುರು ಜಗುಲಿಯ ಮೇಲೆ ಕುಳಿತ.

"ನೋಡು ಬೀಬಿ. ನೀನು ಹೆಣ್ಣು ಹೆಂಗಸು. ನಿನ್ನ ಯಜಮಾನ ಯಾವಾಗ ಬಂದರೂ ಸಿಕ್ಕುವುದೇ ಇಲ್ಲ, ಅರಮನೆ ಸಂಬಳ ಬರಲಿಲ್ಲವೆನ್ನುತ್ತೀ, ಬಾಡಿಗೆ ಮೂರು ತಿಂಗಳುಗಳಿಂದ ಕೊಟ್ಟೇ ಇಲ್ಲ. ನಾನೇನು ಹೇಳುವುದು ? ನಿನ್ನ ಯಜಮಾನನದೇನೂ ಮುಖ್ಯವಲ್ಲ. ನೀನೇ ಯಜಮಾನೀ. ನಾನು ಬಂದಾಗ ಯಾವುದಾದರೂ ಸಬೂನು ಹೇಳಿ, ಬಿನ್ನಾಣದ ಮಾತನಾಡಿ,

ಕಳುಹಿಸಿಬಿಡುತ್ತೀ ಇವತ್ತು ನಾನು ಹಟತೊಟ್ಟು ಬಂದಿದ್ದೇನೆ. ಏನಾದರೂ ಕೊಟ್ಟೇಬಿಡಬೇಕು, ನೋಡು. ನಾವು ಒಬ್ಬೊಬ್ಬರು ಮುಖ ಕಪ್ಪು ಮಾಡಿಕೊಳ್ಳುವುದು ಚೆನ್ನಲ್ಲ. ಏನು ಹೇಳುತ್ತೀ, ಹೇಳು."

ಹಬೀಬಳು ತಲೆ ತಗ್ಗಿಸಿ, ಕಣ್ಣು ಮಿಟಕಿಸಿ, "ಅದೆಲ್ಲಾ ಬೇಡಪ್ಪಾ, ನೀನೂ ದೊಡ್ಡ ಮನುಷ್ಯ. ನಿನ್ನ ನಾನು ನೋಡುತ್ತಿದ್ದೇನೆ. ಮುಂದಿನ ವಾರ ಬಂದುಬಿಡು. ಇದೇ ದಿನ. ಇದೇ ಹೊತ್ತಿಗೆ ಬಾ ಕರಾರುವಾಕ ದೇವರ ಮುಡುಪು ಕೊಟ್ಟಂತೆ ಕೊಟ್ಟುಬಿಡುತ್ತೇನೆ" ಎಂದು ಹೇಳಿದಳು

ಕರೀಂನು ಎದ್ದು ನಿಂತ.

"ಏಳಬೇಡಪ್ಪಾ. ಒಂದು ಕ್ಷಣ ಕುಳಿತುಕೋ" ಎಂದು ಹೇಳಿ, ಎಲೆ ಅಡಿಕೆ ಚೀಲದಿಂದ ವಿಳ್ಳೆದೆಲೆಯನ್ನೂ ಅಡಿಕೆಯನ್ನೂ ಲಗುಬಗೆಯಿಂದ ತೆಗೆದು ಸುಣ್ಣ ಹಚ್ಚಿ ಮಡಿಸಿ, "ತಗೋ. ಸ್ವಲ್ಪ ಎಲೆ ಅಡಿಕೆ ಜಗಿದು ಹೋಗು," ಎಂದಳು.

ಕರೀಂನು ಏಳುತ್ತಿದ್ದವನು ಪುನಃ ಕುಳಿತ. ಆತನು ಬೀಬಿಯ ಕೈಯಿಂದ ಒಂದು ತಾಂಬೂಲ ತೆಗೆದುಕೊಂಡು ಊಟಮಾಡುವುದು ಎಷ್ಟೋ ಗೌರವ, ಎಷ್ಟೋ ಹಿತ, ಎಂದು ಮನಸ್ಸಿನಲ್ಲಿಯೇ ಸಂತಸಗೊಳ್ಳುತ್ತಾ "ಕತ್ತಲಾಗುತ್ತೆ, ಬೀಬಿ. ಹೋಗುತ್ತೇನೆ. ಇನ್ನೂ ನಾಲ್ಕು ಮನೆಗಳಿಗೆ ಹೋಗಬೇಕು. ದುಡ್ಡು ವಸೂಲಾಗುವುದು ಕಷ್ಟ. ತೆಗದುಕೋ ನೀನು ಮರ್ಯಾದಸ್ಥೆ" ಎನ್ನುತ್ತಾ ಜೋಬಿನಿಂದ ಎರಡು ಹಣ ತೆಗೆದು ಬೀಬಿಯ ಕೈಲಿಟ್ಟ. "ಇದು ಸ್ವಂತ ಹಣ. ನೀನು ಕೇಳಿದರೆ ಇಲ್ಲವೆನ್ನುವುದು ಹೇಗೆ ಎಂದುಕೊಟ್ಟಿದ್ದೇನೆ ಗೊತ್ತಾಗಿ ವಾಪಸು ಕೊಟ್ಟುಬಿಡು. ನೀನೇನು ಮಾಡುವಿ ನಿನ್ನ ನಸೀಬು. ನಿನ್ನ ಯಜಮಾನ ಲಫಂಗ. ಇನಾಂ ಗಿನಾಂ ಸಿಕ್ಕುತ್ತೆ. ಕೈತುಂಬ ಸಂಬಳವೂ ಸಿಕ್ಕುತ್ತೆ. ಎಲ್ಲಾ ಷರಾಬ್ ಕುಡಿದುಬಿಡುತ್ತಾನೆ. ನಿನ್ನಂಥಾ ಮುದ್ದಾದ ಹೆಣ್ಣನ್ನು ಮುಚ್ಚಟೆಯಿಂದ ಇಟ್ಟುಕೊಂಡು ಸಂಸಾರಮಾಡುವ ರೀತಿಯೇ ಅವನಿಗೆ ಗೊತ್ತಿಲ್ಲ. ಇರಲಿ, ದೇವರು ಒಳ್ಳೇದು ಮಾಡುತ್ತಾನೆ. ಎಲ್ಲರಿಗೂ ಒಳ್ಳೆಯ ಕಾಲ ಬರುತ್ತೆ. ಖುದಾನ ಕೃಪೆಯಿಂದ ನಿನಗೆ ಐಶ್ವರ್ಯ ಬರಬಾರದೇಕೆ? ನಾನು ಸುಳ್ಳು ಹೇಳುವಲ್ಲ. ನನ್ನ ಬಯಕೆಯೆಲ್ಲಾ ಶ್ರೀಮಂತ ರಳ್ಳೇ ಆಗಿದೆ. ನಿನ್ನ ಮುಖದಲ್ಲಿ ಶ್ರೀಮಂತ ಕಳೆ ಇದೆ. ಬೀಬಿ. ನಾನು

ಹೇಳಿದ್ದೇನೆ ನೋಡು, ಎಂದಾದರೂ ನನ್ನ ಮಾತನ್ನು ನೆನೆಸಿಕೊಳ್ಳುತ್ತಿ" ಎಂದು ಹೇಳಿ ಅವಳ ಮುಖವನ್ನು ಮತ್ತೊಮ್ಮೆ ನೋಡಿ, ಅವಳ ಮಂದಹಾಸ ವನ್ನು ಸ್ವೀಕರಿಸಿ, ಅತ್ತಿತ್ತ ತಿರುಗಿ ನೋಡುತ್ತಾ ದೊಣ್ಣೆಯ ಸದ್ದುಮಾಡಿ ಕೊಂಡು ಹೊರಟುಹೋದ.

ಕರೀಂನು ಮನೆಯ ಎಡಗಡೆ ಜೋರಾಗಿ ನಡೆದುಹೋಗುತ್ತಿದ್ದ.

ಬಲಗಡೆಯಿಂದ ಇಮಾಂ ಸಾಹೇಬನು ಮನೆಯೊಳಗೆ ಬಂದುಹೊಕ್ಕನು. "ಏ ಹಬೀದಾ, ಇಲ್ಲಿ ಬಾ, ಒಳಗೆ ಬಂದು ಕದ ಮುಚ್ಚು. ಇವತ್ತು ದೊಡ್ಡ ಸಮಾಚಾರ ಹೇಳುತ್ತೇನೆ. ಈ ಹೊಲಿಗೆ ಗಿಲಿಗೆ ಕೆಲಸವೆಲ್ಲಾ ಬುಚ್ಚಾಕೆಲಸ. ಬಾ ಇಲ್ಲಿ ಎಂದು ಕರೆದ.

ಹಬೀದಳಿಗೆ ಇನ್ನೂ ಹತ್ತಾರು ಹೊಲಿಗೆಗಳನ್ನು ಹಾಕುವುದು ಉಳಿದಿತ್ತು. ಅದನ್ನು ಪೂರೈಸಿ ಒಳಗೆ ಹೋಗೋಣವೆಂದು ಗಂಡನ ಮಾತು ಕಿವಿಗೆ ಬಿದ್ದರೂ ಕೇಳದವಳಂತೆ ಚುರುಕಾಗಿ ಹೊಲಿಗೆ ಹಾಕುತ್ತಿದ್ದಳು.

ಇಮಾಂನು ಒಳಗಿನಿಂದ ಹೊಸಲು ದಾಟಿ ಬಂದು ಹಬೀದಳ ಕೈ ಹಿಡಿದು ಎಳೆದು, ಒಳಗೆ ದರದರನೆ ಎಳೆದೊಯ್ದ.

ಹಬೀದಳು "ತಡೀ, ತಡೀ. ಬಾಗಿಲಲ್ಲಿ ಹೆಚ್ಚು ಬೆಲೆಯ ಬಟ್ಟೆಗಳು ಬಿದ್ದಿವೆ. ಯಾರಾದರೂ ಹೊತ್ತುಕೊಂಡು ಹೋದರೆ ನಮ್ಮ ಆಟ ಪೂರೈಸಿ ಹೋಗುತ್ತೆ. ಆಮೇಲೆ ನಿನ್ನ ತಲೆ ಮಾರಿಕೊಂಡರೂ ಅದರ ಬೆಲೆ ಕಟ್ಟ ಲಾಗುವುದಿಲ್ಲ. ಬೆಲೆ ಕೊಟ್ಟರೂ ಹೋದ ಮರ್ಯಾದೆ ಬರುವುದಿಲ್ಲ" ಎಂದು ಹೇಳುತ್ತಾ ಕೈಝಾಡಿಸಿ ಅವನನ್ನು ಹಿಂದಕ್ಕೆ ತಳ್ಳಿ, ಜಗುಲಿಯ ಮೇಲಿದ್ದ ಬಟ್ಟೆಗಳನ್ನೆಲ್ಲಾ ಮಡಿಸಿ, ಜೋಪಾನವಾಗಿಟ್ಟು ನೆಲಕ್ಕೆ ಹಾಸಿದ್ದ ಕಂಬಳಿ ಯನ್ನು ಒಳಗಿಟ್ಟು ಬಂದು ನಿಂತಳು.

ಹಬೀದಳು ಎದುರಿಗೆ ಬಂದು ನಿಲ್ಲುತ್ತಲೇ "ಬಾ ಕುಳಿತುಕೋ. ಎಲ್ಲ ವನ್ನೂ ಹೇಳುತ್ತೇನೆ. ಅರಮನೆಯ ಸಮಾಚಾರಗಳು ಬಹಳ ಇದೆ. ಅದಾರು, ದೊಡ್ಡ ನಿಲುವಂಗಿ ಸಾಹೇಬ ಬಂದು ಕುಳಿತಿದ್ದ ?" ಎಂದು ಕೇಳಿದ.

"ಅವನು ಶ್ರೀಮಂತರ ಕಾರಕೂನ ಕರೀಂ ಸಾಹೇಬ. ಬಾಡಿಗೆ ಕೊಟ್ಟನೆ. ಅವನು ಹೆಚ್ಚು ಮಾತನಾಡಿದರೆ ನರಿಹೊರಿಯುವರಲ್ಲಿ ಮಾನ

ಹೋಗುತ್ತೆ. ಒಳ್ಳೇ ಮಾತನಾಡಿ ಕಳುಹಿಸಿದೆ. ಸಾಕಪ್ಪ ಸಾಕು. ನಿನ್ನೊಡನೆ ಈ ಹೊಡಬ್ಯಾಳು."

"ಹಬೀದಾ, ಅವನು ಕೊಬ್ಬಿಹೋಗಿದ್ದಾನೆ ನಾನು ಆಗಲೇ ಬಂದೆ. ಅವನು ಮಾತನಾಡುವುದನ್ನೆಲ್ಲಾ ಕಿವಿಗೊಟ್ಟು ಆಲಿಸುತ್ತಾ ಅಲ್ಲೇ ಮರೆಯಲ್ಲಿ ನಿಂತಿದ್ದೆ. ಏನು ಮಹಾಬಾಡಿಗೆ, ಬಿಸಾಡಿಸಿಕೊಳ್ಳುತ್ತಾನೆ. ದೊಡ್ಡ ಖಾನ್ ಸಾಹೇಬನ ಹಾಗೆ ಮಾತನಾಡುತ್ತಾನೆ. ನಾನು ಎದುರಿಗೆ ಬಂದರೆ ಬಹಳ ಜಗಳವಾಗುತ್ತದೆಂದು ಅಲ್ಲೇ ನಿಂತಿದ್ದೆ. ನನಗೆ ನಾಣ್ಯ ಇಲ್ಲ ಎಂದುಕೊಳ್ಳ ಬೇಡಾ, ಹಬೀದಾ ಬೇಗಂಸಾಹೇಬರ ಮುಂದೆ ನಿಂತು ಸೊಟ್ಟ ಮೋರೆ ಮಾಡಿದರೆ ಹತ್ತು ಪಗೋಡಾ ಬಿಸಾಡುತ್ತಾರೆ. ಇವನೇನು ದೊಡ್ಡ ಮನುಷ್ಯ. ನನ್ನ ಲಫಂಗ ಎಂದಿದ್ದು--ಕಿವಿಗೆ ಬಿತ್ತು, ಉರಿ ಎದ್ದಿತ್ತು, ಕೋಪಕ್ಕೆ ಮನಸ್ಸುಕೊಡಬಾರದೆಂದು ಅಲ್ಲೇ ತಡೆದುಕೊಂಡೆ. ಹೋಗಲಿ, ಆ ಮಾತು ಬಿಡು ಕುಳಿತುಕೋ.

"ಬೇಗಂ ಸಾಹೇಬರೇ ಇವತ್ತು ಖುದ್ದು ಹೇಳಿದರು. ನನ್ನನ್ನು ಜಮಾದಾರ್ ಮಾಡಿಬಿಡುತ್ತಾರಂತೆ. ಆಮೇಲೆ ಒಂದು ಹೊಸ ಪತ್ಲಾ ತಂದು ನಿನಗುಡಿಸಿ, ಬೇಗಂ ಸಾಹೇಬರ ದರ್ಶನಕ್ಕೆ ಕರೆದುಕೊಂಡು ಹೋಗುತ್ತೇನೆ. ಸಂಬಳ ಸಾರಿಗೆ ಹೆಚ್ಚಾಗಿ ಕೊಡುತ್ತಾರೆ. ನಾವು ಈ ಮನೆಯನ್ನೇ ಬಿಟ್ಟು ಬಿಡಬೇಕಾಗುತ್ತೆ. ಈ ಹೊಲಿಗೆ ಗಿಲಿಗೆ ಎಲ್ಲಾ ಖೈದು" ಎಂದು ಹೇಳುತ್ತಾ ಹಬೀದಳನ್ನು ಕೈಹಿಡಿದು ಕೂಡಿಸಿದನು.

ಹಬೀದಳು ನಗುತ್ತಾ ಬಿನ್ನಾಣದ ದನಿಯಿಂದ "ಸಾಹೇಬರಿಗೆ ಇವತ್ತೆಲ್ಲೋ ಸ್ವಲ್ಪ ಇನಾಂ ಸಿಕ್ಕಿದಂತಿದೆ. ಸ್ವಲ್ಪ ಮಜಾಮಾಡಿ ಬಂದಿದ್ದೀರಿ, ಶೋಜಾಗಿದ್ದೀರಿ" ಎಂದಳು.

ಇಮಾಂನು ಹಬೀದಳ ಗಲ್ಲವನ್ನು ಹಿಡಿದು ಅಲ್ಲಾಡಿಸಿ "ಎಷ್ಟು ಬುದ್ಧಿವಂತಳೇ ನೀನು. ಹೌದು, ನಾಲ್ಕು ಹಣ ಇನಾಂ ಸಿಕ್ಕಿತು. ನಾನು ಸುಳ್ಳು ಹೇಳುವನಲ್ಲ. ಹತ್ತು ದಿನಗಳಿಂದ ನಿಶಾ ಮಾಡಿರಲಿಲ್ಲ. ಮೈ ಕೈ ಎಲ್ಲಾ ಸೋತು ಸೊಪ್ಪಾಗಿ ಹೋಗಿತ್ತು. ಆ ದುಕಾನ್‌ಧಾರನಿಗೆ ಸ್ವಲ್ಪ ಬಾಕಿಯೂ ಇತ್ತು. ಎಲ್ಲಾ ಫೈಸಲ್ ಮಾಡಿಕೊಟ್ಟೆ. ಒಳ್ಳೇ ಷರಾಬು ಕುಡಿದು ಸ್ವಲ್ಪ

ಗರಂ ಮಾಡಿದ್ದೇನೆ. ಆದರೆ ದಿಲ್‌ಬೇಪಾಂ ಆಗಿಲ್ಲ. ಹೇಳುತ್ತಾನೆ ಅರಮನೆ ಕಥೆ. ಪೂರಾ ಕೇಳು ಅದು ಇದು ಮಾತು ತೆಗೆದು ಸ್ವಾರಸ್ಯ ಕೆಡಿಸಿಬಿಡುತ್ತೀ. ಆದರೆ ಅಕ್ಕಪಕ್ಕದ ಮನೆಯವರಿಗೆ ಹೇಳಿ ಬಿಟ್ಟೀಯೋ. ಅವರೆಲ್ಲಾ ಕಮ್ಮಿ ಜನ. ಅರಮನೆ ಮರ್ಯಾದೆ ಅವರಿಗೆ ಗೊತ್ತಿಲ್ಲ. ಇವತ್ತು, ಅಫಜಲ್‌ಖಾನರು ಬೇಗಂಸಾಹೇಬರ ಭೇಟಿಮಾಡಿದ್ದರು. ಬಹಳ ಹೊತ್ತು ಮಾತನಾಡುತ್ತಿದ್ದರು. ಏನೇನೋ ಕುಂಸ್ಸಿಲ್ ಆಗಿದೆ. ಅವರು ಬಹಳ ದಿನಗಳಿಂದ ಅರಮನೆ ಕಡೆ ಬಂದಿರಲಿಲ್ಲ. ಬೇಗಂಸಾಹೇಬರೇ ಹೇಳಿಕಳುಹಿಸಿ, ಕರೆಸಿಕೊಂಡರು. ನನ್ನನ್ನು ಬಾಗಿಲಿನಲ್ಲಿ ಕಾವಲಿಟ್ಟಿದ್ದರು. ಯಾರನ್ನೂ ಬಿಡಕೂಡದು. ಯಾರೂ ಇಲ್ಲಿ ನಿಂತಿರಕೂಡದು ಎಂದು ಬೇಗಂಸಾಹೇಬರು ಕಟ್ಟಪ್ಪಣೆ ಮಾಡಿದ್ದರು. ಅವರಿಗೆ ನನ್ನಲ್ಲಿ ಬಹಳ ನಂಬಿಕೆ. ಅದು ನನ್ನ ನೀಯತ್, ಬಹಳ ಅದಬ್ಬಿನಿಂದ ಯಾರೂ ಸುಳಿಯದಂತೆ ನೋಡಿಕೊಳ್ಳುತ್ತಿದ್ದೆ. ಅಫಜಲ್‌ಖಾನರು ಖಾಂದಾರೀ ಮನುಷ್ಯರು. ಅವರು ಹೊರಗೆ ಬರುತ್ತಲೇ ಸಲಾಂ ಮಾಡಿದೆ. ಹತ್ತು ಹಣ ಕಿಸೆಯಿಂದ ಎತ್ತಿ ನನ್ನ ಕೈಗೆ ಕೊಟ್ಟರು. ಮರ್ಯಾದೆಯಿಂದ ಕೊಟ್ಟರು. ತೆಗೆದುಕೊಂಡು ಸಲಾಂ ಹಾಕಿದೆ. ಕಾಗದದ ಪಟ್ಟಣ ಬಿಚ್ಚಿ ನೋಡಿದೆ. ಹತ್ತೂ ಬೆಳ್ಳಿಯ ಹಣ" ಎಂದ.

"ಎಲ್ಲಾ ಖರ್ಚುಮಾಡಿಬಿಟ್ಟರೋ ಇಲ್ಲವೋ?"

"ಆಹಾ, ನನ್ನ ಅರಗಿಣಿ. ಎಲ್ಲಾ ಖರ್ಚುಮಾಡಿಬಿಟ್ಟರೆ ನೀನೇನ್ನುವಿ. ನೀನು ಷಹಬಾಸ್ ಕೊಡಬೇಡವೇ? ತಕ್ಷಣ ಐದು ಹಣ ಅದೇ ಕಾಗದದಲ್ಲಿ ಪಟ್ಟಣ ಕಟ್ಟಿ ಸೊಂಟದಲ್ಲಿ ಭದ್ರವಾಗಿಟ್ಟೆ ಅದು ನಿನ್ನ ಮುಡುಪು. ಇನ್ನು ಐದು ಹಣ ನನ್ನದು. ನೀನು ಏನೂ ಮಾತನಾಡುವಂತಿಲ್ಲ. ದುಕಾನ್‌ದಾರ ದೊಡ್ಡ ಮನುಷ್ಯ. ಈ ಹಣ ಅನಾಮತ್ ಅವನ ಕೈಗೆ ಕೊಟ್ಟೆ. ಲೆಖ್ಖ ಚುಕ್ತಾಯವಾಯಿತು. ಅವನಿಗೂ ಖುಷಿಯಾಯಿತು. ದುಕಾನ್‌ದಾರ್ ಎಲ್ಲಪ್ಪ, "ಬನ್ನಿ, ಹಜರತ್‌ಸಾಹೇಬರೇ. ಹಾಗೆ ಹೊರಟು ಹೋಗುತ್ತೀರಿ. ನಿಮ್ಮನ್ನು ಹಾಗೇ ಕಳಿಸಿದರೆ ನಮಗೆ ಮರ್ಯಾದೆಯೇ, ಸ್ವಲ್ಪ "ನಿಶಾಮಾಡಿ," ಎಂದು ಬಹಳ ಮರ್ಯಾದೆಯಿಂದ ಒಳ್ಳೇ ಶರಾಬುಕೊಟ್ಟ. ಹಾಗೆಯೇ ಕುಳಿತು, ಕುಡಿದುಬಿಟ್ಟೆ. ಇದಕ್ಕೆ ಹಣ ಇಲ್ಲ, ಇದು ನಮ್ಮ ಮರ್ಯಾದೆ" ಎಂದು ಎಲ್ಲಪ್ಪ ಹೇಳಿದ. ನಾನು ಅವನ ಬೆನ್ನು ತಟ್ಟಿ "ನೀನು ದೊಡ್ಡ ಮನುಷ್ಯ,

ಎಲ್ಲಪ್ಪ," ಎಂದು ಶಹಬಾಸ್‌ಗಿರಿಕೊಟ್ಟು ಹೊರಟು ಬಂದೆ. ಮನೆಗೆ ಬರುವ ಹೊತ್ತಿಗೆ ಈ ಸೈತಾನ, ಕರೀಂ ಕುಳಿತಿದ್ದ. ಏನೇನೋ ಮಾತನಾಡಿದ. ಸೊಂಟದಲ್ಲಿದ್ದ ಬೆಳ್ಳಿ ಹಣ ತೆಗೆದು ಅವನ ಮುಖದ ಮೇಲೆ ಬಿಸಾಡಬೇಕೆಂದು ಯೋಚನೆ ಮಾಡಿದೆ. ಸ್ವಲ್ಪ ಸಮಾಧಾನ ಮಾಡಿಕೊಂಡೆ. ನಿನ್ನ ಕೈಲಿ ಆ ಹಣ ಇಡಬೇಕು. ನಿನ್ನ ನಗುಮುಖವನ್ನು ನೋಡಿ ಸಂತೋಷಿಸಬೇಕು ಎಂದು ಮುಡಿಪಿಟ್ಟ ಹಣ, ಅವನ ಕೈಗೆ ಕೊಟ್ಟುಬಿಡುತ್ತೇನೆಯೇ ? ತೆಗೆದುಕೋ" ಎಂದು ಹೇಳಿ ಸೊಂಟದಿಂದ ಬೆಳ್ಳಿಯ ಹಣಗಳನ್ನು ತೆಗೆದು ಹಬೀದಳ ಕೈಲಿಟ್ಟ.

ಹಬೀದಳು ಖುಷಿಯಿಂದ ಮೈಕುಲುಕಿ ತಲೆದೂಗಿ "ಹೇಳು" ಅರಮನೆಯ ವಿಚಾರ ಏನೋ ಹೇಳುತ್ತೇನೆ ಎಂದೆಯಲ್ಲಾ ಹೇಳು. ಎಂದಳು.

ಇನಾಂನು ಗಡ್ಡ ನೀವುತ್ತಾ ಹಬೀದಳ ಕೈಹಿಡಿದುಕೊಂಡು, "ನೋಡು, ಹಬೀದಾ, ಬೇಗಂಸಾಹೇಬರೇ ಸುಲ್ತಾನೀ ಆಗಿಬಿಡಬೇಕೆಂದು ಕೆಲವರು ಸೇನಾಧಿಪತಿಗಳೂ ಶ್ರೀಮಂತರೂ ಹಠ ಹಿಡಿದಿದ್ದಾರೆ. ಯುವರಾಜ ಸಿಕಂದರ್‌ನಿಗೆ ಪಟ್ಟ ಕಟ್ಟಬೇಕೆಂದು ಕೆಲವರು ದೊಡ್ಡವರು ಹೇಳುತ್ತಾರೆ. ನಾಲ್ಕು ವರುಷದ ಮಗು. ಅವನಿಗೆ ಪಟ್ಟ ಕಟ್ಟಿದರೆ ರಾಜ್ಯಭಾರ ಮಾಡುವವ ರಾರು? ವಜೀರರು ಯಾರಾಗಬೇಕೆಂದು ದೊಡ್ಡ ಗೊಂದಲವೇ ಎದ್ದಿದೆ. ಬೇಗಂ ಸಾಹೇಬರೇ ಸುಲ್ತಾನೀಯಾದರೆ ಅಫಜಲ್‌ಖಾನರು ವಜೀರರಾಗು ತ್ತಾರೆ. ದರ್ಬಾರು ಭರ್ಜರಿಯಾಗುತ್ತದೆ. ಕೆಲವರು ದೊಡ್ಡವರು ಇದಕ್ಕೆ ಅಡ್ಡಿ. ಎಷ್ಟೇ ಬುದ್ಧಿವಂತರಾದರೂ ಹೆಂಗಸರಿಗೆ ಪಟ್ಟ ಕಟ್ಟಬಾರದೆಂದು ಕೆಲವು ಮುದುಕರ ವಾದ, ಖಾಜಿಗಳ ಮಾತು. ಆದರೆ ಅಹಮದ್ ನಗರದಲ್ಲಿ ಚಾಂದ್ ಸುಲ್ತಾನೀ ರಾಜ್ಯವಾಳಲಿಲ್ಲವೆ ? ಬಹದ್ದೂರ್ ರಾಣಿಯೆಂದು ಪ್ರಖ್ಯಾತಳಾಗಲಿಲ್ಲವೆ? ಅಕ್ಬರ್ ಬಾದಷಹನಿಗೆ ಗುಟುಕು ನೀರು ಕುಡಿಸ ಲಿಲ್ಲವೆ—ಎಂದು ಕೆಲವರ ಹೇಳಿಕೆ. ಈ ಜಿಜ್ಞಾಸೆ ಏನಾಗುತ್ತೋ ಹೇಳು ವುದಕ್ಕಾಗುವುದಿಲ್ಲ. ಆದರೆ ದರ್ಬಾರೆಲ್ಲಾ ಬೇಗಂ ಸಾಹೇಬರ ಕಡೆಗೇ ಇದೆ. ಯುವರಾಜ ಸಿಕಂದರನು ಸುಖವಾಗಿ ಬೆಳೆಯಲಿ. ವಿದ್ಯಾಬುದ್ಧಿಗಳನ್ನು

ಕಲಿಶುಕೊಳ್ಳಲಿ ಯುದ್ಧದ ತರಬೇತು ತೆಗೆದುಕೊಂಡು ಹೆಸರುವಾಸಿ ಹೊಂದಲಿ, ಈಗ ಬೇಗಂ ಸಾಹೇಬಳಿಗೆ ಪಟ್ಟ ಕಟ್ಬೋಣವೆಂದು ದರ್ಬಾರಿಗ ಳೆಲ್ಲಾ ಹೇಳುತ್ತಾರೆ. ಕೆಲವರು ಹಳೇ ಜನ ಎಷ್ಟಾದರೂ ಹೆಂಗಸರಿಗೆ ಸುಲ್ತಾನೀ ಪಟ್ಟ ಕಟ್ಟಿದರೆ ಅವರಿಗೂ ಕೆಟ್ಟ ಹೆಸರು. ರಾಜ್ಯಕ್ಕೂ ಕೆಟ್ಟ ಹೆಸರು ಎಂದು ಉದ್ಗಾರ ತೆಗೆಯುತ್ತಾರೆ" ಎಂದ.

ಹಬೀದಳು ಸಣ್ಣ ನಗುವನ್ನು ನಗುತ್ತಾ "ಇಮಾಂ ನೀನು ಬೇಗಂ ಸಾಹೇಬರ ಕಡೆ ಅಲ್ಲವೇ ? ಕೆಟ್ಟ ಹೆಸರೆಂದರೇನು ?" ಎಂದು ಹಾಸ್ಯವಾಗಿ ಕೇಳಿದಳು.

ಇಮಾಂನು "ಹಬೀದಾ, ಅದು ನಿನಗೆ ಗೊತ್ತಾಗುವುದಿಲ್ಲವೇ ? ನಮ್ಮ ಯಜಮಾನಿಯ ವಿಷಯ ನನ್ನ ಬಾಯಿಂದ ಹೇಳುವದು ಹರಾಂ ಆಗುತ್ತೆ. ಹಾಗೆಲ್ಲಾ ಪ್ರಶ್ನೆ ಮಾಡಬೇಡ" ಎಂದ.

"ಜಮಾದಾರ್ ಸಾಹೇಬರೇ ! ಕೋಪ ಮಾಡಬೇಡಿರಿ. ಸಿಟ್ಟಾಗ ಬೇಡಿರಿ. ನಿಮ್ಮ ಬಾಯಿಯಲ್ಲಿಯೇ ಹೊರಟ ಮಾತಿಗೆ ನಾನು ಅರ್ಥ ಹೇಳಿ ಎಂದು ಕೇಳಿದೆ. ನಿಮ್ಮ ಬೇಗಂ ಸಾಹೇಬಳಿಗೆ ಈಗ ಏನೂ ಕೆಟ್ಟ ಹೆಸ ರಿಲ್ಲವೋ ?"

"ದೊಡ್ಡವರ ಮಾತು. ಅದೆಲ್ಲಾ ಮಾತನಾಡಬೇಡ. ಬೇಗಂ ಸಾಹೇಬಳೆಂದರೆ ನಿನ್ನ ನನ್ನ ಹಾಗೆ ಹತ್ತು ಜನರ ಬಾಯಿಗೆ ಬೀಳುವಮನುಷ್ಯ ರೆಂದುಕೊಂಡಿದ್ದೀಯಾ ? ನೀನು ಬಹಳ ಅಧಿಕಪ್ರಸಂಗಿ, ಬೇಗಂ ಸಾಹೇಬರು ಸುಲ್ತಾನೀಯಾಗುತ್ತಾರೆ. ನಾನು ಖಾಸಾ ಜಮಾದಾರ್‌ನಾಗುತ್ತೇನೆ. ಮುಕವಲ್ಲಿನ ದಿರುಸು, ಜರಿಯ ಪಗಡಿ, ಪಗಡಿಯ ಮೇಲೆ ಚಿನ್ನದ ಚಂದ್ರ ರೇಖೆ. ಆ ಮಾತು ಹೇಳುವದಕ್ಕೇ ಇಷ್ಟೆಲ್ಲಾ ಹೇಳಿದೆ".

ಹಬೀದಳು ನಗುತ್ತಾ "ಹಜರತ್ ಸಾಹೇಬರು ಜಮಾದಾರರಾದರೆ ನನಗೂ ಸಂತೋಷ. ಅದು ನನ್ನ ಭಾಗ್ಯವೇ ಅಲ್ಲವೇ ? ಆದರೆ ಕೆಟ್ಟ ಹೆಸರು ಎಂದು ಹೇಳಿದರಲ್ಲಾ ಆ ಮಾತು ಬೇರೆ. ಅಧಿಕಾರ ದೌಲತ್ತುಗಳ ಮಾತು ಬೇರೆ. ಹತ್ತು ಜನರ ಬಾಯಿಗೆ ಬೀಳದ ಹೆಂಗಸು ಯಾವಳಿದ್ದಾಳೆ, ಜಮೂದಾರ್ ಸಾಹೇಬರೇ. ಬೇಗಂ ಸಾಹೇಬರು ದೊಡ್ಡವರಾದರೂ ಹೆಣ್ಣು ಜಾತಿಯಲ್ಲವೆ ? ಅವರ ಮೇಲೆ ಅಪವಾದವಿಲ್ಲವೆ ? ಅಪವಾದವಿಲ್ಲದ

ಹೆಣ್ಣೇ ಇಲ್ಲವೆಂದುಕೊಳ್ಳಿ. ಅವನ್ನು ಮನೆತೋ ಮುಚ್ಚಿಟ್ಟುಕೊಂಡೋ ನಿಮ್ಮಂಥಾ ಧೀರರು ಗಂಡಸರು ಜಂಭದಿಂದ ಓಡಿಯಾಡುತ್ತಾರೆ. ನೀವು ಅಫಜಲ್‌ಖಾನನು ಬೇಗಂ ಸಾಹೇಬಳ ಅಂತರಂಗ ಭೇಟಿಗೆ ಬಂದಿದ್ದನೆಂದು ಹೇಳಿದರಲ್ಲಾ. ಖಾನನು ಕೆಲವು ದಿನ ಮುನಿಸಿಕೊಂಡುರಾಣಿಯವರ ಭೇಟಿಗೆ ಬರಲಿಲ್ಲವೆಂದು ಹೇಳಿದಿರಲ್ಲಾ, ಕೊನೆಗೆ ನಿಮ್ಮ ಬೇಗಂ ಸಾಹೇಬಳೇ ಬಗ್ಗಿ ಖಾನಸಾಹೇಬರನ್ನು ಕರೆಸಿದರಲ್ಲವೆ? ಈಗ ನೀವು ಮುನಿಸಿಕೊಂಡು ಆರು ತಿಂಗಳು ಹೊರಟುಹೋಗಿ, ನಾನು ನಿಮಗೆ ಶರಣು ಹೊಡೆದು ಕರೆಸುವು ದಿಲ್ಲ" ಎಂದು ಹೇಳಿ ನಕ್ಕಳು.

ಇನಾಂನು ಕೋಪದಿಂದ ಹಬೀಬಳ ಕಪಾಳಕ್ಕೆ ಒಂದೇಟು ಕೊಟ್ಟು "ಹರಾಮಿ, ಏನೇನೋ ಹರಟುತ್ತೀ. ನಿನ್ನ ಅಂತಸ್ತಿಗೆ ತಕ್ಕ ಮಾತು ನಿನ್ನ ಬಾಯಲ್ಲಿ ಬರುತ್ತದೆ. ಇಬ್ಬರು ಗಂಡಂದಿರಿಗೆ ಸೋಡು ಕೊಟ್ಟು ನಾನು ಮೂರನೆಯ ಸ್ವಯಂವರ ಪತಿ ನಿನಗೆ. ನೀನೇ ಅಲ್ಲವೆ ನನ್ನನ್ನು ವರಿಸಿ ಬಂದಿದ್ದು" ಎಂದು ಗದ್ದರಿಸಿದ.

"ಕೋಪ ಮಾಡಬೇಡಿ, ಜಮಾದಾರ್ ಸಾಹೇಬರೇ. ನಾನೆಲ್ಲ ಬಲ್ಲೆ! ನಿಮ್ಮ ಬೇಗಂ ಸಾಹೇಬಳು ಸುಲ್ತಾನೀಯಾಗಲೀ, ನಿಮಗೆ ಬರಕತ್ತಾಗಲಿ, ನನಗೂ ಕೈ ತುಂಬಾ ಹಣ ಸಿಕ್ಕಲಿ. ಊಟ-ತಿಂಡಿ, ಒಡವೆ-ಬಟ್ಟೆ ಮಜಾ ಮಾಡುತ್ತೇನೆ. ನನ್ನ ಸ್ವಯಂವರಪತಿ ವೀರಾಧಿವೀರನೆಂದು ಹೊಗಳುತ್ತೇನೆ. ಈಗ ಏಳಿ. ಹೊತ್ತು ಮೀರುತ್ತಿದೆ. ದೀಪದಲ್ಲಿ ಎಣ್ಣೆ ಮುಗಿದುಹೋಗು ತ್ತಿದೆ. ಮಧ್ಯಾಹ್ನದ ರೊಟ್ಟಿ ಇದೆ. ಸ್ವಲ್ಪ ಖಾರಾ ಎಣ್ಣೆ ಹಾಕಿಕೊಂಡು ತಿಂದು ನೀರು ಕುಡಿದು ಮಲಗೋಣ. ನೀವು ಕೊಟ್ಟ ಐದು ಹಣ ಇದೆ. ನಾಳೆ ಸ್ವಲ್ಪ ಲವಾಜಮೆ ಕೊಂಡುತಂದು ಹೊಟ್ಟೆ ತುಂಬಾ ಊಟ ಮಾಡೋಣ."

"ಹಬೀದಾ, ಹಾಗೆ ಮಾಡು. ಹೊಟ್ಟೇ ಕಟ್ಟೇ ಆ ಕರೀಂನಿಗೆ ಬಾಡಿಗೆ ಹಣ ಕೊಟ್ಟು ಸಪ್ಪೆ ಮುಖ ಹಾಕಿಕೊಂಡು ನಾಳೇ ನನ್ನ ಮುಂದೆ ನಿಲ್ಲಬೇಡ. ನಾನು ಜಮಾದಾರನಾಗುವದು ಖಂಡಿತ. ಅವನ ಹಣ ಬಿಸಾಡಿಬಿಡುತ್ತೇನೆ. ನನ್ನ ಎದುರಿಗೆ ನಿಂತು ಮಾತನಾಡುವ ದಾಷತ್ತು ಅವನಿಗೆಲ್ಲಿದೆ?" ಎಂದು ಹೇಳುತ್ತಾ ಊಟಕ್ಕೆ ಎದ್ದನು.

ಆ ಮನೋರಾಜ್ಯದ ಕಲ್ಪನಾ ಪ್ರಪಂಚದಲ್ಲಿ ತೇಲುತ್ತಾ ಆ ಒಣರೊಟ್ಟಿ ಯನ್ನೇ ಸಂತೋಷವಾಗಿ ಊಟಮಾಡಿದನು.

ಬಿಜಾಪುರದಲ್ಲಿ ಶ್ರೀಮಂತರುಗಳ ಮನೆಯಲ್ಲಿಯೂ ಇದೇ ಮಾತು. ಸೇನಾಧಿಪತಿಗಳು ತಮ್ಮ ತಮ್ಮ ಕಡೆಯವರುಗಳನ್ನು ಸೇರಿಸಿ ನಾನಾಮುಖ ವಾಗಿ ಮಾತುಗಳನ್ನು ಬೆಳೆಸುತ್ತಿದ್ದರು. ವಿಷಯವೇನೋ ಒಂದೇ. ಬೇಗಂ ಸಾಹೇಬಳು ಸುಲ್ತಾನಿಯಾಗಬೇಕೇ? ಸಿಕಂದರನಿಗೆ ಪಟ್ಟ ಕಟ್ಟಬೇಕೇ? ಎಲ್ಲ ಮನೆಗಳಲ್ಲಿಯೂ, ಎಲ್ಲ ಗೋಷ್ಠಿಗಳಲ್ಲಿಯೂ ಬೇಗಂ ಸಾಹೇಬಳ ಕಡೆಗೇ ವಾದವು ವಾಲುತ್ತಿದ್ದಿತು.

ಷಹರಖಾನನು ಹೆಸರುವಾಸಿಯಾದ ಸೇನಾಧಿಪತಿ. ಅವನ ಸ್ನೇಹಿತ ನಾದ ಅಮೀರ್ ಖಾನನು ಅತ್ಯುತ್ಸಾಹದಿಂದ ಬಂದು ಷಹರ್ ಖಾನನ ಭೇಟಿ ಮಾಡಿದ.

ಪರಸ್ಪರ ಉಪಚಾರೋಕ್ತಿಗಳು ನಡೆದ ಮೇಲೆ ಸೇನಾಧಿಪತಿ ಷಹರ್ ಖಾನನು "ಅಮೀರ್, ರಾಜಧಾನಿಯಲ್ಲ ಏನು ಸಮಾಚಾರ, ಜನರು ಏನು ಮಾತನಾಡುತ್ತಾರೆ?" ಎಂದು ಕೇಳಿದ.

ಅಮೀರ್ ಖಾನನು "ಸೇನಾಧಿಪತಿಗಳೇ! ರಾಜಧಾನಿಯ ಮಾತು, ದರ್ಬಾರಿನ ಮಾತು, ಜನರ ಮಾತುಗಳು ಎಲ್ಲವೂ ಕೂಡಿಯೇ ಬಂದಿದೆ. ಎಲ್ಲರೂ ಬೇಗಂ ಸಾಹೇಬಳು ಸುಲ್ತಾನಿಯಾಗಬೇಕುಎನ್ನುತ್ತಾರೆ ಮುಖ್ಯವಾಗಿ ನಿಮ್ಮ ಅದೃಷ್ಟ ಖುಲಾಯಿಸಿತೆನ್ನಬೇಕು ಎನ್ನುತ್ತಾ ವ್ಯಂಗ್ಯವಾಗಿ ಕಿರುನಗೆ ಯನ್ನು ನಕ್ಕು ಕಣ್ಣು ಹಾರಿಸಿದ.

ಷಹರ್ ಖಾನನು ಗಂಭೀರ ಮುದ್ರೆಯಿಂದ ಕುಳಿತಿದ್ದ.

ಅಮೀರ್‌ನು "ಖಾನ್ ಸಾಹೇಬರೇ! ನಾನು ಇಲ್ಲಿಗೇಕೆ ಬಂದೆ ಬಲ್ಲಿರಾ? ನಿಮಗೂ ನನಗೂ ಬಾಲ್ಯದಿಂದಲೂ ಸ್ನೇಹ. ನೀವು ದೊಡ್ಡ ಪದವಿಗೇರಿದರೆ ನನಗಾಗುವಷ್ಟು ಸಂತೋಷ ಮತ್ತಾರಿಗೂ ಆಗುವುದಿಲ್ಲ. ಈಗ ನೀವು ಮಹತ್ತರವಾದ ಹರ್ಷದಿಂದ ಇರುತ್ತೀರಿ. ನನ್ನೊಡನೆ ಎಲ್ಲವನ್ನೂ ಬಿಚ್ಚಿ ಹೇಳುತ್ತೀರಿ, ನಾನು ಸಂತೋಷಪಟ್ಟುಕೊಂಡು ಹೋಗಬಹುದು-ಎಂದು ಕೊಂಡು ಬಂದೆ. ನೀವು ಕಲ್ಲಿನ ಗೊಂಬೆಯಂತೆ ಕಾಣುತ್ತೀರಿ, ಹರ್ಷವಿಲ್ಲ, ನಗುವಿಲ್ಲ, ಖುಷಾಲಿನ ಮಾತುಗಳಿಲ್ಲ, ನಿಜವಾಗಿ ಹೇಳಿಬಿಡಿ. ಏನಾದರೂ

ಕೆಟ್ಟ ಸುದ್ದಿ ಇದ್ದರೆ ಇವತ್ತೇ ನಾನು ರಾಜಧಾನಿಯನ್ನು ಬಿಟ್ಟು ಹೊರಟು ಹೋಗುತ್ತೇನೆ. ನನ್ನ ಸ್ನೇಹಿತರೆಲ್ಲರೂ ಹಾಸ್ಯಮಾಡುತ್ತಾರೆ. ಏಕೆ, ನನ್ನ ಹೆಂಡತಿಯೂ ಹಾಸ್ಯಮಾಡಿಬಿಡುತ್ತಾಳೆ. ಹೇಳಿಬಿಡಿ, ನಿಮ್ಮ ಮುಖವೇಕೆ ಇಷ್ಟೊಂದು ಕಳೆಗುಂದಿದೆ" ಎಂದು

"ಅಮೀರ್ ! ಇದೊಂದು ದೊಡ್ಡ ರಹಸ್ಯವಾಗಿ ಉಳಿತಿದೆ. ನಾವೆಲ್ಲಾ ಬೇಗಂ ಸಾಹೇಬಳು ಸುಲ್ತಾನಿಯಾಗಬೇಕು-ಎಂದು ಹೇಳುತ್ತೇವೆ. ದರ್ಬಾರಿನಲ್ಲಿಯೂ ಖಡಾಖಡಿ ಹೇಳಿಬಿಟ್ಟದ್ದೇವೆ. ಆದರೆ ಬೇಗಂ ಸಾಹೇಬಳ ಬಾಯಿಂದ ಒಂದಾವರ್ತಿಯಾದರೂ ಈ ಮಾತು ಹೊರಟೇ ಇಲ್ಲ. ಅವಳಲ್ಲಿ ಅಂಥಾ ಅತ್ಯುತ್ಸಾಹ ಕಂಡುಬರುತ್ತಲೂ ಇಲ್ಲ. ಇದೇ ದೊಡ್ಡ ಸಮಸ್ಯೆ"

"ಎಲ್ಲರ ಬಾಯಿಯಲ್ಲಿಯೂ ಬರುತ್ತಿರುವಂತೆ ಬೇಗಂ ಸಾಹೇಬಳೇ ಸುಲ್ತಾನಿಯಾಗುತ್ತಾಳೆ ಎಂದುಕೋ. ಆದರೂ ಅದರಲ್ಲಿ ರಾಜಕೀಯ ತೊಡಕು ಉದ್ಭವಿಸುತ್ತದೆ. ವಜೀರನು ಯಾರಾಗಬೇಕು ಎಂಬುವೊಂದು ದೊಡ್ಡ ಪ್ರಶ್ನೆ. ಸೇನಾಧಿಪತಿ ಅಫಜಲ್‌ಖಾನನು ನನಗಿಂತಲೂ ಹಿರಿಯ. ಸ್ವಲ್ಪ ಹೆಸರನ್ನೂ ಗಳಿಸಿದ್ದಾನೆ. ಅವನ ಕೈಕೆಳಗೆ ಇನ್ನು ಮೇಲೆ ನಾನು ಇರುವದಕ್ಕಾಗುವುದಿಲ್ಲ. ಬೇಗಂ ಸಾಹೇಬಳ ಪ್ರಸಾದ-ಹಸಾದಗಳನ್ನು ನೆಚ್ಚಿಕೊಂಡು ನನ್ನ ಅಧಿಕಾರ ಪೌರುಷಗಳನ್ನು ನಾನೇ ಕಳೆದುಕೊಳ್ಳಲಾದೀತೆ ? ನನಗೆ ಇದೇ ದೊಡ್ಡ ಸಮಸ್ಯೆಯಾಗಿದೆ. ಬೇಗಂ ಸಾಹೇಬಳು ಸುಲ್ತಾನಿಯಾದರೂ ಆಗದಿದ್ದರೂ ನನ್ನ ಸ್ಥಿತಿಯು ಉಯ್ಯಾಲೆಯಂತೆ ತೂಗಾಡುತ್ತಿದೆ ಯಾರಲ್ಲಿಯೂ ಹೇಳಬೇಡ. ಇನ್ನೂ ಏನೇನಾಗುತ್ತದೋ. ರುಗ್ಣ ಶಯ್ಯೆಯಲ್ಲಿ ನರಳುತ್ತಲೇ ಬಿದ್ದಿದ್ದರೂ ಸುಲ್ತಾನರಿದ್ದಿದ್ದು ಎಷ್ಟೋ ಚೆನ್ನಾಗಿತ್ತು. ಈಗ ಈ ರಾಜ್ಯದಲ್ಲಿ ದೊಡ್ಡ ಗೊಂದಲವೇಳುತ್ತದೆ. ಇಲ್ಲಿ ಬುದ್ಧಿವಂತಿಕೆಯಿಂದಲೋ ಬಲಪ್ರದರ್ಶನದಿಂದಲೋ ಏನಾದರೂ ಇತ್ಯರ್ಥಪಡಿಸಿಕೊಳ್ಳಬಹುದು. ಆದರೆ ಡೆಲ್ಲಿಯ ಬಾದಷಹನು ಕಾದಿದ್ದಾನೆ. ಅವನಿಗೆ ನಮ್ಮ ಮೇಲೆ ಕಣ್ಣು ಇದ್ದೇ ಇದೆ. ನಮ್ಮ ನಮ್ಮಲ್ಲಿ ಒಡಕುಂಟಾಯಿತೆಂದು ಸ್ವಲ್ಪ ಸೂಚನೆ ಸಿಕ್ಕಿದರೂ ಬಾದಷಹನು ಭೇದೋಪಾಯುವನ್ನು ಕಲ್ಪಿಸಿ, ಈ ರಾಜ್ಯವನ್ನೇ ನುಂಗಿ ಹಾಕುತ್ತಾನೆ. ಇಷ್ಟೆಲ್ಲ ಸಮಸ್ಯೆಗಳು ಭೂತಾಕಾರವಾಗಿ

ನಿಂತಿರುವಾಗ ಸಂತೋಷಪಡುವುದು, ಖುಷಾಲು ಮಾತುಗಳು ಎಲ್ಲಿ ಬರಬೇಕು, ಅಮೀರ್."

ಅಮೀರ್‌ನು ಸಮಯೋಚಿತ ಮಾತುಗಳನ್ನು ಆಡಿ, ಷಹರ್‌ಖಾನನ ಬುದ್ಧಿ ಪರಾಕ್ರಮಗಳ ಪ್ರಶಂಸೆ ಮಾಡಿ, "ಎಲ್ಲವೂ ನಿಮ್ಮ ಮನಸ್ಸಿನಂತೆಯೇ ಜಯವಾಗುತ್ತದೆ" ಎಂದು ಪ್ರಿಯವಚನಗಳನ್ನಾಡಿ ಹೊರಟುಹೋದ.

ಸುಲ್ತಾನನು ಸತ್ತುಹೋಗಿ ಮೂರು ತಿಂಗಳುಗಳು ಕಳೆದು ಹೋದವು. ರಾಜ್ಯಕ್ಕೆ ಯಾರು ಅಧಿಕಾರಿಗಳು ಎಂಬುದೇ ನಿರ್ಣಯವಾಗಲಿಲ್ಲ. ಯಾರು ಅಧಿಕಾರವನ್ನು ಚಲಾಯಿಸಬೇಕು? ವಜೀರ ಸಿದ್ಧೀಮಸೂದನು ಬೇಗಂ ಸಾಹೇಬಳ ಭೇಟಿಗೆ ಪ್ರಾರ್ಥನೆ ಮಾಡಿದನು.

ಬೇಗಂಸಾಹೇಬಳು ಬಹಳವಾಗಿ ಯೋಚನೆ ಮಾಡಿ, ಅಂತರಂಗ ಭೇಟಿಗೆ ಅಪ್ಪಣೆಯಿತ್ತಳು.

ಅಂತಃಪುರದಲ್ಲಿಯೇ ಭೇಟಿಯು ಏರ್ಪಾಡಾಗಿದ್ದಿತು. ಅರಮನೆಯಲ್ಲೆಲ್ಲಾ ಈ ಭೇಟಿಯ ಮಹತ್ವವನ್ನು ಕುರಿತು, ಮಾತುಕತೆಗಳು ನಡೆಯುತ್ತಿದ್ದುವು. "ಯಾರಿಗೆ ಪಟ್ಟವಾಗಬೇಕೆಂಬ ವಿಷಯವು ಇನ್ನೂ ನಿರ್ಧಾರವಾಗಿಲ್ಲ! ಅದನ್ನು ವಜೀರನೇ ಅಖೈರಾಗಿ ಇತ್ಯರ್ಥಮಾಡಬೇಕು. ಯಾವುದೂ ಇತ್ಯರ್ಥವಾಗದೇ ಇದೆ. ಮೂರು ತಿಂಗಳುಗಳಾದವು. ವಜೀರನು ಬೇಗಂ ಸಾಹೇಬಳಲ್ಲಿ ಎಲ್ಲವನ್ನೂ ಅರಿಕೆ ಮಾಡಿ ತನ್ನ ಜಹಗೀರಿಗೆ ಹೊರಟು ಹೋಗುತ್ತಾನೆ" ಎಂದು ಕೆಲವರು ಉನ್ನತಾಧಿಕಾರಿಗಳು ಊಹೆ ಕಟ್ಟಿದ್ದರು. ಮತ್ತೆ ಕೆಲವರು "ಸಿದ್ದೀಮಸೂದನಿಗೆ ಹೇಗೆಯೂ ಅಧಿಕಾರ ಉಳಿಯುವುದಿಲ್ಲ. ಅವನು ಉಪಾಯಾಂತರದಿಂದ ಬಿಜಾಪುರವನ್ನು ಬಿಟ್ಟುಹೋಗಿ ಮೊಗಲ್ ಸೈನ್ಯದಲ್ಲಿ ಸೇರಿಕೊಳ್ಳುತ್ತಾನೆ" ಎಂದು ಊಹೆಕಟ್ಟಿದ್ದರು. ಹೀಗೆ ಜಿಜ್ಞಾಸೆಯು ನಡೆಯುತ್ತಿದ್ದಿತು.

ಪ್ರಾತಃಕಾಲ ಸುಮಾರು ಹತ್ತು ಗಂಟೆಯ ಸಮಯದಲ್ಲಿ ಸಿದ್ಧೀಮಸೂದನು ಬೇಗಂ ಸಾಹೇಬಳ ಭೇಟಿಮಾಡಿದನು.

ಅಂತಃಪುರದಲ್ಲಿ ವಜೀರನಿಗಾಗಿ ಆಸನವು ಸಿದ್ಧಗೊಳಿಸಲ್ಪಟ್ಟದ್ದಿತು. ಬೇಗಂ ಸಾಹೇಬಳಿಗೂ ಒಂದು ಸಾಧಾರಣವಾದ ಆಸನವು ಸಜ್ಜುಗೊಳಿಸ

ಲ್ಪಟ್ಟಿದ್ದಿತು. ಮಸೂದನು ಆ ಅಂತಃಪುರಕ್ಕೆ ಕಾಲಿಟ್ಟದ್ದು ಅದೇ ಮೊದಲು ಅರಮನೆಯ ದರೋಗನು ಮುಂದೆ ಮುಂದೆ ದಾರಿ ತೋರಿಸುತ್ತಾ ವಜೀರನನ್ನು ಅಂತಃಪುರದೊಳಗೆ ಕರೆದೊಯ್ಯುತ್ತಿದ್ದನು.

ಮಸೂದನು ಆ ಅಂತಃಪುರದ ವೈಭವ ಶೃಂಗಾರಗಳನ್ನು ನೋಡಿ ಬೆರಗಾದನು. ಆ ಅಂತಃಪುರವು ಹಿಂದಿನ ಕಾಲದ ತಾಜ್‌ರಾಣಿಯಿಂದ ನಿರ್ಮಿತವಾಗಿದ್ದಿತು. ಡೆಲ್ಲಿಯ ರಂಗಮಹಲಿನಲ್ಲಿಯೂ ಅಂತಹ ಅಲಂಕಾರವು ಇರಲಿಲ್ಲ. ಅವನು ಒಂದು ಬಾರಿ ಸುತ್ತಲೂ ತಿರುಗಿ ನೋಡಿ ಪ್ರಶಸ್ತವಾಗಿ ಅಲಂಕೃತವಾಗಿದ್ದ ಹಜಾರದಲ್ಲಿ ಬಂದು ನಿಂತುಕೊಂಡನು.

ಬೇಗಂಸಾಹೇಬಳು ಅತ್ಯಂತ ಸೂಕ್ಷ್ಮವಾದ ಸಾದಾ ಉಡುಪನ್ನು ಧರಿಸಿದ್ದಳು. ಎಲೆಗೆಂಪಿನ ಮೇಲುದುವನ್ನು ಹೊದ್ದಿದ್ದಳು. ಪರಿಚಾರಿಕೆಯರು ಹಿಂದೆ ಬರುತ್ತಿದ್ದರು. ಬೇಗಂಸಾಹೇಬಳು ನಿಧಾನವಾಗಿ ಅಡಿಯಿಡುತ್ತಾ ಗಂಭೀರವಾಗಿ ಬಂದು ನಿಂತಳು.

ವಜೀರನು ಪದ್ಧತಿಯ ಪ್ರಕಾರ ನೆಲಮುಟ್ಟಿ ಸಲಾಂ ಮಾಡಿದ.

ಬೇಗಂಸಾಹೇಬಳು ಎರಡು ಹಸ್ತಗಳನ್ನೂ ನೀಡಿ ಆಸನದ ಕಡೆಗೆ ಕೈ ತೋರಿಸಿ "ವಜೀರ್ ಸಾಹೇಬರವರೇ ಆಸನವನ್ನು ಅಲಂಕರಿಸಿರಿ" ಎಂದು ಮೃದು ನುಡಿಗಳಿಂದ ನುಡಿದಳು.

ಮಸೂದನು ಮತ್ತೊಮ್ಮೆ ಅಪ್ರತಿಭನಾದ. ಅದು ದರ್ಬಾರಿನ ಪದ್ಧತಿಗೆ ವಿರೋಧವಾಗಿತ್ತು. ವಾಸ್ತವವಾಗಿ ಈಗ ಬೇಗಂ ಸಾಹೇಬಳೇ ರಾಜ್ಯಾಧಿಕಾರಿಣಿ. ಅವಳು ನಿಂತಿರುವಾಗ ವಜೀರನು ಕುಳಿತುಕೊಳ್ಳುವುದೆಂತು? ಅವಳ ಅಪ್ಪಣೆಯನ್ನು ಮೀರುವುದೆಂತು? ಇದು ದೊಡ್ಡ ಸಮಸ್ಯೆಯಾಯಿತು ಮನಸ್ಸಿನಲ್ಲಿ ಬೇಗಂ ಸಾಹೇಬಳನ್ನು ಹೇಗೆ ಮಾತನಾಡಿಸಬೇಕು? ಇದುವರೆಗೆ ಅವನೆಂದೂ ಬೇಗಂ ಸಾಹೇಬಳ ದರ್ಶನಮಾಡಿಲ್ಲ. ಸುಲ್ತಾನರು ಪರಲೋಕಗತರಾದ ಮೇಲೆ ಇಂದೇ ಪ್ರಥಮ ದರ್ಶನ. ಇದೂ ಒಂದು ಸಂಕೋಚಕ್ಕೆ ಕಾರಣ. ವಜೀರನು ಕುಳಿತುಕೊಳ್ಳಲೂ ಇಲ್ಲ. ಮಾತನಾಡಲೂ ಇಲ್ಲ. ಮೌನವಾಗಿ ತಲೆಬಾಗಿ ನಿಂತಿದ್ದ.

ಬೇಗಂ ಸಾಹೇಬಳು"ವಜೀರ ಸಾಹೇಬರೇ, ಕುಳಿತುಕೊಳ್ಳಿ. ನಾನು ವಯಸ್ಸಿನಲ್ಲಿ ನಿಮಗಿಂತಲೂ ಚಿಕ್ಕವಳು. ನೀವು ಈ ರಾಜ್ಯದಲ್ಲಿ ದೊಡ್ಡ

ಹೊಳಗುತ್ತಿದ್ದವು. ಖಾಜೀ ಸಾಹೇಬರೂ ಮೌಲ್ವೀ ಸಾಹೇಬರೂ ಕರಲಾಘವ ವನ್ನಿತ್ತು, ಅಂಬಾರಿಯಿಂದ ಯುವರಾಜನನ್ನು ದರ್ಬಾರಿಗೆ ಕರೆತಂದು ಸಿಂಹಾಸನದ ಮೇಲೆ ಕುಳ್ಳಿರಿಸಿದರು. ಸಭೆಯೆಲ್ಲವೂ ಜಯಘೋಷ ಮಾಡಿತು. ಕೋಟೆಯ ಮೇಲೆ ಖುಷಾಲು ತೋಪುಗಳು ಹಾರಿಸಲ್ಪಟ್ಟವು.

ವೃದ್ಧ ಶ್ರೀಮಂತ ನಜರುಲ್ಲಾ ಖಾನರವರು ಸಿಕಂದರನ ಕೊರಳಿಗೆ ವಜ್ರ ಹಾರವನ್ನು ಹಾಕಿ ತಲೆಯ ಮೇಲೆ ರಾಜಮುಕುಟವನ್ನು ಇಟ್ಟು ಆಶೀರ್ವ ದಿಸಿದರು.

ವಜೀರನು ಚಿನ್ನದ ತಟ್ಟೆಯಲ್ಲಿ ಪಟ್ಟದ ಕತ್ತಿಯನ್ನು ತಂದು ಸಿಕಂದರನ ಕೈಗೆ ರಾಜಮುದ್ರೆಯನ್ನು ಇಟ್ಟು ಪಟ್ಟದ ಕತ್ತಿಯನ್ನು ಒಪ್ಪಿಸಿದ.

ಅಧಿಕಾರಿಗಳು ಸೇನಾಧಿಪತಿಗಳು ಒರೆಗಳಿಂದ ಕತ್ತಿಗಳನ್ನು ಹಿರಿದು ಮುಜುರೆಮಾಡಿದರು. ಸಂಪ್ರದಾಯ ಪ್ರಕಾರ ಶ್ರೀಮಂತರ ಅಧಿಕಾರಿಗಳು ಪುರಪ್ರಮುಖರ, ಸಾಹುಕಾರರ, ಪ್ರಾಂತ್ಯಾಧಿಕಾರಿಗಳ ನಜರು ಮುಜರೆ ಗಳಾಗುತ್ತಿದ್ದವು. ದರ್ಬಾರಿನ ಮಧ್ಯದಲ್ಲಿ ಸದರಿನಲ್ಲಿ ಇಬ್ಬರು ನರ್ತಕಿಯರು ನರ್ತನ ಮಾಡುತ್ತಿದ್ದರು.

ವಂದಿಮಾಗಧರು ಉಚ್ಚಕಂಠದಿಂದ ಪರಾಕು ಹೇಳಿದರು.

ವಜೀರನು ಹಸ್ತಲಾಘವನಿತ್ತು ಷಾಸಿಕಂದರನನ್ನು ಅಂತಃಪುರದೊಳಗೆ ಕರೆದೊಯ್ದು ರಾಜಮಾತೆ ಬೇಗಂಸಾಹೇಬಳ ಸಂಮುಖದಲ್ಲಿ ನಿಲ್ಲಿಸಿದಳು. ಸಿಕಂದರನು ತಲೆಬಾಗಿ ಅಭಿವಾದನಮಾಡಿದ. ಅಂತಃಪುರದಲ್ಲಿ ನೆರೆದಿದ್ದ ರಾಜ ಕುಟುಂಬದವರೂ ಶ್ರೀಮಂತರ ಮನೆಯ ಸ್ತ್ರೀಯರೂ ಮುತ್ತು ರತ್ನಗಳನ್ನೂ ಪುಷ್ಪವೃಷ್ಟಿಯನ್ನೂ ಮಾಡಿ ಹರಸಿದರು. ಬೇಗಂಸಾಹೇಬಳು ಸಿಕಂದರನನ್ನು ಆಲಂಗಿಸಿ ಎತ್ತಿ ಮುತ್ತಿಟ್ಟು ಹರಸಿದಳು.

ಅಂದಿನ ದಿನವೆಲ್ಲಾ ಅರಮನೆಯಿಂದ ಸೈನಿಕರಿಗೆ ಅಧಿಕಾರಿಗಳಿಗೆ ಖಿಲ್ಲತ್ತುಗಳೂ ಉಡುಗೊರೆಗಳೂ ಕೊಡಲ್ಪಟ್ಟವು. ರಾಜಧಾನಿಯ ಸಮಸ್ತ ಪುರಜನರಿಗೂ ಅವರವರ ಪದ್ಧತಿಯಂತೆ ಔತಣ ಭೋಜನಗಳು ನಡೆದವು. ಬಡಬಗ್ಗರಿಗೆ ಅನ್ನದಾನಗಳು ಮಾಡಲ್ಪಟ್ಟವು. ಮಸೀದಿಗಳಲ್ಲಿ ಪ್ರಾರ್ಥನೆ ಗಳಾದವು. ದೇವಾಲಯದಲ್ಲಿ ಪೂಜೆ, ದೀಪಾರಾಧನೆ, ಮಂತ್ರಘೋಷಗಳು ಆಚರಿಸಲ್ಪಟ್ಟವು.

ಪುಟ 174 ಬಾ.

ಬೇಗಂ ಸಾಹೇಬಳು "ಹಾಗೆಯೇ ಮಾಡಬಾರದೇಕೆ? " ಎಂದು ಅರ್ಥೋಕ್ತಿಯಲ್ಲಿ ಕೇಳಿದಳು.

"ಅದರಲ್ಲಿ ಕೆಲವು ತೊಡಕುಗಳಿವೆ. ಅಧಿಕಾರ ನಿರ್ವಹಣೆಯು ಅತಿ ಕಷ್ಟವಾಗುತ್ತದೆ. ತಾವೇ ಸುಲ್ತಾನೀಯಾಗಿಬಿಟ್ಟರೆ ತೊಡಕಿಲ್ಲದೇ ನಡೆಯುತ್ತದೆ"

"ನಿಮ್ಮ ಅಭಿಪ್ರಾಯವೂ ಹಾಗೆಯೇ ಇದೆಯೇನು ?"

"ಹೌದು. ಮಹಾರಾಣಿಯವರೇ. ನನ್ನದೂ ಅದೇ ಅಭಿಪ್ರಾಯ."

"ಡೆಲ್ಲಿಯ ಬಾದಷಹರ ಸಲಹೆಯನು ತೆಗೆದುಕೊಳ್ಳುವುದು ಒಳ್ಳೆಯ ದಲ್ಲವೆ? ಈ ಸಮಯದಲ್ಲಿ ಅವರ ಸಲಹೆ ಪಡೆದುಕೊಂಡರೆ, ಅಧಿಕಾರ ಮತ್ತು ರಾಜ್ಯದ ಭದ್ರತೆಗಳು ಚೆನ್ನಾಗಿರುತ್ತವೆ."

"ಬೇಗಂ ಸಾಹೇಬ್. ಈಗ ಅದು ಸರಿಯಲ್ಲ. ಬಾದಷಹನು ವಿಚಿತ್ರ ಸ್ವಭಾವದವನು. ಸ್ತ್ರೀಯರ ಅಧಿಕಾರವೆಂದರೆ ಅವನಿಗೆ ಬಹಳ ದ್ವೇಷ ಬುದ್ಧಿ. ಅವರು ಉತ್ತರದವರು. ನಾವು ದಕ್ಷಿಣದವರು. ನಮ್ಮ ನಮ್ಮ ದೇಶ ಸಂಪ್ರದಾಯಗಳು ಬೇರೆ ಬೇರೆ. ದಕ್ಷಿಣದಲ್ಲಿ ಎಷ್ಟೋ ರಾಜ್ಯಗಳಲ್ಲಿ ಎಷ್ಟೋ ಮಹಾರಾಣಿಯವರು ಆಳಿ ವಿಖ್ಯಾತರಾಗಿದ್ದಾರೆ. ಅಷ್ಟೇ ಅಲ್ಲ. ಈ ಸಂಧಿಯನ್ನು ಸಾಧಿಸಿಕೊಂಡು ಮೊಗಲ್ ಸಮ್ರಾಟನ ಸೇನಾಧಿಪತಿಯೊಬ್ಬನನ್ನು ಬಿಜಾಪುರದ ರಾಜ್ಯದಲ್ಲಿ ಸರ್ವಾಧಿಕಾರಿಯಾಗಿ ನೇಮಿಸುವ ಹವಣೆ ಮಾಡಬಹುದು. ಅಂತಹ ಯೋಚನೆಗೆ ನಮ್ಮ ದರ್ಬಾರಿನಲ್ಲಿ ಯಾರೂ ಸಮ್ಮತಿಸುವುದಿಲ್ಲ. ಎಡೆ ಕೊಡುವುದೂ ಇಲ್ಲ"

"ಸಿದ್ದೀ ಮಸೂದ್‌ರವರೇ! ನೀವು ದರ್ಬಾರಿನವರೆಲ್ಲರೂ ಹೇಗೆ ನಿಶ್ಚಯ ಮಾಡಿದರೆ ನಾನು ಹಾಗೆ ನಡೆಯುವವಳು. ನಿಮ್ಮೊಳಗೆ ವಿರೋಧ ಬರಬಾರದು. ನನ್ನ ಮಗನಿಗೆ ಪಟ್ಟ ಕಟ್ಟಿದರೇನು? ನಾನು ಸುಲ್ತಾನೀ ಎನ್ನಿಸಿಕೊಂಡರೇನು? ನನಗೆ ಎರಡೂ ಸಮಾನ. ನೀವುಗಳು ನಿಶ್ಚಯ ಮಾಡಿದಂತೆ ನಾನು ನಡೆಯುತ್ತೇನೆ"

ವಜೀರನು ಎದ್ದು "ಬೇಗಂ ಸಾಹೇಬ್. ನಾವೆಲ್ಲರೂ ಏಕ ವಾಕ್ಯತೆಯಿಂದ ನಿಷ್ಕರ್ಷೆ ಮಾಡಿದ್ದೇವೆ. ಈಗ ತಾವು ಬಿಜಾಪುರದ ಸುಲ್ತಾನೀ

ಆಗಬೇಕು. ಮುಖ್ಯವಾಗಿ ಸೇನಾಧಿಪತಿಗಳ ಅಭಿಪ್ರಾಯವೂ ಅದೇ ಆಗಿದೆ. ಷಾ ಸಿಕಂದರ್‌ರವರು ಇನ್ನೂ ನಾಲ್ಕು ವರುಷದ ಮಗು. ನಮ್ಮ ಸಿಂಹಾಸನಕ್ಕೆ ತಕ್ಕಂತೆ ರಾಜ್ಯ ಲಕ್ಷಣಗಳೆಲ್ಲವೂ ಆ ಬಾಲಕನಲ್ಲಿವೆ. ನಾವೆಲ್ಲರೂ ಆದರದಿಂದ ಅವನನ್ನು ಬೆಳೆಸಬೇಕು. ತಾವು ಜೀವಂತರಾಗಿರುವವರೆಗೆ ಸಿಕಂದರನು ಯುವರಾಜನಾಗಿಯೇ ಇರಲಿ. ತಾಯಿ ಮಕ್ಕಳಲ್ಲಿ ಭೇದವಿಲ್ಲ. ಈ ರಾಜ್ಯದಲ್ಲಿ ಅತಂಹ ಭೇದಭಾವನೆಯು ಎಂದೂ ಹುಟ್ಟಲಿಲ್ಲ. ಈ ವಂಶವೇ ಅಂತಹದು" ಎಂದು ಹೇಳಿ ಕೈ ಮುಗಿದನು.

ಬೇಗಂ ಸಾಹೇಬಳು ಮರ್ಯಾದೆಯಿಂದ ಎದ್ದು ನಿಂತು ಉಪಚಾರೋಕ್ತಿಗಳನ್ನು ಹೇಳಿ ವಜೀರನನ್ನು ಕಳುಹಿಸಿ ಕೊಟ್ಟಳು.

ಸೂರ್ಯಾಸ್ತಮಾನವಾಗಿ ರಾತ್ರಿ ಆವರಿಸಿತ್ತು. ನಭೋಮಂಡಲದಲ್ಲಿ ಚಂದ್ರ ತಾರಾಗಣಗಳು ಕಿಲಕಿಲನೆ ನಗುತ್ತಾ ಬೆಳಕು ಬೀರುತ್ತಿದ್ದವು. ಹಾಲಿನಂತಹ ಬೆಳದಿಂಗಳು ಚಂದ್ರಶಾಲೆಯಲ್ಲಿ ಬಿದ್ದಿದ್ದಿತು. ಬೇಗಂ ಸಾಹೇಬಳು ಏಕಾಂಗಿಯಾಗಿ ಆ ಚಂದ್ರಿಕಾವಿತಾನದಲ್ಲಿ ಯಾರನ್ನೋ ನಿರೀಕ್ಷಿಸುತ್ತಿದ್ದಳು.

ಅಫಜಲ್ ಖಾನನು ಸಡಗರದಿಂದ ಬಂದುಬೇಗಂ ಸಾಹೇಬಳಿಗೆ ಸಲಾಂ ಮಾಡಿದ.

ಆ ಚಂದ್ರಶಾಲೆಯು ಅಮೃತ ಶಿಲೆಗಳಿಂದ ಕಟ್ಟಲ್ಪಟ್ಟಿತ್ತು. ಬೆಳದಿಂಗಳು ಬಿದ್ದು ಕ್ಷೀರತಟಾಕದಂತೆ ಶೋಭಿಸುತ್ತಿತ್ತು. ಚಂದ್ರಶಾಲೆಯ ಬಲಪಾರ್ಶ್ವದಲ್ಲಿ ಇದ್ದ ಅಮೃತಶಿಲಾ ಫಲಕದ ಮೇಲೆ ಬೇಗಂ ಸಾಹೇಬಳು ಕಾಲು ಮೇಲೆ ಕಾಲು ಹಾಕಿಕೊಂಡು ಕುಳಿತಿದ್ದಳು. ಅವಳ ಪಾದಗಳು ಯಾವುದೋ ಸಂಗೀತದ ಛಾಯೆಗೆ ತಾಳ ಹಾಕುತ್ತಿರುವಂತೆ ಕುಣಿಯುತ್ತಿದ್ದವು.

ಅಫಜಲ್‌ಖಾನನು ಸಮೀಪದಲ್ಲಿ ಬಂದು ನಿಂತುಕೊಂಡ. ಅವನು ಹಾಲಿನ ನೊರೆಯಂತೆ ಶೋಭಿಸುತ್ತಿದ್ದ ರೇಷಿಮೆಯ ಅಂಗರೇಖನ್ನು ತೊಟ್ಟಿದ್ದನು. ತಲೆಯ ಮೇಲೆ ಟರ್ಕೀ ದೇಶದ ಖುಲಾವಿಯನ್ನು ಧರಿಸಿದ್ದ. ಖುಲಾವಿಯ ಮೇಲೆ ನೇತಾಡುತ್ತಿದ್ದ ಜರಿಗೆಯ ಷರಪೇಷು ಬೆಳದಿಂಗಳಿನ ಕಾಂತಿಯಲ್ಲಿ ಥಳಥಳಿಸುತ್ತಿದ್ದಿತು.

ಬೇಗಂ ಸಾಹೇಬಳು "ಅಫಜಲ್ ಖಾನ್, ನಿನ್ನ ಹಠವೇ ಗೆದ್ದಂತಾಯಿತು. ವಜೀರನು ಈ ದಿನ ಬಂದು ದರ್ಬಾರಿಗಳೆಲ್ಲರೂ ನನ್ನನ್ನೇ ಸುಲ್ತಾನಿಯಾಗಬೇಕೆಂದು ಪ್ರಾರ್ಥಿಸುತ್ತಾರೆಂದು ಹೇಳಿದ" ಎಂದು ಹೇಳಿ ನಕ್ಕಳು.

ಖಾನನು ಕಿರುನಗುವನ್ನು ನಕ್ಕು "ಬೇಗಂ ಸಾಹೇಬರು ಏನು ಅಪ್ಪಣೆ ಕೊಡೋಣಾಯಿತೋ" ಎಂದು ವ್ಯಂಗ್ಯೋಕ್ತಿಯಿಂದ ಕೇಳಿದ.

"ನಿನ್ನ ಇಷ್ಟದಂತೆ ನನ್ನ ಮಾತು. ಬೇರೆಯೇನಿದೆ?" ಎಂದು ತಲೆ ಎತ್ತಿ ನಗುತ್ತಾ ಹೇಳಿದಳು.

ಖಾನನು ಆ ಚಂದ್ರಬಿಂಬಕ್ಕೆ ಎದುರಾಗಿ ಎತ್ತಿದ ಆ ಬೇಗಂ ಸಾಹೇಬಳ ಮುಖವನ್ನು ಎರಡು ಹಸ್ತಗಳಿಂದಲೂ ಹಿಡಿದುಕೊಂಡು "ಷಾಹಿಬಾ, ನನ್ನ ಮಾತೇ? ನೀನು ಸುಲ್ತಾನಿಯಾಗುವುದಕ್ಕೇ ಹುಟ್ಟಿದವಳು" ಎಂದು ಹೇಳಿ ಅವಳ ಕಪೋಲಗಳನ್ನು ಚುಂಬಿಸಿದ.

ಷಾಹೀಬಳು ಅವನ ಕೈಗಳನ್ನು ಕಿತ್ತು ಹಾಕಿ ಸೆಳೆದು ಆಸನದ ಮೇಲೆ ಕುಳ್ಳಿರಿಸಿದಳು.

"ಖಾ, ಈಗ ಹೇಳು ನೀನು ಯಾತಕ್ಕಾಗಿ ನನ್ನನ್ನೇ ಸುಲ್ತಾನಿಯಾಗಬೇಕೆಂದು ಹಠ ತೊಟ್ಟೆ? ನಿಜವನ್ನು ಹೇಳು, ಆ ಮುದ್ದು ಬಾಲಕ ಷಾ ಸಿಕಂದರ್‌ನು ಸುಲ್ತಾನನಾಗಿದ್ದರೆ ನಮ್ಮ ಸುಖಕ್ಕೆ ಅಡ್ಡಿಯಾಗುತ್ತಿದ್ದನೇ?"

ಖಾನನ ಬಲತೋಳು ಷಾಹೀಬಳ ಕಂಠವನ್ನು ಸುತ್ತುಗಟ್ಟಿತ್ತು.

"ಷಾಹಿಬಾ, ನಿನ್ನ ಅನುಗ್ರಹವಿರುವವರೆಗೆ ನಮ್ಮ ಸುಖಕ್ಕೆ ಆತಂಕವೆಲ್ಲಿ ಬಂತು? ಹುಡುಗನ ಹೆಸರಿನಲ್ಲಿ ರಾಜ್ಯಭಾರ ನಡೆಸುವುದು ಬಲುಕಷ್ಟ. ರಾಜ್ಯದ ಭದ್ರತೆಯಿರುವುದಿಲ್ಲ. ನಮ್ಮ ರಾಜ್ಯದ ಮೇಲೆ ಬಾದಷಹ ಔರಂಗಸೇಬನು ಬದುಕಿರುವವರೆಗೆ ಯುದ್ಧದ ಮೇಲೆ ಯುದ್ಧಗಳು ಕಾದು ನಿಂತಿವೆ. ನಿನ್ನ ಆಜ್ಞೆಯಾದರೆ ಈ ಸುಲ್ತಾನಿಯ ಹೆಮ್ಮೆಗಾಗಿ ಪ್ರಾಣಗಳನ್ನು ಪಣವಾಗಿಟ್ಟು ಯುದ್ಧ ಮಾಡುವ ಹುಮ್ಮಸ್ಸು ನಮಗೆ ಬರುತ್ತದೆ. ಬಾಲಕನಿಗಾಗಿ ನಾವಷ್ಟು ಹೆಣಗುವೆವೇ? ನಿನ್ನ ಕಟಾಕ್ಷದ ಸೂತ್ರದಿಂದ ಗೊಂಬೆಯಂತೆ ನಾನು ಆಡುತ್ತೇನೆ. ನೀನು ರಣರಂಗದ ಶಕ್ತಿ. ಆದ್ದರಿಂದಲೇ ನಿನಗೆ ಪಟ್ಟ ಕಟ್ಟಬೇಕೆಂದು ನಾನು ಹಠ ತೊಟ್ಟೆ. ಐಶ್ವರ್ಯ-ಭೋಗಗಳು ನಿನಗೆ ಬೇಕಾದಷ್ಟಿವೆ. ಆ ಭೋಗಲಾಲಸೆಗಳಲ್ಲಿಯೇ ಮಗ್ನರಾಗಿದ್ದರೆ ನಮ್ಮ ಪರಾಕ್ರಮಕ್ಕೆ ಬೆಲೆಯೇನು?

ನಾವು ಸಂಪಾದಿಸಿರುವ ಖ್ಯಾತಿಗೆ ಗೌರವವೇನು ಉಳಿಯುತ್ತದೆ? ಇದೆಲ್ಲಾ ಮುಖ್ಯವಲ್ಲ. ರಣಕ್ಷೇತ್ರದಲ್ಲಿ ನಮಗೆ ಶಕ್ತಿ ಉತ್ಸಾಹಗಳನ್ನು ಕೊಡುವ ದೇವತೆ ನೀನು. ಈ ದೇವತೆಯನ್ನು ಆರಾಧಿಸುವುದಕ್ಕಾಗಿಯೇ ನೀನು ಸುಲ್ತಾನಿಯಾಗಬೇಕು" ಎಂದು ಹೇಳಿ ಬೇಗಂ ಸಾಹೇಬಳನ್ನು ಆಲಂಗಿಸಿದನು.

ಬೇಗಂ ಸಾಹೇಬಳು ಆಲಿಂಗನದಿಂದ ಬಿಡಿಸಿಕೊಂಡುಪರಿಚಾರಿಕೆಯನ್ನು ಕರೆದಳು. ಪರಿಚಾರಿಕೆಯು ಚಿನ್ನದ ಲೋಟಗಳನ್ನೂ ಮಧುಪಾತ್ರೆಯನ್ನೂ ತಂದಿಟ್ಟಳು. ಆ ಪಾತ್ರೆಗಳಲ್ಲಿ ಮಧುವು ಸ್ವರ್ಣವರ್ಣದಿಂದಲೇ ರಂಜಿಸುತ್ತಿದ್ದಿತು. ಆ ಪ್ರಣಯಿಗಳು ಆ ಚಿನ್ನದ ಚಷಕಗಳಲ್ಲಿ ಮದ್ಯವನ್ನು ಕಂಡಾಗ ಸ್ವರ್ಣವರ್ಣದಿಂದ ಆ ಮದ್ಯವು ಸಜೀವವಾಗಿ ಕುಣಿಯುತ್ತಿರುವಂತೆ ಭಾಸವಾಯಿತು.

ಪರಿಚಾರಿಕೆಯು ದೂರ ಸರಿದು ಹೊರಟು ಹೋದಳು.

ಷಾಹಿಬಾಳು ಮಧುಪಾತ್ರೆಯನ್ನು ಎತ್ತಿ ಖಾನನಿಗೆ ಮಧುವನ್ನು ಅರ್ಪಿಸಿದಳು.

ಖಾನನು ಕೊಂಚ ಕೊಂಚ ಪಾನ ಮಾಡಿ ಅದೇ ಮಧುಪಾತ್ರೆಯನ್ನು ಕೈಗೆ ತೆಗೆದುಕೊಂಡು ಷಾಹಿಬಳ ತುಟಿಯ ಮುಂದೆ ಹಿಡಿದನು. ಆ ಮಧುಪಾತ್ರೆಯಲ್ಲಿ ಕೆಂದುಟಿಗಳು ಪ್ರತಿಬಿಂಬಿಸಿದವು.

ಷಾಹಿಬಳು ನಾಚುತ್ತಾ ಹಿಂಜರಿಯುತ್ತಾಸ್ವಲ್ಪಸ್ವಲ್ಪವಾಗಿ ಮಧುಪಾನ ಮಾಡಿದಳು. ಕಣ್ಣುಗಳು ಅರಳಿದವು. ಆ ಪ್ರಣಯಿಗಳಿಬ್ಬರೂ ಮಧುಪಾನಾಸಕ್ತರಾಗಿ ಸ್ವರ್ಗಲೋಕದ ಆನಂದವನ್ನು ಅನುಭವಿಸುತ್ತಿರುವಂತೆ ಭಾವಿಸಿಕೊಳ್ಳುತ್ತಿದ್ದರು.

ಅವರ ವಿಲಾಸಗಳಲ್ಲಿ ಆ ರಾತ್ರಿಯು ಹೇಗೆ ಕಳೆಯಿತೋ ಅವರಿಗೆ ಅರಿವಾಗಲಿಲ್ಲ. ಬಿಡುವಿಲ್ಲದ ಚಂದ್ರಿಕೆಗೂ ತಾನು ಕಲೆಗುಂದುತ್ತಿರುವುದು ಬೋಧೆಯಾಗಲಿಲ್ಲವೆಂದು ಕಾಣುತ್ತದೆ. ಪ್ರಣಯಿಗಳು ಎಚ್ಚರಗೊಳ್ಳುವಾಗ ಅಗರು ಧೂಪಗಳಿಂದ ಮಲಿನವಾಗಿದ್ದ ಶಯ್ಯಾಗೃಹದಲ್ಲಿ ಹಂಸತೂಲಿಕಾತಲ್ಪದಲ್ಲಿ ಅಸ್ತವ್ಯಸ್ತವಾಗಿ ಬಿದ್ದಿದ್ದರು.

ಎಚ್ಚೆತ್ತು ಒಬ್ಬರ ಮುಖವನ್ನೊಬ್ಬರು ನೋಡಿ ಇಬ್ಬರೂ ನಾಚಿಕೊಂಡರು.

## ೧೩

ಬೆಳಕು ಹರಿಯುತ್ತಲೇ ಬೇಗಂ ಸಾಹೇಬಳಿಗೆ ಪ್ರಪಂಚವೆಲ್ಲವೂ ಹೊಸದಾಗಿ ಕಾಣುತ್ತಿರುವಂತೆ ಬೋಧೆಯಾಗುತ್ತಿದ್ದಿತು. ಅಷ್ಟೇ ಅಲ್ಲ, ತಾನೇ ಹೊಸಬಳಾಗಿರುವಂತೆ ಅವಳು ಭಾವಿಸುತ್ತಿದ್ದಳು. ಎಂಥಾ ನಿರೀಹ ಸತ್ಪುರುಷರು ಅವಳ ಮುಖವನ್ನು ನೋಡಿದರೂ ನಿಷ್ಕಲಂಕ ಪವಿತ್ರ ಕಾಂತಿಯಿಂದ ಆ ಬೇಗಂ ಸಾಹೇಬಳು ಶೋಭಿಸುತ್ತಿದ್ದಾಳೆಂದು ಹೇಳುತ್ತಿದ್ದರು. ಪ್ರಮಾಣಮಾಡಿ ಹೇಳುತ್ತಿದ್ದರು.

ಅದು ಆ ಬೇಗಂ ಸಾಹೇಬಳ ಮುಖ್ಯಪುಣ್ಯ.

ಮಂತ್ರವಾದಿ ಹಷೀಂ ಊಲೂವಿಯು ಅರಮನೆಗೆ ಬಂದು ಬೇಗಂ ಸಾಹೇಬಳ ಭೇಟಿಯಾಗಬೇಕೆಂದು ದರೋಗರಿಗೆ ತಿಳಿಸಿದನು.

ದರೋಗನು ಲಗುಬಗೆಯಿಂದ ಅಂತಃಪುರಕ್ಕೆ ಹೋಗಿ "ಮಂತ್ರವಾದಿಯು ಬಂದಿದ್ದಾನೆ. ತಕ್ಷಣ ಬೇಗಂ ಸಾಹೇಬರ ಭೇಟಿಯನ್ನು ಅಪೇಕ್ಷಿಸುತ್ತಾನೆ" ಎಂದು ಹೇಳಿ ಕಳುಹಿಸಿದ.

ಬೇಗಂ ಸಾಹೇಬಳಿಗೆ ಅತ್ಯಾನಂದವಾಯಿತು. "ಈ ಮಂತ್ರವಾದಿಯು ಯಾವಾಗಲೂ ನಮ್ಮ ಮೇಲೆ ಕೃಪೆ ಮಾಡುತ್ತಾನೆ. ಸಂದಿಗ್ಧ ಸಮಯಗಳಲ್ಲಿ ಬಂದು ದಾರಿ ತೋರಿಸುತ್ತಾನೆ. ಅದು ಆದಿಲ್‌ಷಾಹಿಯ ಪುಣ್ಯ" ಎಂದುಕೊಂಡು ತನ್ನ ಅಂತಃಪುರದ ಜಮಾದಾರನಾದ ಇಮಾಂನನ್ನು ಅಂತಃಪುರದೊಳಗೆ ಮಂತ್ರವಾದಿಯನ್ನು ಕರೆತರುವಂತೆ ಹೇಳಿಕಳುಹಿಸಿದಳು.

ಲಗುಬಗೆಯಿಂದ ದುಃಖಕಾಲದ ವಸ್ತ್ರಲವನ್ನು ಧರಿಸಿಕೊಂಡು ಮಂತ್ರವಾದಿಯ ದರ್ಶನಕ್ಕೆ ಸಿದ್ಧಳಾದಳು.

ಜಮಾದಾರ್ ಇಮಾಂನು ಮಂತ್ರವಾದಿಯನ್ನು ಕಂಡು ಮರ್ಯಾದೆಯಿಂದ ಸಲಾಂಮಾಡಿ "ಬೇಗಂ ಸಾಹೇಬರು ತಮ್ಮ ದರ್ಶನಕ್ಕಾಗಿ ಸಿದ್ಧರಾಗಿ ನಿರೀಕ್ಷಿಸುತ್ತಿದ್ದಾರೆ" ಎಂದು ವಿನಯದಿಂದ ಅರಿಕೆ ಮಾಡಿದನು.

ಮಂತ್ರವಾದಿಯು ಇಮಾಂನ ಹಿಂದೆ ಹಿಂದೆ ಅಂತಃಪುರವನ್ನು ಪ್ರವೇಶ ಮಾಡಿದ.

ಅಂತಃಪುರದ ರಂಗಮಹಲಿನಲ್ಲಿ ಅಣಿಮಾಡಲ್ಪಟ್ಟಿದ್ದ ಆಸನವನ್ನು ತೋರಿಸಿ "ಇಲ್ಲಿ ಪದಾರಿಸಬೇಕು" ಎಂದು ಇಮಾಂನು ಹೇಳಿದನು.

ಮಂತ್ರವಾದಿಯು ಕೈಯಲ್ಲಿದ್ದ ಮಂತ್ರದಂಡವನ್ನು ಆ ಆಸನದ ಮೇಲಿಟ್ಟು ತಾನೂ ಕುಳಿತುಕೊಂಡ.

ಅಂತಃಪುರದೊಳಗಿನಿಂದ ಬೇಗಂ ಸಾಹೇಬಳು ತಲೆ ತಗ್ಗಿಸಿಕೊಂಡು ನಡೆದು ಬಂದು ಮಂತ್ರವಾದಿಗೆ ಅಭಿವಾದನ ಮಾಡಿದಳು.

ಅನಂತರ ಕೈಮುಗಿದು "ಮಂತ್ರವಾದಿಗಳು ದಯಮಾಡಿಸಿ, ದರ್ಶನ ಕೊಟ್ಟದ್ದು ನಮ್ಮ ಭಾಗ್ಯ. ಆದಿಲ್‌ಷಾಹಿಯ ರಾಜಭವನವು ಕತ್ತಲಾಗಿ ಹೋಗಿದೆ. ತಮ್ಮ ಅನುಗ್ರಹದಿಂದ ಬೆಳಗಬೇಕು" ಎಂದು ಕೈಮುಗಿದಳು.

ಮಂತ್ರವಾದಿಯು ಎರಡು ಕೈಗಳನ್ನೂ ಎತ್ತಿ ಆಶೀರ್ವದಿಸಿ, "ರಾಜಮಾತೆ, ಕುಳಿತುಕೋ. ದೇವರ ಅಪ್ಪಣೆಯಂತೆ ಎರಡು ಮಾತುಗಳನ್ನು ಹೇಳಿಹೋಗಲು ಬಂದಿದ್ದೇನೆ. ಹೇಳುವುದು ನಮ್ಮ ಕರ್ತವ್ಯ, ಮಾಡುವುದೂ ಬಿಡುವುದೂ ನಿಮ್ಮ ಇಷ್ಟ. ಫಲಾಫಲಗಳನ್ನು ಅನುಭವಿಸುವವರು ನೀವು" ಎಂದು ಹೇಳಿ ಧ್ಯಾನಾಸಕ್ತನಾಗಿ ಕುಳಿತ.

ಬೇಗಂ ಸಾಹೇಬಳು ಅವನೆದುರಿಗೆ ತಲೆತಗ್ಗಿಸಿಕೊಂಡು ವಿನಮ್ರಳಾಗಿ ಕುಳಿತುಕೊಂಡಳು. ಸ್ವಲ್ಪ ಹೊತ್ತಾದ ನಂತರ ಉಲೂಮಿಯು ಕಣ್ಣು ತೆರೆದನು.

ಬೇಗಂಳು ಅವನ ಕಣ್ಣುಗಳನ್ನೇ ನೋಡುತ್ತಾ ಬಾಯಿನಲ್ಲಿ ಏನು ಮಾತು ಹೊರಡುವುದೋ ಎಂದು ನಿರೀಕ್ಷಿಸುತ್ತಿದ್ದಳು.

ಮಂತ್ರವಾದಿಯು "ಬೇಗಂಸಾಹೇಬ್, ಸುಲ್ತಾನರು ದೇವರ ರಾಜ್ಯಕ್ಕೆ ಸೇರಿಕೊಂಡರು. ನೀನು ಸುಲ್ತಾನನ ಮಹಾರಾಣಿ, ರಾಜಮಾತೆ. ಈ ಐಶ್ವರ್ಯ ಭೋಗಗಳೆಲ್ಲವೂ ನಿನ್ನ ಇಚ್ಛೆಗೆ ಅನುಗುಣವಾಗಿ ಕಾದಿವೆ.

ದರಬಾರಿನ ಉನ್ನತಾಧಿಕಾರಿಗಳು ಸೇನಾಧಿಪತಿಗಳು ನಿನಗೆ ಸುಲ್ತಾನೀ ಪಟ್ಟ ವನ್ನು ಕಟ್ಟಬೇಕೆಂದು ಹವಣಿಸಿದ್ದಾರೆ, ಹಾತೊರೆಯುತ್ತಿದ್ದಾರೆ ಅದು ದೇವರ ಇಷ್ಟಕ್ಕೆ ವಿರೋಧವಾಗಿದೆ. ಹಾಗೆ ಮಾಡಿದರೆ ರಾಜ್ಯಕ್ಕೂ,ನಿಮಗೂ ಭಯಂಕರವಾದ ಕೇಡುಂಟಾಗುತ್ತದೆ. ಯುವರಾಜ ಸಿಕಂದರನಿಗೆ ಪಟ್ಟ ಕಟ್ಟುವುದು ಸೂಕ್ತ ಮತ್ತು ಸಂಪ್ರದಾಯಬದ್ಧವಾಗಿದೆ. ಅದೇ ದೇವರಿಗೆ ಸಂತೋಷವಾಗುವ ಮಾರ್ಗ. ಯುವರಾಜನಿಗೆ ಪಟ್ಟಾಭಿಷೇಕ ಮಾಡಿರಿ. ಅಧಿಕಾರಿಗಳು ತಮ್ಮ ತಮ್ಮ ಅಧಿಕಾರಗಳನ್ನು ಧರ್ಮದಿಂದ ಪಾಲಿಸಲಿ. ನೀನು ಇತ್ತ ಯುವರಾಜ, ಅತ್ತ ದರಬಾರಿನ ಅಧಿಕಾರ ವರ್ಗ ಇವೆರಡರ ಮೇಲೆಯೂ ಅಧಿಷ್ಠಾತ್ರಿಯಾಗಿ ಸಿಂಹಾಸನದ ಸೇವೆಮಾಡು. ನಿನಗೆ ಶ್ರೇಯಸ್ಸಾಗುವುದು. ರಾಜ್ಯಕ್ಕೆ ಕ್ಷೇಮವಾಗುವುದು. ಇದು ದೇವರ ಆಜ್ಞೆ" ಎಂದು ಹೇಳಿ ಎದ್ದು ನಿಂತನು.

ಬೇಗಂ ಸಾಹೇಬಳು ಮರು ಮಾತನಾಡದೇ "ತಮ್ಮ ಆಜ್ಞೆಯನ್ನು ಪರಿ ಪಾಲಿಸುತ್ತೇನೆ" ಎಂದು ಹೇಳಿ ಅಭಿವಾದನ ಮಾಡಿದಳು.

ಮಂತ್ರವಾದಿಯು ಅರಮನೆಯಿಂಧ ಹೊರಟು ಯಾರ ಕಣ್ಣಿಗೂ ಕಾಣದೆ ಮಾಯವಾದನು.

ಬೇಗಂ ಸಾಹೇಬಳು ವಜೀರನನ್ನೂ ಅಧಿಕಾರಿಗಳನ್ನೂ ಮುಖ್ಯ ಮುಖ್ಯ ಸೇನಾಧಿಪತಿಗಳನ್ನೂ ದರಬಾರಿನ ಖಾಜೀ ಸಾಹೇಬರನ್ನೂ ಅರಮನೆಗೆ ಬಂದು ಸೇರಬೇಕೆಂದು ತುರ್ತು ಆಜ್ಞೆಯನ್ನು ಕಳುಹಿಸಿಕೊಟ್ಟಳು.

ದರಬಾರಿಗಳೆಲ್ಲರೂ ಅಂತಃಪುರದರಂಗ ಮಹಲಿನಲ್ಲಿ ತಮ್ಮ ತಮ್ಮ ಸ್ಥಾನ ಮಾನಗಳಿಗೆ ಅನುಗುಣವಾಗಿ ಆಸನಗಳನ್ನು ಅಲಂಕರಿಸಿದ್ದರು.

ಬೇಗಂ ಸಾಹೇಬಳು ಅಂತಃಪುರದ ಒಳಗಿನಿಂದ ಷಾ ಸಿಕಂದರ್‌ನನ್ನು ವಸ್ತ್ರಾಭರಣಗಳಿಂದ ಅಲಂಕರಿಸಿ ರಂಗಮಹಲಿಗೆ ಅವನನ್ನು ಕೈಹಿಡಿದು ಕರೆ ತಂದಳು.

ದರಬಾರಿಗಳೆಲ್ಲರೂ ಎದ್ದು ನಿಂತು ಪದ್ಧತಿಯ ಪ್ರಕಾರ ಬೇಗಂಸಾಹೇಬ ಳಿಗೆ ಮುಜುರೆ ಮಾಡಿದರು. ಎಲ್ಲರೂ ಅವರವರ ಆಸನಗಳಲ್ಲಿ ಕುಳಿತು ಕೊಂಡರು. ತನಗಾಗಿ ಸಜ್ಜುಗೊಳಿಸಿದ್ದ ದಿವ್ಯಾಸನದ ಮೇಲೆ ಬೇಗಂ

ಸಾಹೇಬಳು ಷಾ ಸಿಕಂದರನನ್ನು ಎತ್ತಿಕೂಡಿಸಿ, ಪಕ್ಕದಲ್ಲಿ ನಿಂತುಕೊಂಡು ಮಾತನಾಡಲಾರಂಭಿಸಿದಳು.

"ಈ ದರಬಾರಿನಲ್ಲಿ ನಮ್ಮ ಆದಿಲ್‌ಷಾಹಿಯ ಉನ್ನತಾಧಿಕಾರಿಗಳೂ ಪ್ರಖ್ಯಾತರಾದ ಸೇನಾಧಿಪತಿಗಳೂ ಮಿತ್ರಸಮಾನರಾದ ವೃದ್ಧ ಶ್ರೀಮಂತರೂ ದೇವರ ರಾಜ್ಯದ ಭಕ್ತರಾದ ಖಾಜೀ ಸಾಹೇಬರೂ ದಯಮಾಡಿಸಿದ್ದೀರಿ. ಎಲ್ಲರಿಗಿಂತಲೂ ಆದಿಲ್‌ಷಾಹೀ ಸಿಂಹಾಸನವು ದೊಡ್ಡದು. ಮತ್ತು ಪವಿತ್ರ ವಾದುದು. ಈ ಪ್ರಾತಃಕಾಲ ಮಂತ್ರವಾದಿ ಉಲೂಮಿಸಾಹೇಬನು ದರ್ಶನ ವಿತ್ತು, "ದೇವರ ಆಜ್ಞೆಯಾಗಿದೆ, ಷಾ ಸಿಕಂದರನಿಗೆ ಪಟ್ಟ ಕಟ್ಟಬೇಕು. ಅಧಿಕಾರಿಗಳು ಸೇನಾಧಿಪತಿಗಳು ಯುವರಾಜರು ಪ್ರಾಪ್ತವಯಸ್ಕರಾಗುವವ ರೆಗೆ ಯುವರಾಜರನ್ನು ಗೌರವದಿಂದ ಕಾಪಾಡಬೇಕು" ಎಂದು ಆಜ್ಞೆ ಮಾಡಿ ದರು. ಆವರ ಮಾತು ದೈವವಾಣಿಗೆ ಸಮಾನವಾದದ್ದು. ಅದು ಎಷ್ಟೋ ಬಾರಿ ನಮ್ಮ ನಿಮ್ಮ ಅನುಭವದಲ್ಲಿ ಬಂದಿದೆ. ನಾವೆಲ್ಲರೂ ಅವರ ಆಜ್ಞೆಯನ್ನು ಸಂತೋಷದಿಂದ ಪರಿಪಾಲಿಸಬೇಕು. ಈ ಬಾಲಕ ಯುವರಾಜ ಷಾ ಸಿಕಂದರನನ್ನು ನಿಮ್ಮಗಳಿಗೆ ಒಪ್ಪಿಸಿದ್ದೇನೆ. ರಾಜಮಾತೆಯ ಕರ್ತವ್ಯವು ಇಷ್ಟೇ" ಎಂದು ಹೇಳಿ ಆದರದೊಂದಿಗೆ ಕೈ ಜೋಡಿಸಿ ವಂದನೆಯನ್ನು ಅರ್ಪಿಸಿದಳು.

ಎಲ್ಲರೂ ಅವಾಕ್ಕಾದರು. ಇತಿಕರ್ತವ್ಯತಾ ಮೂಢರಾಗಿ ಸ್ತಂಭಿತರಾಗಿ ತಲೆ ತಗ್ಗಿಸಿ ಕುಳಿತುಕೊಂಡರು.

ಖಾಜಿ ಸಾಹೇಬರೆದ್ದು "ಮಂತ್ರವಾದಿಗಳ ಮಾತು ನಿಜವಾಗಿಯೂ ದೇವರ ಆಜ್ಞೆಗೆ ಸಮಾನವಾದದ್ದು. ಅದು ಶಾಸ್ತ್ರ ಸಂಪ್ರದಾಯಗಳಿಗೂ ಅನುಗುಣವಾಗಿದೆ. ನಾವೆಲ್ಲರೂ ತ್ರಿಕರಣ ಪೂರ್ವಕವಾಗಿ ಆ ಮಾತನ್ನು ಪಾಲಿಸುವುದು ನಮ್ಮ ಧರ್ಮ" ಎಂದು ಹೇಳಿದರು.

ವೃದ್ಧ ಶ್ರೀಮಂತರುಗಳೂ "ಸರಿ, ಸರಿ" ಎಂದು ಹೇಳಿದರು.

ವಜೀರ ಸಿದ್ಧೀಮಸೂದನು ಎದ್ದುನಿಂತು ಬೇಗಂ ಸಾಹೇಬಳಿಗೆ ವಂದಿಸಿ ದರ್ಬಾರಿಗಳಿಗೆ ಅಭಿವಾದನ ಮಾಡಿ ಹೇಳಿದನು

"ನನ್ನ ಹೊಣೆಗಾರಿಕೆಯು ಬಹಳವಾಗಿದೆ. ನಿಮ್ಮೆಲ್ಲರ ಆಜ್ಞೆಯಂತೆ ನಡೆಯುವವನು ನಾನು. ನನಗೆ ಈ ದೊಡ್ಡ ಅಧಿಕಾರದಲ್ಲಿರಬೇಕೆಂಬ

ಸ್ವಾರ್ಥಾಭಿಲಾಷೆಯಿಲ್ಲ. ಆದಿಲ್‌ಷಾಹಿಯ ದರ್ಬಾರಿಗಳೆಲ್ಲರೂ ಅನುಗ್ರಹಿಸಿದರೆ ನಾನು ಈ ವಜೀರನ ಅಧಿಕಾರ ದಂಡವನ್ನು ಪರಿಗ್ರಹಿಸಿ ಸೇವೆ ಮಾಡುತ್ತೇನೆ. ಇಲ್ಲವಿದ್ದರೆ ನನ್ನ ಜಹಗೀರಿಗೆ ಹೋಗಿ ಉಳಿವ ಕಾಲವನ್ನು ದೇವರ ಪ್ರಾರ್ಥನೆಯಲ್ಲಿ ಕಳೆಯುತ್ತೇನೆ".

ಸೇನಾಧಿಪತಿಗಳು ಯಾರೊಬ್ಬರೂ ತುಟಿ ಪಿಟಿಕ್ ಎನ್ನಲಿಲ್ಲ.

ಬೇಗಂ ಸಾಹೇಬಳು ಒಂದು ಬಾರಿ ಎಲ್ಲರ ಮುಖವನ್ನೂ ನೋಡಿದಳು. ಏನೂ ಪ್ರತ್ಯುತ್ತರವಿಲ್ಲ.

"ವಜೀರರೇ, ನಿಮ್ಮ ರಾಜಭಕ್ತಿ ಪರಾಕ್ರಮಗಳನ್ನು ಮೆಚ್ಚಿ ಸುಲ್ತಾನರವರು ಈ ಅಧಿಕಾರವನ್ನು ಕೊಟ್ಟಿದ್ದಾರೆ. ಯುವರಾಜ ಷಾ ಸಿಕಂದರನು ಪ್ರಾಪ್ತ ವಯಸ್ಕನಾಗಿ ರಾಜ್ಯಾಡಳಿತದ ಸಂಪೂರ್ಣ ಭಾರವನ್ನು ನಿರ್ವಹಿಸಲು ಸಮರ್ಥನಾಗುವವರೆಗೆ ಸುಲ್ತಾನರಿಂದ ದತ್ತವಾದ ನಿಮ್ಮ ಅಧಿಕಾರವು ಅಚ್ಚಳಿಯದೇ ನಡೆಯಬೇಕು" ಎಂದು ಹೇಳಿದಳು.

ದರ್ಬಾರಿಗಳು ಏಕವಾಕ್ಯತೆಯಿಂದ "ತಥಾಸ್ತು" ಎಂದರು.

ಅಂತಃಪುರದ ರಂಗಮಹಲಿನ ಅಂತರಂಗ ದರಬಾರು ಬರಖಾಸ್ತಾಯಿತು ದರಬಾರಿಗಳೆಲ್ಲರೂ ತಮ್ಮ ತಮ್ಮ ನಿವಾಸಸ್ಥಾನಗಳಿಗೆ ತೆರಳಿದರು.

ಒಂದು ವಾರದೊಳಗಾಗಿ ಸಿಕಂದರನ ಪಟ್ಟಾಭಿಷೇಕ ಸಿಂಹಾಸನಾರೋಹಣದ ಏರ್ಪಾಡುಗಳು ಸಿದ್ಧವಾದವು. ಖಾಜಿಗಳು ಗೊತ್ತುಮಾಡಿದ್ದ ಶುಭಮುಹೂರ್ತದಲ್ಲಿ ದರ್ಬಾರಿನಲ್ಲಿ ಪಟ್ಟಾಭಿಷೇಕ ನಡೆಯುವ ಏರ್ಪಾಡಾಗಿತ್ತು. ಗೋಲ್ಕೊಂಡದ ಸುಲ್ತಾನರಿಗೂ ನಾನಾ ಪ್ರಾಂತ್ಯಗಳ ಅಧಿಕಾರಿಗಳಿಗೂ ಆಹ್ವಾನ ಪತ್ರಗಳು ಸಂಪ್ರದಾಯದಂತೆ ಕಳುಹಿಸಲ್ಪಟ್ಟಿದ್ದುವು. ಶಿವಾಜಿಗೂ ಶ್ರೀಮಂತ ರಾಜರಿಗೆ ಕಳುಹಿಸಲ್ಪಡುವಂತೆ ಆಹ್ವಾನ ಪತ್ರವು ಕಳುಹಿಸಲ್ಪಟ್ಟಿತ್ತು. ಆ ಶುಭದಿನ ಪ್ರಾತಃಕಾಲದಲ್ಲಿ ಬಿಜಾಪುರದಅರಮನೆಯ ದರ್ಬಾರು ಉತ್ಸಾಹದಿಂದ ನಡೆದಿತ್ತು. ಶ್ರೀಮಂತರೂ ಸಾವಂತರೂ ಉನ್ನತಾಧಿಕಾರಿಗಳೂ, ಪ್ರಾಂತಾಧಿಕಾರಿಗಳೂ, ರಾಜಧಾನಿಯ ಪ್ರಮುಖ ಸಾಹುಕಾರರುಗಳೂ ನೆರೆದಿದ್ದರು. ಪಟ್ಟದಾನೆಯ ಮೇಲೆ ಅಂಬಾರಿಯಲ್ಲಿಸಿಕಂದರ್‌ನನ್ನು ಕೂಡಿಸಿ ನಗರವೆಲ್ಲೆಲ್ಲಾ ಅದ್ಭುತವಾದ ಮೆರವಣಿಗೆಯನ್ನು ಮಾಡಿ ಅರಮನೆಗೆ ಕರೆತಂದರು. ವಾದ್ಯಘೋಷಗಳು ದಿಕ್ತಟಗಳನ್ನು ತುಂಬುತ್ತಾ

ಗಾಂಡಕ್ಕೆ ಜ್ಞೇಗ 163 ಪು.

ಅಧಿಕಾರಿಗಳು. ಈಗ ಎಲ್ಲ ಕಾರ್ಯಗಳೂ ನಿಮ್ಮ ಮೇಲೆ ಅವಲಂಬಿಸಿವೆ. ನಾವು ಮೊದಲು ನಿಮ್ಮನ್ನು ಗೌರವಿಸುವುದೇ ನಮ್ಮ ಕರ್ತವ್ಯ. ಕುಳಿತು ಕೊಳ್ಳಿರಿ" ಎಂದು ಹೇಳಿದಳು.

ವಜೀರನು ಮತ್ತೊಮ್ಮೆ ಸಲಾಂ ಮಾಡಿ ಆಸನದ ಮೇಲೆ ಕುಳಿತು ಕೊಂಡ.

ಬೇಗಂ ಸಾಹೇಬಳು ತನಗಾಗಿ ಸಜ್ಜಾಗಿದ್ದ ಆಸನದ ಸಮೀಪಕ್ಕೆ ಸೇರಿದು ನಿಂತುಕೊಂಡು, ತಾವು ಇಲ್ಲಿಗೆ ಬಂದದ್ದು ನನಗೆ ಬಹಳ ಸಮಾಧಾನ ವಾಯಿತು. ನಾನೇ ಕರೆಕಳುಹಿಸಬೇಕೆಂದು ಯೋಚನೆಮಾಡುತ್ತಿದ್ದೆ. ತಾವು ಬಂದ ಅಭಿಪ್ರಾಯವನ್ನು ತಿಳಿಸಿರಿ" ಎಂದು ಹೇಳಿದಳು.

ವಜೀರನು ಎದ್ದು ನಿಂತು ಎರಡು ಕೈಗಳನ್ನೂ ಆಸನದ ಕಡೆಗೆ ತೋರಿಸಿ "ಬೇಗಂ ಸಾಹೇಬರೂ ಆಸನವನ್ನು ಅಲಂಕರಿಸಿದರೆ ಒಳಿತಾಗುತ್ತದೆ. ತಾವು ನಿಂತಿರುವಾಗ ಈ ಸೇವಕನು ಕುಳಿತು ಮಾತನಾಡುವುದು ಬಹಳ ಅಪಚಾರ ವಾದಂತಾಗುತ್ತದೆ" ಎಂದು ಹೇಳಿದ.

ವಿಧಿಯಿಲ್ಲದೇ ಬೇಗಂ ಸಾಹೇಬಳು ಆಸನದ ಮೇಲೆ ಕುಳಿತುಕೊಂಡಳು.

ವಜೀರನು "ಬೇಗಂ ಸಾಹೇಬ್, ಈ ರಾಜ್ಯದ ಸಮಸ್ತ ಕಾರ್ಯಗಳಿಗೂ ಈಗ ನೀವೇ ಅಧಿಷ್ಠಾತ್ರಿ. ಮುಂದೆ ಹೇಗೆ ರಾಜ್ಯಭಾರವನ್ನು ನಡೆಸಬೇಕು ಎಂಬುದನ್ನು ತಾವೇ ನಿರ್ಧರಿಸಬೇಕು. ನಾನು ಸ್ವತಂತ್ರಿಸಿ ಯಾವ ಕಾರ್ಯ ವನ್ನೂ ಮಾಡುವಂತಿಲ್ಲ" ಎಂದು ಹೇಳಿದ.

"ದರ್ಬಾರಿನ ಶ್ರೀಮಂತರೂ ಅರಮನೆಯ ಉಮ್ರಾಗಳೂ ದೊಡ್ಡ ದೊಡ್ಡ ಸೇನಾಧಿಪತಿಗಳೂ ಇವರೆಲ್ಲರನ್ನೂ ಸಭೆ ಸೇರಿಸಿ, ನೀವೇ ಮುಂದಿನ ಕಾರ್ಯಗಳನ್ನು ನಿರ್ಧಾರ ಪಡಿಸಬೇಕು."

ವಜೀರನು ಸ್ವಲ್ಪ ಹೊತ್ತು ಸ್ತಂಭಿತನಾದ.

ಉತ್ತರಕ್ಷಣವೇ "ಬೇಗಂ ಸಾಹೇಬ್. ತಾವು ಕ್ಷಮಿಸಬೇಕು. ನಾನು ಎಲ್ಲರೊಡನೆಯೂ ಮಾತನಾಡಿದ್ದೇನೆ. ತಮಗೇ ಸುಲ್ತಾನೀ ಪಟ್ಟ ಕಟ್ಟ ಬೇಕೆಂದು ಎಲ್ಲರದೂ ಏಕಾಭಿಪ್ರಾಯ. ಕೆಲವರು ವಯೋವೃದ್ಧ ಶ್ರೀಮಂತರು ಯುವರಾಜ ಸಿಕಂದರ್‌ರವರಿಗೆ ಪಟ್ಟ ಕಟ್ಟಬೇಕೆನ್ನುತ್ತಾರೆ." ಎಂದು ಹೇಳಿದನು.

ಪುಟ 164 ನೋಡಿ।

ಅಂದಿನಿಂದ ನಾಲ್ಕು ವರ್ಷದ ಬಾಲಕ ಷಾಸಿಕಂದರನು ಆದಿಲ್ ಷಾಹಿಯ ಸುಲ್ತಾನನಾದನು.

## ೧೪

ಷಾಸಿಕಂದರನಿಗೆ ಪಟ್ಟಾಭಿಷೇಕವಾದರೂ ದರಬಾರು ಸಮಾಧಾನದಿಂದ ಇರಲಿಲ್ಲ. ಶಾಂತವಾಗಿರಲಿಲ್ಲ. ಇದರಲ್ಲಿ ವಜೀರ ಮಸೂದನಿಗೆ ಇಷ್ಟಾನಿಷ್ಟ ಗಳೇನೂ ಇರಲಿಲ್ಲ. ರಾಜ್ಯದಲ್ಲಿ ಬಹುಮಂದಿ ಸೇನಾಧಿಪತಿಗಳಿದ್ದರು. ಆ ಕಾಲದಲ್ಲಿ ಸೇನಾಧಿಪತಿಗಳಿಗಿದ್ದ ವರ್ಚಸ್ಸು ಮತ್ತಾರಿಗೂ ಇರಲಿಲ್ಲ. ಅದು ಕಾಲ ಧರ್ಮ. ಒಂದು ಕಡೆ ಮೊಗಲ್ ಸಾಮ್ರಾಟನ ಕ್ರೂರದೃಷ್ಟಿ. ಮತ್ತೊಂದು ಕಡೆ ಶಿವಾಜೀ ಮಹಾರಾಜನ ಕುಟಿಲ ದೃಷ್ಟಿ. ಮಳೆಗಾಲವು ಸಮೀಪಿಸುತ್ತಿರುವಾಗ ಆಕಾಶದಲ್ಲಿ ಕಾರ್ಮೋಡಗಳು ಕವಿಯುವಂತೆ ಯುದ್ಧದ ಕರಾಳ ಚಿಹ್ನೆಗಳು ಉದಯವಾಗಿಯೇ ಇದ್ದುವು. ಸೇನಾಧಿಪತಿಗಳಲ್ಲಿ ಯಾರಿಗೂ ಸಮಾಧಾನಕರವಾಗಿರಲಿಲ್ಲ. ಕೆಲವರಿಗೆ ವಜೀರನ ಅಧಿಕಾರವು ಮುಂದುವರಿಯುವುದು ಇಷ್ಟಕರವಾಗಿರಲಿಲ್ಲ. ವಜೀರನೂ ಅನೇಕ ಯುದ್ಧ ಗಳಲ್ಲಿ ಜಯಗಳಿಸಿದ ಮಹಾಸೇನಾಧಿಪತಿ. ಅವನು ಸೇನಾಧಿಪತಿಗಳನ್ನು ಲೆಕ್ಕಿಸುತ್ತಿರಲಿಲ್ಲ. ಎಂಥಾ ಸಂದರ್ಭದಲ್ಲಿಯೂ ಯುದ್ಧದ ವಿಚಾರದಲ್ಲಿ ವಜೀರನ ಮಾತೇ ಆಖೈರು ಮಾತು. ಮತ್ತಾರ ಮಾತನ್ನೂ ಅವನು ಕಿವಿಗೆ ಹಾಕಿಕೊಳ್ಳುತ್ತಿರಲಿಲ್ಲ.

ಸೇನಾಧಿಪತಿಗಳಲ್ಲಿ ಅಫಜಲ್‌ಖಾನನು ಮಹೋನ್ನತ ಸ್ಥಾನವನ್ನು ಅಡರಿದ್ದನು. ಅದನ್ನು ಅಲ್ಲಗಳೆಯುವ ಸಾಹಸವು ಯಾರಿಗೂ ಇರಲಿಲ್ಲ. ಇಡೀ ಹಿಂದೂಸ್ಥಾನದಲ್ಲಿ ಅವನ ಹೆಸರು ವಿಖ್ಯಾತವಾಗಿತ್ತು. ಬಾದಷಹ ಔರಂಗಸೇಬನು ಕೂಡಾ ಅಫಜಲ್ ಖಾನನೆಂದರೆ ಅವನೊಬ್ಬ ರುಸ್ತುಂ ಸೇನಾಧಿಪತಿಯೆಂದು ಹೇಳುತ್ತಿದ್ದ. ಅಫಜಲ್‌ಖಾನನನ್ನು ಡೆಲ್ಲಿಯ ದರಬಾರಿಗೆ

ಸೇರಿಸಿಕೊಳ್ಳಬೇಕೆಂದು ಎಷ್ಟೋ ಸಂಧಾನಗಳು ನಡೆದಿದ್ದವು. ಆದರೆ ಅಫಜಲ್‌ಖಾನನು ಆ ಪ್ರಲೋಭಗಳಿಗೆ ವಶನಾಗಿರಲಿಲ್ಲ. ಡೆಲ್ಲಿಯ ದರಬಾರಿನಲ್ಲಿ ಎಂದೆಂದಿಗೂ ಅವನಿಗೆ ಅಗ್ರಸ್ಥಾನ ದೊರೆಯುವ ಸಂಭವವೇ ಇರಲಿಲ್ಲ. ದೊಡ್ಡ ದೊಡ್ಡ ರಾಜಪುತ್ರ ಸೇನಾಧಿಪತಿಗಳಿದ್ದಾರೆ. ಮೊಗಲ್ ಸೇನಾಧಿಪತಿಗಳಿದ್ದಾರೆ. ಸ್ವಯಂ ಬಾದಷಹನೇ ಯುದ್ಧ ಪ್ರವೀಣ. ಇಡೀ ಮೊಗಲ್ ಸಾಮ್ರಾಜ್ಯವನ್ನು ತೃಣವಾಗಿ ಭಾವಿಸಿ ಪಣತೊಟ್ಟು ಅಂತ್ಯದವರೆಗೆ ಹೋರಾಡುವ ಮಹಾವೀರ ಔರಂಗಸೇಬ್. ಅಫಜಲ್‌ಖಾನನು ಡೆಲ್ಲಿಯ ದರ್ಬಾರಿಗೆ ಹೋಗುವಾಗ ಆದರ ವಿಶ್ವಾಸಗಳು ದೊರೆತರೂ ಕ್ಷಿಪ್ರದಲ್ಲಿಯೇ ಮಲಿನವಾಗಿ ಹೋಗುವುದೆಂದೂ ತನ್ನ ಅಂತಸ್ತು ಇಳಿದು ತಾನು ಅನಾಮಧೇಯನಾಗಿ ಹೋಗುವೆನೆಂದೂ ಅವನಿಗೆ ಖಚಿತವಾಗಿ ತಿಳಿದಿತ್ತು. ಅವನ ಮನಸ್ಸು ಡೋಲಾಯಮಾನವಾಗಿತ್ತು. ವಜೀರ್ ಮಸೂದನು ಕಠಿಣವಾದ ಮನುಷ್ಯ. ಇನ್ನು ಮೇಲೆ ಅವನೇ ಸರ್ವಾಧಿಕಾರಿಯಾಗುತ್ತಾನೆ. ಅವನ ಮಾತನ್ನು ಕೇಳುವಂತೆಯೂ ಇಲ್ಲ. ಬಿಡುವಂತೆಯೂ ಇಲ್ಲ. ಜಾತಿಯಲ್ಲಿ ಅವನು ತನಗೆ ಸರಿಸಮಾನಸ್ಥನಲ್ಲ. ಬೇಗಂಸಾಹೇಬರು ಸುಲ್ತಾನಿಯಾಗಿದ್ದರೆ ಆ ಮಾತು ಬೇರೆ. ರಾಣಿಯೆಂದರೆ ಅವಳು ಸಾಮಾನ್ಯಳಲ್ಲ. ಬಹದ್ದೂರ್ ರಾಣಿ. ದೇವರು ಎಂಥಾ ರೂಪವನ್ನು ಅವಳಿಗೆ ಕರುಣಿಸಿದ್ದಾನೆಯೋ ಅಂಥಾ ಬುದ್ಧಿಯನ್ನೂ ಅನುಗ್ರಹಿಸಿದ್ದಾನೆ. ಬೇಗಂಸಾಹೇಬಳೇ ಸುಲ್ತಾನಿಯಾಗಬೇಕೆಂದು ದರ್ಬಾರಿನವರೆಲ್ಲರೂ ಏಕವಾಕ್ಯತೆಯಿಂದ ಒಪ್ಪಿದ್ದರು. ಈ ಮಂತ್ರವಾದಿ ಹುಚ್ಚು ಮನುಷ್ಯ ಬಂದು ಹೇಳಿಬಿಟ್ಟನು. ಅವನ ಮಾತು ಎಲ್ಲರಿಗೂ ಪಥ್ಯ. ಅವನು ರಾಜಕೀಯವನ್ನೇನು ಬಲ್ಲ? ನನ್ನ ಕೈಗೆ ಸಿಕ್ಕಿದ್ದನೆ ಗುಬ್ಬಚ್ಚಿಯನ್ನು ಹಿಸುಕಿಹಾಕಿದಂತೆ ಕೊಂದು ಮಣ್ಣಿನಲ್ಲಿ ಹೂತುಬಿಡುತ್ತಿದ್ದೆ. ಇರಲಿ, ಅವಸರಪಡಬಾರದು. ಸಮಯ ಬಂದಾಗ ಸಾಧಿಸಿಕೊಳ್ಳೋಣವೆಂದು ತನ್ನಷ್ಟಕ್ಕೆ ತಾನೇ ಸಮಾಧಾನಮಾಡಿಕೊಂಡ.

ಡೆಲ್ಲಿಯಿಂದ ದೂತರು ಬಂದು ಬೇಗಂ ಸಾಹೇಬಳ ಭೇಟಿ ಮಾಡಿದರು. ಬಾಲಕನಾದ ಸಿಕಂದರನನ್ನು ಸಿಂಹಾಸನಕ್ಕೆ ಏರಿಸಿದುದು ಡೆಲ್ಲಿಯ ಉನ್ನತಾಧಿಕಾರಿಗಳಿಗೆ ಅಷ್ಟೇನೂ ಸಮಾಧಾನಕರವಾಗಿಲ್ಲವೆಂದು ತಿಳಿಸಿದರು. "ಶಿವಾಜಿಯ ಪ್ರತಾಪವು ಹೆಚ್ಚುತ್ತಿದೆ. ಅವನು ಬಿಜಾಪುರದ ಸಾಮಂತ

ರಾಜನೆಂದು ಹೇಳಿಕೊಳ್ಳುತ್ತಾನೆ. ಆಗಾಗ ಮೊಗಲರಿಗೆ ತಿರುಗಿಬೀಳುತ್ತಾನೆ. ನಿಮ್ಮ ದರ್ಬಾರಿನ ಹೆಸರನ್ನು ಕೆಡಿಸುತ್ತಾನೆ" ಎಂದು ಹೇಳಿದರು.

ಬೇಗಂ ಸಾಹೇಬರಿಗೆ ಬಹುದಿನಗಳಿಂದ ಈ ಶಿವಾಜಿಯ ವಿಷಯ ತೊಡಕಾಗಿಯೇ ಇದ್ದಿತು. "ಅವನು ಅಂಥಾ ಪರಾಕ್ರಮಿಯೇನೂ ಅಲ್ಲ. ಕುಟಿಲೋಪಾಯದಿಂದ ಜೇದೂರುತ್ತಿದ್ದಾನೆ. ಇತ್ತ ಬಿಜಾಪುರ, ಅತ್ತ ಡೆಹಲಿ ಎರಡು ಕಡೆಗಳಿಗೂ ಜಗಳ ಗಂಟಿಕ್ಕುತ್ತಿದ್ದಾನೆ. ಇವನಿಗೆ ತಕ್ಕ ಶಾಸ್ತಿ ಮಾಡಬೇಕು" ಎಂದು ನಿರ್ಧಾರ ಮಾಡಿಕೊಂಡಳು.

ಒಂದೆರಡು ದಿನಗಳು ಚೆನ್ನಾಗಿ ಆಲೋಚನೆ ಮಾಡಿದಳು. ವಜೀರನನ್ನೂ ಸೇನಾಧಿಪತಿಗಳನ್ನೂ ಮಂತ್ರಿಗಳನ್ನೂ ಬರಬೇಕೆಂದು ಕರೆ ಕಳುಹಿಸಿದಳು. ಅಂತಃಪುರದ ರಂಗಮಹಲಿನಲ್ಲಿಯೇ ಈ ಮಂತ್ರಾಲೋಚನ ಸಭೆಯು ಸೇರಿತ್ತು. ವಿಶೇಷ ಆಹ್ವಾನದ ಮೇಲೆ ಷಾಜೀಯವರಿಗೂ ಆಮಂತ್ರಣ ಹೋಗಿತ್ತು. ಎಲ್ಲರೂ ಬಂದು ಮಂತ್ರಾಲೋಚನಾ ಸಭೆಯಲ್ಲಿ ಸೇರಿದರು. ಬೇಗಂ ಸಾಹೇಬಳು ಗಾಂಭೀರ್ಯದಿಂದ ಆ ಸಭೆಗೆ ಬಂದು ಆಸನವನ್ನು ಅಲಂಕರಿಸಿದಳು. ಅವಳು ಮಂತ್ರಿಗಳನ್ನೂ ಸೇನಾಧಿಪತಿಗಳನ್ನೂ ಉದ್ದೇಶಿಸಿ ಹೇಳಿದಳು.

"ಶಿವಾಜಿಯ ವಿಷಯ ನಿಮ್ಮೆಲ್ಲರಿಗೂ ತಿಳಿದಿದೆ. ಅವನು ಎಷ್ಟೇ ದೊಡ್ಡವನೆನಿಸಿಕೊಂಡರೂ ನಮ್ಮ ದರ್ಬಾರಿನ ಹುಡುಗ. ಈ ಷಾಜಿಯವರ ಮಗ. ಅವನು ಅತ್ತ ಮೊಗಲರಿಗೆ ಕಿರುಕುಳ ಕೊಡುತ್ತಾನೆ. ಇತ್ತ ನಮ್ಮನ್ನು ಅಲಕ್ಷ್ಯ ಮಾಡುತ್ತಾನೆ. ಇತ್ತೀಚೆಗೆ ಸಿಕಂದರ್ ಷಾರವರ ಪಟ್ಟಾಭಿಷೇಕಕ್ಕೆ ದೊಡ್ಡ ರಾಜರಿಗೆ ಕಳುಹಿಸುವಂತೆ ಆಹ್ವಾನ ಕಳಿಸಲ್ಪಟ್ಟಿತ್ತು. ಅವನು ಇಲ್ಲಿಗೆ ಬರಲೂ ಇಲ್ಲ. ಮರ್ಯಾದೆಗೆ ನಜರು ಖಿಲ್ಲತ್ತು ಕಳುಹಿಸಲೂ ಇಲ್ಲ. ನಾವು ಅದನ್ನು ಅಲಕ್ಷ್ಯ ಮಾಡಬಹುದು. ಆದರೆ ಅವನ ಉಪದ್ರವ, ಪಿತೂರಿಗಳು ಹೆಚ್ಚಾಗಿವೆ. ಇದರಿಂದ ಡೆಲ್ಲಿಯ ದರಬಾರಿಗೂ ನಮಗೂ ದ್ವೇಷವು ಹೆಚ್ಚುತ್ತದೆ. ಶಿವಾಜಿಯನ್ನು ಹಿಡಿತರಿಸಿ. ನಮಗೆ ಪೂರ್ಣ ಅಧೀನನಾಗುವಂತೆ, ಆಜ್ಞಾಧಾರಕನಾಗುವಂತೆ ಮಾಡಬೇಕು. ಇಲ್ಲದಿದ್ದರೆ ಬಂದೀಖಾನೆಯಲ್ಲಿಡಬೇಕು. ನೀವುಗಳು ಏನು ಹೇಳುತ್ತೀರಿ.

ಮೊದಲು ಮಂತ್ರಿಗಳು ಮಾತನಾಡಿದರು.

"ಬೇಗಂ ಸಾಹೇಬರವರ ಮಾತುಗಳು ನ್ಯಾಯವಾಗಿವೆ. ನಾವು ಶಿವಾಜಿಗೆ ಏನಾದರೂ ಬಂದೋಬಸ್ತು ಮಾಡಲೇಬೇಕು."

ಬೇಗಂ ಸಾಹೇಬಳು ಷಾಜಿಯವರ ಕಡೆಗೆ ತಿರುಗಿ "ಷಾಜಿಯವರೇ, ನೀವೇನು ಅಪ್ಪಣೆ ಕೊಡಿಸುವಿರಿ? ಇದಕ್ಕೇನಾದರೂ ಉಪಾಯವನ್ನು ಹೇಳಬಲ್ಲಿರಾ? ನಾವು ನಿಮ್ಮನ್ನೇ ಪುರಂದರಘಡಕ್ಕೆ ನಮ್ಮ ಕಡೆಯಿಂದ ಕಳುಹಿಸಿ ಕೊಡುತ್ತೇವೆ. ನೀವು ನಿಮ್ಮ ಮಗನಿಗೆ ಬುದ್ಧಿ ಹೇಳಿ ಉಪಾಯದಿಂದ ಬಂದೋ ಬಸ್ತು ಮಾಡಿದರೆ ಗದ್ದಲವಿಲ್ಲದೇ ಎಲ್ಲವೂ ಸರಿಹೋಗುತ್ತದೆ" ಎಂದು ಹೇಳಿದಳು.

ಷಾಜಿಯು ಎದ್ದು ನಿಂತು ಕೈಮುಗಿದು ಹೇಳಿದನು

"ಶಿವಾಜಿಯು ನನ್ನ ಮಗನೆಂದು ಹೇಳುವುದು ನಿಜ, ಆದರೆ ಅವನು ದುರುಳನಾದ ದುಷ್ಪುತ್ರ. ಅವನಿಂದ ನನಗೆ ಪದೇ ಪದೇ ಕಷ್ಟ ತಪ್ಪುವಂತಿಲ್ಲ. ಅವನ ಹುಚ್ಚಾಟಗಳಿಂದ ಈ ಭೂಮಿಯ ಮೇಲೆ ನನಗೆ ಇರುವುದಕ್ಕೇ ಸ್ಥಳ ವಿಲ್ಲ. ಈ ದರ್ಬಾರಿನಲ್ಲಿ ನಾನೆಷ್ಟೋ ಗೌರವ ಸಂಪಾದನೆ ಮಾಡಿದ್ದೇನೆ. ಅದೆಲ್ಲಾ ಮಣ್ಣುಪಾಲಾಯಿತು. ಅವನಲ್ಲಿಗೆ ನಾನು ಬಿಜಾಪುರದ ರಾಯಭಾರಿಯಾಗಿ ಹೋದರೆ ಅವನು ಎಂಥಾ ಖೂಳಕರ್ಮವನ್ನಾದರೂ ಮಾಡುವುದಕ್ಕೆ ಹೇಸುವವನಲ್ಲ. ಬಾದಷಹ ಷಹಜಹಾನನು ಕಾರಾಗೃಹವಾಸವನ್ನು ಅನುಭವಿಸುವಂತೆ ನನ್ನಗತಿಯಾದರೂ ಆಗಬಹುದು. ಅವನು ನನ್ನ ಮಗನೂ ಅಲ್ಲ. ನಾನು ಅವನ ತಂದೆಯೂ ಅಲ್ಲ. ಅವನು ದಾರಿಗೆ ಬರುವನೆಂಬ ಮಾತು ಸುಳ್ಳು. ಅವನನ್ನು ಹಿಡಿದು ತಂದು ಕಾರಾಗೃಹದಲ್ಲಿಡಬೇಕು. ಅಥವಾ ರಣಭೂಮಿಯಲ್ಲಿ ಕೊಂದುಹಾಕಬೇಕು. ಬೇರಾವ ಉಪಾಯವೂ ಇಲ್ಲ."

ಅಲ್ಲಿದ್ದವರನೇಕರು "ಸತ್ಯ–ಸತ್ಯ" ಎಂದು ನುಡಿದರು.

ಸೇನಾಧಿಪತಿಗಳು "ಯದ್ಧಮಾಡಲೇಬೇಕು. ಉಪಾಯಗಳೆಂದೂ ಫಲವಿಲ್ಲ" ಎಂದು ಹೇಳಿದರು.

ವೃದ್ಧಮಂತ್ರಿ ಅಕ್ಬರ್‌ಖಾನರು "ಅಯ್ಯೋ, ನಿಮಗೊಬ್ಬರಿಗೂ ಅರ್ಥವಾಗಿಲ್ಲ. ಅವನಲ್ಲಿಯೂ ಒಂದಿಷ್ಟು ಕಾಡು ಜನರ ಸೈನ್ಯವಿದೆ. ಯುದ್ಧ

ವೆಂದರೆ ಹೋರಾಟಕ್ಕೆ ನಲ್ಲುತ್ತಾನೆ. ಸೋತರೆ ಓಡಿಹೋಗಿ ಗುಡ್ಡ ಗಾಡ
ಗಳಲ್ಲಿ ಹುತೆಗಳಲ್ಲಿ ಅಡಗಿಕೊಳ್ಳುತ್ತಾನೆ. ಅಲ್ಲಿ ಅವನನ್ನು ಹುಡುಕಿ ಹಿ
ತರುವುದು ಸಾಧ್ಯವೇ ? ಅದೆಂದಿಗೂ ನಡೆಯದ ಮಾತು. ಉಪಾಯ
ದಿಂದಲೇ ವಶಪಡಿಸಿಕೊಳ್ಳಬೇಕು. ಇಲ್ಲವೇ ಮೊಗಲರೇ ಅವನ ಮೇ
ಬಿದ್ದು ಹೋರಾಡುವಂತೆ ಮಾಡಬೇಕು. ನಾವು ಯುದ್ಧಕ್ಕೆ ಹೋಗುವುದ
ವ್ಯರ್ಥ" ಎಂದು ಹೇಳಿದನು.

ಆದರೆ ಯುದ್ಧ ಮಾಡಬೇಕು ಎಂಬ ವೀರವಾದಗಳೇ ಹೆಚ್ಚಾದವು
ಒಬ್ಬರಿಗೊಬ್ಬರು ಮಾತು ಬೆಳೆದು ಘರ್ಷಣೆಗಳಾದುವು. ಅನೇಕರು ಮುಖ
ಕಪ್ಪುಮಾಡಿಕೊಂಡರು.

ವಜೀರನು ಎಲ್ಲರನ್ನೂ ಸಮಾಧಾನಪಡಿಸಿ ಹೇಳಿದನು.

"ಷಾಜಿಯವರ ಮಾತು ಯುಕ್ತವಾಗಿದೆ. ಉಪಾಯಕ್ಕೇ ಮಾರ್ಗವೇ
ಇಲ್ಲ, ಯುದ್ಧಕ್ಕೆ ಹೋಗಲೇಬೇಕು. ಅದು ನಿರ್ಧಾರವಾದ ಮಾತು."
ಎಂದು ಹೇಳಿದನು.

ಯಾರು ಯುದ್ಧಕ್ಕೆ ಹೋಗಬೇಕು, ಯಾವ ಸೇನಾಧಿಪತಿಗಳ
ಯುದ್ಧಕ್ಕೆ ಹೋಗಬೇಕು ?–ಎಂಬ ಮಾತು ಎದ್ದಿತು. ಎಲ್ಲರೂ ಅಫಜಲ್
ಖಾನನ ಕಡೆಗೆ ನೋಡಿದರು. ಖಾನನು ತಲೆತಗ್ಗಿಸಿಕೊಂಡು ಮೌನವಾಗಿ
ಕುಳಿತಿದ್ದ.

ವೃದ್ಧಮಂತ್ರಿ ಅಕ್ಬರ್ ಖಾನನು "ಏನು, ಸೇನಾಧಿಪತಿ ಅಫಜಲ್
ಖಾನರು ಮಾತನಾಡುವುದಿಲ್ಲವೇಕೆ ? ನೀವು ಮೌನವಾಗಿ ಕುಳಿತರೆ ನಮ್ಮ
ದರ್ಬಾರೇ ತಲೆತಗ್ಗಿಸಬೇಕಾಗುತ್ತದೆ" ಎಂದು ಹೇಳಿದ.

ಅಫಜಲ್ ಖಾನನು "ಈ ಬಾರಿ ಮತ್ತಾದರಾರೂ ಈ ಯುದ್ಧದ
ಹೊಣೆಯನ್ನು ಹೊತ್ತು ಸಾಧಿಸಿದರೆ ಒಳಿತಾದೀತು. ನನ್ನ ಮನಸ್ಸಿಗೆ
ಬೇಸರವಾಗಿದೆ. ಯುದ್ಧಕ್ಕೆ ಹೋಗಲು ನನಗೆ ಮನಸ್ಸಿಲ್ಲ. ಈ ಯುದ್ಧದ
ಪರ್ಯವಸಾನವೂ ಅಷ್ಟರಲ್ಲಿಯೇ ಇದೆ. ಡೆಲ್ಲಿಯ ಬಾದಷಹನಿಗೆ ಅವಮಾ
ಧಾನವಾಗುತ್ತದೆಂದು ನಾವು ಶಿವಾಜಿಯ ಮೇಲೆ ಯುದ್ಧ ಮಾಡಬೇಕೆನ್ನು
ತ್ತೀರಿ. ಡೆಲ್ಲಿಯ ಬಾದಷಹರ ವಿರೋಧವು ನಮಗೆ ಎಂದೆಂದಿಗೂ ತಪ್ಪಿದ್ದ
ಅಲ್ಲ. ಆದಿಲ್‌ಷಾಹಿಯ ಸ್ವಾತಂತ್ರ್ಯವನ್ನು ಹಾಳುಮಾಡಬೇಕೆಂದು ಮೊಗ

ಲರು ಪಣ ತೊಟ್ಟಿದ್ದಾರೆ. ಔರಂಗಸೇಬ್ ಬಾದಷಹನು ತೊಟ್ಟ ಹಠವನ್ನು ಬಿಡುವವನೂ ಅಲ್ಲ. ಒಂದು ಬಾರಿ ಬಂದು ನಮ್ಮ ಕೋಟೆಯ ಮೇಲೆ ಪ್ರಚಂಡ ಮುತ್ತಿಗೆಯನ್ನು ಹಾಕಿದ್ದ. ಏಳೆಂಟು ತಿಂಗಳ ಮುತ್ತಿಗೆ. ಆ ಆಪತ್ತನ್ನು ದೇವರು ಪಾರು ಮಾಡಿದ. ಡೆಲ್ಲಿಯಲ್ಲಿ ಸಾಮ್ರಾಟ್ ಷಹಜಹಾನನು ಅಂತ್ಯಾವಸ್ಥೆಯಲ್ಲಿದ್ದಾನೆಂದು ವಾರ್ತೆ ಬಂದಿತು. ಔರಂಗಸೇಬ್ ಬಾದಷಹನು ಸಿಂಹಾಸನವು ತನ್ನ ಕೈತಪ್ಪಿ ಹೋಗುತ್ತದೆಂದು ಹೆದರಿ ಡೆಲ್ಲಿಗೆ ಓಡಿಹೋದ. ಸಿಂಹಾಸನವೇನೋ ಅವನಿಗೇ ಸಿಕ್ಕಿತು. ಡೆಲ್ಲಿಯಲ್ಲಿ ಇನ್ನೂ ತೊಂದರೆಗಳು ತಪ್ಪಿಲ್ಲ. ಅಲ್ಲಿ ಬಿಡುವಾದರೆ ಔರಂಗಸೇಬ ಬಾದಷಹನು ಇಲ್ಲಿಗೆ ಹಾರಿಬರುತ್ತಾನೆ. ಅವನ ಕಣ್ಣು ಬಿಜಾಪುರದ ಮೇಲೆಯೇ ಇದೆ. ಆದಕ್ಕೆ ನಾವು ಸಿದ್ಧರಾಗಿರಬೇಕು. ಈ ಮಧ್ಯೆ ಶಿವಾಜಿಯೊಡನೆ ನಾವಾಗಿ ಹೋಗಿ ಯುದ್ಧ ಮಾಡಲೇಕೆ ? ಶಿವಾಜಿಯನ್ನು ಪೂರ್ಣಿಯಾಗಿ ನಮ್ಮ ಕಡೆಗೆ ಸೇರಿಕೊಳ್ಳಬೇಕು ಡೆಲ್ಲಿಯ ಬಾದಷಹನೊಡನೆ ನಾವು ಯುದ್ಧ ಮಾಡುವುದಾದರೆ, ಶಿವಾಜಿಯು ನಮ್ಮ ಕಡೆಗಿದ್ದರೆ, ನಮ್ಮ ಸೈನ್ಯ ಬಲ-ಜನಬಲಗಳು ಅಜೇಯುವಾಗುತ್ತವೆ. ನಮ್ಮ ಸುಲ್ತಾನನು ಬಾಲಕ. ಅವನ ಹೆಸರಿನಲ್ಲಿ ಜಗಳವೇಕೆ ? ಬಾದಷನೊಡನೆ ಯುದ್ಧವೇಕೆ ? ಎಂಬ ಮನೋಭಾವನೆಯಿಂದ ಆದಿಲ್‌ಷಾಹಿಯನ್ನು ಮೊಗಲರ ಪಾದಕ್ರಾಂತ ಮಾಡುವುದಾದರೆ ಆಗಲೂ ಶಿವಾಜಿಯೊಡನೆ ಯುದ್ಧವು ವ್ಯರ್ಥ. ನನಗೆ ಈ ಆದಿಲ್‌ಷಾಹಿಯು ಡೆಲ್ಲಿಯ ಬಾದಷಹನೊಡನೆ ಹೋರಾಡುವುದಿಲ್ಲ, ಶರಣಾಗತವಾಗುತ್ತದೆ ಎಂದು ಮನಸ್ಸಿಗೆ ತೋರಿಹೋಗಿದೆ ಅಂಥಾ ಸಂದರ್ಭವು ಕ್ಷಿಪ್ರದಲ್ಲಿಯೇ ಒದಗಬಹುದು. ಆದುದರಿಂದ ಈಗ ನಾನು ಯುದ್ಧಕ್ಕೆ ಸಿದ್ಧವಿಲ್ಲ" ಎಂದು ಹೇಳಿದ.

ವಜೀರನು "ಶಿವಾಜಿಯೊಡನೆ ಸಂಧಿ ಮಾಡಿಕೊಳ್ಳುವುದೆಂಬುದು ಮಾರಿಯನ್ನು ಮನೆಗೆ ಕರೆತಂದಂತೆಯೇ ಸರಿ. ಅದು ಅಸಾಧ್ಯ ಮತ್ತು ಅಸಂಭವ. ಅವನು ಯಾವ ಮಾತಿಗೂ ಕಟ್ಟುಬೀಳುವವನಲ್ಲ. ಅಫಜಲ್‌ಖಾನರು ದೊಡ್ಡ ಸೇನಾಧಿಪತಿಗಳು. ಅವರು ಎಂಥಾ ಸಂಧರ್ಭದಲ್ಲಿಯೂ ಯಾರೊಡನೆಯೂ ಸಂಧಿಯ ಮಾತನ್ನೇ ಎತ್ತಿದವರಲ್ಲ. ಇಂದು ಅವರ ಬಾಯಿಯಲ್ಲಿಯೇ ಸಂಧಿಯ ಮಾತು ಹೊರಟಿರುವುದು ಆಶ್ಚರ್ಯವಾಗಿದೆ. ಶಿವಾಜಿಯೊಡನೆ ಯುದ್ಧ ಮಾಡಿ ಅವನನ್ನು ಮುರಿದುಹಾಕಬೇಕೆಂಬುದು ನಮ್ಮ ದರ್ಬಾರಿನಲ್ಲಿ

ತೀರ್ಮಾನವಾಗಿರುವ ಸಂಗತಿ. ಪರಲೋಕವನ್ನೈದಿದ ಸುಲ್ತಾನರವರೂ ಹಾಗೆಯೇ ಹೇಳುತ್ತಿದ್ದರು. ಡೆಲ್ಲಿಯ ಬಾದಷಹರ ಪ್ರೀತ್ಯರ್ಥವಾಗಲ್ಲ; ನಮ್ಮ ದರ್ಬಾರಿನ ಗೌರವ ಮನ್ನಣೆಗಳನ್ನು ಉಳಿಸಿಕೊಳ್ಳುವುದಕ್ಕಾಗಿಯೇ ನಾವು ಶಿವಾಜಿಯೊಡನೆ ಯುದ್ಧ ಮಾಡಬೇಕಾಗಿದೆ. ಗಡಿನಾಡಿನ ಒಂಬತ್ತು ಕೋಟೆಗಳನ್ನು ಶಿವಾಜಿಯು ಆಕ್ರಮಿಸಿಕೊಂಡಿದ್ದಾನೆ. ಅವನೇ ಮಹಾರಾಜನೆಂದು ಕರೆಸಿಕೊಳ್ಳುತ್ತಾನೆ. ಹೀಗಿರುವಾಗ ಅವನೊಡನೆ ಯುದ್ಧ ಮಾಡಿ, ನಮ್ಮ ಕೋಟೆಗಳನ್ನು ವಶಪಡಿಸಿಕೊಂಡು, ಗಡಿಯನ್ನು ಭದ್ರಪಡಿಸಿಕೊಂಡಲ್ಲದೇ ಬಿಜಾಪುರಕ್ಕೆ ಕ್ಷೇಮವಿಲ್ಲ. ನಮ್ಮ ಪೂರ್ವಿಕರಾದ ಆದಿಲ್ ಷಾಹರವರು ಅದನ್ನು ಅರಿತುಕೊಂಡೇ ಆ ಗಿರಿದುರ್ಗಗಳನ್ನು ನಮ್ಮ ರಾಜ್ಯದ ಗಡಿಗಳಾಗಿ ಮಾಡಿಟ್ಟಿದ್ದರು. ಆ ಕಾಲದಲ್ಲಿ ಅಲ್ಲಿಂದ ದಕ್ಕನ್ನಿಗೆ ಬರಲು ಮೊಗಲರು ಹೆದರುತ್ತಿದ್ದರು. ಅಹಮದ್ ನಗರವು ಮೊಗಲರ ವಶವಾದರೂ ನಮ್ಮ ಆದಿಲ್ ಷಾಹಿಯು ಸ್ವತಂತ್ರವಾಗಿ ಉಳಿದುಕೊಂಡಿದ್ದು ಆ ಗಡಿದುರ್ಗಗಳ ಬಲದಿಂದಲೇ. ಅವು ನಮ್ಮ ದುರ್ಗಗಳು ನಾವು ವಶಪಡಿಸಿಕೊಳ್ಳಲೇಬೇಕು." ಎಂದು ಹೇಳಿದ.

ಅಫಜಲ್ ಖಾನನು "ವಜೀರರವರು ಹೇಳುವುದೇ ಸಿದ್ಧಾಂತವಾಗಿದ್ದರೆ ಅವರೇ ಶಿವಾಜಿಯೊಡನೆ ಯುದ್ಧಕ್ಕೆ ಹೋರಾಡುವುದಕ್ಕೆ ಅಡ್ಡಿಯೇನಿದೆ? ಅವರು ಅನೇಕ ಯುದ್ಧಗಳಲ್ಲ ಜಯಗಳಿಸಿರುವ ವೀರ ಸೇನಾಧಿಪತಿಗಳೂ ಆಗಿದ್ದಾರೆ. ಶಿವಾಜಿಯನ್ನು ಗದ್ದ ಖ್ಯಾತಿಯೂ ಅವರಿಗೇ ಬರಲಿ" ಎಂದು ಹೇಳಿದ.

ದರ್ಬಾರಿನಲ್ಲಿ ಮತ್ತಾರೂ ಮಾತನಾಡಲಿಲ್ಲ. ಬೇಗಂ ಸಾಹೇಬಳು ಎಲ್ಲರ ಮುಖವನ್ನೂ ನೋಡಿದಳು. ಯಾರ ಬಾಯಿಯಲ್ಲಿಯೂ ಮಾತು ಹೊರಡಲಿಲ್ಲ.

ಬೇಗಂ ಸಾಹೇಬಳು ಹೇಳಿದಳು.

"ದೊಡ್ಡ ಸುಲ್ತಾನರವರು ಪರಲೋಕವನ್ನೈದಿ ಈ ಚಿಕ್ಕ ಸುಲ್ತಾನ ಸಿಕಂದರ್ ಷಾವಿಗೆ ಪಟ್ಟವಾಗುವ ಮುನ್ನವೇ ಪ್ರತಿಯೊಬ್ಬರನ್ನೂ ಪ್ರಾರ್ಥಿಸಿಕೊಂಡಿದ್ದೇನೆ. ನೀವೆಲ್ಲರೂ ನನ್ನ ಮಾತಿನಂತೆ ನಡೆಯುವುದಾಗಿ ಭಾಷೆ ಕೊಟ್ಟಿದ್ದೀರಿ. ಇಂಥಾ ರಾಜಕೀಯದ ಬಿಕ್ಕಟ್ಟಿನ ಸಂದರ್ಭಗಳಲ್ಲಿ ಯಾರ

ದಾದರೂ ಒಬ್ಬರ ಮಾತು ಆಖೈರು ಶೀರ್ವಾನವಾಗಿರಬೇಕು. ಇಲ್ಲದಿದ್ದರೆ ರಾಜ್ಯಭಾರವು ಸುಸೂತ್ರವಾಗಿ ನಡೆಯುವುದೇ ಇಲ್ಲ. ನಾನು ಯಾರಿಗೂ ಆಜ್ಞೆ ಮಾಡುವಷ್ಟು ಸಮರ್ಥಳಲ್ಲ. ಈ ಸಂದರ್ಭದಲ್ಲಿ ಈ ಯುದ್ಧಕ್ಕೆ ಮುಖ್ಯ ಸೇನಾಧಿಪತಿಗಳಾಗಿ ಅಫಜಲ್ ಖಾನರವರೇಹೋಗಬೇಕೆಂದುನಾನು ಪ್ರಾರ್ಥನೆ ಮಾಡುತ್ತೇನೆ. ಅಫಜಲ್‌ಖಾನರೇ, ನೀವು ನನ್ನ ಮಾತನ್ನು ನಿರಾಕರಿಸು ವಿರಾ ? ಹೇಳಿರಿ."

ಅಫಜಲ್ ಖಾನನು ಬೇಗಂ ಸಾಹೇಬಳ ಕಡೆಗೆ ದುರುಗುಟ್ಟಿ ನೋಡಿದ ಷಾಜಿಯವರ ಮನಸ್ಸಿನಲ್ಲಿ ಅಫಜಲ್‌ಖಾನನು ಬೇಗಂ ಸಾಹೇಬಳಿಗೆ ತಿರುಗಿ ಬೀಳುತ್ತಾನೆಂದು ತೋರಿತು.

ಷಾಜಿಯವರು "ಸೇನಾಧಿಪತಿ ಅಫಜಲ್ ಖಾ, ನಾನೊಂದು ಮಾತು ಹೇಳುತ್ತೇನೆ. ಬೇಗಂ ಸಾಹೇಬರವರಿಗೆ ಉತ್ತರ ಕೊಡುವ ಮೊದಲು ನನ್ನ ಮಾತುಗಳನ್ನು ಕೇಳಿ, ಉತ್ತರ ಕೊಡು. ನೀನು ಈ ದರ್ಬಾರಿಗೆ ಬಂದಾಗ ನಿನ್ನಲ್ಲಿ ಇಂಥಾ ಮಹಾಶಕ್ತಿ ಇದೆಯೆಂದು ಕಂಡುಕೊಂಡವನು ನಾನು ಸುಲ್ತಾನರಲ್ಲ. ಇದಕ್ಕೆ ವೃದ್ಧ ಮಂತ್ರಿ ಅಕ್ಬರ್‌ಖಾರವರೂ ಸಾಕ್ಷಿ ಇದ್ದಾರೆ. ನಿನ್ನ ಪರಾಕ್ರಮದಿಂದ, ನಿನ್ನ ಸ್ವಾಮಿನಿಷ್ಠೆಯಿಂದ ನೀನಿಷ್ಟು ಉನ್ನತ ಪದವಿಗೆ ಬಂದಿರುವೆ. ನನ್ನ ಅಧಿಕಾರಕ್ಕಿಂತಲೂ ಇಂದು ನಿನ್ನ ಸ್ಥಾನಮಾನಗಳು ಮೇಲಿನವೆಂದೇ ಹೇಳುವಂತಿದೆ. ಅಂದು ನೀನು ನನ್ನಲ್ಲಿ "ನೀವು ನನ್ನ ತಂದೆಗೆ ಸಮಾನರು. ನಾನು ನಿಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗನಲ್ಲದಿದ್ದರೂ ಪಾಲಿತ ಪುತ್ರ, ಸ್ವೀಕೃತ ಪುತ್ರ" ಎಂದು ಹೇಳುತ್ತಿದ್ದುದು ನೀನು ಮರೆತುಬಿಟ್ಟೆಯಾ? ಅಫ್‌ಘನ್‌ರ ವಂಶದಲ್ಲಿ ಹುಟ್ಟಿರುವ ತಾಜಾಮುಸಲ್ಮಾನನಾದ ನೀನು ಹಿಂದಿನ ಉಪಕಾರವನ್ನೂ ಅಂದಿನ ಮಾತುಗಳನ್ನೂ ಮರೆಯುವವನಲ್ಲವೆಂದು ನಾನು ದೃಢವಾಗಿ ನಂಬಿದ್ದೇನೆ. ಈ ಪ್ರಕರಣದಲ್ಲಿ ಹೆಚ್ಚು ಜವಾಬ್ದಾರಿಯು ನನ್ನ ಮೇಲಿದೆ. ನನ್ನ ಹೊಟ್ಟೆಯಲ್ಲಿ ಹುಟ್ಟಿದ ದುಷ್ಟನಾದ ಮಗನಿಂದ ಪ್ರಖ್ಯಾತ ವಾದ ಆದಿಲ್‌ಷಾಹೀಗೆ ಆತಂಕ ಉಂಟಾಗಿದೆ. ನಾನೇ ಸ್ವತಃ ಯುದ್ಧಕ್ಕೆ ಹೋಗಬೇಕು. ಈ ಭಾರತ ಭೂಮಿಯಲ್ಲಿ ಹಿಂದೂ ಜನರಲ್ಲಿ ತಂದೆ ಮಗನ ಮೇಲೆ ಯುದ್ಧಮಾಡುವುದು ಹೀನಾಯವಾದ ಮಾತು. ಅಥವಾ ಆತ್ಮಹತ್ಯೆ

ಮಾಡಿಕೊಳ್ಳುವುದು ನನ್ನಂಥವನಿಗೆ ಸರಿಯಾದುದಲ್ಲ. ಆದುದರಿಂದ ನನ್ನ ಶಿಷ್ಯನನ್ನು ಕಳುಹಿಸಿ ಆ ದುಷ್ಟನನ್ನು ಶಿಕ್ಷಿಸುವುದು ನ್ಯಾಯ ಸಮ್ಮತವಾಗಿದೆ. ಈ ಯುದ್ಧಕ್ಕೆ ನೀನೇ ಹೊರಡತಕ್ಕದ್ದು. ಬೇಗಂ ಸಾಹೇಬರ ಅಪ್ಪಣೆಯನ್ನು ಯಾರೂ ಮೀರತಕ್ಕದ್ದಲ್ಲ. ಶಿವಾಜಿಯೊಡನೆ ಸಂಧಿಯನ್ನು ಮಾಡಬೇಕಾದರೂ ನಿಗ್ರಹಮಾಡಬೇಕಾದರೂ ಈ ದರ್ಬಾರಿನಿಂದ ನಿನಗೆ ಸಂಪೂರ್ಣ ಅಧಿಕಾರವು ಕೊಡಲ್ಪಡುತ್ತದೆ. ನೀನು ಇದನ್ನು ಒಪ್ಪಿಕೊಳ್ಳಲೇಬೇಕು" ಎಂದು ಹೇಳಿದ.

ಅಫಜಲ್ ಖಾನನು ಮತ್ತೊಮ್ಮೆ ಬೇಗಂ ಸಾಹೇಬಳನ್ನು ದುರುಗುಟ್ಟಿ ನೋಡಿದ.

"ಬೇಗಂ ಸಾಹೇಬ್! ಈಗ ಸುಲ್ತಾನೀ ಅಧಿಕಾರವು ತಮ್ಮದೇ ಇದೆ. ನೀವು ಈ ಯುದ್ಧಕ್ಕೆ ಹೊರಡಲು ನನಗೆ ಆಜ್ಞೆ ಮಾಡುತ್ತಿದ್ದೀರಿ. ಹಾಜಿಯವರೇ' ನಾನು ತಮ್ಮಲ್ಲಿಟ್ಟ ಭಕ್ತಿಯನ್ನು ಅಂದಿನಿಂದ ಇಂದಿನವರೆಗೆ ನಡೆಸಿಕೊಂಡೇ ಬಂದಿದ್ದೇನೆ. ಅದಕ್ಕೆ ಅನೇಕ ನಿದರ್ಶನಗಳಿವೆ. ಈಗ ನಾನು ಆತ್ಮ ಸಾಕ್ಷಿಯಾಗಿ ಹೇಳುತ್ತೇನೆ. ಈ ದರ್ಬಾರಿನವರೆಲ್ಲರೂ ಪಿತೂರಿಮಾಡಿ ನಿಷ್ಕಾರಣವಾಗಿ ಇದೇ ಶಿವಾಜಿಯ ನೆಪದಿಂದ ನಿಮ್ಮನ್ನು ಕಠಿಣ ಬಂಧನದಲ್ಲಿಟ್ಟಾಗ ನಾನು ಅತ್ಯಂತ ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದೆ. ಆಗಿನ ಸಂದರ್ಭದಲ್ಲಿ ಈ ದರ್ಬಾರಿನವರು ನಿಮ್ಮನ್ನು ಅಂತರಂಗವಾಗಿಯೋ ಬಹಿರಂಗವಾಗಿಯೋ ಕೊಲೆ ಮಾಡಬೇಕೆಂದು ಸಿದ್ಧಪಡಿಸಿಕೊಂಡಿದ್ದರು. ನನ್ನ ಪ್ರತಿರೋಧದಿಂದಲೇ ಅವರುಗಳ ಕೈ ಕಟ್ಟಿದಂತಾಯಿತು. ಅಷ್ಟೇ ಅಲ್ಲ. ನಾನು ಬದುಕಿರುವವರೆಗೆ ನಿಮ್ಮಲ್ಲಿಟ್ಟಿರುವ ಭಕ್ತಿ ಗೌರವಗಳಿಗೆ ಎಳ್ಳಷ್ಟೂ ಕುಂದಿಲ್ಲ. ಇಂಥಾ ಶಿಷ್ಯನಿಗೆ ನೀವು ಕೊಟ್ಟಿರುವ ವರಪ್ರದಾನವಿದು. ಬೇಗಂ ಸಾಹೇಬರವರು ಮಾಡಿರುವ ಅನುಗ್ರಹವಿದು ಮನಸ್ಸೊಪ್ಪದ ಕಾರ್ಯಕ್ಕೆ ತಳ್ಳುತ್ತಿದ್ದೀರಿ. ಒಂದು ಕಡೆ ಈ ತಂದೆಯ ಆಶೀರ್ವಾದಕ್ಕೆ ತಲೆಯೊಡ್ಡಬೇಕು ಮತ್ತೊಂದುಕಡೆ ಆ ಮಗನೊಡನೆ ಖಡಾಖಡಿ ಯುದ್ಧ ಮಾಡಬೇಕು. ಇದು ನನ್ನ ಪಾಲಿಗೆ ಬಂದಿರುವ ಭಾಗ್ಯ. ನೀವೆಲ್ಲರೂ ಚೆನ್ನಾಗಿ ಯೋಚನೆ ಮಾಡಿರಿ. ನಿಮ್ಮಗಳ ಆಜ್ಞೆಯನ್ನು ನಾನು ಶಿರಸಾ ವಹಿಸುತ್ತೇನೆ" ಎಂದು ಹೇಳಿ ಕೈ ಮುಗಿದು ದರ್ಬಾರಿನಿಂದ ಹೊರಟುಹೋದ.

ದರ್ಬಾರೆಲ್ಲವೂ ಕಾಂತಿಹೀನವಾಯಿತು. ಎಲ್ಲರೂ ಮುಖಗಳನ್ನು ತಗ್ಗಿ ಸಿದರು. ಪುನಃ ಎಲ್ಲರೂ ಬೇಗಂ ಸಾಹೇಬಳ ಕಡೆಗೆ ನೋಡಿದರು.

ಬೇಗಂ ಸಾಹೇಬಳು ವಿನಯದಿಂದ ಹೇಳಿದಳು.

"ಇಂದಿನ ದರ್ಬಾರು ಮುಕ್ತಾಯವಾಯಿತು. ಅಫಜಲ್ ಖಾನರೇ ಶಿವಾಜಿಯು ಮೇಲೆ ಯುದ್ಧಕ್ಕೆ ಹೊರಡತಕ್ಕದೆಂದು ನಿರ್ಧಾರವಾಯಿತು. ದರ್ಬಾರಿನ ಆಜ್ಞೆಯನ್ನು ಅಫಜಲ್ ಖಾನರು ಪಾಲಿಸುತ್ತಾರೆಂದು ನನಗೆ ಭರವಸೆಯಿದೆ ಯುದ್ಧದ ಸಿದ್ಧತೆಗಳಾಗಲಿ"

ದರ್ಬಾರಿಗಳೆಲ್ಲರೂ "ಬೇಗಂ ಸಾಹೇಬಳು ನಿಜವಾಗಿಯೂ ಸಮರ್ಥಳು ಅವಳು ಗಂಡಾಗಿ ಹುಟ್ಟಿದ್ದರೆ ಇಡೀ ಹಿಂದೂಸ್ಥಾನವನ್ನು ಕಟ್ಟಿ ಆಳುತ್ತಿದ್ದಳು. ಅಂತಹ ಪ್ರಜ್ಞಾಬಲ–ಆಜ್ಞಾ ಶಕ್ತಿಗಳು ಅವಳಲ್ಲಿವೆ" ಎಂದು ಪ್ರಶಂಸೆ ಮಾಡಿ ಕೊಂಡು ಹೊರಟುಹೋದರು.

ಅಫಜಲ್ ಖಾನನು ಮನೆಗೆ ಹೋಗಿ ಏಕಾಂತದಲ್ಲಿ ಕುಳಿತು ಚಿಂತಾ ಸಕ್ತನಾದ. "ಈ ಯುದ್ಧದಲ್ಲಿ ನನಗೇಕೋ ಉತ್ಸಾಹವಿಲ್ಲ. ಉತ್ಸಾಹ ವಿಲ್ಲದ ಯುದ್ಧಕ್ಕೆ ಹೋಗಬಾರದೆಂದು ಹಿಂದಿನವರು ಹೇಳುತ್ತಿದ್ದರು. ಇಂದು ಅಂಥಾ ಪ್ರಸಂಗವು ನನ್ನ ಮೇಲೆ ಬಂದಿದೆ. ಬೇಗಂ ಸಾಹೇಬಳ ಮಾತನ್ನು ನಾನು ತಿರಸ್ಕರಿಸುತ್ತಿದ್ದೆ. ಕಟ್ಟಕಡೆಯ ಕಾಲವು ಬಂದಿದ್ದರೆ ಈ ರಾಜ್ಯ ವನ್ನಾದರೂ ಬಿಟ್ಟು ಹೋಗುತ್ತಿದ್ದೆ. ಅವಳ ಮಾತಿಗೆ ನಾನೇಕೆ ಬಗ್ಗಬೇಕು? ನಾನು ಅವಳ ಅಧೀನನೆಂದೂ ಇಲ್ಲ. ನಾನೆಂದಿಗೂ ಅವಳ ಅಧಿಕಾರವನ್ನು ಒಪ್ಪಿಕೊಳ್ಳುವುದಿಲ್ಲ. ಅವಳು ಮೂರ್ಖ ಹೆಂಗಸು. ಹಠವಾದಿ. ನನ್ನನ್ನು ಪ್ರೇಮ ಮಾಡುತ್ತಾಳೆಂದು ಅವಳಿಗೆ ಬಗ್ಗಬೇಕೋ? ಸ್ತ್ರೀ ವ್ಯಾಮೋಹದಲ್ಲಿ ಸಿಲುಕಿಕೊಂಡು ಕುಗ್ಗಿಹೋಗುವ ಪ್ರಾಣಿಯು ನಾನಲ್ಲ. ನನ್ನ ಜನಾನಾದಲ್ಲಿ ಅರವತ್ತುನಾಲ್ಕು ಅಂತಃಪುರ ಸ್ತ್ರೀಯರಿದ್ದಾರೆ. ಬೇಗಂ ಸಾಹೇಬಳಿಗಿಂತಲೂ ಮಿಗಿಲಾದ ಹೆಣ್ಣುಗಳು ನನ್ನ ಅಂತಃಪುರದಲ್ಲಿದ್ದಾರೆ. ಅವಳು ನನ್ನನ್ನು ಪ್ರೀತಿ ಸುವುದು ಅವಳ ಆನಂದಕ್ಕಾಗಿ. ಅದನ್ನು ನಾನು ಎಷ್ಟೋ ದಿನಗಳಿಂದ ಅರಿತಿದ್ದೇನೆ. ಈ ಷಾಜೀ ಮುದುಕ. ಇವನಿಗೇಕೆ ಈ ಹವ್ಯಾಸ? ಅವನು ಉದಾರಿ. ಮಹಾಪುರುಷನೆಂದೇ ಹೇಳಬೇಕು. ಅವನಿಗೆ ಈ ದರ್ಬಾರಿನ

ಗೊಂದಲಗಳೊಂದೂ ತಿಳಿದಿಲ್ಲ. ಈ ದರ್ಬಾರಿನಲ್ಲಿ ಅವನಿಗಿರುವ ಬಲವೇ ಸಣ್ಣದು. ಈ ಕೃತ್ರಿಮ ಜನ ಅವನನ್ನು ಎಂದಾದರೂ ಘಾತಿಸದೇ ಬಿಡರು. ಅವನೇಕೆ ಇವರ ಮಾತಿಗೆ ತಾಳ ಹಾಕುತ್ತಾನೆ? ಇದೆಲ್ಲಾ ಏನೋ ಸೈತಾನನ ಲೀಲೆ. ಇನ್ನು ಈ ರಾಜ್ಯವು ತಲೆ ಎತ್ತುವುದೆಂದರೇನು? ಹುಡುಗ ರಾಜ. ಯಾವುದೋ ದೇಶದ ಒರಟ, ಬುದ್ಧಿಹೀನ ವಜೀರ. ಮುಂದಾಲೋಚನೆಯಿಲ್ಲದ ಮಂತ್ರಿಗಳು. ಅತ್ತ ನೋಡಿದರೆ ಅತ್ಯಂತ ಪ್ರಬಲಶಾಲಿಯಾದ ಬಾದಷಹನು ಶತ್ರು. ಈ ರಾಜ್ಯಕ್ಕಾಗಿ ಯುದ್ಧ ಮಾಡಿದರೆ ಖ್ಯಾತಿಯುಂಟೆ? ಪರಾಕ್ರಮಕ್ಕೆ ಬೆಲೆಯುಂಟೆ? ಛೀ ಛೀ, ಇವೆಲ್ಲವೂ ವ್ಯತಿರೇಕವಾಗಿಯೇ ಇದೆ" ಎಂದುಕೊಂಡನು ಪುನಃ ಅದೇ ಚಿಂತೆ. "ಈಗ ನಾನೇನು ಮಾಡಲಿ ?" ಎಂಬ ಚಿಂತೆ.

ಅಷ್ಟರಲ್ಲಿ ಜಮಾದಾರ್ ಇಮಾಮನು ಹೆದರುತ್ತಾ ಹೆದರುತ್ತಾ ಬಂದು ಸಲಾಂ ಮಾಡಿದ.

"ಏನು ಬಂದೆ, ಇಮಾಂ?"

ಇಮಾಂನು ತಡವರಿಸುತ್ತಾ "ಬೇಗಂ ಸಾಹೇಬರು ತಮ್ಮನ್ನು ಕರೆತರುವಂತೆ ಕಳುಹಿಸಿಕೊಟ್ಟಿದ್ದಾರೆ" ಎಂದ.

ಖಾನನು ರೇಗಿಕೊಂಡು "ನನಗೆ ಗೊತ್ತು. ನೀನು ಬಂದಾಗಲೇ ನಾನು ಅರ್ಥಮಾಡಿಕೊಂಡೆ. ನೀನು ಎಲ್ಲಿಗಾದರೂ ಹಾಳಾಗಿ ಹೋಗು. ನಿನಗೆ ಹೊಟ್ಟೆಗಿಲ್ಲದಿದ್ದರೆ ದುಡ್ಡು ಕೊಡಿಸುತ್ತೇನೆ. ಹೊರಟುಹೋಗು. ಇನ್ನೊಂದು ಬಾರಿ ಬಂದು ನನಗೆ ಮುಖ ತೋರಿಸಿದರೆ ನಿನಗೆ ಗಡ್ಡ ಮೀಸೆಗಳನ್ನು ಬೋಳಿಸಿ ಕತ್ತೆಯ ಮೇಲೆ ಬೋಳುತಲೆ ಸವಾರಿ ಮಾಡಿಸುತ್ತೇನೆ" ಎಂದು ಗದ್ದರಿಸಿದ.

ಇಮಾಂನು ನಡುಗುತ್ತಾ "ಹುಜೂರ್, ಮಾಫ್ ಮಾಡಬೇಕು. ಈ ಗುಬ್ಬಿಯ ಮೇಲೆ ಇಷ್ಟು ಕೋಪವೆ? ನಾನೇನು ಅಪರಾಧ ಮಾಡಿದ್ದೇನೆ? ಆ ಬೇಗಂ ಸಾಹೇಬರ ಮಾತಿಗೆ ಪ್ರತಿ ಹೇಳಲಾದೀತೇ? ನೀವೇ ಹೇಳಿ. ಅವರು ಹೇಳಿದರೆ ನಾನು ಇಲ್ಲಿಗೆ ಓಡಿ ಬರಬೇಕು. ನೀವು ಒದ್ದರೆ ತೆಪ್ಪಗೆ ಹೋಗಿ ಪೆಚ್ಚು ಮೋರೆ ಹಾಕಿಕೊಂಡು ಅವರ ಮುಂದೆ ನಿಲ್ಲಬೇಕು. ಇದೆಲ್ಲಿಯ ತಂಟೆ, ನಾನು ಬೇಗಂ ಸಾಹೇಬರ ಸಂಮುಖಕ್ಕೆ ಹೋಗುವುದೇ

ಇಲ್ಲ. ನೀವೇ ನಿಮ್ಮ ಸಂಮುಖದಲ್ಲಿ ಇಟ್ಟುಕೊಂಡು ಬಿಡಿ. ನನ್ನ ಮೇಲೆ ಕೋಪ ಮಾಡಬೇಡಿ. ಎಷ್ಟೋ ಜನರನ್ನು ಕಾಪಾಡುವ ಧಣಿ ನೀವು. ಆದರೆ ನಾನೊಂದು ಮಾತು ಹೇಳಲೇ, ಹುಜೂರ್ ? ಅಪ್ಪಣೆಯಾದರೆ ಹೇಳಿ ಬಿಡುತ್ತೇನೆ. ಆಮೇಲೆ ಮೆರವಣಿಗೆಯನ್ನಾದರೂ ಮಾಡಿಸಿ, ನಿಮ್ಮ ಕೈಯಿಂದಲೇ ನನ್ನ ತಲೆಯನ್ನಾದರೂ ಕಡಿದುಹಾಕಿಬಿಡಿ. ಈ ಕಷ್ಟ ಸಮಯದಲ್ಲಿ ಬೇಗಂ ಸಾಹೇಬರನ್ನು ನೀವು ಕೈಬಿಡಬಹುದೇ ? ಅವರಿಗಿರುವ ಬಲವೇ ನೀವು. ನೀವು ನಿರಾಕರಿಸಿದರೆ ಈ ದರ್ಬಾರಿನಲ್ಲಿ ಅವರನ್ನು ಯಾರು ಗೌರವಿಸುತ್ತಾರೆ, ಖಾವಂದ್ ? ಮಾತು ಮೀರಿತು. ಕ್ಷಮಿಸಬೇಕು" ಎಂದು ಖಾನನ ಪಾದಗಳ ಮೇಲೆ ಬಿದ್ದು ನಮಸ್ಕರಿಸಿದ.

ಖಾನನು ನಗುತ್ತಾ "ಇಮಾಂ, ನಿನಗೇಕೆ ಇಷ್ಟು ಆವೇಶ? ಹೋಗು. ನಿನ್ನ ತಪ್ಪೇನೂ ಇಲ್ಲ" ಎಂದು ಹೇಳಿ ಅವನನ್ನು ಸಮಾಧಾನಮಾಡಿ ಕಳುಹಿಸಿದ.

ಪುನಃ ಖಾನನ ತಲೆಯಲ್ಲಿ ನಾನಾ ವಿಧವಾದ ಆಲೋಚನೆಗಳು ಬಂದವು "ಹೋಗಿಬರೋಣ. ಬೇಗಂ ಸಾಹೇಬಳ ಅಪರಾಧವೇನಿದೆ ? ವಜೀರನೂ ಮಂತ್ರಿಗಳೂ ಅವಳನ್ನು ಪುಸಲಾಯಿಸಿದ್ದಾರೆ. ಅವಳು ಸರಳ ಮನಸ್ಸಿನವಳು. ಅವರುಗಳು ಶಿವಾಜಿಯನ್ನು ನಿಗ್ರಹ ಮಾಡಿಬಿಟ್ಟರೆ ಏನೋ ಆಗಿಬಿಡುತ್ತದೆಂದು ಹೇಳಿಕೊಟ್ಟಿದ್ದಾರೆ. ಅವಳು ನಂಬಿ ಅದನ್ನೇ ಗಟ್ಟಿ ಹಿಡಿದಿದ್ದಾಳೆ. ಬೇಗಂ ಸಾಹೇಬಳದು ಏನೂ ತಪ್ಪಿಲ್ಲ. ಅವಳು ಸುಲ್ತಾನಿಯಾಗಿದ್ದರೆ ಈ ದರ್ಬಾರು ನಾನು ಹೇಳಿದಂತೆ ಕೇಳುತ್ತಿದ್ದಿತು. ಆಗ ಈಶಿವಾಜಿಯನ್ನು ಹತೋಟಿಗೆ ತರಬಹುದಾಗಿದ್ದಿತು. ಆ ಮೊಗಲರನ್ನೂ ದೂರದಲ್ಲಿ ಇಡಬಹುದಾಗಿದ್ದಿತು. ಇರಲಿ. ಈ ಯುದ್ಧವೇನು ಮಹಾಯುದ್ಧವೇ. ಆ ಶಿವಾಜಿಯನ್ನು ದಾರಿಗೆ ತರುವುದೇನು ಕಷ್ಟವೇ ಹಳ್ಳಿಯ ಹುಡುಗ ಆ ಕಾಡುಜನರ ಸಹವಾಸ. ರಾಜನೆನಿಸಿಕೊಳ್ಳಬೇಕೆಂಬ ಆಸೆ. ನಾವೇ ರಾಜನೆಂಬ ಬಿರುದು ಕೊಟ್ಟರಾಯಿತು. ಷಾಜಿಯ ಮಗನಲ್ಲವೇ ಅವನು. ಅವನನ್ನು ದಾರಿಗೆ ತರುವುದು ಅತಿ ಸುಲಭ. ಈ ಸಿಕಂದರನ ಹೆಸರಿನಲ್ಲಿ ರಾಜ್ಯಭಾರ ಎಷ್ಟು ದಿನ ನಡೆದೀತು ? ಆ ಬಾಲಕನ ಅದೃಷ್ಟವು ಹೇಗಿದೆಯೋ. ಈ ಯುದ್ಧದಿಂದ ಹಿಂತಿರುಗಿದ ಮೇಲೆ

ಬೇಗಂ ಸಾಹೇಬಳನ್ನು ಬಲಾತ್ಕರಿಸಿ ನಯ–ಭಯಗಳಿಂದ ಒಪ್ಪಿಸಿ ಸುಲ್ತಾನೀ ಪಟ್ಟ ಕಟ್ಟಿಸಿಬಿಡುತ್ತೇನೆ. ನನಗಷ್ಟು ಸಾಮರ್ಥ್ಯವಿಲ್ಲವೆ ? ಆ ಹಾಳು ಮಂತ್ರವಾದಿ, ಪಿಶಾಚಿ ಸೈತಾನ. ಅವನನ್ನು ಎಲ್ಲಿಯಾದರೂ ಪತ್ತೆ ಹಚ್ಚಿ ಮಣ್ಣು ಮಾಡಿಸಿ ಬಿಡಬೇಕು. ಹತ್ತು ವರ್ಷಗಳಿಂದ ನಮ್ಮ ಅರಮನೆಯಲ್ಲಿ ಸೇರಿಕೊಂಡು ಪಿತೂರಿ ಮಾಡುತ್ತಿದ್ದಾನೆ. ಸುಲ್ತಾನನ ಮೇಲೆ ಮಂತ್ರ ಹಾಕಿದ. ಅವನಿಗೆ ಪರಲೋಕ ಯಾತ್ರೆ ಮಾಡಿಸಿದ. ಈಗ ಬೇಗಂ ಸಾಹೇಬಳ ಮೇಲೆ ಮಂತ್ರ ಮಾಡುತ್ತಾನೆ. ಹರಾಂಕೋರ. ಅವನು ಈ ರಾಜ್ಯದಲ್ಲಿರಕೂಡದು. ಅವನಿಂದಲೇ ನಮ್ಮ ರಾಜಕೀಯವೆಲ್ಲಾ ಹಾಳಾಗಿ ಹೋಯಿತು. ಇಲ್ಲದಿದ್ದರೆ ಎಲ್ಲರೂ ಒಪ್ಪಿದರು. ಬೇಗಂ ಸಾಹೇಬಳನ್ನು ಸುಲ್ತಾನೀ ಮಾಡಿಬಿಡುತ್ತಿದ್ದೆವು. ಇರಲಿ–ಇರಲಿ, ನೋಡಿಕೊಳ್ಳುತ್ತೇನೆ," ಎಂದು ಮನಸ್ಸಿನಲ್ಲಿಯೇ ಹಠ ಮಾಡಿಕೊಂಡ.

ಬೇಗಂ ಸಾಹೇಬಳ ದರ್ಶನಕ್ಕೆ ಹೋಗಲು ಪೋಷಾಕುಗಳನ್ನು ಧರಿಸಿ ಅರಮನೆಯ ಕಡೆಗೆ ಹೊರಡ.

ಬೇಗಂ ಸಾಹೇಬಳ ಅಂತಃಪುರದಲ್ಲಿ ಯಾವ ಉತ್ಸಾಹ ವೈಭವಗಳೂ ಕಾಣಲಿಲ್ಲ. ಬೇಗಂ ಸಾಹೇಬಳು ಅಲಂಕಾರವಿಹೀನಳಾಗಿ ಆಸನದ ಮೇಲೆ ಕುಳಿತಿದ್ದಳು. ಮುಖವು ಕಾಂತಿಹೀನವಾಗಿದ್ದಿತು. ತಲೆಕೂದಲು ಕೆದರಿದ್ದಿತು. ಮೈಮೇಲಿದ್ದ ಮಜಿಲಿನ್ನಿನ ಸೀರೆಯು ಮಲಿನವಾಗಿದ್ದಂತೆ ಇದ್ದಿತು.

ಅಫಜಲ್‌ಖಾನನು ಬೇಗಂ ಸಾಹೇಬಳ ಅಂತಃಗೃಹಕ್ಕೆ ಪ್ರವೇಶ ಮಾಡುತ್ತಲೇ ಪರಿಚಾರಿಕೆಯರು ಹೊರಗಿನಿಂದ ಬಾಗಿಲುಗಳನ್ನು ಮುಚ್ಚಿಕೊಂಡರು.

ಬೇಗಂ ಸಾಹೇಬಳು ತಲೆ ಎತ್ತಿ ನೋಡಿ, "ಅಫಜಲ್‌ಖಾನ್. ಇತ್ತ ಬಾ ಕುಳಿತುಕೋ" ಎಂದು ಹೇಳಿದಳು.

ಉದಾಸೀನವಾದ ಧ್ವನಿ, ಆದರೂ ಆ ಧ್ವನಿಯಲ್ಲಿ ಪ್ರೇಮದ ಕಿಡಿಗಳಿದ್ದವು.

ಖಾನನು ಮಂತ್ರಮುಗ್ಧನಂತೆ ಸಮೀಪದಲ್ಲಿ ಕುಳಿತುಕೊಂಡ. ಅವನಿಗೆ ಪ್ರಾತಃಕಾಲದಿಂದ ನಡೆದ ಘಟನೆಗಳೆಲ್ಲವೂ ಮರೆತು ಹೋದವು.

"ಷಾಹೀಬಾ, ಇದೇನು ಹೀಗಿರುವೆ ? ನಾನೆಂದೂ ಇಂತಹ ಅವಸ್ಥೆಯಲ್ಲಿ ನಿನ್ನನ್ನು ಕಂಡುದಿಲ್ಲ" ಎಂದು ಬೇಗಂಳ ತಲೆಸವರುತ್ತಾ ಮುಂಗೂದಲುಗಳನ್ನು ಸರಿಪಡಿಸುತ್ತಾ ಕೇಳಿದನು.

ಬೇಗಂಳು "ಖಾನನೇ, ನಾನು ಕುಟಿಲ ಸ್ತ್ರೀ ಎಂದುಕೊಂಡಿರುವೆಯಾ? ವೇಶ್ಯೆಯೆಂದುಕೊಂಡಿರುವೆಯಾ ? ನಾನು ಮನಸಾರ ನಿನ್ನನ್ನು ನನ್ನ ಪ್ರಾಣಕ್ಕಿಂತಲೂ ಅಧಿಕನೆಂದು ಭಾವಿಸಿದ್ದು ವ್ಯರ್ಥವಾಗಿ ಹೋಯಿತೇ ? ನಮ್ಮ ಪ್ರೇಮವನ್ನು ನಾವಿಬ್ಬರೇ ಮುಚ್ಚಿಟ್ಟುಕೊಂಡಿರುವೆವೆಂದು ನಾವು ಭಾವಿಸಿಕೊಳ್ಳಬಹುದು. ಕಾಮುಕರೆಲ್ಲರೂ ಹಾಗೆಯೇ ಭಾವಿಸುತ್ತಾರೆ ಆದರೆ ನಮ್ಮ ಪ್ರೇಮದ ಸುವಾಸನೆಯು ಈ ರಾಜ್ಯದಲ್ಲೆಲ್ಲಾ ಹರಡಿದೆ ಎಂಬುದನ್ನು ನಾವು ಮರೆಯಬಾರದು. ನೀನು ಭರದರಬಾರಿನಲ್ಲಿ ನನ್ನ ಮಾತನ್ನು ತಿರಸ್ಕರಿಸಿದ ಮೇಲೆ ಈ ರಾಜ್ಯದಲ್ಲಿ ನನಗೆ ಒಂದು ಕುರುಡುಕಾಸಿನ ಕಿಮ್ಮತ್ತಿಲ್ಲ" ಎಂದು ಹೇಳಿದಳು.

ಅವಳು ಮಾತನಾಡುತ್ತಿರುವಾಗ ಅವಳ ವಿಶಾಲವಾದ ಕಣ್ಣು ಕಂಬನಿ ದುಂಬಿದವು.

ಖಾನನ ಕಂಠವು ಗದ್ಗದಿತವಾಯಿತು.

ಖಾನನು "ಬೇಗಂ ಸಾಹೇಬ್, ದರಬಾರಿನಲ್ಲಿ ಆಜ್ಞೆಮಾಡಿಬಿಟ್ಟೆ, ಸುಲ್ತಾನೀಯ ಆಜ್ಞೆಯೆಂದು ಶಿರಸಾವಹಿಸಿ ಒಪ್ಪಿಕೊಂಡೆ. ಇನ್ನೇನು ನಿನ್ನ ಮಾತು? ನೀನೇಕೆ ಖಿನ್ನಳಾಗಿದ್ದೀ ? ಈ ಆವೇಶವೇನು ?" ಎಂದ.

"ಖಾನ್, ದೇವರು ಆ ಮಾತುಗಳನ್ನು ಆಡಿಸಿದ. ನಾನು ಆಡಿಬಿಟ್ಟೆ. ನನ್ನ ಅಭಿಲಾಷೆಗೆ ತಕ್ಕ ಉತ್ತೇಜನವು ನಿನ್ನಿಂದ ಬರಲಿಲ್ಲ. ನೀನು ಯುದ್ಧ ಮಾಡಿದರೇನು, ಬಿಟ್ಟರೇನು? ನಿನ್ನ ಅಂತಃಪುರದಲ್ಲಿ ನೀನಿರು. ನಾಳೆಯ ಪ್ರಾತಃಕಾಲದೊಳಗಾಗಿ ಸಾಹೇಬಳು ಈ ಲೋಕವನ್ನು ಬಿಟ್ಟು ಹೋದಳೆಂದು ನಿನಗೆ ಯಾರಾದರೂ ಬಂದು ಹೇಳುತ್ತಾರೆ. ನೀನೇ ತಿರಸ್ಕರಿಸಿದ ಮೇಲೆ ಈ ದರ್ಬಾರಿನಲ್ಲಿ ನನ್ನ ಮಾತಿಗೆ ಕಿವಿಗೊಡುವವರಾರು? ಸಾಮಾನ್ಯ ಸ್ತ್ರೀಯ ರಂತೆ ನಾನು ಹೇಳುತ್ತಿದ್ದೇನೆಂದು ಅಂದುಕೊಳ್ಳಬೇಡ. ಇದು ಕಡೆಯ ಮಾತು. ಯಾರಿಗೂ ತಿಳಿಯಬಾರದು. ನಮ್ಮಿಬ್ಬರ ಪ್ರೇಮದ ಪರಿಣಾಮ ವಿದು. ಹೋಗು, ಖಾನ್. ನೀನು ಇಲ್ಲಿ ನನ್ನೊಬ್ಬಳನ್ನೇ ಬಿಟ್ಟುಹೋಗು. ನಾನು ಅಲ್ಲಾನ ಪ್ರಾರ್ಥನೆ ಮಾಡುತ್ತೇನೆ. ಇನ್ನು ಒಂದು ಮಾತನ್ನೂ ಆಡಬೇಡ. ನಾನೇ ಮಾತು ಮುಗಿಸಿದ್ದೇನೆ. ಕರಣ ವ್ಯಾಪಾರಗಳನ್ನು ಮುಕ್ತಾಯಮಾಡಿದ್ದೇನೆ. ಆ ದೇವರು ನನ್ನಂಥವಳನ್ನು ತಿರಸ್ಕರಿಸಬಹುದು."

"ಸಾಹೇಬಾ. ನನ್ನ ಉದ್ಧಟತನವನ್ನು ಕ್ಷಮಿಸು. ನೀನು ಏನೇ ಹೇಳು ನಮ್ಮ ಪ್ರೇಮದ ಮಾತು ಬೇರೆ, ದರ್ಬಾರಿನ ಮಾತು ಬೇರೆ. ನಿನ್ನ ಆಜ್ಞೆಗೆ ಕಟ್ಟುಬಿದ್ದು ನಾನು ಯುದ್ಧಕ್ಕೆ ಹೊರಟಿದ್ದೇನೆ. ನೀನು ಸುಲ್ತಾನೀಯಾಗದಿದ್ದರೆ ಈ ರಾಜ್ಯವು ಮಣ್ಣುಗಡಿಗೆಯನ್ನು ಕಲ್ಲುಬಂಡೆಯ ಮೇಲೆ ಎತ್ತಿ ಕುಕ್ಕಿದಂತಾಗುತ್ತದೆ. ನನಗೆ ಬಾಲಕ ಸಿಕಂದರನ ಮೇಲೆ ದ್ವೇಷವಿಲ್ಲ. ನಾನು ಅವನನ್ನು ಪ್ರೀತಿಸುತ್ತೇನೆ. ಆದರೆ ಹೀಗೆ ಬಾಲಕ ಸುಲ್ತಾನನನ್ನು ಇಟ್ಟುಕೊಂಡು ಹುಚ್ಚು ದರ್ಬಾರನ್ನು ನಡೆಸುತ್ತಿರುವುದಕ್ಕಿಂತಲೂ ನಾವಿಬ್ಬರೂ ಪರಸ್ಪರ ಕಟ್ಟಿಕೊಂಡು ಮಡುವಿನಲ್ಲಿ ಧುಮುಕುವುದು ಕ್ಷೇಮ. ನೋಡು, ಸಾಹೇಬಾ. ನೀನು ನನ್ನ ಅಂತಃಪುರದ ಮಾತನ್ನೆತ್ತಿ ಆಡಿದೆ. ಅದು ನನ್ನಲ್ಲಿರುವ ಸ್ತ್ರೀ ಸ್ವಭಾವ. ನನ್ನ ಅಂತಃಪುರದ ಯುವತಿಯರೆಲ್ಲಾ ಹೇಗೆ ಬಂದು ಸೇರಿದರೋ, ನಾನೇಕೆ ಪರಿಗ್ರಹಿಸಿದೆನೋ ನನಗೇ ಗೊತ್ತಿಲ್ಲ. ನನ್ನ ಮನಸ್ಸನ್ನು ಬಿಚ್ಚಿ ಹೇಳುತ್ತೇನೆ ಪುನಃ ನಿನ್ನ ದರ್ಶನವಾಗುವುದೋ ಇಲ್ಲವೋ. ಯಾರುಬಲ್ಲರು ? ನಿನ್ನಂತೆ ನಾನೂ ನನ್ನ ಕಡೆಯ ಮಾತನ್ನು ಹೇಳಿಹೋಗಲು ನಿರ್ಧಾರಮಾಡಿದ್ದೇನೆ. ನಮ್ಮ ಪ್ರೇಮವು ಈ ಮಾನವ ಲೋಕದ ಪ್ರೇಮವಲ್ಲ. ದೇವರ ಲೋಕವೊಂದಿದ್ದರೆ ಆ ಲೋಕದ ಹಸು ಮಕ್ಕಳು ನಾವು ನಮ್ಮ ಪ್ರೇಮವು ಅಷ್ಟು ಪವಿತ್ರವಾದುದು. ಈ ಪ್ರಪಂಚದಲ್ಲಿರುವ ಯಾವ ಸ್ತ್ರೀಯೂ ನನ್ನನ್ನು ಗೆದ್ದಿಲ್ಲ. ನೀನು ಪೂರ್ಣವಾಗಿ ನನ್ನನ್ನು ಜಯಿಸಿದ್ದೀಯೆ. ಆದರೆ ನಮ್ಮಿಬ್ಬರಿಗೂ ಈ ದರ್ಬಾರಿನಲ್ಲಿ ಸ್ಥಳವಿಲ್ಲ ಈ ಲೋಕದಲ್ಲಿ ಮತ್ತೆಲ್ಲಿಯೂ ಸ್ಥಳವಿಲ್ಲ ಆಕಾಶದಲ್ಲಿ ಗಾಳಿಯಾಗಿ ನಾವು ಹಾರಿಹೋಗಬಹುದು. ಮೇಘಗಳಾಗಿ ಓಡಿಯಾಡಬಹುದು. ಪ್ರಕಾಶಮಾನವಾದ ನಕ್ಷತ್ರ ಲೋಕದಲ್ಲಿ ನಾವು ಸಣ್ಣ ಕಿರುತಾರೆಗಳಾಗಿ ಅನಂತ ಕಾಲ ರಮಿಸುತ್ತಿರಬಹುದು. ಈ ಲೋಕದಲ್ಲಿ, ಈ ಸಂಸಾರದಲ್ಲಿ ನಮ್ಮಿಬ್ಬರಿಗೂ ಸ್ಥಳವಿಲ್ಲ, ಸಾಹೇಬಾ. ನಾನು ಇಂದೇಯುದ್ಧಕ್ಕೆ ಹೊರಡುತ್ತೇನೆ. ನಿನ್ನ ಆಜ್ಞೆಯನ್ನು ಪೂರ್ಣವಾಗಿ ನೆರವೇರಿಸಿ ಬರುತ್ತೇನೆ ಅದು ನಿನ್ನ ತೃಪ್ತಿಗಾಗಿ, ನಿನ್ನ ಮನಸ್ಸಿನ ಹುಚ್ಚನ್ನು ಸಮಾಧಾನಗೊಳಿಸುವುದಕ್ಕಾಗಿ. ಅದುವರೆಗೂ ಯಾವ ಅಕಾರ್ಯಕ್ಕೂ ಮನಸ್ಸುಗೊಡಬೇಡ. ಇದೇ ನನ್ನ ಕಡೆಯ ಮಾತು–ಪ್ರಾರ್ಥನೆ."

ಎಂದು ಹೇಳಿ ಆಸನದಿಂದ ಎದ್ದನು.

ಸಾಹೇಬಳು ನಿರ್ವಿಣ್ಣಳಾಗಿ ವಿಶಾಲ ನೇತ್ರಗಳನ್ನು ಅರಳಿಸಿ ನೋಡುತ್ತಿದ್ದಳು.

ಅಫಜಲ್‌ಖಾನನು ತಿರುತಿರುಗಿ ನೋಡುತ್ತಾ ಬಾಗಿಲನ್ನು ತೆರೆದು ಮತ್ತೊಮ್ಮೆ ಅವಳ ಕಡೆಗೆ ನೋಡಿ ಅವಳ ಸುಂದರ ಮೂರ್ತಿಯನ್ನು ಕಣ್ಣುಗಳಿಂದ ಆಕರ್ಷಿಸಿ, ಹೃದಯದಲ್ಲಿ ತುಂಬಿಕೊಂಡು ಮೆಲ್ಲಮೆಲ್ಲಗೆ ಹೆಜ್ಜೆಯಿಡುತ್ತಾ ಅರಮನೆಯಿಂದ ಹೊರಟುಹೋದ.

ಮಾರನೆಯ ದಿನ ಪ್ರಾತಃಕಾಲವೇ ಬಿಜಾಪುರದ ಸೈನ್ಯಗಳು ಹೊರಡಬೇಕೆಂದು ಅಫಜಲ್‌ಖಾನನು ಅಪ್ಪಣೆಮಾಡಿದ.ರಾತ್ರಿ ಸೇನಾಧಿಪತಿಗಳನ್ನೆಲ್ಲಾ ಕರೆಸಿ ಪ್ರೋತ್ಸಾಹಿಸಿ ಅಪ್ಪಣೆಯಿತ್ತ. ತೋಪುಗಳ ಗಾಡಿಗಳು ಹೊರಡಬೇಕೆಂದೂ, ಮೂವತ್ತು ಸಾವಿರ ಕುದುರೆಯ ಬಲಗಳು, ಇಪ್ಪತ್ತು ಸಹಸ್ರ ಕಾಲಾಳು ಬಲಗಳು ಹೊರಡಬೇಕೆಂದು ಆಜ್ಞೆಯಿತ್ತ.

ಸೇನಾಧಿಪತಿಗಳೆಲ್ಲರೂ ಹೊರಟು ಹೋದ ಮೇಲೆ ಅಫಜಲ್‌ಖಾನನು ಏಕಾಂಗಿಯಾಗಿ ಷಾಜಿಯವರ ಮಹಲಿಗೆ ಹೋದ. ಆ ಹೊತ್ತು ಮೀರಿದ ರಾತ್ರಿಯಲ್ಲಿ ಷಾಜಿಯವರ ದರ್ಶನವನ್ನು ತೆಗೆದುಕೊಂಡ

"ಷಾಜಿಯವರೇ, ನನ್ನ ಮನಸ್ಸನ್ನು ನೀವು ಅರಿತಿರುವಿರೋ ಇಲ್ಲವೋ ಹೇಳಲಾರೆ. ನಾನು ಗೆಲ್ಲಲಿ, ಸೋತು ಬರಲಿ ಈ ರಾಜ್ಯವು ಇನ್ನು ಮುಂದೆ ಉಳಿಯದು. ಡೆಲ್ಲಿಯ ಬಾದಷಹನು ಇತ್ತ ಕಡೆ ದೃಷ್ಟಿಯನ್ನು ಬೀರುವವರೆಗೆ ಮಾತ್ರ ಈರಾಜ್ಯವು ಉಳಿಯುತ್ತದೆ.ಆದಿಲ್‌ಷಾಹಿಯು ಈ ಬಾಲಕನ ರಾಜ್ಯ ಭಾರದಿಂದ ಮುಕ್ತಾಯವಾಗುತ್ತದೆ.ನಿಮ್ಮ ಅಪ್ಪಣೆಯಂತೆ ನಾನು ಯುದ್ಧಕ್ಕೆ ಹೊರಟಿದ್ದೇನೆ, ನೀವು ಆಶೀರ್ವದಿಸಿರಿ. ಹೇಗಾದರೂ ನಿಮಗೆ ದುಃಖವು ತಪ್ಪದು. ಅತ್ತ ಶಿವಾಜಿಗಾದರೂ, ಇತ್ತ ನನಗಾದರೂ ಮರಣವು ಸಿದ್ಧ. ಹಾಗೆ ದೇವರು ಫೈಸಲ್ ಮಾಡುತ್ತಾನೆ. ನೀವು ಆಶೀರ್ವಾದ ಮಾಡಿರಿ" ಎಂದು ಷಾಜಿಯವರ ಮುಂದೆ ತಲೆ ಬಾಗಿಸಿದನು.

"ಅಫಜಲ್ ಖಾನ್ ! ನಿನಗೆ ಜಯವಾಗುವುದು, ರಾಜ್ಯಕ್ಕೆ ಕ್ಷೇಮವಾಗುವುದು. ನೀನು ಸಂತೋಷದಿಂದ ಯುದ್ಧಕ್ಕೆ ಹೊರಡು ಆದರೆ ನಾನೊಂದು ಎಚ್ಚರಿಕೆಯ ಮಾತನ್ನು ಹೇಳುತ್ತೇನೆ. ಇಲ್ಲಿ ಅರಮನೆಗಳಲ್ಲಿ

"ಸಾಹೇಬಾ. ನನ್ನ ಉದ್ಧಟತನವನ್ನು ಕ್ಷಮಿಸು. ನೀನು ಏನೇ ಹೇಳು ನಮ್ಮ ಪ್ರೇಮದ ಮಾತು ಬೇರೆ, ದರ್ಬಾರಿನ ಮಾತು ಬೇರೆ. ನಿನ್ನ ಆಜ್ಞೆಗೆ ಕಟ್ಟುಬಿದ್ದು ನಾನು ಯುದ್ಧಕ್ಕೆ ಹೊರಟಿದ್ದೇನೆ. ನೀನು ಸುಲ್ತಾನೀಯಾಗದಿದ್ದರೆ ಈ ರಾಜ್ಯವು ಮಣ್ಣುಗಡಿಗೆಯನ್ನು ಕಲ್ಲುಬಂಡೆಯ ಮೇಲೆ ಎತ್ತಿ ಕುಕ್ಕಿದಂತಾಗುತ್ತದೆ. ನನಗೆ ಬಾಲಕ ಸಿಕಂದರನ ಮೇಲೆ ದ್ವೇಷವಿಲ್ಲ. ನಾನು ಅವನನ್ನು ಪ್ರೀತಿಸುತ್ತೇನೆ. ಆದರೆ ಹೀಗೆ ಬಾಲಕ ಸುಲ್ತಾನನನ್ನು ಇಟ್ಟುಕೊಂಡು ಹುಚ್ಚು ದರ್ಬಾರನ್ನು ನಡೆಸುತ್ತಿರುವುದಕ್ಕಿಂತಲೂ ನಾವಿಬ್ಬರೂ ಪರಸ್ಪರ ಕಟ್ಟಿಕೊಂಡು ಮಡುವಿನಲ್ಲಿ ಧುಮುಕುವುದು ಕ್ಷೇಮ. ನೋಡು, ಸಾಹೇಬಾ. ನೀನು ನನ್ನ ಅಂತಃಪುರದ ಮಾತನ್ನೆತ್ತಿ ಆಡಿದೆ. ಅದು ನನ್ನಲ್ಲಿರುವ ಸ್ತ್ರೀ ಸ್ವಭಾವ. ನನ್ನ ಅಂತಃಪುರದ ಯುವತಿಯರೆಲ್ಲಾ ಹೇಗೆ ಬಂದು ಸೇರಿದರೋ, ನಾನೇಕೆ ಪರಿಗ್ರಹಿಸಿದೆನೋ ನನಗೇ ಗೊತ್ತಿಲ್ಲ. ನನ್ನ ಮನಸ್ಸನ್ನು ಬಿಚ್ಚಿ ಹೇಳುತ್ತೇನೆ ಪುನಃ ನಿನ್ನ ದರ್ಶನವಾಗುವುದೋ ಇಲ್ಲವೋ. ಯಾರುಬಲ್ಲರು ? ನಿನ್ನಂತೆ ನಾನೂ ನನ್ನ ಕಡೆಯ ಮಾತನ್ನು ಕೇಳಿಹೋಗಲು ನಿರ್ಧಾರಮಾಡಿದ್ದೇನೆ. ನಮ್ಮ ಪ್ರೇಮವು ಈ ಮಾನವ ಲೋಕದ ಪ್ರೇಮವಲ್ಲ. ದೇವ ಲೋಕವೊಂದಿದ್ದರೆ ಆ ಲೋಕದ ಹಸು ಮಕ್ಕಳು ನಾವು ನಮ್ಮ ಪ್ರೇಮವು ಅಷ್ಟು ಪವಿತ್ರವಾದುದು. ಈ ಪ್ರಪಂಚದಲ್ಲಿರುವ ಯಾವ ಸ್ತ್ರೀಯೂ ನನ್ನನ್ನು ಗೆದ್ದಿಲ್ಲ. ನೀನು ಪೂರ್ಣವಾಗಿ ನನ್ನನ್ನು ಜಯಿಸಿದ್ದೀಯೆ. ಆದರೆ ನಮ್ಮಿಬ್ಬರಿಗೂ ಈ ದರ್ಬಾರಿನಲ್ಲಿ ಸ್ಥಳವಿಲ್ಲ ಈ ಲೋಕದಲ್ಲಿ ಸುತ್ತೆಲ್ಲಿಯೂ ಸ್ಥಳವಿಲ್ಲ ಆಕಾಶದಲ್ಲಿ ಗಾಳಿಯಾಗಿ ನಾವು ಹಾರಿಹೋಗಬಹುದು. ಮೇಘಗಳಾಗಿ ಓಡಿಯಾಡಬಹುದು. ಪ್ರಕಾಶಮಾನವಾದ ನಕ್ಷತ್ರ ಲೋಕದಲ್ಲಿ ನಾವು ಸಣ್ಣ ಕಿರುತಾರೆಗಳಾಗಿ ಅನಂತ ಕಾಲ ರಮಿಸುತ್ತಿರಬಹುದು. ಈ ಲೋಕದಲ್ಲಿ, ಈ ಸಂಸಾರದಲ್ಲಿ ನಮ್ಮಿಬ್ಬರಿಗೂ ಸ್ಥಳವಿಲ್ಲ, ಸಾಹೇಬಾ. ನಾನು ಇಂದೇಯುದ್ಧಕ್ಕೆ ಹೊರಡುತ್ತೇನೆ. ನಿನ್ನ ಆಜ್ಞೆಯನ್ನು ಪೂರ್ಣವಾಗಿ ನೆರವೇರಿಸಿ ಬರುತ್ತೇನೆ ಅದು ನಿನ್ನ ತೃಪ್ತಿಗಾಗಿ, ನಿನ್ನ ಮನಸ್ಸಿನ ಹುಚ್ಚನ್ನು ಸಮಾಧಾನಗೊಳಿಸುವುದಕ್ಕಾಗಿ. ಅದುವರೆಗೂ ಯಾವ ಆಶ್ಚರ್ಯಕ್ಕೂ ಮನಸ್ಸುಗೊಡಬೇಡ. ಇದೇ ನನ್ನ ಕಡೆಯ ಮಾತು—ಪ್ರಾರ್ಥನೆ."

-ಎಂದು ಹೇಳಿ ಆಸನದಿಂದ ಎದ್ದನು.

ಸಾಹೀಬಳು ನಿರ್ವಿಣ್ಣಳಾಗಿ ವಿಶಾಲ ನೇತ್ರಗಳನ್ನು ಅರಳಿಸಿ ನೋಡುತ್ತಿದ್ದಳು.

ಅಫಜಲ್‌ಖಾನನು ತಿರುತಿರುಗಿ ನೋಡುತ್ತಾ ಬಾಗಿಲನ್ನು ತೆರೆದು ಮತ್ತೊಮ್ಮೆ ಅವಳ ಕಡೆಗೆ ನೋಡಿ ಅವಳ ಸುಂದರ ಮೂರ್ತಿಯನ್ನು ಕಣ್ಣುಗಳಿಂದ ಆಕರ್ಷಿಸಿ, ಹೃದಯದಲ್ಲಿ ತುಂಬಿಕೊಂಡು ಮೆಲ್ಲಮೆಲ್ಲಗೆ ಹೆಜ್ಜೆಯಿಡುತ್ತಾ ಅರಮನೆಯಿಂದ ಹೊರಟುಹೋದ.

ಮಾರನೆಯ ದಿನ ಪ್ರಾತಃಕಾಲವೇ ಬಿಜಾಪುರದ ಸೈನ್ಯಗಳು ಹೊರಡಬೇಕೆಂದು ಅಫಜಲ್‌ಖಾನನು ಅಪ್ಪಣೆಮಾಡಿದ.ರಾತ್ರಿ ಸೇನಾಧಿಪತಿಗಳನ್ನೆಲ್ಲಾ ಕರೆಸಿ ಪ್ರೋತ್ಸಾಹಿಸಿ ಅಪ್ಪಣೆಯಿತ್ತ. ತೋಪುಗಳ ಗಾಡಿಗಳು ಹೊರಡಬೇಕೆಂದೂ, ಮೂವತ್ತು ಸಾವಿರ ಕುದುರೆಯ ಬಲಗಳು, ಇಪ್ಪತ್ತು ಸಹಸ್ರ ಕಾಲಾಳು ಬಲಗಳು ಹೊರಡಬೇಕೆಂದು ಆಜ್ಞೆಯಿತ್ತ.

ಸೇನಾಧಿಪತಿಗಳೆಲ್ಲರೂ ಹೊರಟು ಹೋದ ಮೇಲೆ ಅಫಜಲ್‌ಖಾನನು ಏಕಾಂಗಿಯಾಗಿ ಷಾಜಿಯವರ ಮಹಲಿಗೆ ಹೋದ. ಆ ಹೊತ್ತು ಮೀರಿದ ರಾತ್ರಿಯಲ್ಲಿ ಷಾಜಿಯವರ ದರ್ಶನವನ್ನು ತೆಗೆದುಕೊಂಡ

"ಷಾಜಿಯವರೇ, ನನ್ನ ಮನಸ್ಸನ್ನು ನೀವು ಅರಿತಿರುವಿರೋ ಇಲ್ಲವೋ ಹೇಳಲಾರೆ. ನಾನು ಗೆಲ್ಲಲಿ, ಸೋತು ಬರಲಿ ಈ ರಾಜ್ಯವು ಇನ್ನು ಮುಂದೆ ಉಳಿಯದು. ಡೆಲ್ಲಿಯ ಬಾದಷಹನು ಇತ್ತ ಕಡೆ ದೃಷ್ಟಿಯನ್ನು ಬೀರುವವರೆಗೆ ಮಾತ್ರ ಈರಾಜ್ಯವು ಉಳಿಯುತ್ತದೆ.ಆದಿಲ್‌ಷಾಹಿಯು ಈ ಬಾಲಕನ ರಾಜ್ಯ ಭಾರದಿಂದ ಮುಕ್ತಾಯವಾಗುತ್ತದೆ.ನಿಮ್ಮ ಅಪ್ಪಣೆಯಂತೆ ನಾನು ಯುದ್ಧಕ್ಕೆ ಹೊರಟಿದ್ದೇನೆ, ನೀವು ಆಶೀರ್ವದಿಸಿರಿ. ಹೇಗಾದರೂ ನಿಮಗೆ ದುಃಖವು ತಪ್ಪದು. ಅತ್ತ ಶಿವಾಜಿಗಾದರೂ, ಇತ್ತ ನನಗಾದರೂ ಮರಣವು ಸಿದ್ಧ. ಹಾಗೆ ದೇವರು ಫೈಸಲ್ ಮಾಡುತ್ತಾನೆ. ನೀವು ಆಶೀರ್ವಾದ ಮಾಡಿರಿ" ಎಂದು ಷಾಜಿಯವರ ಮುಂದೆ ತಲೆ ಬಾಗಿಸಿದನು.

"ಅಫಜಲ್ ಖಾನ್ ! ನಿನಗೆ ಜಯವಾಗುವುದು, ರಾಜ್ಯಕ್ಕೆ ಕ್ಷೇಮವಾಗುವುದು. ನೀನು ಸಂತೋಷದಿಂದ ಯುದ್ಧಕ್ಕೆ ಹೊರಡು ಆದರೆ ನಾನೊಂದು ಎಚ್ಚರಿಕೆಯ ಮಾತನ್ನು ಹೇಳುತ್ತೇನೆ. ಇಲ್ಲಿ ಅರಮನೆಗಳಲ್ಲಿ

ಸುಖಾಸನಗಳಲ್ಲಿ ಕುಳಿತು ಕೊಡುವ ಎಚ್ಚರಿಕೆಗಳು ಅಲ್ಲಿ ರಣಕ್ಷೇತ್ರದಲ್ಲಿ ಫಲಿಸುವುದೋ ಇಲ್ಲವೋ ಖಚಿತವಾಗಿ ಹೇಳಲಾಗುವುದಿಲ್ಲ. ಭಗವಂತನ ಕೃಪೆ ಇದ್ದರೆ ಹಿರಿಯರ ಮಾತುಗಳು ಫಲಿಸಿದರೂ ಫಲಿಸಬಹುದು. ನೀನು ಉಪಾಯದಿಂದ ಆ ಶಿವಾಜಿಯನ್ನು ಹಿಡಿದು ತರುವ ಸಂಚು ಮಾಡು. ಈ ಪ್ರಕರಣದಲ್ಲಿ ಯುದ್ಧಕ್ಕಿಂತಲೂ ಉಪಾಯವೇ ಯಶಸ್ವಿಯಾಗುವುದು"

ಅಫಜಲ್‌ಖಾನನು ಪುನಃ ಷಾಜಿಯುವರಿಗೆ ವಂದನೆಯನ್ನು ಅರ್ಪಿಸಿ ಮನೆಗೆ ಹೊರಟುಹೋದ.

ಆ ರಾತ್ರಿ ಬಿಜಾಪುರದಲ್ಲಿ ಯಾರೂ ನಿದ್ರೆ ಮಾಡಲಿಲ್ಲ. ಹಗಲಿಗಿಂತಲೂ ಆ ರಾತ್ರಿಯು ಗಡಿಬಿಡಿಯಿಂದ ತುಂಬಿಹೋಗಿತ್ತು. ಯಾರೂ ನಿದ್ರಿಸಲಿಲ್ಲ.

ಅಫಜಲ್‌ಖಾನನು ತನ್ನ ಶಯ್ಯಾಗೃಹದಲ್ಲಿ ಹೋಗಿ ಮಲಗಿದ, ಗಾಢ ನಿದ್ರೆಯು ಅವನನ್ನು ಆವರಿಸಿತು. ರಾತ್ರಿ ಮೂರನೆಯ ಜಾವದಲ್ಲಿ ಅವನಿಗೆ ಭೀಕರ ಸ್ವಪ್ನವಾಯಿತು. ತನ್ನ ರುಂಡವು ಕಳಚಿಬಿದ್ದಂತೆ,ಶರೀರವೆಲ್ಲವೂ ರಕ್ತದಿಂದ ಅಭಿಷಕ್ತವಾದಂತೆ ಸ್ವಪ್ನವನ್ನು ಕಂಡ, ಗಾಬರಿಯಿಂದ ಜಗ್ಗನೆದ್ದು ಕುಳಿತ. ತನ್ನ ಸ್ವಪ್ನವನ್ನು ಪುನಃಪುನಃ ನೆನೆದುಕೊಂಡ. ಇದು ಅಶುಭ ಸೂಚನೆಯೆಂದು ಅವನಿಗೆ ಹೊಳೆಯಿತು ಯುದ್ಧಕ್ಕೆ ಹೊರೆಡಬೇಕೇ ಬೇಡವೇ ಎಂಬ ಶಂಕೆಯು ಉತ್ಪನ್ನವಾಯಿತು, ಸ್ವಪ್ನವನ್ನು ನೆನೆದು ಅವನ ಹೃದಯ ನಡುಗಿತು.

ಅಫಜಲ್ ಖಾನನು ಧೈರ್ಯವನ್ನು ತಂದುಕೊಂಡು "ಸೈನ್ಯಗಳು ನನ್ನ ಆಜ್ಞೆಯಂತೆ ಯುದ್ಧಕ್ಕೆ ಹೊರಟುಬಿಟ್ಟವೆ. ಸೇನಾಧಿಪತಿಗಳು ಉತ್ಸಾಹದಿಂದ ಹೊರಟು ನಿಂತಿದ್ದಾರೆ. ಈ ಕಡೆಯ ಘಳಿಗೆಯಲ್ಲಿ ನಾನು ಯುದ್ಧಕ್ಕೆ ಹೋಗುವುದಿಲ್ಲವೆಂದರೆ ಅದಕ್ಕಿಂತಲೂ ಅಪಮಾನಕರವಾದುದುಬೇರೊಂದಿಲ್ಲ. ಆಮೇಲೆ ಯಾರಿಗೂ ಮುಖ ತೋರಿಸುವಂತಿಲ್ಲ. ನಾನು ಹುಟ್ಟಿದಂದಿನಿಂದ ವೀರನೆನಿಸಿಕೊಂಡು ಅನೇಕಯುದ್ಧಗಳಲ್ಲಿ ಜಯವನ್ನು ಪಡೆದು ಹೆಮ್ಮೆಯಿಂದ ಹೊಗಳಿಸಿಕೊಂಡು ಇಷ್ಟೊಂದು ಸಿದ್ಧತೆಗಳನ್ನು ಮಾಡಿಕೊಂಡು ಹೊರಟು ಹಿಂದಕ್ಕೆ ಹೆಜ್ಜೆಯಿಟ್ಟರೆ ಜನರು ಏನಂದಾರು? ಆಮೇಲೆ ಬದುಕಿ ಫಲವೇನು? ಆತ್ಮಹತ್ಯೆ ಮಾಡಿಕೊಳ್ಳಬೇಕು. ಈ ಸ್ವಪ್ನವನ್ನು ಅಷ್ಟೊಂದು ಮನಸ್ಸಿಗೆ ಹಚ್ಚಿಕೊಳ್ಳಲೂ ಬಾರದು. ಎರಡು ಮೂರು ದಿನಗಳಿಂದ ಡೋಲಾಯ

ಮಾನವಾಗಿ ನನ್ನ ಮನಸ್ಸು ಕಷಾಯಿತವಾಗಿದೆ. ಅದರ ಪರಿಣಾಮವೇ ಈ ಸ್ವಪ್ನ" ಎಂದುಕೊಂಡ.

ಹಾಸಿಗೆಯಿಂದ ಎದ್ದು ಯುದ್ಧಕ್ಕೆ ಹೊರಡಲು ಸಿದ್ಧನಾಗತೊಡಗಿದ. ಕಡೆಯ ಕ್ಷಣದಲ್ಲಿ ಏನೋ ಆಲೋಚನೆ ಹೊಳೆದು ತನ್ನ ಅಂತಃಪುರದ ಅರವತ್ತುನಾಲ್ಕು ಜನ ಪತ್ನಿಯರು ತನ್ನೊಡನೆ ಹೊರಡಬೇಕೆಂದು ಆಜ್ಞೆ ಮಾಡಿದ. ಅರವತ್ತುನಾಲ್ಕು ಜನ ಹೆಂಡಿರು ಉತ್ಸಾಹದಿಂದ ಹೊರಟರು. ಮ್ಯಾನಾಗಳು, ಪಲ್ಲಕ್ಕಿಗಳು ಒಂದರ ಹಿಂದೆ ಒಂದು ಹೊರಟವು. ಅಂತಃಪುರದ ಮೈಗಾವಲಿನವರು ಆ ಪಲ್ಲಕ್ಕಿಗಳ ಹಿಂದೆ ಹೊರಟರು. ಅಫಜಲ್‌ಖಾನನು ಯುದ್ಧದ ದಿರಿಸನ್ನು ಧರಿಸಿ ಆನೆಯ ಮೇಲೆ ಕುಳಿತು ಹೊರಟ.

ಇಡೀ ರಾಜಧಾನಿಯು ಅವನನ್ನು ಬೀಳ್ಕೊಡಲು ಹೊರಟಿದ್ದಿತು. ದರಬಾರಿನ ಸಕಲ ರಾಜಮರ್ಯಾದೆಗಳು ಮುಂದೆ ಹೊರಟವು. ಸೈನಿಕರು ರಣವಾದ್ಯಗಳನ್ನು ಬಾರಿಸುತ್ತಿದ್ದರು. ಇಷ್ಟೊಂದು ವೈಭವದಿಂದ ಅಫಜಲ್‌ಖಾನನು ಕೋಟೆಯ ಮಹಾದ್ವಾರದಿಂದ ಹೊರಹೊರಟ. ಬಿಜಾಪುರದ ಸೈನ್ಯವು ಸಾಲುಸಾಲಾಗಿ ಸಾಗಿ ಹೋಗುತ್ತಿದ್ದಿತು. ಈ ರಾಣಿವಾಸದವರು ಯುದ್ಧ ಕ್ಷೇತ್ರಕ್ಕೆ ಹೊರಟಿದ್ದು ಪುರಜನರೆಲ್ಲರಿಗೂ ಆಶ್ಚರ್ಯವನ್ನುಂಟು ಮಾಡಿದ್ದಿತು. ಅನೇಕರು "ಯುದ್ಧಕ್ಕೆ ಹೊರಡುವಾಗ ಈ ಮಹಾಸಂಸಾರವನ್ನು ಬೆನ್ನಿಗೆ ಕಟ್ಟಿಕೊಂಡು ಹೋಗುವರೇ?" ಎಂದು ಯೋಚಿಸುತ್ತಿದ್ದರು.

ಪ್ರಚಂಡವಾದ ಸೈನ್ಯ. ರಣವಾದ್ಯಗಳ ಮಹಾನಾದ. ಕುದುರೆಗಳ ಖುರಪುಟಗಳಿಂದ ಏಳುತ್ತಿದ್ದ ಧೂಳಿ. ಈ ದೃಶ್ಯವನ್ನು ಪುರಜನರು ಕೋಟೆಯ ಬತೇರಿಗಳ ಮೇಲೆ ನಿಂತು ಬಹುದೂರದವರೆಗೆ ನೋಡುತ್ತಿದ್ದರು. ಇಷ್ಟೊಂದು ಮಹಾ ವೈಭವದಿಂದ ಯುದ್ಧಕ್ಕೆ ಹೊರಟಿದ್ದ ಅಫಜಲ್‌ಖಾನನ ಹೃದಯದಲ್ಲಿ ತಾನು ಕಟ್ಟಕಡೆಯಲ್ಲಿ ನೋಡಿದ ಷಾಹೀಬಾಳ ಸುಂದರ ಮುಖಾರವಿಂದ, ಬೆಳಗಿನ ಝಾವದಲ್ಲಿ ಕಂಡ ಘೋರ ಸ್ವಪ್ನ ಇಡಮೊರಡೆ ಎದ್ದು ಕುಳಿಯುತ್ತಿದ್ದವು.






ಅಫಜಲ್ ಖಾನನು ಆ ದಿನ ಭರದಿಂದ ಪ್ರಯಾಣವನ್ನು ಸಾಗಿಸಿದ್ದನು. ತುಂಗಭದ್ರೆಯ ದಂಡೆಯಲ್ಲಿ ಸೈನ್ಯ ಬೀಡು ಬಿಟ್ಟಿತ್ತು. ಆ ದಿನ ಅಲ್ಲಿ ಗುಡಾರ ಗಳಲ್ಲಿ ಅಂತಃಪುರ ರಮಣಿಯರೆಲ್ಲರೂ ವಸತಿ ಮಾಡಿದ್ದರು. ಅಫಜಲ್ ಖಾನನು ತನಗಾಗಿ ನಿರ್ಮಿಸಲ್ಪಟ್ಟಿದ್ದ ಗುಡಾರದಲ್ಲಿ ವಿಶ್ರಾಂತಿ ಹೊಂದಿದ.

ರಾತ್ರಿಯಾಯಿತು. ಕತ್ತಲೆಯು ಕವಿಯಿತು. ನಕ್ಷತ್ರಗಳು ಮಿನುಗು ತ್ತಿದ್ದವು. ಆ ತುಂಗಭದ್ರೆಯ ತೀರದಲ್ಲಿ ಅಫಜಲ್ ಖಾನನು ಏಕಾಂಗಿಯಾಗಿ ಹೋಗಿ ಕುಳಿತುಕೊಂಡ.

ರಾಜಭಟರನ್ನು ಕಳುಹಿಸಿ ಒಬ್ಬೊಬ್ಬರಾಗಿ ಪತ್ನಿಯರನ್ನು ಕರೆಯಿಸಿದ. ಅವರಿಗೆ "ಇದು ನನ್ನ ಅಂತ್ಯಕಾಲ. ಇನ್ನು ನೀವು ಬದುಕಿರಬಾರದು. ಈ ಮಡುವಿನಲ್ಲಿ ಧುಮುಕಿ ಆತ್ಮಾರ್ಪಣೆ ಮಾಡಿರಿ" ಎಂದು ಹೇಳಿದ.

ಕೆಲವರು ಸಂತೋಷದಿಂದ ಮಡುವಿನಲ್ಲಿ ಹಾರಿದರು. ಹಿಂತೆಗೆದವ ರನ್ನು ಕತ್ತಿಯಿಂದ ಕತ್ತರಿಸಿ ಪ್ರವಾಹದಲ್ಲಿ ಎಸೆದ. ಈ ಸಂಗತಿಯು ಶಿಬಿರ ದಲ್ಲೆಲ್ಲಾ ಹರಡಿತು. ಸೈನಿಕರೆಲ್ಲರೂ ಗಾಬರಿಗೊಂಡರು. ಸೇನಾಧಿಪತಿಗಳು ಹಾಹಾಕಾರ ಮಾಡಿದರು.

ಒಬ್ಬಳೇ ಒಬ್ಬ ರಮಣಿ. ಅವಳ ಹೆಸರು ನಿಷಾದ. ಅವಳು ತಪ್ಪಿಸಿ ಕೊಂಡು ಓಡಿಹೋದಳು. ಎಲ್ಲಿ ಮಾಯವಾದಳೋ ಯಾರಿಗೂ ಕಾಣಲಿಲ್ಲ. ರಾಜಭಟರು ಹುಡುಕಿ ಹುಡುಕಿ ಬೇಸತ್ತು ಸೇನಾಧಿಪತಿಗೆ "ಆ ಬೇಗಂ ಸಾಹೇಬರು ಸಿಕ್ಕಲಿಲ್ಲ" ಎಂದು ಅರಿಕೆ ಮಾಡಿದರು. ಅರವತ್ತುಮೂರು ಜನ ಪತ್ನಿಯರನ್ನು ತುಂಗಭದ್ರೆಗೆ ಸಮರ್ಪಣೆ ಮಾಡಿದ ಅಫಜಲ್ ಖಾನನು ಖಿನ್ನನಾಗಲಿಲ್ಲ. ಸಂತಪ್ತನಾಗಲಿಲ್ಲ. ಧೈರ್ಯದಿಂದ ತನ್ನ ಗುಡಾರಕ್ಕೆ ಬಂದು ಕುಳಿತುಕೊಂಡು "ಈ ಜಗತ್ತಿನಲ್ಲಿ ಸರ್ವಸ್ವವನ್ನು ನಾನಾಗಿ ತೊರೆ ದಿದ್ದೇನೆ" ಎಂದು ಸಂತೋಷಪಟ್ಟುಕೊಂಡ.

ಆದರೆ ಆ ರಾತ್ರಿ ಸೈನ್ಯದಲ್ಲಿ ಒಬ್ಬರಾದರೂ ಊಟ ಮಾಡಲಿಲ್ಲ. ಮಲಗಿ ನಿದ್ರಿಸಲಿಲ್ಲ. ತುಂಗಭದ್ರೆಯ ದಂಡೆಗೆ ಹೋಗಿ ನಿಂತು ಆ ರಾತ್ರಿಯೆಲ್ಲ ವನ್ನೂ ಕಣ್ಣೀರಿನಲ್ಲಿ ಕಳೆದರು. ಪರಿತಪಿಸಿದರು.

"ಅಫಜಲ್‌ಖಾನನು ಇಂತಹ ಘೋರ ಕೃತ್ಯವನ್ನು ಏಕೆ ಮಾಡಿದ?" ಎಂದು ಪರಸ್ಪರ ಹೇಳಿಕೊಂಡು ದುಃಖಿಸಿದರು. ಆ ಸೈನಿಕರು ಜೀವಂತ ರಾಗಿರುವವರೆಗೆ ಆ ಘೋರರಾತ್ರಿಯ ಕರಾಳ ಸ್ಮರಣೆಯನ್ನು ಮರೆಯಲಿಲ್ಲ.

ಬೆಳಕು ಹರಿಯಿತು. ಸೂರ್ಯೋದಯವಾಯಿತು. ಸೈನ್ಯವೆಲ್ಲವೂ ಜಡಾವಸ್ಥೆಯಲ್ಲಿದ್ದಿತು.

ಅಫಜಲ್‌ಖಾನನು ಕುದುರೆಯ ಮೇಲೇರಿ ಶಿಬಿರದ ಎಲ್ಲ ಕಡೆಯೂ ಸಂಚಾರಮಾಡಿ ಮುಂದಕ್ಕೆ ಹೊರಡಬೇಕೆಂದು ಆಜ್ಞೆಯಿತ್ತ. ಆ ಆಜ್ಞೆ ಯನ್ನು ಎಲ್ಲರೂ ಕೇಳಿದರು. ಅಫಜಲ್‌ಖಾನನ ಕ್ರೂರ ಮುಖಮುದ್ರೆಯನ್ನು ನೋಡಿ ಭಯಗ್ರಸ್ತರಾದರು. ಅವನ ಘೋರ ಕೃತ್ಯವನ್ನು ನೆನೆನೆನೆದು ಕಂಬನಿಗೆರೆಯುತ್ತಿದ್ದರು. ಆದರೆ ಯಾರೂ ಹೆಜ್ಜೆಯನ್ನು ಮುಂದಿಡಲಿಲ್ಲ.

ಅಫಜಲ್‌ಖಾನನು ನಿರಾಶನಾಗಿ ತನ್ನ ಗುಡಾರಕ್ಕೆ ಹಿಂತಿರುಗಿದ. ತನ್ನ ಸೈನಿಕರು ತನ್ನ ಮಾತಿಗೆ ಕಿವಿಗೊಡದಂಥಾ ಪರಾಭವವನ್ನು ಅವನೆಂದೂ ಅನುಭವಿಸಿರಲಿಲ್ಲ ಹಿಂದಿನ ರಾತ್ರಿಯ ತನ್ನ ನಿರ್ದಯ ಕಠೋರ ಕೃತ್ಯಕ್ಕಾಗಿ ಅವನು ಖಿನ್ನನಾಗಲಿಲ್ಲ. ಈ ಸೈನಿಕರ ಆಜ್ಞಾಭಂಗಕ್ಕಾಗಿ ಅವನು ತನ್ನ ಮೇಲೆ ಅಶಸ್ತ್ರ ವಧೆಯಾದಂತೆ ವ್ಯಥೆಪಟ್ಟ.

ಆ ದಿನ ಸಂಧ್ಯಾಕಾಲದಲ್ಲಿ ಖಾನನ ಆಜ್ಞೆಯಂತೆ ದಳಪತಿಗಳೆಲ್ಲರೂ ನೆರೆದಿದ್ದರು.

ಖಾನನು ಅವರೆಲ್ಲರನ್ನೂ ಉದ್ದೇಶಿಸಿ, "ಸೇನಾಧಿಪತಿಗಳೇ, ದಳಪತಿಗಳೇ ನನ್ನ ಸೈನ್ಯದ ಶಿಸ್ತು ಭಂಗವಾಗಿದೆ. ಇನ್ನು ಮೇಲೆ ಈ ಬಿಜಾಪುರದ ಸೈನ್ಯದ ಮಹಾಸೇನಾಧಿಪತಿ ನಾನೆಂದುಕೊಳ್ಳುವುದು ಅಪಲಾಪ. ಶತ್ರುಗಳಿಂದ ಪರಾಭವ ಹೊಂದುವ ಮಾತು ಹಾಗಿರಲಿ. ಈ ಭೂಮಿಯ ಮೇಲೆ ನನಗೆಂದೂ ಪರಜಯವಾಗಿಲ್ಲ. ಆದರೆ ಇಂದು ನನ್ನ ಸೈನಿಕರಿಂದಲೇ ನನಗೆ ಪರಾಭವವಾಗಿದೆ. ನಾನು ಹಿಂಜರಿದು ಹೋಗುವುದಿಲ್ಲ. ತೊಟ್ಟ ಹಟವನ್ನು

ಪರಿತ್ಯಜಿಸುವುದಿಲ್ಲ. ಏಕಾಕಿಯಾಗಿಯಾಗಲೀ ಸೈನ್ಯಸಮೇತನಾಗಲೀ ನಾನು ಮುಂದುವರಿಯುವವನು. ಈಗಲೇ ನಾನು ಹೊರಟಿದ್ದೇನೆ. ಯಾವ ಸೈನಿಕರಿಗೆ ಯಾವ ದಳಪತಿಗಳಿಗೆ ನನ್ನಲ್ಲಿ ಗೌರವವಿದೆಯೋ, ನನ್ನ ಪರಾಕ್ರಮ ದಲ್ಲಿ ನಂಬುಗೆಯಿದೆಯೋ ಅವರು ನನ್ನ ಹಿಂದೆ ಬರಲಿ. ಉಳಿದವರು ಇದೇ ತುಂಗಭದ್ರೆಯ ತೀರದಲ್ಲಿ ಸಾಯಲಿ, ಅಥವಾ ಬದುಕಲಿ. ನಾನು ಆಜ್ಞಾ ಭಂಗವನ್ನು ಎಂದಿಗೂ ಸಹಿಸುವವನಲ್ಲ" ಎಂದು ಉಚ್ಚಕಂಠದಿಂದ ಘೋಷಿಸಿ ಕುದುರೆಯ ಮೇಲೇರಿ, ಶಿಬಿರವನ್ನು ಬಿಟ್ಟು ಮುಂಪಕ್ಕೆ ಹೊರಟ.

ದಳಪತಿಗಳು ಗಾಬರಿಗೊಂಡು ಸೈನಿಕರನ್ನು ಎಚ್ಚರಿಸಿದರು. ಸೇನಾಧಿ ಪತಿಗಳು ಹೊರಟುಹೋದರು. "ನಾವು ಅವರ ಹಿಂದೆ ಹೋಗುತ್ತೇವೆ. ನೀವೆಲ್ಲರೂ ತಕ್ಷಣ ಹೊರಡುವವರಿದ್ದರೆ ಹೊರಟುಬನ್ನಿರಿ. ಯುದ್ಧವನ್ನು ಎದುರಿಸಲಾರದ ಸೋಗಿನ ಸೈನಿಕರಾಗಿದ್ದರೆ ಸೈನ್ಯವನ್ನು ಬಿಟ್ಟು ಶಸ್ತ್ರಾಸ್ತ್ರ ಗಳನ್ನು ನಮಗೊಪ್ಪಿಸಿ ಹೊರಟುಹೋಗಿರಿ. ಸೇನಾಧಿಪತಿಗಳ ಜನಾನಾದ ಘೋರ ದುರಂತಕ್ಕಾಗಿ ನೀವು ಕಣ್ಣೀರಿಡುತ್ತಾ ಕುಳಿತರೆ ನಿಮಗೆ ಬರುವ ಭಾಗ್ಯವೇನು ?" ಎಂದು ಎಚ್ಚರಿಸಿದರು

ಸೈನಿಕರು ದಿರುಸುಗಳನ್ನು ಧರಿಸಿ ಶಸ್ತ್ರಪಾಣಿಗಳಾಗಿ "ಅಲ್ಲಾಹೋ ಅಕ್ಬರ್" ಎಂದು ಜಯಧ್ವನಿಮಾಡುತ್ತಾ ದಳಪತಿಗಳ ಹಿಂದೆ ಹೊರಟರು. ಅಶ್ವಾರೋಹಿಗಳು, ಕಾಲುಭಟರು, ಫಿರಂಗಿಯ ಬಂಡಿಗಳು, ಆನೆಯ ಮಾವುತರು, ಒಂಟೆಯ ರಾಹುತರು, ಸೈನ್ಯದ ಶಿಸ್ತಿನಿಂದ ಮುಂದಕ್ಕೆ ಸಾಗಿದರು. ಅನೇಕರು ಶಿಬಿರವನ್ನು ಬಿಟ್ಟು ಹೊರಡಲೇ ಇಲ್ಲ. ಕಾಲು ಭಾಗ ಸೈನ್ಯವು ಅಲ್ಲಿಯೇ ಕಳಚಿಹೋಯಿತು.

ಅಫಜಲ್‌ಖಾನನು ಏಕಾಕಿಯಾಗಿ ಮುಂದಿನ ಮೊಕ್ಕಾಂವನ್ನು ತಲುಪಿದನು. ಅಲ್ಲಿ ಶಿಬಿರದ ಸಿದ್ಧತೆಗಳೆಲ್ಲವೂ ಆಗಿದ್ದವು. ಖಾನ್‌ಸಾಹೇಬನು ಒಂಟಿಯಾಗಿ ಬಂದುದನ್ನು ಕಂಡು ಅಲ್ಲಿ ಕಾದಿದ್ದ ಮುಂದಿನ ಗುಂಪಿನವರೆಲ್ಲ ರಿಗೂ ಆಶ್ಚರ್ಯವಾಯಿತು. ಖಾನನು ಯಾರೊಡನೆಯೂ ಮಾತನಾಡಲಿಲ್ಲ. ತನಗಾಗಿ ಸಿದ್ಧವಾಗಿದ್ದ ಗುಡಾರದಲ್ಲಿ ಹೋಗಿ ಕುಳಿತುಕೊಂಡ. ಆ ದಿನವೆಲ್ಲಾ ಅವನು ಭೋಜನಮಾಡಲಿಲ್ಲ. ಮಾತನಾಡಲಿಲ್ಲ. ತನ್ನ ಸ್ವಪ್ನದ ಸ್ಮರಣೆಯು ಬಂದಿತು. ಖಾನನು "ನನ್ನ ಸ್ವಪ್ನವು ನಿಜವಾಯಿತು. ನಾನು ಪ್ರೀತಿ

ಯಿಂದ ವರಿಸಿದ್ದ ಪತ್ನಿಯರನ್ನು ಕೊಲೆ ಮಾಡಿದೆ. ಏಕೆ ಹಾಗೆ ಮಾಡಿದೆ? ನನ್ನ ಭವಿಷ್ಯವು ಕತ್ತಲಾದಂತೆ ನನಗೆ ಗೋಚರವಾಯಿತು. ಇನ್ನು ಅವರು ಬದುಕಿ ಫಲವೇನು? ಅವರ ಮರಣದಿಂದ ನಾನು ಖೇದಪಡುವುದಿಲ್ಲ. ಎಂದಾದರೂ ವೀರ ಪತ್ನಿಯರಿಗೆ ಅಂತಹ ಮರಣವು ಸಿದ್ಧವಾಗಿಯೇ ಇದೆ. ಸ್ತ್ರೀಯರ ಜನ್ಮವೇ ಅಂತಹುದು. ಗಿಡಗಳಲ್ಲಿ ಮೊಗ್ಗೆಯಾಗಿ ಅರಳಿ ಸುವಾಸನೆಯನ್ನು ಬೀರಿ ಪ್ರಕಾಶಿಸುವಂತೆ ಸ್ತ್ರೀಯರು ಸಹಜವಾದ ಕಲಾ ನೈಪುಣ್ಯದಿಂದ ಸೌಂದರ್ಯ ಭೂಷಣಗಳಿಂದ ರಾರಾಜಿಸುತ್ತಾರೆ. ಆ ಪುಷ್ಪಗಳು ಶಿರಾಧಾರ್ಯಗಳು. ಬೇಗ ಒಣಗಿಹೋಗುತ್ತವೆ. ಭೂಮಿಯಲ್ಲಿ ಬಿದ್ದು ಅಳಿದುಹೋಗುತ್ತವೆ. ಹಾಗೆಯೇ ನಾರೀಜನ್ಮ. ನನ್ನ ಕಂಠದಲ್ಲಿ ಧರಿಸಿದ್ದ ಆ ಪುಷ್ಪಮಾಲಿಕೆಯನ್ನು ಸಂತೋಷದಿಂದ ತುಂಗಭದ್ರೆಯಲ್ಲಿ ಅರ್ಪಿಸಿದ್ದೇನೆ. ಅಥವಾ ದೇವರೊಬ್ಬನಿದ್ದರೆ ಅವನಿಗೆ ಒಪ್ಪಿಸಿದ್ದೇನೆ. ಆದರೆ ನನ್ನ ಸ್ವಪ್ನವು ಹೆಜ್ಜೆ ಹೆಜ್ಜೆಗೂ ನಿಜವೆಂದೇ ಕಾಣುತ್ತದೆ. ನಾನು ಬಹು ಕಾಲದಿಂದ ಬೆಳೆಸಿದ ಸೈನ್ಯವು ನನ್ನನ್ನು ಪರಿತ್ಯಾಗ ಮಾಡಿದೆ. ಇದು ನನ್ನ ಸ್ವಪ್ನದ ಪ್ರಥಮ ಸೂಚನೆ. ನಾನು ಯುದ್ಧಕ್ಕೆ ಹೊರಟಿದ್ದೇನೆ. ಸೈನ್ಯವಿಲ್ಲದೇ ಯುದ್ಧ ಮಾಡುವುದು ಹೇಗೆ? ಹಿಂತಿರುಗಿ ಬಿಜಾಪುರಕ್ಕೆ ಹೋಗಲೇ? ಯಾವ ಮುಖದಿಂದ ಹೋಗಲಿ. ಬಿಜಾಪುರದಲ್ಲಿ ನನಗೇನಿದೆ? ಅಲ್ಲಿ ನನ್ನ ಮೇಲೆ ಅಸೂಯಾಪರರಾದ ಅಂತಃಶತ್ರುಗಳು ತುಂಬಿದ್ದಾರೆ. ಶತ್ರುಮಧ್ಯ ದಲ್ಲಿ ಸೇನಾಹೀನನಾಗಿ ಕಪ್ಪು ಮೋರೆ ಮಾಡಿಕೊಂಡು ಹೋಗುವುದು ನನಗೆ ಭೂಷಣವೇ? ಇಲ್ಲ, ನಾನು ಹೊರಟ ಕಾರ್ಯದಿಂದ ಹಿಂತೆಗೆಯುವುದಿಲ್ಲ. ಶಿವಾಜಿಯ ಮುಂದೆ ಹೋಗಿ ಶಸ್ತ್ರ ಸಮೇತನಾಗಿ ಅವನ ಮೇಲೆ ಬಿದ್ದು ನೋಡುತ್ತೇನೆ. ಅದು ಅಷ್ಟು ಸಹಜವೆಂದು ಕಾಣುವುದಿಲ್ಲ. ಫಲಕಾರಿಯೂ ಅಲ್ಲ. ಶಿವಾಜಿಯ ಎದುರಿಗೆ ಹೋಗಿ ನಾನು ನಿನ್ನ ಮೇಲೆ ಮಲ್ಲಯುದ್ಧಕ್ಕೆ ಬಂದಿದ್ದೇನೆ. ನಾವಿಬ್ಬರೂ ಮಲ್ಲಯುದ್ಧ ಮಾಡೋಣಎಂದು ಮಲ್ಲಯುದ್ಧಕ್ಕೆ ಕರೆಯುತ್ತೇನೆ. ಹಾಗೆ ಕಡೆಯತನಕ ವೀರನಂತೆ ಸತ್ತರೆ ಸ್ವರ್ಗವು ನನಗಾಗಿ ಕಾದಿದೆ" ಎಂದುಕೊಂಡನು.

ಸಂಧ್ಯಾಕಾಲದ ಹೊತ್ತಿಗೆ ಸೈನ್ಯಗಳು ಆ ಶಿಬಿರಕ್ಕೆ ಬಂದು ಸೇರಿದವು. ಸೈನಿಕರು ದಳಪತಿಗಳು ಅವರವರ ಸ್ಥಾನಗಳಲ್ಲಿ ಅವರವರು ಇಳಿದುಕೊಂಡರು.

ರಾತ್ರಿ ಖಾನನ ಸೇವಕರು "ಸೈನ್ಯಗಳೆಲ್ಲಾ ಶಿಬಿರಕ್ಕೆ ಬಂದು ಸೇರಿವೆ" ಎಂದು ವರದಿಮಾಡಿದರು.

ಅಫಜಲ್‌ಖಾನನು ಏನೊಂದು ಉತ್ತರವನ್ನೂ ಹೇಳದೆ ಮೌನವಾಗಿ ಕುಳಿತಿದ್ದ.

ಬೆಳಗಾಯಿತು, ಶಿಬಿರ ಮಧ್ಯದಲ್ಲಿ ದಳಪತಿಗಳೆಲ್ಲರೂ ಬಂದು ಸೇರಬೇಕೆಂದು ಖಾನನು ಅಪ್ಪಣೆ ಕಳುಹಿಸಿದ. ಎಲ್ಲರೂ ಬಂದು ಹಾಜರಿದ್ದರು. ಖಾನನು ಕಾಲುನಡೆಯಲ್ಲಿಯೇ ಆ ದಳಪತಿಗಳ ಮಧ್ಯದಲ್ಲಿ ಬಂದು ನಿಂತ.

"ದಳಪತಿಗಳೇ, ಸೈನಿಕರೇ, ನಾನು ನಿಮ್ಮಗಳಿಂದ ಪರಿತ್ಯಕ್ತನಾಗಿದ್ದೇನೆ. ಇಂದು ನಾನು ಸೇನಾಧಿಪತಿಯಲ್ಲ. ನಾನೊಬ್ಬ ಬಿಡಿ ಮನುಷ್ಯ. ಏಕಾಕಿ. ನಾನು ಏರುವ ಕುದುರೆಯೂ ಕೂಡಾ ಸನ್ನದ್ದಲ್ಲ. ನಾನು ಅಪರಾಧಿ, ಪಾಪಿಯೆಂದು ನಿಮ್ಮಲ್ಲಿ ಯಾರಾದರೊಬ್ಬರು ಮನಸ್ಸಿನಲ್ಲಿ ಭಾವಿಸುವುದಾದರೆ ಅವನು ಮುಂದೆ ಬಂದು ನನ್ನ ತಲೆ ಕಡಿದುಹಾಕಲಿ. ಅವನೇ ಸೇನಾಧಿಪತಿಯಾಗಲಿ. ನನ್ನ ಕತ್ತಿಯಿಂದಲೇ ನನ್ನ ಶಿರಚ್ಛೇದವಾಗಲಿ. ನಾನೇ ಈ ಶಿಕ್ಷೆಯನ್ನು ವಿಧಾಯಕ ಮಾಡುತ್ತೇನೆ. ನೀವೆಲ್ಲರೂ ನಾನು ನಿರಪರಾಧಿ ಎಂದು ಹೇಳುವುದಾದರೆ ಮನಸಾರ ಹೇಳಿರಿ. ಅದಕ್ಕಿಂತಲೂ ದೊಡ್ಡ ಪುರಸ್ಕಾರವು ನನಗೆ ಬೇರೊಂದಿಲ್ಲ. ನಾನು ಸಂತೋಷದಿಂದ ಏಕಾಕಿಯಾಗಿ ಹೊರಟುಹೋಗುತ್ತೇನೆ. ಇಷ್ಟವಿಲ್ಲದ ಸೈನ್ಯವನ್ನು ಕಟ್ಟಿಕೊಂಡು ಹೋಗಿ ಶತ್ರುಗಳ ಕತ್ತಿಗೆ ಚಾಚುವ ಕೃತ್ಯವನ್ನು ನಾನೆಂದಿಗೂ ಮಾಡುವುದಿಲ್ಲ" ಎಂದು ಹೇಳಿ ಒರೆಯಿಂದ ಕತ್ತಿಯನ್ನು ಸೆಳೆದು ಬಿಸುಟ.

ದಳಪತಿಗಳು ಕಣ್ಣೀರಿಡುತ್ತಾ "ಪ್ರಭು, ನೀನು ನಮ್ಮ ರಕ್ಷಕನು. ನೀನು ನಮ್ಮ ಪಾಲಕನು. ನಿನ್ನ ಅಪರಾಧವೆಂದರೇನು? ನಿನ್ನ ಉಪ್ಪುಂಡ ಈ ದಾಸಾನುದಾಸರು ನಿನಗೆ ಶಿಕ್ಷೆ ವಿಧಿಸುವುದೆಂದರೇನು? ಸೈನಿಕರು ಭಯಗ್ರಸ್ತರಾಗಿ ನಿನ್ನ ಅಪ್ಪಣೆಯನ್ನು ಉಲ್ಲಂಘಿಸಿದರು. ಅವರನ್ನು ಕ್ಷಮಿಸುವ ಪ್ರಭು ನೀನು. ಈ ಸೈನ್ಯ, ಈ ದಳಪತಿಗಳು ನಾವೆಲ್ಲರೂ ನಿನ್ನ ಆಜ್ಞಾಧಾರಕರಾಗಿ ಬಂದು ನಿಂತಿದ್ದೇವೆ. ಅಪರಾಧವು ನಮ್ಮದು, ನಮ್ಮ ಸೈನಿಕರದು. ಪ್ರಭುವಾದ ನೀನು ಶಿಕ್ಷೆಯನ್ನು ವಿಧಿಸು. ಸಂತೋಷವಾಗಿ

ಅನುಭವಿಸುತ್ತೇವೆ. ಅಥವಾ ನಮ್ಮಗಳನ್ನು ಕ್ಷಮಿಸಿ ಕಾಪಾಡು. ನಾವು ನಿನ್ನವರು, ನಿನ್ನ ಪರಿವಾರ. ಸಾಯುವುದಾದರೆ ನಾವೆಲ್ಲರೂ ಒಟ್ಟಿಗೆ ಸಾಯಬೇಕು. ನಿನ್ನ ಮುಂದೆ ನಾವು ಈ ಕತ್ತಿಗಳನ್ನು ಹಿಡಿದು ಖುರಾನಿನ ಮೇಲೆ ಆಣೆಯಿಟ್ಟು ಪ್ರಮಾಣ ಮಾಡುತ್ತೇವೆ" ಎಂದು ಕತ್ತಿಗಳನ್ನು ಹಿರಿದು ಒಬ್ಬೊಬ್ಬರಾಗಿ ಅಫಜಲ್ ಖಾನನ ಪಾದಗಳ ಮುಂದಿಟ್ಟು ವಂದಿಸಿದರು.

ಅಫಜಲ್‌ಖಾನನು "ಬಿಜಾಪುರದ ಆಧಿಲ್‌ಷಾಯಿಯ ಮೇಲೆ ಭಕ್ತಿಯಿಟ್ಟು ಹೋರಾಡಿರಿ. ವಂಶಪಾರಂಪರ್ಯವಾಗಿ ಸುಲ್ತಾನರುಗಳ ಉಪ್ಪು ತಿಂದವರು ನೀವು. ಉಪ್ಪು ತಿಂದ ಮನೆಗೆ ಎರಡು ಬಗೆಯುವವನು ಮುಸಲ್ಮಾನನಲ್ಲ. ನೀವು ಶುದ್ಧ ಮುಸಲ್ಮಾನರಾಗಿ ಬದುಕಿರಿ. ಶುದ್ಧ ಮುಸಲ್ಮಾನರಾಗಿಯೇ ಸಾಯಿರಿ. ನನ್ನ ಅಪರಾಧಗಳ ಗೊಡವೆ ನಿಮಗೇಕೆ? ನನ್ನ ತಪ್ಪಿದ್ದರೆ ನಾನೇ ಶಿಕ್ಷೆ ಮಾಡಿಕೊಳ್ಳುತ್ತೇನೆ. ಅಥವಾ ದೇವರು ಶಿಕ್ಷಿಸುತ್ತಾನೆ. ಸೈನ್ಯದ ಧರ್ಮ ಸೇನಾಧಿಪತಿಯ ಆಜ್ಞಾಪಾಲನೆ" ಎಂದು ಹೇಳಿದ.

ಸೈನಿಕರೆಲ್ಲರೂ ಕತ್ತಿಗಳನ್ನು ಒರೆಗೆ ಸೇರಿಸಿ, "ಅಲ್ಲಾಹೋ ಅಕ್ಬರ್" ಎಂದು ಜಯಧ್ವನಿಗೈದರು.

ಬಿಜಾಪುರದ ಸೈನ್ಯವು ಮೊಕ್ಕಾಂನ ಮೇಲೆ ಮೊಕ್ಕಾಂ ಮಾಡುತ್ತಾ ಮುಂದುವರಿಯಿತು. ಇಪ್ಪತ್ತು ಗಾವುದಗಳನ್ನು ದಾಟಿ ಹೋಯಿತು.

ಗೋದಾವರಿಯ ದಂಡೆಯ ಮೇಲೆ ವಿಶಾಲವಾದ ಸೈನ್ಯದ ಬೀಡು ಬಿಟ್ಟಿತ್ತು. ಮೂರು ದಿವಸಗಳು ಆ ಸ್ಥಳದಲ್ಲಿ ಸೈನ್ಯಗಳ ವಿಶ್ರಾಂತಿಗಾಗಿ ವ್ಯವಸ್ಥೆಯಾಗಿತ್ತು. ಸೈನಿಕರೆಲ್ಲರೂ ಉತ್ಸಾಹದಿಂದ ಯಥಾಪ್ರಕಾರ ಆಮೋದ ಪ್ರಮೋದಗಳಲ್ಲಿ ತೊಡಗಿದ್ದರು.

ಸೈನ್ಯದ ಕೋಶಾಧಿಕಾರಿ ಇಸ್ಮಾಯಿಲ್ ಖಾನನು ಬಂದು ಅಫಜಲ್ ಖಾನನ ಗುಡಾರದಲ್ಲಿ ಅಂತರಂಗ ಭೇಟಿ ಮಾಡಿದ.

"ಹುಜೂರ್, ನಮ್ಮ ಖಜಾನೆಯಲ್ಲಿ ಹಣವಿಲ್ಲ. ಸಾಮಾನುಗಳ ಉಗ್ರಾಣದಲ್ಲಿ ಒಂದು ವಾರದ ದಾಸ್ತಾನು ಇರಬಹುದು ಕುದುರೆಗಳ ಆಹಾರವಂತೂ ಇಲ್ಲವೇ ಇಲ್ಲ. ನಾವು ಆಹಾರಕ್ಕಾದರೂ ಇತ್ತ ಕಡೆ ಲೂಟ ಮಾಡಿ ಸ್ವಲ್ಪ ಗ್ರಾಸವನ್ನು ಸಂಪಾದಿಸಬಹುದು. ಈ ಜನರೆಲ್ಲಾ ಬಡಜನ. ಇದು ಬಿಜಾಪುರದ ರಾಜ್ಯಕ್ಕೆ ಸೇರಿದ ಸ್ಥಳ. ಇಲ್ಲಿ ಲೂಟ ಮಾಡಿದರೆ ಜನರು

ನಮಗೆ ವಿರೋಧಿಗಳಾಗುತ್ತಾರೆ. ದುಡ್ಡು ಸಿಕ್ಕುವುದಿಲ್ಲ. ಅಪ್ಪಣೆಯಾದರೆ ಬಿಜಾಪುರದಿಂದ ಹಣ ತರಿಸುತ್ತೇನೆ" ಎಂದು ಹೇಳಿದ.

ಅಫಜಲ್ ಖಾನನು ಸ್ವಲ್ಪ ಹೊತ್ತು ಆಲೋಚನೆ ಮಾಡಿದ. "ಇಸ್ಮಾಯಿಲ್ ಖಾನ್, ನೀನು ದೊಡ್ಡ ಪದವಿಯಲ್ಲಿರುವವನು. ಉಮ್ರಾಗಳ ವಂಶಕ್ಕೆ ಸೇರಿದವನು. ರಾಜ್ಯದ ಅಂತರಂಗವನ್ನು ನಿನ್ನೊಡನೆ ಹೇಳದಿರುವುದು ನನ್ನ ತಪ್ಪಾಗುತ್ತದೆ. ನಾನು ಈ ಯುದ್ಧಕ್ಕೆ ಹೊರಡುವ ಮುನ್ನ ಬಿಜಾಪುರದ ಖಜಾನೆಯಲ್ಲಿದ್ದ ಹಣವೆಲ್ಲವನ್ನೂ ತೆಗೆದುಕೊಂಡು ಬಂದಿದ್ದೇನೆ. ಬಿಜಾಪುರದ ದರ್ಬಾರಿನ ಆಡಳಿತವು ಹತ್ತು ವರ್ಷಗಳಿಂದ ಶೈಥಿಲ್ಯವನ್ನು ಹೊಂದಿದೆ. ಅದು ವಜೀರನ ಅಧಿಕಾರದಪರಿಣಾಮ. ಏನು ಮಾಡಲಾದೀತು? ನನ್ನಲ್ಲಿದ್ದ ಸ್ವಂತ ಸಂಪತ್ತನ್ನೆಲ್ಲಾ ಇಲ್ಲಿಗೆ ತೆಗೆದುಕೊಂಡು ಬಂದಿದ್ದೇನೆ. ನನ್ನ ಅಂತಃಪುರದ ಬೇಗಂ ಸಾಹೇಬರುಗಳ ಸುವರ್ಣಾಭರಣಗಳೆಲ್ಲಾ ಇಲ್ಲಿಯೇ ಇವೆ. ಅದನ್ನೆಲ್ಲಾ ನೀನು ವಹಿಸಿಕೋ. ಅಷ್ಟರಲ್ಲಿ ಇಲ್ಲಿ ಧನ ಸಂಗ್ರಹಕ್ಕೆ ಏನು ಮಾಡಬೇಕೆಂಬುದನ್ನು ನಾನು ಆಲೋಚನೆ ಮಾಡುತ್ತೇನೆ. ಸೈನ್ಯದ ಆಹಾರ ಸಾಮಗ್ರಿಗಳಿಗಾಗಿ ಇಲ್ಲಿ ಲೂಟಿ ಮಾಡಕೂಡದು. ನಮ್ಮ ದೇಶವನ್ನು ನಾವೇ ಲೂಟಿ ಮಾಡುವುದಕ್ಕಿಂತಲೂ ಜಘನ್ಯಕೃತ್ಯವು ಬೇರೊಂದಿಲ್ಲ. ನ್ಯಾಯವಾದ ಬೆಲೆ ಕೊಟ್ಟು ಸಾಮಗ್ರಿಗಳನ್ನು ಕೊಂಡುಕೊಳ್ಳಿರಿ. ದೊಡ್ಡ ಸಾಹುಕಾರರಿದ್ದರೆ ಅವರಿಗೆ ಭರವಸೆ ಕೊಟ್ಟು ಸಾಲ ಪಡೆಯಿರಿ. ಬಡಜನರು ಸಂತೋಷದಿಂದ ನಮಗೆ ಜಯ ಕೋರುವರು" ಎಂದು ಹೇಳಿ ಕಳುಹಿಸಿದ.

ಅಫಜಲ್ ಖಾನನು "ಇನ್ನೂ ಅರ್ಧ ಹಾದಿಯನ್ನು ಕೂಡಾ ನಾವು ಕಳೆದಿಲ್ಲ. ಮುಂದೆ ನಾವು ಭಾರಿ ಯುದ್ಧಗಳನ್ನು ಮಾಡುವುದು ನಮ್ಮ ಪಾಲಿಗೆ ಕಾದಿದೆ. ಅಪಾರವಾದ ಧನ ಬೇಕು. ಇದಕ್ಕೇನು ಮಾಡಬೇಕು?" ಎಂದು ಚಿಂತಾಕ್ರಾಂತನಾದ. ಒಂದೆರಡು ದಿನಗಳು ಚಿಂತೆಯಲ್ಲಿಯೇ ಕಳೆದವು.

ಅಫಜಲ್ ಖಾನನಿಗೆ ಇದ್ದಕ್ಕಿದ್ದಂತೆ ಒಂದು ಆಲೋಚನೆಯು ಹೊಳೆಯಿತು. "ಈ ಕಡೆ ದೊಡ್ಡ ದೊಡ್ಡ ಹಿಂದೂ ದೇವಾಲಯಗಳಿವೆ. ಆ ದೇವಾಲಯಗಳಲ್ಲಿ ಹಿಂದೂ ಜನ ವಿಶೇಷ ಧನಕನಕಗಳನ್ನು ಅರ್ಪಣೆಮಾಡಿ

ಶೇಖರಿಸಿದ್ದಾರೆ. ಆ ದೇವಾಲಯಗಳನ್ನು ಧ್ವಂಸ ಮಾಡಿ ನೋಡಬೇಕು. ಹಣ ಸಿಕ್ಕಿದರೆ ಲಾಭವಾಯಿತು. ಇಲ್ಲದಿದ್ದರೂ ನಮ್ಮ ಕರ್ತವ್ಯವನ್ನು ನಿರ್ವಹಿಸಿದಂತಾಗುವುದು. ನಮ್ಮ ಸೈನ್ಯಗಳು ಹೋಗುತ್ತಿರುವ ಮಧ್ಯ ಮಾರ್ಗದಲ್ಲಿ ಹಿಂದೂ ದೇವಾಲಯಗಳನ್ನು ಉಳಿಸಿ ಹೋಗಬಾರದು" ಎಂದು ನಿಶ್ಚಯಿಸಿದ

ಅಫಜಲ್ ಖಾನನ ಸೈನ್ಯಗಳು ತುಳಜಾಪುರದ ಕಡೆ ಹೊರಟವು. ಅಫಜಲ್ ಖಾನನು ಪ್ರತಾಪಘಡದ ಕಡೆಗೆ ಶಿವಾಜಿಯ ಮೇಲೆ ಯುದ್ಧಕ್ಕೆ ಹೊರಟಿದ್ದಾನೆಂದು ಆ ಪ್ರಾಂತದಲ್ಲೆಲ್ಲಾ ಜನಜನಿತವಾಗಿದ್ದಿತು. ಹಿಂದೂಗಳೆಲ್ಲರೂ "ಶಿವಾಜಿಗೆ ಜಯವಾಗಲಿ" ಎಂದು ಹರಸುತ್ತಿದ್ದರು. ಶಿವಾಜಿಯ ಜಯಕ್ಕಾಗಿ ದೇವಾಲಯಗಳಲ್ಲಿ ಪೂಜೆ ಪುನಸ್ಕಾರಗಳನ್ನು ಸಲ್ಲಿಸುತ್ತಿದ್ದರು. ತುಳಜಾಪುರವು ಭವಾನೀ ದೇವಿಯ ಮಹಾಕ್ಷೇತ್ರ. ಭವಾನಿಯು ಆ ಕ್ಷೇತ್ರದಲ್ಲಿ ಸಾಕ್ಷಾತ್ತಾಗಿ ಉದ್ಭವಿಸಿದ್ದಾಳೆಂದು ಆ ಜನರ ನಂಬಿಕೆ. ಆದರೆ ತುಳಜಾಪುರವು ಪ್ರತಾಪಘಡಕ್ಕೆ ಹೋಗುವ ಮಾರ್ಗದಲ್ಲಿರುವ ಕ್ಷೇತ್ರವಲ್ಲ. ಪ್ರಚಂಡವಾದ ಮಹಮದೀಯ ಸೈನ್ಯಗಳು ಅತ್ತ ಬರುತ್ತವೆಯೆಂದರೆ ಹಿಂದೂ ಜನರಿಗೆ ತಮ್ಮ ದೇವಾಲಯಗಳಿಗೆ ಆಪತ್ತು ಸಂಭವಿಸುವುದೆಂಬ ಭಯವಿದ್ದೇ ಇದ್ದಿತು. ಆದರೆ ಈ ಕ್ಷೇತ್ರವು ಮಾರ್ಗಮಧ್ಯದಲ್ಲಿ ಇಲ್ಲವೆಂದು ಆ ಜನರಿಗೆ ಸ್ವಲ್ಪ ಸ್ವಲ್ಪ ಧೈರ್ಯವಾಗಿತ್ತು. ಖಾನನ ಸೈನ್ಯಗಳು ಅಡ್ಡದಾರಿಗೆ ತಿರುಗಿದವು ಎಂಬ ಸಮಾಚಾರವು ಬರುತ್ತಲೇ ತುಳಜಾಪುರದ ಜನ ಭಯಗ್ರಸ್ತರಾದರು. ತಮ್ಮ ಊರಿಗೆ ಪ್ರಳಯಕಾಲವು ಬಂದಿತೆಂದು ಸಿದ್ಧಮಾಡಿಕೊಂಡರು. ಕುಟುಂಬಗಳು ತಮ್ಮಲ್ಲಿದ್ದ ಅಲ್ಪಸಲ್ಪ ಧನಕನಕಗಳನ್ನು ತಮ್ಮ ತಮ್ಮ ಮನೆಗಳಲ್ಲಿ ಹುಗಿದಿಟ್ಟರು. ಮಕ್ಕಳು ಮರಿಗಳನ್ನು ಎತ್ತಿಕೊಂಡು ಗುಡ್ಡಗಾಡುಗಳ ಕಡೆಗೆ ಪಲಾಯನ ಮಾಡಿದರು. ಭಕ್ತ ಜನರು "ಪುರಾತನವಾದ ಭವಾನೀ ಮೂರ್ತಿಯನ್ನು ಆ ದುರುಳನು ಬಿಡುವುದಿಲ್ಲ. ಈ ಮೂರ್ತಿಯು ಪ್ರತ್ಯಕ್ಷ ದೇವತಾಸಾನ್ನಿಧ್ಯವಿರುವ ಮೂರ್ತಿ. ಕಾಡಿನಲ್ಲಿದ್ದರೂ ವರಪ್ರದಾನ ಮಾಡುವ ಮಹಿಮೆ ಈ ದೇವಿಯಲ್ಲಿದೆ" ಎಂದುಕೊಂಡು ಅತಿ ದುಃಖದಿಂದ ಭವಾನೀ ಮೂರ್ತಿಯನ್ನು ತಮ್ಮ ಹಸ್ತಗಳಿಂದಲೇ ಪ್ರತಿಷ್ಠಿತ ಪೀಠದಿಂದ ಕಿತ್ತರು. ಆ ಮೂರ್ತಿಯನ್ನು ಹೊತ್ತುಕೊಂಡು ಗೊಂಡಾರಣ್ಯದ ಮಧ್ಯದಲ್ಲಿ ಇದ್ದ ಒಂದು

ದೊಡ್ಡ ಸರೋವರದಲ್ಲಿ ಮಂತ್ರಗಳನ್ನು ಹೇಳಿ ಮುಳುಗಿಸಿಟ್ಟರು. "ದೇವಿ, ನಮ್ಮ ಶಕ್ತ್ಯಾನುಸಾರ ಮಾಡಿದ್ದೇವೆ. ಇನ್ನು ನಿನ್ನ ರಕ್ಷಣೆಯು ನಿನಗೆ ಸೇರಿದ್ದು" ಎಂದು ಹೇಳಿ ದೂರ ದೂರದ ಕಾಡುಗಳಲ್ಲಿ ಹೋಗಿ ಅವಿತುಕೊಂಡರು.

ಅಫಜಲ್ ಖಾನನ ಸೈನ್ಯಗಳು ತುಳಜಾಪುರವನ್ನು ಮುತ್ತಿದವು ಆ ಊರಿನಲ್ಲಿದ್ದ ಸಣ್ಣಪುಟ್ಟ ದೇವಾಲಯಗಳನ್ನೂ ಗುಡಿಗೋಪುರಗಳನ್ನೂ ನಾಶಪಡಿಸಿದರು. ಊರಿನಲ್ಲಿ ಅಳಿದುಳಿದಿದ್ದ ಹಿಂದುಗಳನ್ನು ಕಡಿದು ಹಾಕಿದರು. ಭವಾನಿಯ ದೇವಾಲಯವನ್ನು ಆಕ್ರಮಿಸಿ ಪ್ರವೇಶ ಮಾಡಿದರು. ದೇವಸ್ಥಾನದೊಳಗೆ ದೇವತಾ ಮೂರ್ತಿಯಿರಲಿಲ್ಲ. ಭಕ್ತಾದಿಗಳಿರಲಿಲ್ಲ. ಅಫಜಲ್ ಖಾನನೇ ಸ್ವತಃ ದೇವಾಲಯದೊಳಗೆ ಬಂದು ನಿಂತನು. ಕಲ್ಲುಗಳನ್ನು ಕೀಳಿಸಿ ಭೂಮಿಯನ್ನು ಅಗೆಸಿದನು. ಭೂಗರ್ಭದಲ್ಲಿ ಅಮೂಲ್ಯವಾದ ಸ್ವರ್ಣಾಭರಣಗಳೂ ರಾಶಿ ರಾಶಿ, ಕಾಣಿಕೆಯ ಹಣಗಳೂ ಸಿಕ್ಕಿದವು. ಅಫಜಲ್ ಖಾನನಿಗೆ ಅತ್ಯಾನಂದವಾಯಿತು. "ಪುರುಷ ಪ್ರಯತ್ನಕ್ಕೆ ಫಲವಿಲ್ಲದೇ ಹೋಗುವುದೇ? ಧನಕನಕಗಳು ಯಾರ ಸ್ವತ್ತೂ ಅಲ್ಲ ಯಾರಲ್ಲಿ ಪೌರುಷವಿದೆಯೋ ಯಾರಿಗೆ ಧೈರ್ಯವಿದೆಯೋ ಈ ಪ್ರಪಂಚದ ಧನಕನಕಗಳೆಲ್ಲವೂ ಅವರಿಗಾಗಿ ಸೃಷ್ಟಿಸಲ್ಪಟ್ಟವುಗಳು. ಆಸೆ ಎಂಬುದು ಬಹಳ ಕೆಟ್ಟದು. ಅಸಮರ್ಥರು ಈ ಹಣವನ್ನು ಅನುಭವಿಸಲರಿಯದೇ ಹೀಗೆ ದೇವರ ಹೆಸರಿನಲ್ಲಿ ಮುಚ್ಚಿಡುವರು ಇದು ಈ ಹಿಂದೂ ಜನರ ಅಜ್ಞಾನದ ಪರಮಾವಧಿ. ಆದರ ನಿಜವಾದ ಅಧಿಕಾರಿಗಳು 'ನಾವು" ಎಂದು ಹೇಳಿ ಅತಿಜಾಗರೂಕತೆಯಿಂದ ತಾನೇ ಪ್ರತ್ಯಕ್ಷವಾಗಿ ನಿಂತು ಆ ಧನಕನಕಗಳನ್ನೆಲ್ಲಾ ಸಂಗ್ರಹಿಸಿ, ಬೊಕ್ಕಸಕ್ಕೆ ಸೇರಿಸಿಕೊಂಡ. ಆ ಊರಿನಲ್ಲಿದ್ದ ನೂರಾರು ಗೋವುಗಳನ್ನು ಹಿಡಿತರಿಸಿ, ಆ ದೇವಮಂದಿರದಲ್ಲಿ ತನ್ನ ಕಣ್ಣೆದುರಿಗೇ ಕಡಿಸಿ ಆ ರಕ್ತದಿಂದ ದೇವಮಂದಿರವನ್ನು ಅಪವಿತ್ರಮಾಡಿದ. ಆ ಮಾಂಸವನ್ನು ಸೈನಿಕರಿಗೆ ಭೋಜನಕ್ಕಿಡಿಸಿದ.

ತುಳಜಾಪುರದಲ್ಲಿ ಒಂದು ಹಿಂದೂ ಪ್ರಾಣಿ ಉಳಿಯಲಿಲ್ಲ. ಒಂದು ಗೋವು ಬದುಕಲಿಲ್ಲ. ತುಳಜಾಪುರವು ಸ್ಮಶಾನವಾಗಿ ನಿಂತಿದ್ದಿತು. ಅಫಜಲ್ ಖಾನನು ಅಲ್ಲಿಂದ ಹಿಂತಿರುಗಲಿಲ್ಲ. ಪಂಡರಪುರಕ್ಕೆ ಸೈನ್ಯವನ್ನು ಮುಂದುವರಿಸಿದ.

ಪಂಡರಪುರವು ಭಕ್ತಾದಿಗಳಿಂದ ನಿಬಿಡವಾದ ಕ್ಷೇತ್ರ. ಸಾಧುಸಂತರಿಂದ ಪವಿತ್ರವಾದ ಕ್ಷೇತ್ರ. ಆ ಕ್ಷೇತ್ರದಿಂದ ಒಬ್ಬರಾದರೂ ಓಡಿಹೋಗಲಿಲ್ಲ. "ರಕ್ಷಿಸಿದರೆ ಪಂಡರಿನಾಥನು ರಕ್ಷಿಸಲಿ. ಸತ್ತರೆ ಮುಕ್ತಿದ್ವಾರವು ತೆರೆದಿದೆ" ಎಂದು ಸಂತೋಷದಿಂದ ಭಜನೆಮಾಡುತ್ತಿದ್ದರು. ಅನೇಕ ಸಂತರು ದೇವಾಲಯದ ಮುಂದೆ ಧ್ಯಾನಾಸಕ್ತರಾಗಿ ಕುಳಿತಿದ್ದರು.

ತುರುಷ್ಕ ಸೈನಿಕರು ಬಂದು ಪಂಡರಪುರವನ್ನು ಆಕ್ರಮಣಮಾಡಿದರು. ವರ್ತಕರನ್ನು ಲೂಟಿಮಾಡಿ ಬಡಿದೋಡಿಸಿದರು ಅಂಗಡಿ ಮುಂಗಟ್ಟುಗಳು ಸೂರೆ ಹೋದವು. ಮನೆಗಳನ್ನು ನೆಲಸಮ ಮಾಡಿದರು. ಆ ಸೈನಿಕರು "ಅಲ್ಲಾ ಹೋ ಅಕ್ಬರ್" ಎಂದು ಕೂಗುತ್ತಾ ದೇವಾಲಯವನ್ನು ಸುತ್ತುಗಟ್ಟಿದರು, ಭಕ್ತರು ಭಯಪಡಲಿಲ್ಲ. ಭಜನೆ ಮಾಡುತ್ತಲೇ ಇದ್ದರು. ಪಂಡರಿನಾಥನಿಗೆ ಆರತಿ ಎತ್ತುತ್ತಿದ್ದರು. ದೇವಾಲಯದ ಮುಂದೆ ತಂಡ ತಂಡವಾಗಿ ಧ್ಯಾನಮಗ್ನರಾಗಿ ಕುಳಿತಿದ್ದ ಸಾಧುಸಂತರು ಅಲುಗಾಡಲಿಲ್ಲ. ಈ ದೃಶ್ಯವನ್ನು ನೋಡಿ ಸೈನಿಕರೂ ದಳಪತಿಗಳೂಹಿಂಜರಿದು ನಿಂತರು.ಎತ್ತಿದ ಕತ್ತಿಗಳನ್ನು ಒರೆಗೆ ಸೇರಿಸಿ ಸ್ತಂಭೀ ಭಾವದಿಂದ ಆ ಭಕ್ತರ ಧೈರ್ಯ ಮತ್ತು ಆನಂದಗಳನ್ನು ಮೆಚ್ಚಿಕೊಂಡು ನೋಡುತ್ತಾ ನಿಂತರು. ದೂರದಲ್ಲಿ ಬರುತ್ತಿದ್ದ ಅಫಜಲ್‌ಖಾನನ ಕಿವಿಗೆ ಭಕ್ತರುಗಳ ಭಜನೆಯ ಸದ್ದು ಕೇಳಿಬರುತ್ತಿದ್ದಿತು, ಖಾನನು ಆಶ್ಚರ್ಯಪಟ್ಟನು. "ಇದು ಹಿಂದುಗಳ ಭಜನೆಯ ಧ್ವನಿ: ಸೈನಿಕರು ಹೋಗಿ ಆಕ್ರಮಿಸಿದ್ದರೂ ಈ ಧ್ವನಿಯು ತರಂಗ ತರಂಗಗಳಾಗಿ ದೇವಸ್ಥಾನದಿಂದ ಕೇಳಿಬರುತ್ತಿದೆ. ನಮ್ಮ ಸೈನಿಕರು ಏನು ಮಾಡುತ್ತಿದ್ದಾರೆ?" ಎಂದು ಆಶ್ಚರ್ಯ ಕ್ರೋಧಗಳಿಂದ ದೇವಾಲಯದ ಮುಂದೆ ಬಂದ. ಭಜನೆಯ ಕೂಟವನ್ನು ಕಣ್ಣಾರೆ ಕಂಡ. ಮುಸಲ್ಮಾನ್ ಸೈನಿಕರು ಕೈಕಟ್ಟಿ ನಿಂತಿರುವುದನ್ನು ನೋಡಿದ.

ಕ್ರೋಧದಿಂದ "ಮೂರ್ಖರುಗಳಿರಾ, ಇದೇನು ನೋಡುತ್ತಾ ನಿಂತಿದ್ದೀರಿ? ಇದು ಗೊಂಬೆಯಾಟವೇನು? ನೀವು ಆಜ್ಞೆಯನ್ನು ಮರೆತು ಈ ತಮಾಷೆ ನೋಡುವುದಕ್ಕೆ ಇಲ್ಲಿಗೆ ಬಂದಿದ್ದೀರೇನು?' ಎಂದು ಘರ್ಜಿಸುತ್ತಾ ಕತ್ತಿಯನ್ನು ಹಿರಿದು ದೇವಾಲಯದ ಮಂಟಪದೊಳಗೆ ನುಗ್ಗಿದ. ಕತ್ತಿಯನ್ನು ಬೀಸಿ,ಆ ಭಕ್ತರುಗಳನ್ನು ಕಡಿದು ಬಿಸುಟ. ಸೈನಿಕರು ಮುಂದೆ ಬಂದು ಕೊಲೆ

ಗಳಿಗೆ ಆರಂಭಮಾಡಿದರು. ಭಕ್ತರು ಸಾಧುಸಂತರು ಸತ್ರಂಸದಿಂದ ಪ್ರಾಣಿ ಬಿಟ್ಟರು. ದೇವರ ಮೂರ್ತಿಯನ್ನು ಕಿತ್ತೊಗೆದು ದೇವಾಲಯವನ್ನೆಲ್ಲಾ ಅಗೆಯಲಾರಂಭಿಸಿದರು. ಗರ್ಭಗುಡಿಯನ್ನು ಅಗೆದು ತೆಗೆದರು. ಅಲ್ಲಿಯೂ ಅಪಾರ ಸ್ವರ್ಣನಿಧಿಯು ಸಿಕ್ಕಿತು. ದೇವಾಲಯದಲ್ಲೆಲ್ಲಾ ರಕ್ತದ ಕೋಡಿಯು ಹರಿದಿದ್ದಿತು. ಹೆಣಗಳ ರಾಶಿ ರಾಶಿ. ಅಫಜಲ್‌ಖಾನನು ಆನಂದದಿಂದ ಹಿರಿಹಿಗ್ಗಿದ. "ಈ ಭಕ್ತರು ಹುಚ್ಚು ಹಿಡಿದ ಜನ. ಇವರು ಹಿಂದುಗಳ ತಲೆ ಕೆಡಿಸುವ ಜನ. ದೇವರು ಉದ್ಧಾರಮಾಡುತ್ತಾನೆಂದು ಹೇಳಿ ಜನರ ತಲೆ ಕೆಡಿಸುವ ಜನ. ಇವರ ಗತಿ ಹೀಗಾದದ್ದು ಒಳ್ಳೆಯದು. ಹಿಂದುಗಳಿಗೆಲ್ಲಾ ಇದೊಂದು ಪಾಠವಾಗುವುದು" ಎಂದುಹೇಳಿ ಆ ಸ್ವರ್ಣನಿಧಿಯನ್ನು ತೆಗೆಸಿಕೊಂಡು ತನ್ನ ಶಿಬಿರಕ್ಕೆ ಹೋಗಿ ಸೇರಿದ.

ಕೋಶಾಧ್ಯಕ್ಷನು ಎಲ್ಲವನ್ನೂ ದ್ರವ್ಯ ಲೆಕ್ಕಹಾಕಿ ಅಫಜಲ್ ಖಾನನ ಮುಂದೆ ಬಂದು ನಿಂತುಸಲಾಂ ಮಾಡಿ,"ಹುಜೂರ್,ನಮ್ಮ ಭಂಡಾರದಲ್ಲಿರುವ ಹಣ ಒಂದು ವರ್ಷಕ್ಕೆ ಸಾಕಾಗುವಷ್ಟಿದೆ. ಈ ಯುದ್ಧವು ಪೂರೈಸುವವರೆಗೆ ನಮಗೆ ಹಣದ ಕೊರತೆಯಿಲ್ಲ. ಬರಿದಾಗಿದ್ದ ಭಂಡಾರವು ಧನಕನಕಗಳಿಂದ ತುಂಬಿದೆ. ಇದು ತಮ್ಮ ಪ್ರಭಾವ. ಬಿಜಾಪುರದ ಆದಿಲ್ ಷಾಹಿಯ ಚರಿತ್ರೆಯಲ್ಲಿ ಇಷ್ಟು ಹಣ ಏಕಕಾಲದಲ್ಲಿ ಶೇಖರಿತವಾದ ನಿದರ್ಶನವನ್ನು ಯಾರೂ ಕಂಡು ಕೇಳಿಲ್ಲ" ಎಂದು ಅರಿಕೆಮಾಡಿದ.

ಅಫಜಲ್ ಖಾನನಿಗೆ ಸಮಾಧಾನವಾಯಿತು. ಯುದ್ಧಕ್ಕೆ ಹೊರಟಂದಿನಿಂದ ಮನಸ್ಸಿನ ಮೇಲೆ ಉಂಟಾಗಿದ್ದ ಖೇದವೆಲ್ಲವೂ ಮರೆಯುವಂತಾಯಿತು. ಅವನ ಸಂತೋಷವು ಉಕ್ಕಿ ಬರುತ್ತಿದ್ದಿತು. "ಇನ್ನು ಮುಂದೆ ಜಯವು ಸಿದ್ಧ" ಎಂದು ನಿಶ್ಚಯಮಾಡಿಕೊಂಡ. ಸೈನಿಕರಿಗೆಲ್ಲಾ ಕೈತುಂಬಾ ಇನಾಮುಗಳನ್ನು ಕೊಡಿಸಿದ. ಸೈನ್ಯವೆಲ್ಲವೂ ಹರ್ಷದಿಂದ ಉತ್ಸಾಹದಿಂದ ಕುಣಿದಾಡುತ್ತಿದ್ದಿತು. ಆ ಜನರು "ಇದ್ದರೆ ಇಂಥಾ ಸೇನಾಧಿಪತಿಯಿರಬೇಕು. ಇಂಥಾ ಸೈನ್ಯವಿರಬೇಕು" ಎಂದು ಹರ್ಷಧ್ವನಿಗಳನ್ನು ಮಾಡುತ್ತಿದ್ದರು.

ಅಫಜಲ್ ಖಾನನು ಹೊಸಉತ್ಸಾಹದಿಂದ ತನ್ನ ಪ್ರಚಂಡ ಸೈನ್ಯವನ್ನು ಹುರಿದುಂಬಿಸಿ, ಮುಂದುಮುಂದಕ್ಕೆ ಕರೆದೊಯ್ದನು. ದಾರಿಯಲ್ಲಿ ಸಿಕ್ಕಿದ ದೇವಾಲಯಗಳನ್ನು ನೆಲಸಮ ಮಾಡುತ್ತಾ ಹೊರಟ. ಕೈಗೆ ಸಿಕ್ಕಿದ ಹಿಂದು

ಗಳು ಭೂಗತವಾಗಿ ಹೋದರು. ತಪ್ಪಿಸಿಕೊಂಡು ಓಡಿದವರು ಕಾಡು ಪಾಲಾದರು. ಅಫಜಲ್‌ಖಾನನು ಆ ಮಹಾ ಸೈನ್ಯಸಮೇತನಾಗಿ ಪ್ರತಾಪ ಘಡಕ್ಕೆ ಒಂದು ಗಾವುದ ದೂರದಲ್ಲಿರುವ ವಿಶಾಲಭೂಮಿಯಲ್ಲಿ ಬೀಡುಬಿಟ್ಟನು.

ಅಫಜಲ್‌ಖಾನನ ಸೈನ್ಯಗಳು ಶಿವಾಜಿಯು ಮೇಲೆ ಯುದ್ಧಕ್ಕೆ ಬರುತ್ತಿರುವ ವಾರ್ತೆಗಳು ಮೇಲಿಂದ ಮೇಲೆ ಬರುತ್ತಿದ್ದವು. ಶಿವಾಜಿಯ ಸಂಗಡಿಗರೆಲ್ಲರೂ ಪ್ರತಾಪಘಡದಲ್ಲಿ ಸೇರಿದರು. ಮರಾಠಾ ಸೈನ್ಯಗಳೆಲ್ಲವೂ ಅತ್ತಕಡೆ ಜಮಾಯಿಸುತ್ತಿದ್ದವು. ಮರಾಠಾ ಸರದಾರರು, ಸೇನಾಪತಿಗಳು "ಯುದ್ಧಮಾಡಿ ತೀರಿಸಿಬಿಡಬೇಕು. ಇದು ಕಡೆಯ ಯುದ್ಧ. ಈ ಬಾರಿ ಸರಿಯಾಗಿ ಪೆಟ್ಟು ತಿಂದು ಓಡಿದರೆ ಇನ್ನು ಈ ಬಿಜಾಪುರದವರು ನಮ್ಮ ಗೋಜಿಗೆ ಬರುವುದಿಲ್ಲ. ಅಫಜಲ್‌ಖಾನನ್ನು ಯುದ್ಧದಲ್ಲಿಯೋ ಉಪಾಯ ದಿಂದಲೋ ಕೊಂದು ಹಾಕಿಬಿಡಬೇಕು. ಹಿಂದಕ್ಕೆ ಹೋಗಲು ಬಿಡಬಾರದು" ಎಂದು ಹೇಳಿದರು.

ಶಿವಾಜಿಯು ಮೌನವಾಗಿದ್ದನು.

ಭವಾನಿಯ ದೇವಾಲಯಕ್ಕೆ ಹೋಗಿ "ದೇವಿ, ಶಕ್ತಿಯನ್ನು ಕೊಡು. ಜಯುವನ್ನು ಕೊಡು" ಎಂದು ಪ್ರಾರ್ಥನೆ ಮಾಡಲಾರಂಭಿಸಿದ. ಶಿವಾಜಿಯು ಭಕ್ತಿಭಾವದಿಂದ ತನ್ನ ತಲೆಯನ್ನು ಕತ್ತರಿಸಿ ದೇವಿಯ ಪಾದದಲ್ಲಿ ಸಮರ್ಪಣೆ ಮಾಡಲು ಸಿದ್ಧನಾದ.

ಅವನಿಗೆ ಅಶರೀರವಾಣಿಯು ಕೇಳಿಸಿದಂತಾಯಿತು. "ವಿಜಯೀಭವ" "ಸಾಮ್ರಾಟ್‌ಭವ" ಎಂಬ ದೈವೀವಾಣಿಯು ಕೇಳಿಸಿದಂತಾಯಿತು. ಅಂಬಿಕೆಯ ಪ್ರಸಾದವನ್ನು ಸ್ವೀಕರಿಸಿ, ಶಿವಾಜಿಯು ಭವಾನಿಯ ಸಾನ್ನಿಧ್ಯ ದಿಂದ ಹೊರಗೆ ಬರುವ ಹೊತ್ತಿಗೆ ಬೆಳಕು ಹರಿದಿತ್ತು. ಶಿವಾಜಿಯ ಸಂಗಡಿಗ ರೆಲ್ಲರೂ ರಾತ್ರಿಯೆಲ್ಲಾ ಎವೆಯಿಕ್ಕದೆ ಕಾದು ನಿಂತಿದ್ದರು.

ಶಿವಾಜಿಯು ಕುಂಕುಮವನ್ನು ಇಟ್ಟುಕೊಂಡು ದೇವಾಲಯದ ಹೊರಗೆ ಬರುತ್ತಲೇ ತಾನಾಜಿಯು, "ಮಹಾರಾಜ್, ದೇವಿಯು ಏನಪ್ಪಣೆ ಮಾಡಿ ದ್ದಾಳೆ? ಮೊದಲು ಹೇಳು" ಎಂದು ಕೇಳಿದ.

ಶಿವಾಜಿಯು ಹಸನ್ಮುಖದಿಂದ "ಯುದ್ಧ–ಯುದ್ಧ. ನಮಗೆ ಸಿದ್ಧ ವಾಗಿರುವುದು ಒಂದೇ ಮಾರ್ಗ. ಹಿಂದೂ ಸಾಮ್ರಾಜ್ಯ ಸ್ಥಾಪನೆಯವರೆಗೆ

ಯುದ್ಧ, ಇಲ್ಲವೇ ಮರಣ. ಯುದ್ಧಕ್ಕೆ ಸಿದ್ಧರಾಗಿರಿ" ಎಂದು ಹೇಳಿ ತನ್ನ ವಾಸಸ್ಥಾನಕ್ಕೆ ಬಂದ.

ಭದ್ರಾಚಲಕ್ಷೇತ್ರಕ್ಕೆ ಹೋಗಿ ರಾಮದಾಸರ ದರ್ಶನಮಾಡಿ ಅಪ್ಪಣೆ ಪಡೆದು ಬರಬೇಕೆಂದು ಶಿವಾಜಿಯು ಯೋಚನೆ ಮಾಡಿದ. "ಪ್ರತಾಪಘಡಕ್ಕೆ ಒಂದು ಗಾವುದ ದೂರದಲ್ಲಿ ಶತ್ರುವಿನ ಪ್ರಚಂಡ ಸೈನ್ಯವು ಬಂದಿದೆ. ಈಗ ಕೋಟೆಯನ್ನು ಬಿಟ್ಟು ಹೊರಡಬಾರದು. ಗುರುಗಳು ತಾವೇ ಬಂದು ದರ್ಶನ ವೀಯುತ್ತಾರೆ" ಎಂದು ದೃಢಮಾಡಿಕೊಂಡ.

ಅಫಜಲ್‌ಖಾನನ ಶಿಬಿರವು ಪ್ರತಾಪಘಡದುರ್ಗಕ್ಕೆ ಒಂದು ಹರಿದಾರಿ ದೂರದಲ್ಲಿ ಬೀಡು ಬಿಟ್ಟಿದ್ದಿತು. ಖಾನನು ಆ ಪರ್ವತ ಶ್ರೇಣಿಗಳನ್ನು ನೋಡಿ ಹರ್ಷಚಿತ್ತನಾದ "ಈ ಸಹ್ಯಾದ್ರಿಯ ಸೊಬಗು ಎಷ್ಟು ಮನೋಹರ ವಾಗಿದೆ! ಈ ಕೋಟೆಗಳು ಎಂಥಾ ಆಯಕಟ್ಟಿನಲ್ಲಿ ಕಟ್ಟಲ್ಪಟ್ಟಿವೆ! ಕೋಟೆಯ ಮೇಲೆ ಥಳಥಳಿಸುವ ಶಿಖರಗಳು ಯಾವುವು? ಯಾವುದೋ ಹಿಂದೂ ದೇವಾಲಯವಿರಬೇಕು" ಎಂದು ಆ ಪ್ರಕೃತಿ ಸೌಂದರ್ಯವನ್ನು ನೋಡಿ ನೋಡಿ ಆಹ್ಲಾದಪಟ್ಟ.

"ಇನ್ನೇನು ಮೂರು ದಿನಗಳಲ್ಲಿ ಅಥವಾ ಒಂದೇ ಒಂದು ವಾರದಲ್ಲಿ ಈ ಭವ್ಯವಾದ ಸುಂದರ ದುರ್ಗವು ನಮ್ಮ ವಶವಾಗುತ್ತದೆ. ಇಲ್ಲಿ ಪ್ರಕೃತಿ ದೇವಿಯ ಪ್ರಸಾದವು ಇಷ್ಟೊಂದು ಪ್ರಕಾಶಮಾನವಾಗಿ ಪ್ರಫುಲ್ಲವಾಗಿವೆಯೆಂದು ನಾನರಿಯೆ. ಬಿಜಾಪುರದ ದರ್ಬಾರಿನಲ್ಲಿ ಯಾರೂ ಅರಿಯರು. ಅದುದ ರಿಂದಲೇ ನಮ್ಮ ದರ್ಬಾರಿನಿಂದ ಇಲ್ಲಿಗೆ ಕಳುಹಿಸಿದ ಫೌಜುದಾರರು, ಸೇನಾಧಿ ಪತಿಗಳು ಹಿಂದಕ್ಕೆ ಬರಲು ಒಪ್ಪುತ್ತಲೇ ಇರಲಿಲ್ಲ. ಅತ್ತ ದೂರದಲ್ಲಿ ಕಾಣುವುದೇ ಪುರಂಧರಘಡವಿರಬೇಕು. ಇತ್ತ ತೋರಣ ಸಿಂಹಘಡಗಳಿರ ಬಹುದು. ಆ ಪುರಂಧರಘಡದ ರಾಣಿ, ಬಿಜಾಪುರದ ಸುಪ್ರಸಿದ್ಧ ಶ್ರೀಮಂತನ ಮಗಳು ದುರೀಷಾ. ಅವಳು ಬಿಜಾಪುರದ ಪ್ರಕಾಶಮಾನವಾದ ಕಿರಣ ವಾಗಿದ್ದಳು. ಎಂತಹ ಸುಂದರಿ! ಅವಳ ಗಾನ ಮಾಧುರ್ಯವು ಎಷ್ಟು ಮನೋಹರ! ಈ ಹಾಳು ಗಿರಿದುರ್ಗದಲ್ಲಿ ಆ ಫರೂಕ್‌ನು ಕೊಲೆ ಮಾಡಿದ. ಈ ಪ್ರಕೃತಿ ಸೌಂದರ್ಯವನ್ನು ಮಾನವನು ಅನುಭವಿಸುವುದಕ್ಕೆ ಅವನಿಗೆ ಶಕ್ತಿಯಿರಬೇಕು. ದುರ್ಬಲರಾದ ಮನುಷ್ಯರು ಕ್ರೂರಕರ್ಮಿಗಳಾಗುತ್ತಾರೆ.

ಹಾಗೆಯೇ ಈ ಶಿವಾಜಿ ಈ ಕಾಡುಗುಡ್ಡಗಳಲ್ಲಿಯೇ ಹುಟ್ಟಿ ಬೆಳೆದ ಮೃಗ, ಅವನು ತೋಳ, ಚಿರತೆಗಳಂತೆ ಸಾಧು ಪ್ರಾಣಿಗಳನ್ನು ಕೊಂದು ತಿನ್ನುವ ಮನುಷ್ಯನಿವನು. ಯಾವ ದುರ್ಗವನ್ನೂ ಶಿವಾಜಿಯು ಪರಾಕ್ರಮದಿಂದ ಗೆಲ್ಲಲಿಲ್ಲ. ಇಲ್ಲಿಗೆ ಬಂದ ಫೌಜುದಾರರುಗಳು ಈ ಪ್ರಕೃತಿ ಸೌಂದರ್ಯದಲ್ಲಿ ಮುಳುಗಿ ಅಮೋದ ಪ್ರಮೋದಗಳನ್ನು ಬೆಳೆಸಿಕೊಂಡು ಸುಖಲೋಲುಪರಾಗಿ ಮೆರೆಯುತ್ತಿದ್ದರು. ಅವರನ್ನು ಮೋಸದಿಂದ ಕೊಂದು ಈ ಶಿವಾಜಿಯು ದೊಡ್ಡವನಾಗಿದ್ದಾನೆ. ಈಗ ಇವನ ಪೌರುಷವು ಗೊತ್ತಾಗುತ್ತದೆ ನಾಳೆಯ ದಿವಸವೇ ಈ ದುರ್ಗವು ಮುರಿದು ಬೀಳುತ್ತದೆ. ನಮ್ಮ ಫಿರಂಗಿಗಳು ಈ ದುರ್ಗವನ್ನು ಒಂದೇ ದಿನದಲ್ಲಿ ಕೆಡವಿಹಾಕುತ್ತವೆ ಸೈನ್ಯಗಳು ದುರ್ಗದ ಮೇಲೇರಿ ಕಾಡುಮೃಗಗಳನ್ನು ಬೇಟೆಯಾಡುವಂತೆ ಬೇಟೆಯಾಡುತ್ತಾರೆ. ಶಿವಾಜಿಯು ಸತ್ತುಬೀಳುತ್ತಾನೆ. ಅಥವಾ ಶರಣಾಗತನಾಗಿ ಬರುತ್ತಾನೆ. ಅಬ್ಬಾ! ಇದಕ್ಕೆ ಇಷ್ಟು ಪ್ರಯಾಸವೇಕೆ? ನಾನು ಈ ಮಹತ್ತರವಾದ ಸೈನ್ಯಗಳನ್ನು ತೆಗೆದುಕೊಂಡು ಬಂದು ಇಷ್ಟೊಂದು ಆಟಾಟೋಪ ಮಾಡ ಬೇಕೇ? ಇಲ್ಲಿ ಯುದ್ಧದ ಪ್ರಮೇಯವಾದರೂ ಏನಿದೆ. ಈ ಪ್ರತಾಪಘಡವು ಅಗೋ ಅಲ್ಲಿ ಕಣ್ಣಿಗೆ ಕಾಣುತ್ತಿದೆ. ಒಂದು ಗಾವುದ ದೂರವಿದೆಯೆಂದು ಮುಂಗಾವಲಿನ ಸೈನಿಕರು ಹೇಳುತ್ತಾರೆ. ಇಷ್ಟು ಹತ್ತಿರ ಬಂದರೂ ಶಿವಾಜಿಯ ಕಡೆಯ ಒಬ್ಬ ಸೈನಿಕರಾದರೂ ಕಾಣುವುದಿಲ್ಲ ಇದೆಂಥಾ ಯುದ್ಧ. ಹಿಂದೂ ಗಳು ಸುಮ್ಮಸುಮ್ಮನೆ ರಾಜರೆಂದುಕೊಳ್ಳುತ್ತಾರೆ. ಜನಗಳಿಂದ ಹಣ ಸುಲಿದು ಭೋಗಪಡುತ್ತಾರೆ. ಅಂತಃಪುರವೆಂದು ಹೆಂಗಸರ ದಂಡುಕಟುತ್ತಾರೆ. ಯುದ್ಧವನ್ನೇ ಅರಿಯರು. ಅವರು ಪುರಾಣ ಗ್ರಂಥಗಳಲ್ಲಿ ಯುದ್ಧ ಯುದ್ಧ" ಎಂದು ಬರದಿಟ್ಟುಕೊಂಡಿದ್ದಾರೆ. ಅದನ್ನೇ ಪಠಿಸಿ ಪಠಿಸಿ ಸಂತೋಷಪಟ್ಟು ಕೊಳ್ಳುತ್ತಾರೆ ಮನೆಯ ಗೋಡೆಗಳ ಮೇಲೆ ಚಿತ್ರಗಳನ್ನು ಬರೆಯುತ್ತಾರೆ. ಅದೇ ಯುದ್ಧವೆಂದುಕೊಳ್ಳುತ್ತಾರೆ, ನಮ್ಮ ಸೈನ್ಯಗಳು ಬರುತ್ತಿವೆಯೆಂದು ಈ ಶಿವಾಜಿಯು ಕೇಳಿಯೇ ಇದ್ದಾನೆ. ಈ ಒಂಬತ್ತು ಗಿರಿದುರ್ಗಗಳನ್ನು ಹಿಡಿದಿರುವ ದುರ್ಗಾಧಿಪತಿಯೆಂದು ಕೊಚ್ಚಿಕೊಳ್ಳುವ ಈ ಶಿವಾಜಿಯು ಯುದ್ಧಪ್ರವೀಣನಾಗಿದ್ದರೆ ಅವನ ಸೈನ್ಯಕ್ಕೆ ಅಷ್ಟು ಶಕ್ತಿಯಿದ್ದರೆ, ಹತ್ತು ಗಾವುದಗಳಾಚೆಯೇ ನಮ್ಮನ್ನು ಎದುರಿಸುತ್ತಿರಲಿಲ್ಲವೇ? ಛೀ ಛೀ, ಇಂತಹ

ಕಾಡುಗಳಲ್ಲಿರುವ ಚೋರರನ್ನು ಹಿಡಿಯುವುದಕ್ಕೆ ನಮ್ಮಂತಹ ಸೇನಾಧಿಪತಿಗಳು ಬರಬಹುದೇ? ನಾವು ಗಳಿಸಿದ ಖ್ಯಾತಿ, ಮೆರೆಯಿಸಿದ ಪರಾಕ್ರಮಗಳಿಗೆ ಇದು ಕುಂದೇ ಸರಿ" ಎಂದು ಪ್ರಶಂಸೆ ಮಾಡಿಕೊಂಡ.

ತೋಪಿನ ದಳಪತಿಯನ್ನು ಕರೆಯಿಸಿ "ನಾಳೆ ಪ್ರಾತಃಕಾಲ ಹತ್ತು ತೋಪಿನ ಗಾಡಿಗಳು ಹೊರಟು ಆಯಕಟ್ಟಿನ ಸ್ಥಳಗಳ ಮೇಲೆ ತೋಪುಗಳನ್ನೇರಿಸಿ ಈ ಕೋಟೆಯನ್ನು ಉಡಾಯಿಸಲಿ. ಕಾಲುಭಟರು ನುಗ್ಗಿ ಕೋಟೆಯನ್ನು ಆಕ್ರಮಿಸಲಿ" ಎಂದು ಅಪ್ಪಣೆ ಮಾಡಿದ.

ಮರುದಿನ ಪ್ರಾತಃಕಾಲ ಟರ್ಕಿಯ ತೋಪಿನ ಘನಾದಾರರು ತೋಪಿನ ಗಾಡಿಗಳನ್ನು ಸಿದ್ಧಪಡಿಸಿ, ಹೊರಟರು ತೋಪಿನ ಗಾಡಿಗಳ ಹಿಂದೆ ಸೈನಿಕರು ಸಜ್ಜಾಗಿ ನಿಂತರು. ಸೈನ್ಯದ ತುತ್ತೂರಿಗಳು ಧ್ವನಿಮಾಡಿದವು.

ಅಫಜಲ್‌ಖಾನನು ತನ್ನ ಗುಡಾರದಲ್ಲಿ ಈ ತುತ್ತೂರಿಯ ಸದ್ದನ್ನು ಕೇಳಿದ. ತೋಪಿನ ಗಾಡಿಗಳು ಹೊರಟವು ಎಂದುಕೊಂಡ.

ತೋಪಿನ ಗಾಡಿಗಳ ಕುದುರೆಗಳು ಮುಂದಕ್ಕೆ ಹೆಜ್ಜೆಯಿಡಲಿಲ್ಲ. ಸೈನಿಕರು ಕಶೆಗಳಿಂದ ಕುದುರೆಗಳನ್ನು ಹೊಡೆದರು. ಕುದುರೆಗಳು ಹೆಜ್ಜೆಯನ್ನು ಮುಂದಿಕ್ಕದೆ ಝುಂಕಾರ ಮಾಡಿದವು. ಸೈನಿಕರು ಕೋಪಗೊಂಡು ಕುದುರೆಯ ಕಾಲುಗಳ ಮೇಲೆ ಚಾವಟಿಗಳಿಂದ ಹೊಡೆದರು. ಕುದುರೆಗಳು ಮುಂದಕ್ಕೆ ಕಾಲಿಡದೇ ಹಿಂದಕ್ಕೆ ತಿರುಗಿ ಮುಗ್ಗರಿಸಿ ಬಿದ್ದುಬಿಟ್ಟವು.

ಈ ಸಮಾಚಾರವು ಅಫಜಲ್‌ಖಾನನ ಕಿವಿಗೆ ಬಿದ್ದಿತು. ಅವನು ಆಶ್ಚರ್ಯದಿಂದ ಬಂದು ನೋಡಿದನು. ತೋಪಿನ ಗಾಡಿಯ ಕುದುರೆಗಳು ಹಿಂತಿರುಗಿ ಮುಗ್ಗರಿಸಿ ಬಿದ್ದು ಝೇಂಕರಿಸುತ್ತಿವೆ. ಸೈನಿಕರು ಗಾಬರಿಗೊಂಡು ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟಿದ್ದಾರೆ.

ಅಫಜಲ್‌ಖಾನನು ಈ ದೃಶ್ಯವನ್ನು ಕಣ್ಣಾರ ನೋಡಿ "ಏಕೆ ಹೀಗಾಯಿತು ? ಏಕೆ ಹೀಗಾಯಿತು ?" ಎಂದು ಕೇಳಿದನು.

ಯಾರೂ ಉತ್ತರ ಕೊಡಲಿಲ್ಲ. ಸುತ್ತಲೂ ತಿರುಗಿ ನೋಡಿದ.

"ಏಕೆ ಹೀಗಾಗಿದೆ? ಸೈನಿಕರು ಏಕೆ ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟಿದ್ದಾರೆ? ಏಕೆ ಯಾರೂ ಉತ್ತರ ಕೊಡುವುದಿಲ್ಲ ?" ಎಂದು ಘರ್ಜಿಸಿದ.

ಸೈನಿಕರು ಗುಸು ಗುಸು ಮಾತನಾಡಿಕೊಂಡರು.

"ಅಪಶಕುನ–ಅಪಶಕುನ" ಎಂದು ಗುಸುಗುಟ್ಟುವ ಧ್ವನಿಯು ಖಾನನ ಕಿವಿಗೆ ಬಿತ್ತು.

ಅವನು "ಅಪಶಕುನ–ಅಪಶಕುನ. ಇದೆಂತಹ ಮಾತು ! ಕುದುರೆಗಳಿಗೆ ಏನೋ ಖಾಯಿಲೆಯಾಗಿದೆ. ಇರಲಿ, ನಾಳೆ ಬೇರೆ ಕುದುರೆಗಳನ್ನು ಕಟ್ಟಿ ತೋಪುಗಾಡಿಗಳನ್ನು ಹೊರಡಿಸಿರಿ" ಎಂದು ಹೇಳಿ ತನ್ನ ಗುಡಾರಕ್ಕೆ ಹಿಂತಿರುಗಿದ.

ಖಾನನು ತನ್ನ ಗುಡಾರದಲ್ಲಿ ಏಕಾಂತವಾಗಿ ಚಿಂತೆಗೊಳಗಾದ. "ಅಪಶಕುನ–ಅಪಶಕುನ ಆ ಮಾತು ನಿಜ. ನಾನು ಈ ಯುದ್ಧಕ್ಕೆ ಹೊರಟಂದಿನಿಂದಲೂ ಅಪಶಕುನವೇ. ಬಿಜಾಪುರದ ಅರಮನೆಯಲ್ಲಿ ಬೇಗಂ ಸಾಹೇಬಳು ನನ್ನನ್ನು ಉತ್ಸಾಹದಿಂದ ಆಲಂಗಿಸಿ, ಪ್ರಾರ್ಥನೆ ಮಾಡಿ ಬೀಳ್ಕೊಡುವಳೆಂದು ಉತ್ಸಾಹದಿಂದ ಅರಮನೆಗೆ ಹೋದೆ. ಅಲ್ಲಿ ಎಂದೂ ಕಾಣದ ದುಃಖದ ಮೋರೆಯ ಬೇಗಂಸಾಹೇಬಳು ದೀನವಾಣಿಯಿಂದ ಅಳುತ್ತಾ "ಯುದ್ಧಕ್ಕೆ ಹೋಗು" ಎಂದು ಹೇಳಿದಳು. ಇದು ಅಪಶಕುನವಲ್ಲವೆ ?

"ಆ ರಾತ್ರಿ ನಾನು ಕಂಡ ದುಃಸ್ವಪ್ನ–ಆಹಾ, ಎಂಥಹ ಭಯಂಕರ ಸ್ವಪ್ನ. ಅದು ಅಪಶಕುನವಲ್ಲವೇ ? ಅದು ಅಶುಭವಲ್ಲವೆ ?

"ನಾನು ಗಂಧರ್ವಲೋಕದ ಅಮೃತಪುತ್ಥಳಿಗಳಂತಿದ್ದ ಆಸ್ತ್ರೀಯರನ್ನು ಕೊಂದುಹಾಕಿದುದು ಅಶುಭವಲ್ಲವೆ ?

ಇಂದು ಯುದ್ಧದ ಆರಂಭದಲ್ಲಿ ಸಂಭವಿಸಿದ ವಿಘಾತವು ಅಶುಭವಲ್ಲವೆ?

ಸೈನಿಕರ ಮನಸ್ಸಿನಲ್ಲಿ ಈ ಅಶುಭ–ಅಪಶಕುನಗಳು ಕರಾಳರೂಪದಿಂದ ಕುಣಿಯುತ್ತಿರುವಾಗ ಜಯವೆಂದರೆ ಎಲ್ಲಿ ಬರಬೇಕು ? ಜಯವು ತೋಳು ಬಲದಲ್ಲಿಲ್ಲ. ಹರಿತವಾದ ಅಸ್ತ್ರಗಳಲ್ಲಿಲ್ಲ. ಭಯಂಕರವಾದ ತೋಪಿನ ಗುಂಡುಗಳಲ್ಲಿಲ್ಲ. ಅದಿರುವುದು ವೀರಪುರುಷರ ಕೆಚ್ಚೆದೆಯಲ್ಲಿ. ಅಂಥಾ ಕೆಚ್ಚೆದೆಯ ವೀರರಿಗೆ ಜಯವು ಲಭಿಸುತ್ತದೆ" ಎಂದುಕೊಂಡನು.

ಉತ್ತರ ಕ್ಷಣದಲ್ಲಿಯೇ ತಾನು ಯುದ್ಧಕ್ಕೆ ಹೊರಟ ಹಿಂದಿನ ರಾತ್ರಿಯ ನೆನಪು ಬಂದಿತು. ಬೇಗಂ ಸಾಹೇಬಳ ದೈನ್ಯ ಸ್ವರೂಪವು ಮುಂದೆಬಂದಿತು. ಆ ರಾತ್ರಿ ಷಾಜಿಯವರಲ್ಲಿ ನಾನು ಆಶೀರ್ವಾದ ಬೇಡಲು ಹೋಗಿದ್ದೆನಲ್ಲವೆ ?

ಅವರೇನು ಹೇಳಿದರು? "ನಿನ್ನಂಥಾ ವಿಖ್ಯಾತನಾದ ಶೂರ ಪುರುಷನಿಗೆ ಸಂಧಾನವು ಕಳಂಕವಾಗದು. ನೀನು ಶಿವಾಜಿಯನ್ನು ಸಂಧಾನದಿಂದ ವಶಪಡಿಸಿಕೋ. ಅವನನ್ನು ಉಪಾಯದಿಂದ ಇಲ್ಲಿಗೆ ಕರೆತಂದರೆ ಅವನು ನಮ್ಮ ವಶವರ್ತಿಯಾಗುತ್ತಾನೆ" ಎಂದವರು ಹೇಳಲಿಲ್ಲವೆ? ಆ ಮಾತನ್ನು ಈಗ ನಾನು ಪಾಲಿಸಿ ನೋಡಬಾರದೇಕೆ?

ಒಂದು ಬಾರಿ ಶಿವಾಜಿಗೆ ಸಂಧಿಯ ಸಂಧಾನವನ್ನು ಕಳುಹಿಸಿಕೊಡಬೇಕು. ನಾನು ಮೊದಲೇ ಷಾಜಿಯವರಿಗೆ ವಚನಕೊಟ್ಟಿದ್ದೇನೆ. ಶಿವಾಜಿಯು ಈ ಕಟ್ಟ ಕಡೆಗಾದರೂ ನಮಗೆ ಶರಣಾಗತನಾಗಿ ಬಂದರೆ ಪ್ರಾಣಭಿಕ್ಷೆಯನ್ನು ನೀಡಲು ನಾನೂ ಸಂತೋಷವಾಗಿದ್ದೇನೆ. ಶಿವಾಜಿಯಂಥಾ ವೀರಪುರುಷನು ನನ್ನೊಡನೆ ಸ್ನೇಹದಿಂದ ನಡೆದುಕೊಂಡರೆ ಆ ಸ್ನೇಹವು ಸತ್ಯವಾದುದಾದರೆ ಡೆಲ್ಲಿಯ ಬಾದಷಹನು ಬಿಜಾಪುರದ ಕಡೆಗೆ ಕಣ್ಣೆತ್ತಿ ನೋಡುವ ಸಾಹಸ ಮಾಡುವುದಿಲ್ಲ" ಎಂದು ಆಲೋಚನೆಮಾಡಿದ. ತನಗೆ ಆಪ್ತರಾದ ಸೇನಾಧಿಪತಿಗಳನ್ನು ಕರೆಸಿದ. ಅವರನ್ನು ಕುರಿತು ಅಫಜಲ್‌ಖಾನನು ಅಪ್ಪಣೆ ಮಾಡಿದ.

"ರಸೂಲ್‌ಖಾನ್, ಮಹಮದ್‌ಖಾನ್, ನೀವಿಬ್ಬರೂ ಪ್ರತಾಪಘಡಕ್ಕೆ ಹೋಗಿರಿ, ಶಿವಾಜಿಯನ್ನು ಭೇಟಿಮಾಡಿರಿ. ನಾವೇ ಸಂಧಿ ಪ್ರಸ್ತಾಪವನ್ನು ಮೊದಲು ಮಾಡಿದ್ದೇವೆಂದು ಅವನಿಗೆ ತಿಳಿಸಿರಿ. ಮೊದಲಿನಿಂದಲೂ ಈ ಗಿರಿದುರ್ಗಗಳು ಬಿಜಾಪುರಕ್ಕೆಸೇರಿದವುಗಳು. ಈ ಎಲ್ಲದುರ್ಗಗಳನ್ನೂ ಶಿವಾಜಿಯು ದುರಾಕ್ರಮಣ ಮಾಡಿದ್ದಾನೆ. ಅವೆಲ್ಲವೂ ಆದಿಲ್‌ಷಾಹಿಯ ದುರ್ಗಗಳೆಂದು ಶಿವಾಜಿಯು ಪತ್ರ ಬರೆದುಕೊಡಬೇಕು. ಅವನು ಸುಲ್ತಾನರಿಗೆ ಶರಣಾಗತನಾಗಬೇಕು. ಅವನನ್ನು ಈ ಗಡಿಪ್ರಾಂತದ ಮಹಾರಾಜನೆಂದು ನಾವೇ ಪ್ರತಿಷ್ಠಿಸುತ್ತೇವೆ. ಅವನು ತ್ರಿಕರಣಪೂರ್ವಕವಾಗಿ ಆದಿಲ್‌ಷಾಹಿಯ ಸಾಮಂತನೆಂದು ಒಪ್ಪಿಕೊಂಡು ನಡೆಯಬೇಕು, ಅಫಜಲ್‌ಖಾನನು ಸ್ನೇಹಹಸ್ತವನ್ನು ನೀಡಿದ್ದಾನೆಂದು ಶಿವಾಜಿಗೆ ತಿಳಿಸಿರಿ. ಅದನ್ನು ಮರ್ಯಾದೆಯಿಂದ ಪರಿಗ್ರಹಿಸಿದರೆ ಕ್ಷೇಮವಾಗುವುದೆಂದು ತಿಳಿಸಿರಿ" ಎಂದು ಹೇಳಿ ಕಳುಹಿಸಿದ.

ಶಿಬಿರದಲ್ಲಿದ್ದ ಮುತ್ಸದ್ದಿ ಕೃಷ್ಣರಾಯನನ್ನು ಅಂತರಂಗದಲ್ಲಿ ಅಫಜಲ್ ಖಾನನು ಕರೆಸಿಕೊಂಡು ಹೇಳಿದ.

"ಕೃಷ್ಣರಾವ್, ನೀವು ವಂಶಪಾರಂಪರ್ಯವಾಗಿ ಆದಿಲ್‌ಷಾಹಿಯ ಉಪ್ಪುಂಡು ಬದುಕುತ್ತಿರುವವರು. ನೀನು ಹಿಂದು, ಆದರೂ ಸತ್ಯವಂತನಾದ ಹಿಂದು. ಸ್ವಾಮಿನಿಷ್ಠೆಯುಳ್ಳ ಹಿಂದು. ನನ್ನ ಮಾತುಗಳನ್ನು ಶಿವಾಜಿಗೆ ಹೇಳು. ಇವು ಅಧಿಕಾರವಾಣಿಯಿಂದ ಹೇಳುವ ಮಾತಲ್ಲ, ಸೋದರ ಪ್ರೇಮದಿಂದ ಹೇಳುವ ಮಾತೆಂದು ಹೇಳು. ನಾನು ಷಾಜಿಯವರ ಶಿಷ್ಯ. ಅವರಿಂದ ಉನ್ನತ ಸ್ಥಾನಗಳಿಗೆ ಏರಿದವನು. ಯುದ್ಧದಿಂದ ಏನೂ ಫಲವಾಗುವುದಿಲ್ಲ. ಶಿವಾಜಿಯ ಸೈನ್ಯಗಳು ನಮ್ಮ ಸೇನಾಬಲಕ್ಕೆ ಸಾಟಿಯಲ್ಲ. ಎಷ್ಟು ಪರಾಕ್ರಮದಿಂದ ಹೋರಾಡಿದರೂ ಅವರಿಗೆ ಜಯವು ಲಭಿಸುವುದಿಲ್ಲ. ನಾನು ಶಿವಾಜಿಗೆ ಭರವಸೆ ಕೊಡುತ್ತೇನೆ. ಅವನ ಅಧಿಕಾರವನ್ನು ಕಿತ್ತುಕೊಳ್ಳುವುದಿಲ್ಲ. ನಾನು ಅವನನ್ನು ಮತ್ತೂ ಉನ್ನತ ಪದವಿಗೆ ಏರಿಸುತ್ತೇನೆ ಆದರೆ ಒಂದು ಮಾತು. ಅವನು ಪ್ರಾಮಾಣಿಕನಾಗಿ ನಡೆದುಕೊಳ್ಳಬೇಕು. ಕುಟಿಲೋಪಾಯಗಳಿಂದ ಎಲ್ಲಿಯೋ ಒಂದೊಂದುಬಾರಿ ಲಾಭವಾಗಬಹುದು. ಕುಟಿಲೋಪಾಯಕ್ಕೆ ಶಾಶ್ವತವಾದ ಜಯವು ದೊರೆಯುವದಿಲ್ಲ. ಅವನು ಮೊಗಲರ ಕಡೆ ವಾಲುತ್ತಿದ್ದಾನೆಂದು ನಾವು ಕೇಳಿದ್ದೇವೆ. ದಕ್ಖನ್‌ಸರ್ವಾಧಿಕಾರಿಯೆಂದು ಹೇಳಿಕೊಳ್ಳುವ ಆಲಂಷಾನು ಸರಳ ಮನುಷ್ಯ. ವೀರಪುರುಷನಲ್ಲ, ಭೋಗಾಸಕ್ತ. ಅವನ ಸ್ನೇಹವನ್ನು ಶಿವಾಜಿಯು ಸುಲಭವಾಗಿಮಾಡಿಕೊಳ್ಳಬಹುದು. ಈಗಾಗಲೇ ಮಾಡಿಕೊಂಡೇ ಇರಬಹುದು. ಆದರೆ ಔರಂಗಸೇಬ ಬಾದಷಹನು ಎಂದೆಂದಿಗೂ ಶಿವಾಜಿಯನ್ನು ಪುರಸ್ಕರಿಸುವುದಿಲ್ಲ. ಅಂಥಾ ಹುಲ್ಲು ಬೆಂಕಿಗೆ ಸಮಾನವಾದ ಸ್ನೇಹವನ್ನು ನಂಬುವುದು ವಿವೇಕಿಯ ಲಕ್ಷಣವಲ್ಲ. ನೀನು ಈ ಹಿತವಾಕ್ಯಗಳನ್ನು ಅವನಿಗೆ ಹೇಳು. ಇವೆಲ್ಲವೂ ಸಾಚಾ ಮಾತುಗಳು. ಇದರಲ್ಲಿ ಮೋಸವಿಲ್ಲ, ಕೃತ್ರಿಮವಿಲ್ಲ. ಅಫಜಲ್ ಖಾನನು ಎಂದೂ ಯುದ್ಧಕ್ಕೆ ಹಿಂತೆಗೆಯುವನಲ್ಲ. ನನ್ನ ಜನ್ಮದಲ್ಲಿ ನಾನಾಗಿ ಎಂದೂ ಯಾರೊಡನೆಯೂ ಸಂಧಿ ಪ್ರಸ್ತಾಪವನ್ನು ಮಾಡಿದವನಲ್ಲ. ಇದು ಶಿವಾಜಿಯ ಮೇಲಿನ ಅನುಗ್ರಹವೆಂದು ಹೇಳು. ನೀನು ರಸೂಲ್‌ಖಾನ್,

ಮಹಮದ್ ಖಾನರೊಂದಿಗೆ ಪ್ರತಾಪಘಡಕ್ಕೆ ಹೋಗು" ಎಂದು ಹೇಳಿದ.

ಕೃಷ್ಣರಾಯನು ಎದ್ದು ನಿಂತು ಸಲಾಂಮಾಡಿ "ಜಹಪನಾ, ನನ್ನದೊಂದು ಬಿನ್ನಹವಿದೆ. ತಮ್ಮ ಮಾತಿಗೆ ಪ್ರತಿ ಹೇಳುತ್ತೇನೆಂದು ಭಾವಿಸಬಾರದು. ತಮ್ಮ ಅಪ್ಪಣೆಯಂತೆ ಹುಲಿಯ ಬಾಯಿಯಲ್ಲಾದರೂ ತಲೆ ಯಿಡಲು ಸಿದ್ಧನಾಗಿದ್ದೇನೆ. ಘಟಸರ್ಪವನ್ನಾದರೂ ಕೊರಳಿಗೆ ಸುತ್ತಿಕೊಳ್ಳ ಬಲ್ಲೆ. ಆದರೆ ಆ ಶಿವಾಜಿಯ ಸಹವಾಸವು ಅತಿಕಷ್ಟ. ಕೌಟಿಲ್ಯವೇ ಅವನ ಮಾರ್ಗ. ಮೋಸವೇ ಅವನ ತಂತ್ರ. ನಾನು ಹೋಗಿ ಏನಾದರೊಂದು ಮಾತನ್ನು ತಂದು ಇಲ್ಲಿ ಹೇಳಿ ಅವನು ಬಿಗಡಾಯಿಸಿಕೊಂಡರೆ ನನ್ನಪ್ರಾಣಕ್ಕೆ ಸಂಚಕಾರ ಬರುತ್ತದೆ. ನೀವು ನನ್ನಲ್ಲಿ ಎಷ್ಟೋ ಪ್ರೇಮವಿಟ್ಟಿದ್ದರೂ ನಾನು ಹಿಂದು. ದೈವವು ಪ್ರತಿಕೂಲವಾದಾಗ ಈ ಹಿಂದೂ ಎಂಬ ಭಾವನೆಯು ಮೇಲೆದ್ದು ನನ್ನ ಸರ್ವನಾಶವಾಗುತ್ತದೆ. ಜಹಪನಾ, ನನ್ನ ಮಾತನ್ನು ಕ್ಷಮಿಸಿರಿ" ಎಂದು ಹೇಳಿದ

ಅಫಜಲ್ ಖಾನನು "ಕೃಷ್ಣರಾವ್, ನೀನು ಹೇಳಿದ ಮಾತುಗಳೇನೋ ಸರಿಯಾದವುಗಳೇ. ಈಗಿನ ಪ್ರಕರಣ ಅಂತಹದಲ್ಲ. ಶಿವಾಜಿಯು ಸಾಕ್ಷಾತ್ ತಂದೆ ಷಾಜಿಯವರೇ ಅವನನ್ನು ನಂಬುವದಿಲ್ಲ. ನಾವು ಅವನ ಮಾತ್ಯ ಗಳಿಗೆ, ಅವನ ಕುತಂತ್ರಗಳಿಗೆ ಏಕೆ ಕಿವಿಗೊಡುತ್ತೇವೆ? ಒಂದು ಬಾರಿ ಅವನಿಗೆ ಅವಕಾಶ ಕೊಡೋಣ. ನಾಳೆ ಯುದ್ಧಮಾಡಿದ ಮೇಲೆ ಅವನು ಶರಣಾಗತನಾಗಿ ಬರುತ್ತಾನೆ. ಆಗ ನಾವು 'ನಿನಗೆ ಮೊದಲೇ ಎಚ್ಚರಿಕೆ ಕೊಟ್ಟಿವು. ನಮ್ಮ ಹಿತವಾಕ್ಯಗಳನ್ನು ನೀನು ಕೇಳಲಿಲ್ಲ. ಈಗ ಬಂದು ಬೇಡಿದರೆ ಫಲವೇನು?' ಎಂದು ಹೇಳಬಹುದು.ಅವನಿಗೆ ಆಗ ಬೇಡುವುದಕ್ಕೂ ಬಾಯಿಲ್ಲದೇ ಹೋಗುತ್ತದೆ" ಎಂದು ಹೇಳಿದ.

ಬಿಜಾಪುರದ ರಾಯಭಾರಿಗಳು ಮೂವರೂ ಪ್ರತಾಪಘಡಕ್ಕೆ ಹೋಗಿ ಶಿವಾಜಿಯ ಭೇಟಿಯನ್ನು ಕೇಳಿದರು. ಶಿವಾಜಿಗೆ ಆಶ್ಚರ್ಯವಾಯಿತು. "ಬಿಜಾಪುರದವರು ಒಂದು ಬಾರಿಯಾದರೂ ನಮ್ಮೊಡನೆ ಯುದ್ಧಮಾಡಿಲ್ಲ. ನಮ್ಮ ಕೈಚಳಕ ನೋಡಿಲ್ಲ. ಅದರಲ್ಲಿಯೂ ವಿಖ್ಯಾತನಾದ ಸೇನಾಧಿಪತಿ ಅಫಜಲ್ ಖಾನನು ಬಂದಿದ್ದಾನೆ. ಬರುವ ದಾರಿಯಲ್ಲಿ ಅವನು ನಡೆಸಿರುವ ಘೋರ ಕೃತ್ಯಗಳು, ತುಳಜಾಪುರ ಫಂಡರಪುರಗಳ ವಿನಾಶಕಾರ್ಯಗಳು ಇಂಥಾ

ದುಷ್ಕೃತ್ಯಗಳನ್ನು ಮಾಡಿ ಹಿಂದೂ ಧರ್ಮಕ್ಕೆ ಅಪಮಾನಮಾಡುತ್ತಾ ಬಂದಿರುವ ಈ ಖೂಳನು ತಾನಾಗಿ ಸಂಧಾನಕ್ಕೆ ಹೇಳಿಕಳುಹಿಸುವುದೆಂದರೇನು ? ಇದರಲ್ಲೇನೋ ಛದ್ಮಸೇಯಿರಬೇಕು. ಇರಲಿ, ಬಂದ ರಾಯಭಾರಿಗಳನ್ನು ಮಾತನಾಡಿ ಕಳುಹಿಸೋಣ" ಎಂದುಕೊಂಡು ಆ ರಾಯಭಾರಿಗಳನ್ನು ಆದರ ಗೌರವಗಳಿಂದ ಬರಮಾಡಿಕೊಂಡ.

ಶಿವಾಜಿಯ ಅರಮನೆಯ ದಿವಾನ್‌ಖಾನೆಯಲ್ಲಿ ರಾಯಭಾರಿಗಳು ಬಂದು ಶಿವಾಜಿಯ ಭೇಟಿಯನ್ನು ತೆಗೆದುಕೊಂಡರು. ಶಿವಾಜಿಯು ಅತ್ಯಂತ ವಿನಯದಿಂದ ಸ್ವಾಗತಿಸಿದ.

ಅವರುಗಳನ್ನು ಕೈಹಿಡಿದು ಆಸನಗಳ ಮೇಲೆಕುಳ್ಳಿರಿಸಿ,ಮರ‍್ಯಾದೆಮಾಡಿ "ನೀವು ಯುದ್ಧ ಸಂದರ್ಭದಲ್ಲಿ ದರ್ಶನವಿತ್ತುದು ಬಹಳ ಸಂತೋಷ. ನೀವು ಏನು ಹೇಳಬೇಕೆಂದಿದ್ದರೂ ಹೇಳಬಹುದು. ಇಂದು ಯುದ್ಧ ಬಂದಿದೆ. ನಾವೂ ಯುದ್ಧಕ್ಕೆ ಸಿದ್ಧರಿದ್ದೇವೆ. ಆದರೆ ಎಂದಾದರೂ ನಾನು ನಿಮ್ಮವನೇ. ನೀವು ಸಂಕೋಚಪಡಬೇಡಿರಿ. ಹೇಳಿರಿ. ನಿಮ್ಮ ಸೇನಾಧಿಪತಿಗಳು ಏನು ಹೇಳಿ ಕಳುಹಿಸಿದ್ದಾರೋ ಅದನ್ನು ಸ್ಪಷ್ಟವಾಗಿ ಹೇಳಿರಿ. ನಾವು ಅಫಜಲ್ ಖಾನರ ವೀರ ಪರಾಕ್ರಮಗಳನ್ನು ಕೇಳದವರಲ್ಲ ಅವರ ಖ್ಯಾತಿಯನ್ನು ಅಲ್ಲಗಳೆಯುವವರಲ್ಲ. ಹೇಳಿರಿ" ಎಂದು ಮಾತಿಗೆ ಮೊದಲಿಟ್ಟ.

ರಸೂಲ್ ಖಾನನು "ಶಿವಾಜೀ ಮಹಾರಾಜರೇ, ನೀವು ನಮ್ಮ ಷಾಜಿಯವರ ಮಕ್ಕಳು ನಾವು ಅವರಿಂದ ಮುಂದೆ ಬಂದವರು. ಆ ಅಂಶವನ್ನು ನೆನಪಿಟ್ಟುಕೊಂಡು ನಾವುಗಳು ಮಾತನಾಡಬೇಕು. ಬಿಜಾಪುರದ ದೊಡ್ಡ ಸುಲ್ತಾನರು ಕಾಲಗತಿಯನ್ನೈದಿದರು. ಈಗ ಬಾಲಕರಾದ ಸುಲ್ತಾನರು. ಅವರನ್ನು ಮುಂದಕ್ಕೆ ತರುವುದು ನಮ್ಮೆಲ್ಲರ ಕರ್ತವ್ಯ. ಬಾದಷಹ ಔರಂಗಜೇಬರ ವಿಚಾರ ನಿಮಗೆ ಗೊತ್ತೇ ಇದೆ. ಅವರು ಆದಿಲ್ ಷಾಹೀ ದೌಲತನ್ನು ನಾಶಮಾಡಬೇಕೆಂದು ಸಂಕಲ್ಪ ತೊಟ್ಟಿದ್ದಾರೆ. ಮೊಗಲ್ ರಾಜ್ಯ ಮತ್ತು ಆದಿಲ್‌ಷಾಹೀ ರಾಜ್ಯಗಳ ನಡುವೆ ಈ ಗಿರಿದುರ್ಗಗಳಿವೆ. ಇವುಗಳೆಲ್ಲಾ ನಮ್ಮ ರಾಜ್ಯಕ್ಕೆ ಸೇರಿದವುಗಳು. ಅದನ್ನು ನೀವೂ ಒಪ್ಪುವಿರಿ. ನೀವು ಪರಾಕ್ರಮದಿಂದ ಈ ದುರ್ಗಗಳನ್ನು ಆಕ್ರಮಿಸಿದ್ದೀರಿ. ಪದೇ ಪದೇ ಮೊಗಲ್ ದರ್ಬಾರಿನವರು ನಿಮ್ಮ ಮೇಲೆ ದೂರು ಕೊಡುತ್ತಿದ್ದಾರೆ. ಇತ್ತ ದಕ್ಖನ್ನಿನ

ಮೊಗಲ್ ಸರ್ವಾಧಿಕಾರಿ ಆಲಂ ಷಾರೊಡನೆ ನೀವು ಗೆಳೆತನ ಮಾಡಿದ್ದೀರೆಂದು ಗುಪ್ತಚಾರರು ನಮ್ಮ ದರ್ಬಾರಿಗೆ ಅರಿಕೆ ಮಾಡಿದ್ದಾರೆ. ಇವೆರಡೂ ಪರಸ್ಪರ ವಿರುದ್ಧ ಸಂಗತಿಗಳಾಗಿವೆ. ಹೇಗೇ ಆಗಲಿ, ನಿಮ್ಮ ಮತ್ತು ನಮ್ಮ ದರ್ಬಾರಿನ ಸಂಬಂಧವು ಇತ್ಯರ್ಥವಾಗಿಬಿಡಬೇಕು. ನಿಮ್ಮನ್ನು ಈ ಗಿರಿದುರ್ಗಗಳಿಂದ ಓಡಿಸಿಬಿಡಬೇಕೆಂದು ನಮ್ಮ ದರ್ಬಾರಿನವರು ಇಷ್ಟಪಡುವುದಿಲ್ಲ. ನೀನೇ ಈ ದರ್ಬಾರಿನ ಅಧೀನರಾಗಿರಬೇಕು. ಇದೇ ನಮ್ಮ ಸೇನಾಧಿಪತಿಗಳ ಇಷ್ಟ. ಯಾವುದಾದರೊಂದನ್ನು ಇತ್ಯರ್ಥ ಮಾಡಿಬಿಡಿರಿ. ನಮ್ಮ ಸೇನಾಧಿಪತಿಗಳೇ ಔದಾರ್ಯದಿಂದ ನಿಮಗೆ ಸಂಧಿ ಪ್ರಸ್ತಾಪವನ್ನು ಕಳುಹಿಸಿದ್ದಾರೆ. ಸಂಧಿಗೆ ಒಪ್ಪುವುದಾದರೆ ಸಂತೋಷ. ನಮ್ಮ ಸೇನಾಧಿಪತಿಗಳ ಸಮ್ಮುಖಕ್ಕೆ ಬಂದು ಸಂಧಿ ಮಾಡಿಕೊಳ್ಳಿರಿ. ಅದರೆ ಎಂದೆಂದಿಗೂ ಮಾತಿಗೆ ತಪ್ಪಕೂಡದು. ಇಲ್ಲದಿದ್ದರೆ ಯುದ್ಧ ಮಾಡದೇ ನಿರ್ವಾಹವಿಲ್ಲ. ನಮ್ಮ ಸೈನ್ಯಗಳು ತಮ್ಮ ದುರ್ಗದ ಬಾಗಿಲಿಗೆ ಬಂದು ನಿಂತಿವೆ. ತೋಪುಗಳು ಈ ಕೋಟೆಯನ್ನು ವೃಷ್ಟಿಜ್ವಾಲೆಗಳಿಂದ ನೋಡುತ್ತಿವೆ. ನೀವು ಸೌಜನ್ಯದಿಂದ ಉತ್ತರ ಕೊಡಿರಿ. ಷಾಜಿಯವರ ಮೇಲೆ ಆಣೆಯಿಟ್ಟು ಮಾತನಾಡಿರಿ" ಎಂದು ಹೇಳಿದ.

ಶಿವಾಜಿಯು "ಸೇನಾಧಿಪತಿಗಳೇ, ನಾನು ನಿಮ್ಮ ಮುಂದೆ ಮಾತಿನ ಪದಾಕ್ರಮವನ್ನು ತೋರುವುದಿಲ್ಲ. ಪ್ರಖ್ಯಾತ ಸೇನಾಧಿಪತಿಗಳಾದ ಅಫಜಲ್ ಖಾನರವರೇ ಸಂಧಿಗೆ ಹೇಳಿ ಕಳುಹಿಸಿರುವುದು, ನನ್ನನ್ನು ಅತ್ಯಂತ ಗೌರವಿಸಿದಂತೆ ಆಗಿದೆಯೆಂದು ಮನಸಾರೆ ಒಪ್ಪುತ್ತೇನೆ. ಆ ಗೌರವಕ್ಕೆ ತಲೆಬಾಗಿ ಅಭಿನಂದಿಸುತ್ತೇನೆ. ಸೇನಾಧಿಪತಿಗಳೇ ! ನಿಮ್ಮನ್ನು ನಿಜವಾಗಿಯೂ ಸಹೋದರರಂತೆ ಭಾವಿಸುತ್ತೇನೆ. ಈ ಗಿರಿದುರ್ಗಗಳ ಹಂಬಲವನ್ನು ನೀವು ಇಟ್ಟುಕೊಳ್ಳಬೇಡಿರಿ. ಇದಕ್ಕೆ ಇಷ್ಟೊಂದು ಪ್ರಚಂಡ ಸೈನ್ಯ ತರಬೇಕಾಗಿಲ್ಲ. ಈ ರಾಜ್ಯದಲ್ಲಿಯೇ ಹತ್ತಾರು ಯುದ್ಧಗಳಲ್ಲಿ ಜಯಗಳಿಸಿರುವ ಬಾದಷಹ ಔರಂಗಸೇಬನಿಗೆ ಎದುರು ನಿಂತು ವರ್ಷಗಟ್ಟಲೆ ಜಗ್ಗದೇ ಸೆಣಸಿರುವ ವಿಖ್ಯಾತ ಸೇನಾಧಿಪತಿ ಅಫಜಲ್ ಖಾನರು ಇಲ್ಲಿಯವರೆಗೆ ಬರಬೇಕಾಗಿಲ್ಲ. ಬಂದಿರುವುದು ನಮ್ಮ ಭಾಗ್ಯವೆಂದು ಒಪ್ಪಿಕೊಳ್ಳುತ್ತೇನೆ. ಅವರ ದರ್ಶನ ಮಾಡುವುದು ವೀರಪುರುಷರಿಗೆ ಭಾಗ್ಯೋದಯವೆಂದು ನಾನು ಮುಕ್ತಕಂಠದಿಂದ

ಹೇಳುತ್ತೇನೆ. ಆದರೆ ಇಲ್ಲಿಗೆ ಬಂದಿರುವ ಇಬ್ಬರು ಸೇನಾಧಿಪತಿಗಳ ಕೈಗೆ ಈ ಒಂಬತ್ತು ದುರ್ಗಗಳನ್ನೂ ಒಪ್ಪಿಸಿಕೊಟ್ಟು ನಾವುಗುಡ್ಡ ಗಾಡುಗಳಿಗೆ ಹೊರಟು ಹೋಗುತ್ತೇವೆ. ಸೊಪ್ಪು ಗೆಡ್ಡೆಗಳನ್ನು ತಿಂದು ಜೀವಿಸುತ್ತೇವೆ. ಸೇನಾಧಿಪತಿಗಳೇ ! ನನಗೆ ಅಧಿಕಾರದ ಆಸೆಯಿಲ್ಲ. ನೀವೇ ಹೇಳಿದಿರಲ್ಲಾ, ಡೆಲ್ಲಿ ಬಾದಷಹರ ಸ್ನೇಹ ಮಾಡುತ್ತಿದ್ದೇನೆಂದು. ಅಧಿಕಾರದ ಆಸೆಯಿದ್ದರೆ ಬಾದಷಹ ಔರಂಗಸೇಬನ ದರ್ಬಾರಿನಲ್ಲಿ ಪ್ರಸಿದ್ಧ ಸೇನಾಧಿಪತಿ ಜಯಸಿಂಹನಿಗೆ ಸರಿ ಸಮಾನವಾದ ಅಧಿಕಾರವನ್ನು ಸಂಪಾದಿಸಬಲ್ಲೆ. ಅದು ನನ್ನ ಅಭಿಲಾಷೆಯಲ್ಲ.

"ಸೋದರರೇ, ನಾನು ಅಫಜಲ್ ಖಾನರ ಅಡಿಗೆರಗಿ ಸಂಧಿಯನ್ನು ಮಾಡಿಕೊಳ್ಳಲು ಸಿದ್ಧನಾಗಿದ್ದೇನೆ. ನನ್ನ ಸಂಧಿಯ ಬೇಡಿಕೆಗಳು ಬೇರೆಯಾಗಿವೆ, ಅದು ನಿಮ್ಮ ದರ್ಬಾರಿನವರಿಗೆಲ್ಲರಿಗೂ ಕಹಿಯಾಗಿರಬಹುದು. ನಾನು ನಿಮ್ಮಲ್ಲಿಯೂ ಬೇಡುತ್ತೇನೆ. ಮೊಗಲ್ ಬಾದಷಹರಲ್ಲಿಯೂ ಬೇಡುತ್ತೇನೆ ನನ್ನ ಬೇಡಿಕೆಯು. "ಹಿಂದೂ ಧರ್ಮವನ್ನು ನಾಶ ಮಾಡಬೇಡಿರಿ. ದೇವಾಲಯಗಳನ್ನು ಹಾಳುಮಾಡಬೇಡಿರಿ. ದೇವಮೂರ್ತಿಗಳನ್ನು ಒಡೆಯಬೇಡಿರಿ. ನಮ್ಮ ಮುಂದೆ ಗೋವುಗಳನ್ನು ಕಡಿಯಬೇಡಿರಿ. ಇದೇ ನಮ್ಮ ಬೇಡಿಕೆಗಳು ನೋಡಿ ಮುಸಲ್ಮಾನ ಸರದಾರರೇ. ಈ ಗಿರಿದುರ್ಗಗಳು ಇತ್ತ ಕಡೆಯಿಂದ ಪಶ್ಚಿಮ ಸಮುದ್ರದವರೆಗೆ, ಈ ಎದುರಿಗೆ ಕಾಣುವ ಸಹ್ಯಾದ್ರಿಯ ಆಚೆ ಬಹುದೂರದವರೆಗೆ ನಮ್ಮ ಸೈನ್ಯಗಳು ಹೆಜ್ಜೆ ಹೆಜ್ಜೆಗೂ ಯುದ್ಧ ಮಾಡಿ ಜಯಗಳಿಸಿವೆ. ಇಷ್ಟು ಪ್ರದೇಶಗಳಲ್ಲಿ ಒಂದು ಮಸೀದಿಯ ಕಲ್ಲನ್ನಾದರೂ ನಾವು ಅಲ್ಲಾಡಿಸಿದ್ದೇವೆಯೇ? ಒಂದು ಖುರಾನಿನ ಪವಿತ್ರ ಗ್ರಂಥವನ್ನಾದರೂ ನಾಶಪಡಿಸಿದ್ದೇವೆಯೆ? ಒಬ್ಬ ಮಹಮ್ಮದೀಯ ಸ್ತ್ರೀಯಳನ್ನಾದರೂ ಕಣ್ಣೆತ್ತಿ ನೋಡಿ ಅಪಮಾನ ಪಡಿಸಿದ್ದೇವೆಯೇ? ನನ್ನ ಬೇಡಿಕೆಗಳು ಇವು," ಎಂದು ಹೇಳಿದ.

ಆ ಸೇನಾಧಿಪತಿಗಳಿಬ್ಬರೂ ಮಂಕುಬಡಿದು ಕುಳಿತರು.

ಕೃಷ್ಣರಾಯನು "ಶಿವಾಜೀ ಮಹಾರಾಜರೇ, ನನ್ನ ಪರಿಚಯವಿದೆಯೇ ನಿಮಗೆ ಬಾಲ್ಯದಲ್ಲಿ ಷಾಜಿಯವರ ಸಮ್ಮುಖದಲ್ಲಿ ನನ್ನನ್ನು ನೋಡಿರುವ ನೆನಪಿದೆಯೇ? ಅಂದಿನಿಂದ ಇಂದಿನವರೆಗೆ ಷಾಜಿಯವರ ಅಭಿಮಾನವು ನನ್ನ

ಮೇಲೆ ಅಚ್ಚಳಿಯದೇ ಸ್ಥಿರವಾಗಿದೆ. ಹಿಂದೂವಾದರೂ ದರ್ಬಾರಿನಲ್ಲಿ ನನ ಗಿರುವ ಗೌರವಕ್ಕೆ ಕುಂದು ಬಂದಿಲ್ಲ. ಹಿಂದುಗಳ ಮೇಲೆ ದುರಂತಗಳು ನಡೆಯುತ್ತಿರುವುದೇನೋ ನಿಜ. ಅದು ಮುಸಲ್ಮಾನ್ ಸೈನಿಕರ ಹುಟ್ಟು ಗುಣ. ನೀವು ನಮ್ಮ ಮಾತಿಗೆ ಬೆಲೆ ಕೊಡುತ್ತೀರೆಂದು ನನ್ನ ನಂಬಿಕೆಯಿದೆ. ಷಾಜೀಯವರೂ ನಿಮಗೆಹಿತವಚನಗಳನ್ನು ಹೇಳಬೇಕೆಂದು ನನಗೆ ಅಜ್ಞಾಪಿಸಿ ದ್ದಾರೆ ನೀವು ಕೇಳುವ ಬೇಡಿಕೆಗಳೆಲ್ಲಾ ಶತಮಾನ ಶತಮಾನಗಳಾದರೂ ಸಿದ್ಧಿಸುವ ಮಾತಲ್ಲ ಅದನ್ನು ರಾಜಕೀಯ ಪ್ರಸಂಗದಲ್ಲಿ ಷರತ್ತುಗಳಾಗಿ ಮಾಡಿಕೊಂಡರೆ ಯಾರೂ ಭರವಸೆಕೊಡಲಾಗುವುದಿಲ್ಲ. ನಿಮಗಿರುವಂತೆಯೇ ನನಗೂ ಧರ್ಮಾಭಿಮಾನವಿದೆ. ನಮ್ಮಿಬ್ಬರಿಗಿಂತಲೂ ಷಾಜಿಯವರಿಗೆ ಹೆಚ್ಚಿನ ಧರ್ಮಾಭಿಮಾನವಿದೆ. ಡೆ ಯ ದರಬಾರಿನಲ್ಲಿ ರಾಜಾ ಜಯಸಿಂಹ ರಂಥಾ ವೀರಪುರುಷರು ದಾಸ್ಯದಲ್ಲಿ ಬಿದ್ದಿದ್ದಾರೆಂದು ಭಾವಿಸಬೇಡಿರಿ. ಅವರಿಗೆ ಧರ್ಮಾಭಿಮಾನವಿ ನೆಂದು ಮೋಸ ಹೋಗಬೇಡಿರಿ. ನಿಮ್ಮಂಥಾ ಪರಾಕ್ರಮ ಶಾಲಿಗಳು ದರಬಾರಿನಲ್ಲಿ ಉನ್ನತಾಧಿಕಾರಿಗಳನ್ನು ಪಡೆಯಬೇಕು. ನಿಮ್ಮ ವರ್ಚಸ್ಸಿನಿಂದಲೇ ಹಿಂದೂ ಧರ್ಮರಕ್ಷಣೆಯಾಗುತ್ತದೆ. ನಿಜವಾದ ಧರ್ಮ ರಕ್ಷಣೆಗೆ ಇದೊಂದೇ ಮಾರ್ಗ. ರಾಜಪುರುಷರು ಸಂಧಿ ಮಾಡಿಕೊಳ್ಳುವು ದೆಂದರೆ ರಾಜ್ಯ. ಕೋಟೆ ಕೊತ್ತಲಗಳು, ಹಣದ ವ್ಯವಹಾರ, ಅಧಿಕಾರದ ಮನ್ನಣೆ ಇವುಗಳು ಷರತ್ತುಗಳಾಗಿರಬೇಕು. ಅವೆಲ್ಲವನ್ನೂ ಬಿಜಾಪುರದ ದರ್ಬಾರು ನಿಮಗೆ ಸಂತೋಷದಿಂದ ಕೊಡಲು ಸಿದ್ಧವಾಗಿದೆ. ಈ ಮಧ್ಯೆ ಈ ಧರ್ಮಜಿಜ್ಞಾಸೆಯನ್ನೇಕೆ ತರುವಿರಿ? ಈ ಒಂಬತ್ತು ದುರ್ಗಗಳು ನಿಮ್ಮ ವಶದಲ್ಲಿವೆ. ಆ ಅಧಿಕಾರವನ್ನು ಆದಿಲ್‌ಷಾಹೀ ಸುಲ್ತಾನರು ಮನ್ನಣೆ ಮಾಡಿ ದರೆ ನಿಮ್ಮ ದುರ್ಗಗಳಲ್ಲಿರುವತೀರ್ಥ–ಕ್ಷೇತ್ರ ಗೋಬ್ರಾಹ್ಮಣರುಗಳನ್ನುನೀವು ರಕ್ಷಿಸಿದಂತಾಗುವುದಿಲ್ಲವೇ? ಪರ್ವತಗಳಿಗೆ ಚಡ್ಡಿ ಹೊಲಿಸಲು ಸಾಧ್ಯವೇ? ಆಕಾಶಕ್ಕೆ ಮುಸುಗು ಹಾಕಲು ಹಾರಾಡುವುದು ಬುದ್ಧಿವಂತಿಕೆಯಾದೀತೆ? ಶಿವಾಜಿ ಮಹಾರಾಜರೇ! ನಿಮ್ಮ ತಂದೆ ಷಾಜಿಯವರು ಹೇಳಿ ಕಳುಹಿಸಿದ್ದಾರೆ. ನಾನು ವಯಸ್ಸಿನಲ್ಲಿ ಹಿರಿಯ. ಲೋಕಾನುಭವದಲ್ಲಿ ಬಹಳ ಅನುಭವ ಪಟ್ಟಿ ದ್ದೇನೆ. ನನ್ನ ಮಾತುಗಳು ಕಹಿಯಾಗಿವೆಯೆಂದು ಭಾವಿಸಬೇಡಿರಿ. ಕಹಿ ಯಾದರೂ ಇವು ಪಥ್ಯಗಳೆಂದು ತಿಳಿಯಿರಿ" ಎಂದು ಹೇಳಿದ.

ಶಿವಾಜಿಯು ಸ್ವಲ್ಪ ಹೊತ್ತು ಮೌನಧಾರಣೆ ಮಾಡಿದ. ಆಮೇಲೆ "ರಾಯಭಾರಿಗಳೇ, ನಾನೇ ಕುಳಿತು ನನ್ನ ಸಂಗಡಿಗರೊಡನೆ ಯೋಚನೆ ಮಾಡುವಾಗ ನನ್ನ ಯೋಚನೆಗಳೇ ಸರಿಯೆಂದು ಕಾಣುತ್ತದೆ. ನೀವು ಬಿಡಿ ಬಿಡಿಸಿ ಹೇಳುವಾಗ ನಿಮ್ಮ ಮಾತುಗಳೇ ಪಥ್ಯವೆಂದು ಭಾಸವಾಗುತ್ತದೆ. ನಾನು ಹುಚ್ಚನಂತಾಗಿದ್ದೇನೆ. ಇವೆಲ್ಲವನ್ನೂ ಪರಿತ್ಯಜಿಸಿ, ಎಲ್ಲಿಯಾದರೂ ಓಡಿಹೋಗಲೇ ಎನ್ನಿಸುತ್ತದೆ. ಒಂದು ಬಾರಿ ಹಾಗೆಯೇ ಮಾಡಿದ್ದೆ. ತುಕಾರಾಂರ ಸನ್ನಿಧಿಗೆ ಹೋಗಿ ಶರಣು ಹೊಡೆದು, ಸಂತಧರ್ಮವನ್ನು ಸ್ವೀಕರಿಸಿದ್ದೆ. ಈ ನನ್ನ ಸಂಗಡಿಗರು ಬೇಡಿ ಕಾಡಿ ಪುನಃ ಈ ರಾಜ್ಯಕ್ಕೆ ಕರೆತಂದರು, ರಾಮದಾಸರ ಸನ್ನಿಧಿಗೆ ಹೋಗಿ ಭಕ್ತಪಂಥದಲ್ಲಿ ಸೇರಿದೆ. ಅವರೂ ನನ್ನನ್ನು ತಳ್ಳಿದರು. ನೀವು ಬಿಜಾಪುರಕ್ಕೆ ಕರೆದುಕೊಂಡು ಹೋಗಿ ಅಧಿಕಾರ ಪೀಠದಲ್ಲಿ ಕುಳ್ಳಿರಿಸುತ್ತೇವೆಂದು ಬಂದಿದ್ದೀರಿ. ಯಾವುದು ಭಗವಂತನ ಇಷ್ಟದಲ್ಲಿದೆಯೋ ಬಲ್ಲವರಾರು ? ನನ್ನ ತಲೆ ತಿರುಗುತ್ತಿದೆ. ಹೃದಯವು ಕರಗುತ್ತಿದೆ. ಒಂದು ದಿನ ನನಗೆ ಅವಕಾಶ ಕೊಡಿರಿ, ನಾಳೆ ಪ್ರಾತಃಕಾಲ ನಿಮ್ಮ ರಾಯಭಾರಕ್ಕೆ ಖಚಿತವಾದ ಉತ್ತರ ಕೊಡುತ್ತೇನೆ" ಎಂದು ಹೇಳಿದನು.

ಸೇನಾಧಿಪತಿಗಳು "ನಮ್ಮ ಮಾತುಗಳು ಶಿವಾಜಿಯ ತಲೆಗೆ ಚೆನ್ನಾಗಿ ಹತ್ತಿವೆ. ಇರಲಿ, ನಾವೇಕೆ ಅವಕಾಶ ಕೊಡಬಾರದು ?" ಎಂದು ಭಾವಿಸಿ ಕೊಂಡು "ಶಿವಾಜಿ ಮಹಾರಾಜರೇ, ಹಾಗೆಯೇ ಆಗಬಹುದು. ಒಂದೇ ಬಾರಿ ಖಚಿತ ಮಾಡಿಬಿಡಿರಿ. ಹಿಂದಕ್ಕೆಮುಂದಕ್ಕೆ ಓಲಾಡಬೇಡಿರಿ. ನಿಮ್ಮ ತಂದೆಯ ವರಿಗೆ ತಕ್ಕ ಸುಪುತ್ರನೆನ್ನಿಸಿಕೊಳ್ಳಿರಿ. ಈ ಪ್ರಪಂಚದಲ್ಲಿ ಅದಕ್ಕಿಂತಲೂ ದೊಡ್ಡ ದೇಸಿದೆ ?" ಎಂದು ಹೇಳಿ ತಮ್ಮ ಬಿಡಾರಗಳಿಗೆ ತೆರಳಿದರು.

ರಾಯಭಾರಿಗಳ ಬಿಡಾರಗಳಲ್ಲಿ ರಾಜಯೋಗ್ಯವಾದ ಆತಿಥ್ಯಗಳು ಸಿದ್ಧ ವಾಗಿದ್ದವು. ಮರಾಠಾ ಸೈನಿಕರು ಶಿಸ್ತಿನಿಂದ ನಮ್ರತೆಯಿಂದ ಉಪಚರಿಸು ತ್ತಿದ್ದರು.

ಸೇನಾಧಿಪತಿಗಳಿಬ್ಬರೂ "ಈ ಶಿವಾಜಿಯು ಆ ತಂದೆಗೆ ತಕ್ಕ ಮಗ. ಎಂಥಾ ಸೌಜನ್ಯ, ಎಷ್ಟು ಆದರ ಗೌರವಗಳು" ಎಂದು ಪರಸ್ಪರ ಮೆಚ್ಚಿಗೆಯ ಮಾತನಾಡಿಕೊಂಡರು.

೧೬

ಶಿವಾಜಿಯು ತನ್ನ ಸಂಗಡಿಗರೊಡನೆ ಈ ಸಂಧಿ ಪ್ರಸ್ತಾಪವನ್ನು ಸಮಾಲೋಚನೆ ಮಾಡಿದ.

"ಈ ಸಂಧಿಯು ಸುಳ್ಳು. ಇದರಲ್ಲೇನೋ ತಂತ್ರವಿದೆ. ಸಂಧಿಗೆ ಅವರಾಗಿ ಹೇಳಿ ಕಳುಹಿಸುವುದಾದರೆ ಇಷ್ಟೊಂದು ಸೈನ್ಯಗಳೇಕೆ? ಇಷ್ಟು ಯುದ್ಧ ಸನ್ನಾಹಗಳೇಕೆ? ಸೈನ್ಯವನ್ನು ಬಾಗಿಲಲ್ಲಿ ತಂದಿಟ್ಟುಕೊಂಡು ನಮಗೆ ಭಯೋತ್ಪಾದನ ಮಾಡಿ ಸಂಧಿ ಮಾಡುತ್ತೇನೆಂದು ಬಂದಿದ್ದರೆ ಇದೇನು ಮಕ್ಕಳಾಟಿಕೆಯೋ? ನಾವೇನು ಯುದ್ಧವನ್ನು ಅರಿಯದವರೇ? ಈ ಮಾತುಗಳನ್ನು ನಂಬಲಾಗುವದಿಲ್ಲ. ಇದರಲ್ಲೇನೋ ಮೋಸವಿದೆ. ಅದನ್ನು ಕಂಡು ಹಿಡಿಯಬೇಕು. ಸಂಧಿಯಲ್ಲಿ ಮೋಸ, ಅಥವಾ ಯುದ್ಧದಲ್ಲಿ ಮೋಸ. ಇದೇ ಅಫಜಲ್‌ಖಾನನ ತಂತ್ರ" ಎಂದು ತಾನಾಜಿಯು ಹೇಳಿದನು.

ಬಾಜೀಪ್ರಭುವು "ಮಹಾರಾಜರೇ! ನಿಮ್ಮ ಬುದ್ಧಿಗೆ ಮಂಕುಬಡಿದಿರುವಂತೆ ಕಾಣುತ್ತದೆ. ಈ ನರರಾಕ್ಷಸನು ಬರುವಾಗ ಹೇಗೆ ಬಂದ? ತುಳಜಾಪುರದ ಘೋರ ಕೃತ್ಯಗಳ ವಿವರಗಳನ್ನು ನೀವು ಕೇಳಿಲ್ಲವೆ? ಪಂಡರಪುರದ ಆಘಾತ ಪ್ರಘಾತಗಳನ್ನು ನೀವು ಲಾಲಿಸಲಿಲ್ಲವೆ? ಹಿಂದೂ ಧರ್ಮದ ಮೇಲೆ ಇದಕ್ಕಿಂತಲೂ ದೊಡ್ಡ ಅತ್ಯಾಚಾರವು ನಡೆದದ್ದು ನಮ್ಮ ವಯಸ್ಸಿಗೆ ನಾವೆಲ್ಲಿಯೂ ಕೇಳಿಲ್ಲ. ಈ ತುರುಕರು ನಮ್ಮನ್ನು ಕಾಡುಜನ ಎನ್ನುತ್ತಾರೆ. ನಾವು ಕಾಡುಜನರಾಗಿಯೇ ಇರೋಣ. ಇಂದು ಪ್ರಾತಃಕಾಲ ನೀವೇ ಹೇಳಿದಿರಲ್ಲವೇ, ಭವಾನಿಯು ಯುದ್ಧಕ್ಕೆ ಆಜ್ಞೆ ಮಾಡಿದ್ದಾಳೆಂದು ಇನ್ನೂ ಅನೇಕ ಯುದ್ಧಗಳು ಕಾದಿವೆ. ಅದೇ ಘಟ್ಟಿ ಮಾತು. ಸತ್ಯವಾದ ಮಾತು. ಆದರಂತೆ ನಡೆಯೋಣ" ಎಂದು ಹೇಳಿದನು.

ರಾಮಚಂದ್ರನು "ನಾನೊಂದು ಮಾತು ಹೇಳುತ್ತೇನೆ. ಯುದ್ಧಕ್ಕೆ ನಾವು ಯಾವಾಗಲೂ ಸಿದ್ಧರಿದ್ದೇವೆ. ಅದು ಭವಾನಿಯ ಆಜ್ಞೆ. ಈ ಯುದ್ಧ

ವಲ್ಲದಿದ್ದರೆ ಮತ್ತೊಂದು ಯುದ್ಧಕ್ಕೆ ನಾವು ಸಿದ್ಧರಾಗಿಯೇ ಇರಬೇಕು. ಒಂದು ಪಕ್ಷ ಅಫಜಲ್ ಖಾನನು ಸತ್ಯಕ್ಕೆ ನಿಜವಾಗಿಯೇ ಸಂಧಿ ಮಾಡಿಕೊಂಡು ಹೋಗುತ್ತಾನೆಂದುಕೊಳ್ಳೋಣ. ನಾವು ಬಿಜಾಪುರದ ದರ್ಬಾರಿನ ಅಧೀನರೆಂದು ಒಪ್ಪಿಕೊಳ್ಳೋಣ. ಮೊಗಲ್ ಬಾದಷಹ ಔರಂಗಸೇಬನು ನೋಡುತ್ತಾ ಕುಳಿತಿರುವುದಿಲ್ಲ. ಮೊಗಲ್ ಸೈನ್ಯಗಳು, ಸೇನಾಧಿಪತಿಗಳು ನಮ್ಮ ಮೇಲೆ ಯುದ್ಧಕ್ಕೆ ಬಂದೇ ಬರುತ್ತಾರೆ. ಆಗ ಈ ಅಫಜಲ್‌ಖಾನನು ಈ ಬಿಜಾಪುರದ ಸೈನ್ಯವನ್ನು ತೆಗೆದುಕೊಂಡು ನಮ್ಮ ಸಹಾಯಕ್ಕೆ ಬರುತ್ತಾನೇನು ? ಹೇಗೂ ನಮ್ಮ ಪಾಲಿಗೆ ಯುದ್ಧವು ಕಾದೇ ಇದೆ. ಇಬ್ಬರೊಡನೆಯೂ ನಾವು ಎರಡು ಯುದ್ಧಗಳನ್ನು ಮಾಡಲೇಬೇಕಾಗಬಹುದು. ಅದಕ್ಕೆ ನಾವು ಸಿದ್ಧ. ಆದರೆ ಉಪಾಯಕ್ಕೆ ಉಪಾಯ, ತಂತ್ರಕ್ಕೆ ತಂತ್ರ, ಅದು ರಾಜನೀತಿ. ಖಾನನು ಉಪಾಯ ಮಾಡಿದ್ದರೆ ನಾವೂ ಉಪಾಯ ಮಾಡಬಾರದೇಕೆ ? ಅವನು ಸಂಧಿಗೆ ಬರಲಿ, ನೋಡೋಣ. ಮಾತಿನಲ್ಲಿ ಯಾವದೂ ಇತ್ಯರ್ಥವಾಗುವುದಿಲ್ಲ. ಸಂಧಿಯನ್ನು ನಾವಾಗಿ ಒಡೆಯುವುದು ಬೇಡ" ಎಂದು ಹೇಳಿದ.

ಶಿವಾಜಿಯು "ಸಂಧಿ ಅಥವಾ ಯುದ್ಧ. ಈ ವಿಷಯಗಳಲ್ಲಿ ನಮ್ಮಲ್ಲಿ ಕೊಂಚ ಭಿನ್ನಾಭಿಪ್ರಾಯವಿದೆ. ಇದನ್ನು ಯುಕ್ತಿಯಿಂದ ಸಮನ್ವಯ ಮಾಡೋಣ" ಎಂದು ಹೇಳಿದ.

ಆ ದಿನ ಭವಾನಿ ದೇವಾಲಯದ ಅರ್ಚಕನು ಕೃಷ್ಣರಾಯನಿಗೆ ದೇವಿಯ ಪ್ರಸಾದಗಳನ್ನು ತೆಗೆದುಕೊಂಡು ಹೋಗಿ ಅರ್ಪಿಸಿದನು.

ಕೃಷ್ಣರಾಯನು ಭಕ್ತಿಯಿಂದ ಸ್ವೀಕರಿಸಿದ. ಅವನ ಮನಸ್ಸಿನಲ್ಲಿಯೂ ಆ ದೇವಾಲಯವನ್ನು ನೋಡಿ, ದೇವಿಯ ದರ್ಶನ ಮಾಡಿ ಬರಬೇಕೆಂಬ ಕುತೂಹಲ ಹುಟ್ಟಿತು. ಅವನು ದೇವಮಂದಿರಗಳಿಗೆ ಹೋಗಿ ಎಷ್ಟೋ ದಿನಗಳಾಗಿ ಹೋಗಿದ್ದವು. ದೇವಿಯ ಅರ್ಚಕರು ಆಹ್ವಾನವನ್ನು ಇತ್ತರು. ಕೃಷ್ಣರಾಯನು ಒಪ್ಪಿಕೊಂಡ ಅರ್ಚಕನು ದೇವಿಯ ಮಹಾತ್ಮೆಯನ್ನು ಬಹಳವಾಗಿ ಹೊಗಳಿದ.

"ಸ್ವಾಮೀ ರಾಯರೇ. ಹೇಳುತ್ತೇನೆ ಕೇಳಿ. ಈ ಕಾಲದಲ್ಲಿ ಯಾರು

ನಂಬುತ್ತಾರೆ. ನಂಬಿಕೆಯಿಲ್ಲದೆಯೇ ನಮ್ಮ ದೇವರು, ಧರ್ಮ ಎಲ್ಲವೂ ಹಾಳಾಗಿಹೋಯಿತು. ಇಲ್ಲಿಯ ಜನರು ಇನ್ನೂ ಸ್ವಲ್ಪ ನಂಬಿಕೆ ಇಟ್ಟು ಕೊಂಡಿದ್ದಾರೆ. ಅವರನ್ನು ದೇವಿಯು ಕಾಪಾಡುತ್ತಾಳೆ. ಈ ಶಿವಾಜಿಯು ದೇವಿಯನ್ನು ಬಹಳ ನಂಬಿದ್ದಾನೆ. ಸ್ವಾಮೀ, ನಾವು ಸುಳ್ಳು ಹೇಳುವುದಿಲ್ಲ ಆ ದೇವಿಯು ಶಿವಾಜಿಗೆ ಪ್ರಸನ್ನಳಾಗಿದ್ದಾಳೆಂದು ಹೇಳಬಹುದು. ನಿನ್ನೆ ರಾತ್ರಿ ಬಿಜಾಪುರದ ಸೈನ್ಯವು ನಮ್ಮ ಕೋಟೆಯ ಬಾಗಿಲಿಗೆ ಬಂದಿರುವ ಸಮಾಚಾರ ವನ್ನು ಕೇಳಿ ಶಿವಾಜಿಯು ವಿಹ್ವಲನಾಗಿ ದೇವಿಯ ಆರಾಧನೆಗೆ ಹೊರಟ. ರಾತ್ರಿಯೆಲ್ಲಾ ಬಾಗಿಲು ಮುಚ್ಚಿಕೊಂಡು ಪೂಜೆ ಸ್ತವನಗಳನ್ನುಮಾಡುತ್ತಿದ್ದ ರಾತ್ರಿ ಅವನು ತನ್ನ ಶಿರಸ್ಸನ್ನೇ ಕಡಿದು ದೇವಿಯ ಪಾದಗಳಿಗೆ ಅರ್ಪಿಸುವ ನೆಂದು ನಮ್ಮ ಹೃದಯುಗಳೆಲ್ಲವೂ ನಡುಗುತ್ತಿದ್ದುವು. ಈ ಮರಾಠಾ ಸೇನಾ ನಾಯಕರೆಲ್ಲರೂ ಎವೆ ಇಕ್ಕದೆ ಹೊರಗೆ ಕಾದಿದ್ದರು. ಶಿವಾಜಿಯು ಪ್ರಸನ್ನ ವದನನಾಗಿ ಹೊರಗೆ ಬಂದ. ಅವನದು ಎಂಥಾ ಭಕ್ತಿ ! ನೋಡಿ, ಹೊರಗೆ ಬರುವದರೊಳಗೆ ನೀವುಗಳು ಸಂಧಿಗೆ ಬಂದಿದ್ದೀರಿ. ಇದಕ್ಕಿಂತಲೂ ಪ್ರತ್ಯಕ್ಷ ಪ್ರಮಾಣವು ಮತ್ತೇನು ಬೇಕು ?" ಎಂದು ಹೇಳಿದ.

ಕೃಷ್ಣರಾಯನು "ಅಹುದಹುದು, ಭಕ್ತಿ ಮಾಡುವವರಿಗೆ ದೇವರು ಮೆಚ್ಚುತ್ತಾನೆ ಅದು ನಮ್ಮ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ. ಹಿರಿಯರು ಹಾಗೆ ಹೇಳುತ್ತಿದ್ದರು. ಈಗ ಅದೆಲ್ಲ ಹೋಯಿತು. ಈಗ ಇರುವುದೆಲ್ಲಾ ದುಡ್ಡು-ಅಧಿಕಾರ, ಇಷ್ಟೆ" ಎಂದು ಹೇಳಿ ಆ ಅರ್ಚಕರಿಗೆ ಒಂದೊಂದು ಚಿನ್ನದ ವರಹ ದಕ್ಷಿಣೆಯಿತ್ತು ಕಳುಹಿಸಿದ.

ಸಂಧ್ಯಾಕಾಲವಾಗುತ್ತಲೇ ಪಕ್ಕದ ಗುಡಾರಕ್ಕೆ ಹೋಗಿ ಸೇನಾಧಿಪತಿ ಗಳನ್ನು ಕಂಡು "ಇಲ್ಲೊಂದು ಭವಾನಿಯ ದೇವಾಲಯವಿದೆ. ಅರ್ಚಕರು ಬಂದು ಕರೆದು ಹೋಗಿದ್ದಾರೆ. ದೇವಾಲಯಗಳಿಗೆ ಹೋಗಿ ಎಷ್ಟೋ ವರುಷ ಗಳಾಗಿ ಹೋಗಿವೆ. ಈ ವನಪ್ರದೇಶ, ಈ ಗಿರಿದುರ್ಗಗಳಿಂದ ಹರಿಯುತ್ತಿರುವ ನದಿಗಳು. ಈ ಮನೋಹರ ಪ್ರದೇಶದಲ್ಲಿ ಇರುವ ದೇವಾಲಯ ಇವೆಲ್ಲವನ್ನೂ ನೋಡಿ ನನಗೂ ಕುತೂಹಲವಾಗಿದೆ" ಎಂದು ಹೇಳಿದ.

ಸೇನಾಧಿಪತಿಗಳು "ಆಗತ್ಯವಾಗಿ ಹೋಗಿ ಬನ್ನಿ, ರಾಯರೇ. ಬಡ ಬ್ರಾಹ್ಮಣರಿಗೆ ದಕ್ಷಿಣೆ ಕೊಟ್ಟು ಬನ್ನಿ. ಅವರು ನಿಮ್ಮ ದೊಡ್ಡಸ್ತಿಕೆಯನ್ನು ದಕ್ಷಿಣೆಯಿಂದಲೇ ಅಳೆಯುತ್ತಾರೆ. ಕೈತುಂಬಾ ದಕ್ಷಿಣೆ ಕೊಡಿ. ಬೊಗಸೆ ತುಂಬಾ ಪ್ರಸಾದ ಕೊಡುತ್ತಾರೆ. ಅದನ್ನು ಕಟ್ಟಿಟ್ಟುಕೊಂಡು ಬಿಜಾಪುರದ ವರೆಗೆ ತೆಗೆದುಕೊಂಡು ಹೋಗಿ ನಿಮ್ಮ ಜನಾಂಗಕ್ಕೆ ಕೊಡಿ. ಅವರೂ ಸಂತೋಷಪಡುತ್ತಾರೆ ರಾವ್ ಸಾಹೇಬ್, ಒಂದು ಮಾತು ನೆನಪಿಟ್ಟು ಕೊಳ್ಳಿರಿ. ಆ ಪ್ರಸಾದವನ್ನೆಲ್ಲಿಯಾದರೂ ತುರುಕರು ಮುಟ್ಟಿಬಿಟ್ಟಾರು. ನಿಮ್ಮ ಮಾತು ಹಾಗಿರಲಿ, ನಿಮ್ಮ ದೇವರ ಜಾತಿ ಕೆಟ್ಟುಹೋದೀತು" ಎಂದು ಹಾಸ್ಯಮಾಡಿದರು.

ಕೃಷ್ಣರಾಯನು ತನ್ನ ಗುಡಾರಕ್ಕೆ ಬಂದು ರೇಷಿಮೆಯ ಪಟ್ಟೆಯ ಮಡಿ ಯನ್ನುಟ್ಟು, ಕಲಾಪತ್ತಿನ ದುಪ್ಪಟಿಯನ್ನು ಹೊದ್ದುಕೊಂಡು ದೇವಾಲಯಕ್ಕೆ ಹೋದ.

ರಮಣೀಯವಾದ ಆ ದೇವಾಲಯದ ಮುಂದೆ ಕೃಷ್ಣರಾಯನು ಹೋಗಿ ನಿಂತು ಸುತ್ತಲೂ ನೋಡಿದ. ನಿರ್ಜನವಾಗಿತ್ತು. ಅರ್ಚಕನು ಬಂದು ಕೃಷ್ಣ ರಾಯನನ್ನು ಒಳಗೆ ಕರೆದುಕೊಂಡುಹೋದ. ಭವಾನೀದೇವಿಗೆ ಕೃಷ್ಣರಾಯನು ಸಾಷ್ಟಾಂಗ ಪ್ರಣಾಮ ಮಾಡಿದ ಅರ್ಚಕನು ಬೆಳ್ಳಿಯ ತಟ್ಟೆಯಲ್ಲಿಟ್ಟು ರಾಯರಿಗೆ ಪ್ರಸಾದವನ್ನು ಅರ್ಪಿಸಿದ. ಕೃಷ್ಣರಾಯನು ಎರಡು ಚಿನ್ನದ ವರಹ ಗಳನ್ನಿತ್ತು ಪ್ರಸಾದವನ್ನು ಸ್ವೀಕರಿಸಿದ.

ಅರ್ಚಕನಿಗೆ ಧನ್ಯವಾದಗಳನ್ನು ಹೇಳಿ ಹಿಂತಿರುಗುವಷ್ಟರಲ್ಲಿ ಸೌಮ್ಯ ವೇಶದಿಂದ ಶಿವಾಜಿಯು ದೇವಾಲಯದೊಳಗೆ ಬಂದು "ರಾಯರೇ, ಇಲ್ಲಿ ನಿಮ್ಮ ದರ್ಶನವಾದದ್ದು ನಮ್ಮ ಸುಯೋಗ. ಬನ್ನಿ, ದೇವಿಯ ಮುಂದೆ ನಿಂತುಕೊಳ್ಳಿ. ನಾನು ಜಗನ್ಮಾತೆಯನ್ನು ನಂಬಿದನು. ಈ ಮಾತೆಯ ಎದುರಿನಲ್ಲಿಯೇ ನಾಳೆಯ ತೀರ್ಮಾನವನ್ನು ಇಂದೇ ಹೇಳುತ್ತಾನೆ" ಎಂದು ಹೇಳಿ ಕೃಷ್ಣರಾಯನ ಕೈಹಿಡಿದು ದೇವಿಯ ಮುಂದೆ ನಿಲ್ಲಿಸಿದ.

ಅರ್ಚಕನು ಹೊರಗೆ ಹೊರಟುಹೋದ. ಬಾಗಿಲುಗಳು ಮುಚ್ಚಲ್ಪಟ್ಟವು.

ಶಿವಾಜಿಯು ಪಸನ್ನಮುಕದಿಂದ "ರಾಯರೇ, ಈ ದೇವಿಯು ಪ್ರತ್ಯಕ್ಷ ದೇವರು. ಈ ವಾರ್ಥಿಕ್ಯದಲ್ಲಾದರೂ ಅದನ್ನು ನಂಬಿರಿ, ನೀವು ಬ್ರಾಹ್ಮಣರು.

ನಿಜವನ್ನು ಹೇಳಿರಿ. ಈ ಸಂಧಿಪ್ರಸ್ತಾಪವು ನಿಜವಾಗಿದ್ದರೆ ನೀವು ಆತ್ಮಸಾಕ್ಷಿಯಾಗಿ ಭರವಸೆ ಕೊಟ್ಟರೆ ನಾನು ಸಂಪೂರ್ಣವಾಗಿ ಒಪ್ಪಿಕೊಂಡಿದ್ದೇನೆ. ಎರಡನೆಯ ಮಾತೇ ಇಲ್ಲ. ನೀವೇನು ಹೇಳುವಿರಿ?" ಎಂದ.

ಕೃಷ್ಣರಾಯನ ಹೃದಯವು ಝಲ್ಲೆಂದು ನುಡಿಯಿತು.

"ಶಿವಾಜಿ. ಒಳ್ಳೆಯ ಉಪಾಯ ಹುಡುಕಿದೆ ದೇವಿಯವ.ಎಂದೆ ಪ್ರಮಾಣ ಮಾಡುವ ಸಂಘಟನೆಯು ನನಗೆ ಪ್ರಾಪ್ತವಾಗಿದೆ. ನಾನು ಬ್ರಾಹ್ಮಣ. ನಿಜವನ್ನು ಹೇಳಿದರೆ ತಲೆಹೋಗುತ್ತದೆ. ಏನು ಮಾಡಲಿ ? ಕೇಳು ಹೇಳಿಬಿಡುತ್ತೇನೆ. ಈ ದೇವಿಯು ಸಾಕ್ಷಿಯಾಗಿ ನೀನು ಸಂಗಡಿಗರೊಡನೆಯೂ ಈ ಮಾತನ್ನು ಹೇಳಕೂಡದು. ನಿನ್ನ ಮಾತೃದೇವತೆಯ ಆಣೆಯಿಟ್ಟು ಪ್ರಮಾಣ ಮಾಡು ಈ ಮಾತು ನಮ್ಮಿಬ್ಬರಲ್ಲೇ ಉಳಿಯಬೇಕು."

ಶಿವಾಜಿಯು ಕೃಷ್ಣರಾಯನ ಕೈಮೇಲೆ ಕೈತಟ್ಟಿ "ಪ್ರಮಾಣ ಮಾಡಿ ಹೇಳುತ್ತಾನೆ. ಈ ಭವಾನಿಯ ಪಾದದಾಣೆ. ನಾನು ಈ ಗುಟ್ಟನ್ನು ಎಂದಿಗೂ ರಟ್ಟುಮಾಡುವುದಿಲ್ಲ" ಎಂದ.

ಕೃಷ್ಣರಾಯನು "ಶಿವಪ್ರಭು ಈ ಸಂಧಿಯು ಮೋಸದ ಸಂಧಿ. ನಿನ್ನನ್ನು ಸಂಧಿಯ ನೆಪದಿಂದ ಹತ್ತಿರ ಬರಮಾಡಿಕೊಂಡು ಸೆರೆಹಿಡಿದು ಬಿಜಾಪುರಕ್ಕೆ ಖಾನನು ಕೊಂಡುಹೋಗುತ್ತಾನೆ. ನಿಮ್ಮ ತಂದೆಯನ್ನು ಇಟ್ಟಿದಂತೆ ನಿನ್ನನ್ನು ದಾರುಣ ಬಂಧನದಲ್ಲಿ ಇಡುತ್ತಾರೆ. ಈ ಸೈನ್ಯವೆಲ್ಲವೂ ನಿಮ್ಮ ದುರ್ಗಗಳನ್ನು

ದಾರುಣ ಬಂಧನದಲ್ಲಿ ಇಡುತ್ತಾರೆ. ಈ ಸೈನ್ಯವೆಲ್ಲವೂ ನಿಮ್ಮ ದುರ್ಗಗಳನ್ನು

ಸುಲಭವಾಗಿ ವಶಪಡಿಸಿಕೊಳ್ಳುತ್ತವೆ" ಎಂದು ಹೇಳಿದ.

ಶಿವಾಜಿಯು ಕೃಷ್ಣರಾಯನಿಗೆ ಪ್ರಣಾಮಮಾಡಿ "ರಾಯರೇ, ನೀವು ಮತ್ತೊಂದು ಮಹೋಪಕಾರ ಮಾಡಬೇಕು. ಅಫಜಲ್ ಖಾನನೂ ನಂಬುವಂತೆ ಹೇಳಬೇಕು. 'ಶಿವಾಜಿಯು ಭಯದಿಂದ ನಡುಗುತ್ತಿದ್ದಾನೆ. ಬುದ್ಧಿಭ್ರಮಣೆಯಾದಂತಾಗಿದೆ. ಮೊನ್ನೆ ರಾತ್ರಿ ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಹೊರಟಿದ್ದ. ಅಕಸ್ಮಾತ್ ರಾಯಭಾರಿಗಳು ಸಂಧಿಯ ಪ್ರಸ್ತಾಪವನ್ನು ತಂದಿರುವರೆಂದು ಕೇಳುತ್ತಲೇ ಜೀವನವನ್ನು ಉಳಿಸಿಕೊಂಡಿದ್ದಾನೆ. ಶಿವಾಜಿಯು ಯಾವ ಸಂಧಿಗಾದರೂ ಒಪ್ಪಲುಉಸಿದ್ಧವಾಗಿದ್ದಾನೆ. ಪ್ರತಾಪಘಡಕ್ಕೆ ಸೈನ್ಯಗಳಿಲ್ಲದಿರುವುದೇ ಇದಕ್ಕೆ ಸಾಕ್ಷಿ. ನೀವೇ ಪ್ರತಾಪಘಡಕ್ಕೆ ಬಂದು ಭೇಟಿ

ಕೊಟ್ಟರೆ ಶಿವಾಜಿಯು ಶರಣಾಗತನಾಗುತ್ತಾನೆ,' ಎಂದು ಹೇಳಿ ಹೇಗಾದರೂ ಮಾಡಿ ಅವನನ್ನು ಇಲ್ಲಿಗೇ ಕರೆತರಬೇಕು. ಒಂದುಪಕ್ಷ ಸಂಧಿಯಾದರೂ ಇಲ್ಲಿ ಅಪಾಯವಿಲ್ಲ. ನೀವು ಇಷ್ಟು ಸೇವೆ ಮಾಡಿದರೆ ನಾನು ಬದುಕಿರುವವರೆಗೆ ನಿಮಗೆ ಋಣಿಯಾಗಿರುತ್ತೇನೆ ನೀವು ಅಪೇಕ್ಷಿಸಿದರೆ ಇಲ್ಲಿ ಜಹಗೀರಿ ಕೊಡುತ್ತೇನೆ, ಸಕಲ ಸೌಭಾಗ್ಯಗಳನ್ನೂ ಸಮರ್ಪಿಸುತ್ತೇನೆ" ಎಂದು ಹೇಳಿದ.

ಕೃಷ್ಣರಾಯನು ಒಪ್ಪಿಕೊಂಡು ತನ್ನ ಗುಡಾರಕ್ಕೆ ಹೊರಟ.

ಕೃಷ್ಣರಾಯನು ಗುಡಾರಕ್ಕೆ ಬರುತ್ತಲೇ ಸೇನಾಧಿಪತಿಗಳಿಬ್ಬರೂ ಬಂದು ದರ್ಶನ ಮಾಡಿದರು.

"ರಾವ್ ಸಾಹೇಬ್ ! ದೇವಾಲಯಕ್ಕೆ ಹೋಗಿಬಂದಿರಾ ? ಪ್ರಸಾದಗಳನ್ನು ತಂದಿರುವಿರಾ? ಈ ವೇಶದಲ್ಲಿ ನಿಮ್ಮನ್ನು ನೋಡಲು ನಮಗೆಷ್ಟೋ ಸಂತೋಷವಾಗುತ್ತದೆ. ನಾವೆಂದೂ ಧೋತ್ರ ಹೊದ್ದುಕೊಂಡು ಉಷ್ಣೀಷವಿಲ್ಲದ ರಾಯರ ದರ್ಶನ ಮಾಡಿಯೇ ಇಲ್ಲ. ಬಹಳ ಸಂತೋಷ, ಏನೇ ತಂದಿದ್ದೀರಿ?" ಎಂದು ಕೇಳಿದರು.

ಕೃಷ್ಣರಾಯನು "ಹಿಂದುಗಳ ದೇವಾಲಯುಗಳಿಗೆ ಹೋದರೆ ಎಷ್ಟೋ ರಹಸ್ಯಗಳು ತಿಳಿಯುತ್ತವೆ. ದೇವಿಯ ಪ್ರಸಾದವನ್ನೂ ತಂದಿದ್ದೇನೆ. ಒಂದು ಮುಖ್ಯವಾದ ರಹಸ್ಯವನ್ನೂ ತಿಳಿದು ಬಂದಿದ್ದೇನೆ. ಹೇಳುತ್ತೇನೆ ಕೇಳಿ ಎಂದ.

ಸೇನಾಧಿಪತಿಗಳಿಬ್ಬರೂ ಆತುರದಿಂದ ಕಿವಿಗೊಟ್ಟು ಕೇಳಲು ಸಿದ್ಧರಾದರು

ಕೃಷ್ಣರಾಯನು ಪಿಸು ಮಾತಿನಿಂದ "ನಮ್ಮ ಸೈನ್ಯಗಳುದುರ್ಗದ ಬಾಗಿಲಿಗೆ ಬಂದಿರುವ ವಾರ್ತೆಯನ್ನು ಶಿವಾಜಿಯು ಕೇಳಿದನಂತೆ. ನಾಲ್ಕು ಮೈಲಿಗಳ ಪ್ರದೇಶದಲ್ಲಿ ಬೀಡುಬಿಟ್ಟಿರುವ ನಮ್ಮ ಸೈನ್ಯವನ್ನು ದೂರದಿಂದ ನೋಡಿದನಂತೆ. ಎದೆ ಬಿಚ್ಚಿಹೋಗಿ ನಿನ್ನೆ ದೇವಾಲಯುದಲ್ಲಿ ಆತ್ಮಹತ್ಯೆ ಮಾಡಿಕೊಳ್ಳಲು ಹೋಗಿದ್ದನಂತೆ! ಸಂಗಡಿಗರೆಲ್ಲಾ ತಡೆದು ಹಿಡಿದು ಕರೆತಂದರಂತೆ ಜೆಳಿಗ ನಾವು ಬಂದಿರುವ ಶುಭವಾರ್ತೆಯನ್ನು ಕೇಳಿ ಎಲ್ಲರೂ ಖುಷಿಯಾಗಿದ್ದಾರೆ." ಎಂದು ಹೇಳಿದ.

ಸೇನಾಧಿಪತಿಗಳು ಉತ್ಸಾಹದಿಂದ ಹಿಗ್ಗಿ ಹೋದರು.

ಪ್ರಾತಃಕಾಲ ಶಿವಾಜಿಯು ರಾಯಭಾರಿಯನ್ನು ತನ್ನ ಅರಮನೆಗೆ ಬರಮಾಡಿಕೊಂಡ. ಅವರನ್ನು ಸ್ವಾಗತಿಸಿ ಆಸನಗಳ ಮೇಲೆ ಕುಳ್ಳಿರಿಸಿದ.

"ಸೇನಾಧಿಪತಿಗಳೇ, ನಾನು ಈ ಸಂಧಿಗೆ ಒಪ್ಪಿದ್ದೇನೆ. ಒಂಬತ್ತು ಗಿರಿದುರ್ಗಗಳು ನನ್ನ ವಶವಾಗಿವೆ. ಯಾವುದಾದರೊಂದು ದುರ್ಗಗಳನ್ನು ನನಗೆ ಬಿಟ್ಟುಕೊಟ್ಟರೆ ಸಾಕು. ಈ ಪ್ರತಾಪಗಢವನ್ನೇ ಬಿಟ್ಟರೂ ಸರಿಯೆ. ಇಲ್ಲಿ ಭವಾನಿಯ ದೇವಾಲಯವಿದೆ. ನಾನು ಈ ದೇವಿಯ ಸೇವೆಯಲ್ಲಿ ಕಾಲ ಕಳೆಯುತ್ತೇನೆ. ಸಂಧಿ ಮಾಡಿಕೊಳ್ಳಲು ದೇವಿ ಭವಾನಿಯ ಪ್ರೇರಣೆಯೂ ಆಗಿದೆ. ನನ್ನ ಸಂಗಡಿಗರೆಲ್ಲರೂ ಸಂಧಿಗೆ ಒಪ್ಪಿದ್ದಾರೆ. ಅವರೆಲ್ಲರೂ ಒಳ್ಳೆಯ ಸೇನಾಧಿಪತಿಗಳು. ಬಿಜಾಪುರದ ದರ್ಬಾರಿನಲ್ಲಿ ಅಧಿಕಾರವನ್ನು ಪಡೆಯಲ ಅವರುಗಳು ಆತುರರಾಗಿದ್ದಾರೆ. ಮೊಗಲರ ಭಯವಿಲ್ಲದಂತೆ ನಮ್ಮನ್ನು ಕಾಪಾಡಬೇಕು. ನಮ್ಮೆಲ್ಲರಿಗೂ ಪ್ರಾಣಭಿಕ್ಷೆಯನ್ನು ನೀಡಬೇಕು. ಈ ಮಾತುಗಳೆಲ್ಲವನ್ನು ವಿವರವಾಗಿ ಅಫಜಲ್ ಖಾನರಿಗೆ ನಮ್ಮ ಸಲಾಂಗಳೊಡನೆ ಅರಿಕೆ ಮಾಡಿರಿ. ನಾನು ನಿಮ್ಮ ಶಿಬಿರಕ್ಕೆ ಬರುವುದಿಲ್ಲ. ನನಗೆ ಭಯವಾಗಿದೆ. ಸೇನಾಧಿಪತಿ ಖಾನ್ ಸಾಹೇಬರೇ, ಇಲ್ಲಿಗೆ ದಯಮಾಡಿಸಿ ಈ ರಾಜ್ಯಕೋಶವೆಲ್ಲವನ್ನೂ ಒಪ್ಪಿಸಿಕೊಳ್ಳಬೇಕು. ನಾಳೆಯೇ ನಮಗೆ ಉತ್ತರ ಕಳುಹಿಸಿ ಕೊಡಿರಿ. ನಾಳೆ ಉತ್ತರ ಬಾರದಿದ್ದರೆ, ನಾನು ಈ ಸಹ್ಯಾದ್ರಿಯಲ್ಲಿಯೇ ಯಾವುದೋ ಕಾಡನ್ನು ಸೇರಿಕೊಳ್ಳುತ್ತೇನೆ. ನೀವೇ ಇಷ್ಟಪ್ರಕಾರ ದುರ್ಗಗಳನ್ನು ವಶಪಡಿಸಿಕೊಳ್ಳಬಹುದು" ಎಂದು ಹೇಳಿ ಮೂವರೂ ರಾಯಭಾರಿಗಳಿಗೂ ಅನರ್ಘ್ಯವಾದ ಉಡುಗೊರೆಗಳನ್ನು ಒಪ್ಪಿಸಿ ಮರ್ಯಾದೆ ಮಾಡಿದ.

ರಾಯಭಾರಿಗಳು ಬಹಳ ಸಂತೋಷವಾಯಿತು. ನಮ್ಮ ಷಾಜಿಯವರ ಪುತ್ರರೊಡನೆ ಯುದ್ಧ ಮಾಡುವುದಕ್ಕಿಂತಲೂ ಸ್ನೇಹಬೆಳೆಸುವುದು ನಮ್ಮೆಲ್ಲರಿಗೂ ಸಂತೋಷಕರವಾಗಿದೆ" ಎಂದು ಹೇಳಿ ಶಿವಾಜಿಗೆ ಆಲಿಂಗನ ಕೊಟ್ಟು ತಮ್ಮ ಪಾಳಯಕ್ಕೆ ಹಿಂತಿರುಗಿದರು.

ಅಫಜಲ್ ಖಾನನೊಡನೆ ರಾಯಭಾರಿಗಳು ಎಲ್ಲ ವಿದ್ಯಮಾನಗಳನ್ನೂ ಮಾತುಕತೆಗಳನ್ನೂ ವಿವರವಾಗಿ ತಿಳಿಸಿದರು.

ಅಫಜಲ್ ಖಾನನು ಸಲ್ಪಹೊತ್ತು ಮೌನದಿಂದ ಕುಳಿತು ಎಲ್ಲವನ್ನೂ ಆಲೋಚನೆ ಮಾಡಿದ.

"ರಸೂಲ್ ಖಾನ್ ಈ ಮಾತುಗಳನ್ನು ಎಷ್ಟುಮಟ್ಟಿಗೆ ನಂಬಬಹುದು?" ಎಂದು ಕೇಳಿದ.

ರಸೂಲ್‌ಖಾನನು "ಹುಜೂರ್, ಶಿವಾಜಿಯ ವಿಷಯ ಯಾವುದನ್ನೂ ಖಚಿತವಾಗಿ ಹೇಳಲಾಗುವುದಿಲ್ಲ. ಅವನು ನಮ್ಮ ಕೈಗೆ ಸಿಕ್ಕುತ್ತಾನೋ ಇಲ್ಲವೋ ಅದನ್ನು ಖಚಿತವಾಗಿ ಹೇಳುವುದು ಕಷ್ಟ. ಅತ್ಯಂತ ಭಯಗ್ರಸ್ಥನಾಗಿದ್ದಾನೆ. ಸದ್ಯಕ್ಕೆ ಯುದ್ಧದ ಸುಳಿವೇ ಕಾಣುವುದಿಲ್ಲ. ನಾವು ಒಂದು ಗಾವುದ ದೂರ ಹೋಗಿದ್ದೇವೆ. ಪರ್ವತ ದುರ್ಗದಲ್ಲಿ ಒಂದು ದಿನವೆಲ್ಲಾ ಇದ್ದಿದ್ದೇವೆ. ಎಲ್ಲಿಯೂ ಸೈನಿಕರ ಸುಳಿವೇ ಇಲ್ಲ. ಯುದ್ಧದ ಯೋಚನೆಯಿಲ್ಲ. ಹುಜೂರ್, ಆದರೆ ಅವನು ನಮ್ಮ ಕೈಗೆ ಸಿಕ್ಕುತ್ತಾನೆಂಬ ಭರವಸೆ ನಮಗಿಲ್ಲ. ನಾಳೆಯೇ ಸಂಧಿಗೆ ಖಾನ್‌ಸಾಹೇಬರು ಒಪ್ಪಿಗೆ ಕಳುಹಿಸದಿದ್ದರೆ ನಾನು ಓಡಿಹೋಗುತ್ತೇನೆ ಎಂದು ಅವನೇ ಹೇಳಿದ. ಆ ಮಾತು ನಿಜ. ಅವನು ಓಡಿಹೋಗಿ ಯಾವುದೋ ಗುಡ್ಡಗಾಡಿನಲ್ಲಿ ಅವಿತುಕೊಂಡಿರುತ್ತಾನೆ. ನಮ್ಮ ಸೈನ್ಯಗಳೆಲ್ಲಾ ಹಿಂದಕ್ಕೆ ಹೊರಟುಹೋದ ಮೇಲೆ ಈ ಕಾಡು ಜನರನ್ನು ಕಟ್ಟಿಕೊಂಡು ಬಂದು ಪುನಃ ಈ ದುರ್ಗದಲ್ಲಿರುವ ನಮ್ಮ ಅಧಿಕಾರಿಗಳಿಗೆ ಕಾಟ ಕೊಡುತ್ತಾನೆ. ಅವನನ್ನು ಬಿಟ್ಟುಹೋಗಕೂಡದು ಹುಜೂರ್. ಏನಾದರೂ ಮಾಡಿ ಅವನನ್ನು ಬಿಜಾಪುರಕ್ಕೆ ಹಿಡಿದುಕೊಂಡು ಹೋಗಬೇಕು. ಅಲ್ಲಿ ಹದ ಮಾಡಬೇಕು" ಎಂದು ಹೇಳಿದರು.

ಅಫಜಲ್‌ಖಾನನು "ಒಳ್ಳೆಯದು, ಸ್ವಲ್ಪ ಯೋಚನೆ ಮಾಡೋಣ" ಎಂದು ಹೇಳಿ ಅವರನ್ನು ಕಳುಹಿಸಿಕೊಟ್ಟ.

ಆ ದಿನವೆಲ್ಲಾ ಯುದ್ಧಮಾಡಬೇಕೇ ಬೇಡವೇ? ಎಂಬ ಚಿಂತೆಯಲ್ಲಿಯೇ ಕಳೆದ. "ಯುದ್ಧ ಮಾಡುವುದೇನೂ ದೊಡ್ಡ ಮಾತಲ್ಲ. ಅವನು ಕೋಟೆಯೊಳಗಿದ್ದಾನೆ. ಕೋಟೆಯು ಬೆಟ್ಟದ ಮೇಲಿದೆ. ಯುದ್ಧ ಮಾಡಬೇಕಾದರೆ ಫಿರಂಗಿಗಳನ್ನು ಹಾರಿಸಿ, ಕೋಟೆಯನ್ನು ಒಡೆದುಹಾಕಬೇಕು. ಫಿರಂಗಿಯ ಗುಂಡಿನ ಸುದ್ದಿ ಕೇಳುತ್ತಲೇ ಅವನು ಓಡಿಹೋಗುತ್ತಾನೆ. ಈ ಗುಡ್ಡಗಾಡುಗಳಲ್ಲಿ ಅವನನ್ನು ಹಿಡಿಯಲು ಯಾರಿಂದಲೂ ಸಾಧ್ಯವಿಲ್ಲ. ಸಂಧಿಯ ಉಪಾಯದಿಂದಲೇ ಅವನಿಗೆ ರುಚಿಕರವಾದ ಮಾತುಗಳನ್ನು ಹೇಳಿ ಹಿಡಿದೊಯ್ಯುವುದೇ ಲೇಸು" ಎಂದುಕೊಂಡು ಕೃಷ್ಣರಾಯನನ್ನು ಕರೆಸಿದ.

"ಕೃಷ್ಣರಾಯ, ನಿನ್ನ ಆಲೋಚನೆಯೇನು? ಶಿವಾಜಿಯು ಹೆದರಿದ್ದಾನೆಂಬುದು ನಿಜವೆ? ಏಕೆ ಹೆದರಿದ್ದಾನೆ?"

“ಹುಜೂರ್, ಹೆದರಿದ್ದಾನೆಂಬುದು ಸತ್ಯ ಅವನು ಇಂತಹ ಪ್ರಚಂಡ ಸೈನ್ಯವನ್ನು ಎಂದಾದರೂ ಎದುರಿಸಿದ್ದನೆಯೇ? ಅವನಲ್ಲಿ ತೋಪುಗಳಿವೆಯೇ? ಇಷ್ಟೊಂದು ಭಾರಿ ಸೈನ್ಯವನ್ನು ಅವನು ನೋಡಿಯೇ ಇಲ್ಲ. ಅವನಿಗೆ ರಣಕ್ಷೇತ್ರದಲ್ಲಿ ವ್ಯೂಹಕಟ್ಟಿ ನಿಂತು ಯುದ್ಧ ಮಾಡುವ ಅಭ್ಯಾಸವೆಲ್ಲಿದೆ? ಖಾವಿಂದ್. ಕಾಡು ಜನರನ್ನು ಕಟ್ಟಿಕೊಂಡು ಸಣ್ಣಪುಟ್ಟ ಮುಸಲ್ಮಾನ್ ಸೈನಿಕರ ಮೇಲೆ ಬಿದ್ದು ಜಯಗಳಿಸಿದ್ದೇನೆ ಎಂದು ಹೆಮ್ಮೆ ಕೊಚ್ಚಿ ಕೊಳ್ಳುತಿದ್ದ. ಈ ಮಹಾಸಾಗರದಂತಿರುವ ಸೈನ್ಯವನ್ನು ನೋಡಿ ಬೆಚ್ಚಿ ಬಿದ್ದಿದ್ದಾನೆ, ಮೊನ್ನೆ ರಾತ್ರಿ ಅವನ ದೇವರ ಮುಂದೆ ಆತ್ಮಹತ್ಯೆ ಮಾಡಿ ಕೊಳ್ಳಲು ಪ್ರಯತ್ನಿಸಿದ್ದನಂತೆ.

“ಸಂಧಿಯ ಪ್ರಕರಣವನ್ನೇ ಮುಂದುವರಿಸಬಹುದು. ಆದರೆ ಅವನು ನನ್ನನ್ನೇ ಅವನ ಕೋಟೆಗೆ ಬರಬೇಕೆಂದು ಹೇಳುತ್ತಾನೆ. ಅದೇ ಶಂಕಾಸ್ಪದ ವಾಗಿದೆ.”

“ಸಂದೇಹವೇನೂ ಇಲ್ಲ. ಹುಜೂರ್. ಅವನು ಭಯದಿಂದಲೇ ಹಾಗೆ ಹೇಳುತ್ತಾನೆ. ಈ ಶಿಬಿರಕ್ಕೆ ಬಂದರೆ ತನ್ನ ಸಂಗಡಿಗರ ಕಣ್ಣಮುಂದೆ ತನಗೆ ಅಪಮಾನವಾಗಬಹುದೆಂದು ಶಿವಾಜಿಯು ನಾಚುತ್ತಾನೆ. ನಾವೇ ಅಲ್ಲಿಗೆ ಹೋಗಲು ಅಂಜಿಕೆಯೇನಿದೆ, ಹುಜೂರ್?”

“ಅಂಜಿಕೆ–ಅಂಜಿಕೆ, ಯಾರು ಅಂಜುವವರು! ನನಗೆ ಅಂಜಿಕೆಯೆಂದ ರೇನು, ರಾಯರೇ! ಯುಕ್ತಾಯುಕ್ತತೆಗಳನ್ನು ನಿಮ್ಮೊಡನೆ ಆಲೋಚನೆ ಮಾಡಿದೆ. ಇರಲಿ, ನಾವೇ ಪ್ರತಾಪಘಡಕ್ಕೆ ಹೋಗೋಣ. ಅವನದೊಂದು ಮಾತನ್ನು ನಡೆಸಿಕೊಟ್ಟರೆ ನಾವು ಅವನನ್ನು ಹಿಡಿಯುವುದು ಸುಲಭ. ನೀವು ರಸೂಲ್ ಖಾನನೊಡನೆ ನಾಳೆಯೇ ಹೋಗಿ ಭೇಟಿಯ ಏರ್ಪಾಡನ್ನು ಮಾಡಿರಿ. ಭೇಟಿಯ ಸ್ಥಳವನ್ನು ಗೊತ್ತುಮಾಡಿರಿ. ಆ ಸ್ಥಳದ ಸುತ್ತುವಲಯದಲ್ಲಿ ಯಾವ ಸೈನ್ಯಗಳೂ ಇರಕೂಡದು. ನಮ್ಮ ಸೈನ್ಯಗಳೂ ಇಲ್ಲ, ಅವರ ಸೈನ್ಯಗಳೂ ಇರಕೂಡದು. ನಮ್ಮ ಅಂಗರಕ್ಷಕರು ಹತ್ತುಹನ್ನೆರಡು ಮಂದಿ ಬರುತ್ತಾರೆ. ಅವರು ಹೊರಗೆ ಕಾದಿರುತ್ತಾರೆ. ಭೇಟಿಯ ಸ್ಥಳದಲ್ಲಿ ನಾನು ಮತ್ತು ಶಿವಾಜಿ ಇಬ್ಬರೇ ಇರಬೇಕು. ಅದು ಅವರದೇ ಸ್ಥಳವಾದ್ದರಿಂದ ಅವರಿಗೇನೂ ಭಯವಿಲ್ಲ. ದ್ವಾರದಲ್ಲಿ ನಮ್ಮ ಅಂಗರಕ್ಷಕರೇ ಯಾರೂ ಬಾರದಂತೆ ನೋಡಿ

ಕೊಳ್ಳುತ್ತಾರೆ, ಆ ಸ್ಥಳದಲ್ಲಿ ಎಲ್ಲಿಯೂ ಆಯುಧಗಳಾಗಲಿ, ಗುಪ್ತಗೃಹಗಳಾಗಲೀ ಇಲ್ಲದಂತೆ ನೋಡಿಕೊಳ್ಳಬೇಕು. ಅತಿ ಜಾಗರೂಕತೆಯಿಂದ ನೀವು ಇಷ್ಟು ಮಾಡಿಸಿರಿ. ಅವನ ಇಷ್ಟದಂತೆ ನಾವು ಬಂದು ಭೇಟಿ ಕೊಡುತ್ತೇವೆಂದು ತಿಳಿಸಿರಿ"

ಕೃಷ್ಣರಾಯನು "ಸಂದೇಹಕ್ಕೆ ಎಡೆಯೇ ಇರಬಾರದು, ಖಾನ್ ಸಾಹೇಬರೇ. ಅವರ ಸ್ಥಳ, ಅರಮನೆ ಕಟ್ಟಡಗಳು ನಮಗೆ ಬೇಡವೇ ಬೇಡ. ಕೋಟೆಯ ದ್ವಾರವನ್ನು ಪ್ರವೇಶ ಮಾಡುತ್ತಲೇ ದೊಡ್ಡದೊಂದು ಬಯಲಿದೆ. ಆ ಬಯಲಿನಲ್ಲಿ ಹೊಸದಾಗಿ ಗುಡಾರ ಹಾಕಿಸಿಬಿಡುತ್ತೇನೆ. ಆ ಗುಡಾರದಲ್ಲಿ ತಮಗೂ ಶಿವಾಜಿಗೂ ಭೇಟಿ ನಡೆಯಲಿ, ನಮ್ಮ ಕಡೆಯ ನೂರು ಸಿಪಾಯಿಗಳನ್ನು ನಮ್ಮೊಡನೆಯೇ ಕರೆದುಕೊಂಡು ಹೋಗುತ್ತೇನೆ. ಆ ಮೈದಾನದಲ್ಲಿ ನಮ್ಮ ಪಹರೆಯ ಏರ್ಪಾಡು ಮಾಡಿಬಿಡುತ್ತೇನೆ. ತಮ್ಮ ಅಂಗರಕ್ಷಕರು ಗುಡಾರದ ಬಾಗಿಲಿನಲ್ಲಿಯೇ ಇರುತ್ತಾರೆ. ತಾವಿಬ್ಬರೇ ಗುಡಾರದೊಳಗೆ ಅಂತರಂಗವಾಗಿ ಮಾತನಾಡಬಹುದು. ಶಿವಾಜಿಯು ಮಹಾ ಪುಕ್ಕಲ, ಯಾರಾದರೂ ಇದ್ದರೆ ಧಾರಾಳವಾಗಿ ಮಾತನಾಡಲಾರ. ಹಳ್ಳಿಯ ಸ್ವಭಾವ. ಹಳ್ಳಿ ಗಮಾರ್ ಎನ್ನುವುದಿಲ್ಲವೆ ಹಾಗೆ" ಎಂದು ಹೇಳಿ ನಕ್ಕ.

ಖಾನ್‌ಸಾಹೇಬನ ಅಪ್ಪಣೆಯಂತೆ ಮರುದಿನವೇ ಕೃಷ್ಣರಾಯನೂ ರಸೂಲ್‌ಖಾನನೂ ಪ್ರತಾಪಘಡಕ್ಕೆ ಹೋದರು. ವ.ಹಾ ಸೇನಾಧಿಪತಿ ಅಫಜಲ್‌ಖಾನರವರೇ ಬಂದು ಭೇಟಿಕೊಡುತ್ತಾರೆಂದು ಶಿವಾಜಿಗೆ ತಿಳಿಸಿದರು. ಭೇಟಿಯ ವ್ಯವಸ್ಥೆಗಳನ್ನೆಲ್ಲಾ ಕೃಷ್ಣರಾಯರು ಬಿಡಿಸಿ ಬಿಡಿಸಿ ಹೇಳಿದರು.

ಶಿವಾಜಿಯು ಸಂತೋಷದಿಂದ ಧನ್ಯವಾದಗಳನ್ನು ಅರ್ಪಿಸಿದ. ತನ್ನ ಕಡೆಯ ಕಾಮಾಟಿಗಳನ್ನು ಕರೆಸಿ, ಗುಡಾರವನ್ನು ನಿರ್ಮಾಣಮಾಡಲು ಅಪ್ಪಣೆ ಮಾಡಿದ.

ಗುಡಾರ ಹಾಕುವ ಕಳಾಸಿಗಳು ಭವ್ಯವಾದ ಶುಭ್ರವಾದ ಗುಡಾರವನ್ನು ನಿರ್ಮಿಸಿದರು. ಕೋಟೆಯ ಮಹಾದ್ವಾರದಿಂದ ಗುಡಾರದ ಬಾಗಿಲಿನವರೆಗೆ ನಡೆಮುಡಿಗಳನ್ನು ಹಾಸಿದರು. ಗುಡಾರದೊಳಗೆ ಅನರ್ಘ್ಯವಾದ ಪಾರಸೀ ದೇಶದ ರತ್ನಗಂಬಳಿಗಳನ್ನು ಹಾಸಿದರು. ಗುಡಾರದೊಳಗೆ ಕಿಂಕಾಪಿನ

ಪರದೆಗಳನ್ನು ಕಟ್ಟಿದರು. ಮೇಲೆ ಜರಿಗೆಯ ಮೇಲುಕಟ್ಟನ್ನು ಕಟ್ಟಿ ಅಲಂಕರಿಸಿದರು. ಬೆಳ್ಳಿಯ ಸಿಂಹಾಸನವನ್ನು ಸಜ್ಜುಗೊಳಿಸಿಟ್ಟರು. ರಸೂಲ್ ಖಾನನೂ ಕೃಷ್ಣರಾಯನೂ ಜಾಗರೂಕತೆಯಿಂದ ಈ ಏರ್ಪಾಡುಗಳನ್ನು ಕಣ್ಣಿನಲ್ಲಿ ಕಣ್ಣಿಟ್ಟು ನೋಡಿಕೊಳ್ಳುತ್ತಿದ್ದರು.

ಪ್ರತಾಪಘಡಕ್ಕೆ ಬರಬೇಕಾದರೆ, ಎತ್ತ ಕಡೆಯಿಂದಲೂ ರಸ್ತೆಯಿಲ್ಲ. ಸುತ್ತಲೂ ದಟ್ಟವಾಗಿ ಬೆಳೆದ ಕಾಡು-ಗೊಂಡಾರಣ್ಯ, ಶಿವಾಜಿಯ ಕಡೆಯ ಕಾಡುಜನರು ಕಾಡುಗಳನ್ನು ಕಡಿದು ಮೂರು ಮೈಲಿಗಳ ದೂರ ರಸ್ತೆಯನ್ನು ಒಂದೇ ದಿನದಲ್ಲಿ ತಯಾರುಮಾಡಿದರು. ದುರ್ಗದ ತಳದಿಂದ ಮೇಲಿನ ಕೋಟೆಯ ಮಹಾದ್ವಾರದವರೆಗೆ ಹತ್ತಿಹೋಗುವ ರಸ್ತೆಯನ್ನು ಅಚ್ಚುಕಟ್ಟು ಮಾಡಿದರು. ಕೋಟೆಯ ಮೇಲೆ ಬಣ್ಣದ ಪತಾಕೆಗಳನ್ನು ಕಟ್ಟಿ ಅಲಂಕರಿಸಿ ಸಿದ್ದರು. ಗುಡಾರದ ಮುಂದೆ ಪುಷ್ಪಮಾಲೆಗಳಿಂದ ತೋರಣಗಳನ್ನು ಕಟ್ಟಿದ್ದರು. ಗುಡಾರದ ಮೇಲೆ ಥಳಥಳಿಸುವ ಚಿನ್ನದ ಕಳಶವು ರಾಜಿಸುತ್ತಿದ್ದಿತು.

ಅಫಜಲ್‌ಖಾನನು ಮಿತಪರಿವಾರದೊಂದಿಗೆ ಹೊರಟು ದುರ್ಗದಡಿಗೆ ಬಂದು ಸೇರಿದ. ಅಲ್ಲಿಂದ ಮುಂದೆ ಪಲ್ಲಕ್ಕಿಯಲ್ಲಿ ಕುಳಿತು, ದುರ್ಗವನ್ನು ಹತ್ತುವ ವ್ಯವಸ್ಥೆಯಾಗಿತ್ತು. ಶಿವಾಜಿ ಕಡೆಯ ಅಧಿಕಾರಿಗಳು ಅಲ್ಲಿ ಕಾದಿದ್ದು ಮುಜುರೆ ಮಾಡಿ ಖಾನನನ್ನು ಸ್ವಾಗತಿಸಿದರು. ಖಾನನು ಕುದುರೆಯಿಂದ ಇಳಿದು ಪಲ್ಲಕ್ಕಿಯ ಮೇಲೆ ಕುಳಿತುಕೊಂಡನು. ಶಿವಾಜಿಯ ಅಧಿಕಾರಿಗಳು ಎರಡು ಕಡೆಯಿಂದಲೂ ಪುಷ್ಪಗಳನ್ನು ಪಲ್ಲಕ್ಕಿಯ ಮೇಲೆ ಎರಚಿದರು.

ವಾದ್ಯಘೋಷಗಳು ಮೊಳಗಲಾರಂಭಿಸಿದವು. ಸೇನಾಧಿಪತಿ ಅಫಜಲ್ ಖಾನನನ್ನು ಸಂಭ್ರಮದೊಡನೆ ಪ್ರತಾಪಘಡದ ಕೋಟೆಯೊಳಗೆ ಕರೆತಂದರು. ಅಫಜಲ್‌ಖಾನನು ಪಲ್ಲಕ್ಕಿಯಿಂದ ಇಳಿದು ನಿಂತುಕೊಂಡು ಆ ಸ್ಥಳದ ರಮಣೀಯತೆಯನ್ನೂ ಗುಡಾರದ ಭವ್ಯತೆಯನ್ನೂ ನೋಡಿ ಹರ್ಷಿಸಿದ. ಅಂಗರಕ್ಷಕರು ಗುಡಾರದ ಕಡೆಗೆ ದಾರಿ ತೋರಿಸುತ್ತಾ ನಡೆದರು. ಗುಡಾರದ ಬಾಗಿಲಿನಲ್ಲಿ ಒಂದು ಕಡೆ ರಸೂಲ್‌ಖಾನನೂ ಕೃಷ್ಣರಾಯನೂ ನಿಂತಿದ್ದರು. ಮತ್ತೊಂದು ಕಡೆ ಶಿವಾಜಿಯು ಸೌಮ್ಯವೇಷದಿಂದ ಕಾದು ನಿಂತಿದ್ದ.

ಅಫಜಲ್‌ಖಾನನು ಬಾಗಿಲಿಗೆ ಬರುತ್ತಲೇ ಶಿವಾಜಿಯು ನಗುಮೊಗ ದಿಂದ ಸಲಾಂ ಮಾಡಿದ. ಖಾನನು ಮಂದಹಾಸವನ್ನು ಬೀರುತ್ತಾ ಪ್ರತ್ಯಭ

ಪಾದನ ಮಾಡಿದ. ಕೃಷ್ಣರಾಯನು ಗುಡಾರದೊಳಗೆ ಬಿಜಯಮಾಡ ಬೇಕೆಂದು ಕೈತೋರಿಸಿದ ಖಾನನು ಮುಂದೆ ಮುಂದೆ, ಶಿವಾಜಿಯು ಹಿಂದೆ ಹಿಂದೆ ನಡೆಯುತ್ತಿದ್ದರು ಅಫಜಲ್ ಖಾನನ ಅಂಗರಕ್ಷಕನಾದ ವಸ್ತಾದ್ ಭಂಡುವ ಒಳಗೆ ಸಡಗರದಿಂದ ಪ್ರವೇಶಮಾಡಲು ನುಗ್ಗುತ್ತಿದ್ದ.

ಶಿವಾಜಿಯು ರಸೂಲ್ ಖಾನನ ಕಡೆಗೆ ನೋಡಿ "ಒಳಗೆ ಪತ್ತಾರೂ ಇರಬಾರದೆಂದು ಒಪ್ಪಂದವಾಗಿದೆ. ಇವನನ್ನು ಹೊರಗಿರುವಂತೆ ಅಪ್ಪಣೆ ಮಾಡಿರಿ" ಎಂದು ಸನ್ನೆ ಮಾಡಿದ.

ರಸೂಲ್ ಖಾನನು ಭಂಡುವಿನ ಕೈಹಿಡಿದು ಹಿಂದಕ್ಕೆ ಜಗ್ಗಿ ಕಿವಿಯಲ್ಲಿ ಹೇಳಿದ.

"ಇಲ್ಲಿಯೇ ಇರು. ಒಳಗೆ ಹೋಗುವ ಅಗತ್ಯವಿಲ್ಲ. ಅಲ್ಲೇನೂ ಅಪಾಯವಿಲ್ಲ"

ಭಂಡುವು ಹಿಂದಕ್ಕೆ ಸರಿದು ಹೋದ.

ಶಿವಾಜಿಯು ಗುಡಾರದೊಳಗೆ ಪ್ರವೇಶಮಾಡುತ್ತಲೇ ಗುಡಾರದ ಬಾಗಿಲುಗಳು ಮುಚ್ಚಲ್ಪಟ್ಟವು.

ಶಿವಾಜಿಯು ಸಿಂಹಾಸನದ ಕಡೆಗೆ ಕೈತೋರಿಸಿ "ಖಾನ್ ಸಾಹೇಬರು ಈ ಆಸನವನ್ನು ಅಲಂಕರಿಸಬೇಕು" ಎಂದು ನಮ್ರತೆಯಿಂದ ಪ್ರಾರ್ಥನೆ ಮಾಡಿದ.

ಅಫಜಲ್ ಖಾನನು ಬಿರುಗಣ್ಣು ಬಿಟ್ಟು ಆ ಗುಡಾರದ ಸುತ್ತಲೂ ನೋಡಿ ಸಿಂಹಾಸನವನ್ನು ಒಂದು ಬಾರಿ ನೋಡಿ, "ಇದೆಲ್ಲಾ ಏನು? ಈ ಆಡಂಬರ ವೇನು ? ಈ ವೈಭವದ ಪ್ರದರ್ಶನಗಳೇನು? ನಿಮ್ಮ ಐಶ್ವರ್ಯವನ್ನು ಬೆಡಗಿಸುತ್ತಿದ್ದೀಯೋ?" ಎಂದು ಗದ್ದರಿಸಿದ.

ಶಿವಾಜಿಯು ನಮ್ರತೆಯಿಂದ "ಹುಜೂರ್, ಬಿಜಾಪುರದ ಮಹೋನ್ನತ ಅಧಿಕಾರಿಗಳಾದ ತಾವು ಸುಲ್ತಾನರಿಗೆ ಸಮಾನರಾದವರು. ನಮ್ಮೆಲ್ಲರಿಗೂ ಪ್ರಭುಗಳು ತಾವು. ಬಿಜಾಪುರದ ದರ್ಬಾರು, ತಮ್ಮ ಅಂತಸ್ತು ಇವುಗಳಿಗೆ
ಪ್ರಭುಗಳು ತಾವು. ಬಿಜಾಪುರದ ದರ್ಬಾರು, ತಮ್ಮ ಅಂತಸ್ತು ಇವುಗಳಿಗೆ
ತಕ್ಕಂತೆ ಉಪಚಾರ ಮಾಡಬೇಕೆಂಬ ಆಸೆಯಿಂದ ಉತ್ಸಾಹದಿಂದ ಇದನ್ನೆಲ್ಲಾ

ಅತಿ ಪ್ರಯಾಸದಿಂದ ಸಂಪಾದಿಸಿ ಸಿದ್ಧಪಡಿಸಿದ್ದೇವೆ. ನಮ್ಮಂಥಾ ಗುಡ್ಡ ಗಾಡಿನ ಜನರಿಗೆ ಇದೆಲ್ಲಾ ಎಲ್ಲಿದೆ? ನಮಗೆ ಚಾಪೆ ಕಂಬಳಿಗಳೇ ದೊಡ್ಡ ಆಸನಗಳು. ಜಹಪನಾ, ಇದೆಲ್ಲಾ ತಮಗಾಗಿ, ಖಾವಂದರ ಘನತೆಗಾಗಿ, ಬಿಜಾಪುರದ ದರ್ಬಾರಿನ ವೈಭವಕ್ಕಾಗಿ ಏರ್ಪಡಿಸಿದ್ದೇವೆ ಪ್ರಭು.ಅನುಗ್ರಹಿಸ ಬೇಕು" ಎಂದು ನಮ್ರತೆಯಿಂದ ಕೇಳಿಕೊಂಡ.

ಅಫಜಲ್ ಖಾನನ ಉರಿಯೆದ್ದ ಹೃದಯಕ್ಕೆ ತಣುವಾದಂತಾಯಿತು. ಅವನ ಮುಖದಿಂದ ಬೆಂಕಿಯ ನಗುವು ಸಿಡಿಯಿತು.

"ಸಂತೋಷ, ಶಿವಾಜಿ. ನಿನ್ನ ನಡತೆಗೆ ಮೆಚ್ಚಿದ್ದೇನೆ" ಎಂದು ಹೇಳಿ ಆಢ್ಯತೆಯಿಂದ ಸಿಂಹಾಸನದ ಮೇಲೆ ಕುಳಿತುಕೊಂಡ.

"ಶಿವಾಜಿ, ನೀನೂ ಕುಳಿತುಕೋ. ನಾವೆಂದೂ ನಿನ್ನನ್ನು ನೋಡಿಲ್ಲ. ಇಂದು ನೋಡಿದ್ದು ಬಲು ಸಂತೋಷ. ಎರಡು ಸ್ನೇಹ ಬಾಂಧವ್ಯಗಳ ಮಾತು ಗಳನ್ನು ಆಡೋಣ."

ಶಿವಾಜಿಯು ನೆಲಕ್ಕೆ ಹಾಸಿದ್ದ ರತ್ನಗಂಬಳಿಯ ಮೇಲೆಯೇ ಕುಳಿತು ಕೊಂಡನು.

"ನೋಡು, ಶಿವಾಜಿ. ಸಂಧಿಯ ಷರತ್ತುಗಳನ್ನೆಲ್ಲಾ ಕೇಳಿ ತಿಳಿದು ಕೊಂಡಿರುವೆಯಷ್ಟೆ?"

"ಹುಜೂರ್, ಎಲ್ಲವನ್ನೂ ರಾಯಭಾರಿಗಳ ಮೂಲಕ ಕೇಳಿದ್ದೇನೆ. ಈ ಉಪಚಾರಗಳೆಲ್ಲಾ ಏಕೆ ಹುಜೂರ್? ಈ ಶಿವಾಜಿಯು ನಿಮ್ಮವನೆಂದು ಪರಿಗ್ರಹಿಸಿರಿ. ನಾನು ಧನ್ಯನಾದೆನೆಂದು ಭಾವಿಸುತ್ತೇನೆ. ಷರತ್ತುಗಳೆಂದ ರೇನು? ನಾನು ನಿಮ್ಮವನೇ ಆದ ಮೇಲೆ ಷರತ್ತುಗಳು ಏಕೆ? ಯಾರೊಡನೆ ಸಂಧಿ ಮಾಡಿಕೊಳ್ಳಬೇಕು? ನನ್ನ ಸರ್ವಾತ್ಮನಾ ಶರಣಾಗತಿಯನ್ನು ನಿಮಗೆ ಅರ್ಪಿಸಿದ್ದೇನೆ" ಎಂದು ಕೈಮುಗಿದನು.

ಅಫಜಲ್ ಖಾನನು ಸಂತೋಷದಿಂದ ಗಹಗಹಿಸಿ ನಕ್ಕು "ಷಾಜಿಯವರ ಮಗನು ಹೀಗೆಯೇ ಇರಬಹುದೆಂದು ಭಾವಿಸಿದ್ದೆ. ದುರ್ಜನರು ಏನೇನೋ ದೂರಿಕೊಳ್ಳುತ್ತಿದ್ದರು. ನನ್ನ ಭಾವನೆಯೇ ನಿಜವೆಂದು ಖಾಯಂ ಆಯಿತು, ನೀನು ನಮ್ಮವನೇ ಆಗಿಬಿಟ್ಟೆ. ನನ್ನ ಎರಡು ಹಸ್ತಗಳಿಂದಲೂ ತಟ್ಟಿ ಪ್ರಮಾಣ

ಮಾಡಿಕೊಡುತ್ತೇನೆ. ನೀನು ನಮ್ಮವನು. ನಿನ್ನ ಮಾನ ಮನ್ನಣೆ ಗೌರವ ಗಳು ನಮಗೆ ಸೇರಿದ್ದು. ನಮ್ಮ ದರ್ಬಾರಿನಲ್ಲಿ ನಿನ್ನ ತಂದೆಯವರಿಗೆ ಸಮಾನ ಸ್ಥಾನದಲ್ಲಿ ಕೂಡಿಸುವುದು ನನ್ನ ಭಾರ. ಸ್ನೇಹದಿಂದ ನಿನಗೊಂದು ಎಚ್ಚರಿಕೆಯ ಮಾತನ್ನು ಹೇಳುತ್ತೇನೆ. ಬಿಜಾಪುರದ ದರ್ಬಾರಿನಲ್ಲಿ ದೇವರು ಧರ್ಮ ಇವೆಲ್ಲವೂ ಹುಸಿಮಾತುಗಳು.ಶ್ರೀಮಂತರೂ ದರ್ಬಾರಿಗಳೂ ಎಲ್ಲರೂ ನಗುತ್ತಾರೆ. ನಿನಗೆ ಅಲ್ಲಿ ದೊಡ್ಡ ಸೇನಾಧಿಗಾರಿ ಪಟ್ಟವನ್ನು ಕಟ್ಟಿಸುತ್ತೇನೆ ಅದಕ್ಕೆ ತಕ್ಕ ಗಾಂಭೀರ್ಯದಿಂದ ನೀನು ನಡೆದುಕೋ. ಈ ದೇವರು ಧರ್ಮ ಗಳನ್ನು ಇಲ್ಲಿಯೇ ಕಟ್ಟಿಟ್ಟು ಬಾ. ನೀನು ತರುಣನಾಗಿದ್ದೀಯೆ. ವೀರಾ ಗ್ರೇಸರನೆಂದು ಹೆಸರು ಪಡೆದಿದ್ದೀಯೆ. ರಾಜಧಾನಿಯಲ್ಲಿ ಒಬ್ಬ ಶ್ರೀಮಂತ್ರರು ಹೆಣ್ಣನ್ನು ಮದುವೆಯಾಗು. ಆಗ ಪಕ್ಕಾ ದರ್ಬಾರಿಯಾಗುತ್ತೀಯೆ. ದರ್ಬಾರಿನಲ್ಲಿ ನಿನಗೆ ಘನತೆಯು ಬರುತ್ತದೆ. ಇದು ಸೋದರ ಪ್ರೇಮದಿಂದ ಹೇಳಿರುವ ಮಾತು" ಎಂದು ಹೇಳಿದ.

ಶಿವಾಜಿಯು ಎದ್ದು ಮೌನದಿಂದ ಕೈಮುಗಿದ.

ಅಫಜಲಾ ಖಾನನು "ಬಾ ಸೋದರಾ. ನಾವಿಬ್ಬರೂ ಸಮಾನರು. ಆಲಿಂಗನ ಮಾಡೋಣ," ಎಂದು ಎರಡು ತೋಳುಗಳನ್ನೂ ಮುಂದೆ ಚಾಚಿದ. ಶಿವಾಜಿಯು ಅವನ ಮುಂದೆ ಎದೆಗೆ ಎದೆಕೊಟ್ಟು ನಿಂತ. ಇಬ್ಬರೂ ಗಾಢಾ ಲಿಂಗನ ಮಾಡಿದರು

ಶಿವಾಜಿಯು ಅತ್ಯಂತ ಜಾಗರೂಕತೆಯಿಂದ ಇದ್ದ. ಶಿವಾಜಿಯು ಕುಳ್ಳ. ಖಾನನು ಎತ್ತರವಾದ ಮನುಷ್ಯ. ಆಲಿಂಗನ ಮಾಡುವ ಸಮಯ ದಲ್ಲಿ ಶಿವಾಜಿಯ ಕೊರಳನ್ನು ಬಿಗುವಾಗಿ ಒತ್ತಿ ನೆಲಕ್ಕೆ ಬಗ್ಗಿಸಲು ಅಫಜಲ್ ಖಾನನು ತೋಳಿನ ಶಕ್ತಿಯನ್ನು ಪ್ರಯೋಗಿಸಿದ. ಶಿವಾಜಿಯು ಬಲು ಪ್ರಯಾಸದಿಂದ ಹೆಣಗಾಡಿ ಆ ಬಂಧನವನ್ನು ಸಡಲಿಸಿಕೊಂಡ. ಶಿವಾಜಿಯ ಎಡಗೈ ಖಾನನ ಬೆನ್ನು ಮೇಲಿದ್ದಿತು. ಎಡಗೈ ಅಂಗರೇಖದಲ್ಲಿದ್ದ ವ್ಯಾಘ್ರನಖ ವನ್ನು ಜಾರಿಸಿ, ಬೆನ್ನಿಗೆ ನೆಟ್ಟನು. ಬಲಗೈಯಿಂದ ಕಠಾರಿಯನ್ನು ಹಿರಿದು ಪಕ್ಕೆಗೆ ತಿವಿದನು. ಕ್ಷಣದಲ್ಲಿ ಇವೆರಡು ಪೆಟ್ಟುಗಳೂ ಏಕಕಾಲದಲ್ಲಿ ಖಾನನಿಗೆ ಬಲವಾಗಿ ಬಿದ್ದುವು. ಖಾನನು ಆ ನೋವನ್ನು ಲಕ್ಷ್ಯಮಾಡದೇ ಶಿವಾಜಿ

ಯನ್ನು ಆಕ್ರಮಣ ಮಾಡಿದ. ಕ್ಷಣ ಹೊತ್ತು ಇಬ್ಬರೂ ಹೋರಾಡಿ, ಖಾನನು ನೆಲದ ಮೇಲೆ ಬಿದ್ದ.

ಶಿವಾಜಿಯು ಅವನ ಮೇಲೆ ವೀರ ಮಂಡಿಯೂರಿ ಕುಳಿತು, ಕಠಾರಿಯನ್ನು ಖಾನನ ಎದೆಗೆ ಇರಿದ. ಖಾನನು ಅರಚುತ್ತಾ ಆರ್ತನಾದ ಮಾಡಿದ. ಬಂಡುವೂ ಅಂಗರಕ್ಷಕರೂ ಗಾಬರಿಗೊಂಡು ಭರದಿಂದ ಗುಡಾರದೊಳಗೆ ನುಗ್ಗಿದರು. ಬಾಗಿಲಿನಲ್ಲಿ ಕೈಕಟ್ಟಿಕೊಂಡು ನಿಂತಿದ್ದ ಶಿವಾಜಿಯ ಸಂಗಡಿಗರಾದ ಮರಾಠಾ ಸರದಾರರು ಕತ್ತಿಯನ್ನು ಬೀಸಿ ಬಂಡುವನ್ನು ಚೂರುಚೂರು ಮಾಡಿ ಕಾಲಿನಿಂದ ಒದೆದು ತಳ್ಳಿದರು. ಅಂಗರಕ್ಷಕರೂ ಸೇನಾಧಿಪತಿ ರಸೂಲ್ ಖಾನನೂ ಡೇರೆಯೊಳಗೆ ಸಾಹಸದಿಂದ ನುಗ್ಗಿ ಬಂದರು. ಶಿವಾಜಿಯು ಪರದೆಯೊಳಗಿನಿಂದ ಜಾರಿ ಪರಾರಿಯಾಗಿ ಹೋಗಿದ್ದ. ಅಫಜಲ್ ಖಾನನು ನೊಂದು ಆರ್ತನಾದ ಮಾಡುತ್ತಾ ನೆಲದ ಮೇಲೆ ಹೊರಳುತ್ತಿದ್ದ. ಅಂಗರಕ್ಷಕರು ಅವನನ್ನು ಎತ್ತಿಕೊಂಡು ತಂದು ಪಲ್ಲಕ್ಕಿಯಲ್ಲಿ ಕೂಡಿಸಿ ಲಗುಬಗೆಯಿಂದ ಹೊತ್ತುಕೊಂಡು ಓಡಲು ಪ್ರಯತ್ನ ಪಟ್ಟರು

ಮರಾಠಾ ಸರದಾರರುಗಳು ಆ ಅಂಗರಕ್ಷಕರನ್ನೆಲ್ಲಾ ಕತ್ತಿಗಳಿಂದ ಹೊಡೆದು ಕೆಡಹಿದರು. ಪಲ್ಲಕ್ಕಿಯು ನೆಲಗಚ್ಚಿ ಬಿದ್ದಿತು. ಅಫಜಲ್ ಖಾನನ ಪ್ರಾಣವು ಹಾರಿ ಹೋಯಿತು.

ಅಫಜಲ್ ಖಾನನ ಸೈನಿಕರು ತಮ್ಮ ಶಿಬಿರದಲ್ಲಿ, ಆಮೋದ ಪ್ರಮೋದಗಳಲ್ಲಿದ್ದರು. ಅಫಜಲ್ ಖಾನನು ಶಿಬಿರದಲ್ಲಿಲ್ಲ. ಯಾರಿಗೂ ಭಯವಿಲ್ಲ. ಚೆನ್ನಾಗಿ ಕುಡಿದು ಪ್ರಮತ್ತರಾಗಿ ಬಿದ್ದಿದ್ದರು

ನೇತಾಜಿಯೂ ತಾನಾಜಿಯೂ ಅರಣ್ಯಮಧ್ಯದಿಂದ ಸಾಲು ಸಾಲಾಗಿ ಅಶ್ವಸೈನ್ಯದೊಡನೆ ಹೊರಟು ಅಫಜಲ್ ಖಾನನಶಿಬಿರದಮೇಲೆ ಬಿದ್ದು ಸೈನಿಕರನ್ನು ಸಂಹರಿಸಲಾರಂಭಿಸಿದರು. ಗುಡಾರಗಳಲ್ಲಿ ಪ್ರಮತ್ತರಾಗಿದ್ದ ಸೇನಾಧಿಪತಿಗಳು ಆ ಕೋಲಾಹಲವನ್ನು ಕೇಳಿ ಗಾಬರಿಗೊಂಡು ಕತ್ತಿಗಳನ್ನು ಹಿಡಿದು ಗುಡಾರಗಳಿಂದ ಹೊರಗೆ ಬಂದು ಸುತ್ತಲೂ ನೋಡುವಷ್ಟರಲ್ಲಿ ಅವರತಲೆಗಳು ನೆಲಕ್ಕೆ ಉರುಳಿದವು.

ಸೂರ್ಯನು ಅಸ್ತಮಿಸುವವರೆಗೆ, ಕರಾಳ ರಾತ್ರಿಯು ಕವಿಯುವವರೆಗೆ ಹೊಡೆದಾಟಗಳು ನಡೆಯುತ್ತಲೇ ಇದ್ದುವು. ಬಿಜಾಪುರದ ಸೈನ್ಯಗಳು ಘಾಸಿಗೊಂಡವು. ಅಳಿದು ಬಿದ್ದುವು. ಉಳಿದವರು ಪಲಾಯನ ಮಾಡಿದರು. ಮರಾಠಾ ಸೈನಿಕರಿಗೂ ಬಿಜಾಪುರದ ಸೈನಿಕರಿಗೂ ಅಲ್ಲಲ್ಲಿ ಸಣ್ಣ ಸಣ್ಣ ಹೋರಾಟಗಳು ನಡೆಯುತ್ತಿದ್ದವು.

ಶಿವಾಜಿಯು ಕೃಷ್ಣರಾಯನಿಗೆ ಭರವಸೆ ಕೊಟ್ಟು ಧೈರ್ಯ ಹೇಳಿದ. ಅಫಜಲ್‌ಖಾನನ ಮೃತ ಕಳೇಬರವನ್ನು ಪಲ್ಲಕ್ಕಿಯಲ್ಲಿರಿಸಿ, ಪ್ರತಾಪಘಡದ ದುರ್ಗದಿಂದ ಕೆಳಗೆ ತೆಗೆಸಿಕೊಂಡು ಬಂದು ಬೆಟ್ಟದ ತಪ್ಪಲಿನಲ್ಲಿ ರಮ್ಯವಾದ ಪ್ರದೇಶದಲ್ಲಿ ಶಿವಾಜಿಯೇ ಎದುರಿಗೆ ನಿಂತು ಗೋರಿ ಮಾಡಿಸಿದ. ಆ ಗೋರಿಗೆ ತನ್ನ ಕೈಯಿಂದಲೇ ಧೂಪ ಹಾಕಿ ಪುಷ್ಪಗಳನ್ನು ಅರ್ಪಿಸಿದ.

## ೧೭

ಅಫಜಲ್‌ಖಾನನ ಮರಣ ವಾರ್ತೆಯು ಬಿಜಾಪುರಕ್ಕೆ ತಲುಪಿತು ಸಿಡಿಲು ಬಡಿದಂತಾಯಿತು ದರಬಾರಿಗಳೆಲ್ಲರೂ ಕಣ್ಣೀರಿಟ್ಟರು. ಬಿಜಾಪುರದ ಭುಜಬಲವೇ ಕಳಚಿಬಿದ್ದಂತಾಯಿತೆಂದು ಪರಿತಪಿಸಿದರು. ಬಿಜಾಪುರದ ಮಹಲುಗಳ ಮೇಲೆಯೂ ಕೋಟೆಯ ಮೇಲೆಯೂ ಕಪ್ಪು ಬಾವುಟಗಳು ಏರಿಸಲ್ಪಟ್ಟುವು. ಬೇಗಂ ಸಾಹೇಬಳಿಗೆ ಸಮಾಚಾರವು ತಿಳಿಯಿತು. ಶಿವಾಜಿಯ ಕೈಯಿಂದಲೇ ಅಫಜಲ್‌ಖಾನನು ಕೊಲ್ಲಲ್ಪಟ್ಟನೆಂದು ಕೇಳಿದಳು. ಬೇಗಂಸಾಹೇಬಳು ಅಳುತ್ತಾ ಅಫಜಲ್‌ಖಾನನ ಪರಾಕ್ರಮವನ್ನು ನೆನೆದು ಪ್ರಲಾಪಿಸುತ್ತಾ ತನ್ನ ಕೋಣೆಯೊಳಗೆ ಹೋಗಿ ಕೈಗಳಿಂದ ತಲೆ ಬಡಿದುಕೊಳ್ಳುತ್ತಾ ಬಿದ್ದು ಮೂರ್ಛಿತಳಾದವು. ಬೇಗಂಸಾಹೇಬಳು ಹೊರಗೆ ಬರಲೇ ಇಲ್ಲ.

ವಜೀರ ಸಿದ್ದಿ ಮಸೂದನು ಗಾಬರಿಗೊಂಡ. ಅಫಜಲ್‌ಖಾನನು ಸತ್ತು ಹೋದನೆಂಬುದನ್ನು ನಂಬುವುದಕ್ಕೆ ಅವನ ಮನಸ್ಸು ಒಪ್ಪಲಿಲ್ಲ. ಶಿವಾಜಿಯನ್ನೆ

ಮೋಸದಿಂದ ಅಫಜಲ್‌ಖಾನನ್ನು ಕೊಲೆ ಮಾಡಿದನೆಂಬ ಮಾತುಗಳನ್ನು ಕೇಳಿ ಕಟಕಟನೆ ಹಲ್ಲು ಕಡಿದ.

ತನ್ನ ಸಹೋದರನಾದ ಸಿದ್ದಿಜೋಹರನನ್ನು ಕರೆಕಳುಹಿಸಿ, "ಜೋಹರ್, ನೀನು ಪ್ರತಾಪಘಡದ ಮೇಲೆ ಸೈನ್ಯಸಮೇತನಾಗಿ ಯುದ್ಧಕ್ಕೆ ಹೋಗಬೇಕು. ಶಿವಾಜಿಯು ಕಳ್ಳ, ಮೋಸಗಾರ, ಯುದ್ಧಕ್ಕೆ ಸಿಕ್ಕುವವನಲ್ಲ. ಹೇಗಾದರೂ ಅವನನ್ನು ಹಿಡಿದು ತರಬೇಕು. ಇಲ್ಲವೇ ಕೊಂದುಹಾಕಿ ತಲೆಯನ್ನು ಕಡಿದು ತರಬೇಕು. ಬಿಜಾಪುರದ ದರಬಾರಿನ ಮರ್ಯಾದೆಯು ನಿನ್ನಿಂದ ಉಳಿಯು ಬೇಕು. ಭಂಡಾರದಿಂದ ಎಷ್ಟು ಧನವನ್ನಾದರೂ ತೆಗೆದುಕೊಂಡು ಹೋಗು. ನಮ್ಮಲ್ಲಿರುವ ಸೈನ್ಯವನ್ನೆಲ್ಲಾ ತೆಗೆದುಕೊಂಡು ಹೋಗು. ದಾರಿಯಲ್ಲಿ ನಮ್ಮ ಸೈನಿಕರು ಸಿಕ್ಕಿದರೆ ಅವರನ್ನೂ ಜೊತೆಗೊಳಿಸಿಕೊಂಡು ಹೋಗು" ಎಂದು ಆಜ್ಞಾಪಿಸಿದ.

ಸಿದ್ದಿಜೋಹರನು ಸೈನ್ಯಸಮೇತ ಪ್ರತಾಪಘಡದ ಸಮೀಪಕ್ಕೆ ಸೇರುವ ಹೊತ್ತಿಗೆ ಶಿವಾಜಿಯು ಪ್ರತಾಪಘಡವನ್ನು ಬಿಟ್ಟು ತನ್ನ ಸೈನ್ಯವೆಲ್ಲವನ್ನೂ ಜಮಾಯಿಸಿಕೊಂಡು ಹೊರಟಿದ್ದ.

ಪನ್ಹಾಳದಲ್ಲಿ ಶಿವಾಜಿಯ ಸೈನ್ಯಗಳು ಬೀಡುಬಿಟ್ಟಿದ್ದವು. ಜೋಹರನು ಎಲ್ಲಿ ನೋಡಿದರೂ ಈ ಮರಾಠಾ ಸೈನ್ಯಗಳಿವೆ. ಸಣ್ಣ ಸಣ್ಣ ಗುಂಪುಗಳು. ಅವುಗಳ ಮೇಲೆ ನಾವು ದೊಡ್ಡ ಸೈನ್ಯದೊಡನೆ ಯುದ್ಧ ಮಾಡುತ್ತಾ ಹೋದರೆ ಹತ್ತು ವರುಷಗಳಾದರೂ ಈ ಯುದ್ಧವು ಪೂರೈಸುವುದಿಲ್ಲ, ಶಿವಾಜಿಯು ಎಲ್ಲಿದ್ದನೆಂಬುದನ್ನು ಹುಡುಕಿಸಿ ಖಚಿತ ಮಾಡಿಕೊಳ್ಳಬೇಕು. ಹಠಾತ್ತನೆ ಅವನ ಮೇಲೆ ಬಿದ್ದು ಹಿಡಿಯಬೇಕು. ಎಂದು ನಿರ್ಧರಿಸಿಕೊಂಡ. ಬೇಹು ಕಾರರನ್ನು ನಾಲ್ಕೂಕಡೆ ಅಟ್ಟಿದನು. ಇಬ್ಬರು ಬೇಹುಕಾರರು ಶಿವಾಜಿಯು ಸೈನ್ಯ ಸಮೇತ ಪನ್ಹಾಳದಲ್ಲಿ ಬೀಡು ಬಿಟ್ಟಿದ್ದಾನೆಂದು ಅಲ್ಲಿ ಅವನ ಸಂಗಡಿಗ ರೆಲ್ಲರೂ ಇದ್ದಾರೆಂದೂ ಸಂಕ್ರಾಂತಿಯವರೆಗೆ ಅಲ್ಲಿರುತ್ತಾನೆಂದೂ ಖಚಿತವಾಗಿ ಹೇಳಿದರು.

ಜೋಹರನು ಕತ್ತಲಾಗ ವವರೆಗೆ ಸಿರಾಲೋಚನೆಯಿಂದ ಇದ್ದು ಕತ್ತಲಾಗುತ್ತಲೇ ಚಡಪಡಿಸಹತ್ತಿದನು. ಸೇನಾಧಿಪತಿಗಳನ್ನು ಕರೆಸಿ, "ನೀವುಗಳು ಮೂರು ಭಾಗಗಳಾಗಿ ನಮ್ಮ ಸೈನ್ಯಗಳನ್ನು ವಿಂಗಡಿಸಿಕೊಂಡು

ಪನ್ಹಾಲವನ್ನು ಹಠಾತ್ತನೆ ಮುತ್ತಬೇಕು. ಹಿಂದುಗಡೆಯಿಂದ ನಮ್ಮ ಅಶ್ವ ಸೈನ್ಯವು ಬರುತ್ತಿರಬೇಕು" ಎಂದು ಅಪ್ಪಣೆಯಿತ್ತು ತಾನೇ ಕುದುರೆಯನ್ನೇರಿ ಶಿವಾಜಿಯು ಶಿಬಿರದ ಸಮೀಪವನ್ನು ಸೇರಿದ.

ಶಿಬಿರದ ಕಾವಲುಗಾರರು ಈ ಸುದ್ದಿಯನ್ನು ಶಿವಾಜಿಗೆ ಮುಟ್ಟಿಸಿದರು. ಮರಾಠಾ ಸೈನ್ಯಗಳು ಯುದ್ಧಕ್ಕೆ ಸಜ್ಜಾಗಿ ನಿಂತವು. ಸಿದ್ದೀ ಜೋಹರನ ಸೈನ್ಯಗಳು ಹಠಾತ್ತನೆ ಮೇಲೆ ಬಿದ್ದರೂ ಮರಾಠಾ ಸೈನಿಕರೂ ದಳಪತಿಗಳೂ ಯುದ್ಧಕ್ಕೆ ಸಿದ್ಧರಾಗಿಯೇ ಇದ್ದರು. ಆ ರಾತ್ರಿ ರಣಾರಣಿ ಯುದ್ಧವು ಆರಂಭವಾಯಿತು.

ಬಿಜಾಪುರದ ಸೈನಿಕರು ಸಂಖ್ಯೆಯಲ್ಲಿ ಅಷ್ಟೇನೂ ಹೆಚ್ಚಾಗಿರಲಿಲ್ಲ. ಇದರೆ ಹಿಂದಿನಿಂದ ಬಹು ಸಂಖ್ಯಾತವಾದ ಬಿಜಾಪುರದ ಅಶ್ವ ಸೈನ್ಯವು ಬರುತ್ತಿದೆಯೆಂದು ಸಮಾಚಾರವು ಬಂದಿತು. ಶಿವಾಜಿಯು ತನ್ನ ಸಂಗಡಿಗರನ್ನು ಕರೆದು ಸಮಾಲೋಚನೆ ಮಾಡಿದ.

"ಬಿಜಾಪುರದ ಅಶ್ವ ಸೈನ್ಯಗಳು ಹೆಸರುವಾಸಿಯಾದವುಗಳು. ಸಂಖ್ಯೆಯಲ್ಲಿಯೂ ಹೆಚ್ಚಾಗಿವೆ. ಅವರ ಸೈನ್ಯದಲ್ಲಿ ತೋಪುಗಳಿವೆ. ಈ ಸ್ಥಳವು ನಮಗೆ ಅನುಕೂಲವಾಗಿಲ್ಲ. ನಮಗೆ ಪರಾಜಯವು ಸಿದ್ಧ. ಅನ್ಯಾಯವಾಗಿ ನಮ್ಮ ಸೈನ್ಯಗಳನ್ನು ಬಲಿ ಕೊಡುತ್ತೇವೆ. ಈಗಿರುವುದು ಒಂದೇ ಉಪಾಯ. ನಮ್ಮ ಸೈನ್ಯಗಳಲ್ಲಿ ಅರ್ಧ ಭಾಗ ಸೈನ್ಯವು ಇಲ್ಲಿ ಯುದ್ಧ ಮಾಡುತ್ತಿರಲಿ, ಒಬ್ಬನೇ ಶೂರನಾದ ಸೇನಾಧಿಪತಿಯು ಇಲ್ಲಿರಲಿ. ನಾನು ಇಲ್ಲೇ ಇರುತ್ತೇನೆ. ನೀವೆಲ್ಲರೂ ಈ ಮಾರ್ಗವನ್ನು ಅತಿಕ್ರಮಿಸಿ, ಜಾಗ್ರತೆಯಾಗಿ ಅರಣ್ಯ ಪ್ರದೇಶವನ್ನು ಸೇರಿಕೊಳ್ಳಿರಿ. ಆ ಸ್ಥಳವು ಸುರಕ್ಷಿತವಾಗಿರುತ್ತದೆ. ದೈವೇಚ್ಛೆಯು ಹೇಗೇಯೋ ಇದೆಯೆಂದು ನಿರ್ಧರಿಸಲು ನಮ್ಮಿಂದ ಶಕ್ಯವಿಲ್ಲ. ನನ್ನನ್ನು ಶತ್ರುಗಳು ಸೆರೆ ಹಿಡಿಯಬಹುದು ನಾನೇ ಯುದ್ಧದಲ್ಲಿ ಮಡಿದುಹೋಗಬಹುದು. ನೀವೆಲ್ಲರೂ ಸುಸ್ಥಿರತೆಯಿಂದ ಮಹಾರಾಷ್ಟ್ರ ದೇಶವನ್ನು ರಕ್ಷಿಸಬೇಕು. ರಾಮದಾಸ ಗುರುಗಳ ಸನ್ನಿಧಿಗೆ ಹೋಗಿರಿ. ನಾನು ಕಾಲಗತಿ ಹೊಂದಿದರೆ ನೀವೆಲ್ಲರೂ ಒಂದೊಂದು ದುರ್ಗವನ್ನು ಹಿಡಿದು ರಕ್ಷಿಸಬೇಕು. ರಾಮದಾಸಸ್ವಾಮಿಗಳ ಆಜ್ಞೆಯಂತೆ ನಡೆಯಿರಿ" ಎಂದು ಅಪ್ಪಣೆ ಮಾಡಿದ.

ಸೇನಾಧಿಪತಿಗಳು ಒಪ್ಪಲಿಲ್ಲ. ಹೆಜ್ಜೆಯನ್ನು ಮುಂದಿಡಲೂ ಇಲ್ಲ. ಹಿಂದಕ್ಕೆ ಸರಿಯಲೂ ಇಲ್ಲ.

ಶಿವಾಜಿಯು ರೋಷದಿಂದ ಘರ್ಜಿಸಿದ: "ನನ್ನ ಮಾತು ಮೀರಬೇಡಿರಿ. ರಾಷ್ಟ್ರವು ನಾಶವಾಗಿ ಹೋಗುತ್ತದೆ. ಕ್ಷಣಕಾಲ ತಾಮಸ ಮಾಡಬೇಡಿರಿ. ದೇವಿ ಭವಾನಿಯು ಮುಂದೆ ಎಂಥಾ ಸಮಯದಲ್ಲಿಯೂ ನನ್ನ ಮಾತನ್ನು ಮೀರುವುದಿಲ್ಲವೆಂದು ಪ್ರಮಾಣ ಮಾಡಿಕೊಟ್ಟಿದ್ದೀರಿ. ಎಚ್ಚರಿಕೆ. ತಕ್ಷಣ ಹೊರಡಿರಿ."

ಬಾಜೀಪ್ರಭುವು ಎಲ್ಲರ ಮುಖವನ್ನೂ ನೋಡಿದ. ಶಿವಾಜಿಯು ಮುಖವನ್ನೂ ನೋಡಿದ. ಕಳಕಳಿಸುವ ಬೆಂಕಿಯ ಕೆಂಡದಂತೆ ಶಿವಾಜಿಯ ಕಣ್ಣುಗಳು ಕೆಂಪಗೆ ಹೊಳೆಯುತ್ತಿದ್ದವು. ಮುಖವು ಜ್ವಲಿಸುತ್ತಿರುವಂತೆ ಭಾಸವಾಯಿತು.

ಬಾಜೀಪ್ರಭುವು "ಮಹಾರಾಜ್, ನೀವು ಹೇಳಿದ ಆಜ್ಞೆಯನ್ನು ಮರಣಪರ್ಯಂತ ಪಾಲಿಸುತ್ತೇವೆಂದು ನಾವು ಪ್ರಮಾಣ ಮಾಡಿಕೊಟ್ಟಿದ್ದೇವೆ. ಮೃತ್ಯುಪಾಶವು ನಮ್ಮ ಕೊರಳನ್ನು ಬೀರಿ ಸೆಳೆಯುತ್ತಿವೆ. ಇದುವರೆಗೆ ನಿಮ್ಮ ಆಜ್ಞಾಪಾಲನ ಮಾಡಿದ್ದೇವೆ. ಅದಕ್ಕೆ ದೇವಿ ಭವಾನಿಯು ಸಾಕ್ಷಿಯಾಗಿದ್ದಾಳೆ ಈಗ ಅಂತ್ಯಕಾಲದಲ್ಲಿ ನಾವು ಕೇಳಿಕೊಳ್ಳುವ ವರಪ್ರಧಾನವನ್ನು ನೀವು ಅನುಗ್ರಹಿಸಲೇ ಬೇಕು. ನೀವಿಲ್ಲದಿದ್ದರೆ ಈ ರಾಷ್ಟ್ರವೆಲ್ಲಿರುತ್ತದೆ? ಈ ಸೈನ್ಯಗಳೆಲ್ಲಿ ಉಳಿಯುತ್ತವೆ? ಈ ಸೇನಾಧಿಪತಿಗಳು ಏನು ಮಾಡಬಲ್ಲರು. ನಿಮ್ಮ ಮುಂದಾಳುತನದಿಂದ ನಾವು ಕಟ್ಟಿರುವ ಈ ಜನ, ಈ ರಾಷ್ಟ್ರ ಎಲ್ಲವೂ ನಿರ್ನಾಮವಾಗಿ ಹೋಗುತ್ತದೆ. ದೇವಿ ಭವಾನಿಯ ವರಪ್ರಸಾದವು ಇಷ್ಟು ಕ್ಷಣಿಕವಾದುದಲ್ಲ. ಚಂಚಲವಾದುದಲ್ಲ. ನಮ್ಮ ವಿವೇಕದಿಂದ, ನಮ್ಮ ಪೌರುಷದಿಂದ ಆ ಭವಾನಿಯ ವರಪ್ರಸಾದವನ್ನು ಶಾಶ್ವತವಾಗಿ ಉಳಿಸಿಕೊಳ್ಳಬೇಕು. ನೀವೆಲ್ಲರೂ ಇಲ್ಲಿಂದ ಹೊರಟುಹೋಗಿರಿ. ಪ್ರಭು, ನೀವು ಮೊದಲು ಹೊರಡಬೇಕು. ನಾನು ಬೆಳಗಿನವರೆಗೆ ಯುದ್ಧವನ್ನು ಆಧಿಕಾರವನ್ನು ನನಗೆ ಅನುಗ್ರಹಿಸಿರ. ಇದೇ ನನ್ನ ಬೇಡಿಕೆ. ನಾನೊಬ್ಬನೇ ಈ ದಿನ ಯುದ್ಧವನ್ನು ಗೆಲ್ಲಬಲ್ಲೆ" ಎಂದು ಹೇಳಿದ.

ಸೇನಾಧಿಪತಿಗಳೆಲ್ಲರೂ "ಷಹಬಾಸ್. ಅದು ವಿವೇಕದ ಮಾತು. ಗಂಡು ಮಾತು" ಎಂದು ಹೇಳಿದರು.

ಶಿವಾಜಿಯು ಆವಾದಕ್ಕಾಗಿ ತಲೆಬಾಗಿ ಬಾಜೀಪ್ರಭುವನ್ನು ಆಲಂಗಿಸಿ, ಹೊರಟ.

"ಬಾಜೀಪ್ರಭು, ನಾವು ಸುರಕ್ಷಿತ ಸ್ಥಾನವನ್ನು ಸೇರುತ್ತಲೇ ಪೂರ್ವ ದಿಕ್ಕಿನಿಂದ ಗುಂಡುಹಾರಿಸುತ್ತೇವೆ. ನೀನು ಉಳಿದ ಸೈನ್ಯವನ್ನೂ ಕಟ್ಟಿಕೊಂಡು ಅತ್ತ ಕಡೆಗೆ ಓಡಿ ಬಂದುಬಿಡು ಅದುವರೆಗೆ ಯುದ್ಧದ ಸೋಗನ್ನು ತೋರುತ್ತಾ ನಮ್ಮ ಸೈನ್ಯಗಳು ಜೋಹರನ ಸೈನ್ಯಗಳನ್ನು ತಡೆದು ನಿಲ್ಲಿಸಲಿ" ಎಂದು ಹೇಳಿ ಶಿವಾಜಿಯು ತನ್ನ ಸಂಗಡಿಗರೊಡನೆ ವನಪ್ರಾಂತಗಳ ಕಡೆಗೆ ಧಾವಿಸಿದ.

ಅರ್ಧಸೈನ್ಯಗಳು ಅವರನ್ನು ಹಿಂಬಾಲಿಸಿ ಹೋದವು.

ಅರ್ಧರಾತ್ರಿಯು ಕಳೆದು ಮೂರನೆಯ ಝಾವವು ಬಂದಿತ್ತು. ಸಿದ್ದೀ ಜೋಹರನು ಮರಾಠಾ ಸೈನ್ಯದೊಡನೆ ಬಲವಾದ ಹೋರಾಟ ನಡೆಸಿದ್ದ.

ಬಾಜೀಪ್ರಭು ಮುಂದೆ ನುಗ್ಗಿ ಜೋಹರನನ್ನು ಎರಡುಬಾರಿ ಹಿಂದಕ್ಕೆ ಓಡಿಸಿದ. ಪುನಃ ಪರ್ವತಕಾಲದ ಸಮುದ್ರದ ಅಲೆಗಳಂತೆ ತರುಷ್ಕ ಸೈನ್ಯಗಳು ಮೇಲೆ ಮೇಲೆ ಬಂದು ಬೀಳುತ್ತಿದ್ದವು. ಮಹಾರಾಷ್ಟ್ರದ ಸೈನ್ಯಗಳು ಕತ್ತಿಯ ಪೆಟ್ಟಿಗೆ ನೆಲದ ಮೇಲೆ ಉರುಳುತ್ತಿದ್ದವು ಶಿವಾಜಿಯ ಭಟ್ಟರು ಇನ್ನೂರು ಮಂದಿ ಮಾತ್ರ ಉಳಿದಿದ್ದರು. ಬಾಜಿಪ್ರಭುವಿಗೆ ಮೈಯೆಲ್ಲಾ ಕತ್ತಿಯ ಪೆಟ್ಟುಗಳು ತಗುಲುತ್ತಿದ್ದವು. ರಕ್ತವು ಜಿನುಗುತ್ತಿದ್ದಿತು. ಅವನು "ಹಿಂಜರಿಯಬೇಡಿ. ಮುಂದಕ್ಕೆ ನುಗ್ಗಿರಿ. ಪ್ರಾಣದ ಆಸೆ ಮಾಡಬೇಡಿರಿ" ಎಂದು ಕೂಗಿ ಹೇಳಿ ಹುರಿದುಂಬಿಸುತ್ತಿದ್ದ. ಆ ಇನ್ನೂರು ಮಂದಿ ಭಟರು ಪುನಃ ಮುಂದೆ ನುಗ್ಗಿ ಸೈನ್ಯವನ್ನು ಸ್ವಲ್ಪ ಮಟ್ಟಿಗೆ ಹಿಮ್ಮೆಟ್ಟಿಸಿದರು. ಪೂರ್ವ ದಿಕ್ಕಿನಿಂದ ಢಿಂ ಎಂದು ಗುಂಡಿನ ಸದ್ದಾಯಿತು. ಬಾಜೀಪ್ರಭುವು "ಜಯ ಜಯ ಭವಾನಿ" ಎಂದು ಕೂಗುತ್ತಾ ನೆಲದ ಮೇಲೆ ಉರುಳಿದ. ಸೈನಿಕರು ಓಡಿ ಬಂದು ನೋಡಿದರು. ಕ್ಷಣದಲ್ಲಿ ಪಲ್ಲಕ್ಕಿಯ ಮೇಲಿಟ್ಟುಕೊಂಡು ವನಪ್ರದೇಶಗಳ ಕಡೆಗೆ ಓಡಿಹೋದರು. ಬೆಳಕು ಹರಿಯಿತು. ಸೂರ್ಯನು ಜಗಜಗನೆ ಪ್ರಕಾಶಿಸಿದನು. ಸಿದ್ದಿಜೋಹರನು ರಣಭೂಮಿಯಲ್ಲಿ ಸುತ್ತಿ ನೋಡಿದನು. ಒಬ್ಬ ಮರಾಠಾ ಸೈನಿಕನೂ ಕಣ್ಣಿಗೆ ಬೀಳಲಿಲ್ಲ. ಕುದುರೆಗಳು ನೆಲದ ಮೇಲೆ

ಸುತ್ತಿಬಿದ್ದಿದ್ದ ತಮ್ಮ ತಮ್ಮ ಸವಾರುಗಳ ಮುಖಗಳನ್ನು ಆಘ್ರಾಣಿಸುತ್ತಾ ಕಣ್ಣೀರು ಸುರಿಯುತ್ತಿದ್ದವು. ರಣಭೂಮಿಯಲ್ಲಿ ನೊಂದು ಮರಣೋನ್ಮುಖರಾದ ಸೈನಿಕರ ಆರ್ತನಾದ ಕುದುರೆಗಳ ಝೇಂಕಾರಗಳು ತುಂಬಿಹೋಗುತ್ತಿದ್ದವು.

ಸಿದ್ದಿ ಜೋಹರನು ಶಿವಾಜಿಯು ತಪ್ಪಿಸಿಗೊಂಡು ಹೋಗಿದ್ದಾನೆಂದು ಬಹುಬೇಗ ನಿರ್ಧಾರಮಾಡಿಕೊಂಡ. ಅವನು ಕಾಲವನ್ನು ವ್ಯರ್ಥವಾಗಿ ಕಳೆಯಲಿಲ್ಲ. ತನ್ನ ಸೈನಿಕರನ್ನು ಕರೆದುಕೊಂಡು ಹತ್ತು ಮೈಲಿಗಳ ಸುತ್ತಳತೆಯಲ್ಲಿ ಹುಡುಕಿ ನೋಡಿದ. ಸಂಧ್ಯಾಕಾಲದವರೆಗೆ ಅವನಿಗೆ ಯಾವ ಗುರುತುಗಳೂ ಸಿಕ್ಕಲಿಲ್ಲ. ಸೂರ್ಯಾಸ್ತಮಾನ ಸಮಯಕ್ಕೆ ದಣಿದು ಬೇಸತ್ತು ಸಿದ್ದಿ ಜೋಹರನೂ ತನ್ನ ಶಿಬಿರವನ್ನು ಸೇರಿ ಗುಡಾರದೊಳಗೆ ಹೋಗಿ ಜ್ಞಾನಶೂನ್ಯನಾಗಿ ಬಿದ್ದ.

ಬೆಳಕು ಹರಿಯಿತು. ಸಿದ್ದ ಜೋಹರನು ಇತಿಕರ್ತವ್ಯತಾಮೂಢನಾಗಿ ತಲೆಯ ಮೇಲೆ ಕೈಯಿಟ್ಟುಕೊಂಡು ಕುಳಿತನು. ಸೈನ್ಯದ ದಳಪತಿಗಳು ಅವನ ಗುಡಾರದೊಳಗೆ ಹೊಕ್ಕು ನೋಡಲು ಭಯಪಟ್ಟರು. ಮಧ್ಯಾಹ್ನದ ವೇಳೆಯಾಯಿತು. ಭೋಜನವಿಲ್ಲ. ಒಬ್ಬರಾದರೂ ದಿರುಸುಗಳನ್ನೂ ಬಿಚ್ಚಿಲ್ಲ. ಎಲ್ಲರ ಶರೀರಗಳನ್ನೂ ಕೈಕಾಲುಗಳನ್ನೂ ರಕ್ತಮಯವಾಗಿದ್ದವು.

ಸೇನಾಧಿಪತಿಗಳು ಗುಡಾರದೊಳಗೆ ಹೋಗಿ "ಹುಜೂರ್. ಚಿಂತೆಯಿಂದ ಫಲವಿಲ್ಲ. ತಾವು ಸ್ನಾನ ಭೋಜನಗಳನ್ನು ಮಾಡಿ ವಿಶ್ರಾಂತಿ ಪಡೆಯಿರಿ. ನಾಳೆಯ ದಿನ ನಾವೆಲ್ಲರೂ ಶಿವಾಜಿಯನ್ನು ಹುಡುಕುತ್ತೇವೆ. ಅಲ್ಲಾನ ಕೃಪೆಯಿಂದಾಗುತ್ತದೆ" ಎಂದು ಅರಿಕೆ ಮಾಡಿದರು.

ಸಿದ್ದಿ ಜೋಹರನು ಏನೊಂದೂ ಉತ್ತರವನ್ನೂ ಹೇಳದೇ ಎದ್ದು ಸ್ನಾನಾದಿಗಳನ್ನು ಪೂರೈಸಿ, ಪರಿಚಾರಕರು ಬಲಾತ್ಕಾರದಿಂದ ಕೊಟ್ಟು ತಿಂಡಿಯನ್ನು ತಿಂದು ನಿರ್ವಿಣ್ಣನಾಗಿ ಕುಳಿತ. ಸಣ್ಣ ಸಣ್ಣ ಸೇನಾಧಿಪತಿಗಳು ನಾಲ್ಕಾರು ದಿನಗಳು ಗುಡ್ಡಗಾಡುಗಳನ್ನು ಸುತ್ತಿ ಅಲೆದರು ಕುದುರೆಗಳು ಬಡಪೆಟ್ಟಿಗೆ ಗುಡ್ಡಗಳನ್ನು ಹತ್ತುವು. ಜರೆಗಳ ನೀರುಗಳನ್ನು ದಾಟವು. ಅವು ಮೈದಾನದ ಕುದುರೆಗಳು ಸೈನಿಕರು ಕುದುರೆಗಳನ್ನು ಬಿಟ್ಟು ಇಳಿದು ಅಲೆದಾಡಿದರು. ದೊಡ್ಡ ಗುಂಪುಗಳಾಗಿದ್ದರೆ ಯಾರೂ ಕಣ್ಣಿಗೇ ಬೀಳುತ್ತಿರಲಿಲ್ಲ. ಸಣ್ಣ ಗುಂಪಿನ ಸೈನ್ಯವನ್ನು ಕಂಡರೆ ಮರಾಠಾ ಸೈನಿಕರು ಆಕಾಶದಿಂದ ಇಳಿದು

ಬಂದಂತೆ, ಭೂಮಿಯಿಂದ ಎದ್ದು ಬಂದಂತೆ ವನದುರ್ಗಗಳಿಂದ ನುಗ್ಗಿ ಬಂದು ತುರುಷ್ಕರನ್ನು ಸಂಹಾರ ಮಾಡಿ ಮಾಯವಾಗಿ ಹೋಗುತ್ತಿದ್ದರು.

ಹತ್ತು ದಿನಗಳು ಕಳೆದವು. ಜೋಹರನು "ಈ ಪ್ರಯತ್ನವು ವ್ಯರ್ಥ. ಈ ವನದುರ್ಗಗಳು ನಮಗೆ ಅಪರಿಚಿತವಾದುವುಗಳು. ಇಲ್ಲಿ ವೃಥಾ ನಮ್ಮ ಸೈನ್ಯಗಳನ್ನು ಬಲಿಕೊಡಲು ನಾನೊಪ್ಪುದಿಲ್ಲ" ಎಂದು ನಿರ್ಧಾರ ಮಾಡಿಕೊಂಡನು. ತನ್ನ ದಂಪತಿಗಳನ್ನೂ, ಸೈನಿಕರನ್ನೂ ಜಮಾಯಿಸಿ, "ನೀವೆಲ್ಲರೂ ಬಿಜಾಪುರಕ್ಕೆ ಹಿಂತಿರುಗಿರಿ ಈ ಯುದ್ಧವು ನಿಲ್ಲಿಸಲ್ಪಟ್ಟಿದೆ" ಎಂದು ಆಜ್ಞೆ ಮಾಡಿದ.

ಜೋಹರನ ಅರ್ಧಮುಕ್ಕಾಲರಷ್ಟು ಸೈನ್ಯವು ನಷ್ಟವಾಗಿಹೋಗಿತ್ತು. ಉಳಿದ ಸೈನಿಕರು ನಿರುತ್ಸಾಹದಿಂದ ಹಿಂತಿರುಗಿದರು. ಅವರಿಗೂ ಬೇಸರವಾಗಿತ್ತು. ನಿರಾಶೆಯಾಗಿತ್ತು.

## ೧೮

ಸೇನಾಧಿಪತಿ ಸಿದ್ದೀ ಜೋಹರನು ಬಿಜಾಪುರಕ್ಕೆ ಸೈನ್ಯಸಮೇತನಾಗಿ ಹಿಂತಿರುಗಿದ. ಎಲ್ಲ ವಿದ್ಯಾಮಾನಗಳನ್ನೂ ವಜೀರನಿಗೆ ಅರಿಕೆ ಮಾಡಿದನು.

"ಅಣ್ಣನವರೇ, ಆ ಶಿವಾಜಿಯೊಂದಿಗೆ ಯುದ್ಧಮಾಡುವುದು ದುಸ್ತರ ಪ್ರಸಂಗ. ಹಿಡಿದು ತರುವುದಂತೂ ಅಸಂಭವ. ಆ ಗಿರಿದುರ್ಗಗಳನ್ನು ವಶಪಡಿಸಿಕೊಳ್ಳುವುದೂ ಸಾಧ್ಯವಾಗದ ಮಾತು. ಆ ಸ್ಥಳಸನ್ನಿವೇಶಗಳು ಹಾಗಿವೆ. ಆ ದುರ್ಗಗಳನ್ನೂ ಹಿಡಿಯಲು ಹೊರಟರೆ ವರ್ಷಗಳು ಕಳೆದುಹೊದರೂ ಯುದ್ಧವು ಮುಗಿಯುವುದಿಲ್ಲ. ಮಳಗಾಲವು ಪ್ರಾರಂಭವಾದರಂತೂ ಆ ಸ್ಥಳಗಳು ಮನುಷ್ಯರ ನೆಲೆಗೇ ಅನರ್ಹವಾಗುತ್ತವೆ. ದಟ್ಟವಾದ ಕಾಡುಗಳು ಗಿಜಗಿಜ ಎನ್ನುತ್ತೇವೆ. ಹಗಲು ಹೊತ್ತಿನಂತೆಯೇ ರಾತ್ರಿ ಕವಿದಂತಿರುತ್ತದೆ.

ಬೆಟ್ಟಗಳ ಮೇಲಂತೂ ಹತ್ತಿಳಿಯುವುದು ಸಾಧ್ಯವೇ ಇಲ್ಲ ನಾವು ಎಷ್ಟು ವರ್ಷಗಳು ಯುದ್ಧಮಾಡಿದರೂ ಎಷ್ಟು ಸೈನ್ಯಗಳನ್ನು ಬಲಿಕೊಟ್ಟರೂ ವ್ಯರ್ಥ. ಶಿವಾಜಿಯು ಸರಿಯಂತೆ ನುಸುಳಿಕೊಂಡು ಒಂದು ಬೆಟ್ಟದಿಂದ ಮತ್ತೊಂದು ಬೆಟ್ಟಕ್ಕೆ ಹಾರಿಹೋಗುತ್ತಾನೆ. ಶಿವಾಜಿಯನ್ನು ಹಿಡಿಯುವುದಕ್ಕಿಂತಲೂ ಅವನ ಗೊಡವೆಗೇ ಹೋಗದೆ ಬಿಟ್ಟುಬಿಡುವುದೇ ಲೇಸು. ನಿಮಗೆ ಇನ್ನೂ ಹಠವಿದ್ದರೆ ಒಂದು ಬಾರಿ ನೀವೇ ಸಾಹಸ ಮಾಡಿ ನೋಡಬಹುದು ಅವನೊಡನೆ ಯುದ್ಧಕ್ಕೆ ಹೋಗಿ ಹೋಗಿ ಮರಳಿ ಬರುವುದು ನಮ್ಮ ದರ್ಬಾರಿಗೇ ಅಗೌರವ ಮಾಡಿದಂತಾಗುತ್ತದೆ. ಶಿವಾಜಿಯು ಮುಸಲ್ಮಾನ್ ವಿದ್ರೋಹಿ. ಅವನು ಡಿಲ್ಲಿಯ ಬಾದಷಹರಿಗೊ ಸೊಪ್ಪು ಹಾಕುವವನಲ್ಲ. ಅವರಿನ್ನೂ ಆ ಹುತ್ತದಲ್ಲಿ ಕೈ ಹಾಕಿ ನೋಡಲಿಲ್ಲ. ನೋಡಿದರೆ ಅವರಿಗೂ ಇದೇ ಗತಿ."

ವಜೀರನು ಈ ಮಾತುಗಳನ್ನು ಕೇಳಿ ಅಪ್ರತಿಭನಾದ.

"ಸಿದ್ಧಿಕ್, ನೀನು ಅದೆಲ್ಲಾ ಆ ಸ್ಥಳಮಹಿಮೆ ಎನ್ನುತ್ತೀಯಾ ? ಶಿವಾಜಿಗೆ ಏನೂ ಶೌರ್ಯ ಪರಾಕ್ರಮಗಳಿಲ್ಲವೆನ್ನುತ್ತೀಯಾ?"

"ಹಾಗೇನಾಗುವುದಿಲ್ಲ. ಅವನು ಪರಾಕ್ರಮಶಾಲಿಯೂ ಹೌದು ಇಲ್ಲದಿದ್ದರೆ ಒಂಬತ್ತು ಗಿರಿದುರ್ಗಗಳನ್ನು ವಶಪಡಿಸಿಕೊಂಡು ಕೈಯಲ್ಲಿ ಇಟ್ಟುಕೊಳ್ಳುವುದು ಸಾಮಾನ್ಯವಲ್ಲ. ಆ ಜನರೂ ಹಾಗೆಯೇ ಇದ್ದಾರೆ, ಅಣ್ಣನವರೇ. ಜನ ಗುಡ್ಡಗಾಡಿನ ಜನರು. ಹಿಂದೂ ಧರ್ಮ ಭಾವನೆಯು ಅವನಲ್ಲಿ ವಿಶೇಷವಾಗಿ ಬೆಳೆದಿದೆ. ಸಂತ ತುಕಾರಾಮನೆಂಬ ಫಕೀರನೊಬ್ಬನಿದ್ದು ಮೊನ್ನೆ ಮೊನ್ನೆ ಸತ್ತುಹೋಗಿದ್ದಾನೆ ಆ ಜನರಲ್ಲಿ ಆ ಸಾಧುವಿನ ಮೇಲಿನ ಭಕ್ತಿಯು ಅಸಾಧಾರಣವಾದುದ್ದು. ಅವನ ಸಂಬಂಧವಾಗಿ ಎಷ್ಟೋ ಪವಾಡಗಳನ್ನು ಕಟ್ಟಿ ಹಾಡುತ್ತಾರೆ. ಆ ಪವಾಡಗಳಿಂದ ಆ ಜನರಿಗೆ ಒಂದು ವಿಧವಾದ ವಿಜಾತಿಯ ಧೈರ್ಯವು ಬಂದಿದೆ. ಸಂತರನ್ನು ನಂಬಿದವನು. ಸಾವಿಗೆ ಅಂಜುವುದಿಲ್ಲ, ಹುಜೂರ್. ಕತ್ತಿಯಿಂದ ಕತ್ತರಿಸುತ್ತಿದ್ದರೆ, ಜೀವ ಹಾರಿ ಹೋಗುವವರೆಗೆ ಅವರ ದೇವರ ಹೆಸರನ್ನು ಹಿಡಿದುಕೂಗುತ್ತಿರುತ್ತಾರೆ, ಆ ಧೈರ್ಯವನ್ನು ನೋಡಿ ಜನರೆಲ್ಲರೂ ಹಠಕಟ್ಟಿ ಪ್ರಾಣಗಳನ್ನು ಅರ್ಪಿಸಿ ಹೋರಾಡುತ್ತಾರೆ. ಮತ್ತೊಬ್ಬ ಆ ಗೋದಾವರಿಯ ದಂಡೆಯಲ್ಲಿ ರಾಮದಾಸನೆಂಬ ಗುರುವಿದ್ದಾನಂತೆ. ಅವನೂ ಒಬ್ಬ ಪವಾಡಪುರುಷನಂತೆ. ಈ

ಭಕ್ತರು ಎಲ್ಲಿ ಪ್ರಾರ್ಥನೆ ಮಾಡಿದರೆ ಅಲ್ಲಿ ದರ್ಶನ ಕೊಡುತ್ತಾನಂತೆ. ಈ ಹುಚ್ಚುಭಾವನೆಯನ್ನು ಆ ಜನ ನಂಬುತ್ತಾರೆ. ಅದರಿಂದಲೇ ಆವೇಶಗೊಂಡು ಹೋರಾಡುತ್ತಾರೆ ಆ ಜನ ಏನು ಹೇಳುತ್ತಾರೆ ಬಲ್ಲಿರಾ? ಅಫಜಲ್ ಖಾನರು ಶಿವಾಜಿಗೆ ಭೇಟಿಕೊಟ್ಟಾಗ ಭವಾನಿ ದೇವಿಯು ರಣಚಂಡಿಯಾಗಿ ಬಂದು ಅಫಜಲ್ ಖಾನನನ್ನು ಕೊಂದಳೆಂದು ಆಗಲೇ ಪವಾಡಗಳು ಹುಟ್ಟಿ ಹೋಗಿವೆ. ಜನ ಬಲು ಒರಟು ಜನ, ಗಟ್ಟಿ ಜನ. ಒಂದೇ ಒಂದು ನಿದರ್ಶನ ಕೊಡುತ್ತೇನೆ. ಪನ್ಹಾಲದಲ್ಲಿ ಶಿವಾಜಿಯ ಸೈನ್ಯಗಳಿತ್ತು. ಸುಮಾರು ಒಂದು ಸಾವಿರ ಸೈನ್ಯವಿರಬಹುದು. ನಾವು ಸಮಯ ಸಾಧಿಸಿ ಅರ್ಧರಾತ್ರಿಯಲ್ಲಿ ಆ ಶಿಬಿರವನ್ನು ಆಕ್ರಮಣ ಮಾಡಿದೆವು. ನಮ್ಮ ಸೈನ್ಯ ಹತ್ತು ಸಹಸ್ರ ಸೈನ್ಯಗಳಿದ್ದುವು. ಕತ್ತಲೆಯ ಸಮಯ, ಕಾಡಿನ ಮಧ್ಯ ಸ್ಥಳ. ಆ ಜನರು ಯಾರ ಕಣ್ಣಿಗೂ ಬೀಳದೇ ಎಲ್ಲರೂ ಪಲಾಯನವಾಗಿ ಹೋದರು. ಇನ್ನೂರು ಜನ ತುಂಡಾಳುಗಳು ನಿಂತು ನಮ್ಮ ಹತ್ತು ಸಾವಿರ ಸೈನ್ಯವನ್ನು ಬೆಳಕು ಹರಿಯುವವರೆಗೆ ಎದುರಿಸುತ್ತಿದ್ದರು. ನಾನಾವ ಯುದ್ಧದಲ್ಲಿಯೂ ಅಂತಹ ಪ್ರತಿಭಟನೆಯನ್ನು ಕಂಡುದಿಲ್ಲ. ಆ ಸೈನ್ಯದ ಸೇನಾಧಿಪತಿ, ಅವನ ಹೆಸರು ಬಾಜೀಪ್ರಭುವಂತೆ, ಆವನ ಶರೀರದಲ್ಲಿ ನೂರಾರು ಗಾಯಗಳಾಗಿರಬಹುದು. ಕಡೆಯ ತನಕ ಕತ್ತಿಯನ್ನು ಕೆಳಗಿಳಿಸದೇಯುದ್ಧ ಮಾಡಿದ್ದಾನೆ.ನನ್ನ ತಲೆಯ ಮೇಲೆ ವೀರಮುಕುಟವಿದ್ದಿದ್ದರೆ ಅವನ ತಲೆಯ ಮೇಲಿಟ್ಟು ಕೈ ಮುಗಿದು ಬರುತ್ತಿದ್ದೆ. ಆ ಜನರು ಯುದ್ಧದಲ್ಲಿಯೂ ನಿಷ್ಣಾತರು. ಸ್ವಾಮಿನಿಷ್ಠೆಯಲ್ಲಂತೂ ಅವರಿಗೆ ಸಮಾನರು ಮತ್ತಾರೂ ಇಲ್ಲ."

ವಜೀರನು"ಷಹಬಾಸ್, ಸಿದ್ಧಿಕ್ ? ಅಂಥಾ ವೀರನು ಅಂಥಾ ಸೈನ್ಯದೊಂದಿಗೆ ನಮ್ಮ ಆಧೀನದಲ್ಲಿ ಇದ್ದಿದ್ದರೆ ಡೆಲ್ಲಿಯ ಬಾದಷಹನಿಗೆ ನಾವು ತಲೆಬಾಗಬೇಕಾಗಿತ್ತೇ ? ಅಂಥಾ ಬಾಗ್ಯ ನಮ್ಮ ಆದಿಲ್‌ಷಾಹಿಗೆ ಇಲ್ಲದೇ ಹೋಯಿತು." ಎಂದು ವಿಷಾದಿಸಿದ.

"ಹಾಗಲ್ಲ. ಅಣ್ಣನವರೇ. ನಾನು ನಿಮಗೆ ಮೊದಲೇ ಹೇಳಿದೆನಷ್ಟೆ. ಆ ಜನವೇ ಅಂಥವರು. ಆ ಜನಕ್ಕೆ ತಕ್ಕ ಸೈನ್ಯ. ಆ ಸೈನ್ಯಕ್ಕೆ ತಕ್ಕ ಸೇನಾಧಿಪತಿಗಳು, ಅವರಿಗೂ ನಮಗೂ ಸ್ನೇಹವಲ್ಲ ಬರಬೇಕು? ಧರ್ಮದ

ಗೊಡ್ಡು ಜನ ಅವರು. ಅರಮನೆಯೊಳಗೆ ದೇವಾಲಯಗಳನ್ನು ಕಟ್ಟಿ ಗಂಟೆ ಹೊಡೆದು ಅರಶಿಯೆತ್ತಬೇಕೆನ್ನುವ ಜನ ಅವರು. ಅವರ ಪಾಡು ಅವರಿಗೆ ನಮ್ಮ ಪಾಡು ನಮಗೆ" ಎಂದು ಹೇಳಿ ವಜೀರನ ಅಪ್ಪಣೆ ಪಡೆದು ತನ ಮಹಲಿಗೆ ಹೊರಟುಹೋದ.

ವಜೀರನು ಈ ಎಲ್ಲ ಸಮಾಚಾರಗಳನ್ನೂ ಚಾಚು ಬಿಡದೆ ಬೇಗಂ ಸಾಹೇಬರಲ್ಲಿ ಅರಿಕೆ ಮಾಡಿದ.

ಬೇಗಂಸಾಹೇಬಳು "ವಜೀರರೇ, ನನ್ನ ಅವತಾರವು ಮುಗಿದು ಹೋಗಿದೆ. ಇದೊಂದೂ ನನ್ನ ತಲೆಗೆ ಹತ್ತುವುದಿಲ್ಲ. ನನ್ನ ದಾರಿಯನ್ನು ನಾನು ಸಿದ್ಧಪಡಿಸಿಕೊಂಡಿದ್ದೇನೆ. ಈ ಬಿಜಾಪುರದ ರಾಜ್ಯ ಈ ಬಾಲಕನಾದ ಸುಲ್ತಾನ ಇವೆರಡನ್ನೂ ನಿಮ್ಮ ಕೈಲಿಟ್ಟು ಹೋಗುತ್ತೇನೆ. ನೀವೇನು ಮಾಡಬೇಕೆಂದು ಹೇಳಿದರೆ ಅದನ್ನು ಮಾಡುತ್ತೇನೆ. ನಾನು ಮಾನವಳಾಗಿಲ್ಲ. ಕಲ್ಲಾಗಿ ಹೋಗಿದ್ದೇನೆ. ಈಗ ಏನು ಮಾಡಬೇಕೆನ್ನುವಿರಿ? ಯಾವುದು ಆದಿಲ್‌ಷಾಹಿಗೆ ಹಿತಕರವೆನ್ನುವಿರಿ? ಆ ಒಂದು ಮಾತನ್ನು ಹೇಳಿರಿ" ಎಂದಳು.

ವಜೀರನು ನಿರ್ವಿಣ್ಣನಾಗಿ "ಬೇಗಂಸಾಹೇಬ್, ಏನೇ ಆಗಲಿ. ಆ ಶಿವಾಜಿಯನ್ನು ಆದಿಲ್‌ಷಾಹಿಯ ಸ್ನೇಹಿತನನ್ನಾಗಿ ಮಾಡಿಕೊಳ್ಳಬೇಕು." ಎಂದ

"ಹಾಗೆಯೇ ಮಾಡಿರಿ. ನನ್ನ ಮನಸ್ಸಿನಲ್ಲಿ ದ್ವೇಷವಿಲ್ಲ, ಛಲವಿಲ್ಲ. ನಾನು ಹತ್ತಿಯಂತೆ ಹಗುರವಾಗಿದ್ದೇನೆ."

ವಜೀರನು "ಆ ಕಾರ್ಯವು ಮತ್ತಾರಿಂದಲೂ ಸಾಧ್ಯವಾಗುವುದಿಲ್ಲ, ತಾವೇ ಖುದ್ದಾಗಿ ಷಾಜಿಯವರಿಗೆ ಅಪ್ಪಣೆ ಮಾಡಬೇಕು" ಎಂದು ಹೇಳಿ ನೆಲಮುಟ್ಟಿ ಸಲಾಂ ಮಾಡಿದ.

ಬೇಗಂಸಾಹೇಬಳು "ನೀವು ಹೇಳಿದಂತೆ ಮಾಡುತ್ತೇನೆ ಷಾಜಿಯವರನ್ನು ಕರೆಸಿರಿ" ಎಂದು ಹೇಳಿದಳು.

ವಜೀರನು ಷಾಜಿಯವರನ್ನು ತಕ್ಷಣ ಕರೆಕಳುಹಿಸಿದನು.

ಷಾಜಿಯು ಅರಮನೆಗೆ ಬರುತ್ತಲೇ ಅವನನ್ನು ಕರೆತಂದು ಅರಮನೆಯ ಅಂತಃಪುರದ ರಂಗಮಹಲಿನಲ್ಲಿ ಆಸನದ ಮೇಲೆ ಕುಳ್ಳಿರಿಸಿದ. ದರ್ಬಾರಿನ

ಶ್ರೀಮಂತರೂ ಮಂತ್ರಿಗಳೂ ಬಂದಿದ್ದರು. ಬೇಗಂಸಾಹೇಬಳು ಗಂಭೀರವಾಗಿ ನಡೆದು ಬಂದು ಒಂದು ಪಾರ್ಶ್ವದಲ್ಲಿ ನಿಂತು ಎಲ್ಲರನ್ನೂ ಅಭಿವಂದಿಸಿದಳು. ಎಲ್ಲರೂ ಎದ್ದು ಮುಜರೆ ಮಾಡಿದರು.

ಬೇಗಂ ಸಾಹೇಬಳು ಕೈತೋರಿಸಿ ಸಂಜ್ಞೆ ಮಾಡಿ ಎಲ್ಲರನ್ನೂ ಕುಳಿತು ಕೊಳ್ಳುವಂತೆ ಹೇಳಿದಳು.

"ಆದಿಲ್‌ಶಾಹಿಯ ದರ್ಬಾರಿನ ಶ್ರೀಮಂತರೇ, ಮಂತ್ರಿಗಳೇ! ನಾನು ಈ ರಾಜ್ಯದ ಹೊಣೆಯನ್ನು ನನ್ನ ತಲೆಯಿಂದ ಇಳಿಸಿ,ನಿಮ್ಮಗಳಕೈಗೆ ಒಪ್ಪಿಸು ತ್ತಿದ್ದೇನೆ. ಆದಿಲ್‌ಶಾಹಿಯ ಹಿತಕ್ಕಾಗಿ ನಾನೊಂದು ಮಾತು ಹೇಳುತ್ತೇನೆ. ಎಲ್ಲರೂ ಪಾಲಿಸಬೇಕೆಂದು ಬೇಡಿಕೊಳ್ಳುತ್ತೇನೆ. ಶಿವಾಜಿಯು ನಮ್ಮ ಗಡಿ ನಾಡಿನಲ್ಲಿ ಒಂಬತ್ತು ದುರ್ಗಗಳನ್ನು ಆಕ್ರಮಿಸಿ, ಅಜೇಯನಾಗಿದ್ದಾನೆ. ನಮ್ಮ ದರ್ಬಾರಿನವರು ಅವನೊಡನೆ ಸ್ನೇಹಮಾಡಿಕೊಳ್ಳುವುದು ದರ್ಬಾರಿನ ಗೌರವಕ್ಕೆ, ಬಾಲಕನಾದ ಸುಲ್ತಾನನ ಹಿತಕ್ಕೆ ಕ್ಷೇಮವಾದುದೆಂದು ನಾನು ದೃಢವಾಗಿ ಭಾವಿಸಿದ್ದೇನೆ. ಹಿಂದೂ ಮುಸಲ್ಮಾನ್ ಈ ಭಾವನೆಗಳಿಂದ ನಾವು ಹೋರಾಡುವುದು ತಿಳಿಗೇಡಿತನ. ಈ ಸಿಂಹಾಸನವು ಮುಸಲ್ಮಾನರದು. ಈ ರಾಜ್ಯವನ್ನು ಕಟ್ಟಿ ರಕ್ಷಿಸುತ್ತಿರುವವರುನಮ್ಮ ಪೂರ್ವಿಕರಾದ ಮುಸಲ್ಮಾನರು. ಆದರೆ ಈ ಜನರು, ಈ ಪ್ರಜಾಸ್ತೋಮ ಹಿಂದುಗಳಲ್ಲವೇ? ಈ ಭೂಮಿಯು ಹಿಂದುಗಳವಲ್ಲವೇ? ನಮ್ಮ ಸೈನ್ಯದಲ್ಲಿ ಬೇಕಾದಷ್ಟುಜನ ಹಿಂದೂ ಯೋಧರು ಪ್ರಭುಭಕ್ತಿಯಿಂದ ನಡೆದುಕೊಳ್ಳುತ್ತಿಲ್ಲವೇ? ಶಿವಾಜಿಯಾದರೂ ಯಾರು? ಅವನು ನಮ್ಮ ಆಸ್ಥಾನದಲ್ಲಿ ಅತ್ಯುನ್ನತ ಪದವಿಯಲ್ಲಿರುವ ಶಾಜಿಯವರಮಗ. ಅವನು ನಮ್ಮವನೇ. ನಾವು ಅವನನ್ನು ನಮ್ಮವನನ್ನಾಗಿ ಮಾಡಿಕೊಳ್ಳಲು ಸಂತೋಷದಿಂದ ಸ್ನೇಹಹಸ್ತವನ್ನು ನೀಡಲೇಬೇಕು. ಶಾಜೀಯವರು ನಮ್ಮೆಲ್ಲರ ಮಾತಿನಂತೆ ಸ್ವತಃಪ್ರತಾಪಘಡಕ್ಕೆ ಹೋಗಿ ಶಿವಾಜಿಯೊಡನೆ ಸಂಧಿ ಮಾಡಿಕೊಂಡು ಬರಬೇಕು. ಅವನಿಗೆ ಅರ್ಧರಾಜ್ಯವನ್ನು ಕೊಡಬೇಕೆಂದರೂ ನಾನೊಪ್ಪುತ್ತೇನೆ. ಸಂಧಿಯೆಂದರೆ ಪೂರ್ಣ ಸಂಧಿಯಾಗಬೇಕು. ಅಂಥಾ ಅಧಿಕಾರವನ್ನು ಸುಲ್ತಾನನ ಪರವಾಗಿ ನಾನುಶಾಜಿಯವರಿಗೆ ಕೊಟ್ಟಿರುತ್ತೇನೆ.

ಅವರು ಈ ರಾಜ್ಯದ ಮೇಲಿನ ಅಭಿಮಾನದಿಂದ ದೇವರ ಮೇಲೆ ಭಾರಹಾಕಿ ಈ ಕಾರ್ಯಸಾಧನೆ ಮಾಡಿಕೊಂಡು ಬರಬೇಕು. ಇದು ನನ್ನ ಪ್ರಾರ್ಥನೆ. ಅಖೈರು ಪ್ರಾರ್ಥನೆ."

ಎಲ್ಲ ದರ್ಬಾರಿಗಳೂ ಎದ್ದುನಿಂತು, "ಬೇಗಂ ಸಾಹೇಬರ ಮಾತುಗಳು ವಿವೇಕದಿಂದ ಕೂಡಿವೆ. ನಾವೆಲ್ಲರೂ ಇದಕ್ಕೆ ಒಪ್ಪಿದ್ದೇವೆ. ಷಾಜಿಯವರು ಪೂರ್ಣ ಮನಸ್ಸಿನಿಂದ ಒಪ್ಪಿಕೊಳ್ಳಲೇಬೇಕು" ಎಂದು ಹೇಳಿದರು.

ಷಾಜಿಯವರು ಎದ್ದುನಿಂತು, ಬೇಗಂಸಾಹೇಬರನ್ನು ವಂದಿಸಿ, ದರಬಾರಿಗಳಿಗೆ ಅಭಿವಾದನ ಮಾಡಿ, "ತಮ್ಮೆಲ್ಲರ ಅಪ್ಪಣೆಯನ್ನು ಶಿರಸಾ ಮಾನ್ಯ ಮಾಡಿ ನಾನು ಈ ಸಂಧಿಗೆ ಹೊರಡುತ್ತೇನೆ. ದೇವರ ದಯೆಯಿಂದ ಈ ಪ್ರಯತ್ನವು ಸಿದ್ಧಿಸುವುದೆಂದು ನನಗೆ ನಂಬುಗೆ ಇದೆ. ಇಷ್ಟರ ಮೇಲೆ ಕಷ್ಟವಾದರೆ ನಾನು ರಾಮದಾಸರ ಮಡಲಿನಲ್ಲಿ ಹಾಕಿಬಿಡುತ್ತೇನೆ. ಪಾಪ ಪುಣ್ಯ, ನ್ಯಾಯ-ಅನ್ಯಾಯ, ಧರ್ಮ-ಅಧರ್ಮ ಅವರದು. ಅವರಿವರಿಗೆ ಒಪ್ಪಿಕೊಂಡ ಮೇಲೆ ಶಿವಾಜಿಯು ಅದಕ್ಕೆ ಎಂದಿಗೂ ತಪ್ಪಿ ನಡೆಯನು" ಎಂದು ಹೇಳಿದ.

ಎಲ್ಲರೂ ಪರಸ್ಪರ ಅಭಿವಾದನ ಮಾಡಿ ಮನೆಗಳನ್ನು ಸೇರಿದರು.

ಷಾಜಿಯು ಮಿತಪರಿವಾರದೊಂದಿಗೆ ಪುರಂಧರಘಡಕ್ಕೆ ಪ್ರಯಾಣ ಮಾಡಿದ. ದೂತರು ಷಾಜಿಯವರು ಬರುತ್ತಿರುವ ಸಮಾಚಾರವನ್ನು ಮೊದಲೇ ಶಿವಾಜಿಗೆ ತಿಳಿಯಪಡಿಸಿದರು.

ಶಿವಾಜಿಯು ಕೋಟೆಯ ಬಾಗಿಲ್ಲಿನಲ್ಲಿಯೇ ಸಮಸ್ತ ಸಂಗಡಿಗರೊಡನೆ ಕಾದಿದ್ದು ತಂದೆಯವರಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಅರಮನೆಗೆ ಕರೆದೊಯ್ದ. ರಾಜಯೋಗ್ಯವಾದ ಸತ್ಕಾರದ ಏರ್ಪಾಡುಗಳಾಗಿದ್ದುವು.

ಷಾಜಿಯು ಶಿವಾಜಿಯನ್ನು ಆಲಿಂಗನ ಮಾಡಿಕೊಂಡು ಆಸನದ ಮೇಲೆ ಕುಳಿತು ವಿಶ್ರಮಿಸಿಕೊಂಡು ಶಿವಾಜಿಯನ್ನು ಕರೆದು ಹೇಳಿದ.

"ಶಿವಾ! ನಾನು ಮಹಾರಾಜನಾದ ನಿನ್ನ ಆತಿಥ್ಯವನ್ನು ಸ್ವೀಕರಿಸಲು ಬಂದಿಲ್ಲ. ಬಿಜಾಪುರದ ಸುಲ್ತಾನನ ರಾಯಭಾರಿಯಾಗಿ ಬಂದಿದ್ದೇನೆ. ನಿನ್ನೊಡನೆ ಸಂಧಿಯ ಪ್ರಸ್ತಾಪವನ್ನು ಮಾಡಲು ಬಂದಿದ್ದೇನೆ. ಸಂಧಿಗೆ ನೀನು

ಒಪ್ಪಿಕೊಂಡರೆ ನಾನು ತಂದೆ, ನೀನು ಮಗ. ಆಗ ಆತಿಥ್ಯ ಸೇವೆ ನಮಸ್ಕಾರಗಳನ್ನು ಸ್ವೀಕರಿಸಲು ಸಿದ್ಧನಾಗಿದ್ದೇನೆ. ನೀನು ಸಂಧಿಯನ್ನು ನಿರಾಕರಿಸಿದರೆ ನಾನು ಇಲ್ಲಿಂದ ಹೀಗೆಯೇ ರಾಮದಾಸ ಗುರುಗಳವರ ಸನ್ನಿಧಿಗೆ ಹೋಗಿ ನನ್ನ ಪ್ರಾರ್ಥನೆಯನ್ನು ಸಲ್ಲಿಸಿ ಬೇಡುತ್ತೇನೆ. ಅವರು ಅದನ್ನು ನಿರಾಕರಿಸುವಷ್ಟು ನಿಷ್ಕರುಣರಲ್ಲ."

ಶಿವಾಜಿಯು ಕೈಮುಗಿದು, "ಪಿತಾಜೀ, ಅಪ್ಪಣೆ ಕೊಡಿಸೋಣವಾಗಲಿ. ನನಗೆ ನೀವೂ ರಾಮದಾಸ ಸ್ವಾಮಿಗಳೂ ಸಮಾನರು, ನಾನೆಂದೂ ಭೇದವನ್ನು ಎಣಿಸಿಲ್ಲ! ಅಪ್ಪಣೆ ಕೊಡಿಸಿರಿ" ಎಂದು ಕೈ ಮುಗಿದ.

"ಶಿವಾಜಿ, ನೀನು ಗಡಿರಾಜ್ಯದ ಅರ್ಥಾತ್ ಮಹಾರಾಷ್ಟ್ರದ ಮಹಾರಾಜನೆಂದು ಆದಿಲ್‌ಷಾಹೀ ದರ್ಬಾರು ಪೂರ್ತಿಯಾಗಿ ಒಪ್ಪಿಕೊಳ್ಳುತ್ತದೆ. ಈ ಒಂಬತ್ತು ದುರ್ಗಗಳೂ ಕೊಂಕಣದವರೆಗಿನ ಭೂಮಿಯೂ ನಿನ್ನದು. ನೀನು ಪೊಗದಿಯನ್ನು ಕೊಡಬೇಕಾದುದಿಲ್ಲ. ಆದರೆ ತ್ರಿಕರಣಪೂರ್ವಕವಾಗಿ ಬಿಜಾಪುರದ ದರ್ಬಾರಿಗೆ ವಿರೋಧವೆಸಗಕೂಡದು, ಎಂದೆಂದಿಗೂ ಡೆಲ್ಲಿ ಬಾದಷಹರೊಡನೆ ಅಂತರಂಗ ಸ್ನೇಹ ಮಾಡಿಕೊಂಡು ಬಿಜಾಪುರಕ್ಕೆ ವಿರೋಧಿಯಾಗಕೂಡದು. ನಾನು ಮತ್ತು ನೀನು ಹೇಗೆ ತಂದೆ ಮಕ್ಕಳೋ ಹಾಗೆ ಬಿಜಾಪುರದ ಸುಲ್ತಾನನೂ ನೀನೂ ಪರಸ್ಪರ ಸ್ನೇಹ ಬಾಂಧವ್ಯಗಳನ್ನು ಕಾಪಾಡಿಕೊಂಡು ಬರಬೇಕು. ಇದಕ್ಕೊಪ್ಪಿದರೆ ಶ್ರೀರಾಮಚಂದ್ರ ದೇವರಾಣೆ, ರಾಮದಾಸ ಗುರುಗಳ ಪಾದದಾಣೆ, ನನಗೆ ಪ್ರಮಾಣ ಮಾಡಿಕೊಡು. ಇಲ್ಲದಿದ್ದರೆ ನಾನು ಹೊರಡುತ್ತೇನೆ, ಬಿಟ್ಟುಬಿಡು."

ಶಿವಾಜಿಯು ಸಂಗಡಿಗರ ಕಡೆ ನೋಡಿದ.

ರಾಮಚಂದ್ರನು ಮುಂದೆ ಬಂದು ಷಾಜಿಯವರಿಗೆ ಅಡ್ಡಬಿದ್ದು, "ಪಿತಾಜೀ! ನಾವೆಲ್ಲರೂ ತಮ್ಮ ಸಂಧಿಗೆ ಒಪ್ಪಿಕೊಂಡಿದ್ದೇವೆ. ಶಿವಪ್ರಭುವು ಒಪ್ಪಿಕೊಂಡಿದ್ದಾರೆ. ತಮ್ಮ ಮಾತಿಗೆ ನಾವು ಗೆರೆ ಮೀರುವವನಲ್ಲ" ಎಂದು ಹೇಳಿದ.

ಶಿವಾಜಿಯು ತಂದೆಯ ಪಾದಗಳನ್ನು ಮುಟ್ಟಿ "ಪಾಲನೆ ಮಾಡುತ್ತೇನೆ" ಎಂದು ಹೇಳಿದ.

ಷಾಜಿಯು ಆಸನದಿಂದ ಎದ್ದು ಶಿವಾಜಿಯನ್ನು ಆಲಿಂಗನ ಮಾಡಿದ. ಮಧ್ಯಾಹ್ನ ಭೋಜನದ ವೇಳೆ ಬಂದಿತು. ವೃಷ್ಟಾನ್ನ ಭೋಜನವು ಸಿದ್ಧವಾಗಿದ್ದಿತು, ರಾಜಯೋಗ್ಯವಾದ ರೀತಿಯಲ್ಲಿ ಭೋಜನ ಶಾಲೆಯು ಕಳಕಳಿಸುತ್ತಿದ್ದಿತು.

ಶಿವಾಜಿಯು ತಂದೆಯ ಕೈಹಿಡಿದು ಕರೆತಂದು ಪೀಠದ ಮೇಲೆ ಕುಳ್ಳಿರಿಸಿದ.

ಸೇನಾಧಿಪತಿಗಳೆಲ್ಲರೂ ಸಾಲಾಗಿ ಭೋಜನಕ್ಕೆ ಕುಳಿತರು.

ಶಿವಾಜಿಯು ಕೈಕಟ್ಟಿ ನಿಂತಿದ್ದ.

ಷಾಜಿಯು ತಲೆಎತ್ತಿ ನೋಡಿ "ಶಿವಾ ! ನೀನೇಕೆ ಭೋಜನಕ್ಕೆ ಕುಳಿತು ಕೊಳ್ಳಲಿಲ್ಲ" ಎಂದು ಪ್ರಶ್ನೆಮಾಡಿದ.

ಶಿವನು ಕೈ ಮುಗಿದು "ಪಿತಾಜಿ, ನಾನು ತಮ್ಮ ಪಕ್ಕದಲ್ಲಿ ಕುಳಿತು ಭೋಜನ ಮಾಡಲು ಅರ್ಹನಾಗಿಲ್ಲ. ಬಾಲ್ಯದಿಂದಲೂ ಅವಿನಯದಿಂದ ನಾನು ಅಪರಾಧಿಯಾಗಿದ್ದೇನೆ. ಅದನ್ನೆಲ್ಲಾ ತಾವು ಒಂದೇ ಬಾರಿ ಕ್ಷಮಿಸುವುದಾದರೆ ನಾನು ನಿಮ್ಮ ಮಗನೆಂದುಕೊಳ್ಳಲು ಅರ್ಹನಾಗುತ್ತೇನೆ" ಎಂದು ಹೇಳಿದ.

ಷಾಜಿಯು ಎರಡು ಹಸ್ತಗಳಿಂದಲೂ ಶಿವಾಜಿಯ ತಲೆ ಸವರಿ, "ಶಿವಾ ! ಈ ಅನ್ನದ ಸಾಕ್ಷಿಯಾಗಿ ನಾನು ಎಲ್ಲವನ್ನೂ ಕ್ಷಮಿಸಿದ್ದೇನೆ" ಎಂದು ಹೇಳಿ ಶಿವಾಜಿಯನ್ನು ಎತ್ತಿ ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡ.

ಭೋಜನವು ಮುಗಿಯಿತು.

ಸಂಧ್ಯಾಕಾಲದಲ್ಲಿ ಶಿವಾಜಿಯ ಸಂಗಡಿಗರೆಲ್ಲರನ್ನೂ ಸಭೆ ಸೇರಿಸಿ, ಶಿವಾಜಿಯನ್ನು ಪೀಠದ ಮೇಲೆ ಕುಳ್ಳಿರಿಸಿ ಆದಿಲ್ ಷಾಹಿಯ ಮುದ್ರಾಂಕಿತ ಸುಲ್ತಾನರ ಆಜ್ಞಾ ಪತ್ರವನ್ನು ಓದಿ ಹೇಳಿದ.

"ಆದಿಲ್ ಷಾಹಿಯ ಸುಲ್ತಾನರವರು ಸಂತೋಷದಿಂದ ಅಪ್ಪಣೆ ಕೊಡಿಸುವುದೇನೆಂದರೆ, ನಮ್ಮ ದರ್ಬಾರಿನ ಮಹೋನ್ನತಾಧಿಕಾರಿಗಳಾದ ಷಾಜಿಯವರ ಕುಮಾರ ಶಿವಾಜೀ ಪ್ರಭುಗಳವರಿಗೆ ವಿಶ್ವಾಸದಿಂದ ಅನುಗ್ರಹಿಸಿರುವ ಶಾಸನ ಪತ್ರವೇನೆಂದರೆ, ಆದಿಲ್ ಷಾಹಿಯಗಡಿ ಪ್ರದೇಶಗಳಲ್ಲಿರುವ ಗಿರಿದುರ್ಗಗಳೂ ಆ ಸುತ್ತಮುತ್ತಲಿನ ಪ್ರಾಂತಗಳೂ ಇವೆಲ್ಲವೂ ಶಿವಾಜಿ ಪ್ರಭುವಿಗೆ ಸೇರಿದ್ದಾಗಿದೆ. ನಮ್ಮ ದರ್ಬಾರು ಈ ಮುಂದೆ ಶಿವಾಜಿಯವರನ್ನು ಮಹಾ

ರಾಷ್ಟ್ರದ ಸ್ವತಂತ್ರ ಮಹಾರಾಜರೆಂದು ಒಪ್ಪಿಕೊಂಡಿದೆ. ಇನ್ನು ಮುಂದೆ ಶಿವಾಜಿ ಮಹಾರಾಜರವರು ಸುಲ್ತಾನರ ಸ್ನೇಹಿತರಾಗಿ ಆದಿಲ್‌ಷಾಹಿಯ ಮರ್ಯಾದೆ ಗೌರವಗಳನ್ನು ಕಾಪಾಡಿಕೊಂಡು ಬರಬೇಕೆಂದು ಕೋರಲಾಗಿದೆ. ಈ ಶಾಸನ ವನ್ನು ದರಬಾರಿನ ಖಿಲ್ಲತ್ತುಗಳೊಡನೆ ಶಿವಾಜಿ ಮಹಾರಾಜರಿಗೆ ಷಾಜಿಯವರ ಮುಖೇನ ಕಳುಹಿಸಿಕೊಡಲಾಗಿದೆ.

ಸುಲ್ತಾನರವರ ಆಜ್ಞಾನುಸಾರ,
ವಜೀರ ಸಿದ್ದೀ ಮಸೂದ್ ಖಾ.

ಷಾಜಿಯು ಈ ಪತ್ರವನ್ನು ಉಚ್ಚಕಂಠದಿಂದ ಓದಿಹೇಳಿ, ಖಿಲ್ಲತ್ತು ಗಳೊಡನೆ ಶಿವಾಜಿಗೆ ಒಪ್ಪಿಸಿದ.

ಷಾಜಿಯು ಪುರಂಧರಘಡದಿಂದ ಭದ್ರಾಚಲಕ್ಕೆ ಹೋಗಿ ರಾಮದಾಸ ಸ್ವಾಮಿಗಳವರಿಗೆ ನಮಸ್ಕಾರಮಾಡಿ ಆಶೀರ್ವಾದ ಪಡೆದು, ಶ್ರೀರಾಮಚಂದ್ರ ನಿಗೆ ವೈಭವೋಪೇತವಾದ ಪೂಜಾದಿಗಳನ್ನು ನೆರವೇರಿಸಿ, ಬ್ರಾಹ್ಮಣರಿಗೆ ದಾನ ಧರ್ಮಗಳನ್ನು ಇತ್ತು ವೈಭವದಿಂದ ಬಿಜಾಪುರಕ್ಕೆ ಹಿಂತಿರುಗಿದ.



# ಶಿ ವಾ ಜಿ ಮ ಹಾ ರಾಜ

## ೧

ಶರನ್ನವರಾತ್ರಿಯ ಉತ್ಸವದ ಸಮಯವು ಬಂದಿತು. ಪ್ರತಾಪಘಢದಲ್ಲಿ ನಡೆಯುವ ಉತ್ಸವಗಳಿಗೆ ಮಹಾರಾಷ್ಟ್ರರು ತಂಡೋಪತಂಡವಾಗಿ ಬರಲು ಆರಂಭಿಸಿದ್ದರು. ಬಿಜಾಪುರದ ಮಹಾ ಸೈನ್ಯಗಳೊಡನೆ ಯುದ್ಧ ಮಾಡಿ ಗೆದ್ದಿರುವ ಶಿವಾಜಿಗೂ, ಅವನ ಸಹೋದ್ಯೋಗಿಗಳಾದ ಮಹಾರಾಷ್ಟ್ರ ವೀರರಿಗೂ, ಪ್ರೀತಿಪುರಸ್ಸರವಾದ ವೀರಪೂಜೆಯನ್ನು ಒಪ್ಪಿಸಲು ದೇಶದ ಜನ ಕುತೂಹಲದಿಂದ ತುಂಬಿತ್ತು.

ಹಿಂದೂಸ್ಥಾನದ ದಕ್ಷಿಣೋತ್ತರ ಪೂರ್ವ ಪಶ್ಚಿಮ ರಾಜ್ಯಗಳಿಂದ ಬಹುಮಂದಿ ವಿದ್ವಾಂಸರುಗಳೂ ವೈದಿಕ ಮಹಾಜನರೂ ಬಂದು ಸೇರಿದ್ದರು. ಪ್ರತಾಪಘಢದಲ್ಲಿ ಇಷ್ಟೊಂದು ಜನಸ್ತೋಮಕ್ಕೆ ತಕ್ಕಂತೆ ಊಟ ಉಪಚಾರಗಳಿಗೂ ವಸತಿಗೂ ವ್ಯವಸ್ಥೆಯಾಗಿತ್ತು.

ಈ ನವರಾತ್ರಿಯ ಉತ್ಸವವು ಹಿಂದುಗಳ ದೃಷ್ಟಿಯಿಂದ ಅತ್ಯಂತಮುಖ್ಯವಾದುದೆಂದು ಭಾವಿಸಲ್ಪಟ್ಟಿತ್ತು. ಬಿಜಾಪುರದ ಪ್ರಸಿದ್ಧವಾದ ಸೈನ್ಯಗಳನ್ನು ಗೆದ್ದ ಮೇಲೆ ಬಿಜಾಪುರದ ದರ್ಬಾರಿನವರೇ ಶಿವಾಜಿಯನ್ನು ಮಹಾರಾಜನೆಂದು ಒಪ್ಪಿಕೊಂಡಿದ್ದರು ಶಿವಾಜಿಯ ತಂದೆ ಷಾಜಿಯವರೇ ಬಿಜಾಪುರದ ದರ್ಬಾರಿನ ಪ್ರತಿನಿಧಿಗಳಾಗಿ ಬಂದು ಸಂಧಿಪತ್ರವನ್ನು ಒಪ್ಪಿಸಿದ್ದರು. ಸಮರ್ಥ ರಾಮದಾಸರು ಶಿವಾಜಿಗೆ ಮಹಾರಾಜ ಪಟ್ಟಾಭಿಷೇಕವನ್ನು ಮಾಡಿಸುವರೆಂಬ ವದಂತಿಯು ದಕ್ಷಿಣಾಪಥದಲ್ಲೆಲ್ಲಾ ಹರಡಿತ್ತು.

ನವರಾತ್ರಿಯ ದಿನಗಳು ಬಂದುವು. ರಾಮದಾಸ ಸ್ವಾಮಿಗಳು ಎಲ್ಲಿಂದಲೋ ಇದ್ದಕ್ಕಿದ್ದಂತೆ ಬಂದು ಪ್ರತಾಪಘಡದಲ್ಲಿ ದರ್ಶನವಿತ್ತರು. ಪುಣೆ

ಯಿಂದ ಮಾತೃಶ್ರೀ ಜೀಜಾಬಾಯಿಯವರೂ ಶಿವಾಜಿಯ ಧರ್ಮಪತ್ನಿ ಸಾಯಿಬಾಯಿಯವರೂ ಬಂದಿದ್ದರು. ಭವಾನೀ ದೇವಮಂದಿರದ ಸುತ್ತಲೂ ವಿಶಾಲವಾದ ಯಾಗಶಾಲೆಯು ಸಿದ್ಧಮಾಡಲ್ಪಟ್ಟಿದ್ದಿತು. ಸಹಸ್ರಚಂಡೀ ಯಾಗಕ್ಕೆ ರಾಮದಾಸರೇ ಸಂಕಲ್ಪಮಾಡಿಸಿ ಋತ್ವಿಜರಿಗೆ ಆಮಂತ್ರಣ ಕೊಟ್ಟರು. ವೇದಘೋಷಗಳು ದಿಗಂತಗಳನ್ನು ವ್ಯಾಪಿಸುತ್ತಿರುವಾಗ ಋತ್ವಿಜರು ಶಿವಾಜಿ ಮಹಾರಾಜರನ್ನು ಅವರ ಧರ್ಮಪತ್ನಿಯವರೊಂದಿಗೆ ಪೀಠದ ಮೇಲೆ ಕುಳ್ಳಿರಿಸಿ, ದೇವೀಯಾಗದ ಸಂಕಲ್ಪ ಮಾಡಿಸಿದರು. ಜಪ, ಪಾರಾಯಣ ಹೋಮಹವನಗಳು ನಡೆಯುತ್ತಿದ್ದವು ಭವಾನೀ ದೇವಾಲಯದಲ್ಲಿ ಅಭಿಷೇಕ ವಿಶೇಷ ಪೂಜಾದಿಗಳನ್ನು ಅರ್ಚಕರು ನಡೆಸಲಾರಂಭಿಸಿದರು. ಭಕ್ತಾದಿಗಳು ಅರಿಸಿನ ಕುಂಕುಮ ಫಲಪುಷ್ಪಾದಿಗಳನ್ನೂ ಹೋಮದ್ರವ್ಯಗಳನ್ನೂ ತೆಗೆದುಕೊಂಡು ಬಂದು ಭವಾನಿಯ ದೇವಾಲಯಕ್ಕೂ ಯಾಗಮಂದಿರಕ್ಕೂ ಸಮರ್ಪಿಸಿ, ದರ್ಶನಗಳನ್ನು ಮಾಡಿಕೊಂಡು ಪ್ರಸಾದಗಳನ್ನು ಪಡೆಯುತ್ತಿದ್ದರು. ಪೂಜೆ ಹೋಮ ಮಂಗಳಾರತಿಗಳೆಲ್ಲಾ ಪೂರೈಸಿದ ಮೇಲೆ ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನ ಸಂತರ್ಪಣೆಗಳಾಗುತ್ತಿದ್ದವು. ಅವರವರ ವರ್ಣಾಶ್ರಮ ಪದ್ಧತಿಗಳಂತೆ ಭೋಜನಗಳು ನಡೆಯುತ್ತಿದ್ದವು. ಮಧ್ಯಾಹ್ನೋತ್ತರ ಯಜ್ಞಶಾಲೆಯಲ್ಲಿ ವೇದಶಾಸ್ತ್ರಗಳ ವಾದಗೋಷ್ಠಿಗಳನ್ನು ವಿದ್ವಜ್ಜನರು ನಡೆಸುತ್ತಿದ್ದರು. ಸಂಧ್ಯಾಕಾಲದಲ್ಲಿ ಸಂತ ತುಕಾರಾಮರವರ ಗೀತೆಗಳನ್ನು ದಾಸಸಂಘದವರು ಹಾಡಿ ಭಜನೆಗಳನ್ನು ನಡೆಸುತ್ತಿದ್ದರು ರಾಮದಾಸರು ಅಮಾತ್ಯ ರಾಮಚಂದ್ರರನ್ನು ಕರೆಯಿಸಿ "ವಿಜಯದಶಮಿಯ ದಿನ ಶಿವಾಜೀ ಮಹಾರಾಜರ ಪಟ್ಟಾಭಿಷೇಕ ಮಹೋತ್ಸವವು ನಡೆಯುತ್ತದೆ. ಪುರೋಹಿತ ಹರಿಪಂಥರನ್ನೂ ರಘುನಾಥದೀಕ್ಷಿತರನ್ನೂ ಮುಂದಿಟ್ಟುಕೊಂಡು ಪಟ್ಟಾಭಿಷೇಕದ ಸಿದ್ಧತೆಗಳೆಲ್ಲವೂ ನಡೆಸಲ್ಪಡಲಿ. ಸೇನಾಧಿಪತಿಗಳು ಅಧಿಕಾರಿಗಳು, ಗ್ರಾಮಗ್ರಾಮಗಳ ಮುಖಂಡರುಗಳು ಎಲ್ಲರಿಗೂ ಕರೆಯೋಲೆಗಳು ಕಳುಹಿಸಲ್ಪಡಲಿ" ಎಂದು ಅಪ್ಪಣೆ ಮಾಡಿದರು.

ಪಟ್ಟಾಭಿಷೇಕದ ಸಿದ್ಧತೆಗಳು ಆರಂಭವಾದವು. ಹೀಗೆ ಒಂಬತ್ತು ದಿನಗಳು ಭವಾನಿಯ ಮಹಾಪೂಜೆ ಮಂಗಳಾರತಿಗಳೂ, ಚಂಡೀಯಾಗದ

ಹೋಮ–ಹವನಗಳೂ ಸಾಂಗವಾಗಿ ನೆರವೇರಿದವು. ದಶಮಿಯ ದಿನ ಪ್ರಾತಃ ಕಾಲದಲ್ಲಿ ಭವಾನೀದೇವಿಯ ಸನ್ನಿಧಾನದಲ್ಲಿ ಶಿವಾಜಿಯನ್ನು ರಜತಪೀಠದ ಮೇಲೆ ಕುಳ್ಳಿರಿಸಿ, ಗಂಗಾದಿ ಮಹಾನದಿಗಳ ತೀರ್ಥದಿಂದಲೂ ಸಮುದ್ರೋದಕ ಗಳಿಂದಲೂ ನವರತ್ನಗಳಿಂದಲೂ ಅಭಿಷೇಕ ಮಾಡಿಸಿ, ನೂತನ ಪಟ್ಟವಾಳಿ ಗಳನ್ನು ಉಡಿಸಿ ಯಾಗಶಾಲೆಗೆ ಕರೆತಂದರು. ಅಲ್ಲಿ ಪೂರ್ಣಾಹುತಿಯಾಯಿತು. ಅಲ್ಲಿಂದ ಸಮರ್ಥ ರಾಮದಾಸರೇ ಹಸ್ತ ಲಾಘವನ್ನಿತ್ತು ಶಿವಾಜಿಯನ್ನು ಭವಾನಿದೇವಿಯ ಸನ್ನಿಧಾನಕ್ಕೆ ಕರೆತಂದು ಭವಾನಿಯ ಪ್ರಸಾದ ಮಂತ್ರಾಕ್ಷತೆ ಗಳನ್ನು ಕೊಟ್ಟರು. ಶಿವಾಜಿಯು ದೇವೀ ಪ್ರಸಾದವನ್ನು ಹಣೆಯಲ್ಲಿಯೂ ಶಿರಸ್ಸಿನಲ್ಲಿಯೂ ಧಾರಣೆಮಾಡಿದನು. ದೇವಿಯ ಸನ್ನಿಧಾನದಲ್ಲಿ ಅಣಿಮಾಡ ಲ್ಪಟ್ಟಿದ್ದ ಸಿಂಹಾಸನದ ಮೇಲೆ ಪುರೋಹಿತರೂ ದೀಕ್ಷಿತರೂ ಶಿವಾಜಿಯನ್ನು ಕರೆತಂದು ಕೂಡಿಸಿದರು. ವೇದಘೋಷಗಳೂ ಮಂಗಳ ವಾದ್ಯಗಳೂ ಮೊಳಗುತ್ತಿರುವಾಗ ರಾಮದಾಸಸ್ವಾಮಿಗಳು ದೇವಿಯ ಹಸ್ತದಿಂದ ಪಟ್ಟದ ಕತ್ತಿಯನ್ನು ತಂದು ಶಿವಾಜಿಗೆ ಒಪ್ಪಿಸಿದರು. ಶಿವಾಜಿಯು ಎದ್ದುನಿಂತು ಎರಡು ಕೈಗಳಿಂದಲೂ ಪಟ್ಟದ ಕತ್ತಿಯನ್ನು ಸ್ವೀಕರಿಸಿ, ಗುರು ರಾಮದಾಸರ ಪಾದಗಳಿಗೆರಗಿ ಸಿಂಹಾಸದ ಮೇಲೆ ಕುಳಿತುಕೊಂಡನು. ಜನಸ್ತೋಮ ದಿಂದ ದಶದಿಕ್ಕುಗಳೂ ತುಂಬುವಂತೆ ಜಯಘೋಷಗಳಾಗುತ್ತಿದ್ದವು. ರಾಮ ದಾಸರು ಸಿಂಹಾಸನದ ಮುಂದೆ ನಿಂತು "ಇದು ರಾಮರಾಜ್ಯ. ಶ್ರೀರಾಮ ಚಂದ್ರನ ಆಜ್ಞೆಯಂತೆ ರಾಮರಾಜ್ಯವನ್ನು ಸ್ಥಾಪಿಸುತ್ತಿದ್ದೇವೆ. ಶಿವಾಜೀ ಎಲ್ಲರೂ ಧರ್ಮದಿಂದ ನಡೆದುಕೊಳ್ಳಬೇಕು. ಧರ್ಮರಾಜ್ಯವೆಂಬ ಹೆಸರು ಮಹಾರಾಜನಿಗೆ ಆಳುವ ಪ್ರಭುವಾಗಿ ಪಟ್ಟಕಟ್ಟಿದ್ದೇವೆ. ಈ ರಾಜ್ಯದಲ್ಲಿ ಆಚಂದ್ರಾರ್ಕವಾಗಿ ಇರಬೇಕು. ಹಿಮಾಲಯದಿಂದ ಕನ್ಯಾಕುಮಾರಿಯ ವರೆಗಿನ ಪವಿತ್ರ ಭಾರತ ಭೂಮಿಯು ಈ ರಾಜ್ಯಕ್ಕೆ ಅಧೀನವಾಗಿರಬೇಕು. ವಿಧರ್ಮೀಯರು ನಾಶವಾಗಬೇಕು" ಎಂದು ಆಶೀರ್ವದಿಸಿದರು.

"ಸ್ವಸ್ತಿ ಪ್ರಜಾಭ್ಯಃ ಪರಿಪಾಲಯಂತಾಂ
ನ್ಯಾಯೇನ ಮಾರ್ಗೇಣ ಮಹೀಂ ಮಹೀಶಾಃ ।
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋಭವಂತು ॥

ಇದು ರಾಜ್ಯಕ್ಕೆ ರಾಮರಕ್ಷೆ. ಆಸೇತುಹಿಮಾಚಲದವರೆಗೆ ಈ ಧರ್ಮಸೂತ್ರವು ಭದ್ರವಾಗಿರಲಿ, ಶಾಶ್ವತವಾಗಿರಲಿ" ಎಂದು ವೈದಿಕ ಬ್ರಾಹ್ಮಣರು ಹರಸಿದರು. ಅನಂತರ ಅನೇಕ ಯುದ್ಧಗಳಲ್ಲಿ ಸಾಹಸದಿಂದ ಯಶಸ್ಸನ್ನು ಗಳಿಸಿರುವ ಸರದಾರರುಗಳಿಗೆ ಅವರವರ ಶಕ್ತಿ ಸಾಮರ್ಥ್ಯದಳಿಗೆ ಅನುಗುಣವಾಗಿ ಅಧಿಕಾರ ಪತ್ರಗಳು ಮಹಾರಾಜ ಶಿವಾಜಿಯಿಂದ ಕೊಡಲ್ಪಟ್ಟವು. ಮೊಟ್ಟಮೊದಲು ಅಮಾತ್ಯ ರಾಮಚಂದ್ರನಿಗೆ ಸರ್ವೋನ್ನತ ಅಧಿಕಾರಪತ್ರವು ಉಡುಗೊರೆಗಳೊಂದಿಗೆ ಕೊಡಲ್ಪಟ್ಟವು. ಅನಂತರ ಅಷ್ಟ ಪ್ರಧಾನಿಗಳ ನೇಮಕವಾಯಿತು ಅಣ್ಣಾಜೀದತ್ತೋ ಈ ಸರದಾರನನ್ನು ಸರ್ವಾಧಿಕಾರಿಯಾಗಿ ನೇಮಿಸಿದರು. ಬಾಳಾಜೀ ಚಿಟ್ನೀಸ್, ನೀಲಪ್ರಭು, ದತ್ತೋತ್ರಿಮಲ್ ಇವರುಗಳಿಗೆ ಕಾರಭಾರಿ ಅಧಿಕಾರಗಳು ಕೊಡಲ್ಪಟ್ಟವು. ನೇತಾಜೀಫಲ್ಕರ್, ಪ್ರತಾಪರಾವ್ ಗೂಜಾರ್, ಹಂಬೀರ್‌ರಾವ್ ಮೋಹಿತೆ, ತಾನಾಜೀ ಮಲ್‌ಸುರೆ, ಆನಂದರಾವ್ ಕೌಲಕ್, ಈ ಮಹಾ ಸೇನಾಧಿಪತಿ ಗಳಿಗೆ ಸೈನ್ಯದ ಆಯಾ ವಿಭಾಗಗಳ ಸರ್ವಸೇನಾಧಿಪತ್ಯದ ಅಧಿಕಾರಿಗಳು ಕೊಡಲ್ಪಲ್ಪಟ್ಟವು. ಮೋರೋ ತ್ರಿಂಬಕ, ಪ್ರಹ್ಲಾದ ನಿರಾಜಿ ಇವರುಗಳನ್ನು ರಾಜಕೀಯ ರಾಯಭಾರಿಗಳಾಗಿ ನೇಮಿಸಿದರು. ಹೀಗೆ ರಾಜ್ಯಾಡಳಿತಕ್ಕೆ ಅಧಿಕಾರಿಗಳನ್ನು ನೇಮಿಸಿ ಉಡುಗೊರೆಗಳೊಂದಿಗೆ ಅಧಿಕಾರ ಪತ್ರಗಳು ಕೊಡಲ್ಪಟ್ಟವು. ಗ್ರಾಮಗ್ರಾಮಗಳಲ್ಲಿಯೂ, ನ್ಯಾಯತೀರ್ಮಾನಕ್ಕೆ ಮಹಜರ್‌ಗಳನ್ನು ಸ್ಥಾಪಿಸಿದರು. (ಮಹಜರ್ ಎಂದರೆ ಮಹಾಜನರ ನ್ಯಾಯಸ್ಥಾನಗಳು) ವಂಶಪಾರಂಪರ್ಯವಾಗಿ ಬಂದಿರುವ ಗ್ರಾಮನಿಗಳಿಗೆ ಉಡುಗೊರೆಗಳನ್ನು ಕೊಟ್ಟರು. ಪ್ರತಿಯೊಂದು ಗ್ರಾಮಕ್ಕೂ ರಕ್ಷಣೆ ಶಾಸನಗಳಿಗಾಗಿ ಕೊತ್ವಾಲ ತಳವಾರರುಗಳನ್ನು ನೇಮಿಸಿದರು. ಸಮಸ್ತ ಮಹಾಜನರೂ ಶಿವಾಜಿ ಮಹಾರಾಜನಿಗೆ ಕಪ್ಪಕಾಣಿಕೆಗಳನ್ನು ಒಪ್ಪಿಸಿ ಮುಜುರೆ ಮಾಡಿದರು. ಹೀಗೆ ರಾಮದಾಸರು ತಮ್ಮ ಶಿಷ್ಯನಿಗೆ ಮಹಾರಾಜ ಪಟ್ಟವನ್ನು ಕಟ್ಟಿ ಶಿವಾಜಿಗೂ, ಅವನ ಮಾತುಶ್ರೀ ಜೀಜಾಬಾಯಿಯವರಿಗೂ, ಸಾಯಿಬಾಯಿಯವರಿಗೂ ಆಶೀರ್ವದಿಸಿ ಭದ್ರಾಚಲಕ್ಕೆ ಪ್ರಯಾಣಮಾಡಿದರು.

ಶಿವಾಜಿಯು ಕೋಟೆಕೊತ್ತಲಗಳನ್ನು ಮದ್ದುಗುಂಡುಗಳ ಉಗ್ರಾಣಗಳನ್ನೂ ಭದ್ರಪಡಿಸಲಾರಂಭಿಸಿದನು. ಶಿವಾಜಿಯು ತನ್ನ ಸಂಗಡಿಗರನ್ನೆಲ್ಲಾ

ಪುರಂಧರಘಡದ ಅರಮನೆಯಲ್ಲಿ ಮಂತ್ರಾಲೋಚನಾ ಸಭೆಗೆ ಸೇರಿಸಿದನು.

"ಸ್ನೇಹಿತರೇ, ನಾವೆಲ್ಲರೂ ದೇಶಪ್ರೇಮದಿಂದ ಗುರುಮಹಾರಾಜರ ಅನುಗ್ರಹದಿಂದ ಈ ರಾಜ್ಯವನ್ನು ಸ್ಥಾಪನೆ ಮಾಡಿದ್ದೇವೆ. ಆಯಾ ಅಧಿಕಾರಗಳಿಗೆ ತಕ್ಕಂತೆ ನಿಮ್ಮಗಳನ್ನು ನೇಮಿಸಲಾಗಿದೆ ಇದರಲ್ಲಿ ಒಬ್ಬರು ಹೆಚ್ಚು ಒಬ್ಬರು ಕಡಿಮೆ ಎಂಬ ಭಾವನೆಯನ್ನು ಇಟ್ಟುಕೊಳ್ಳಬೇಡಿರಿ. ನಾವೆಲ್ಲರೂ ಸಮಾನರು, ಸೋದರರು. ರಾಜ್ಯ ಸ್ಥಾಪನೆಯಾಗಿದೆಯೆಂದು ಮೈಮರೆಯಬೇಡಿರಿ. ಇನ್ನೂ ಇದು ರಾಜ್ಯಸ್ಥಾಪನೆಯ ಆರಂಭವಾಗಿದೆ., ಅಷ್ಟೆ. ನಮ್ಮ ಮೇಲೆ ಮೊಗಲ್ ಸಾಮ್ರಾಟನ ಕ್ರೂರದೃಷ್ಟಿಯು ಇದ್ದೇ ಇದೆ. ಔರಂಗಜೇಬನು ಈ ಹಿಂದುಗಳ ಔನ್ನತ್ಯವನ್ನು ಸಹಿಸುವುದಿಲ್ಲ. ನಮ್ಮ ಮುಂದೆ ಇನ್ನೂ ಎಷ್ಟೋ ಯುದ್ಧಗಳು ಕಾದಿವೆ. ಅದಕ್ಕಾಗಿಯೇ ಭವಾನಿದೇವಿಯು ಈ ಕರಾಳವನ್ನು ನನಗೆ ಅನುಗ್ರಹಿಸಿದ್ದಾಳೆ. ನಾವು ಪ್ರಮತ್ತರಾಗಬಹುದು. ಭೋಗೈಶ್ವರ್ಯಗಳಲ್ಲಿ ಮೈಮರೆಯಬಾರದು. ನಾವು ರಾಜರಲ್ಲ. ಅಧಿಕಾರಿಗಳಲ್ಲ. ನಾವೆಲ್ಲರೂ ಯೋಧರು. ಧರ್ಮಸ್ಥಾಪನೆಗಾಗಿ ಎಲ್ಲರೂ ಯೋಧರಾಗಬೇಕು. ಡೆಲ್ಲಿಯ ಸಿಂಹಾಸನವು ನೆಲಕ್ಕೆ ಉರುಳುವತನಕ ನಾವು ಎತ್ತಿದ ಕತ್ತಿಯನ್ನು ಕೆಳಗಿಡಬಾರದು. ನಮ್ಮ ರಾಜ್ಯದಲ್ಲಿ ಎಲ್ಲಿಯೂ ಅನ್ಯಾಯ ವರ್ತನೆಗಳಾಗಬಾರದು. ಆ ಧರ್ಮರಕ್ಷಣೆಗೆ ನೀವೆಲ್ಲರೂ ಜವಾಬ್ದಾರರು"---ಎಂದು ಉಪದೇಶಮಾಡಿದನು.

ಶ್ರೀರಾಮದಾಸರ ಪ್ರಭಾವದಿಂದ ದೇಶದಲ್ಲೆಲ್ಲಾ ನವಚೇತನವು ಆವಿರ್ಭವಿಸಿದಂತಾಯಿತು. ಮಹಾರಾಷ್ಟ್ರನು ಒಬ್ಬನಿರಲಿ, ಹತ್ತು ಜನರಿರಲಿ ಧರ್ಮಕ್ಕಾಗಿ ಹೋರಾಡುತ್ತಾನೆ. ನ್ಯಾಯದಿಂದ ನಡೆಯುತ್ತಾನೆ. ಇದೇ ರಾಷ್ಟ್ರಜೀವನ--ಎಂಬ ಭಾವನೆಯು ಜನಜನಿತವಾಗಿದ್ದಿತು.

## ೨

ಸೂರತ್ ಪಟ್ಟಣವು ಆಗಿನ ಕಾಲದಲ್ಲಿ ಬಹು ಪ್ರಸಿದ್ಧವಾದ ವಿದೇಶೀ ವ್ಯಾಪಾರದ ಪಟ್ಟಣ. ಅಲ್ಲಿ ಇಂಗ್ಲೀಷ್ ಕಂಪನಿಯ ಮುಖ್ಯ ಕೋಠಿಯು ಸ್ಥಾಪಿತವಾಗಿದ್ದಿತು. ಸಮರ್ಥರಾದ ಇಂಗ್ಲೀಷ್ ಅಧಿಕಾರಿಗಳಿದ್ದರು. ಪಟ್ಟಣದ ಅಧಿಕಾರವು ಮೊಗಲ್ ಬಾದಶಹನಿಗೆ ಸೇರಿತ್ತು. ಫ್ರೆಂಚರು, ಪೋರ್ಚುಗೀಸರು, ಡಚ್ಚರು, ಟರ್ಕಿ-ಅರಬ್ಬೀ ವ್ಯಾಪಾರಿಗಳು ಅಲ್ಲಿ ನೆಲಸಿದ್ದರು. ಮೊಗಲ್ ಫೌಜುದಾರನೂ ಅಧಿಕಾರ ನಡೆಸುತ್ತಿದ್ದನು. ಮೊಗಲ್ ನ್ಯಾಯಸ್ಥಾನವು ಇದ್ದಿತು. ಐಶ್ವರ್ಯದ ಸುಭದ್ರತೆಯೂ ಮೊಗಲ್ ಅಧಿಕಾರಿಗಳಿಂದ ರಕ್ಷಿಸಲ್ಪಡುತ್ತಿದ್ದಿತು. ರಾಮಪುರವೆಂಬ ಸ್ಥಳದಲ್ಲಿ ಇಂಗ್ಲೀಷರ ವ್ಯಾಪಾರ ಕೋಠಿ. ಅದು ಬಿಜಾಪುರಕ್ಕೆ ಸೇರಿತ್ತು. ಬಿಜಾಪುರದ ಸೇನಾಧಿಪತಿ ಅಫಜಲ್‌ಖಾನನಿಗೂ ಶಿವಾಜಿಗೂ ಯುದ್ಧ ನಡೆಯುತ್ತಿರುವಾಗ ಇಂಗ್ಲೀಷ್ ಸರದಾರರು ಪನ್ಹಾಲಾದಲ್ಲಿ ನುಗ್ಗಿ ಅತ್ಯಾಚಾರಗಳನ್ನು ನಡೆಸಿದ್ದರು. ಶಿವಾಜಿಯು ಬಿಜಾಪುರದವರೊಡನೆ ಯುದ್ಧ ಪೂರೈಸಿದನಂತರ ಪನ್ಹಾಲದಲ್ಲಿ ದುಷ್ಕೃತ್ಯಗಳನ್ನು ನಡೆಯಿಸಿದ ನಾಲ್ಕೈದು ಮಂದಿ ಆಂಗ್ಲ ಸರದಾರರನ್ನು ಸೆರೆಹಿಡಿಸಿ, ರಾಯಘಡ ದುರ್ಗದ ಬಂದೀಖಾನೆಯಲ್ಲಿ ಇಡಿಸಿದ್ದನು. ರಾಮಪುರದ ಇಂಗ್ಲೀಷ್ ಕೋಠಿಯನ್ನು ಮಹಾರಾಷ್ಟ್ರ ಸೈನಿಕರು ಕೊಳ್ಳೆಹೊಡೆದು ಬೆಲೆಬಾಳುವ ಪದಾರ್ಥಗಳನ್ನೂ ಮದ್ದು ಗುಂಡುಗಳನ್ನೂ ಹೊತ್ತುಕೊಂಡು ಹೋಗಿದ್ದರು.

ರಾಯಘಡದ ಕೋಟೆಯಲ್ಲಿ ಬಂದೀಖಾನೆಯಲ್ಲಿದ್ದ ಇಂಗ್ಲೀಷ್ ಸರದಾರರು ಸೂರತ್‌ನಲ್ಲಿದ್ದ ಇಂಗ್ಲೀಷ್ ಗೌರ್ನರ್ ಸಾಹೇಬರಿಗೆ ಆಗಾಗ ಪತ್ರಗಳನ್ನು ಬರೆದು ಕಳುಹಿಸುತ್ತಿದ್ದರು. ಆ ಪತ್ರಗಳಲ್ಲಿ ಬಹಳ ನಿಷ್ಠೂರತೆಯಿದ್ದಿತು. ತಮ್ಮನ್ನು ಶಿವಾಜಿಯು ಎರಡು ವರ್ಷಗಳಿಂದ ಸೆರೆಯಿಟ್ಟಿದ್ದರೂ ಅದನ್ನು ಸಹಿಸಿಕೊಂಡಿರುವುದು ಇಂಗ್ಲೀಷ್ ಕಂಪನಿಗೆ ಅತ್ಯಂತ ಅಗೌರವವೆಂದು ಬರೆದಿದ್ದರು.

ಸೂರತ್ ಕೋಠಿಯಲ್ಲಿ ಗೌರ್ನರ್ ಸಾಹೇಬನು ತನ್ನ ಅಧಿಕಾರಿಗಳೊಂದಿಗೆ ಸಮಾಲೋಚನೆ ನಡೆಸಿದನು. "ಅಧಿಕಾರಿಗಳು ಆ ಶಿವಾಜಿಗೆ ಪ್ರತೀಕಾರ ಮಾಡಬೇಕು. ಡೆಲ್ಲಿ ದರ್ಬಾರಿಗಾದರೂ ಬರೆದು ಶಿವಾಜಿಯು ಸೊಕ್ಕನ್ನು ಮುರಿಯುವಂತೆ ಮಾಡಬೇಕು" ಎಂದು ಹೇಳಿದನು. ಗೌರ್ನರ್ ಸಾಹೇಬನು ಬುದ್ಧಿವಂತ. ಹಿಂದೂಸ್ಥಾನದ ಆಗಿನ ರಾಜಕೀಯವನ್ನು ಚೆನ್ನಾಗಿ ಅರಿತಿದ್ದ ಚಾಣಾಕ್ಷ ಅವನು ಹೇಳಿದನು: "ಶಿವಾಜಿಯು ಸಾಮಾನ್ಯನಲ್ಲ. ಅವನ ಸೈನ್ಯವು ಪ್ರಬಲವಾಗಿದೆ. ಅವನ ರಾಜ್ಯದಲ್ಲಿ ಅಧಿಕಾರವನ್ನು ನ್ಯಾಯವಾಗಿ ನಡೆಸುತ್ತಾರೆ. ಶಿಸ್ತು ಚೆನ್ನಾಗಿದೆ. ಶಿವಾಜಿಯ ಸೈನಿಕರು ಹಣಕ್ಕಾಗಿ ದುಡಿಯುವವರಲ್ಲ. ಹೊಟ್ಟೆ ಹೊರೆದುಕೊಳ್ಳುವುದಕ್ಕೆ ಸೈನ್ಯದಲ್ಲಿ ಸೇರಿರುವವರಲ್ಲ. ದೇಶಪ್ರೇಮದಿಂದ ಅವರು ಯೋಧರಾಗಿದ್ದಾರೆ. ಈ ಹಿಂದುಗಳಲ್ಲಾಗಲೀ, ಮುಸಲ್ಮಾನರಲ್ಲಾಗಲೀ ದೇಶಪ್ರೇಮವು ಎದ್ದು ಕಾಣುತ್ತದೆ. ಮೊಗಲ್ ಸಾಮ್ರಾಟನಿಗೆ ಅಖಂಡ ಸೈನ್ಯವಿದ್ದರೂ ಐಶ್ವರ್ಯವಿದ್ದರೂ ಸುಲಭವಾಗಿ ಈ ಶಿವಾಜಿಯನ್ನು ಗೆಲ್ಲಲಾಗುವುದಿಲ್ಲ. ಕುಂಪಣಿಯವರ ಅಭಿಪ್ರಾಯವು ಖಚಿತವಾಗಿದೆ. ನಾವು ಮೊಗಲ್ ಸಾಮ್ರಾಟರೊಡನೆಯೂ ನಿಷ್ಠೂರ ಕಟ್ಟಿಕೊಳ್ಳಕೂಡದು. ಶಿವಾಜಿಯೊಡನೆಯೂ ವಿರೋಧ ಕಟ್ಟಿಕೊಳ್ಳಕೂಡದು. ಸ್ನೇಹ ಸಂಧಾನದಿಂದಲೇ ಆ ಎರಡು ರಾಜ್ಯಗಳೊಡನೆಯೂ ವರ್ತಿಸಬೇಕು. ಇದು ಕಂಪನಿಯವರ ಇಷ್ಟ. ಈ ಸರದಾರರ ವಿಚಾರಕ್ಕೆ ನಾವು ಕೈಹಾಕುವಂತಿಲ್ಲ. ಪನ್ಹಾಲಕ್ಕೆ ಅವರು ಹೋದದ್ದು ತಪ್ಪು. ಅವರು ಗಡಿ ದಾಟಿ ಹೋಗಿದ್ದಾರೆ. ಅವರ ರಕ್ಷಣೆಗೆ ನಾವು ಎಷ್ಟು ಮಾತ್ರಕ್ಕೂ ಜವಾಬ್ದಾರರಲ್ಲ. ರಾಜಾಪುರದ ಕೋಠಿಯನ್ನು ಮರಾಠರು ಕೊಳ್ಳೆಹೊಡೆದಿದ್ದಾರೆ. ಅದರ ನಷ್ಟವನ್ನು ಶಿವಾಜಿಯು ಕಟ್ಟಿಕೊಡಬೇಕು. ಅದಕ್ಕಾಗಿ ಶಿವಾಜಿಯ ದರ್ಬಾರಿಗೆ ರಾಯಭಾರಿಯನ್ನು ಕಳಿಸುತ್ತೇನೆ" ಎಂದು ಹೇಳಿದನು.

ಅಧಿಕಾರಿಗಳೆಲ್ಲರೂ ಒಪ್ಪಿಕೊಂಡರು.

ಗೌರ್ನರ್ ಸಾಹೇಬನು ತಮ್ಮ ಕೋಠಿಯಲ್ಲಿದ್ದ ವಕೀಲ ನಿಕೋಲಸ್‌ನನ್ನು ಅಂತರಂಗದಲ್ಲಿ ಕರೆಯಿಸಿ ಮಾತನಾಡಿದನು. ಈ ಕೋಠಿಗಳಲ್ಲಿದ್ದ ವಿದೇಶೀ ವಕೀಲರುಗಳು ಬಹಳ ಬುದ್ಧಿವಂತರಾಗಿದ್ದರು. ಅವರು ಹಿಂದೂ

ಸ್ಥಾನಕ್ಕೆ ಬಂದು ಪಾರಸಿ, ಉರ್ದು ಭಾಷೆಗಳನ್ನು ಬಲು ಚೆನ್ನಾಗಿ ಕಲಿತಿರುತ್ತಿದ್ದರು. ಈ ವ್ಯಾಪಾರ ಕೋಠಿಗಳಪರಲ್ಲಿ ಪರಸ್ಪರ ವಿವಾದಗಳೇನಾದರೂ ಬಂದರೆ ಈ ವಕೀಲರುಗಳನ್ನು ಕಳಿಸಿ ಇತ್ಯರ್ಥ ಮಾಡಿಕೊಳ್ಳುತ್ತಿದ್ದರು. ಸಾಧಾರಣವಾಗಿ ವಿದೇಶಿಯರು ತಮ್ಮ ತಮ್ಮ ವಿವಾದಗಳನ್ನು ಬಿಜಾಪುರದ ದರ್ಬಾರಿಗಾಗಲೀ ಡೆಲ್ಲಿಯ ದರ್ಬಾರಿಗಾಗಲೀ ದೂರುಕೊಂಡು ಹೋಗುತ್ತಿರಲಿಲ್ಲ. ಏಕೆಂದರೆ ಆ ದರ್ಬಾರುಗಳಲ್ಲಿ ವರ್ಷಗಟ್ಟಲೆಯಾದರೂ ಯಾವ ವಿವಾದಗಳೂ ಇತ್ಯರ್ಥವಾಗುತ್ತಿರಲಿಲ್ಲ. ಅನ್ಯಾಯವಾಗಿ ದರ್ಬಾರಿನ ಅಧಿಕಾರಿಗಳಿಗೆಲ್ಲಾ ಲಂಚ ಸುರಿಯಬೇಕು. ವಿದೇಶೀ ವ್ಯಾಪಾರಸ್ಥರು ತಮ್ಮ ತಮ್ಮ ಕಡೆ ವಕೀಲರನ್ನು ಕಳಿಸಿಯೇ ಪರಸ್ಪರ ವಿವಾದಗಳನ್ನು ಬಗೆಹರಿಸಿಕೊಳ್ಳುತ್ತಿದ್ದರು. ಮೊಗಲ್ ದರ್ಬಾರಿಗಾಗಲೀ ಬಿಜಾಪುರದ ದರ್ಬಾರಿಗಾಗಲೀ ವಕೀಲರನ್ನು ಕಳಿಸಬೇಕಾದರೆ ಬಹು ದೊಡ್ಡ ಅಂತಸ್ತಿನ ವಕೀಲರನ್ನು ಕಳುಹಿಸುತ್ತಿದ್ದರು. ಆ ದರ್ಬಾರುಗಳಿಂದ ಏನಾದರೂ ಸವಲತ್ತು ಪಡೆಯಬೇಕಾಗಿದ್ದರೆ, ಉನ್ನತಾಧಿಕಾರಿಗಳ ಕೋಪವನ್ನು ಶಮನ ಮಾಡಬೇಕಾಗಿದ್ದರೆ, ಈ ವಕೀಲರುಗಳನ್ನು ಕಳುಹಿಸುತ್ತಿದ್ದರು. ಈ ವಕೀಲರುಗಳು ಆಯಾ ದರ್ಬಾರುಗಳ ಸಂಪ್ರದಾಯಗಳು, ಅಧಿಕಾರಿಗಳ ಮರ್ಜಿಗಳು ಇವುಗಳೆಲ್ಲವನ್ನೂ ಚೆನ್ನಾಗಿ ಅರಿತಿರುತ್ತಿದ್ದರು. ಒಂದೊಂದು ಬಾರಿ ಸ್ತ್ರೀಯರನ್ನು ಕರೆದುಕೊಂಡು ಹೋದ ನಿದರ್ಶನಗಳು ಅನೇಕ ಉಂಟು. ಸ್ತ್ರೀಯರುಗಳ ಲಾವಣ್ಯದಿಂದ, ಚಾಕ್ಯಚಕ್ಯತೆಯಿಂದ ಅನೇಕ ದುರ್ಘಟ ಪ್ರಸಂಗಗಳನ್ನು ಪರದೇಶೀ ವ್ಯಾಪಾರಿಗಳು ಸುಲಭವಾಗಿ ಪರಿಹರಿಸಿಕೊಂಡ ನಿದರ್ಶನಗಳು ಬೇಕಾದಷ್ಟಿವೆ. ಅಂಥಾ ರಾಯಭಾರಿಗಳಲ್ಲಿ ಸಿಕೋಲಸ್‌ನು ಅತ್ಯಂತ ಬುದ್ಧಿವಂತ. ಮರಾಠೀ ಭಾಷೆಯನ್ನೂ ಚೆನ್ನಾಗಿ ಕಲಿತಿದ್ದನು.

ಗೌರ್ನರ್ ಸಾಹೇಬನು ರಾಯಭಾರಿ ಸಿಕೋಲಸ್‌ನಿಗೆ ಹೇಳಿದನು. "ನಮ್ಮ ಆಕೋಠಿಗೂ ಶಿವಾಜಿ ಮಹಾರಾಜನಿಗೂ ಎರಡು ವಿವಾದಾಂಶಗಳಿವೆ. ರಾಮುಪುರದ ಕೋಠಿಯನ್ನು ಮರಾಠರು ಕೊಳ್ಳೆಹೊಡೆದಿದ್ದಾರೆ. ಆ ನಷ್ಟವನ್ನು ಶಿವಾಜಿ ಮಹಾರಾಜನು ಕಟ್ಟಿಕೊಡಬೇಕು. ನಮ್ಮಲ್ಲಿ ಲೆಖ್ಖಾಚಾರಗಳು ಕರಾರುವಾಕ ಇವೆ. ಮತ್ತೊಂದು ಅಂಶವೆಂದರೆ ನಮ್ಮ ಸರದಾರರನ್ನು ಅವರ ಸೆರೆಯಲ್ಲಿ ಇಟ್ಟಿದ್ದಾರೆ. ಅದು ಅಷ್ಟು ಮುಖ್ಯವಾದ ವಿವಾದಾಂಶವಲ್ಲ.

ಆದರೂ ಅದನ್ನು ಅವರಿಗ ತಿಳಿಯಪಡಿಸಬೇಕು. ಏಕೆಂದರೆ ಮುಂದೆ ಅಂಥಾ ಕಾರ್ಯಗಳು ಕೈಮೀಂಚದಂತೆ ಹದ್ದುಬಸ್ತಿರಬೇಕು. ಇವೆರಡಕ್ಕೂ ಒಂದು ಮುಖ್ಯ ರಹಸ್ಯವಿದೆ. ಶಿವಾಜೀ ಮಹಾರಾಜನಿಗೆ ಒಳ್ಳೆಯ ಬಂದೂಕುಗಳೂ ಮದ್ದು ಗುಂಡುಗಳೂ ಬೇಕು. ಇವರಿಗೆ ಆಯುಧಗಳನ್ನು ಕೊಡಕೂಡದೆಂದು ಮೊಗಲರು ನಮ್ಮಿಂದ ಒಪ್ಪಂದವನ್ನು ತೆಗೆದುಕೊಂಡಿದ್ದಾರೆ. ಅದರಿಂದ ಅಷ್ಟೇನೂ ಪ್ರಯೋಜನವಿಲ್ಲ. ಪೋರ್ಚುಗೀಸರೂ ಫ್ರೆಂಚರೂ ಅವರಿಗೆ ಬೇಕಾದಷ್ಟು ಆಯುಧಗಳನ್ನು ಮಾರುತ್ತಾರೆ. ವ್ಯಾಪಾರ ದೃಷ್ಟಿಯಿಂದ ಅದು ನಮಗೆ ನಷ್ಟಕರವಾಗಿಯೇ ಇದೆ. ಶಿವಾಜಿಯು ನಮ್ಮ ಆಯುಧಗಳಿಗಾಗಿ ಯಾಚಿಸುವಂತೆ ನಾವು ಸ್ನೇಹ ಔದರ್ಯಗಳಿಂದ ಅವನಿಗೆ ರಹಸ್ಯವಾಗಿ ಆಯುಧಗಳನ್ನು ಕೊಡಲು ಒಪ್ಪಿರುವಂತೆ ಸೂಚನೆ ಮಾಡಬೇಕು. ಎಲ್ಲದಕ್ಕಿಂತಲೂ ಮುಖ್ಯವಾಗಿ ಸ್ನೇಹ ಸೌಜನ್ಯಗಳು ಭದ್ರವಾಗಿರುವಂತೆ ಮಾಡಿಕೊಂಡು ಬರಬೇಕು" ಎಂದು ಹೇಳಿದನು.

ನಿಕೋಲಸ್‌ನು ಒಪ್ಪಿಕೊಂಡು ಶಿವಾಜಿಯ ದರ್ಬಾರಿಗೆ ಪ್ರಯಾಣ ಮಾಡಿದನು. ಮುತ್ಸದ್ದಿಗಳೂ ಅಂಗರಕ್ಷಕರೂ ಅವನೊಡನೆ ಹೊರಟರು.

ಶಿವಾಜಿಗೆ ಒಪ್ಪಿಸಲು ಅಮೂಲ್ಯವಾದ ಖಿಲ್ಲತ್ತುಗಳನ್ನು ತೆಗೆಸಿಕೊಂಡು ಹೊರಟನು.

ಶಿವಾಜಿಯು ಪುರಂಧರಘಡದಲ್ಲಿದ್ದನು. ಆಂಗ್ಲ ರಾಯಭಾರಿಯು ಬರುವ ಸುದ್ದಿಯನ್ನು ಕೇಳಿ ರಾಜಯೋಗ್ಯವಾದ ಬಿಡಾರವನ್ನೂ ಆತಿಥ್ಯದ ಏರ್ಪಾಡುಗಳನ್ನೂ ಸಿದ್ಧಗೊಳಿಸಿದ್ದನು.

ನಿಕೋಲಸ್‌ನು ಪರಿವಾರಸಮೇತನಾಗಿ ಬಂದು ತನಗಾಗಿ ಏರ್ಪಡಿಸಿದ್ದ ಬಿಡಾರದಲ್ಲಿ ಇಳಿದುಕೊಂಡನು. ಮೂರನೆಯ ದಿವಸವೇ ದರ್ಬಾರಿನ ಅಧಿಕಾರಿಗಳು ಬಂದು ರಾಯಭಾರಿಯ ಭೇಟಿಮಾಡಿ ಅವನನ್ನು ಮರ್ಯಾದೆಯೊಂದಿಗೆ ದರ್ಬಾರಿಗೆ ಕರೆದುಕೊಂಡು ಹೋದರು.

ನಿಕೋಲಸ್‌ನು ತನ್ನ ಅನುಚರರ ಕೈಯಲ್ಲಿ ಖಿಲ್ಲತ್ತುಗಳನ್ನು ತೆಗೆಸಿಕೊಂಡು ದರ್ಬಾರಿಗೆ ಪ್ರವೇಶಮಾಡಿದನು.

ಆ ದರ್ಬಾರಿನ ವೈಭವವನ್ನೂ ಅಟ್ಟಹಾಸವನ್ನೂ ನೋಡಿ ಅಚ್ಚರಿ

ಗೊಂಡನು. ಅನರ್ಘ್ಯವಸ್ತ್ರಗಳಿಂದ ಅಲಂಕೃತವಾದ ಗದ್ದುಗೆಯ ಮೇಲೆ ಸ್ವರ್ಣಸಿಂಹಾಸನವು ಅಲಂಕೃತವಾಗಿದ್ದಿತು ನೆಲದ ಮೇಲೆ ಅನರ್ಘ್ಯವಾದ ರತ್ನಕಂಬಳಿಗಳು ಹಾಸಲ್ಪಟ್ಟಿದ್ದುವು ಎಡಪಾರ್ಶ್ವದಲ್ಲಿ ಮುಖ್ಯ ಮುಖ್ಯ ಪ್ರಧಾನರು, ಸೇನಾಧಿಪತಿಗಳಿಗಾಗಿ ಬೆಳ್ಳಿಯ ಆಸನಗಳು ಇಡಲ್ಪಟ್ಟಿದ್ದುವು. ರಾಯಭಾರಿಗಾಗಿ ಬಲಪಾರ್ಶ್ವದಲ್ಲಿ ಬೆಳ್ಳಿಯ ಆಸನವೂ ಸಜ್ಜಾಗಿದ್ದಿತು. ಸಿಂಹಾಸನದ ಎಡಬಲ ಪಾರ್ಶ್ವದಲ್ಲಿ ಸುವರ್ಣದ ಮಕರ ತೋರಣಗಳಿದ್ದುವು. ಹಿಂದುಗಡೆ ಜರತಾರಿಯ ಪರದೆಯಿದ್ದಿತು. ಸುತ್ತಲೂ ಮಕಮಲ್ಲಿನಪರದೆಗಳೂ ರೇಷಿಮೆಯ ಪರದೆಗಳೂ ಕಟ್ಟಲ್ಪಟ್ಟಿದ್ದುವು. ದರಬಾರಿನ ಅಧಿಕಾರಿಗಳು ರಾಯಭಾರಿ ನಿಕೋಲಸ್‌ನನ್ನು ಮರ್ಯಾದೆಯಿಂದ ಕರೆತಂದು ಆಸನದ ಮೇಲೆ ಕುಳ್ಳಿರಿಸಿದರು. ದರ್ಬಾರಿನಲ್ಲಿದ್ದ ಅಧಿಕಾರಿಗಳು ರಾಯಭಾರಿಯ ಸಮೀಪಕ್ಕೆ ಬಂದು ರಾಂ ರಾಂ ಅಭಿವಾದನ ಮಾಡಿದರು. ಪರಸ್ಪರ ಕುಶಲಪ್ರಶ್ನೆಗಳಾದವು. ಗದ್ದುಗೆಯ ಮೇಲೆ ಬಲಪಾರ್ಶ್ವದ ಪರದೆಯು ಮೇಲಕ್ಕೆತ್ತಲ್ಪಟ್ಟಿತು. ವಂದಿ ಮಾಗಧರು ಚಿನ್ನದ ಸೋಟಾಗಳನ್ನು ಹಿಡಿದು 'ಖಬರ್ದಾರ್' ಹೇಳುತ್ತಾ ಮುಂದೆ ಬಂದರು ಶಿವಾಜಿಯು ಗಂಭೀರವಾಗಿ ಬಂದು ಸಭೆಯ ನಾಲ್ಕು ದಿಕ್ಕುಗಳನ್ನೂ ತಿರುಗಿ ನೋಡಿ ಮುಂದಹಾಸದಿಂದ ಅಭಿನಂದಿಸಿ ಸಿಂಹಾಸನದ ಮೇಲೆ ಕುಳಿತು ಕೊಂಡನು. ಇನ್ನೂರು ಮಂದಿ ಅಂಗರಕ್ಷಕರು ಭವ್ಯವಾದ ಉಡುಪುಗಳಿಂದ ಅಲಂಕೃತರಾಗಿ ಕತ್ತಿಗಳನ್ನು ಎತ್ತಿಹಿಡಿದು ನಿಂತಿದ್ದರು. ಅವರ ತಲೆಯ ಮೇಲೆ ಜರಿಯ ಪಗಡಿಗಳು ಜಗಜಗಿಸುತ್ತಿದ್ದುವು. ಭುಜಗಳ ಮೇಲೆಯೂ ಎದೆಯ ಮೇಲೆಯೂ ಚಿನ್ನದ ಹೂಗಳು ಥಳಥಳಿಸುತ್ತಿದ್ದುವು. ಆ ಅಂಗರಕ್ಷಕರ ವೀರಮುಖಗಳನ್ನು ನೋಡಿ ನಿಕೋಲಸ್‌ನು ಬೆರಗಾಗಿ ಹೋದನು. ಅವನು ಶಿವಾಜಿಯನ್ನು ಪ್ರತ್ಯಕ್ಷವಾಗಿ ದರ್ಶನ ಮಾಡಿದ್ದು ಅದೇ ಮೊದಲು. ಶಿವಾಜಿಯ ಪ್ರಸನ್ನ ವದನ, ವಿಶಾಲನೇತ್ರಗಳು, ದೀರ್ಘಬಾಹುಗಳು, ಎದೆ ಭುಜಗಳು ಅವೆಲ್ಲವನ್ನೂ ನೋಡಿ "ಹಿಂದೂಸ್ಥಾನದಲ್ಲಿಯೇ ಇಂತಹ ರಾಜ ಪುರುಷನು ಮತ್ತಾವನೂ ಇಲ್ಲ. ಇವನು ಅಫಜಲ್‌ಖಾನನ್ನು ಕೊಂದು ಹಾಕಿದ್ದರಲ್ಲಿ ಆಶಿಶಯವೇನೂ ಇಲ್ಲ" ಮೊಗಲರನ್ನು ದೂರವಾಗಿಟ್ಟಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ" ಎಂದುಕೊಂಡನು. ನಿಕೋಲಸ್‌ನು ತನ್ನ ಕೈಗಳಿಂದಲೇ ಖಿಲ್ಲತ್ತಿನ ಹರಿವಾಣವನ್ನು ತೆಗೆದುಕೊಂಡು ಗದ್ದುಗೆಯ

ಮೆಟ್ಟಿಲುಗಳನ್ನೇರಿ,ಹರಿವಾಣದ ಮೇಲೆ ಮುಚ್ಚಿದ ಮಖಮಲಿನ್ ಬಟ್ಟೆಯನ್ನು ತೆಗೆದು ಖಿಲ್ಲತ್ತನ್ನು ಶಿವಾಜಿಯ ಮುಂದೆ ಒಪ್ಪಿಸಿದನು

ಶಿವಾಜಿಯು ಆ ಖಿಲ್ಲತ್ತನ್ನು ಮರ್ಯಾದೆಯಿಂದ ಸ್ಪರ್ಶಮಾಡಿದನು. ದರ್ಬಾರಿನ ಅಧಿಕಾರಿಗಳು ಆ ಹರಿವಾಣವನ್ನು ಕೈಗೆ ತೆಗೆದುಕೊಂಡರು. ಶಿವಾಜಿಯು ಸಿಂಹಾಸನದ ಮುಂದೆ ನಿಂತಿದ್ದ ರಾಯಭಾರಿಯನ್ನು ನೋಡಿ "ನಿಕೋಲಸ್ ಸಾಹೇಬ, ಬಾ" ಎಂದು ಕರೆದು ಎರಡು ಕೈಗಳಿಂದಲೂ ಅವನ ಹಸ್ತವನ್ನು ಕುಲುಕಿ. ತನ್ನ ಪಕ್ಕದಲ್ಲಿದ್ದ ಆಸನದ ಮೇಲೆ ಕುಳ್ಳಿರಿಸಿಕೊಂಡನು ದರ್ಬಾರಿನ ಅಂದಿನ ಮುಖ್ಯ ಕಾರ್ಯಗಳೆಲ್ಲವೂ ಪೂರೈಸಿದ ನಂತರ ಮಹಾ ಪ್ರಧಾನಿಯೂ ಸೇನಾಧಿಪತಿಗಳೂ ಮುಜುರೆ ಮಾಡಿದರು. ನಿಕೋಲಸ್‌ನು ಗೌರವದಿಂದ ಮುಜುರೆ ಮಾಡಿದನು.

ಶಿವಾಜಿಯು ಮಂದಹಾಸವನ್ನು ಬೀರಿ ಪ್ರಸನ್ನನಾಗಿ ಎಲ್ಲರನ್ನೂ ಅಭಿವಂದಿಸಿ, ಅರಮನೆಯೊಳಗೆ ಹೊರಟುಹೋದನು.

ಮಧ್ಯಾಹ್ನ ಮೂರು ಝಾವಗಳು ಕಳೆದ ಮೇಲೆ ಶಿವಾಜಿಯ ಅರಮನೆಯಿಂದ ರಾಯಭಾರಿಯ ಬಿಡಾರಕ್ಕೆ ಮ್ಯಾನಾ ಬಂದಿತು. ನಿಕೋಲಸ್‌ನು ಮ್ಯಾನಾದಲ್ಲಿ ಕುಳಿತು ಅರಮನೆಗೆ ಹೋಗಿ ಅಂತರಂಗ ಹಜಾರದಲ್ಲಿ ಶಿವಾಜಿಯ ಭೇಟಿಮಾಡಿದನು.

ಶಿವಾಜಿಯು ಸಾದಾ ಉಡುಪು ಧರಿಸಿದ್ದನು. ಯಾವ ಆಡಂಬರಗಳೂ ಇರಲಿಲ್ಲ.

ನಿಕೋಲಸ್‌ನು ಶಿವಾಜಿಯ ಭೇಟಿಮಾಡಿ ಸಮೀಪದಲ್ಲಿ ಕುಳಿತುಕೊಂಡನು.

ಶಿವಾಜಿಯು "ನಿಕೋಲಸ್ ಸಾಹೇಬ, ನೀವು ಇಂಗ್ಲೀಷ್ ಕಂಪನಿಯ ರಾಯಭಾರಿಗಳಾಗಿ ಬಂದಿದ್ದೀರಿ. ಬಹಳ ಸಂತೋಷ. ನಮ್ಮಿಂದ ಏನು ಕಾರ್ಯವಾಗತಕ್ಕದ್ದಿದೆ? ಇಂಗ್ಲೀಷರು ಬಹಳ ಸಂಭಾವಿತರೆಂದು ನಾವು ನಂಬಿದ್ದೇವೆ. ನಮ್ಮ ರಾಜ್ಯದಲ್ಲಿ ನಿಮಗೆ ಯಾವ ಸೌಲತ್ತುಗಳನ್ನಾದರೂ ಮಾಡಿಕೊಡಲು ನಮಗೆ ಸಂತೋಷವಾಗುತ್ತದೆ" ಎಂದು ಹೇಳಿದನು.

ನಿಕೋಲಸ್‌ನು "ಮಹಾರಾಜರೇ, ತಾವು ಬಿಜಾಪುರದವರೊಡನೆ ಯುದ್ಧಮಾಡಿ ಗೆದ್ದಿದ್ದೀರಿ. ಈಗ ನೀವು ಸ್ವತಂತ್ರ ಮಹಾರಾಜರು. ನಿಮ್ಮ

ಸ್ನೇಹವನ್ನು ಕೋರಿ ನಾವು ಬಂದಿದ್ದೇವೆ" ಎಂದ.

ಶಿವಾಜಿಯು "ಬಹಳ ಸಂತೋಷ, ನೀವು ಒಳ್ಳೆ ವ್ಯಾಪಾರಿಗಳು. ನಮ್ಮ ರಾಜ್ಯಗಳಲ್ಲಿ ಇಂಗ್ಲೀಷ್ ಕೋಠಿಗಳನ್ನು ತೆರೆಯಲು ಪರವಾನಗಿಗಳನ್ನು ಕೊಡಿಸುತ್ತೇವೆ. ನಿಮ್ಮ ಕೋಠಿಗಳ ರಕ್ಷಣೆಯು ನಮಗೆ ಸೇರಿದ್ದು" ಎಂದ.

ನಿಕೋಲಸ್‌ನು "ಮಹಾರಾಜರೇ, ತಮಗೆ ಧನ್ಯವಾದಗಳು. ನಮ್ಮ ವ್ಯಾಪಾರ ಪದ್ಧತಿಯು ಒಂದು ಶಿಸ್ತಿನಿಂದ ನಡೆಯತಕ್ಕದ್ದಾಗಿದೆ. ರಾಮಪುರದ ಕೋಠಿಯನ್ನು ನಿಮ್ಮ ಸೈನಿಕರು ಕೊಳ್ಳೆಹೊಡೆದಿದ್ದಾರೆ. ಅದರ ನಷ್ಟವನ್ನು ನಿಮ್ಮ ದರ್ಬಾರಿನಿಂದ ಕಟ್ಟಿಕೊಡಬೇಕಾಗುತ್ತದೆ. ಅದು ವ್ಯಾಪಾರ ರಕ್ಷಣೆಯ ಮುಖ್ಯ ಕುರುಹು" ಎಂದ.

ಶಿವಾಜಿಯ ಮುಖವು ಗಂಭೀರಭಾವವನ್ನು ತಾಳಿತು. "ಅದು ತೊಡಕಿನ ಪ್ರಶ್ನೆ. ರಾಮಪುರವು ಬಿಜಾಪುರದ ಸುಲ್ತಾನರ ಅಧೀನದಲ್ಲಿತ್ತು. ನಮಗೂ ಬಿಜಾಪುರದವರಿಗೂ ಯುದ್ಧ ನಡೆಯುತ್ತಿತ್ತು. ನಿಮ್ಮ ಕಂಪನಿಯ ಅಧಿಕಾರಿಗಳು ತಾಟಸ್ಥ್ಯದಿಂದ ಇರುವುದು ವ್ಯಾಪಾರ ಧರ್ಮ. ಅಧಿಕಾರಿಗಳು ಆ ಹದ್ದುಮೀರಿ ನಮ್ಮ ಶತ್ರುಗಳ ಕಡೆ ಸೇರಿ, ಕಾರುಬುದ್ದುಗಳನ್ನು ನಡೆಸಿದರು, ಅಷ್ಟೇ ಅಲ್ಲ ಆಯುಧಧಾರಿಗಳಾಗಿ ಬಂದು ನಮ್ಮ ರಾಜ್ಯದ ಪನ್ವಾಲದಲ್ಲಿ ಅತ್ಯಾಚಾರಗಳನ್ನು ನಡೆಸಿದರು. ಅವರನ್ನು ಹಿಡಿದು ಬಂಧನದಲ್ಲಿ ಇಡಿಸಿದ್ದೇವೆ. ಅವರ ವಾಜ್ಮೂಲಗಳಿಂದಲೇ ತಪ್ಪು ಸಾಬೀತಾಗುತ್ತದೆ ಅದೇ ಸಮಯದಲ್ಲಿ ಅದೇ ಕಾರಣಕ್ಕಾಗಿ ರಾಮಪುರದ ಕೋಠಿಗೆ ಅಪಾಯ ತಟ್ಟಿರಬಹುದು. ತಪ್ಪು ಯಾರದು ಎಂಬುದನ್ನು ನಿರ್ಧರಿಸುವುದು ಕಷ್ಟ. ಈಗ ಚರ್ಚೆಯಿಂದ ಪ್ರಯೋಜನವೇ ಇಲ್ಲ. ರಾಜರು ವ್ಯಾಪಾರಿಗಳಿಗೆ ದಂಡ ತೆರುವುದು ನಿಮ್ಮ ರಾಜ್ಯದಲ್ಲಿಯೂ ಇರಲಾರದು" ಎಂದ.

ನಿಕೋಲಸ್‌ನು "ರಾಂ ರಾಂ ಹಾಗಲ್ಲ, ಮಹಾರಾಜರೇ, ನಾವು ದಂಡವನ್ನು ಕೇಳುತ್ತಿಲ್ಲ. ನಷ್ಟವನ್ನು ಕೇಳುತ್ತಿದ್ದೇವೆ. ಆ ಸಮಯದಲ್ಲಿ ಇಂಗ್ಲಿಷ್ ಕೋಠಿಯ ಅಧಿಕಾರಿಗಳು ಹದ್ದುಮೀರಿ ನಡೆದದ್ದನ್ನು ನಮ್ಮ ಕಂಪನಿಯವರು ಖಂಡಿಸಿದ್ದಾರೆ. ಆ ಸೆರೆಯಲ್ಲಿರುವ ಅಧಿಕಾರಿಗಳು ನಮಗೆ ಅನೇಕ ಪತ್ರಗಳನ್ನು ಬರೆದುಕೊಂಡಿದ್ದಾರೆ. ಆ ಅಧಿಕಾರಿಗಳ ಬಂಧನವು ಸ್ನೇಹಭಂಗಕ್ಕೆ

ಕಾರಣವಾಗುತ್ತದೆಂದು ನನ್ನ ಅಧಿಕಾರಿಗಳ ಭಾವನೆ. ನನ್ನ ಗೌರ್ನರ್ ಸಾಹೇಬರು, ಆ ಅಧಿಕಾರಿಗಳು ಎಸಗಿರುವ ತಪ್ಪನ್ನು ಒಪ್ಪಿಕೊಂಡಿದ್ದಾರೆ. ಅವರ ವಿಷಯವಾಗಿ ನಾವು ಯಾವ ಹೊಣೆಯನ್ನೂ ಹೊರಲಾಗುವುದಿಲ್ಲ—ಎಂದು ಅವರಿಗೆ ಉತ್ತರ ಬರೆಸಿದ್ದಾರೆ” ಎಂದ

ಶಿವಾಜಿಯು ಮುಗುಳುನಗೆಯನ್ನು ನಕ್ಕು “ತಪ್ಪು ಯಾರದು ಎಂದು ಇತ್ಯರ್ಥವಾದಂತಾಯಿತು. ನಾವು ಅವರನ್ನು ಬಂಧನದಲ್ಲಿ ಇಟ್ಟಿದ್ದರೂ ಮರ್ಯಾದೆಯಿಂದ ಇಟ್ಟಿದ್ದೇವೆ. ಸೌಖ್ಯವಾಗಿಟ್ಟಿದ್ದೇವೆ. ಇಂದೇ ಅವರನ್ನು ಬಿಡುಗಡೆ ಮಾಡಿಸುತ್ತೇವೆ” ಎಂದ.

ರಾಯಭಾರಿಯು “ತಮ್ಮ ಸೌಜನ್ಯಕ್ಕಾಗಿ ಧನ್ಯವಾದಗಳು ಆದರೂ ರಾಮಪುರದ ಕೋಠಿಯ ನಷ್ಟವನ್ನು ನಾವು ಪುನರಾಲೋಚನೆ ಮಾಡಬೇಕು. ಮತ್ತೊಂದು ವಿಚಾರವಿದೆ, ನಮ್ಮ ಇಂಗ್ಲಿಷ್ ಜನರು ಸ್ನೇಹವೆಂದರೆ ತಮ್ಮಲ್ಲಿ ಬಂದು ಸೌಲತ್ತುಗಳನ್ನು ಪದೇ ಪದೇ ಬೇಡುತ್ತಿರಲು ಇಷ್ಟಪಡುವದಿಲ್ಲ. ನಮ್ಮಿಂದ ತಮಗೆ ಏನಾದರೂ ಪ್ರತ್ಯುಪಕಾರವಾಗಬೇಕು. ನಾವು ಮಾಡಬಹುದಾದ ಸೇವೆ ಏನಾದರೂ ಇದ್ದರೆ ಸಂಕೋಚಪಡದೇ ತಿಳಿಯಪಡಿಸಬೇಕು” ಎಂದು ಹೇಳಿದನು.

ಶಿವಾಜಿಯು ಮೊಗಲರು ನಿಮ್ಮನ್ನು ಅಲಕ್ಷ್ಯವಾಗಿ ಕಾಣುತ್ತಾರೆ. ಅವರ ಅಧಿಕಾರಿಗಳೂ ಕೂಡಾ ತಾತ್ಸಾರದಿಂದ ನೋಡುತ್ತಾರೆ. ನಾವು ಎಂದಿಗೂ ಹಾಗೆ ಮಾಡುವುದಿಲ್ಲ. ಗೌರವದಿಂದ ನೋಡುತ್ತೇವೆ. ನಮಗೂ ಅವರಿಗೂ ಸ್ನೇಹಾಚರಣೆಯಲ್ಲಿ ಈ ಭೇದವಿದೆ. ನಿಮ್ಮ ಕೋಠಿಯವರು ಮೊಗಲರಿಗೆ ಬೇಕಾದಷ್ಟು ಮದ್ದುಗುಂಡುಗಳನ್ನೂ ಫಿರಂಗಿಗಳನ್ನೂ ಬಂದೂಕಗಳನ್ನೂ ಒದಗಿಸುತ್ತಾರೆ. ಮೊಗಲ್ ಸರ್ಕಾರವು ಅದಕ್ಕೆ ಹಣ ಕೊಡುತ್ತದೆ; ಆದರೂ ನಿಮ್ಮನ್ನು ಅವರು ಅಧೀನರಂತೆ ಕಾಣುತ್ತಾರೆ. ನಿಮ್ಮ ದೊಡ್ಡ ಕೋಠಿ ಸೂರತ್ತಿನಲ್ಲಿದೆ. ಸದ್ಯಕ್ಕೆ ಅದು ಮೊಗಲರ ರಕ್ಷಣೆಯಲ್ಲಿದೆ. ನೀವು ಮೊಗಲರಿಗೆ ಶಸ್ತ್ರಾಸ್ತ್ರಗಳ ಸರಬರಾಜು ಮಾಡದಿದ್ದರೆ ಅವರು ಒಂದೇದಿನದಲ್ಲಿ ನಿಮ್ಮ ಕೋಠಿಗಳನ್ನು ನೆಲಸಮಮಾಡಿ ಓಡಿಸುತ್ತಾರೆ. ಆದರಿಂದ ನೀವು ಭಯಪಡುತ್ತೀರಿ. ನಿಮ್ಮ ವ್ಯಾಪಾರವು ಗುಜರಾತಿನ ಕಡೆಯಿಂದ ನಡೆಯುತ್ತದೆ. ಮಹಾರಾಷ್ಟ್ರದ ಕಡೆಯಿಂದಲೂ ಹೆಚ್ಚು ವ್ಯಾಪಾರವಿದೆ. ನಾವು

ವ್ಯಾಪಾರ ಮಾರ್ಗಗಳನ್ನು ತಡೆಮಾಡಿದರೆ ನಿಮ್ಮ ವ್ಯಾಪಾರ ಲಾಭಕರವಾಗು ವುದಿಲ್ಲ. ನಮಗೆ ಆಯುಧಗಳನ್ನು ಕೊಡುವುದಿಲ್ಲವೆಂದು ನೀವು ಅವರಿಗೆ ಒಪ್ಪಂದ ಕೊಟ್ಟಿದ್ದೀರಿ. ಈ ಪರಿಸ್ಥಿತಿಯಲ್ಲಿ ನಮಗೂ ನಿಮಗೂ ನಿಜವಾದ ಸ್ನೇಹವು ಹೇಗೆ ಬೆಳೆಯಬೇಕು ? ಸೂರತ್ ರೇವುಪಟ್ಟಣವು ಮೊಗಲರ ದಾದರೂ ಡೆಲ್ಲಿಗೆ ದೂರವಾಗಿದೆ. ನಮ್ಮ ರಾಜ್ಯದ ನೆರೆಯಲ್ಲಿದೆ. ಇದನ್ನು ನಿಮ್ಮ ಕಂಪನಿಯವರು ಗಮನದಲ್ಲಿಡಬೇಕು" ಎಂದ.

ಈ ಮಾತುಗಳನ್ನು ಕೇಳಿ ನಿಕೋಲಸ್‌ನಿಗೆ ಬರೆ ಎಳೆದಂತಾಯಿತು. ಸೂರತ್ತಿನ ಕೋಠಿಯ ಮೇಲೆ ಮರಾಠರ ಕರಾಳ ಖಡ್ಗವು ಆಡುತ್ತಿರುವಂತೆ ಭಾಸವಾಯಿತು. ಅವನ ಮುಖವು ವಿವರ್ಣವಾಯಿತು. ಧೈರ್ಯ ತಂದು ಕೊಂಡು "ಶಿವಾಜಿ ಮಹಾರಾಜರೇ, ನೀವು ಹೇಳುವ ಮಾತು ಸತ್ಯವಾಗಿದೆ. ನಮಗೂ ಮೊಗಲ್ ದರ್ಬಾರಿಗೂ ಬಹುಕಾಲದ ಹಿಂದೆಯೇ ಈ ಶಸ್ತ್ರಾಸ್ತ್ರಗಳ ಒಪ್ಪಂದವಿದೆ. ನಿಮ್ಮ ರಾಜ್ಯ ಹೊಸದಾಗಿ ಉದ್ಭವಿಸಿರುವ ರಾಜ್ಯ. ನಾವು ಈಗ ತಾನೆ ಮೊಟ್ಟಮೊದಲನೆಯ ಬಾರಿ ನಿಮ್ಮ ಸ್ನೇಹಕ್ಕೆ ಬರುತ್ತಿದ್ದೇವೆ. ಒಪ್ಪಂದವು ಹೇಗೇ ಇದ್ದರೂ ನಿಮಗೆ ಬೇಕಾದಷ್ಟು ಶಸ್ತ್ರಾಸ್ತ್ರಗಳನ್ನು ಸುಲಭ ಬೆಲೆಗೆ ಕೊಡಲು ನಾವು ಸಂತೋಷದಿಂದ ಒಪ್ಪುತ್ತೇವೆ. ಸಧ್ಯಕ್ಕೆ ನಾವು ಹೀಗೆ ಒಪ್ಪಂದ ಮಾಡಿಕೊಳ್ಳಬಹುದು. ನಮ್ಮ ದೊಡ್ಡ ಕೋಠಿಗಳು ಸೂರತ್, ಬೊಂಬಾಯಿಗಳಲ್ಲಿವೆ. ರಕ್ಷಣೆಯ ಭಾರವು ಹಿಂದಿನಿಂದಲೂ ಮೊಗಲ್ ದರ್ಬಾರಿಗೆ ಸೇರಿದ್ದು, ಸೂರತ್ ಒಳ್ಳೆಯ ರೇವುಪಟ್ಟಣ. ಅಲ್ಲಿ ನಮ್ಮ ಕೋಠಿಯೊಂದೇ ಅಲ್ಲ, ಇನ್ನೂ ಅನೇಕ ವಿದೇಶೀ ವ್ಯಾಪಾರ ಕೋಠಿ ಗಳಿವೆ. ಆದರಿಂದ ಸೂರತ್ತಿನ ರಾಜಕೀಯದ ಸೋಂಕಿಲ್ಲದೆ ಇದ್ದೇವೆ,ನಾವು" ಎಂದು ಹೇಳಿದನು.

ಪರದೇಶದ ರಾಜ್ಯಭಾರ, ವ್ಯಾಪಾರ, ನೌಕಾ ನಿರ್ಮಾಣ, ಹಡಗು ವ್ಯಾಪಾರ, ಯೂರೋಪಿಯನ್ ಜನರ ಸ್ವಭಾವ, ಮರ್ಜಿ ಇವುಗಳ ವಿಚಾರ ವಾಗಿ ನಿಕೋಲಸ್‌ನು ಶಿವಾಜೀ ಮಹಾರಾಜನೊಂದಿಗೆ ಬಹಳವಾಗಿ ಮಾತ ನಾಡಿದನು.

ಶಿವಾಜಿಯು "ವಕೀಲ್ ಸಾಹೇಬರೇ, ನಿಮ್ಮ ಮಾತುಗಳು ಬಹಳ ಕುತೂಹಲವನ್ನುಂಟುಮಾಡುತ್ತವೆ. ನಾನು ನನ್ನ ಸ್ವಂತ ವಿಚಾರವಾಗಿ

ನಿಮಗೆ ಹೇಳುತ್ತೇನೆ ಈ ಹಿಂದೂಸ್ಥಾನ ನಮ್ಮದು. ನಮ್ಮ ಧರ್ಮಕ್ಕೆ ಸೇರಿದ್ದು. ಮುಸಲ್ಮಾನರು ನಮ್ಮ ಧರ್ಮವನ್ನು ಪ್ರತ್ಯಕ್ಷವಾಗಿ ವಿರೋಧಿಸುತ್ತಾರೆ. ಅವರನ್ನು ನಿರ್ಮೂಲ ಮಾಡುವದಕ್ಕಾಗಿಯೇ ನಾವು ರಾಜ್ಯ ನಿರ್ಮಾಣ ಮಾಡಿದ್ದೇವೆ. ದಕ್ಕನ್ನಿನ ಮೊಗಲ್ ಸರ್ವಾಧಿಕಾರಿ ಆಜಂಖಾನು ಸರಳ ಸ್ವಭಾವದವನು. ಆದರೇನು ಮೊಗಲ್ ಬಾದಷಹನು ಹಿಂದೂ ಧರ್ಮದ ಕಟ್ಟಾವಿರೋಧಿ. ನನಗೆ ನಿಮ್ಮಿಂದ ಪ್ರಪಂಚದ ವಿಷಯಗಳನ್ನು ತಿಳಿದುಕೊಳ್ಳಲು ಬಹಳ ಅಪೇಕ್ಷೆ ಇದೆ. ಒಂದು ದಿನ ನಿಮ್ಮಂಥಾ ವಕೀಲರು ನಮ್ಮ ದರ್ಬಾರಿನಲ್ಲಿಯೂ ಇರಬಾರದೇಕೆ ಎನ್ನಿಸುತ್ತದೆ ನನಗೆ. ಸಧ್ಯಕ್ಕೆ ಇನ್ನೂ ಮೂರು ನಾಲ್ಕು ದಿನಗಳು ನೀವು ನಮ್ಮ ರಾಜಧಾನಿಯಲ್ಲಿಯೇ ಇದ್ದರೆ ನನಗೆಷ್ಟೋ ಸಂತೋಷವಾಗುತ್ತದೆ" ಎಂದು ಹೇಳಿದನು.

ರಾಯಭಾರಿ ನಿಕೋಲಸ್‌ನು ಸಂತೋಷದಿಂದ ಒಪ್ಪಿಕೊಂಡನು.

ಮಾರನೆಯ ದಿವಸವೇ ರಾಯಘಡದ ಬಂಧೀಖಾನೆಯಲ್ಲಿದ್ದ ಇಂಗ್ಲಿಷ್ ಅಧಿಕಾರಿಗಳು ಬಿಡುಗಡೆಯನ್ನು ಹೊಂದಿ ಪುರಂಧರಘಡಕ್ಕೆ ಬಂದರು. ಅವರು ಶಿವಾಜೀ ಮಹಾರಾಜನ ಭೇಟಿಮಾಡಿ, "ಮಹಾರಾಜರೇ, ನಾವು ರಾಯಘಡದ ಕಾರಾಗೃಹದಲ್ಲಿದ್ದ ಇಂಗ್ಲಿಷ್ ಕಂಪನಿಯ ಅಧಿಕಾರಿಗಳು. ದಯೆಯಿಟ್ಟು ನಮ್ಮನ್ನು ಬಿಡುಗಡೆ ಮಾಡಿದ್ದೀರಿ. ನಿಮ್ಮ ಅಧಿಕಾರಿಗಳು ನಮ್ಮನ್ನು ಕಾರಾಗೃಹದಲ್ಲಿ ಬಹಳ ಚೆನ್ನಾಗಿ ನೋಡಿಕೊಂಡರು. ಅದಕ್ಕಾಗಿ ತಮಗೆ ಧನ್ಯವಾದಗಳನ್ನು ಅರ್ಪಿಸಲು ಬಂದಿದ್ದೇವೆ" ಎಂದು ಹೇಳಿದರು.

ಶಿವಾಜಿಯು "ರಾಜಕೀಯ ಕಾರಣಗಳಿಗಾಗಿ ನೀವು ಎರಡು ವರ್ಷಗಳು ನಮ್ಮ ಕಾರಾಗೃಹದಲ್ಲಿ ಇರಬೇಕಾಯಿತು. ಅದಕ್ಕಾಗಿ ನನಗೆ ವ್ಯಸನವಾಗುತ್ತದೆ. ನಾವು ಯಾವಾಗಲೂ ನಿಮ್ಮನ್ನು ಸ್ನೇಹಿತರಂತೆ ಭಾವಿಸುತ್ತೇವೆ. ನಿಮ್ಮ ನಡತೆಯ ಬಗ್ಗೆ ನನಗೆ ಬಹಳ ಮೆಚ್ಚಿಕೆಯಾಗಿದೆ. ನಿಮ್ಮ ಕಂಪನಿ ಗವರ್ನರ್ ಸಾಹೇಬರಿಗೂ ಬರೆಸಿ ಕಳುಹಿಸುತ್ತೇವೆ. ಅವಶ್ಯವಿದ್ದಾಗ ನೀವು ನಮ್ಮ ದರ್ಬಾರಿಗೆ ಬರಬೇಕು" ಎಂದು ಉಪಚಾರೋಕ್ತಿಗಳನ್ನು ಹೇಳಿ ಕಳುಹಿಸಿದನು.

ಆ ಅಧಿಕಾರಿಗಳು ಪುರಂಧರಘಡದಲ್ಲಿದ್ದ ಕಂಪನಿಯ ರಾಯಭಾರಿ ನಿಕೋಲಸ್‌ನನ್ನು ನೋಡಿ. "ತಮ್ಮ ಶಿಫಾರ್ಸಿನಿಂದ ನಮ್ಮಗಳ ಬಿಡುಗಡೆ

ಯಾಗಿದೆಯೆಂದು ಕೇಳಿದ್ದೇವೆ. ತಮಗೆ ಧನ್ಯವಾದಗಳನ್ನು ಅರ್ಪಿಸಲು ಬಂದಿದ್ದೇವೆ" ಎಂದರು.

"ಬಹಳ ಸಂತೋಷ. ನಮ್ಮ ಶಿಫಾರ್ಸಿಗೆ ಬೆಲೆ ಕೊಡಬೇಕೆಂಬುದೇನಿದೆ? ಅದು ಮಹಾರಾಜರ ಔದಾರ್ಯ. ಅವರಿಗೆ ಇಂಗ್ಲೀಷರ ವಿಷಯದಲ್ಲಿ ಬಹಳ ಗೌರವವಿರುವಂತಿದೆ. ಅದಕ್ಕಾಗಿ ನಾವೆಲ್ಲರೂ ಸಂತೋಷಪಡಬೇಕು. ನೀವು ರಾಯಘಡದ ಕೋಟೆಯಲ್ಲಿ ಇದ್ದಿರಲ್ಲಾ, ಅಲ್ಲಿಯ ವಿಚಾರಗಳೇನು?"

"ನಾವು ಎರಡು ವರ್ಷಗಳು ಆ ಕೋಟೆಯಲ್ಲಿದ್ದೆವು. ಅಧಿಕಾರಿಗಳು ಬಹಳ ಶಿಸ್ತಿನಿಂದಲೂ ವಿನಯದಿಂದಲೂ ನಡೆದುಕೊಳ್ಳುತ್ತಾರೆ. ಅವರುಗಳಿಗೆ ದೇಶಭಕ್ತಿ, ಸ್ವಾಮಿನಿಷ್ಠೆಗಳು ಅಪಾರವಾಗಿವೆ. ಎಲ್ಲ ಕೆಲಸ ಕಾರ್ಯಗಳೂ ಗಂಟೆ ಹೊಡೆದಂತೆ ಕರಾರುವಾಕ್ ನಡೆಯುತ್ತದೆ. ಈ ಜನರು ಬಹಳ ಶೀಲವಂತರು."

"ಮರಾಠಿ ಭಾಷೆಯನ್ನು ಅಭ್ಯಾಸ ಮಾಡಿದ್ದೀರೋ?"

"ಹೌದು. ಚೆನ್ನಾಗಿ ಕಲಿತಿದ್ದೇವೆ."

"ಒಳ್ಳೆಯದು. ನಿಮ್ಮ ಜೀವನದಲ್ಲಿ ಎಂದಾದರೂ ಅದು ಸಹಾಯಕವಾಗುತ್ತದೆ. ನೀವು ಸೂರತ್ತಿಗೆ ಹೋಗಿ ಗೌರ್ನರ್ ಸಾಹೇಬರ ಭೇಟಿ ಮಾಡಿರಿ" ಎಂದು ಹೇಳಿ ಕಳುಹಿಸಿದನು.

ಶಿವಾಜಿಯು ಮೂರು ನಾಲ್ಕು ದಿನಗಳು ನಿಕೋಲಸ್‌ನೊಡನೆ ಅನೇಕ ವಿಷಯಗಳನ್ನು ಕುರಿತು ಮಾತನಾಡಿದನು. ಮುಖ್ಯವಾಗಿ ಜಲಮಾರ್ಗದ ವ್ಯಾಪಾರ, ಪತ್ತೇಮಾರಿಗಳು, ಹಡಗುಗಳು ಇವುಗಳ ವ್ಯಾಪಾರ,—ಈ ವಿಷಯಗಳಲ್ಲಿ ಅನೇಕ ವಿಧವಾಗಿ ಪ್ರಶ್ನೆಮಾಡಿ ತಿಳಿದುಕೊಂಡನು. ಕೊನೆಯಲ್ಲಿ "ವಕೀಲ್ ಸಾಹೇಬರೇ, ನಿಮ್ಮ ಯೂರೋಪ್ ದೇಶಕ್ಕೆ ಹೋಗಿ ಒಂದು ಬಾರಿ ಎಲ್ಲ ರಾಜ್ಯಗಳನ್ನೂ ನೋಡಿಕೊಂಡು ಬರಬೇಕೆಂದು ನನಗೂ ಅನ್ನಿಸುತ್ತದೆ. ನಿಮ್ಮಂಥಾ ರಾಯಭಾರಿಗಳು ಜೊತೆಯಲ್ಲಿದ್ದರೆ ಎಷ್ಟೋ ಕಾರ್ಯಸಾಧನೆಯಾದೀತೆಂದು ತೋರುತ್ತದೆ" ಎಂದು ಹೇಳಿದನು.

ನಿಕೋಲಸ್‌ನು, "ಮಹಾರಾಜರೇ. ಯೂರೋಪ್ ರಾಜ್ಯಗಳು ಅಂಥದೇನೂ ಆದರ್ಶರಾಜ್ಯಗಳೆಂದು ಹೇಳಲಾಗುವುದಿಲ್ಲ. ಅಲ್ಲಿಯೂ ಎಷ್ಟೋ

ದೋಷಗಳಿವೆ. ಎಷ್ಟೋ ಕಷ್ಟನಿಷ್ಠೂರಗಳಿವೆ. ಪರಸ್ಪರ ವೈಷಮ್ಯಗಳಿವೆ. ನೋಡಿ, ಈ ಹಿಂದೂಸ್ಥಾನದಲ್ಲಿ ಫ್ರೆಂಚರು, ಪೋರ್ಚುಗೀಸರು, ಡಚ್ಚರು ನಮ್ಮನ್ನು ವಿರೋಧಿಸುತ್ತಾರೆ. ಇದಕ್ಕೆ ಕಾರಣ ಈ ರಾಜ್ಯಗಳು ಅಲ್ಲಿ ಪ್ರಬಲ ವಿರೋಧಗಳನ್ನು ಕಟ್ಟಿಕೊಂಡು ಹೋರಾಡುತ್ತಿವೆ. ಆದರೂ ನಿಮ್ಮಂಥಾವರು ವಿಶಾಲ. ದೇಶ ಸಂಚಾರವನ್ನು ಮಾಡುವುದು ಒಳ್ಳೆಯದು. ನೀವು ಅಪೇಕ್ಷಿಸುವುದಾದರೆ ನಮ್ಮ ಕಂಪನಿಯ ಜಹುಜುಗಳಲ್ಲಿಯೇ ಪ್ರಯಾಣಕ್ಕೆ ಏರ್ಪಾಡು ಮಾಡುತ್ತೇವೆ" ಎಂದ.

ಶಿವಾಜಿಯು ದೀರ್ಘ ನಿಶ್ವಾಸ ಬಿಟ್ಟು "ಅದೆಲ್ಲಾ ಗಗನ ನಗರವನ್ನು ಕಲ್ಪಿಸಿಕೊಂಡಂತೆ. ಎಲ್ಲಿ ಸಾಧ್ಯವಾದೀತು, ಸಾಹೇಬರೇ. ಈ ಮೊಗಲರ ಹಾವಳಿ ವರ್ಣನಾತೀತವಾಗಿದೆ. ದೇಶಾಂತರ ಪ್ರಯಾಣ ಮಾಡುವುದು ಹಾಗಿರಲಿ, ನಾವು ಕೊಂಚ ಮೈಮರೆತಿದ್ದರೆ ಮೊಗಲರು ಈ ರಾಜ್ಯವನ್ನೇ ನುಂಗಿಬಿಡುತ್ತಾರೆ. ನಾವು ಹೀಗೆಯೇ ಹೋರಾಡಿ ಈ ಮಾತೃಭೂಮಿಯನ್ನು ಮುಕ್ತಿಗೊಳಿಸಬೇಕಾಗಿದೆ" ಎಂದ.

ನಿಕೋಲಸ್‌ನು "ಮಹಾರಾಜರೇ, ಕಾಲವು ಒಂದೇ ವಿಧವಾಗಿರುವುದಿಲ್ಲ. ಎಲ್ಲವೂ ಬದಲಾಗುತ್ತದೆ. ಇಂದು ಬೆಟ್ಟದಂತೆ ಬಂದುದು ನಾಳೆ ಗಾಳಿಯಂತೆ ಹಾರಿಹೋಗುತ್ತದೆ" ಎಂದು ಹೇಳಿದನು.

ಶಿವಾಜಿಯು ರಾಯಭಾರಿಗೆ ಖಿಲ್ಲತ್ತುಗಳನ್ನು ಕೊಟ್ಟು ಮರ್ಯಾದೆಮಾಡಿ ಕಳುಹಿಸಿಕೊಟ್ಟನು.

ಸೂರತ್ತಿನ ಇಂಗ್ಲೀಷ್ ಕಂಪನಿ ಗೌರ್ನರ್ ಸಾಹೇಬನು ರಾಯಭಾರಿಯಿಂದ ಎಲ್ಲ ವಿದ್ಯಮಾನಗಳನ್ನೂ ಕೇಳಿ ಬಹಳ ಸಂತೋಷಪಟ್ಟನು. ಅಧಿಕಾರಿಗಳ ಬಿಡುಗಡೆಯ ಬಗ್ಗೆ ಮೆಚ್ಚುಗೆಯನ್ನು ತೋರಿದನು. "ರಾಮಪುರದ ಕೋಠಿಯ ಪ್ರಕರಣವೊಂದು ಹಾಗೆಯೇ ಉಳಿದಿದೆ. ಸಮಯ ಬಂದಾಗ ಸಾಧಿಸಿಕೊಳ್ಳಬೇಕು" ಎಂದು ಹೇಳಿದನು.

ಶಿವಾಜಿಗೆ ಗುಪ್ತಮಾರ್ಗಗಳಿಂದ ಶಸ್ತ್ರಾಸ್ತ್ರಗಳ ಸರಬರಾಜಿನ ಏರ್ಪಾಡುಗಳನ್ನು ಮಾಡಿದನು.




೩

ಡೆಲ್ಲಿಯ ಬಾದಷಹ ಔರಂಗಸೇಬನ ಅಧಿಕಾರವು ಅಪ್ರತಿಹತವಾಗಿ ನಡೆಯುತ್ತಿದ್ದಿತು. ಡೆಲ್ಲಿಯ ರಾಜಧಾನಿಯಲ್ಲಿ ತನ್ನ ವಿರೋಧಪಕ್ಷದವರನ್ನೆಲ್ಲಾ ಹುಡುಕಿ ಹುಡುಕಿ ಕೊಲ್ಲಿಸಿದ್ದನು. ಷಹಜಹಾನ್ ಬಾದಷಹನ ಕಡೆಯವರಾಗಲಿ ದಾರಾನ ಕಡೆಯವರಾಗಲೀ ಯಾರೂ ಉಳಿಯದಂತೆ ಆಹುತಿ ತೆಗೆದು ಕೊಂಡಿದ್ದನು. ಔರಂಗಸೇಬನು ಎಂತಹ ಪೈಶಾಚಿಕ ಕೃತ್ಯಗಳನ್ನೆಸಗಿದರೂ ಮಹಮದೀಯ ಮತದ ಉದ್ಧಾರಕ್ಕಾಗಿಯೇ ಅದೆಲ್ಲವನ್ನೂ ಮಾಡುತ್ತಾನೆಂದು ದರಬಾರಿನ ಜನರು ಭಾವಿಸಿದ್ದರು, ಅವನ ಅಂತರಂಗ ಜೀವನವು ಅಷ್ಟೇ ಮತ ಭಕ್ತಿಯಿಂದ ಕೂಡಿತ್ತು. ಪ್ರತಿದಿನವೂ ಖುರಾನನ್ನು ಪಠಿಸುತ್ತಿದ್ದನು. ಮೌಲ್ವಿಗಳನ್ನೂ ಖಾಜೀಗಳನ್ನೂ ಅತ್ಯಂತ ಗೌರವದಿಂದ ಕಾಣುತ್ತಿದ್ದನು, ಭೋಗದ ಕಡೆಗೆ ಮನಸ್ಸನ್ನು ಹೋಗಗೊಡುತ್ತಿರಲಿಲ್ಲ. ಔರಂಗಸೇಬನು ಮದ್ಯಪಾನವನ್ನು ನಿಷೇಧಿಸುತ್ತಿದ್ದನು. ಅವನು ಮಾಂಸಾಹಾರ ಮಾಡುತ್ತಿರ ಲಿಲ್ಲ. ಪ್ರತಿದಿನವೂ ಪ್ರಾರ್ಥನೆಯಲ್ಲಿ "ನನ್ನ ಪಾಪಗಳನ್ನೆಲ್ಲಾ ಕ್ಷಮಿಸು"ಎಂದು ದೇವರಲ್ಲಿ ಮೊರೆಯಿಡುತ್ತಿದ್ದನು. ರಾಜಕೀಯದಲ್ಲಿ ಯಾರನ್ನೂ ಸರ್ವಥಾ ನಂಬುತ್ತಿರಲಿಲ್ಲ. ಎಲ್ಲ ಕಡೆಯೂ ಅವನ ಅಂತರಂಗ ಗೂಢಚಾರರು ಹೋಗಿ ತಾಜಾ ವರ್ತಮಾನಗಳನ್ನು ತಂದು ಬಾದಷಹನಲ್ಲಿ ಹೇಳುತ್ತಿದ್ದರು. ಅವರಿಗೆ ವಿಶೇಷ ಬಹುಮಾನಗಳು ದೊರೆಯುತ್ತಿದ್ದವು. ಬಾದಷಹನಿಗೆ ದೂರು ಕೇಳು ವುದರಲ್ಲಿ ಬಹಳ ಆಸಕ್ತಿ. ತನ್ನ ಮಕ್ಕಳ ಮೇಲೆಯೂ ಗೂಢಚಾರರನ್ನಿಟ್ಟಿದ್ದನು. ಯಾವುದಾದರೊಂದು ಸುದ್ದಿಯು ಸುಳ್ಳಾಗಿಬಿಟ್ಟರೆ ಗುಪ್ತಚಾರರ ಶಿರಚ್ಛೇದನ ವಾಗುತ್ತಿದ್ದಿತು. ಅಹಮದ್‌ನಗರನಿಂದ ಗುಪ್ತಚಾರರು ಬಂದು ಬಾದಷಹನ ದರ್ಶನಕ್ಕಾಗಿ ಕಾದಿದ್ದರು. ಬಾದಷಹನು ಪ್ರಾರ್ಥನೆಯಾದನಂತರ ಗುಪ್ತಚಾರ ರನ್ನು ಕರೆಸಿ ಮಾತನಾಡಿಸಿದನು.

"ಯುವರಾಜ ಅಜಂಷಾರು ಹೇಗೆ ರಾಜ್ಯಭಾರ ಮಾಡುತ್ತಾರೆ?"

"ಚೆನ್ನಾಗಿ ಅಧಿಕಾರ ನಡೆಸುತ್ತಾರೆ, ಹುಜೂರು. ಅಧಿಕಾರಿಗಳೂ, ಜನರೂ ಎಲ್ಲರೂ ಯುವರಾಜರಲ್ಲಿ ಅತ್ಯಂತ ಭಕ್ತಿ ವಿಶ್ವಾಸಗಳನ್ನು ತೋರುತ್ತಾರೆ. ಯುವರಾಜರು ಸಂತೋಷವಾಗಿದ್ದಾರೆ."

ಬಾದಷಹನ ಕಣ್ಣುಗಳು ಅರಳಿದವು. ಸೆಡೆದು ಕುಳಿತುಕೊಂಡು, "ಮರಾಠರ ಕಡೆಗೆ ಅವರ ದೃಷ್ಟಿಯು ಹೇಗಿದೆ? ಆ ಬೆಟ್ಟಗಳ ಇಲಿ, ಶಿವನ ಸಮಾಚಾರವೇನು ?" ಎಂದು ಗದ್ದರಿಸಿದನು.

ಗುಪ್ತಚಾರನು "ಯುವರಾಜನ ದೃಷ್ಟಿಯು ಮರಾಠರ ಕಡೆಗೇನೂ ಬಿದ್ದಂತೆ ಕಾಣುವದಿಲ್ಲ, ಜಹಪನಾ. ಇತ್ತೀಚೆಗೆ ಎರಡು ವರ್ಷಗಳಿಂದ ಆ ಮರಾಠರು, ನಮ್ಮ ರಾಜ್ಯಗಳಲ್ಲಿ ಕಾಲಿಟ್ಟಂತೆ ಕಾಣುವದಿಲ್ಲ. ಬಿಜಾಪುರದವರೊಡನೆ ಯುದ್ಧವು ಪೂರೈಸಿದನಂತರ ಶಿವಾಜಿಯು ತೆಪ್ಪಗಿರುವ ಹಾಗಿದೆ" ಎಂದ.

"ಯುವರಾಜರ ದರ್ಬಾರಿನಲ್ಲಿ ಇದೇ ಅಭಿಪ್ರಾಯವಿದೆಯೇ ?"

"ಹೌದು, ಖಾವಂದ್ ಹಾಗಿಯೇ ಇರುವಂತಿದೆ."

"ಯುವರಾಜ, ಆಜಂಷಾ ಶುದ್ಧ ಬೇಕೂಫ. ಅವನಿಗೆ ಕಣ್ಣಿಲ್ಲ, ಬುದ್ಧಿಯೂ ಇಲ್ಲ. ಶಿವನು ಒಂದು ಕ್ಷಣವೂ ಸುಮ್ಮನೆ ಕೊಡುವವನಲ್ಲ. ಅವನು ಬಲವನ್ನು ಕಟ್ಟುತ್ತಾನೆ, ರಾಜ್ಯದಲ್ಲಿ ಬೇರೂರಿಕೊಳ್ಳುತ್ತಾನೆ.ಕೋಟಿಕೊತ್ತಲುಗಳನ್ನು ಭದ್ರಪಡಿಸಿಟ್ಟುಕೊಳ್ಳುತ್ತಾನೆ, ಹಣವನ್ನು ಶೇಖರಿಸಿಟ್ಟುಕೊಳ್ಳುತ್ತಾನೆ ಇನ್ನೇನು ಬೇಕು ? ಹಾಗೆ ಅವನನ್ನು ಬೆಳೆಯಬಿಟ್ಟರೆ ನಮ್ಮ ರಾಜ್ಯಕ್ಕೆ ಎಂದಾದರೂ ಘಾತವಾಗಿಯೇ ಆಗುತ್ತದೆ. ಯುವರಾಜನು ವಿಲಾಸಪ್ರಿಯ, ಸುಖಜೀವನದಲ್ಲಿಯೇ ಆಸಕ್ತಿ. ಇರಲಿ, ನಾವು ವಿಚಾರಿಸುತ್ತೇವೆ. ನೀವು ಮತ್ತೊಂದು ಆಜ್ಞೆಯಾಗುವವರೆಗೆ ರಾಜಧಾನಿಯಲ್ಲಿಯೇ ಇರಬೇಕು" ಎಂದು ಅಪ್ಪಣೆ ಮಾಡಿದನು.

ಮೂರನೆಯ ದಿನವೇ ಸೂರತ್‌ನ ಕಡೆಯಿಂದ ಗುಪ್ತಚಾರರು ಬಂದು ಬಾದಷಹನ ಭೇಟಿ ಮಾಡಿದರು. ಶಿವಾಜಿಯ ವಿಷಯದಲ್ಲಿ ಅವರು ಬಿಸಿಬಿಸಿಯಾಗಿ ದೂರುಗಳನ್ನು ಕೊಟ್ಟರು.

"ಜಹಪನಾ, ಶಿವಾಜಿಯು ಪಟ್ಟಾಭಿಷೇಕ ಮಾಡಿಕೊಂಡಿದ್ದಾನೆ. ಈ ದಸರಾದಲ್ಲಿ ಬ್ರಾಹ್ಮಣರೆಲ್ಲರೂ ಸೇರಿ ಅವನಿಗೆ ಪಟ್ಟಕಟ್ಟಿದ್ದಾರೆ. ಸೈನ್ಯಗಳ

ಜಮಾವಣೆಯು ಚೆನ್ನಾಗಿದೆ. ಆ ಗಡಿನಾಡಿನಲ್ಲಿ ಇಪ್ಪತ್ತುಮೂರು ಕೋಟೆಗಳು ಶಿವಾಜಿಯ ಸ್ವಾಧೀನದಲ್ಲಿವೆ. ಆ ಕೋಟೆಗಳಲ್ಲೆಲ್ಲಾ ಶಸ್ತ್ರಾಸ್ತ್ರಗಳೂ ಮದ್ದು ಗುಂಡುಗಳೂಬಂದೂಕುಗಳೂ ಯಥೇಚ್ಛವಾಗಿಸಂಗ್ರಹವಾಗಿವೆ ನಮ್ಮ ಜೊತೆಯಲ್ಲಿ ಒಬ್ಬ ಇಂಗ್ಲಿಷ್‌ನವನನ್ನು ಕರೆತಂದಿದ್ದೇವೆ. ಅವನು ನಮಗಿಂತಲೂ ಚೆನ್ನಾಗಿ ಶಿವಾಜಿಯ ದರ್ಬಾರಿನ ವಿಷಯಗಳನ್ನೆಲ್ಲಾ ತಿಳಿದು ಬಂದಿದ್ದಾನೆ. ಬಹಳ ಬುದ್ಧಿವಂತ, ಹುಜೂರ್, ಮಾಫ್ ಮಾಡಬೇಕು. ಆದರೆ ಬಹಳ ಕುಡಿಯುತ್ತಾನೆ. ಮಿತಿಮೀರಿ ಕುಡಿಯುತ್ತಾನೆ. ತವಗೆ ಖುಷಿಯಿದ್ದರೆ ಅವನಿಂದ ಸಮಾಚಾರಗಳನ್ನು ಖುದ್ದಾಗಿ ಕೇಳಿ ತಿಳಿದುಕೊಳ್ಳಬಹುದು" ಎಂದು ಹೇಳಿದರು.

ಬಾದಷಹನು "ಒಳ್ಳೆಯದು, ಆ ಕೆಂಪುಜನರೇ ಹಾಗೆ ಕುಡಿಯುತ್ತಾರೆ. ಬೇರೆ ಜಾತಿಯ ಜನರು ಕುಡಿದರೆ ನಮಗೇನು ? ಅವರನ್ನು ಖುದಾನು ಶಿಕ್ಷಿಸುತ್ತಾನೆ. ನೀವು ಸ್ನೇಹವನ್ನು ತೋರಿಸುತ್ತಾ ಭದ್ರವಾಗಿ ಇಟ್ಟುಕೊಂಡಿರಿ.ನಾವು ಹೇಳಿಕಳುಹಿಸುತ್ತೇವೆ"

"ಶಿವಾಜಿಯ ಮೇಲೆ ಯುದ್ಧಕ್ಕೆ ಕಳುಹಿಸಬೇಕು. ಈಗಲೇ ಕಳುಹಿಸಬೇಕು, ಶತ್ರುವನ್ನು ಬೆಳೆಯಬಿಡಕೂಡದು" ಎಂದು ಬಾದಷಹನು ತಕ್ಷಣವೇ ನಿರ್ಧಾರ ಮಾಡಿದನು.

ಸೇನಾಧಿಪತಿ ಷಾಯಿಸ್ತಾಖಾನನ್ನು ಸಮ್ಮುಖಕ್ಕೆ ಬರಮಾಡಬೇಕೆಂದು ಅಪ್ಪಣೆ ಮಾಡಿದನು.

ಸೇನಾಧಿಪತಿ ಷಾಯಿಸ್ತಾಖಾನನು ಬಂದು ಅಂತರಂಗದಲ್ಲಿ ಭೇಟಿ ಮಾಡಿದನು.

ಬಾದಷಹನು "ಬನ್ನಿ ಸೇನಾಧಿಪತಿಗಳೇ, ಕುಳಿತುಕೊಳ್ಳಿರಿ. ನಿಮ್ಮನ್ನು ಆ ಮರಾಠರ ಕಳ್ಳ ಶಿವನ ಮೇಲೆ ಯುದ್ಧಕ್ಕೆ ಕಳುಹಿಸಬೇಕೆಂದು ಯೋಚನೆ ಮಾಡಿದ್ದೇವೆ. ನೀವು ರಾಜಾಸ್ಥಾನದಲ್ಲಿ ಬಹಳ ಯುದ್ಧಗಳನ್ನು ಮಾಡಿಗೆದ್ದಿರುವ ಖಿಲೇಮರು. ನಿಮ್ಮ ಹೆಸರು ಹೇಳಿದರೆ ಗುಜರಾತವು ನಡುಗುತ್ತದೆ. ಈ ಮರಾಠರನ್ನು ಬಲಿಹಾಕಲು ನೀವೇ ತಕ್ಕವರು. ನೀವು ಯುದ್ಧಕ್ಕೆ ಹೊರಡಬೇಕು" ಎಂದ.

ಷಾಯಿಸ್ತಾಖಾನನು "ಜಹಪನಾ. ಖಾವಂದರ ಅಪ್ಪಣೆಯು ಶಿರಸಾ ಮಾನ್ಯವಾದುದು. ತಮ್ಮ ಆಜ್ಞೆಗೆ ಮೀರಿದ್ದು ಏನಿದೆ? ಮರಾಠರ ರಾಜ್ಯವನ್ನು ಧ್ವಂಸಮಾಡಿ ಅವರ ಕೋಟೆಗಳನ್ನು ಪುಡಿಪುಡಿಮಾಡಿ ಆ ಕಳ್ಳ ಶಿವಾಜಿಯನ್ನು ಹಿಡಿತರುತ್ತೇನೆ, ಹುಜೂರ್. ನನ್ನನ್ನು ಈ ಯುದ್ಧಕ್ಕೆ ಕಳುಹಿಸುವುದೇ ಮಹಾಪ್ರಸಾದವೆಂದು ಭಾವಿಸುತ್ತೇನೆ" ಎಂದು ಹೇಳಿ ಮುಜುರೆ ಮಾಡಿದನು.

"ಒಳ್ಳೆಯದು ಸಂಧ್ಯಾಕಾಲ ನೀವು ಖಾಸ್‌ದಿವಾನೆಗೆ ಬರಬೇಕು. ಮಹಾರಾಷ್ಟ್ರದಿಂದ ಬಂದಿರುವ ಗುಪ್ತಚಾರರಿಂದ ಅಲ್ಲಿಯ ಸಮಾಚಾರಗಳನ್ನು ಕೇಳಬಹುದು. ಇಂಗ್ರೇಜೀ ಅಧಿಕಾರಿಯೊಬ್ಬನನ್ನು ನಮ್ಮ ಗುಪ್ತಚಾರರು ಕರೆತಂದಿದ್ದಾರೆ. ಅವರು ಒಳ್ಳೆಯ ಬುದ್ಧಿವಂತನೆಂದು ಕಾಣುತ್ತದೆ. ಇಂದು ಅವನನ್ನೂ ಕರೆಯಿಸುತ್ತೇವೆ. ನೀವು ಆ ಮಹಾರಾಷ್ಟ್ರದ ಸುದ್ದಿಗಳನ್ನು ಕೇಳಿರಿ. ಎಷ್ಟು ತಿಳಿದಿದ್ದರೆ ಅಷ್ಟು ಒಳ್ಳೆಯದು. ಹೆಚ್ಚು ಸೈನ್ಯ ನಷ್ಟವಾಗದೇ ಆಸಾಮಿಯನ್ನು ಹಿಡಿತರಲು ಉಪಾಯ ಹೊಳೆಯಬಹುದು" ಎಂದು ಹೇಳಿದನು.

ಷಾಯಿಸ್ತಾಖಾನನು "ಹುಜೂರ್. ಅಜ್ಞೆಯಂತೆ ನಡೆಯುತ್ತೇನೆ" ಎಂದು ಮತ್ತೊಮ್ಮೆ ಸಲಾಂ ಮಾಡಿ ಸನ್ನಿಧಾನದಿಂದ ಹೊರಟನು.

ಸಂಧ್ಯಾಕಾಲ ಖಾಸ್‌ದಿವಾನೆಯಲ್ಲಿ ಬಾದಷಹ ಔರಂಗಸೇಬನೂ ಸೇನಾಧಿಪತಿ ಷಾಯಿಸ್ತಾಖಾನನೂ ಅಂತರಂಗ ಸಮಾಲೋಚನೆ ಮಾಡುತ್ತಾ ಕುಳಿತಿದ್ದರು.

ಷಾಯಿಸ್ತಾಖಾನನು ಔರಂಗಸೇಬ್ ಬಾದಷಹನ ಸೋದರಮಾವ. ಯುದ್ಧದಲ್ಲಿ ಅತ್ಯಂತ ಪರಾಕ್ರಮಶಾಲಿಯೆಂದು ಹೆಸರುವಾಸಿಯನ್ನು ಪಡೆದಿದ್ದನು. ದರಬಾರಿನಲ್ಲಿಯೂ ಅವನ ಗೌರವವು ಬಹಳವಾಗಿ ಬೆಳೆದಿದ್ದಿತು. ಅವನ ಭಾವಮೈದುನನು ಬಾದಷಹನ ಮುಖ್ಯಮಂತ್ರಿಯಾಗಿದ್ದನು. ಬಂಧುತ್ವದಲ್ಲಿ, ಸಂಪತ್ತಿನಲ್ಲಿ, ಪರಾಕ್ರಮದಲ್ಲಿ, ದರಬಾರಿನ ಅಂತಸ್ತಿನಲ್ಲಿ, ಅತ್ಯಂತ ಉನ್ನತ ಸ್ಥಾನವನ್ನು ಅಡರಿದ್ದವನು ಷಾಯಿಸ್ತಾಖಾನ್. ಎಂಥವನಾದರೂ ಬಾದಷಹನೊಡನೆ ಹಾಗೆ ಸಮಗದ್ದುಗೆಯಲ್ಲಿ ಕುಳಿತು ಒಂದು ದಿನ ಮಾತನಾಡುವುದು ಕೂಡಾ ಮಹಾಭಾಗ್ಯವೆಂದು ಭಾವಿಸುತ್ತಿದ್ದನು. ಆದರೆ

ಷಾಯಿಸ್ತಾಖಾನನಿಗೆ ಅಂತಹ ಅವಕಾಶಗಳೆಷ್ಟೋ ದೊರೆತಿದ್ದವು. ಬಾದಷಹನ ಅಪ್ಪಣೆಯಂತೆ ಮಹಾರಾಷ್ಟ್ರದಿಂದ ಬಂದಿದ್ದ ಗುಪ್ತಚಾರನು ತನ್ನ ಜೊತೆಗಾರನಾದ ಇಂಗ್ಲೀಷ್ ಅಧಿಕಾರಿ. ಜಾನ್ ಸಾಹೇಬನೊಡನೆ ಬಂದು ಬಾದಷಹರಿಗೂ ಸೇನಾಧಿಪತಿಗಳಿಗೂ ಕುರ್ನಿಸಾತುಮಾಡಿ ಅದಬ್ಬಿನಿಂದ ನಿಂತುಕೊಂಡನು

ಜಾನ್ ಸಾಹೇಬನಿಗೆ ಬಾದಷಹನ ಮುಂದೆ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಗುಪ್ತಚಾರನು ಕಲಿಸಿಕೊಟ್ಟಿದ್ದನು.

ಜಾನ್ ಸಾಹೇಬನು ತನಗೆ ಬಹಳ ಇನಾಂ ಸಿಕ್ಕುತ್ತದೆಂದು ನಂಬಿದ್ದನು. ಅಷ್ಟೇ ಅಲ್ಲ, ಬಾದಷಹನ ದರಬಾರಿನಲ್ಲಿ ಒಳ್ಳೆ ಉದ್ಯೋಗವು ದೊರೆಯಬಹುದೆಂದೂ ಆಸೆಯಿದ್ದಿತು. ಜಾನ್ ಸಾಹೇಬನೂ ಬಗ್ಗಿ ಕುರ್ನಿಸಾತ್ ಮಾಡಿದನು.

ಬಾದಷಹನು "ಮೊಹದೀನ್, ಇವನೇ ನಿನ್ನ ಸ್ನೇಹಿತ ಇಂಗ್ಲೀಷ್ ಅಧಿಕಾರಿಯೋ ?" ಎಂದು ಪ್ರಶ್ನೆ ಮಾಡಿದನು.

"ಜಹಪನಾ, ಈ ಜಾನ್ ಸಾಹೇಬನು ರಾಮಪುರದ ಇಂಗ್ಲೀಷ್ ಕೋಠಿಯಲ್ಲಿ ಇದ್ದ. ಶಿವಾಜಿಯು ಇವನನ್ನೂ ಇವನ ಸಂಗಡಿಗರನ್ನೂ ಎರಡು ವರ್ಷಗಳು ಬಂಧನದಲ್ಲಿಟ್ಟಿದ್ದ. ಇತ್ತೀಚೆಗೆ ಇವನ ಬಿಡುಗಡೆಯಾಗಿದೆ. ಇವನು ಮಹರಾಷ್ಟ್ರದ ದುರ್ಗಗಳನ್ನೆಲ್ಲಾ ನೋಡಿದ್ದಾನೆ. ಶಿವಾಜಿಯನ್ನೂ ಭೇಟಿಮಾಡಿದ್ದಾನೆ. ಇವನಿಗೆ ಬಹಳ ವಿಷಯಗಳು ತಿಳಿದಿವೆ. ಉರ್ದೂ ಭಾಷೆಯನ್ನು ಮಾತನಾಡುತ್ತಾನೆ. ಮರಾಠಿಯನ್ನೂ ಚೆನ್ನಾಗಿ ಕಲಿತಿದ್ದಾನೆ. ಇವನು ಉಪಯೋಗಕ್ಕೆ ಬರುವ ಮನುಷ್ಯ. ಖಾತ್ರಿ ಮನುಷ್ಯ, ಹುಜೂರ್. ಅಪ್ಪಣೆಯಾದರೆ ಮಾತನಾಡಿಸುತ್ತೇನೆ. ನಮ್ಮ ದರ್ಬಾರಿನ ವಿಷಯ ಹೆಚ್ಚಾಗಿ ಗೊತ್ತಿಲ್ಲ. ಸ್ವಲ್ಪ ಹೆಚ್ಚು ಕಡಿಮೆಯಾದರೂ ಮಾಫ್‌ಮಾಡಬೇಕು. ಈ ಇಂಗ್ಲೀಷ್ ಜನ ಸ್ವಲ್ಪ ಸ್ವತಂತ್ರಪ್ರಿಯರು. ಆದರೂ ಸತ್ಯವನ್ನು ನುಡಿಯುತ್ತಾರೆ. ಮಾತಿನಂತೆ ಕಾರ್ಯದಲ್ಲಿಯೂ ನಡೆದುಕೊಳ್ಳುತ್ತಾರೆ, ಹುಜೂರ್" ಎಂದು ಸಲಾಂ ಮಾಡಿದನು.

ಬಾದಷಹನು "ಜಾನ್, ನೀನು ನಮ್ಮ ಮೊಗಲ್ ಅಧಿಕಾರಿಗಳ ಸ್ನೇಹಿತನಾಗಿರುವುದು ಬಹಳ ಸಂತೋಷ. ನೀನು ಬಯಸುವುದಾದರೆ ನಮ್ಮ

ರಾಜಧಾನಿಯಲ್ಲಿಯೇ ಇರಬಹುದು. ಬೇಕಾದ ಸೌಲತ್ತುಗಳು ದೊರೆಯುತ್ತವೆ. ಶಿವಾಜಿಯ ವಿಷಯವಾಗಿ, ಆ ಮರಾಠಾ ಸೈನಿಕರ ವಿಚಾರವಾಗಿ ನೀನೇನು ಬಲ್ಲೆ ಹೇಳು" ಎಂದು ಕೇಳಿದನು.

ಜಾನ್ ಸಾಹೇಬನು "ಶಿವಾಜಿಯು ಗಡಿನಾಡಿನಲ್ಲಿ ಇಪ್ಪತ್ತುಮೂರು ಕೋಟೆಗಳನ್ನು ಸ್ವಾಧೀನಪಡಿಸಿಕೊಂಡು ಭದ್ರವಾಗಿಟ್ಟಿದ್ದಾನೆ. ಪ್ರತಿಯೊಂದು ಕೋಟೆಯಲ್ಲಿಯೂ ಮದ್ದಿನ ಮನೆಗಳಿವೆ, ಬೇಕಾದಷ್ಟು ಶಸ್ತ್ರಾಸ್ತ್ರಗಳನ್ನು ಶೇಖರಿಸಿಟ್ಟಿದ್ದಾನೆ. ಅವರಲ್ಲಿ ಬಂದೂಕುಗಳೂ ಫಿರಂಗಿಗಳೂ ಇವೆ. ತೋಪಿನ ಗಾಡಿಗಳು ಸಹ ಇವೆ. ರಾಯಘಡ ದುರ್ಗವು ಅವುಗಳಲೆಲ್ಲಾ ಬಹಳ ಮುಖ್ಯವಾದುದು. ಅತ್ಯಧಿಕವಾಗಿ ಹಣವನ್ನು ಶೇಖರಿಸಿಟ್ಟಿದ್ದಾನೆ. ಸೈನ್ಯದಲ್ಲಿ ಬಲವಾದ ಶಿಸ್ತಿದೆ. ಪ್ರತಿಯೊಬ್ಬ ಸೈನಿಕನಿಗೂ ಶಿವಾಜಿಯ ಪರಿಚಯವಿದೆ. ಶಿವಾಜಿಯಲ್ಲಿ ಭಕ್ತಿ ಇದೆ. ಸೈನಿಕರೆಲ್ಲರೂ ಶಿವಾಜಿಯು ಅವತಾರಪುರುಷನೆಂದು ನಂಬಿದ್ದಾರೆ. ಜನರು ಶಿವಾಜಿಯು ಧರ್ಮೋದ್ಧಾರಕನೆಂದು ಪ್ರೀತಿಸುತ್ತಾರೆ. ಪ್ರತಿಯೊಂದು ಊರಿನಲ್ಲಿಯೂ ಬ್ರಾಹ್ಮಣ ಮುಖ್ಯಾಧಿಕಾರಿ. ಆಡಳಿತವೆಲ್ಲಾ ಅವನಿಗೆ ಸೇರಿದ್ದು. ಊರುಊರಿಗೂ ಮಹಾಜನಗಳ ನ್ಯಾಯಾಸ್ಥಾನಗಳಿವೆ. ಆ ರಾಜ್ಯದಲ್ಲಿ ಆ ನ್ಯಾಯಾಸ್ಥಾನಗಳನ್ನು ಮಹಜರ್ ಎಂದು ಕರೆಯುತ್ತಾರೆ. ಮಹಜರ್‌ನಲ್ಲಿ ಅನ್ಯಾಯವೇ ಇಲ್ಲವೆಂದು ಆ ಜನರ ನಂಬಿಕೆ. ಸೈನ್ಯದಲ್ಲಿ ಬಹಳ ಬಿಕ್ಕಟ್ಟಿದೆ. ಸೇನೆಗೆ ಸೇರುವುದು ಒಂದು ದೊಡ್ಡ ಗೌರವವೆಂದು ಆ ಜನರ ಭಾವನೆ. ಬೇಕಾದ ಹಾಗೆ ಬೇಕಾದವರು ಸೈನ್ಯದಲ್ಲಿ ಸೇರಲಾಗುವುದಿಲ್ಲ. ಪ್ರತಿಯೊಬ್ಬನನ್ನೂ ಅಜಮಾಯಿಷಿ ಮಾಡಿ ಶಿವಾಜಿಯೇ ಸೈನ್ಯಕ್ಕೆ ಸೇರಿಸುತ್ತಾನೆ. ಬಿಜಾಪುರದವರು ಬ್ರಹ್ಮಾಂಡ ಸೈನ್ಯದೊಡನೆ ಬಂದು ಯುದ್ಧಮಾಡಿದಾಗ ನಾನು ಕಣ್ಣಾರ ಕಂಡಿದ್ದೇನೆ. ಶಿವಾಜಿಯ ಸೈನಿಕನು ಮೇಲಧಿಕಾರಿಯ ಅಪ್ಪಣೆ ಬರುವವರೆಗೆ ಹೆಜ್ಜೆಯನ್ನು ಹಿಂತೆಗೆಯುವುದಿಲ್ಲ. ಕಡೆಯ ಘಳಿಗೆಯವರೆಗೆ ಹೋರಾಡಿ ಸಾಯುತ್ತಾನೆ. ಒಬ್ಬನೂ ಮದ್ಯಪಾನಮಾಡುವುದಿಲ್ಲ. ಹೆಂಗಸರ ಗೋಜಿಗೆ ಹೋಗುವುದಿಲ್ಲ. ಜಹಪನಾ, ಇನ್ನೊಂದು ಆಶ್ಚರ್ಯ ಕಂಡಿದ್ದೇನೆ. ಆ ರಾಜ್ಯದಲ್ಲಿ ಅಲ್ಲಲ್ಲಿ ಮುಸಲ್ಮಾನರಿದ್ದಾರೆ. ಅವರಿಗೆ ಏನೂ ತೊಂದರೆಯಾಗಿಲ್ಲ. ಒಂದು ಮಸೀದಿಯನ್ನೂ ಅವರು ಒಡೆದು ಹಾಕಿಲ್ಲ. 'ಖುರಾನ್'

ಗ್ರಂಥಗಳು ಸಿಕ್ಕಿದರೆ ಅವನ್ನು ಹಾಳುಮಾಡಕೂಡದು. ಪೂಜ್ಯತೆಯಿಂದ ನೋಡಬೇಕು' ಎಂದು ಕಟ್ಟಪ್ಪಣೆಯಿದೆ. ಅವನ್ನು ನಿಷ್ಠೆಯಿಂದ ಪಾಲಿಸುತ್ತಾರೆ" ಎಂದ.

ಷಾಯಿಸ್ತಾಖಾನನು ಮಧ್ಯೆ ಬಾಯಿಹಾಕಿ "ಜಾರ್ಜಸಾಹೇಬ, ಅದು ಶಿವಾಜಿಯ ಸದ್ಗುಣದ ಗುರುತಲ್ಲ. ಬಾದಷಹರ ಪ್ರಭಾವವು ಹೆಚ್ಚಿದೆ. ಶಿವಾಜಿಯೂ ಮರಾಠರೂ ಸಾರ್ವಭೌಮರ ಹೆಸರು ಹೇಳಿದರೆ ನಡುಗುತ್ತಾರೆ. ಆದಕ್ಕಾಗಿ ಮಸೀದಿಗಳ ತಂಟೆಗೆ ಹೋಗುವುದಿಲ್ಲ" ಎಂದ.

ಜಾರ್ಜಸಾಹೇಬನು "ಹಾಗಲ್ಲ, ಕಮಾಂಡರ್ ಸಾಹೇಬರೇ. ಆ ಜನರು ಚರ್ಚುಗಳ ತಂಟೆಗೂ ಬರುವುದಿಲ್ಲ. ನಮ್ಮ ಪಾದ್ರಿಗಳನ್ನೂ ಗೌರವದಿಂದ ಕಾಣುತ್ತಾರೆ. ಕ್ರೈಸ್ತಜನ ಏನಾದರೂ ತಪ್ಪುಮಾಡಿದರೆ ಪಾದ್ರಿಗಳಲ್ಲಿ ದೂರುಕೊಡುತ್ತಾರೆ. ಈ ಹಿಂದೂಜನರಿಗೆ ಪರಮತಸಹಿಷ್ಣುತೆ ಇದೆಯೆಂದು ವಿದೇಶೀ ಪಾದ್ರಿಗಳೆಲ್ಲಾ ಹೇಳುತ್ತಾರೆ" ಎಂದ.

ಬಾದಷಹನು "ಮತದ ವಿಚಾರ ಬೇಡ. ಮುಖ್ಯವಾಗಿ ನೀನು ಮರಾಠರ ವಿಷಯವನ್ನು ಚೆನ್ನಾಗಿ ತಿಳಿದುಕೊಂಡಿದ್ದೀ. ಒಂದೆರಡು ಮುಖ್ಯ ವಿಷಯಗಳನ್ನು ಹೇಳು. ಶಿವಾಜಿಯ ಕೋಟೆಗಳಲ್ಲಿ ಅಸ್ತ್ರಶಸ್ತ್ರಗಳಿವೆ. ಬಂದೂಕುಗಳಿವೆ. ಫಿರಂಗಿಗಳಿವೆ–ಎಂದು ಹೇಳಿದೆ. ಇದು ನಿನಗೆ ಹೇಗೆ ಗೊತ್ತು?"

"ನಾನು ರಾಮಪುರದ ಇಂಗ್ಲೀಷ್ ಕೋಠಿಯಲ್ಲಿ ಅಧಿಕಾರಿಯಾಗಿದ್ದೆ. ಫ್ರೆಂಚ್, ಪೋರ್ಚುಗೀಸ್, ಡಚ್ ವ್ಯಾಪಾರಿಗಳು ಆ ಆಯುಧಗಳನ್ನು ನಾನೇ ರೋಷಾಗಿ ಮರಾಠಾ ಅಧಿಕಾರಿಗಳಿಗೆ ತಂದೊಪ್ಪಿಸುವುದನ್ನು ರಾಜಾ ನೋಡಿದ್ದೇನೆ. ನಮ್ಮ ಕೋಠಿಯ ಪಹರೆಯವರು ಅದನ್ನೆಲ್ಲಾ ವರದಿ ಮಾಡುತ್ತಾರೆ".

ಬಾದಷಹನು "ಇಂಗ್ಲಿಷರು ಮರಾಠರಿಗೆಅಸ್ತ್ರಶಸ್ತ್ರಗಳನ್ನೂ ಬಂದೂಕುಗಳನ್ನೂ ಕೊಡುತ್ತಾರೆಂದು ನಮಗೆ ಪುಕಾರು ಬಂದಿದೆ" ಎಂದ.

"ಹುಜೂರ್, ಬಿಲ್‌ಖುಲ್ ಇಲ್ಲ. ಅದು ಸುಳ್ಳುಮಾತು.ನಮ್ಮ ಜನ ಮಾತಿಗೆ ತಪ್ಪುವವರಲ್ಲ. ಇಂಗ್ಲಿಷರಿಗೂ ಮೊಗಲ್ ದರ್ಬಾರಿಗೂ ಒಪ್ಪಂದವಾದಂತಿದೆ. ನಾವುಎಲ್ಲಸರಬರಾಜನ್ನೂ ಅಹಮದ್ ನಗರಕ್ಕೆಕಳುಹಿಸುತ್ತೇವೆ. ನೀವು ಎಂದಾದರೂ ಯುದ್ಧದಲ್ಲಿ ಕಾಣುತ್ತೀರಿ. ಮರಾಠರಲ್ಲಿ ಟರ್ಕಿಯವರೂ

ಆಫ್ಘನರೂ ಕೊಟ್ಟಿರುವ ಕತ್ತಿಗಳಿವೆ ನಮ್ಮ ಕತ್ತಿಗಳಿಲ್ಲ. ನಮ್ಮ ಕತ್ತಿಗಳನ್ನು ನೋಡಿದರೇ ಗುರ್ತಿಸಬಹುದು. ನಮ್ಮ ಬಂದೂಕುಗಳಿಗೆಲ್ಲಾ ಛಾಪು ಇರುತ್ತೆ. ನಮೂನೆಯು ಬೇರೆ. ಆದರಲ್ಲಿ ನಮ್ಮ ಆಯುಧಗಳೇನಾದರೂ ಇದ್ದರೆ ಅದು ಅಹಮದ್ ನಗರದಿಂದ ಚಫಾವಣೆಯಾಗಿರಬೇಕು"

"ಹೋಗಲಿ ಆ ವಿಚಾರ ಬೇಡ. ಮತ್ತೇನು ಹೇಳುತ್ತೀ?"

"ನಾನು ಮರಾಠರ ಸೈನ್ಯ ಶಿಬಿರವನ್ನು ನೋಡಿದ್ದೇನೆ. ಅವು ಬಹಳ ವ್ಯವಸ್ಥೆಯಿಂದ ಇರುತ್ತದೆ. ಆ ಸೈನ್ಯಗಳಲ್ಲಿ ಅವರು ಹೆಂಗಸರನ್ನು ಕರೆದು ಕೊಂಡು ಹೋಗುವುದಿಲ್ಲ. ಬಹುಬೇಗ ಶಿಬಿರವನ್ನು ನಿರ್ಮಾಣಮಾಡುತ್ತಾರೆ. ನಗಾರಿಯೊಂದಿಗೆ ತಕ್ಷಣ ಮುಂದಕ್ಕೆ ಹೊರಟುಬಿಡುತ್ತಾರೆ ಸೈನಿಕರು ಹಗಲೂರಾತ್ರಿ ಸರ್ವದಾ ಯುದ್ಧಕ್ಕೆ ತಯಾರು. ಕುದುರೆಯ ಪಕ್ಕದಲ್ಲಿಯೇ ಜಮಖಾನ ಹಾಸಿಕೊಂಡು ಮಲಗುತ್ತಾರೆ. ಒಣ ರೊಟ್ಟಿಗಳನ್ನೂ ಖಾರ ವನ್ನೂ ತಿನ್ನುತ್ತಾರೆ. ಆದರೂ ಒಳ್ಳೆಯ ಕಟ್ಟಾಳುಗಳು, ಶ್ರಮಸಹಿಷ್ಣುಗಳು, ಮೊಗಲ್ ಸೈನಿಕರಿಗಿಂತಲೂ ಮರಾಠಾ ಸೈನಿಕನು ಗಟ್ಟಿಗ."

ಷಾಯಿಸ್ತಾಖಾನನು"ಉಶ್" ಎಂದನು.

ಬಾದಷಹನು ಸಣ್ಣ ನಗುವನ್ನು ನಕ್ಕು "ಜಾನ್, ನಿಮ್ಮ ಸೂರತ್ ಹೇಗಿದೆ?" ಎಂದ.

"ಸೂರತ್ ಚೆನ್ನಾಗಿದೆ, ಹುಜೂರ್.ವ್ಯಾಪಾರ ಚೆನ್ನಾಗಿ ನಡೆಯುತ್ತೆ. ಎಲ್ಲ ವ್ಯಾಪಾರಸ್ಥರೂ ಭಯವಿಲ್ಲದೇ ವ್ಯಾಪಾರಮಾಡುತ್ತಾರೆ. ಹಣಕ್ಕೆ ಭಯ ವಿಲ್ಲ. ಆಸ್ತಿಪಾಸ್ತಿಗಳಿಗೆ ಧೋಕಾಯಿಲ್ಲ. ಅದೆಲ್ಲಾ ತಮ್ಮ ಅನುಗ್ರಹ. ತಮ್ಮ ಖರಾಮತ್ತು. ಆದರೆ ಶಿವಾಜಿಯು ಸೂರತ್ತಿನ ಮೇಲೆಯೂ ಕಣ್ಣಿಟ್ಟಿ ದ್ದಾನೆಂದು ದೊಡ್ಡದೊಡ್ಡ ವ್ಯಾಪಾರಸ್ಥರು ಮಾತನಾಡಿಕೊಳ್ಳುತ್ತಾರೆ"

ಬಾದಷಹನು "ಒಳ್ಳೆಯದು,ಹೋಗು. ನಿನಗೆ ಪುರಸ್ಕಾರವು ದೊರೆಯು ತ್ತದೆ." ಎಂದು ಹೇಳಿ ಕಳುಹಿಸಿದನು.

ಮೊಹಿಯುದ್ದೀನನು ಕುರ್ನಿಸಾತು ಮಾಡಿದನು. ಅವನ ಜೊತೆಯಲ್ಲಿ ಜಾನ್‌ಸಾಹೇಬನು ಕುರ್ನಿಸಾತು ಮಾಡಿ, ತನ್ನ ಸ್ನೇಹಿತನೊಂದಿಗೆ ಹೊರಟು ಹೋದನು.

"ಹೋಗುತ್ತ ತನ್ನ ಸ್ನೇಹಿತನಾದ ಮೊಹಿಯುದ್ದೀನನಿಗೆ ಹೇಳಿದನು.

"ಖಾನ್ ಸಾಹೇಬ, ನೀನು ನನಗೆ ಬಹಳ ಉಪಕಾರ ಮಾಡಿದ್ದೀ. ಈ ಬಾದಷಹನನ್ನು ಇಷ್ಟು ಸಮೀಪದಲ್ಲಿ ನೋಡಿ, ಎರಡು ಮಾತುಗಳನ್ನಾಡುವ ಅವಕಾಶ ಮಾಡಿಕೊಟ್ಟೆ. ಬಾದಷಹನು ಸಾಮಾನ್ಯನಲ್ಲ. ಮಹಾಪುರುಷ. ಅವನ ಕಣ್ಣುಗಳಲ್ಲಿಯೇ ಆ ಜ್ಯೋತಿಯು ಬೆಳಗುತ್ತದೆ. ಮಾತುಗಳೂ ಹಾಗೆಯೇ. ನೂರಕ್ಕೊಂದು ಮಾತು. ಆ ಮಾತಿನಲ್ಲಿ ಎಷ್ಟು ಪ್ರಭಾವವಿದೆ. ಎಷ್ಟು ಅರ್ಥವಿದೆ ಎಷ್ಟು ಹಠವಿದೆ. ಅಬ್ಬಾ ! ಈ ಕಾಲದಲ್ಲಿ ಇಂತಹ ದೊರೆಗಳು ಯೂರೋಪಿನಲ್ಲಿಯೂ ಹುಟ್ಟಲ್ಲವಲ್ಲಾ ! ಭೇಷ್. ಇಂಥಾ ಚಕ್ರವರ್ತಿಯ ಖಾಸ್ ಸನ್ನಿಧಾನದಲ್ಲಿ ಕೆಲಸಮಾಡುವ ಪುಣ್ಯ ನಿನಗಿದೆ. ಆದರೆ ಆ ಸೇನಾಧಿಪತಿಗಳನ್ನು ನಾನು ಅಷ್ಟೇನೂ ಪಸಂದ್ ಮಾಡಲಿಲ್ಲ. ಚುರುಕು ಬುದ್ಧಿಯೂ ಇಲ್ಲ. ಇನ್ನು ಪರಾಕ್ರಮ ಹೇಗಿದೆಯೋ ಹೇಳಲಾಗುವುದಿಲ್ಲ."

"ಜಾನ್ ಸಾಹೇಬ, ಬಾಯಿ ಮುಚ್ಚು. ನಿನಗೆ ನೂರು ಬಾರಿ ಸಲಾಂ ಮಾಡುತ್ತೇನೆ. ಬಾದಷಹರನ್ನು ಭೇಟಿಮಾಡಿದ ವಿಷಯ ಎಲ್ಲಿಯೂ ಬಾಯಿ ಬಿಡಬೇಡ. ಒಂದು ವರ್ಷ ಈ ಡೆಲ್ಲಿಯಲ್ಲಿ ಕಾದರೂ ಅವರ ಭೇಟಿಯಾಗುವುದಿಲ್ಲ. ನಿನ್ನ ಪುಣ್ಯ, ನಿನಗೆ ಭೇಟಿಕೊಟ್ಟರು. ಆದರದಿಂದ ಮಾತನಾಡಿಸಿದರು. ನೀನು ಎರಡು ಮಾತನ್ನು ಉಚಾಯಿಸಿದರೂ ಕೋಪಮಾಡಲಿಲ್ಲ. ಅವರೆದುರಿಗೆ ಮಾತನಾಡುವುದೆಂದರೇನು? ಆ ಶಿವಾಜಿ ಕಾಫರ. ಅವನನ್ನು ಷಹಾಂಷಹರ ಮುಂದೆ ಪ್ರಶಂಸೆ ಮಾಡುತ್ತೀ. ಅಬ್ಬಾ ! ಈ ಡಿಲ್ಲಿಯಲ್ಲಿ ಹೀಗೆ ಧೈರ್ಯವಾಗಿ ಮಾತನಾಡುವುದನ್ನು ನಾನು ಕೇಳಿಯೇ ಇಲ್ಲ. ಇಂಗ್ಲೀಷರದು ಯಮಧೈರ್ಯ. ಷಯಿಸ್ತಾಖಾನರ ಮಾತನ್ನೂ ಎಲ್ಲಿಯಾದರೂ ಆಡಿಬಿಟ್ಟೀಯೇ. ಅವರ‍್ಯಾರೆಂದುಕೊಂಡಿದ್ದೀ. ಅವರು ಬಾದಷಹರ "ಮಾಮಾ ಸಾಹೇಬ್." ಷರಾಬ್ ಕುಡಿದು ಎಲ್ಲಿಯಾದರೂ ನೀನು ಹರಟೆ ಹೊಡೆಯಲಾರಂಭಿಸಿದರೆ ನನ್ನ ಪ್ರಾಣಕ್ಕೆ ಬರುತ್ತೆ ಸಂಚಕಾರ."

ಜಾನ್ ಸಾಹೇಬನು "ಖಾನ್ ಸಾಹೇಬ, ನಾನು ಇಂಗ್ಲಿಷ್‌ನವನು. ಹಾಗೆಲ್ಲಾ ರಹಸ್ಯವನ್ನು ಬಿಟ್ಟುಕೊಡುವುದಿಲ್ಲ. ಕುಡಿದರೆ ಎಚ್ಚರತಪ್ಪಿ ಬೊಗಳೆ ಕೊಚ್ಚುವ ಜನ ನೀವು" ಎಂದು ಮೂದಲಿಸಿದನು.

ಅವರಿಬ್ಬರೂ ಒಬ್ಬರ ಭುಜದ ಮೇಲೆ ಮತ್ತೊಬ್ಬರು ಕೈಹಾಕಿಕೊಂಡು ಬಜಾರಿನ ಕಡೆ ಹೊರಟುಹೋದರು.

ಮೊಹಿಯುದ್ದೀನ್‌ನು "ನಿನಗೆ ಮಿಠಾಯಿ ಬಲುಇಷ್ಟ. ಒಳ್ಳೆಯ ಮಿಠಾಯಿ ಕೊಡಿಸುತ್ತೇನೆ. ಇವತ್ತು ಒಳ್ಳೇ ಮಿಠಾಯಿ ತಿಂದು ಮಜಾ ಮಾಡಿಬಿಡೋಣ" ಎಂದು ಹೇಳಿ ಜಾನ್ ಸಾಹೇಬನನ್ನು ಕರೆದುಕೊಂಡು ಹೋದನು.

ಮಾರನೆಯ ದಿನವೇ ಮೊಗಲ್ ಸೈನ್ಯಗಳು ದಕ್ಷಿಣದಕಡೆಗೆ ಹೊರಟವು ಬಾದಷಹನ ಅಪ್ಪಣೆಯಂತೆ ಸೇನಾಪತಿಷಾಯಿಸ್ತಾಖಾನನು ಒಂದು ಲಕ್ಷಸೈನ್ಯ ವನ್ನು ತೆಗೆದುಕೊಂಡು ಹೊರಟಿದ್ದನು. ಬಹುಮಂದಿ ಸೇನಾಧಿಪತಿಗಳೂ ದಳಪತಿಗಳೂ ಹೊರಟಿದ್ದರು.ಆ ಸೈನ್ಯದಲ್ಲಿ ಹಿಂದುಗಳ ಸಂಖ್ಯೆ ಬಹಳಕಡಿಮೆ ಯಾಗಿದ್ದರೂ ಸಾಕಷ್ಟು ಮಂದಿ ಹಿಂದೂ ಸೈನಿಕರೂ ಸರದಾರರೂ ಇದ್ದರು. ಆ ಸೈನ್ಯವು ಸೇನಾಪತಿಗಳ ಅಪ್ಪಯಂತೆ ದೂರದೂರದ ಮಜಲುಗಳನ್ನು ಮಾಡಿಕೊಂಡು ಸೈನ್ಯಗಳು ಬರುತ್ತಿದ್ದವು.

ಷಾಯಿಸ್ತಾಖಾನನು ಮಹಾರಾಷ್ಟ್ರ ಸೈನ್ಯದ ಪಿಳ್ಳೆ ಉಳಿಯದಂತೆ ಧ್ವಂಸ ಮಾಡಿಬಿಡುವುದಾಗಿ ಹಠತೊಟ್ಟು ಹೊರಟಿದ್ದನು.

ಶಿವಾಜಿಗೆ ಷಾಯಿಸ್ತಾಖಾನನು ಬ್ರಹ್ಮಾಂಡ ಸೈನ್ಯವನ್ನು ಕಟ್ಟಿಕೊಂಡು ಬರುತ್ತಿರುವ ಸುದ್ದಿಯನ್ನು ದೂತರು ತಿಳಿಯಪಡಿಸಿದರು. ಮರಾಠಾ ಸೈನ್ಯ ದಲ್ಲಿ ಹತ್ತು ಸಹಸ್ರ ಸೇನೆಗಳು ಮಾತ್ರ ಉಳಿದಿದ್ದವು ಬಿಜಾಪುರದವರೊಡನೆ ಯುದ್ಧಮಾಡಿದಾಗ ಬಹಳ ಸೈನ್ಯ ನಷ್ಟವಾಗಿ ಹೋಗಿತ್ತು. ಅಹ್ಮದ್‌ನಗರ ದಲ್ಲಿ ಇದ್ದ ಮರಾಠಾ ಗುಪ್ತಚಾರರು ವರದಿಯನ್ನು ಕಳುಹಿಸಿದ್ದರು. "ಬಾದಷಹರಿಂದ ಕಟ್ಟುನಿಟ್ಟಾದ ಅಪ್ಪಣೆ ಬಂದಿದೆ. ಈ ಯುದ್ಧದಲ್ಲಿ ಸಂಧಿಯ ಮಾತೇ ಇಲ್ಲ. ದೊಡ್ಡ ದೊಡ್ಡ ಕ್ಷೇತ್ರಗಳೂ ದೇವಾಲಯಗಳೂ ಧೂಳೀಪಟ ವಾಗಿ ಹೋಗುತ್ತವೆ.ಷಾಯಿಸ್ತಾಖಾನನು 'ಶಿವಾಜೀ ಮಹಾರಾಜನನ್ನು ಹಿಡಿದು ತರುತ್ತೇನೆ' ಎಂದು ಶಪಥಮಾಡಿ ಹೊರಟಿದ್ದಾನೆ. ಯುವರಾಜ ಆಜಂಷಾ ರವರಿಗೂ ಏನು ಆಪತ್ತು ಸಂಭವಿಸುವುದೋ ಎಂದು ದೊಡ್ಡ ದೊಡ್ಡ ಅಧಿಕಾರಿಗಳು ಭಯಗ್ರಸ್ತರಾಗಿದ್ದಾರೆ" ಎಂಬುದಾಗಿ ವರದಿಗಳು ಬಂದಿ

ದ್ದವು ಶಿವಾಜಿಯು ಧೈರ್ಯಗೆಡಲಿಲ್ಲ. ತನ್ನ ಸೇನಾಧಿಪತಿಗಳನ್ನೂ ಪ್ರಧಾನಿಗಳನ್ನೂ ಸಭೆಗೂಡಿಸಿ, ಮಂತ್ರಾಲೋಚನೆ ಮಾಡಿದನು. ಸಭೆಯಲ್ಲಿ ಸೇನಾಧಿಪತಿಗಳು ಸೈನ್ಯದ ಮುಖ್ಯ ಭಾಗಗಳನ್ನೆಲ್ಲಾ ದುರ್ಗಗಳೊಳಗೆ ಜಮಾಯಿಸಬೇಕು. ಬಯಲು ಪ್ರದೇಶಗಳಲ್ಲಿ ಯುದ್ಧ ಮಾಡಕೂಡದು"ಎಂದು ನಿರ್ಧಾರ ಮಾಡಿದರು. ಶಿವಾಜಿಯು ಏಕಾಕಿಯಾಗಿ ಭದ್ರಾಚಲಕ್ಕೆ ಹೋಗಿ ರಾಮದಾಸರ ದರ್ಶನಮಾಡಿದನು.

ಸಮರ್ಥ ರಾಮದಾಸರು "ಶಿವಪ್ರಭು, ರಾಜ್ಯವನ್ನು ಕಟ್ಟುವವನು ನೀನಲ್ಲ, ಆಳುವವನು ನೀನಲ್ಲ. ಇದೆಲ್ಲಾ ಶ್ರೀರಾಮಚಂದ್ರನ ಅನುಗ್ರಹ. ರಕ್ಷಿಸುವವನೂ ಶ್ರೀರಾಮಚಂದ್ರನೇ. ನಿನ್ನದು ನಿಷ್ಕಾಮಕರ್ಮವಾಗಿರಲಿ. ರಾಮಚಂದ್ರನು ಯಾವಾಗಲೂ ಜಯರಾಮನಾಗಿದ್ದಾನೆ. ದಿನದಿನವೂ ಸಂದೇಹದಿಂದ ಪರೀಕ್ಷೆಮಾಡಬಾರದು" ಎಂದ.

"ಸಂಶಯಾತ್ಮಾ ವಿನಶ್ಯತಿ ರಾಮನು ಪ್ರತ್ಯಕ್ಷ ದೇವರು, ರಾಮರಕ್ಷೆಗಿಂತಲೂ ದೊಡ್ಡದು ಮತ್ತಾವುದೂ ಇಲ್ಲ.

"ಆಕರ್ಣಪೂರ್ಣ ಧನ್ವಾನೌ ರಕ್ಷೇತಾಂ ರಾಮಲಕ್ಷ್ಮಣೌ" ಎಂಬ ರಕ್ಷಾಮಂತ್ರವನ್ನು ಪಠಿಸಿ, ಆಶೀರ್ವದಿಸಿದರು.

ಶಿವಾಜಿಯು ಮಾತೃದೇವತೆಯ ಆಶೀರ್ವಾದವನ್ನು ಪಡೆಯಲೋಸುಗ ಪುಣೆಗೆ ಹೋದನು.

ಜೀಜಾಬಾಯಿಯು "ಹೆದರಬೇಡ ಶಿವಾ, ಭವಾನಿಯು ನಿನ್ನನ್ನು ಕಾಯುತ್ತಾಳೆ, ನೀನು ಇಲ್ಲಿಯೇ ಇರು. ಈ ಪುಣೆಯನ್ನು ಬಿಟ್ಟು ಹೊರಡಬೇಡ" ಎಂದು ಅಪ್ಪಣೆ ಮಾಡಿದಳು.

ಶಿವಾಜಿಯು ಮಾತೃವಾಕ್ಯದಲ್ಲಿ ಏನೋ ದೈವಿಕ ರಹಸ್ಯವಿದೆಯೆಂದು ಭಾವಿಸಿ ಅಲ್ಲಿಯೇ ನಿಂತನು.

ಹೆಚ್ಚುಕಾಲ ತಡವಾಗಲಿಲ್ಲ. ಷಾಯಿಸ್ತಾಖಾನನು ಎರಡೇ ಎರಡು ತಿಂಗಳುಗಳಲ್ಲಿ ಪುಣೆಗೆ ಮುತ್ತಿಗೆಹಾಕಿದನು. ಮಳೆಗಾಲವು ಸಮೀಪಿಸುತ್ತಿತ್ತು ಈ ವರ್ಷ ಬೇಗನೇ ಮಳೆಯು ಆರಂಭವಾಗಿತ್ತು. ಪುಣೆಯು ಸುಲಭವಾಗಿ ಷಾಯಿಸ್ತಾಖಾನನ ವಶವಾಯಿತು. ಶಿವಾಜಿಯು ಪುಣೆಯಲ್ಲಿಯೇ ಇದಾನೆಂದು ದೂತರ ಮುಖೇನ ಖಾನನು ಖಚಿತಪಡಿಸಿಕೊಂಡಿದ್ದನು. "ಶಿವಾಜಿಯು

ಕೈಗೆ ಸಿಕ್ಕಿದ" ಎಂದು ಉದ್ಗಾರ ಮಾಡುತ್ತಾ ಷಾಯಿಸ್ತಾಖಾನನು ಪುಣೆಯನ್ನು ಪ್ರವೇಶಮಾಡಿದನು. ಸೈನಿಕರೆಲ್ಲರಿಗೂ ಅಜ್ಞೆ ಮಾಡಿದನು. ಪುಣೆಯಲ್ಲಿ ಕೊಳ್ಳೆ ಹೊಡೆಯಕೂಡದು, ಮಹಲುಗಳನ್ನು ನುಗ್ಗಕೂಡದು. ದೇವಾಲಯಗಳನ್ನು ನಾಶಪಡಿಸಕೂಡದು, ಸ್ತ್ರೀಯರ ಮೇಲೆ ಅತ್ಯಾಚಾರವಾಗಬಾರದು, ಮಕ್ಕಳ ಕೊಲೆಯಾಗಬಾರದು ಎಂದು ಕಟ್ಟಪ್ಪಣೆ ಮಾಡಿದ್ದನು. ತಾನೇ ಸ್ವತಃ ಸೈನಿಕರನ್ನು ಕರೆದುಕೊಂಡು ಹೋಗಿ ಅರಮನೆಗೆ ಮುತ್ತಿಗೆ ಹಾಕಿ ಸ್ವಾಧೀನಪಡಿಸಿಕೊಂಡನು ಅದು ಕೊಂಡದೇವನಿಂದ ನಿರ್ಮಿತವಾಗಿದ್ದ ಅರಮನೆ. ಮೊಗಲ್ ಸೈನಿಕರು ಅರಮನೆಯ ಪ್ರತಿಯೊಂದು ಭಾಗದಲ್ಲಿಯೂ ಹುಡುಕಿ ನೋಡಿದರು. ನಿರ್ಜನವಾಗಿತ್ತು. ಅಷ್ಟು ದೊಡ್ಡ ಅರಮನೆಯೊಳಗೆ ಒಂದು ಪ್ರಾಣಿಯೂ ಇರಲಿಲ್ಲ. ಷಾಯಿಸ್ತಾಖಾನನು "ಹಕ್ಕಿಯು ಹಾರಿಹೋಗಿದೆ. ಶಿವಾಜಿಯು ಮಾಯವಾಗಿದ್ದಾನೆ" ಎಂದು ಹೇಳಿದನು. ಷಾಯಿಸ್ತಾಖಾನನು ಆ ಅರಮನೆಯಲ್ಲಿಯೇ ಬಿಡಾರ ಮಾಡಿದನು. ಅದಕ್ಕೆ ಒಂದು ಅಂತರಂಗ ಕಾರಣವಿತ್ತು. ಶಿವಾಜಿಯು ಪುಣೆಯ ಸ್ವಂತ ಅರಮನೆಯಲ್ಲಿ ನೆಲಮಾಳಿಗೆಯಲ್ಲಿ ಚಿನ್ನದ ಗಟ್ಟಿಗಳನ್ನು ಹುಗಿದಿಟ್ಟದ್ದಾನೆಂದು ದೆಲ್ಲಿಯಲ್ಲಿ ಪ್ರತೀತಿ ಇತ್ತು.

ಬಾದಷಹನು ಕೂಡಾ ಇದನ್ನು ದೃಢವಾಗಿ ನಂಬಿದ್ದನು.

ಷಾಯಿಸ್ತಾಖಾನನು ತನ್ನ ಆಪ್ತ ಪರಿವಾರದೊಂದಿಗೆ ಪುಣೆಯ ಅರಮನೆಯಲ್ಲಿಯೇ ಠಿಕಾಣಿ ಹಾಕಿದನು. ಆ ಸಮಯಕ್ಕೆ ನಗರವು ಬೃಹದಾಕಾರವಾಗಿ ಬೆಳೆದಿತ್ತು. ಕೋಟೆಕೊತ್ತಲುಗಳನ್ನೂ ಕಛೇರಿಗಳನ್ನೂ ಮೊಗಲ್ ಸೈನಿಕರು ಸ್ವಾಧೀನಪಡಿಸಿಕೊಂಡರು. ಕೊತ್ವಾಲ ಕಛೇರಿಗಳಲ್ಲೆಲ್ಲಾ ದಕ್ಷರಾದ ಮುಸಲ್ಮಾನ್ ಅಧಿಕಾರಿಗಳು ನೇಮಿಸಲ್ಪಟ್ಟರು. ಪುಣೆಯು ಅಹಮದ್ ನಗರದಂತ ಮೊಗಲ್ ರಾಜಧಾನಿಯ ಸ್ವರೂಪವನ್ನು ಹೊಂದಿತು.

ಶಿವಾಜಿಯು ಬೆಟ್ಟಗುಡ್ಡಗಳಲ್ಲಿ ರಹಸ್ಯವಾಗಿ ಅಡಗಿಕೊಂಡಿದ್ದನು. ಒಂದೊಂದು ದಿನ ಒಂದೊಂದು ಬೆಟ್ಟ. ಒಂದೊಂದು ವನದಲ್ಲಿದ್ದಾನೆಂದು ದೂತರು ವರದಿಗಳನ್ನು ತರುತ್ತಿದ್ದರು. ಕಣ್ಣಾರ ಶಿವಾಜಿಯನ್ನು ಕಂಡವರು ಬಂದು ಹೇಳುತ್ತಿದ್ದರು.ಮಳೆಯ ಹೊಡೆತವು ಬಲವಾಗಿದ್ದಿತು. ಸೂರ್ಯರಶ್ಮಿಗಳು ಬೀಳದಂತೆ ಮೋಡಗಳು ಕವಿದಿದ್ದವು. ಜಡಿಮಳೆಯು ಹಿಡಿದಿತ್ತು. ಮೊಗಲ್ ಸೈನಿಕರು ಆ ಗುಡ್ಡಗಾಡುಗಳಲ್ಲಿಹೋಗಿ ಶಿವಾಜಿಯನ್ನು ಹಿಡಿಯು

ವುದು ದುಸ್ತರ ಎಂದು ಖಾನನು ಖಚಿತಮಾಡಿಕೊಂಡನು ಶಿವಾಜಿಯ ಇತರ ದುರ್ಗಗಳೊಂದೂ ಮೊಗಲರಿಗೆ ಕೈವಶವಾಗಿರಲಿಲ್ಲ. ಮಳೆಗಾಲವು ಪೂರೈಸಿದ ನಂತರ ಆ ದುರ್ಗಗಳನ್ನು ಒಂದೊಂದಾಗಿ ಹಿಡಿಯಬೇಕೆಂದು ಖಾನನು ಆಲೋಚನೆ ಮಾಡಿದನು. ಮಳೆಗಾಲವು ಪೂರೈಸುವವರೆಗೆ ಪುಣೆಯಲ್ಲಿಯೇ ತಾನು ಛಾವಣಿ ಹಾಕುವ ನಿರ್ಧಾರ ಮಾಡಿದನು. ಶಿವಾಜಿಯ ಅರಮನೆಗೆ ರಂಗಮಹಲೆಂದು ಹೆಸರು. ಆ ರಂಗಮಹಲಿನಲ್ಲಿಯೇ ಷಾಯಿಸ್ತಾಖಾನನ ಬಿಡಾರ. ಪ್ರಶಸ್ತವಾದ ಅರಮನೆ. ಶತ್ರುಗಳಿಗೆ ಅಭೇದ್ಯವಾದ ರೀತಿಯಲ್ಲಿ ಕಟ್ಟಲ್ಪಟ್ಟದ್ದ ಕಟ್ಟಡ. ಅರಮನೆಯೊಳಗೆ ಎಲ್ಲಿ ನೋಡಿದರೂ ಗೋಡೆಯ ಮೇಲೆ ಪುರಾಣದ ಚಿತ್ರಗಳು ಬರೆಯಲ್ಪಟ್ಟದ್ದವು. ಅವುಗಳಲ್ಲೆಲ್ಲಾ ಕೃಷ್ಣನ ಚಿತ್ರಗಳೇ ಹೆಚ್ಚಾಗಿದ್ದುವು. ಖಾನನ ಪರಿವಾರದ ಮುನೀಬನು ಬಂದು "ಖಾವಿಂದ್, ಈ ಗೋಡೆಯ ಮೇಲಿನ ಚಿತ್ರಗಳನ್ನೆಲ್ಲಾ ಕೆತ್ತಿಹಾಕಿಸಿ ಬಣ್ಣ ಬಳಿಸುವುದಕ್ಕೆ ಅಪ್ಪಣೆಯಾಗಬೇಕು" ಎಂದು ಅರಿಕೆ ಮಾಡಿದನು.

ಷಾಯಿಸ್ತಾಖಾನನು ಅವನನ್ನು ಹಾಸ್ಯಮಾಡಿ "ಯಾರಾದರೂ ಹಿಂದುವಿದ್ದರೆ ಅವನನ್ನು ಕರೆದುಕೊಂಡು ಬಂದು ಕೇಳು. ಈ ಚಿತ್ರಗಳೇನೆಂಬುದನ್ನು ಅವನು ನಿನಗೆ ಹೇಳುತ್ತಾನೆ. ಇವೆಲ್ಲಾ ಕೃಷ್ಣನ ಚಿತ್ರಗಳು. ಕೃಷ್ಣ ಹಿಂದುಗಳ ದೇವರು, ಆದರೆ ಚೋರ, ಜಾರ ಅವನು. ಇಲ್ಲಿ ಬರೆದಿರುವುದೆಲ್ಲಾ ಅದೇ ಚಿತ್ರಗಳು. ನೋಡು, ಆ ಸ್ತ್ರೀ ಚಿತ್ರಗಳನ್ನು ನೋಡು ಎಷ್ಟು ಮನೋಹರವಾಗಿವೆ ! ಆ ರಂಗು ಎಷ್ಟು ಸೊಗಸಾಗಿದೆ ! ಆ ಹೆಣ್ಣುಗಳು ನಗುತ್ತಾ ನಲಿಯುತ್ತಾ ಎದ್ದು ಬರುವಂತಿದೆ. ಆ ಕೃಷ್ಣನನ್ನು ನೋಡು. ಅವನೊಬ್ಬ ಷೋಕೀ, ಶೃಂಗಾರಶೇಖರನಂತಿದ್ದಾನೆ. ಮುರ್ಖಾ ಇವನ್ನೆಲ್ಲಾ ಕೆತ್ತಿಸುವುದೇಕೆ ? ಪುಣೆಯಲ್ಲಿ ಡಂಗೂರ ಹೊಡೆಸು. ಈ ಚಿತ್ರಗಳನ್ನು ಬರೆದಿರುವ ಚಿತ್ರಕಲಾಪ್ರವೀಣನಿದ್ದರೆ ಅವನನ್ನು ಕರೆಸಿ ಇನಾಂಕೊಡಬೇಕು. ಹೋಗು ಈ ಚಿತ್ರಗಳಿಂದಲೇ ಈ ರಂಗಮಹಲಿಗೆ ಇಷ್ಟು ಪ್ರಖ್ಯಾತಿ. ನಮ್ಮ ಲಿಖಾವಟ್ಟುಗಳಲ್ಲಿಯೂ ರಂಗಮಹಲೆಂದೇ ನಮೂದಿಸಬೇಕು. ಹೋಗು" ಎಂದು ಹೇಳಿದನು.

ಖಾನನಿಗೆ ಸರ್ವದಾ ಶಿವಾಜಿಯ ಚಿಂತೆಯೇ ಆಗಿತ್ತು. ಮೂಢಜನ ಶಿವಾಜಿಯು ಮಾಯಾವಿ, ಮಂತ್ರಗಾರ. ಬಾಗಿಲುಗಳನ್ನು ಭದ್ರಪಡಿಸಿದ್ದರೂ

ಮಂತ್ರಶಕ್ತಿಯಿಂದ ಒಳಗೆ ಬರಬಲ್ಲ. ಬಾಗಿಲುಗಳನ್ನು ಭದ್ರಪಡಿಸಿದ್ದರೂ ಮಾಯವಾಗಿ ಹೋಗಬಲ್ಲ-ಎಂದು ಮಾತನಾಡಿಕೊಳ್ಳುವುದನ್ನು ಖಾನನು ಕೇಳಿದ್ದನು. ಒಂದೊಂದು ಬಾರಿ, ಇದು ನಿಜವಿದ್ದರೂ ಇರಬಾರದೇಕೆ ? ಎಂದು ಅವನಿಗೂ ಭ್ರಾಂತಿ ಮುಚ್ಚುತ್ತಿತ್ತು. ಶಿವಾಜಿಯು ಒಂದು ಬಾರಿ ಕೈಗೆ ಸಿಕ್ಕಿಬಿಟ್ಟರೆ ಹಿಡಿದುಬಿಡುತ್ತೇನೆ-ಆಮೇಲೆ ಅವನ ಮಾಯಾ ಮಂತ್ರ ಒಂದೂ ಸಾಗುವುದಿಲ್ಲ ಎಂದುಕೊಳ್ಳುತ್ತಿದ್ದನು.

ಪುಣೆಯ ಹಿಂದೂ ಜನರ ವ್ಯವಹಾರವೆಲ್ಲಾ ಯಥಾಪ್ರಕಾರ ನಡೆಯುತ್ತಿತ್ತು. ಆ ಜನರಲ್ಲಿ ಯಾವ ಚಾಂಚಲ್ಯವೂ ಕಾಣುತ್ತಿರಲಿಲ್ಲ. ಈ ಜನರು ಶಿವಾಜಿಯನ್ನೇ ಮರೆತುಬಿಟ್ಟದ್ದಾರೋ ಎಂದು ಒಂದೊಂದು ಬಾರಿ ಖಾನನು ಭಾವಿಸುತ್ತಿದ್ದನು. ಇಲ್ಲ-ಇಲ್ಲ. ಶಿವಾಜಿಯದು ಏನೋ ಒಂದು "ಹುನ್ನರ್" ಇದೆ. ಈ ಜನರು ಶಿವಾಜಿಯು ಬರುತ್ತಾನೆ, ಗೆದ್ದು ಬರುತ್ತಾನೆ-ಎಂದು ನಂಬಿಕೊಂಡಿದ್ದಾರೆ. ಬಹಳ ಗುಟ್ಟಿನ ಜನ ಇವರು. ನಾವು ಹುಷಾರಾಗಿರಬೇಕು. ಶಿವಾಜಿಯು ಈ ನಗರದೊಳಗೆ ಪ್ರವೇಶಮಾಡದಂತೆ ನೋಡಿಕೊಳ್ಳಬೇಕು. ಪ್ರವೇಶಮಾಡಿದರೂ ನಮ್ಮ ಕೈಗೆ ಸಿಕ್ಕಿಬಿಡಬೇಕು. ಅಂಥಾ ಹುಷಾರಿಯಿರಬೇಕು." ಎಂದು ಅಧಿಕಾರಿಗಳಿಗೆ ಪದೇ ಪದೇ ಹೇಳುತ್ತಿದ್ದನು.

ಮನೆಮನೆಗೂ ಮೊಗಲ್ ಸೈನಿಕರ ಕಾವಲಿತ್ತು. ಬೀದಿಬೀದಿಗಳಲ್ಲಿಯೂ ಪೇಟೆಪೇಟೆಗಳಲ್ಲಿಯೂ ಮೊಗಲ್ ಸೈನಿಕರ ಉಸ್ತುವಾರಿ. ಜನರು ಓಡಾಡಬಹುದು. ಧಾರಾಳವಾಗಿ ಒಬ್ಬರ ಮನೆಗೊಬ್ಬರು ಹೋಗಿ ಬರಬಹುದು. ಆದರೆ ಈ ಕಟ್ಟುನಿಟ್ಟಾದ ಕಾವಲಿನ ರಹಸ್ಯವೇನು? ಶಿವಾಜಿಯು ಯಾವ ರೂಪದಲ್ಲಿ ಎಂದು ಎಲ್ಲಿಗೆ ಯಾವಾಗ ಬರುತ್ತಾನೋ ಎಂಬ ನಿರೀಕ್ಷಣೆಗೆ ಇಷ್ಟು ಕಾವಲು.

ಮೊಗಲ್ ಸೈನಿಕರು ಪ್ರತಿದಿನವೂ ತಂಡತಂಡವಾಗಿ ಹೋಗಿ ಶಿವಾಜಿಯನ್ನು ಹುಡುಕುತ್ತಿದ್ದರು. ಆ ಸೈನಿಕರ ಮೇಲೆ ಯಾರೂ ಕೈಎತ್ತುತ್ತಿರಲಿಲ್ಲ. ಅವರಿಗೆ ಭಯವೂ ಇಲ್ಲ. ಅವರು ಬಂದು ಪ್ರತಿದಿನವೂ ಖಾನ್ ಸಾಹೇಬನಿಗೆ ವರದಿ ಮಾಡುತ್ತಿದ್ದರು

"ಶಿವಾಜಿ ಎಲ್ಲಿಯೂ ಇಲ್ಲ. ಎಲ್ಲಿಯೂ ಸಿಕ್ಕಲಿಲ್ಲ"—ಇವೇ ಸೈನಿಕರ ವರದಿಗಳು.

ಖಾನ್‌ಸಾಹೇಬನಿಗೆ ಬೇಜಾರಾಗಿಹೋಗಿತ್ತು. ಈ ದಿನ ನಾಲ್ಕು ಮಂದಿ ಸೈನಿಕರು ಬಂದು ಉತ್ಸಾಹದಿಂದ ವರದಿಮಾಡಿದರು.

"ಹುಜೂರ್, ಇಲ್ಲಿಗೆ ಹತ್ತು ಹನ್ನೆರಡು ಮೈಲಿಗಳಷ್ಟು ದೂರವಿರ ಬಹುದು. ಅಲ್ಲಿ ಒಂದು ಶಿವದೇವಾಲಯದ ಮುಂದೆ ನಾವು ಶಿವಾಜಿಯನ್ನು ನೋಡಿದೆವು."

ಖಾನನು ಬೇಸರದಿಂದ "ಇಲ್ಲ, ಸುಳ್ಳಿರಬೇಕು."

"ಮಾಫ್ ಮಾಡಬೇಕು, ಹುಜೂರ್. ನಾವು ಅವನನ್ನು ಮಾತ ನಾಡಿಸಿದೆವು. ಸ್ವಲ್ಪ ಸಂಭಾಷಣೆಯು ನಡೆಯಿತು.

ಖಾನನ ಕುತೂಹಲವು ಸ್ವಲ್ಪ ಕೆರಳಿತು. ಅವನು ಕಣ್ಣರಳಿಸಿ, "ಅದೇನು?" ಎಂದು ಪ್ರಶ್ನೆ ಮಾಡಿದನು.

ಸೈನಿಕರು "ಆ ಮನುಷ್ಯನನ್ನು ನಾವು ಗುರ್ತಿಸಿ, ನೀವು ಶಿವಾಜೀ ಮಹಾರಾಜರಲ್ಲವೇ?" ಎಂದು ಕೇಳಿದೆವು

"ಹೌದಯ್ಯ, ಅದೇ ಹೆಸರು ನನ್ನದು. ಈಗ ಮಾತ್ರ ರಾಜನಲ್ಲ. ಕಾಡುಪಾಲು. ನೀವು ಮೊಗಲ್ ಸೈನಿಕರೋ?"

"ಹೌದು, ನಾವು ಮೊಗಲ್ ಸೈನಿಕರು. ಸೇನಾಧಿಪತಿ ಷಾಯಿಸ್ತಾ ಖಾನರ ಸೈನಿಕರು..."

"ನೀವೇಕೆ ಈ ಕಾಡಿನಲ್ಲಿ ಅಲೆದಾಡುತ್ತೀರಿ?"

"ನಿಮ್ಮನ್ನೇ ಹುಡುಕಿಕೊಂಡು ಬಹುಮಂದಿ ಸೈನಿಕರು ಕಾಡುಗುಡ್ಡ ಗಳಲ್ಲಿ ಅಲೆಯುತ್ತಿದ್ದಾರೆ. ನಮ್ಮ ಪುಣ್ಯ, ನೀವಿಲ್ಲಿ ಸಿಕ್ಕಿದಿರಿ." ಆ ಮನುಷ್ಯನು ನಗುತ್ತಾ ಹೇಳಿದನು: "ಸರಿ, ನಾನೇ ಶಿವಾಜೀ ಮಹಾರಾಜ. ನಾನು ಸಿಕ್ಕಿದಂತಾಯಿತಲ್ಲಾ, ನೀವೇನು ಮಾಡುವಿರಿ? ನನ್ನನ್ನು ಹಿಡಿಯುವಿರಾ? ಈಗ ಬೇಡ, ಹೊರಟುಹೋಗಿರಿ. ಸಮಯ ಬಂದಾಗ ನಾನೇ ಬಂದು ಷಾಯಿಸ್ತಾಖಾನರನ್ನು ಮುಖಾಮುಖಿ ಭೇಟಿಯಾಗುತ್ತೇನೆ" ಎಂದು ಹೇಳಿ ದನು. ನಾವು ಉತ್ತರ ಕೊಡಲಿಲ್ಲ. ಅವನನ್ನು ಹಿಡಿಯಬೇಕೆಂದು ಸಿದ್ಧ ಮಾಡಿಕೊಳ್ಳುತ್ತಿದ್ದೆವು. ಅವನು "ಕತ್ತಿಗಳನ್ನು ಮುಟ್ಟಬೇಡಿರಿ. ಶಿವಾಜೀ ಮಹಾರಾಜನನ್ನು ಹಿಡಿಯುವುದು ಅಷ್ಟು ಸುಲಭವಲ್ಲ. ನೋಡಿ, ನಿಮ್ಮ

ಖಾನ್ ಸಾಹೇಬರು ಈ ರಾಜ್ಯಕ್ಕೆ ಬಂದು ಒಂದು ಲಕ್ಷ ಸೈನ್ಯವನ್ನು ಇಟ್ಟು ಕೊಂಡು ಇನ್ನೂ ಶಿವಾಜಿಯನ್ನು ಹಿಡಿದಿಲ್ಲ. ನೀವು ಹತ್ತಾರು ಜನರು ದುಡುಕಬೇಡಿರಿ. ಒಂದೇ ಕ್ಷಣದಲ್ಲಿ ಪ್ರಾಣಿಗಳನ್ನು ಕಳೆದುಕೊಳ್ಳಬೇಕಾದೀತು. ನಿಮ್ಮನ್ನು ಬಿಟ್ಟುಬಿಟ್ಟಿದ್ದೇನೆ, ಹೋಗಿರಿ. ನಾನು ಕಾಡಿನಲ್ಲಿದ್ದರೂ ಅಲ್ಪ ಸ್ವಲ್ಪ ಸೈನ್ಯವಾದರೂ ಇಲ್ಲಿರುತ್ತೆ ಎಂದು ತಿಳಿಯಲಾರದಷ್ಟು ಮೂರ್ಖರೇ ದೀವು" ಎಂದು ಹೇಳಿದನು.

"ನಾವು ಸರಿಯಾಗಿ ಗುರುತು ಹಿಡಿದುಬಂದಿದ್ದೇವೆ."

ಷಾಯಿಸ್ತಾಖಾನನು ಈ ಮಾತುಗಳನ್ನು ನಂಬಿದನು. "ಒಳ್ಳೆಯದು. ನೀವು ಸುಮ್ಮನೆ ಬಂದಿದ್ದು ಸರಿಯೇ ಆಯಿತು. ಅವನು ಶಿವಾಜಿಯೇ ಎಂಬುದನ್ನು ನಾನೂ ಒಪ್ಪುತ್ತೇನೆ. ಇಲ್ಲಿಯೇ ಎಲ್ಲೋ ಸಮೀಪದಲ್ಲಿದ್ದಾನೆ. ಏನೋ ತಂತ್ರ ಮಾಡಿದ್ದಾನೆ. ನಿಮ್ಮನ್ನು ನೋಡಿದ ಮೇಲೆ ಪುನಃ ಅದೇ ಸ್ಥಳದಲ್ಲಿ ಅವನು ಸಿಕ್ಕುವುದು ಅಸಂಭವ. ನಿಮಗೆ ಇನಾಂ ಕೊಡಿಸುತ್ತೇನೆ ಕಳ್ಳನು ಎಲ್ಲಿದ್ದಾನೆಂದು ತಿಳಿದರೆ ಅದೂ ಕ್ಷೇಮವೇ. ಮುತ್ಸದ್ದಿಗಳು ಒಂದು ಪತ್ರ ಕೊಡುತ್ತಾರೆ. ಅದನ್ನು ತೆಗೆದುಕೊಂಡು ಹೋಗಿ ಅವನನ್ನು ಹುಡುಕಿ ಮುಟ್ಟಿಸಿ ಬನ್ನಿರಿ." ಎಂದು ಅಪ್ಪಣೆ ಮಾಡಿದನು. ಒಂದು ಅರ್ಥಗರ್ಭಿತ ವಾದ ವ್ಯಂಗ್ಯವಾದ ಪತ್ರವನ್ನು ಬರೆಸಿಕೊಟ್ಟನು.

"ಶಿವಾಜೀ, ನೀನು ಕಪಿಯಂತೆ ಕಾಡು ಸೇರಿದ್ದೀ. ಮರಗಳ ಮೇಲೆ ಕಾಲ ಕಳೆಯುತ್ತೀ. ವೀರನಾದರೆ ನಮ್ಮ ಎದುರಿಗೆ ಬಂದು ಯುದ್ಧಮಾಡು. ಮಳೆಗಾಲ ಅರ್ಧ ಕಳೆದುಹೋಗಿದೆ. ಇನ್ನು ಅರ್ಧ ಪೂರೈಸುತ್ತಲೇ ನಿನ್ನ ಕೋಟೆಗಳೆಲ್ಲವೂ ಪುಡಿಪುಡಿಯಾಗುತ್ತವೆ. ನೀನು ಪಾತಾಳಕ್ಕೆ ಹೋದರೂ ಬಿಡುವುದಿಲ್ಲ." ಈ ರೀತಿ ಪತ್ರ ಬರೆಸಿ ಆ ಸೈನಿಕರ ಕೈಗೆ ಕೊಟ್ಟನು. ಆ ಸೈನಿಕರು ಅದೇ ದಿನ ಆತುರವಾಗಿ ಅದೇ ಸ್ಥಳಕ್ಕೆ ಹುಡುಕಿಕೊಂಡುಹೋದರು. ಅದೇ ಮನುಷ್ಯನನ್ನು ಭೇಟಿಮಾಡಿದರು.

ಶಿವಾಜಿಯು ಪುನಃ "ಏನಿರಣ್ಣಾ ಬಂದಿರಿ? ಏನು ತಂದಿದ್ದೀರಿ? ಪಿಶಾಚಿ ಗಳಂತೆ ಈ ಕಾಡುಗಳಲ್ಲಿ ಅಲೆಯುವುದೇ ನಿಮ್ಮ ಹಣೆಯ ಬರಹ, ಅಯ್ಯೋ ಪಾಪ. ಮಳೆಯಲ್ಲಿ ತೊಯ್ದಿದ್ದೀರಿ. ಚಳಿಯಲ್ಲಿ ನಡುಗುತ್ತೀರಿ. ಅಲ್ಲಿ ಬೆಂಕಿ ಉರಿಯುತ್ತಿದೆ, ಸ್ವಲ್ಪ ಕಾಯಿ ಮಾಡಿಕೊಳ್ಳಿ. ನಮ್ಮ ಸೈನಿಕರು ಬಿಸಿ

ಗಂಜಿ ಕೊಡುತ್ತಾರೆ, ಕುಡಿಯಿರಿ. ನಾಲ್ಕು ರೊಟ್ಟಿ, ಖಾರ ಕೊಡುತ್ತಾರೆ, ತಿಂದು ಹೋಗಿರಿ. ನಿಮ್ಮ ಧನಿಗೆ ಹೇಳಿರಿ, ಶಿವಾಜಿಯು ಕೊಟ್ಟ ಅನ್ನ ಉಂಡು ಬಂದೆವೆಂದು. ಉಸನಾಸ ಸಾಯುವೇತಿರಿ" ಎಂದು ಹೇಳಿದನು.

ಸೈನಿಕರು ಛಳಿಯಿಂದ ನಡುಗುತ್ತಾ ಕಿಸೆಯಿಂದ ಪತ್ರ ತೆಗೆದು ಕೊಟ್ಟರು.

ಶಿವಾಜಿಯು ಓದಿಕೊಂಡು ನಗುತ್ತಾ, "ನಿಮ್ಮ ಖಾನನು ಯುದ್ಧಕ್ಕೆ ಬಂದವನು ಪತ್ರದಲ್ಲಿ ಪೊಳ್ಳುಮಾತುಗಳನ್ನು ಬರೆದು ಕಳುಹಿಸಿದ್ದಾನೆ.ಮಾತು ಗಳಿಂದ ದೂರು ಗೆಲ್ಲಲಾದೀತೆ? ಇರಲಿ. ಉತ್ತರ ಕೊಡಿಸುತ್ತೇನೆ. ಸ್ವಲ್ಪ ಆರಾಮು ಮಾಡಿಕೊಳ್ಳಿ" ಎಂದು ಹೇಳಿ ಹೊರಟುಹೋದನು.

ಮೊಗಲ್ ಸೈನಿಕರು ಹೊರಡಲು ಅನುವಾದರು. ಶಿವಾಜಿಯು ಪತ್ರ ವನ್ನು ಬರೆದುಕೊಟ್ಟನು.

"ಖಾನ್ ಸಾಹೇಬ, ಹಿಂದುಗಳ ಪುರಾಣ ಕೇಳಿಲ್ಲವೇ ನೀನು ? ಆ ಕಪಿ ಗಳೇ ಲಂಕಾಧಿಪತಿ, ರಾವಣಾಸುರನನ್ನು ಗೆದ್ದ ವೀರರು ಕಪಿಯೇ ಹಿಂದುಗಳ ದೈವ. ಆ ಕಪಿಗಳು ನಿನ್ನನ್ನೂ ಮಣ್ಣು ಪಾಲುಮಾಡುತ್ತಾರೆ" ಎಂದು ಉತ್ತರ ಬರೆದು ಕಳುಹಿಸಿದನು.

ಕೃಷ್ಣಾಷ್ಟಮಿ. ಹಿಂದುಗಳು ಪುಣೆಯಲ್ಲಿ ಕೃಷ್ಣ ಜಯಂತಿನಡೆಸುತ್ತಿದ್ದರು ಶ್ರಾವಣ ಮಾಸ, ಛಳಿಗಾಳಿಗಳ ಹೊಡೆತ. ಮಳೆಯ ಹನಿಗಳು ಬೀಳು ತ್ತಿದ್ದುವು, ನಿಲ್ಲುತ್ತಿದ್ದುವು. ಪುಣೆಯ ಗೋಪಾಲಕೃಷ್ಣ ಮಂದಿರದಲ್ಲಿ ಸಂತ ತುಕಾರಾಂರ ಪಟ್ಟಶಿಷ್ಯನೊಬ್ಬನು ತುಕಾರಾಂರ ಗೀತೆಗಳನ್ನು ಪಠಿಸು ತ್ತಿದ್ದನು. ಪ್ರವಚನ ಮಾಡುತ್ತಿದ್ದನು. ಅವನ ತೇಜಸ್ಸು' ಅವನ ದಿವ್ಯಕಂಠ, ವಿದ್ವತ್ತು, ಪ್ರವಚನಸಾಮರ್ಥ್ಯ ಇವುಗಳನ್ನು ಕೇಳಿ ಹಿಂದೂಜನ ಭಕ್ತಿಯಿಂದ ಗುಂಪುಗುಂಪಾಗಿ ಬಂದು ಆ ಕಾಲಕ್ಷೇಪದಲ್ಲಿ ಸೇರುತ್ತಿದ್ದರು. ಆ ಭಕ್ತವೃಂದದ ಮಧ್ಯದಲ್ಲಿ ಒಬ್ಬನು ಪದ್ಮಾಸನಾಸೀನನಾಗಿ ಭಕ್ತಿಯಿಂದ ಶ್ರವಣ ಮಾಡು ತ್ತಿದ್ದನು. ಪುಣೆಯ ರಾಜಬೀದಿಗಳಲ್ಲಿ, ಬಜಾರಿನಲ್ಲಿ ಸ್ವಲ್ಪ ಗಲಿಬಿಲಿ ಯಾಯಿತು. ಹಿಂದುಗಳು ಪಿಸುಪಿಸು ಮಾತನಾಡಿಕೊಳ್ಳುತ್ತಿದ್ದರು. ಕಾವಲುಗಾರ ಸೈನ್ಯದವರಿಗೆ ಇದೆಲ್ಲಾ ಸಂದೇಹಕ್ಕೆಡೆಕೊಟ್ಟಿತು. ಶಿವಾಜಿ,

ಶಿವಾಜಿ ಎಂಬ ಹೆಸರು ಅವರ ಕಿವಿಗಳಿಗೆ ಬಿದ್ದಿತು. ಮೊಗಲ್ ಸೈನಿಕರು ಎಚ್ಚೆತ್ತರು. ಷಾಯಿಸ್ತಾಖಾನರವರಿಗೆ, ಅಧಿಕಾರಿಗಳಿಂದ ಅಧಿಕಾರಿಗಳಿಗೆ, ಕ್ಷಣಹೊತ್ತಿನಲ್ಲಿ ಸಮಾಚಾರ ಮುಟ್ಟಿತು. ಆ ನಂತರ ಕಥಾಕಾಲಕ್ಷೇಪ ಸಮುದಾಯದಲ್ಲಿ ಶಿವಾಜಿಯಿದ್ದಾನೆ ಎಂಬ ಸಮಾಚಾರವನ್ನು ಅಧಿಕಾರಿಗಳು ಖಚಿತ ಮಾಡಿಕೊಂಡರು. ಸಶಸ್ತ್ರ ಸೈನ್ಯಗಳು ದೇವಾಲಯದ ಪ್ರಾಂಗಣವನ್ನು ಮುತ್ತಿದುವು. ದಳಪತಿಗಳು ಆ ಸಮೂಹದೊಳಗೆ ನುಗ್ಗಿ ಎಲ್ಲರ ಮುಖ ಗಳನ್ನೂ ನೋಡಿದರು. ಶಿವಾಜಿಯು ಸಿಕ್ಕಲಿಲ್ಲ. ಆ ಸೈನಿಕರ ಗಡಿಬಿಡಿಗೆ ಹೆದರಿ, ಕಥಾಕಾಲಕ್ಷೇಪಕ್ಕೆ ಬಂದಿದ್ದ ಸ್ತ್ರೀಪುರುಷರು ತಂಡತಂಡವಾಗಿ ಮನೆ ಗಳಿಗೆ ಹೊರಟುಹೋದರು

ಸೈನಿಕರು ಪ್ರತಿಯೊಬ್ಬರನ್ನೂ ಪರೀಕ್ಷೆಮಾಡಿ, ಹೊರಗೆ ಬಿಡುತ್ತಿದ್ದರು.

ಹೊರಗಡೆ "ಶಿವಾಜೀ-ಶಿವಾಜೀ, ಶಿವಾಜಿಯು ಓಡಿಹೋಗುತ್ತಿದ್ದಾನೆ" ಎಂಬ ಕೂಗು ಕೇಳಿಸಿತು. ಸೈನಿಕರೆಲ್ಲರೂ ಅತ್ತ ಓಡಿದರು ಬೀದಿ ಬೀದಿ ಗಳಲ್ಲಿ ವಾಗ್ವಾದವು ಹತ್ತಿತು. "ಶಿವಾಜಿಯೇ ಹೌದು. ನಾವು ನೋಡಿ ದ್ದೇವೆ. ಕಣ್ಣಾರೆ ಕಂಡೆವು. ಇಲ್ಲಿ ಹೋದನು-ಅಲ್ಲಿ ಹೋದನು" ಎಂದು ಜನರು ಹೇಳುತ್ತಿದ್ದರು. ಸೈನಿಕರು ಇತ್ತ ಕಡೆ, ಅತ್ತ ಕಡೆ, ಎಲ್ಲೆಡೆ ಯಲ್ಲಿಯೂ ಶಿವಾಜಿಯನ್ನು ಹುಡುಕಿಕೊಂಡು ಓಡಿಯಾಡುತ್ತಿದ್ದರು. ದೇವಾ ಲಯದ ಸುತ್ತಲೂ ಒಬ್ಬ ಸೈನಿಕನೂ ಇರಲಿಲ್ಲ. ಶಿವಾಜಿಯು ಕುಳಿತಲ್ಲಿಯೇ ಕುಳಿತಿದ್ದನು. ಸುತ್ತಲೂ ನೋಡಿದನು. ದೇವಾಲಯದ ಹೊರಬಾಗಿಲಿ ನಿಂದಲೇ ಹೊರಗಡೆ ಹೊರಟನು. ಅತ್ತಕಡೆ ಜನದಾರೂ ಇರಲಿಲ್ಲ. ಶಿವಾಜಿಯು ಹೊರಟುಹೋದನು.



ಷಾಯಿಸ್ತಾಖಾನನು ಕಿಲ್ಲೇದಾರನನ್ನೂ, ಕೊತ್ವಾಲರುಗಳನ್ನೂ ಕರೆಸಿ ಹುಕುಂ ಮಾಡಿದನು.

"ಈ ಶಿವಾಜಿಯು ಯುದ್ಧ ಮಾಡಲಾರದೇ ಓಡಿಹೋಗಿದ್ದಾನೆ. ಇಲ್ಲಿಯೇ ಎಲ್ಲಿಯೋ ಸಮೀಪದಲ್ಲಿ ಅಡಗಿರಬೇಕು. ಕಳ್ಳನಂತೆ ಆಗಾಗ ಈ ಪುಣೆಗೆ ಬಂದು ಹೋಗುತ್ತಾನೆಂದು ಕಾಣುತ್ತದೆ. ನಿನ್ನೆ ರಾತ್ರಿ ವೇಷ ಮರೆಸಿ ಕೊಂಡು ದೇವಾಲಯಕ್ಕೆ ಬಂದಿದ್ದುದು ನಿಜವೇ ಇರಬೇಕು. ಇಲ್ಲಿ ಒಳ ಗೊಳಗೇ ಪಿತೂರಿ ಮಾಡುತ್ತಾನೆ. ಇವೆಲ್ಲಾ ನಮ್ಮ ಮೊಗಲ್‌ಷಾಹಿಯ ಶಿಸ್ತಿಗೆ ವಿರೋಧ. ಈ ಹಿಂದೂಗಳು ಸಲೀಸಾಗಿ ನಡೆದುಕೊಳ್ಳಲಿ ಎಂದು ಸುಮ್ಮನಿದ್ದೆವು. ಇವರೆನ್ನೆಲ್ಲಾ ಈ ಪುಣೆಯಿಂದ ಹೊಡೆದು ಓಡಿಸುವುದು ಎಷ್ಟರ ಕೆಲಸ? ಇನ್ನು ಮೇಲೆ ಕೋಟೆ ಕೊತ್ತಲುಗಳಲ್ಲಿ ಬಂದೋಬಸ್ತು ಮಾಡಿಬಿಡಿ. ಹಿಂದುಗಳು ಯಾರೇ ಆಗಲೀ ಕೋಟೆಯಿಂದ ಹೊರಗೆ ಹೋಗ ಬೇಕಾದರೆ, ಒಳಗೆ ಬರಬೇಕಾದರೆ ಕಿಲ್ಲೇದಾರರಿಂದ ಪರವಾನಗಿ ಪಡೆಯ ಬೇಕು. ಸಂದೇಹ ಬಂದವರನ್ನು ಹಿಡಿದು ಹಾಕಬೇಕು" ಎಂದು ಕಟ್ಟಪ್ಪಣೆ ಮಾಡಿದನು.

ಅಂದಿನಿಂದ ಅದೇ ಹುಕುಂ ಜಾರಿಯಾಯಿತು. ಹಾಲು ಮೊಸರು ಮಾರುವವರೂ, ಸೊಪ್ಪು ಸೌದೆ ಹೊತ್ತು ತರುವವರೂ, ಕೂಲಿ-ಕಂಬಳಕ್ಕೆ ಬರುವವರೂ ಕಿಲ್ಲೇದಾರರ ಮುಂದೆ ಹೋಗಿ ನಿಂತು ಪರವಾನಗಿ ಪಡೆಯು ತ್ತಿದ್ದರು. ಬಹಳ ತನಿಖೆಯಿಂದ ಪರವಾನಗಿ ಕೊಡಲ್ಪಡುತ್ತಿತ್ತು.

ಇಷ್ಟರಲ್ಲಿಯೇ ಹತ್ತಾರು ಮಂದಿ ದೊಡ್ಡ ಮನುಷ್ಯರು ಬಂದು ಕಿಲ್ಲೇ ದಾರನನ್ನು ಭೇಟಿಮಾಡಿದರು.

"ಹಜರತ್ ಸಾಹೇಬರೆ, ನಮ್ಮ ಮನೆಯಲ್ಲಿ ಮದುವೆ. ಪಕ್ಕದ ಊರಿನಿಂದ ದಿಬ್ಬಣ ಕರೆತರಬೇಕು. ಪರವಾನಗಿ ಕೊಡಬೇಕು" ಎಂದು ಪ್ರಾರ್ಥನೆ ಮಾಡಿದರು. ಅವರೆಲ್ಲರೂ ಮೊಗಲ್ ಅಧಿಕಾರಿಗಳಿಗೆ ಬೇಕಾದವರೇ ಆಗಿದ್ದರು. ಅಂತಹವರಿಗೆ ಮದುವೆಗೆ ಪರವಾನಗಿ ಕೊಡದಿದ್ದರೆ ಹೇಗೆ? ಕಿಲ್ಲೇದಾರನು ಬಹಳವಾಗಿ ಯೋಚನೆ ಮಾಡಿದನು. "ಛೇ! ಛೇ! ಇವರು ದೊಡ್ಡ ಮನುಷ್ಯರು, ಸಂಭಾವಿತರು. ನಾವು ಪುಣೆಗೆ ಬಂದಾಗಿನಿಂದ ಒಂದೇ ಸಮನಾಗಿ ನಮ್ಮನ್ನು ಅನುಸರಿಸಿಕೊಂಡಿದ್ದಾರೆ. ಇವರಿಗೆ ಪರವಾನಗೆ ಕೊಡ ದಿರುವುದುಂಟೇ?" ಎಂದು ಯೋಚಿಸಿ ಮದುವೆ ಗಂಡನ್ನು ಮೆರವಣಿಗೆಯಲ್ಲಿ ಕರೆತರಲು ಅಪ್ಪಣೆ ಕೊಟ್ಟನು.

ಕುದುರೆಯ ಮೇಲೆ ಅಲಂಕಾರ ಮಾಡಿ ಮದುವಣಿಗನನ್ನು ಕೂರಿಸಿದ್ದರು. ಒಳ್ಳೆಯ ಧೋತ್ರವನ್ನುಟ್ಟು, ಅಂಗರೇಖನ್ನು ತೊಟ್ಟು, ಜರಿಯ ಪಗಡಿಯನ್ನು ಧರಿಸಿದ್ದನು. ಹಣೆಯಲ್ಲಿ ಚಂದನ ಕುಂಕುಮಗಳನ್ನು ಇಟ್ಟುಕೊಂಡಿದ್ದನು. ಕೊರಳಲ್ಲಿ ಮುತ್ತಿನ ಹಾರಗಳು, ಹೂಮಾಲೆಗಳು. ಕಾಲಿನಲ್ಲಿ ಕೆಂಪುಬಣ್ಣದ ಪಾಪಾಸನ್ನು ಮೆಟ್ಟಿದ್ದನು. ಕುದುರೆಗೂ ಪುಷ್ಪಮಾಲೆಗಳಿಂದ ಅಲಂಕಾರ ಮಾಡಿದ್ದರು. ಆಳುಗಳು ದೀವಟಿಗೆಗಳನ್ನು ಹಿಡಿದಿದ್ದರು. ಹಿಂದುಗಳೇ ವಾದ್ಯಘೋಷಮಾಡಿ, ಕೊಂಬು ಊದುತ್ತಿದ್ದರು. ತಮಟೆ ಹೊಡೆಯುತ್ತಿದ್ದರು. ಆ ವಾದ್ಯದ ಗುಂಪಿನ ಹಿಂದುಗಡೆ ಮದುವೆ ಬೀಗರು, ಸ್ತ್ರೀ-ಪುರುಷರ ಗುಂಪು. ಅವರೆಲ್ಲಾ ಅಂಗರೇಖು ಪಗಡಿಗಳನ್ನೂ ಪೀತಾಂಬರಗಳನ್ನೂ ಧರಿಸಿ ಅಲಂಕರಿಸಿಕೊಂಡಿದ್ದರು. ಪರಸ್ಪರ ಗಂಧ ಪುಷ್ಪಗಳನ್ನು ಕೊಡುತ್ತಾ, ಹಾಸ್ಯ ಮಾಡುತ್ತಾ ಬರುತ್ತಿದ್ದಿತು. ಮೆರವಣಿಗೆಯು ವಾಲಗ ತಾಳ ಮೇಳಗಳೊಡನೆ ಸಂಭ್ರಮದಿಂದ ರಾಜಮಾರ್ಗದಲ್ಲಿ ನಡೆದು ಹೋಗುತ್ತಿತ್ತು. ಕೋಟೆಯ ಹೆಬ್ಬಾಗಿಲಿನಲ್ಲಿ ಮತ್ತೊಂದು ದೊಡ್ಡ ಸೈನಿಕರ ಗುಂಪು ಅಟ್ಟಹಾಸಮಾಡುತ್ತಾ ಹಾಹಾಕಾರ ಮಾಡುತ್ತಾ ಬರುತ್ತಿದ್ದಿತು. ಅವರೆಲ್ಲಾ ಮೊಗಲ್ ಸೈನಿಕರೇ. ಅವರ ಮುಖಂಡನು ಪಹರೆಯ ಕೊತ್ವಾಲರಿಗೆ ಹೇಳಿದನು. “ಮರಾಠಾ ಸೈನಿಕರು ಮೊಗಲ್ ಶಿಬಿರದ ಮೇಲೆ ರಾತ್ರಿ ಹಠಾತ್ತನೆ ಬಿದ್ದು ಹಾವಳಿ ಮಾಡಿದರು. ಅವರೆಲ್ಲರನ್ನೂ ಹಿಡಿದು ಕಟ್ಟಿ ತಂದಿದ್ದೇವೆ. ಸೇನಾಧಿಪತಿಗಳ ಸಮ್ಮುಖಕ್ಕೆ ಕರೆದುಕೊಂಡು ಹೋಗುತ್ತೇವೆ.” ಕಾವಲುಗಾರರು ದಿರಿಸಿನ ಮೇಲಿದ್ದ ಮೊಗಲ್ ಸೈನಿಕರನ್ನು ತಡೆಯುವುದೆಂತು? ಅದಕ್ಕೆ ಹುಕುಂ ಇಲ್ಲ. ಮರಾಠಾ ಸೈನಿಕರನ್ನು ಹಗ್ಗಗಳಿಂದ ಕಟ್ಟಿದ್ದಾರೆ. ಮೊಗಲ್ ಸೈನಿಕರು ಬಾಯಿಗೆ ಬಂದಂತೆ ಬಯ್ಯುತ್ತಾ ಅವರನ್ನು ಹೊಡೆಯುತ್ತಿದ್ದಾರೆ. ಇವನ್ನೆಲ್ಲಾ ನೋಡಿ ನಿಜವೆಂದು ನಂಬಿದರು. ಈ ಸೈನ್ಯ ಸಮೂಹವೇ ಕೂಗುತ್ತಾ-ಅರಚುತ್ತಾ ಕೋಟೆಯೊಳಗೆ ಸರಾಗವಾಗಿ ಪ್ರವೇಶಮಾಡಿ ರಾಜಾರೋಷಾಗಿ ಪಟ್ಟಣದೊಳಗೆ ಹೋಗಿಬಿಟ್ಟಿತು. ಅವರೆಲ್ಲರೂ ಮೊಗಲ್ ವೇಷವನ್ನು ಧರಿಸಿದ್ದ ಮರಾಠಾ ಸೈನಿಕರು.

ಶಿವಾಜಿಯು ಮದುವೆಯ ಮೆರವಣಿಗೆಯಲ್ಲಿಯೇ ತಮಟೆಯನ್ನು ಬಾರಿಸುತ್ತಾ ನಗರವನ್ನು ಹೊಕ್ಕಿಬಿಟ್ಟಿದ್ದನು. ಪಟಪಟನೆ ಮಳೆ ಸುರಿಯ

ಲಾರಂಭಿಸಿತು. ಧಾರಾಕಾರವಾಗಿ ಸುರಿಯಿತು. ಈ ಗುಂಪೆಲ್ಲಾ ಎಲ್ಲಿಯೋ ಚದುರಿಹೋಯಿತು. ಎಲ್ಲಿಗೆ ಹೋಯಿತು? ದೂರದಲ್ಲಿ ನದಿಯ ದಂಡೆಯ ಮೇಲಿದ್ದ ಬಡವರ ಗುಡಿಸಲುಗಳನ್ನು ಸೇರಿಕೊಂಡಿತು. ನದೀ ಪ್ರವಾಹವು ತುಂಬಿ ಹರಿಯುತ್ತಿತ್ತು. ಕಲ್ಲು ಬಂಡೆಗಳಿಗೆ ತಗುಲಿ ಮೊರೆಯುತ್ತಿತ್ತು. ನದೀ ಪ್ರವಾಹದ ಶಬ್ದ, ಮಳೆಯ ಪಟಪಟ ಶಬ್ದ; ಮೋಡಗಳ ಗುಡುಗಿನ ಶಬ್ದ; ಮರಗಳ ಮರಮರ ಶಬ್ದ; ಬಿರುಗಾಳಿಯ ಸುಯ್ ಸುಯ್ ಶಬ್ದ— ಈ ಶಬ್ದಗಳಿಂದ ನಾಲ್ಕೂ ದಿಕ್ಕುಗಳೂ ತುಂಬಿಹೋಗಿದ್ದವು.

ಶಿವಾಜಿಯು ಆ ಮಳೆಗಾಳಿಗಳನ್ನು ಲೆಕ್ಕಿಸದೆ ತನ್ನ ಸೈನಿಕರೊಡನೆ ಅರಮನೆಯ ಹಿಂಭಾಗಕ್ಕೆ ಬಂದನು. ಅಲ್ಲಿ ಸುಮಾರು ಇನ್ನೂರು-ಮುನ್ನೂರು ಮಂದಿ ಮರಾಠಾ ಸೈನಿಕರು ಸಶಸ್ತ್ರರಾಗಿ ಜಮಾಯಿಸಿದರು. ಆ ಅರಮನೆಯ ಸುತ್ತಲೂ ಎತ್ತರವಾದ ಪೌಳಿಯ ಗೋಡೆ ಇತ್ತು. ಮುಂದುಗಡೆ ಅಬಿಸೀನಿಯಾದ ಸಿದ್ದೀ ಸಿಪಾಯಿಗಳು ಚಳಿಗೆ ಹೆದರಿ ಒಳಗೆ ಸೇರಿಕೊಂಡು ತಂಬಾಕು ಸೇದುತ್ತಾ ಒಬ್ಬರಾಗುತ್ತಲೊಬ್ಬರು ಗುಡಿಗುಡಿ ಸೇದುತ್ತಾ ತೂಕಡಿಸುತ್ತಾ ಕತ್ತಲೆ ಹರಿದು ಬೆಳಕಾಗಲೆಂದು ಹಾರೈಸುತ್ತ ಕುಳಿತಿದ್ದರು.

ಹಿಂದುಗಡೆ ಗಟ್ಟಿಮುಟ್ಟಾದ ಸೈನಿಕರೊಡನೆ ಶಿವಾಜಿಯು ಪೌಳಿಯ ಗೋಡೆಯನ್ನು ಹತ್ತಿ ಅರಮನೆಯ ಅಂಗಳಕ್ಕೆ ಹಾರಿದನು. ಮೆಲ್ಲಮೆಲ್ಲಗೆ ಸುಳಿದು ಕಟ್ಟಡದ ಸಮೀಪಕ್ಕೆ ಹೋದನು. ಹಿಂದುಗಡೆ ಅಡಿಗೆಯ ಮನೆಯಲ್ಲಿ ಅಡಿಗೆಯವರು ಪಾಕದಲ್ಲಿ ತೊಡಗಿದ್ದರು. ಬೆಳಗಾಗುವುದರೊಳಗೆ ಸೇನಾಧಿಪತಿಗಳಿಗೆ, ಅಂತಃಪುರ ನಿವಾಸಿನಿಯರಿಗೆ, ಪಕ್ವಾನ್ನಗಳು ಸಿದ್ಧವಾಗಬೇಕು. ಅಡಿಗೆಯವರು ಲಗುಬಗೆಯಿಂದ ಪಾಕ ಕಾರ್ಯದಲ್ಲಿ ತೊಡಗಿದ್ದರು. ಒಂದು ಕಡೆ ತರಕಾರಿಗಳನ್ನು ಕತ್ತರಿಸುತ್ತಿದ್ದರು. ಮತ್ತೊಂದು ಕಡೆ ಮಸಾಲೆಗಳನ್ನು ಹುರಿದು ಕುಟ್ಟುತ್ತಿದ್ದರು. ಬಾಗಿಲು ತೆಗೆದಿದ್ದಿತು. ಮರಾಠಾ ಸೈನಿಕರು ಒಳಗೆ ನುಗ್ಗಿ ಹಠಾತ್ತನೆ ಅಡಿಗೆಯವರನ್ನೆಲ್ಲಾ ಹಿಡಿದು ಕೂಗದಂತೆ ಬಾಯಿ ಕಟ್ಟಿ ಕತ್ತರಿಸಿ ಬಿಸುಟರು. ಆ ಅರಮನೆಯ ಒಳಗಿನ ಸಂವಿಧಾನವನ್ನೆಲ್ಲಾ ಆ ಮರಾಠಾ ಸೈನಿಕರು ಅರಿತಿದ್ದರು. ಮೆಟ್ಟಿಲುಗಳನ್ನು ಹತ್ತಿ ಶಯ್ಯಾಗೃಹದ ಪಕ್ಕಕ್ಕೆ ಹೋದರು. ಅಲ್ಲಿ ಕಾವಲಿನ ಖೋಜಾಗಳು ಗೊರಕೆ ಹೊಡೆಯು

ತ್ತಿದ್ದರು ಮಧ್ಯೆ ಒಂದೇ ಒಂದು ಮಣ್ಣಿನ ಗೋಡೆ. ಹಾರೆ ಪಿಕಾಸೆಗಳನ್ನು ತೆಗೆದುಕೊಂಡು ಹೆಚ್ಚು ಸದ್ದಾಗದಂತೆ ಗೋಡೆಯನ್ನು ಒಡೆಯತೊಡಗಿದರು. ಭೋರೆಂದು ಸುರಿಯುತ್ತಿದ್ದ ಮಳೆಯ ಸಪ್ಪಳದಲ್ಲಿ ಹಾರೆ ಪಿಕಾಸೆಗಳ ಸದ್ದು ಲೀನವಾಗಿ ಹೋಗಿತ್ತು.

ಪಹರೆಯ ಖೋಜಾ ಒಬ್ಬನು ಕಣ್ಣೊರಸಿಕೊಂಡು ಎದ್ದನು. ಕಿವಿಗೊಟ್ಟು ಆಲೈಸಿದನು. ಏನೋ ಥಪ್ ಥಪ್ ಸದ್ದು. ಗಾಬರಿಗೊಂಡನು. ಶಯನಗೃಹದೊಳಗೆ ನುಗ್ಗಿ ನಿದ್ರೆಯಲ್ಲಿದ್ದ ಸೇನಾಧಿಪತಿಯ ಮೈ ಅಲುಗಾಡಿಸಿ ಎಚ್ಚರಗೊಳಿಸಿದನು, ಅರನಿದ್ರೆಯಲ್ಲಿ ಎಚ್ಚೆತ್ತ ಷಾಯಿಸ್ತಾಖಾನನು ಹಾಗೆಯೇ ಕಣ್ಣು ಬಿಟ್ಟು ನೋಡಿ "ಏನದು ? ಏಕೆ ನಿದ್ರೆಯಿರದ ಎಚ್ಚರಗೊಳಿಸಿದೆ ?" ಎಂದು ಗದ್ದರಿಸಿದನು. ಆ ಖೋಜಾ ಪಹರೆಯವನು "ಜಹಾಪನಾ, ಏನೋ ಜನರು ಓಡಿಯಾಡುವ ಸದ್ದು ಕೇಳುತ್ತವೆ. ಮಾತುಗಳು ಕೇಳಿಸುತ್ತವೆ. ಏನೋ ಅಪಾಯ" ಎಂದು ಗಾಬರಿಯಿಂದ ಹೇಳಿದನು. ಖಾನನ ಕಿವಿಗೂ ಮಾತುಗಳ ಸದ್ದು ಕೇಳಿಸಿತು. "ಹೋ, ಗೊತ್ತಾಯಿತು, ಅದು ಅಡಿಗೆಯವರ ಗಡಿಬಿಡಿ. ಅವರು ನಿತ್ಯವೂ ಹಾಗೆಯೇ ಮಾಡುತ್ತಾರೆ. ಅದನ್ನು ತಪ್ಪಿಸುವುದಕ್ಕಾಗುವುದಿಲ್ಲ. ಹೋಗು. ಬೇಕೂಫ್. ಬೆಕ್ಕು ಹಾರಿದ್ದನ್ನು ನೋಡಿ ಸೈತಾನ ಬಂತೆಂದು ಭಯಪಡುವ ಪುಕ್ಕ ಮನುಷ್ಯ ನೀನು" ಎಂದನು. ಖೋಜಾ ಶಯನಗೃಹದಿಂದ ಹೊರಗೆ ಹೋಗದೇ ಹೆದರುತ್ತಾ ಗೋಡೆಯ ಕಡೆಗೆ ಕೈ ತೋರಿಸುತ್ತಾ "ಜಹಾಪನಾ, ಆ ಸದ್ದು ಕೇಳಿ" ಎಂದನು. ಖಾನನು ರೇಗಿಕೊಂಡು "ಬೇಕೂಫ, ಒಳ್ಳೆಯ ಬೆಳಗಿನ ಝಾವದ ನಿದ್ದೆ ಕೆಡಿಸಲು ಸೈತಾನನಂತೆ ಬಂದಿದ್ದೀ. ಅತ್ತ ಕಡೆ ಕುದುರೆಯ ಲಾಯವಿದೆ. ಕುದುರೆ ಕಾಲು ಬಡಿಯುವ ಲಾಳದ ಸದ್ದದು. ಹೋಗು, ನಿನ್ನ ತಲೆಯಲ್ಲಿ ಮಣ್ಣು ತುಂಬಿದೆ" ಎಂದು ಗದ್ದರಿಸಿ ಮುಸುಗೆಳೆದುಕೊಂಡು ಮಲಗಿದನು.

ಗೋಡೆಯೊಳಗೆ ದೊಡ್ಡ ಕಂಡಿಯು ಬಿತ್ತು. ಶಿವಾಜಿಯು ನಾಲ್ವರು ಭಟರೊಡನೆ ಆ ಕನ್ನಕಂಡಿಯಿಂದ ಶಯ್ಯಾಗೃಹದೊಳಕ್ಕೆ ನುಗ್ಗಿ ಷಾಯಿಸ್ತಾಖಾನನ್ನು ಹಿಡಿದುಕೊಂಡನು. ಷಾಯಿಸ್ತಾಖಾನನು ಎಚ್ಚರಗೊಂಡು ಜಗ್ಗಾಡಿ ಆ ನಾಲ್ವರು ಭಟರನ್ನೂ ತಳ್ಳಿ ಹಿಂದುಗಡೆ ತೆರೆದಿದ್ದ ಬಾಗಿಲಿನಿಂದ

ಜ್ವಲಿಸುತ್ತಿತ್ತು. ಅವನ ದೃಷ್ಟಿಯು ಎದುರಿಗೆ ಕುಳಿತಿದ್ದ ಜೋದ್‌ಪುರದ ಮಹಾರಾಜನ ಮೇಲೆ ಬಿತ್ತು. ಜೋದ್‌ಪುರದ ಮಹಾರಾಜನು ರಕ್ಷಣಾಧಿಕಾರಿಯಾಗಿದ್ದನು. ಅವನನ್ನು ದೆಹಲಿಯ ದರಬಾರಿನಲ್ಲಿ ಪ್ರಶಂಸೆ ಮಾಡಿ ಬಾದಷಹನೇ ಖುದ್ದಾಗಿ ಷಾಯಿಸ್ತಾಖಾನನೊಡನೆ ರಕ್ಷಣಾಧಿಕಾರಿಯಾಗಿ ನೇಮಿಸಿ ಕಳುಹಿಸಿದ್ದನು. ಷಾಯಿಸ್ತಾಖಾನನು "ಮಹರಾಜಾ, ನೀನೆಂತಹ ರಾಜಪೂತ. ರಕ್ಷಣೆಯ ಪೂರ್ಣ ಜವಾಬ್ದಾರಿಯು ನಿನ್ನದಲ್ಲವೇ ? ರಾತ್ರಿ ಕಾವಲಿನ ಏರ್ಪಾಡು ನಿನಗೆ ಮರೆತುಹೋಯಿತೇ? ಅಂತಃಪುರದಲ್ಲಿ ಸ್ತ್ರೀಲೋಲನಾಗಿ ಬಿದ್ದಿದ್ದೆ. ಬಾದಷಹರು ನಿನ್ನಂತಹ ಹೇಡಿಗಳನ್ನು, ಸುಖ ಲೋಲುಪರನ್ನ ದೊಡ್ಡದೊಡ್ಡ ಉನ್ನತಾಧಿಕಾರಗಳಿಗೆ ನೇಮಿಸಿ ನಮ್ಮಂತವರ ಪರಾಕ್ರಮಕ್ಕೆ ಕಳಂಕವನ್ನುಂಟುಮಾಡುತ್ತಾರೆ. ಇಷ್ಟು ಕಟ್ಟೆಚ್ಚರವಿರುವಾಗ ಶಿವಾಜಿಯು ಈ ಕೋಟೆಯೊಳಗೆ ಹೇಗೆ ಪ್ರವೇಶಮಾಡಿದ? ಇಷ್ಟು ಜನ ಮರಾಠಾ ಸೈನಿಕರು ಕೋಟೆಯೊಳಗೆ ಹೇಗೆ ಬಂದರು ? ಆ ಶಿವಾಜಿಯು ಕಳ್ಳ–ಹಿಂದೂ– ಕಾಫರ. ನೀನೂ ಹಿಂದೂ– ಕಾಫರ–ಹೇಡಿ" ಎಂದು ಕ್ರೋಧಾವೇಶದಿಂದ ಮೂದಲಿಸಿದನು.

ಜೋದ್‌ಪುರದ ಮಹಾರಾಜನಿಗೆ ನೂರು ಅಲುಗುಗಳಿಂದ ತಿವಿದಂತಾಯಿತು. ಮುಖವು ಕೆಂಪೇರಿತು. ಶರೀರವು ಕಂಪಿಸುತ್ತಿತ್ತು. ತುಟಿಗಳು ಅದುರುತ್ತಿತ್ತು. ಅವನು ಎದ್ದು ನಿಂತು "ಷಾಯಿಸ್ತಾಖಾನ್, ರಾಜಪೂತರ ಮಾತನ್ನಾಡಲು ನಿನಗೆಷ್ಟು ಧೈರ್ಯ! ಇಲ್ಲೀ ನಿನ್ನನ್ನು ಕತ್ತರಿಸಿಬಿಡುತ್ತಿದ್ದೆ ಮೊಗಲ್ ಬಾದಷಹರನ್ನು ನೆನೆದು ನಿನ್ನನ್ನು ಕ್ಷಮಿಸಿದ್ದೇನೆ. ನಾನು ಒಂದು ಕ್ಷಣವೂ ನಿನ್ನ ಅಧಿಕಾರದ ಶಿಬಿರದಲ್ಲಿರುವುದಿಲ್ಲ" ಎಂದು ಹೇಳಿ ಸಭೆಯಿಂದ ಎದ್ದು ಹೊರಟುಹೋದನು.

ಸಭೆಯಲ್ಲೆಲ್ಲಾ ಹಾಹಾಕಾರವೆದ್ದಿತು. ಗಲಿಬಿಲಿಯಾಯಿತು. ಅಧಿಕಾರಿಗಳು ಗುಸು ಗುಸು–ಪಿಸುಪಿಸನೆ ಮಾತನಾಡಿಕೊಂಡರು. ಅವರವರಲ್ಲೇ 'ಖಾನನೂ ಸರಿ–ಮಹಾರಾಜನೂ ಸರಿ' ಎಂದು ಮಾತುಗಳು ಹೊರಟವು. ಈ ಮಾತುಗಳು ಖಾನನ ಕಿವಿಗೂ ಬಿದ್ದವು. ಖಾನನು ಕೈಮೀರಿಹೋಗಿದೆ ಎಂದುಕೊಂಡು ಅರಮನೆಯೊಳಗೆ ಪ್ರವೇಶ ಮಾಡಿದನು.

ಖಾನನು ಆ ದಿನ ಅನ್ನಾಹಾರಗಳನ್ನು ಭುಜಿಸಲಿಲ್ಲ. ಸೇನಾಧಿಪತಿಗಳಿಗೆ ಅಪ್ಪಣೆ ಮಾಡಿದನು. "ನಡೆಯಿರಿ, ಸೈನ್ಯಗಳನ್ನು ತೆಗೆದುಕೊಂಡು ಬೆಟ್ಟಗಳ ಕಡೆಗೆ ಹೊರಡಿರಿ. ಅಶ್ವಸೈನ್ಯಗಳು ಹೊರಡಲಿ. ಬಂದೂಕಿನ ಸೈನ್ಯಗಳು ಹೊರಡಲಿ. ತೋಪು ಗಾಡಿಗಳು ನಡೆಯಲಿ. ಸಂಧ್ಯಾಕಾಲದೊಳಗೆ ಈ ಪ್ರಾಂತ್ಯದಲ್ಲೆಲ್ಲೂ ಮರಾಠಾ ಸೈನಿಕರು ಇಲ್ಲದಂತೆ ನಿರ್ಮೂಲ ಮಾಡಬೇಕು. ಶಿವಾಜಿಯನ್ನು ಹಿಡಿದು ತರಬೇಕು." ಎಂದು ಅಪ್ಪಣೆ ಮಾಡಿದನು. ತಾನೇ ಸ್ವತಃ ಆನೆಯ ಮೇಲೆ ಕುಳಿತು ಸೈನ್ಯಗಳನ್ನು ನಡೆಸಿಕೊಂಡು ಮುಂದೆ ಹೊರಟನು. ಬೆಟ್ಟದ ಸಾಲುಗಳಲ್ಲಿ ಮೊಗಲ್ ಸೈನಿಕರಿಗೂ ಮರಾಠಾ ಸೈನಿಕರಿಗೂ ಯುದ್ಧವಾಯಿತು. ಮಧ್ಯಾಹ್ನವಾಯಿತು. ಮೂರು ಝಾವದ ಹೊತ್ತಾಯಿತು. ಎರಡು ಸೈನ್ಯಗಳೂ ಒಂದು ಕತ್ತಿಯ ಮೊನೆಯಷ್ಟು ಹಿಂತೆಗೆಯಲಿಲ್ಲ. ಮೊಗಲ್ ರಾಹುತರು ತೋಪುಗಳನ್ನು ಎತ್ತಿ ಕಟ್ಟಿ ಹಾರಿಸಿದರು. ತೋಪುಗಳು ಹಾರಲೇ ಇಲ್ಲ. ಮಳೆಯಲ್ಲಿ ನೆನೆದು ಕೆಟ್ಟುಹೋಗಿದ್ದವು. ಮೊಗಲ್ ಸೈನಿಕರು ಗಾಬರಿಗೊಂಡು ಹಿಮ್ಮೆಟ್ಟಿದರು. ಷಾಯಿಸ್ತಾಖಾನನು ಆನೆಯನ್ನು ಅಂಕುಶದಿಂದ ತಿವಿದು ಮುಂದೆ ನುಗ್ಗಿಸಿದನು. ಆನೆಯು ಅಬ್ಬರಿಸುತ್ತಾ ಅಭಟಿಸುತ್ತಾ ಮುಂದೆ ನುಗ್ಗಿತು. ಮರಾಠಾ ಸೇನಾಧಿಪತಿ ನೇತಾಜಿಯು ಒಂದೇ ಏಟಿನಿಂದ ಆನೆಯು ಎತ್ತಿದ ಸೊಂಡಿಲನ್ನು ಕತ್ತರಿಸಿ ಹಾಕಿದನು. ಆನೆಯು ಚೀರುತ್ತಾ ರಭಸದಿಂದ ಮುನ್ನುಗ್ಗಿತು. ಮರಾಠರು ಈಟಿ, ಭಲ್ಲೆಗಳಿಂದ ಆನೆಯನ್ನು ನಾಲ್ಕು ಕಡೆಗಳಿಂದ ತಿವಿದು ಕೆಡವಿದರು. ಆನೆಯು ಚೀತ್ಕರಿಸುತ್ತಲೇ ನೆಲಕ್ಕುರುಳಿತು. ಷಾಯಿಸ್ತಾಖಾನನು ಆನೆಯಿಂದ ನೆಗೆದು ಹಾರಿ ಕೈಯಲ್ಲಿದ್ದ ಖಡ್ಗದಿಂದ ಮರಾಠರನ್ನು ಕತ್ತರಿಸಿ ಹಾಕುತ್ತಾ ಓಡಿಹೋದನು. ಮರಾಠರು ರಣಭೇರಿಯನ್ನು ಬಾರಿಸಿದರು.

ತುತ್ತೂರಿಗಳನ್ನು ಊದಿದರು. ಕಾವಿಯ ಬಣ್ಣದ ಧ್ವಜಗಳನ್ನು ಎತ್ತಿ ಮೆರಿಸಿದರು. ಈ ಜಯಧ್ವನಿಯನ್ನು ಕೇಳಿ ಅಳಿದುಳಿದ ಮೊಗಲ್ ಸೈನ್ಯಗಳು ಓಡಿಹೋದವು. ಷಾಯಿಸ್ತಾಖಾನನು ವ್ಯಗ್ರಚಿತ್ತನಾಗಿ ಅರಮನೆಗೆ ಹೋಗಿ ಸೇರಿದನು.

ಸಮೀಪದಲ್ಲಿಯೇ ಹತ್ತುಸಾವಿರ ಮೊಗಲ್ ಅಶ್ವಾರೋಹಿ ಸೈನ್ಯದ ಶಿಬಿರವಿತ್ತು. ಮರಾಠರು ಆ ಶಿಬಿರದ ಮೇಲೆ ಧಾಳಿ ಮಾಡಿದರು. ಹುರುಪೆದ್ದ ಮೊಗಲ್ ಸೈನ್ಯಗಳು ಮರಾಠರನ್ನು ಅಟ್ಟಿಕೊಂಡು ಬಂದವು. ಮರಾಠರು ವನಪ್ರದೇಶದ ಕಡೆಗೆ ಹಿಮ್ಮೆಟ್ಟಿದರು. ಅಲ್ಲಿ ಮರಗಿಡಗಳ ಮೇಲೆಲ್ಲಾ ದೊಂದಿಗಳನ್ನು ಕಟ್ಟಿ ಹತ್ತಿಸಿದರು. ಸಾವಿರ ಸಾವಿರ ಸಂಖ್ಯೆಯ ದೊಂದಿಗಳು ಉರಿಯುತ್ತಿದ್ದವು. ಮೊಗಲ್ ಸೈನಿಕರು ಆ ದೃಶ್ಯವನ್ನು ದೂರದಿಂದ ಕಂಡು 'ಅಲ್ಲಿ ಬ್ರಹ್ಮಾಂಡ ಮರಾಠಾ ಸೈನ್ಯಗಳಿವೆ. ಅತ್ತಕಡೆ ಹೋದರೆ ಯಮಲೋಕದ ಮಹಾದ್ವಾರವನ್ನು ಹೊಕ್ಕಂತೆಯೇ ಆಗುತ್ತದೆ' ಎಂದು ಹೇಳಿಕೊಂಡು ಹಿಮ್ಮೆಟ್ಟಿದರು ಮರಾಠಾ ಸೈನ್ಯಗಳು ಅವರನ್ನು ಬೆದರಿಸಿಕೊಂಡು ಬಂದವು. ತುರುಷ್ಕ ಸೈನ್ಯವು ಚೆಲ್ಲಾಪಿಲ್ಲಿಯಾಗಿ ಹೋಯಿತು. ಮರಾಠರು ಕೈಗೆ ಸಿಕ್ಕಿದ ಬಂದೂಕುಗಳನ್ನೂ ಕತ್ತಿ ಗುರಾಣಿಗಳನ್ನೂ ದಿರುಸುಗಳನ್ನೂ ಹೊತ್ತುಕೊಂಡು ಹೋದರು. ತೋಪುಗಳನ್ನು ಸಾಗಿಸಿಕೊಂಡು ಹೋದರು. ಅತ್ತಿತ್ತ ಧಾವಿಸುತ್ತಿದ್ದ ಕುದುರೆಗಳನ್ನು ಹಿಡಿದು ಹಗ್ಗಗಳನ್ನು ಕಟ್ಟಿ ಓಡಿಸಿಕೊಂಡು ಹೋದರು.

ಷಾಯಿಸ್ತಾಖಾನನು ಚಿಂತಾಕ್ರಾಂತನಾಗಿ ಅರಮನೆಯಲ್ಲಿಯೇ ಯಾರಿಗೂ ಮುಖ ತೋರಿಸದೇ ಕುಳಿತುಬಿಟ್ಟನು. ಚದುರಿ ಹೋದ ಮೊಗಲ್ ಸೈನ್ಯವನ್ನೆಲ್ಲಾ ಸೇರಿಸುವಂತೆ ಅಪ್ಪಣೆಮಾಡಿದನು. ಕಿಲ್ಲೇದಾರರನ್ನೂ ಕೊತ್ವಾಲರನ್ನೂ ಕರೆಸಿ "ಈ ಪುಣೆಯಲ್ಲಿ ಒಬ್ಬ ಹಿಂದುವೂ ಇರಕೂಡದು. ಎಲ್ಲರನ್ನೂ ಹೊರಗಟ್ಟಿಬಿಡಿ. ಎಲ್ಲ ಮನೆಗಳನ್ನು ಸೈನಿಕರು ಆಕ್ರಮಿಸಿಕೊಳ್ಳಲಿ" ಎಂದು ಅಪ್ಪಣೆ ಮಾಡಿದನು. ಮುಂದೇನು ಮಾಡಬೇಕು ಎಂಬ ಯೋಚನೆಯೇ ತೋರದೆ ಚಿಂತಾಮಗ್ನನಾಗಿ ಎರಡು ತಿಂಗಳ ಕಾಲ ಕೂತಲ್ಲಿಯೇ ಕುಳಿತುಬಿಟ್ಟನು.

ಈ ಸಮಾಚಾರಗಳೆಲ್ಲಾ ದಿಹಲಿಗೆ ಮುಟ್ಟಿದ್ದವು. ದೂತರು ಖಾತ್ರಿ ಸಮಾಚಾರಗಳನ್ನು ಬಾದಷಹನ ಕಿವಿಗೆ ಮುಟ್ಟಿಸಿದರು. ಬಾದಷಹನು ಕ್ರೋಧದಿಂದ ಉದ್ದೀಪಿತನಾದನು. ಆದರೆ ಒಂದು ಮಾತನ್ನೂ ಆಡಲಿಲ್ಲ. ಷಾಯಿಸ್ತಾಖಾನನು ದೊಡ್ಡ ಸೇನಾಧಿಪತಿ. ಎಷ್ಟೋ ಯುದ್ಧಗಳಲ್ಲಿ ವಿಜಯ ಗಳಿಸಿದ ಮಹಾಶೂರ. ಅವನಿಗೆ ಇಂತಹ ಅಪಮಾನವಾಗಿದೆ. ಪರಾಕ್ರಮ ಶಾಲಿಯಾದ ಪುತ್ರನನ್ನು ಕಳೆದುಕೊಂಡಿದ್ದಾನೆ. ಆದರೇನು? ಶಿವಾಜಿ ಯಿಂದ ಪರಾಭವ ಹೊಂದಿದ್ದಾನೆ. ಆ ಶಿವಾಜಿಯು ಒಂದಾದರೂ ದೊಡ ಯುದ್ಧವನ್ನು ಮಾಡಿಯೇ ಇಲ್ಲ. ಕಳ್ಳನಂತೆ ನುಗ್ಗಿ ಗಲಭೆಮಾಡಿಬಿಡುತ್ತಾನೆ. ಹದ್ದಿನಂತೆ ಎತ್ತಿಕೊಂಡು ಹಾರಿಹೋಗುತ್ತಾನೆ. ಛೀ ! ಛೀ ! ಏನಾದರೇನು, ಈ ದೋಷವು ನಮ್ಮ ಸೇನಾಧಿಪತಿಗಳದೇ ಆಗಿದೆ. ಎಷ್ಟು ಮೊಗಲ್ ಸೈನ್ಯಗಳು ದಕ್ಕನ್ನಿಗೆ ಹೋಗಿವೆ. ಎಷ್ಟು ಹಣ ದಿಹಲಿಯಿಂದ ಹೊಳೆಯಂತೆ ಹರಿದುಹೋಗಿದೆ ! ಎಷ್ಟು ಸಾಮಾನು ಸರಂಜಾಮುಗಳು ಹೋಗಿವೆ. ಇವೆಲ್ಲಾ ಅಟ್ಟಹಾಸಗಳಿಗೂ ದೆಹಲಿಗೆ ಬರುತ್ತಿರುವ ಪ್ರತಿಫಲವೇನು? ಪರಾಭವ ಪರಾಜಯಗಳೇ ಆಗಿವೆ. ಮೊಗಲ್ ಸಿಂಹಾಸನಕ್ಕೆ ಮಸಿ ಬಳಿ ದಂತಾಗಿದೆ. ಯಾರೇ ಆಗಲೀ, ಎಂತಹವರೇ ಆಗಲೀ ಅವರಿಗೆ ತಕ್ಕಶಿಕ್ಷೆ ಯನ್ನು ವಿಧಿಸಬೇಬೇಕೆಂದು ನಿಶ್ಚಯಮಾಡಿಕೊಂಡನು. ಷಾಯಿಸ್ತಾಖಾನನಿಗೆ ಖುದ್ದಾಗಿ ಒಂದು ಪತ್ರ ಬರೆದು ಕಳುಹಿಸಿದನು.

"ಸೇನಾಧಿಪತಿ ಷಾಯಿಸ್ತಾಖಾನರವರೇ,

"ನಿಮ್ಮ ಪರಾಭವವನ್ನು ಕೇಳಿ ನಮಗೆ ವ್ಯಸನವಾಗುತ್ತದೆ. ನಿಮ್ಮೊಡನೆ ಕಳುಹಿಸಿರುವ ಸೈನ್ಯಗಳೆಷ್ಟು ! ಸೇನಾಧಿಪತಿಗಳೆಷ್ಟು ಮಂದಿ ! ಶಸ್ತ್ರಾಸ್ತ್ರಗಳೆಷ್ಟು ! ಹಣವೆಷ್ಟು ! ನಿಮ್ಮ ಪರಾಜಯವು ಮೊಗಲ್ ದರ ಬಾರಿಗ ಕಳಂಕಪ್ರಾಯವಾಗಿದೆ. ಆ ರಾಜ್ಯದಲ್ಲಿ ನಿಮ್ಮ ಅಮಲ್ ಹೇಗೆ ನಡೆಯಬೇಕು. ನೀವು ಖಂಡಿಸಲ್ಪಟ್ಟಿದ್ದೀರಿ. ಅಂತಹ ದೊಡ್ಡ ಅಧಿಕಾರಕ್ಕೆ ನೀವು ಲಾಯಖ್ಖಿಲ್ಲ. ತಪ್ಪಿಗೆ ತಕ್ಕದಂಡ, ಯೋಗ್ಯತೆಗೆ ತಕ್ಕ ಅಧಿಕಾರ ನಿರ್ದೇಶ ಮಾಡುವುದು ಬಾದಷಾಹಿಯ ಪ್ರಥಮ ಕರ್ತವ್ಯ. ನೀವು ಬಂಗಾಳಕ್ಕೆ ವರ್ಗಾಯಿಸಲ್ಪಟ್ಟಿದ್ದೀರಿ. ನಿಮ್ಮ ಅಧಿಕಾರಗಳನ್ನೂ ಸೈನ್ಯ ಗಳನ್ನೂ ಯುವರಾಜ ಆಜಂಷಃನಿಗೆ ಒಪ್ಪಿಸಿ ನೀವು ಬಂಗಾಳಕ್ಕೆ ಹೊರಡ

ಶಕ್ಯವಷ್ಟು. ದೆಹಲಿಗೆ ಈಗ ನೀವು ಬರುವ ಕಾರಣವಿಲ್ಲ. ಇಲ್ಲಿಗೆ ಬಂದರೂ ಮರ್ಯಾದೆ ಸಿಗಲಾರದು. ಬೆಟ್ಟದ ಕಳ್ಳ ಶಿವಾಜಿಯಿಂದ ಪರಾಭವ ಹೊಂದಿದವರಿಗೆ ದೆಹಲಿಯ ದರಬಾರಿನಲ್ಲಿ ಮನ್ನಣೆ ದೊರೆಯಕೂಡದು.

—ಖುದಾಯತ್ ಔರಂಗಜೇಬ್."

ಈ ಪತ್ರವನ್ನು ದೆಹಲಿಯ ದರ್ಬಾರಿನ ದೂತರು ಬಂದು ಶಾಯಿಸ್ತಾಖಾನನಿಗೆ ಒಪ್ಪಿಸಿದರು.

ಬಾದಶಹರ ದರಬಾರಿನಿಂದ ಅಹಮದ್‌ನಗರದಲ್ಲಿದ್ದ ಯುವರಾಜರವರಿಗೂ ಆಜ್ಞಾಪತ್ರವು ಹೋಗಿತ್ತು. ಆಜಂಶಹನು ಪುಣೆಗೆ ಬಂದು ಶಾಯಿಸ್ತಾಖಾನನ್ನು ಮರ್ಯಾದೆಯಿಂದ ಕಂಡು ಸಂತೈಸಿ ಬಾದಶಹರ ಅಪ್ಪಣೆಯ ಪ್ರಕಾರ ಅಧಿಕಾರವನ್ನು ವಹಿಸಿಕೊಂಡನು. ಶಾಯಿಸ್ತಾಖಾನನು ಯುವರಾಜನೊಡನೆ ತನ್ನ ದುಃಖವನ್ನು ಬಗೆದುಕೊಂಡನು. "ಯುವರಾಜ, ನಾನೆಂದೂ ಅಧಿಕಾರಕ್ಕೆ ಆಸೆಪಟ್ಟವನಲ್ಲ. ಈ ಅಪಮಾನವನ್ನು ನಾನು ಸಹಿಸಿಕೊಂಡು ಈ ಭೂಮಿಯ ಮೇಲೆ ಬದುಕಿರಲಾರೆ. ಪುತ್ರಶೋಕವು ಒಂದು ಕಡೆ ದಹಿಸುತ್ತಿದೆ. ಮತ್ತೊಂದು ಕಡೆ ಅಪಮಾನವು ಸುಡುತ್ತಿದೆ. ಇವೆರಡರ ಮೇಲೆ ಬಾದಶಹನ ಆಗ್ರಹವು ಬರೆ ಎಳೆದಂತಾಗಿದೆ. ನಾನಿನ್ನು ಬದುಕಿರಲೇಕೆ? ನನ್ನ ಕೈಯಿಂದಲೇ ಎದೆಗಿರಿದುಕೊಂಡು ನಿನ್ನೆದುರಿನಲ್ಲಿಯೇ ಪ್ರಾಣ ಬಿಡುತ್ತೇನೆ. ಇಲ್ಲಿಯೇ ನನ್ನನ್ನು ನೀನು ನಿನ್ನ ಕೈಯಿಂದಲೇ ಗೋರಿ ಮಾಡಿಬಿಡು. ಬಾದಶಹನ ಆಗ್ರಹದಿಂದ ಸಂತಪ್ತವಾದ ಹೃದಯವು ಯುವರಾಜನ ಅಮೃತ ಹಸ್ತದಿಂದ ಗೋರಿಯಾದ ಸಂತಸವನ್ನು ಪಡೆಯಲಿ" ಎಂದನು. ಯುವರಾಜನು "ಮಾಮಾಜೀ, ನಮ್ಮ ತಂದೆ ಶೀಘ್ರಕೋಪಿ. ಹಿಂದೆ ಮುಂದಿನ ಆಲೋಚನೆಯೇ ಇಲ್ಲದವನು. ಎಲ್ಲ ಸಮಯಗಳಲ್ಲಿಯೂ ಜಯವೇ ಆಗಬೇಕೆಂದು ಆ ತಂದೆಯ ಆಕಾಂಕ್ಷೆ. ದೆಹಲಿಯ ಸಿಂಹಾಸನದ ಪರಿವೆಯನ್ನೆಲ್ಲಾ ನೀವು ಕಣ್ಣಾರ ಕಂಡಿದ್ದೀರಿ. ದೊಡ್ಡ ಬಾದಶಹರ ಕರುಣಾಜನಕವಾದ ಸ್ಥಿತಿಯನ್ನು ನೀವು ನೋಡಿಲ್ಲವೇ? ಇಂದು ನಿಮಗೆ—ನಾಳೆ ನನಗೆ ಈ ಘೋರ ದಂಡವು ಕಾದೇ ಇದೆ. ಸಮಾಧಾನ ಮಾಡಿಕೊಳ್ಳಿರಿ. ಎಂದಾದರೊಂದು ದಿನ ಒಳ್ಳೆಯ ಕಾಲವು ಬಂದೇ ಬರುತ್ತದೆ. ಈ ಶಿವಾಜಿ

ಇವನೇಕೆ ಇಷ್ಟು ಕೋಟಲೆ ಮಾಡುತ್ತಾನೆ? ದೆಹಲಿಯ ಬಾದಶಹನ ಮುಂದೆ ಅವನದೇನು ನಡೆದೀತು? ಅವನ ಪರಾಕ್ರಮವೆಲ್ಲಾ ಸೂರ್ಯನ ಮೇಲೆ ಕಲ್ಲು ಹೊಡೆದಂತೆ. ಉರಿಯುತ್ತಿರುವ ಮಹಾಗ್ನಿಕುಂಡದಲ್ಲಿ ತುಪ್ಪವನ್ನು ಚೆಲ್ಲಿದಂತೆ. ಈ ಶಿವಾಜಿಯು ಘಟ್ಟಿಗನೇನೋ ಹೌದು. ನೋಡಿ, ಮಾಮಾಜಿ. ಅವನ ಸಮಾಚಾರವನ್ನೆಲ್ಲಾ ನಾನು ಬಲ್ಲೆ. ಅವನಲ್ಲಿ ಎಷ್ಟೋ ಸದ್ಗುಣಗಳೂ ಇವೆ. ಅವನು ಒಬ್ಬ ಸ್ತ್ರೀಯ ಮೇಲೆ ಕಣ್ಣಿಟ್ಟ ನಿದರ್ಶನವಿಲ್ಲ. ಒಬ್ಬ ಮರಾಠಾ ಸೈನಿಕನು ಸ್ತ್ರೀಯರ ಮೇಲೆ ಅತ್ಯಾಚಾರ ಮಾಡಿದುದಿಲ್ಲ. ಸೆರೆ ಸಿಕ್ಕಿದ ಸೈನಿಕರಿಗೆ ಇನಾಂ ಕೊಟ್ಟು ಕಳುಹಿಸಿಬಿಡುತ್ತಾನೆ. ಒಂದು ಮಸೀದಿಯ ಮೇಲಾದರೂ ಒಂದು ಕಲ್ಲನೇಟು ಬಿದ್ದಿಲ್ಲ. ಅದಕ್ಕೆ ಒರಟ. ಹಹದೀ ಮನುಷ್ಯ. ಅವನನ್ನು ಉಪಾಯದಿಂದ, ಸ್ನೇಹದಿಂದ ಬಾದಶಹನಿಗೆ ಶರಣಾಗತನನ್ನಾಗಿ ಮಾಡಿಸುತ್ತೇನೆ. ದೆಹಲಿಯ ದರಬಾರಿನಲ್ಲಿ ಅವನ ಪರಾಕ್ರಮಕ್ಕೆ ತಕ್ಕ ಪುರಸ್ಕಾರ ದೊರೆಯುವಂತೆ ಮಾಡುತ್ತೇನೆ. ದೆಹಲಿಯ ಬಾದಶಹರಿಗೂ ಮನಃಕ್ಲೇಶ ತಪ್ಪುವಂತೆ ಮಾಡುತ್ತೇನೆ. ಈ ಇಡೀ ದಕ್ಷಿಣಾವರ್ತಕ್ಕೆ ನಿಮ್ಮನ್ನು ಅಧಿಪತಿಗಳನ್ನಾಗಿ ಮಾಡಿಸುತ್ತೇನೆ. ಮಾಮಾಜೀ, ನೀವು ಬಹು ಕಾಲ ದೆಹಲಿಯ ದರ್ಬಾರಿಗೆ ಮಾಡಿರುವ ಸೇವೆಯು ನಿರರ್ಥಕವಾಗಿ ಹೋಗಗೊಡೆನು. ಖುದಾವಿನ ಮೇಲೆ ಆಣೆಯಿಟ್ಟು ಹೇಳುತ್ತೇನೆ. ನನ್ನ ಮಾತುಗಳನ್ನು ನಂಬಿರಿ. ನೀವು ಬಾದಶಹನ ಆಜ್ಞೆಯಂತೆ ಬಂಗಾಳಕ್ಕೆ ಹೋಗಿರಿ. ಸೂರ್ಯನಿಗೆ ಕೂಡ ಉದಯಾಸ್ತಗಳುಂಟು. ನೀವು ಶಾಂತಿ ತಂದುಕೊಳ್ಳಿರಿ" ಎಂದು ಸಮಾಧಾನ ಪಡಿಸಿದನು.

ಷಾಯಿಸ್ತಾಖಾನನು ವಿಂತ ಪರಿವಾರದೊಂದಿಗೆ ಏಕಾಂಗಿಯಾಗಿ ಬಂಗಾಳಕ್ಕೆ ಹೊರಟುಹೋದನು. ಯುವರಾಜನು ಷಾಹಿಸ್ತಖಾನನ ಜನಾನಾವನ್ನೂ ಪರಿಜನರನ್ನೂ ದೆಹಲಿಯ ರಾಜಧಾನಿಗೆ ಸಾಗಕಳುಹಿಸಿದನು.

[illegible]

# ೬

ದೆಹಲಿಯ ಅರಮನೆಯ ಅಂತಃಪುರದ ಅತ್ಯಂತ ವಿಶಾಲವಾದದ್ದು. ಅಲ್ಲಿ ಭಾರತವರ್ಷದ ಸಂಪತ್ತೆಲ್ಲವೂ ಪ್ರತ್ಯಕ್ಷ ಗೋಚರವಾಗುತ್ತಿದ್ದಿತು. ಅಂತಃಪುರದಲ್ಲಿ ರಜಪೂತ ರಾಣಿಯರೂ, ಮುಸಲ್ಮಾನ ರಾಣಿಯರೂ ಇದ್ದರು. ಅವರವರು ಇದ್ದ ಅಂತಃಪುರವಲ್ಲಿ ರಂಗಮಹಲುಗಳೂ, ಗಾನ ನರ್ತನ ಮಂದಿರಗಳೂ, ಸಖಿಯರ ದಾಸದಾಸಿಯರ ಕೊಠಡಿಗಳೂ ಲೆಕ್ಕವಿಲ್ಲದಷ್ಟಿದ್ದವು. ದೆಹಲಿಯ ಅಂತಃಪುರವೆಂದರೆ ಅದೇ ಒಂದು ಮಾನವ ನಿರ್ಮಿತ ಸ್ವರ್ಗ; ಗಂಧರ್ವ ಲೋಕ; ನಂದನವನ ಎಂಬುದಾಗಿ ರಸಿಕರಾದ ಕವಿಗಳು ಬಣ್ಣ ಬಣ್ಣವಾಗಿ ಬಣ್ಣಿಸಿದ್ದಾರೆ. ಆ ಅಂತಃಪುರದ ಸಂಬಂಧವಾಗಿಯೇ ಎಷ್ಟೋ ಸ್ವಾರಸ್ಯವಾದ ಕಥೆಗಳು ರಚಿಸಲ್ಪಟ್ಟಿವೆ. ಆ ಅಂತಃಪುರ ರಮಣಿಯರ ಆಸೆ ಆಕಾಂಕ್ಷೆಗಳಿಗಾಗಿ ಎಷ್ಟೋ ತರುಣರು ಬಲಿಯಾಗಿದ್ದಾರೆ. ಆಹುತಿಯಾಗಿದ್ದಾರೆ. ಮೊಗಲರ ಬಾದಷಹರುಗಳ ದರ್ಬಾರು, ಯುದ್ಧಗಳು ರಾಜ್ಯಕಾರ್ಯಗಳು, ರಾಜ್ಯ ವಿಪ್ಲವಗಳು ಇವೆಲ್ಲವೂ ಎಷ್ಟು ವಿಸ್ತಾರವಾದ ಚರಿತ್ರೆಗಳಾಗಿವೆಯೋ ಬಾದಷಹರುಗಳ ಅಂತಃಪುರದ ರಮಣಿಯ ಕಥೆಗಳೂ ಅಷ್ಟೇ ವಿಸ್ತಾರವಾಗಿದೆ. ರಜಪೂತ ರಮಣಿಯರ ಕರುಣಾಜನಕ ದುರಂತ ಕಥೆಗಳೂ, ಯುವನ ಸುಂದರಿಯರ ಪ್ರೇಮೋನ್ಮಾದದ ಶೃಂಗಾರ ಕಥೆಗಳೂ ಕುತೂಹಲಜನಕಗಳಾಗಿವೆ.

ಔರಂಗಸೇಬನು ಸ್ವಭಾವತಃ ರಸಿಕನೂ ಅಲ್ಲ. ಶೃಗಾರಪ್ರಿಯನೂ ಅಲ್ಲ. ಆದರೆ ಅಂತಃಪುರದ ಶೃಂಗಾರ ವೈಭವಗಳಿಗೆ ಏನೂ ಕೊರತೆ ಇರಲಿಲ್ಲ. ಔರಂಗಸೇಬನ ಅಂತಃಪುರದಲ್ಲಿ ಮೂರು ಮಹಲುಗಳು, ಮೂರು ಸುವರ್ಣ ಶಿಖರಗಳಂತಿದ್ದವು. ಉದಯಪುರಿ ಬೇಗಂನ ಅಂತಃಪುರ, ಬಾದಷಹನ ಪ್ರಿಯ ಸೋದರೀ ರೋಷನಾರಳ ಅಂತಃಪುರ, ಮತ್ತೊಂದು ಬಾದಷಹನ ಪ್ರಿಯ ಕುವರಿ ಜೆಸಿತ್ ಉನ್ನೀಸಾಳ ಅಂತಃಪುರ—ಈ ಮೂರು ಅಂತಃಪುರಗಳ ಬೆಳಕು ಸಾಮ್ರಾಜ್ಯದ ಮಹತ್ಕಾರ್ಯಗಳ ಮೇಲೆ ಪ್ರತಿಫಲಿಸುತ್ತಿದ್ದಿತು.

ಔರಂಗಸೇಬನು ಕಠಿಣ ಹೃದಯಿ, ಕ್ರೂರಾತ್ಮ, ಘಾತುಕ ಎಂದು ಪ್ರಸಿದ್ಧ ವಾಗಿದೆ. ಈ ಅಂತಃಪುರಗಳ ಬೆಳಕು ಬಿದ್ದಾಗ ಅವನು ಸರಳ ಹೃದಯಿ, ಕ್ಷಮಾಶೀಲ, ಉದಾರಿ ಎಂಬುದಕ್ಕೆ ಬೇಕಾದಷ್ಟು ನಿದರ್ಶನಗಳಿವೆ. ಔರಂಗಸೇಬನು ದೈವಭಕ್ತ, ಸ್ವಮತಾಭಿಮಾನಿ, ಮತಾಂಧ, ಖುರಾನಿನ ಆಜ್ಞೆಗಳನ್ನು ಅಕ್ಷರಶಃ ಪಾಲಿಸುವ ಮತಾಚಾರಸಂಪನ್ನ ಎಂಬ ಖ್ಯಾತಿಯೂ ಬೇಕಾದಷ್ಟಿತ್ತು. ಈ ಮೂರು ಅಂತಃಪುರಗಳ ಸುವಾಸನೆಯು ಬೀಸಿದಾಗ ಅವನ ಮತಾಚಾರಗಳೆಲ್ಲವೂ ಮೋಹ ಸ್ವರೂಪವನ್ನು ತಾಳಿದುದಕ್ಕೂ ಎಷ್ಟೋ ನಿದರ್ಶನಗಳಿವೆ.

ಔರಂಗಸೇಬನು ತನ್ನ ರಾಜ್ಯದಲ್ಲಿ ಯಾರೂ ಮದ್ಯಪಾನಮಾಡಕೂಡ ದೆಂದು ಕಟ್ಟಪ್ಪಣೆ ಮಾಡಿದ್ದನು. ಅನೇಕಮಂದಿ ಮದ್ಯಪಾಯಿಗಳನ್ನು ಪಾಪಾತ್ಮರೆಂದು ಶೂಲಕ್ಕೇರಿಸಿದ್ದನು. ಖುರಾನಿನಂತೆ ಮದ್ಯಪಾನವು ದೂಷ್ಯ ವಾದುದು. ಸರಳ ಸಂದರ್ಭಗಳಲ್ಲಿ ಬಾದಷಹನೇ ಹೇಳುತ್ತಿದ್ದನು. ಅಯ್ಯೋ ಮದ್ಯವನ್ನು ಕುಡಿಯದವರಾರಿದ್ದಾರೆ. ನಾನೊಬ್ಬ; ದೊಡ್ಡ ಖಾಜೀ ಸಾಹೇಬರೊಬ್ಬರು. ನಾವಿಬ್ಬರೇ" ಎಂದು ಹೇಳುತ್ತಿದ್ದನು ಅಂತಃಪುರ ರಮಣಿಯರೆಲ್ಲರೂ ಯಥೇಚ್ಛವಾಗಿ ಮದ್ಯಪಾನ ಮಾಡುತ್ತಿದ್ದರು ಅವರು ಗಳಿಗಾಗಿ ನಾನಾವಿಧವಾಗಿ ರುಚಿಕರವಾದ ಸುವಾಸನೆಯ ಮದ್ಯಗಳು ತಯಾರಾಗಿ ಬರುತ್ತಿದ್ದವು. ಉದಯಪುರಿ ಬೇಗಂ ಬಾದಷಹನಿಗೆ ಅತ್ಯಂತ ಪ್ರೇಮದ ರಾಣಿ. ಅವಳಿಗೆ ಮದ್ಯವಿಲ್ಲದಿದ್ದರೆ ಕಳೆಗುಂದಿನ ಮಸುಕಾದ ಚಂದ್ರಬಿಂಬದಂತೆ ಇರುತ್ತಾಳೆಂದು ಔರಂಗಸೇಬನು ಹೇಳುತ್ತಿದ್ದನು. ಆ ಬೇಗಂಳ ರಮ್ಯವಾದ ಶಯನ ಗೃಹದಲ್ಲಿ, ಸುಖಮಯವಾದ ಹಂಸತೂಲಿಕಾ ತಲ್ಪದಲ್ಲಿ, ಔರಂಗಸೇಬನು ಉದಯಪುರೀ ರಾಣಿಯನ್ನು ತೊಡೆಯ ಮೇಲೆ ಮಲಗಿಸಿಕೊಂಡು ಚಿನ್ನದ ಬಟ್ಟಲಿನಲ್ಲಿ ಮದ್ಯವನ್ನು ಕುಡಿಸುತ್ತಾ ಅವಳ ಆ ರಕ್ತಮದಪೂರ್ಣಿತ ನೇತ್ರಗಳನ್ನು ನೋಡಿ ಆನಂದಿಸುತ್ತಾ ಆ ಮನೋಹರ ವಾದ ಸುಕೋಮಲ ಕೇಶರಾಶಿಯನ್ನು ಮೃದುವಾಗಿ ನೇವರಿಸುತ್ತಾ ಆನಂದ ಪಟ್ಟುಕೊಳ್ಳುತ್ತಿದ್ದನು. ಒಟ್ಟಿನಲ್ಲಿ ಆ ಅಂತಃಪುರವು ಸ್ವೇಚ್ಛಾವಿಹಾರ ಭೂಮಿ. ಅಲಂಕಾರ ಭೋಗಗಳ ನೆಲೆ. ಆನಂದದ ರಾಜ್ಯ.

ಆ ಅಂತಃಪುರದಲ್ಲಿ ಆ ರಮಣಿಯರು ಶಿವಾಜಿಯ ಕಥೆಯನ್ನು ಚಿತ್ರ ವಿಚಿತ್ರವಾಗಿ ಹೇಳುತ್ತಿದ್ದರು. ರೋಷನಾರಳ ಸಖಿಯೊಬ್ಬಳು ಬಂದು ಗಾಬರಿಯಿಂದ ಹೇಳಿದಳು: "ರಾಣೀಸಾಹೇಬ್, ದಕ್ಕನ್ನಿನ ಕಥೆಯನ್ನು ಕೇಳಿದಿರಾ? ಆ ಮಹಾ ಯುದ್ಧದಲ್ಲಿ ಶಿವಾಜಿಯು ಗೆದ್ದನಂತೆ. ಮಾಮಾಜೀ ಷಾಯಿಸ್ತೆಖಾನರು ಸೋತುಹೋದರಂತೆ. ಅವರ ಮಗ ಅಬ್ದುಲ್ ಫತ್ ಸತ್ತನಂತೆ. ಆರು ಮಂದಿ ಸ್ತ್ರೀಯರನ್ನು ಕತ್ತರಿಸಿಹಾಕಿದರಂತೆ." ಎಂದು ಗಾಬರಿಯಿಂದ ಹೇಳಿದರು. ರೋಷನಾರಳು ಕೈಯಲ್ಲಿದ್ದ ಮದ್ಯದ ಪಾತ್ರೆಯನ್ನು ಹಾಗೆಯೇ ಕೆಳಗಿಟ್ಟು "ಏನೇ ಲಲ್ಲ; ನಿನಗೆ ಹೆಚ್ಚು ಹಿಡಿದಿದೆಯೋ ಏನು? ಷಾಯಿಸ್ತೆಖಾನರು ನೂರು ಯುದ್ಧಗಳನ್ನು ಮಾಡಿರಬಹುದು. ಎಲ್ಲಿಯೂ ಸೋತೆಂಬುದೇ ಇಲ್ಲ. ಇದೇನು ಹೀಗೆ ಹೇಳುತ್ತೀ? ಆ ತರುಣ ಅಬ್ದುಲ್ ಫತ್ತನು ಎಂತಹ ಸುಂದರ ಪುರುಷ! ಎಷ್ಟು ಪರಾಕ್ರಮಶಾಲಿಯವನು! ನಿಜವೇನೇ, ಅವನ ಸಾವಿನ ಸುದ್ದೀ?" ಎಂದು ಕೇಳಿದಳು. "ಹೌದು ದಕ್ಕನಿನಿಂದ ದೂತರು ಬಂದು ಬಾದಷಹರಲ್ಲಿ ಎಲ್ಲ ವಿವರಗಳನ್ನೂ ವರದಿಮಾಡಿದರಂತೆ. ಪರಿಚಾರಿಕೆಯರು ಬಂದು ಸನ್ನೆಯೊಡನೆ ಹೇಳಿದರು. ಅದು ಯುದ್ಧವಲ್ಲ ಸಾಹೇಬ್. ಜಾದುವಿದ್ಯೆಯಂತೆ. ಆ ಶಿವಾಜಿ ಮಂತ್ರವಾದಿಯಂತೆ. ಒಂದೇ ಕಾಲದಲ್ಲಿ ನಾಲ್ಕಾರು ಕಡೆ ಇರುತ್ತಾನಂತೆ. ಕಾರಾಗೃಹದಲ್ಲಿ ಬಂಧಿಸಿಟ್ಟರೆ ಮಾಯವಾಗುತ್ತಾನಂತೆ. ಅವನ ಸೈನಿಕರೆಲ್ಲಾ ಗುಡ್ಡಗಾಡಿನ ಜನ. ನಮ್ಮ ಸೈನಿಕರನ್ನು ಹೊತ್ತುಕೊಂಡು ಹೋಗಿ ಎದೆ ಬಗಿದು ರಕ್ತ ಹೀರಿ ತಿಂದುಬಿಡುತ್ತಾರಂತೆ. ಎಷ್ಟು ಸಮರ್ಥರಾದರೇನು? ಮನುಷ್ಯರ ಆಟ ಮಂತ್ರವಾದಿಗಳೊಡನೆ ಏನು ಸಾಗುತ್ತದೆ? ಭೂತ ಪ್ರೇತ ಪಿಶಾಚಿಗಳೇ ಮಂತ್ರವಾದಿಗಳ ಅನುಚರರು" ಎಂದಳು.

"ನಾನು ಇದನ್ನೆಲ್ಲಾ ನಂಬುವುದಿಲ್ಲ."

"ನಂಬದಿದ್ದರೆ ಬಿಡಿ. ಅಂತಃಪುರವೆಲ್ಲಾ ಇದೇ ಮಾತು. ದೆಹಲಿಯ ನಗರವೆಲ್ಲಾ ಗುಲ್ಲೋಗುಲ್ಲಾಗಿದೆ" ಎಂದು ಲೈಲಾ ಹೇಳುತ್ತಿದ್ದಳು.

ಅಷ್ಟರಲ್ಲಿ ಕಾಲು ಸಪ್ಪಳವಾಯಿತು. ಇಬ್ಬರೂ ತಲೆ ಎತ್ತಿ ನೋಡಿದರು. ಸ್ವಯಂ ಬಾದಷಹನು ಎದುರಿಗೆ ನಿಂತಿದ್ದನು. ಲೈಲಾ ಹೆದರಿ ಓಡಿ ಹೋಗುತ್ತಿದ್ದಳು.

ಬಾದಷಹನು "ಇಲ್ಲಿ ಬಾ, ಲೈಲಾ, ಇಲ್ಲಿ ಬಾ" ಎಂದು ಕರೆದನು.

ಆ ಸಖಿಯು ಹೆದರುತ್ತಾ ಬಂದು ನಿಂತಳು.

"ಏನು ಹೇಳಿದೆ, ಮತ್ತೊಮ್ಮೆ ಹೇಳು. ಆ ಮಂತ್ರವಾದಿಯ ಕಥೆ ಏನು? ನಾನೆಲ್ಲಿಯೂ ಕೇಳಿಲ್ಲ. ಇದು ಹೊಸ ಕಥೆಯಾಗಿದೆ. ನಿನ್ನ ಮುದ್ದು ಮೊಗದಿಂದ ಈ ಕಥೆಯನ್ನು ಕೇಳಿದರೆ ನನಗೂ ನಿಜವೇನೋ ಎನ್ನಿಸುತ್ತದೆ. ಇರಲಿ, ಆ ಮಂತ್ರವಾದಿಯನ್ನು ಇಲ್ಲಿಗೆ ಕರೆತರಿಸಿ ನಿನ್ನನ್ನು ಅವನಿಗೆ ಕೊಟ್ಟು ಮದುವೆ ಮಾಡಿಸುತ್ತೇನೆ" ಎಂದು ಹೇಳಿದನು.

ಲೈಲಾ ಏನೋ ಮಾತನಾಡಲು ಹೊರಟಳು.

ರೋಷನಾರಳು "ಬಾಂದೀ, ಹೋಗು. ಆಚೆಗೆ ಹೋಗು. ಬಾದಷಹರ ಎದುರಿನಲ್ಲಿ ತಲೆಹರಟೆ ಹರಟಬೇಡ" ಎಂದು ಗದ್ದರಿಸಿ, ಬಾದಷಹನ ಕೈ ಹಿಡಿದು ಆಸನದ ಮೇಲೆ ಕುಳ್ಳಿರಿಸಿ, "ಅಣ್ಣಾ, ಇವೆಲ್ಲಾ ನಿಜವೇ? ಸಮಾಚಾರವೇನು?" ಎಂದು ಪ್ರಶ್ನೆ ಮಾಡಿದಳು.

ಔರಂಗಜೇಬನು "ನಿಜ, ತಂಗಿ, ಷಾಯಿಸ್ತಾಖಾನರ ಪರಾಭವವು ನಿಜ. ಅವರು ಯುದ್ಧ ಮಾಡಿ ಸೋಲಲಿಲ್ಲ. ರಂಜಾನ್ ಹಬ್ಬ, ಅಂತಹ ಪವಿತ್ರ ದಿನದಲ್ಲಿ ಮದ್ಯ ಕುಡಿದು ಅಂತಃಪುರ ರಮಣಿಯರೊಡನೆ ವಿಲಾಸಮಗ್ನರಾಗಿದ್ದರು. ಆ ಕಳ್ಳ ಶಿವಾಜಿ ಸಮಯ ಕಾದು ಅಂತಃಪುರಕ್ಕೆ ನುಗ್ಗಿ ಅಪಹತಿಯನ್ನುಂಟುಮಾಡಿದ" ಎಂದ.

"ಅವರ ಮಗ ಅಬ್ದುಲ್ ಫತ್ ಕೂಡ ಮಡಿದುಹೋದನಂತೆ. ಎಂತಹ ತರುಣ ವೀರನವನು!"

"ಹೌದು. ಅವನೂ ಅಂತಃಪುರದಲ್ಲಿಯೇ ಸತ್ತು ಬಿದ್ದಿದ್ದನಂತೆ. ವೀರನಾದವನು ರಣಭೂಮಿಯಲ್ಲಿ ಸಾಯಬೇಕು. ಅಂತಃಪುರದಲ್ಲಿ ತೋರುವ ಪರಾಕ್ರಮವು ಹೇಡಿಗಳ ಪರಾಕ್ರಮ. ಅದನ್ನು ಕೊಂಡಾಡಲಾದೀತೆ? ಆ ಮಾತು ಬಿಡು. ಕಳೆದುಹೋದ ಮಾತು ನೆನಸಿ ಫಲವಿಲ್ಲ."

"ಸರಿ ಜಹಪನಾ, ಅದಕ್ಕೆ ನೀವೇನು ಮಾಡುತ್ತೀರಿ?"

"ನಾನೇ ದಕ್ಷಿಣಕ್ಕೆ ದಂಡಯಾತ್ರೆ ಹೊರಡಬೇಕೆಂದಿದ್ದೇನೆ."

"ಯಾವಾಗ ದಕ್ಷಿಣದ ಯಾತ್ರೆ ?"

"ಈಗಲೇ, ಈ ಬಿಸಿಯಲ್ಲಿಯೇ ಆ ಶಿವಾಜಿಯನ್ನು ಬಲಿಹಾಕಬೇಕು. ಇಲ್ಲದಿದ್ದರೆ ಆ ಕಳ್ಳನು ಕೊಬ್ಬಿಹೋಗುತ್ತಾನೆ. ಮೊಗಲ್ ದರ್ಬಾರಿಗೆ ಅಪಮಾನ ಮಾಡುತ್ತಾನೆ. ನಾನೆಂದಿಗೂ ಅಪಮಾನವನ್ನು ಸಹಿಸುವವನಲ್ಲ. ಅವನಿಗೆ ತಕ್ಕ ಶಿಕ್ಷೆಯಾಗಲೇಬೇಕು."

"ತಮ್ಮ ಸಂಕಲ್ಪಕ್ಕೆ ಎದುರು ಹೇಳಬಲ್ಲವರಾರು, ಜಹಾಪನಾ ? ಆದರೆ ನನ್ನದೊಂದು ಮಾತಿದೆ. ಕೇಳಿ. ಇಷ್ಟು ಸಣ್ಣ ಕಾರ್ಯಕ್ಕಾಗಿ ಸ್ವಯಂ ಬಾದಷಹರೇ ದಂಡಯಾತ್ರೆ ಹೊರಡುವುದು ಅಷ್ಟೇನೂ ಗೌರವವಲ್ಲ. ಈ ದೆಹಲಿಯಲ್ಲಿ ಎಷ್ಟೊಂದು ಮಂದಿ ವೀರಗ್ರೇಸರರಾದ ಸೇನಾಧಿಪತಿಗಳಿದ್ದಾರೆ! ರಜಪೂತ ಸಾಮಂತರೆಷ್ಟು ಮಂದಿ ಇದ್ದಾರೆ! ಮುಸಲ್ಮಾನ್ ವೀರರು ಎಷ್ಟು ಮಂದಿ ಇದ್ದಾರೆ? ಇವರೆಲ್ಲರನ್ನೂ ಬಿಟ್ಟು ತಾವೇ ಯುದ್ಧಕ್ಕೆ ಹೊರಟರ ಇವರನ್ನೆಲ್ಲಾ ಅಗೌರವ ಪಡಿಸಿದಂತೆ ಆಗುವುದಿಲ್ಲವೇ? ಆ ಶಿವಾಜಿಗೆ ತಾವೇ ಹೆಚ್ಚು ಗೌರವ ಕೊಟ್ಟಂತಾಗುವುದಿಲ್ಲವೇ? ಯುವರಾಜ ಅಜಂಷಾನು ದಕ್ಕನ್ನಿನಲ್ಲಿಯೇ ಇದ್ದಾನೆ. ತಮ್ಮ ಹೊಟ್ಟೆಯಲ್ಲಿಯೇ ಹುಟ್ಟಿದ ವೀರಪುತ್ರ ನಲ್ಲವೇ ಅವನು? ಮುಂದೆ ದೈವದತ್ತವಾಗಿ ಈ ದೆಹಲಿಯ ಸಿಂಹಾಸನದ ಅಧಿಕಾರಿ ಅವನೇ ಅಲ್ಲವೇ? ಇಂತಹ ಸಾಮಾನ್ಯ ಕಾರ್ಯವನ್ನೂ ಸಾಧಿಸ ಲಾರದವನಾಗಿದ್ದರೆ ಅವನಿಗೇಕೆ ಈ ಸಿಂಹಾಸನ? ಮುಂದಾದರೂ ಅಸಮರ್ಥರು ಸಿಂಹಾಸನವನ್ನೇರಿದರೆ ಸಾಮ್ರಾಜ್ಯವು ಉಳಿದೀತೇ? ಈಗಲೇ ಪರೀಕ್ಷೆಯಾಗಲಿ ಆ ಶಿವಾಜಿಯನ್ನು ಹಿಡಿದುತರಬೇಕೆಂದು ಯುವರಾಜನಿಗೆ ಕಟ್ಟಪ್ಪಣೆಮಾಡಿರಿ" ಎಂದು ಹೇಳಿದಳು.

ಬಾದಷಹನು ನಕ್ಕು "ತಂಗೀ, ರೋಷನಾರಾ, ನಿನ್ನ ಬುದ್ಧಿಯು ಅತಿ ಸೂಕ್ಷ್ಮವಾದುದು ನಿನ್ನ ರಾಜನೀತಿ ಕೌಶಲ್ಯವು ವಿಸ್ಮಯಜನಕವಾಗಿದೆ. ನೀನು ಗಂಡಾಗಿ ಹುಟ್ಟಿದ್ದರೆ ದೆಹಲಿಯ ಸಿಂಹಾಸನಕ್ಕೆ ನಿನಗೇ ಪಟ್ಟ ಕಟ್ಟುತ್ತಿದ್ದೇ ನಾನು ದೇವರ ಧ್ಯಾನದಲ್ಲಿ ಆನಂದವಾಗಿರುತ್ತಿದ್ದೆ. ಆ ದೇವರ ಆಜ್ಞೆಯನ್ನು ಪಾಲಿಸುವುದಕ್ಕಾಗಿಯೇ, ಪವಿತ್ರವಾದ ಮುಸಲ್ಮಾನ್ ಧರ್ಮ ವನ್ನು ಈ ಸಮಗ್ರ ಭಾರತವರ್ಷದಲ್ಲಿ ಸ್ಥಾಪಿಸುವುದಕ್ಕಾಗಿಯೇ ಖುದಾನು

ನನ್ನನ್ನು ಈ ಅಧಿಕಾರದಲ್ಲಿಟ್ಟಿದ್ದಾನೆ” ಎಂದು ಹೇಳಿ ರೋಷನಾರಳ ಕಪೋಲಗಳನ್ನು ಚುಂಬಿಸಿದನು.

ರೋಷನಾರಳು ಪ್ರಸನ್ನನಾದ ಬಾದಷಹನ ಕೈಯನ್ನು ತೆಗೆದುಕೊಂಡು ನವರುತ್ತಾ “ಜಹಾಪನಾ, ನನಗೆ ಕೊಟ್ಟ ವಾಗ್ದಾನವನ್ನು ನೀವು ಮರೆತೇ ಬಿಟ್ಟಿದ್ದೀರಿ. ಒಂದೊಂದು ವರ್ಷ ಒಂದೊಂದು ಅಡಚಣೆ-ಒಂದೊಂದು ಆತಂಕ. ರಾಜಕಾರ್ಯಗಳ ಮೇಲೆ ರಾಜಕಾರ್ಯ. ನನ್ನ ಮನೋರಥವು ಭಗ್ನವಾಗುತ್ತಲೇ ಇದೆ. ನಾನು ಇನ್ನೆಷ್ಟು ದಿನಗಳು ಬದುಕಿರುತ್ತೇನೋ ಯಾರು ಬಲ್ಲರು? ನಾನು ಸತ್ತುಹೋದರೆ ಒಂದು ಗೋರಿಮಾಡಿಸಿ ನನ್ನ ಮೇಲಿನ ಪ್ರೀತಿಯಿಂದ ಅದರ ಮೇಲೊಂದು ಚಿನ್ನದ ಮಂಟಪ ಕಟ್ಟಿಸಿ ಬಿಡುತ್ತೀರಿ. ಅದರಿಂದ ನನಗಾಗುವ ಆನಂದವೇನು? ನೀವು ಬಿಸಿಲು ಕಾಲದಲ್ಲಿ ಕಾಶ್ಮೀರಕ್ಕೆ ಕರೆದುಕೊಂಡು ಹೋಗುತ್ತೇನೆಂದು ಎಷ್ಟು ಬಾರಿ ಹೇಳಿದ್ದೀರಿ. ನೆನಪಿದೆಯೇ?” ಎಂದು ದೀನವದನಳಾಗಿ ಕೇಳಿದಳು.

ಔರಂಗಸೇಬನು “ರೋಷನಾರಾ, ನಿನ್ನ ಇಚ್ಛೆಗೆ ಎದುರಿಲ್ಲ. ಈಗಲೇ ಕಾಶ್ಮೀರಕ್ಕೆ ಹೊರಡೋಣ” ಎಂದು ಹೇಳಿದನು.

ಬಾದಷಹನು ಅಂತಃಪುರನಿಂದ ಹೊರಟುಹೋದನು.

ಬಾದಷಹನು ಕಾಶ್ಮೀರಕ್ಕೆ ಹೊರಡುವ ಏರ್ಪಾಡುಗಳಿಗೆ ಆರಂಭವಾದವು. ಮೊಕ್ಕಾಂಗಳಲ್ಲಿ ಸ್ಥಳಗಳನ್ನೇರ್ಪಡಿಸುವುದಕ್ಕೂ ವಾಸಭವನಗಳನ್ನು ಏರ್ಪಡಿಸುವುದಕ್ಕೂ ಕಲಾಸಿಗಳೂ, ಕಾರಿಗಾರರೂ, ಅಧಿಕಾರಿಗಳೂ ಮುಂದಾಗಿ ಹೊರಟರು. ಕಾವಲುಗಾರರೂ, ಪಹರೆಯವರೂ, ಬೆಂಗಾವಲು ಭಟರೂ ತಮ್ಮ ತಮ್ಮ ಸಿದ್ಧತೆಗಳನ್ನು ಮಾಡಿಕೊಳ್ಳಲು ಆರಂಭಿಸಿದರು. ಬಾದಷಹನು ಹಿಮಾಲಯದ ವನಪ್ರದೇಶಗಳನ್ನು ಹಾದು ಹೋಗುತ್ತಾನೆ. ಮೃಗ ವಿಹಾರದಲ್ಲಿ ಅವನಿಗೆ ವಿಶೇಷ ಆಸಕ್ತಿ. ಬೇಟೆಯಾಡಲು ಸಂಗಡಿಗರು ಬೇಕು. ಬಾದಷಹನ ಕೋರಿಕೆಯಂತೆ ಅನೇಕ ರಜಪೂತ ತರುಣರು ಹೊರಟರು. ಅಂತಃಪುರದಲ್ಲಿ ಸಖಿಯರ, ಪರಿಚಾರಿಕೆಯರ ಸಡಗರ ರೋಷನಾರಳು ಯಾವ ಯಾವ ಸಖಿಯರನ್ನು ಚುನಾಯಿಸುತ್ತಾಳೆಂಬ ಪೈಪೋಟಿ. ಪರಿಚಾರಿಕೆಯರಲ್ಲಿಯೂ ಮೇಲಾಟ. ಹೊರಡುವ ದಿನ ಸಮೀಪಿಸುತ್ತ ಬಂದಿತು. ಸಖಿಯರು ಕಾಶ್ಮೀರಕ್ಕೆ ಹೊರಡಲು ಅಪ್ಪಣೆ ಬೇಡುವುದಕ್ಕಾಗಿ

ರೋಷನಾರಳ ಸಮಯ ಕಾಯುತ್ತಿದ್ದರು. ಅದರಲ್ಲೊಂದು ಚಮತ್ಕಾರವಿದ್ದಿತು, ಸ್ವಾರಸ್ಯವಿದ್ದಿತು. ಈ ಅಂತಃಪುರದ ಸಖಿಯರಿಗಾಗಿ ಹಂಬಲಿಸುವ ತರುಣ ವೀರರು ದರ್ಬಾರಿನಲ್ಲಿ ಬಹುಮಂದಿ ಇದ್ದರು. ರೋಷನಾರಳಿಗೆ ಆ ಅಂತರಂಗ ರಹಸ್ಯವೆಲ್ಲವೂ ತಿಳಿದಿದ್ದಿತು. ಸಖಿಯರ ಪ್ರೇಮರಹಸ್ಯವನ್ನು ಅರಿತು ಅವಳು ಸಂತೋಷಪಡುತ್ತಿದ್ದಳು. ಅವರವರ ಪ್ರೇಮಾರಾಧನೆಗಾಗಿ ಉದಾರ ಹಸ್ತದಿಂದ ಧನಕನಕಗಳನ್ನು ಕೊಡುತ್ತಿದ್ದಳು. ರೋಷನಾರಳ ಸಂತೋಷದ ಆಟಗಳಲ್ಲಿ ಇದೂ ಒಂದು. ಬಹುಮಂದಿ ಸಖಿಯರ ಕೋರಿಕೆಯಂತೆ ಕಾಶ್ಮೀರ ಯಾತ್ರೆಗೆ ಅಪ್ಪಣೆಯಿತ್ತಳು. ಕಾಶ್ಮೀರಕ್ಕೆ ಹೊರಡುವ ದಿನವು ಬಂದೇ ಬಂದಿತು. ಆ ದಿನ ದೆಹಲಿಯ ನಗರವೆಲ್ಲವೂ ಅಲಂಕೃತವಾಗಿದ್ದಿತು. ದೊಡ್ಡ ಆನೆಯ ಮೇಲೆ ಚಿನ್ನದ ಅಂಬಾರಿಯಲ್ಲಿ ಕುಳಿತು ರೋಷನಾರಳು ಹೊರಟಳು. ಅವಳ ಉಭಯ ಪಾರ್ಶ್ವಗಳಲ್ಲಿಯೂ ವಸ್ತ್ರಾಭರಣ ಭೂಷಿತೆಯರಾದ ಪರಿಚಾರಿಕೆಯರು ಚಾಮರಗಳನ್ನು ಹಾಕುತ್ತಿದ್ದರು. ನವಿಲುಗರಿಯ ಬೀಸಣಿಗೆಗಳಿಂದ ಬೀಸುತ್ತಿದ್ದರು. ಮುಂದುಗಡೆ ಬೆಲೆಬಾಳುವ ದಿರಿಸುಗಳಿಂದ ಅಲಂಕೃತರಾದ ವಾದ್ಯಗಾರರು ವಾದ್ಯಗಳನ್ನು ಬಾರಿಸುತ್ತ ಹೊರಟರು. ಬೆಂಗಾವಲಿನವರು ತಮ್ಮ ತಮ್ಮ ಅಂತಸ್ತಿಗೆ ತಕ್ಕ ದಿರಿಸುಗಳನ್ನು ಹಾಕಿಕೊಂಡು ಚಿನ್ನದ ಸೋಟಾಗಳನ್ನೂ, ಬೆಳ್ಳಿಯ ದಂಡಗಳನ್ನೂ ಧರಿಸಿ ದಾರಿ ಬಿಡಿಸುತ್ತ ಮುಂದೆ ನಡೆಯುತ್ತಿದ್ದರು. ಪಾರ್ಶ್ವಗಳಲ್ಲಿ ಥಳಥಳಿಸುವ ಬಿಚ್ಚುಕತ್ತಿಗಳನ್ನು ಹಿಡಿದು ಕುದುರೆಗಳನ್ನೇರಿ ಅಂಗರಕ್ಷಕಭಟರು ಸಾಲು ಕಟ್ಟಿ ನಡೆಯುತ್ತಿದ್ದರು. ಅಂತಃಪುರದ ಸಖಿಯರೂ, ಮಹಿಳೆಯರೂ ಆನೆಗಳನ್ನೇರಿ ಹೊರಟರು. ಆ ಮೆರವಣಿಗೆಯಲ್ಲಿ ಅರವತ್ತು ಆನೆಗಳು ಒಂದರ ಹಿಂದೊಂದು ಸಾಲಾಗಿ ಹೊರಟಿದ್ದವೆಂದು ಕಡಿತದವರು ಉಲ್ಲೇಖಿಸಿದ್ದಾರೆ. ಆ ಆಡಂಬರ, ವೈಭವಗಳೆಲ್ಲಾ ಬಾದಷಹನ ಗೌರವಕ್ಕೆ ಅಲಂಕಾರಪ್ರಾಯವೆಂದು ಔರಂಗಜೇಬನ ಭಾವನೆಯಾಗಿತ್ತು. ಎಷ್ಟೋ ಮಂದಿ ವಿದೇಶೀ ರಾಯಭಾರಿಗಳು ಈ ವೈಭವಗಳನ್ನು ನೋಡಿ ಬೆರಗಾಗಿದ್ದರೆಂದು ಅನೇಕ ಬರಹಗಳಿವೆ. ದಾರಿಯುದ್ದಕ್ಕೂ ಪುಷ್ಪಗಳನ್ನು ಚೆಲ್ಲಿದ್ದರು. ಪನ್ನೀರನ್ನು ಚಿಮುಕಿಸಿದ್ದರು. ಅಗರಬತ್ತಿಗಳ ಸುವಾಸನೆಯಿಂದ ರಾಜಮಾರ್ಗವು ರಂಜಿಸಲ್ಪಟ್ಟಿದ್ದಿತು. ದಾರಿಯುದ್ದಕ್ಕೂ ರಾಜಧಾನಿಯ ನಾಗರಿಕ

ತರುಣರು ಕುತೂಹಲದಿಂದ ಆ ರೋಷನಾರಳ ದರ್ಶನಾಕಾಂಕ್ಷಿಗಳಾಗಿ ಕಾತುರತೆಯಿಂದ ಕಾದಿದ್ದರು. ರೋಷನಾರಳ ದೃಷ್ಟಿಯು ತಮ್ಮ ಮೇಲೆ ಒಂದು ಬಾರಿ ಬಿದ್ದರೆ ತಮ್ಮ ಹುಟ್ಟು ಸಾರ್ಥಕವಾಯಿತೆಂದು ಭಾವಿಸಿದ ತರುಣರೆಷ್ಟೋ ಮಂದಿ. ಅವಳ ಮಂದಹಾಸದ ಕಾಂತಿಯು ತಮ್ಮ ಕಡೆಗೆ ಬಿದ್ದಿತೆಂದು ಹರ್ಷೋನ್ಮತ್ತರಾಗಿ ಜಯಕಾರ ಮಾಡಿದ ಯುವಕರೆಷ್ಟೋ ಮಂದಿ. ಮೆರವಣಿಗೆಯು ಮುಂದುವರಿದಂತೆ ಸಖಿಯರ ಕಟಾಕ್ಷವನ್ನು ಬಯಸುವ ತರುಣರ ಉದ್ವಿಗ್ನ ಹೃದಯಗಳೊಂದು ಕಡೆ. ಆ ಕಟಾಕ್ಷಗಳಿಂದ ಧನ್ಯರಾದೆವೆಂದು ಹರ್ಷಚಿತ್ತರಾದವರು ಮತ್ತೊಂದು ಕಡೆ. ಬಾದಷಹನು ಈ ಮೆರವಣಿಗೆಯು ಹೊರಟುಹೋದ ಮೇಲೆ ಪಲ್ಲಕ್ಕಿಯ ಮೇಲೆ ಕುಳಿತು ಮಿತ್ರಪರಿವಾರದೊಂದಿಗೆ ಹೊರಟಿದ್ದನು. ಅವನ ಜೊತೆಯಲ್ಲಿ ದೊಡ್ಡ ಖಾಜೀಸಾಹೇಬರು ಹೊರಟಿದ್ದರು. ಬಾದಷಹನು ಐದಾರು ಮೈಲಿಗಳು, ಹತ್ತು ಮೈಲಿಗಳಿಗೊಂದು ಮೊಕ್ಕಾಂಮಾಡುತ್ತ ಹೊರಟನು. ಗುಡ್ಡಗುಡ್ಡಗಳ ಮೇಲೆ, ವನಪ್ರದೇಶಗಳಲ್ಲಿ, ಝರಿಗಳ ದಡದಲ್ಲಿ, ಎಲ್ಲರಿಗೂ ಪ್ರಶಸ್ತವಾದ ವಾಸಭವನಗಳು ನಿರ್ಮಿತವಾಗಿದ್ದವು. ಎಲ್ಲರೂ ತಮತಮಗಾಗಿ ಸಜ್ಜುಗೊಳಿಸಿದ್ದ ವಾಸಭವನಗಳಲ್ಲಿ ಇಳಿಯುತ್ತಿದ್ದರು. ಬಾದಷಹನು ತರುಣ ಸರದಾರರುಗಳೊಂದಿಗೆ ಬೇಟೆಗೆ ಹೋಗುತ್ತಿದ್ದನು. ಅವನಿಗೆ ಮೃಗಗಳನ್ನು ಕೊಲ್ಲುವುದರಲ್ಲಿ ಆಸಕ್ತಿ ಇರಲಿಲ್ಲ. ವಿಧವಿಧವಾದ ಪಕ್ಷಿಗಳು. ಆ ಪಕ್ಷಿಗಳ ನಿನಾದ, ಮತ್ತೊಂದು ಕಡೆ ಕ್ರೂರ ಮೃಗಗಳ ಆರ್ಭಟ, ಇನ್ನೊಂದು ಕಡೆ ಪ್ರಶಾಂತ ವನಪ್ರದೇಶದಲ್ಲಿ ಹರಿಯುವ ಝರಿಗಳ ಸೌಂದರ್ಯ, ಮತ್ತೊಂದು ಕಡೆ ಪ್ರಪಾತದಲ್ಲಿ ಧುಮುಕುತ್ತಿರುವ ಜಲಪ್ರವಾಹದ ಶಬ್ದ, ಇವುಗಳನ್ನು ನೋಡಿ ಹರ್ಷಿಸುತ್ತಿದ್ದನು. ಬೇಟೆಗಾರರು ಅಲ್ಲಲ್ಲಿ ಮೃಗಗಳನ್ನು ಹೊಡೆದುಕೊಂಡಾಗ ಔರಂಗಜೇಬನ ಮನಸ್ಸು ವ್ಯಥಿತವಾಗುತ್ತಿದ್ದಿತು. ಬುದ್ಧಿವಂತರಾದ ಸಂಗಡಿಗರಿಗೆ ಇದೊಂದು ಸಮಸ್ಯೆಯೇ ಆಗಿದ್ದಿತು. ಈ ಮಹಾಪುರುಷನು ಜನಮಧ್ಯದಲ್ಲಿರುವಾಗ ಎಷ್ಟು ಕಠೋರಹೃದಯ ! ಈ ವನಮಧ್ಯದಲ್ಲಿರುವಾಗ ಎಂತಹ ಕೋಮಲ ಮನಸ್ಸು-ಎಂದುಕೊಳ್ಳುತ್ತಿದ್ದರು. ಮಧ್ಯಾಹ್ನದ ಬಿಸಿಲು ಬೇಗೆಯಲ್ಲಿ ಪರಿತಪ್ತನಾಗಿ ರೋಷನಾರಳ ಪಟಭವನಕ್ಕೆ ಹೋಗಿ ಮಾತನಾಡುತ್ತ ವಿಶ್ರಾಂತಿ ಪಡೆಯುತ್ತಿದ್ದನು. ಸಖಿಯರು ಬಾದಷಹ

ನಿಗೆ ಗಾಳಿ ಬೀಸುತ್ತಿದ್ದರು. ಅವರನ್ನು ಸಣ್ಣಸಣ್ಣ ಹಾಸ್ಯಮಾಡಿ ನಾಚಿಸು ತ್ತಿದ್ದನು. ರೋಷನಾರಳು ವಿಧವಿಧವಾದ ಷರಬತ್ತುಗಳನ್ನು ತಂದು ಕೊಟ್ಟು ಬಾದಷಹನನ್ನು ಉಪಚರಿಸುತ್ತಿದ್ದಳು.

ಸಂಧ್ಯಾಕಾಲವು ಬೇಗ ಮುಗಿದು ಕತ್ತಲೆಯು ಕವಿಯುತ್ತಾ ಬಂದಾಗ ಪ್ರಾರ್ಥನೆ ಮಾಡಿ ಖಾಜೀ ಸಾಹೇಬರೊಡನೆ ದೇವರ ರಾಜ್ಯದ ಬಗ್ಗೆ ಚರ್ಚೆ ಮಾಡುತ್ತಿದ್ದನು.

ಔರಂಗಸೇಬನು ದೇವರ ರಾಜ್ಯದ ಮಾತನಾಡುವಾಗ ಸಾಧುಸಂತರು, ಋಷಿಮುನಿಗಳು ಇವರಿಗಿಂತಲೂ ನಾಲ್ಕು ಹೆಜ್ಜೆ ಮುಂದುವರೆಯುತ್ತಿದ್ದನು. ಈ ಭೂಮಿಯ ಮೇಲೆ ಜನರುಇಷ್ಟೊಂದು ರಾಗದ್ವೇಷಗಳನ್ನು ಕಟ್ಟಿಕೊಂಡು ಏಕೆ ಹೋರಾಡುತ್ತಾರೆ ? ಐಶ್ವರ್ಯ ಬಡತನಗಳ ಮೂಲವೇನು ? ಇದೆಲ್ಲಾ ಹುಟ್ಟಿನಿಂದ ಬರುವುದೇ ಅಥವಾ ಕರ್ಮವೇ ? ಈ ಜನಜೀವನದಲ್ಲಿ ದೇವರ ಕೈವಾಡವೇನು ? ಇತ್ಯಾದಿ ಪ್ರಶ್ನೆಗಳನ್ನು ದೊಡ್ಡ ದೊಡ್ಡ ವಿದ್ವಾಂಸರೊಡನೆ, ಖಾಜಿಗಳೊಡನೆ ಚರ್ಚೆ ಮಾಡುತ್ತಿದ್ದನು. ಅವನದೇ ಒಂದು ಸ್ವಂತ ಸಿದ್ಧಾಂತವಿದ್ದಿತು. ದೇವರು ಎಲ್ಲರಿಗೂ ಸಮಾನ. ಅವನ ಕರುಣೆಯು ಸರ್ವರ ಮೇಲೆಯೂ ಸಮೃದ್ಧವಾಗಿದೆ. ಆದರೆ ಜನರು ಅಜ್ಞಾನಿಗಳು. ಅವರಲ್ಲಿಯೇ ಹುಟ್ಟಿದ ದೋಷಗಳು ಅವರನ್ನೇ ತಿನ್ನುತ್ತವೆ. ದೇವರನ್ನು ಮರೆತವರು ಪಾಪಿಗಳಾಗುತ್ತಾರೆ. ಅವರು ಪಾಪಗಳನ್ನೇ ಮಾಡುತ್ತಾರೆ. ಪಾಪಗಳನ್ನೇ ಭುಂಜಿಸುತ್ತಾರೆ. ಅಂತಹವರಿಗೆ ದುಃಖ, ಖೇದ, ಕಷ್ಟ ನಿಷ್ಠೂರಗಳು ಪ್ರಾಪ್ತವಾಗುತ್ತವೆ. ಇದು ಪ್ರತ್ಯಕ್ಷ ಪ್ರಮಾಣ—ಎಂದು ವಾದಿಸುತ್ತಿದ್ದನು.

ಖಾಜೀ ಸಾಹೇಬರು ಶಾಸ್ತ್ರಾರ್ಥ ಮಾಡುವಾಗ ಬಾದಷಹನನ್ನೂ ಲೆಕ್ಕಿಸುತ್ತಿರಲಿಲ್ಲ. "ಇಷ್ಟು ತಿಳಿದವನು ನೀನು. ದೇವರನ್ನು ನಂಬಿದವನು. ನೀನು ಖುರಾನು ಓದುತ್ತೀ, ಪ್ರಾರ್ಥನೆ ಮಾಡುತ್ತೀ. ನಿನಗೇಕೆ ಇಷ್ಟು ಮನಸ್ಸಿನ ಕ್ಲೇಶಗಳು ಬರುತ್ತವೆ ? ಕ್ರೋಧ, ಆಗ್ರಹ, ದ್ವೇಷ ಇವೆಲ್ಲವೂ ಉಕ್ಕಿ ಬರುತ್ತವೆ ಇದೇಕೆಂದು ವಿಚಾರ ಮಾಡಿದ್ದೀಯಾ ?"

"ವಿಚಾರ ಮಾಡಿದ್ದೇನೆ. ಇನ್ನೂ ಆಮರಣಾಂತ ವಿಚಾರ ಮಾಡು ತ್ತೇನೆ. ಅದೆಲ್ಲವೂ ಸೈತಾನನ ಗುಣಗಳು ದೇವರಿಗೆ ಒಪ್ಪಿಗೆಯಿಲ್ಲ. ಅದು

ನಮ್ಮ ಆಪ್ತೇಷ್ಟರು, ರಕ್ತಬಾಂಧವರು ಮಾಡಿದ ಪಾಪಗಳ ಫಲ. ಅವುಗಳನ್ನು ನಾನು ಮೈಮೇಲೆ ತೆಗೆದುಕೊಂಡು ಅನುಭವಿಸುತ್ತೇನೆ. ಪಶ್ಚಾತ್ತಾಪ ಉಂಟು. ಪ್ರತಿದಿನವೂ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತೇನೆ. ಆ ದೋಷಗಳಿಂದಲೇ ನಾನು ಈ ಭೂಮಿಯಲ್ಲಿದ್ದೇನ. ಈ ಪಾಪ ಭೂಮಿಯಲ್ಲಿದ್ದೇನೆ. ಇಲ್ಲದಿದ್ದರೆ ದೇವರ ರಾಜ್ಯದಲ್ಲಿ ನನಗೆ ಸುಖವಾದ ಖುಲಾಸಾದ ಸ್ಥಾನವಿದೆ, ಆನಂದವಿದೆ"—ಎಂದು ಹೇಳುತ್ತಾ ಮಾತುಗಳು ನಿಂತುಹೋಗುತ್ತಿದ್ದವು ಕಣ್ಣುಗಳಲ್ಲಿ ಧಾರಾಕಾರವಾಗಿ ಕಣ್ಣೀರು ಸುರಿಯುತ್ತಿತ್ತು. ಕೊನೆಗೆ 'ದೇವರೇ ಕಾಪಾಡು' ಎಂದು ಕೂಗಿಕೊಳ್ಳುತ್ತಿದ್ದನು. ಒಂದೊಂದು ಬಾರಿ ಬಿಕ್ಕಿಬಿಕ್ಕಿ ಅತ್ತುಬಿಡುತ್ತಿದ್ದನು.

ಅದೇ ಶಿಬಿರದಲ್ಲಿ ಮತ್ತೊಂದುಕಡೆ ರೋಷನಾರಳ ಆನಂದೋತ್ಸವಗಳು ನಡೆಯುತ್ತಿದ್ದವು. ಅವಳು ಪಾನಮಾಡಿ ಮನಸ್ಸನ್ನು ತಣಿಸಿಕೊಳ್ಳುತ್ತಿದ್ದಳು. ಸಖಿಯರೊಡನೆ ಸಲ್ಲಾಪಮಾಡಿ ಮನಸ್ಸು ದಣಿಸಿಕೊಳ್ಳುತ್ತಿದ್ದಳು.

ಸಖಿಯರು ಆಕ್ರೋಶದಿಂದ ಪುರುಷರ ಮೇಲೆ ಹೇಳುವ ದೂರುಗಳನ್ನು ಸಂತೋಷವಾಗಿ ಕೇಳುತ್ತಿದ್ದಳು. ಪ್ರೇಮಬಂಧನದಲ್ಲಿ, ಪ್ರಣಯ ಭಂಗಗಳಲ್ಲಿ ಯಾರದು ಸರಿ ಯಾರದು ತಪ್ಪು—ಎಂದು ನಿರ್ಣಯಿಸುವುದು ಅಸಾಧ್ಯ ವೆಂದುಕೊಳ್ಳುತ್ತಲಿದ್ದಳು. ಸಖಿಯರನ್ನು ಸಮಾಧಾನಪಡಿಸುತ್ತಿದ್ದಳು. ಸಖಿಯರು ವನವಿಹಾರಗಳಿಗೆ ಹೊರಟುಹೋಗುತ್ತಿದ್ದರು. ದೂರ ದೂರ ಹೋಗಿಬಿಡುತ್ತಿದ್ದರು. ಆ ಏಕಾಂತದಲ್ಲಿ ರೋಷನಾರಳು "ಈ ಸಖಿಯರಿಗೆ ಈ ಪುರುಷಪ್ರೇಮದ ಹಂಬಲ. ಎಲ್ಲವನ್ನೂ ಬಿಟ್ಟು ಹೋಗುತ್ತಾರೆ. ನನ್ನನ್ನೂ ಮರೆತುಬಿಡುತ್ತಾರೆ. ದೇವರು ಈ ಸಖಿಯರಿಗೆ ಇಷ್ಟೊಂದು ಸೌಂದರ್ಯ ಯೌವನಗಳನ್ನು ಕೊಟ್ಟಿರುವುದೇಕೆ? ಅದರಿಂದಲೇ ಈ ತರುಣಿಯರು ಜಗತ್ತನ್ನು ಆಕರ್ಷಿಸುತ್ತಾರೆ. ಆ ಪ್ರೇಮಪ್ರವಾಹದಲ್ಲಿ ತೇಲುವಾಗ ಬಂಡೆಗಳಿಗೆ ತಲೆ ತಗುಲಿ ರೋಧಿಸುತ್ತಾರೆ. ಇದೂ ಒಂದು ಪ್ರೇಮದ ಸ್ವರೂಪವೇ" ಎಂದುಕೊಳ್ಳುತ್ತಾಳೆ. ತನ್ನ ಮನಸ್ಸನ್ನು ತಾನೇ ಅಳೆಯಲು ಪ್ರಯತ್ನಪಡುತ್ತಾಳೆ, ನನ್ನನ್ನು ಜನರೇನೆಂದುಕೊಳ್ಳುತ್ತಾರೆ? ನಾನು ಯಾವ ಪುರುಷನನ್ನೂ ಪೂರ್ಣವಾಗಿ ಪ್ರೇಮಿಸದಂಥಾ ಕಠೋರ ಹೃದಯಳೆಂದುಕೊಳ್ಳುತ್ತಾರೆ, ಅದೇಕೆ ಆ ಪುರುಷರೇ ತಮ್ಮ ಮನಸ್ಸುಗಳನ್ನು

ಆಳಿದುಕೊಂಡು ಉತ್ತರ ಹೇಳಿಕೊಳ್ಳಲಿ. ನಾನೇಕೆ ಕಷ್ಟಪಡಬೇಕು? ಯಾವ ಪುರುಷನೂ ನನ್ನ ಮನಸ್ಸಿಗೆ ಮೆಚ್ಚಿಗೆಯಾಗುವುದಿಲ್ಲ. ವಿದ್ಯೆಯಿದ್ದರೆ ಪರಾಕ್ರಮವಿಲ್ಲ. ಪರಾಕ್ರಮವಿದ್ದರೆ ಸೌಂದರ್ಯವಿಲ್ಲ. ಎಲ್ಲವೂ ಇದ್ದರೂ ಪ್ರಭುತ್ವವಿಲ್ಲ. ಇವರೆಲ್ಲರೂ ಈ ಬಾದಶಹನ ದಾಸಾನುದಾಸರು. ಇವರಲ್ಲಿ ಪೌರುಷವೆಲ್ಲಿ ಬಂತು? ನಾನು ಬಾದಶಹನ ಅಧಿಷ್ಠಾತಿ. ನಮಾನಮಗೆ ಎಷ್ಟೊಂದು ಅಂತರವಿದೆ! ಇಲ್ಲ, ನಾನೆಂದಿಗೂ ಒಬ್ಬ ಪುರುಷನನ್ನು ಬಯಸಿ ಆವನ ದಾಸಳಾಗುವವಳಲ್ಲ. ಈ ಜೀವನ ಹಾಳಾಗಿಹೋಗಲಿ ಎಂದು ನಿರಾಶಾವಾದದಲ್ಲಿ ಆಲೋಚನೆಯನ್ನು ಮುಳುಗಿಸಿ ಪಾನಮಾಡಿ ಮನಸ್ಸನ್ನು ತಣಿಸಲು ಪ್ರಯತ್ನಮಾಡುತ್ತಿದ್ದಳು. ಮತ್ತೆ ಪಾನ. ಮತ್ತೆ ಪಾನ: ಹೀಗೆ ಪಾನದಿಂದ ಉನ್ಮತ್ತಳಾಗಿ ಹುಚ್ಚಿಯಂತೆ ನಗುತ್ತಾ ನಿಲುಗನ್ನಡಿಯ ಮುಂದೆ ನಿಂತುಕೊಂಡು 'ರೋಷನಾರಾ! ನೀನೇಕೆ ಹುಟ್ಟಿದೆ' ಎಂದು ತಲೆ ತಲೆ ಚಚ್ಚಿಕೊಳ್ಳುತ್ತಿದ್ದಳು. ಸಖಿಯರು ಬೆಳಗಿನಿಂದ ಸಂಜೆಯವರೆಗೆ ಗುಂಪು ಗುಂಪಾಗಿ ವನವಿಹಾರದಲ್ಲಿ ಆಸಕ್ತರಾಗಿ ಕುಣಿಯುತ್ತಿದ್ದರು. ವೃಕ್ಷಗಳ ಕೆಳಗೆ ನೆರಳಿನಲ್ಲಿ ಕುಳಿತು ಹೂವಿನ ಹಾರಗಳನ್ನು ಕಟ್ಟಿ ಒಬ್ಬರ ಕೊರಳಿಗೊಬ್ಬರು ಹಾಕುತ್ತಿದ್ದರು. ಪರಸ್ಪರ ಕೇಶರಾಶಿಗಳನ್ನು ಹೂವುಗಳಿಂದ ಕಟ್ಟಿ ಅಲಂಕರಿಸುತ್ತಿದ್ದರು. ಬಣ್ಣಗಳ ಪನ್ನೀರನ್ನು ಒಬ್ಬರ ಮೇಲೊಬ್ಬರು ಚುಮುಕಿಸಿ ಆ ನಾನಾ ರಂಗುಗಳು ಎಷ್ಟು ಒಪ್ಪುತ್ತವೆ ಎಂದು ಕೇಕೆ ಹಾಕಿ ಕುಣಿಯುತ್ತಿದ್ದರು. ಆಲಿದೆಲೆದು ಕುಣಿಕುಣಿದು ಶ್ರಮವಾದಾಗ ನೆರಳಿನಲ್ಲಿ ಕುಳಿತುಪಾನಮಾಡುತ್ತಿದ್ದರು.

ಆದೇ ಶಿಬಿರದಲ್ಲಿ ಬಂದಿದ್ದ ತರುಣ ಸರದಾರರು ಈ ಸಖಿಯರ ಸುಳಿವು ಹಿಡಿದು ವನಭೂಮಿಗಳಲ್ಲಿ ಅವರ ಅಂದ ಚಂದ ವೈಯಾರದಾಟಗಳನ್ನು ನೋಡುವ ಕುತೂಹಲದಿಂದ ಹಿಂಬಾಲಿಸಿ ಹೋಗುತ್ತಿದ್ದರು. ಎಷ್ಟೋ ಬಾರಿ ರೇಗಿದ ಹೆಣ್ಣುಗಳ ಕೈಯಿಂದ ಪೆಟ್ಟು ತಿಂದು ದೂರ ದೂರ ಸರಿಯುತ್ತಿದ್ದರು. ಆ ಹೆಣ್ಣುಗಳನ್ನು ಬೇಡಿ ಸ್ವಲ್ಪ ಮದ್ಯವನ್ನು ಪಡೆಯಲು ಎಷ್ಟೋ ಪ್ರಯತ್ನಪಡುತ್ತಿದ್ದರು. ಅರ್ಧಸಿಕ್ತವಾದ ಮಧುಪಾತ್ರೆಯಲ್ಲಿ ಸ್ವಲ್ಪ ಮಧ್ಯವು ಬೀರಿತ್ತರೆ ಆ ಹೆಂಗಳ ಕೈಯಿಂದ ದೊರೆತರೆ ಅಂಥವನು ಭಾಗ್ಯವಂತನೆಂದು ಸ್ನೇಹಿತರು ಕೊಂಡಾಡುತ್ತಿದ್ದರು. ಸಂಧ್ಯಾಕಾಲವಾಗುತ್ತಲೇ ಎಲ್ಲರೂ ವಾಸಭವನದಲ್ಲಿ ಸೇರಿಕೊಳ್ಳುತ್ತಿದ್ದರು.

ಒಬ್ಬೊಬ್ಬರಾಗಿ ಬಂದು ರೋಷನಾರಳ ಭೇಟಿಮಾಡುತ್ತಿದ್ದರು. ಒಬ್ಬರ ರಹಸ್ಯವನ್ನು ಮತ್ತೊಬ್ಬರು ಭೇದಿಸಿ ಹೇಳಿ ಪರಿಹಾಸ್ಯಮಾಡಿ ನಗುತ್ತಿದ್ದರು. ಹೀಗೆ ವನದಿಂದ ವನಕ್ಕೆ. ಮಜಲಿನಿಂದ ಮಜಲಿಗೆ ಹೋಗುತ್ತಾ ರೋಷನಾರಳ ಕಾಶ್ಮೀರಾ ಯಾತ್ರೆಯು ಕಾಶ್ಮೀರವನ್ನು ತಲುಪಿತು.

ಕಾಶ್ಮೀರದಲ್ಲಿ ಬಾದಷಹನು ಎರಡು ತಿಂಗಳ ಕಾಲ ವಾಸಮಾಡಿದನು. ಈ ಕಾಶ್ಮೀರಾ ಯಾತ್ರೆಯು ಬಾದಷಹನ ಮನಸ್ಸಿನಲ್ಲಿ ಚಿರಕಾಲ ನೆನಪಿನಲ್ಲಿದ್ದಿತು. ರೋಷನಾರಳು ಪ್ರತಿದಿನವೂ ಸುತ್ತಮುತ್ತಲ ರಮ್ಯಪ್ರದೇಶಗಳಿಗೆ ಹೋಗಿಬರುತ್ತಿದ್ದಳು. ರೋಷನಾರಳ ಮನಸ್ಸಿಗೆ ಕಾಶ್ಮೀರವನ್ನು ಬಿಟ್ಟು ಹಿಂದಿರುಗುವ ಮನಸ್ಸೇ ಇರಲಿಲ್ಲ. ಬಾದಷಹನು ದಿನ ದಿನವೂ ಎಷ್ಟೋ ವಿಷಯಗಳನ್ನು ಕುರಿತು ರೋಷನಾರಳೊಂದಿಗೆ ಮಾತನಾಡುತ್ತಿದ್ದನು. ರೋಷನಾರಳು ಕಾಶ್ಮೀರದ ಮೇಲೆ ತನಗಿರುವ ಮೋಹವನ್ನು ಅನೇಕ ಬಾರಿ ವ್ಯಕ್ತಪಡಿಸಿದಳು. ಔರಂಗಜೇಬನು "ತಂಗಿ! ನಿನಗಷ್ಟು ಪ್ರಿಯವಾಗಿದ್ದರೆ ಈ ರಾಜ್ಯದಲ್ಲಿಯೇ ನೀನು ಸುಖದಿಂದಿರು. ನಿನಗೆ ಎಲ್ಲ ಸೌಕರ್ಯಗಳನ್ನೂ ಏರ್ಪಡಿಸಿಕೊಡುತ್ತೇನೆ. ಪ್ರಿಯನಾದ ಪತಿಯೊಬ್ಬನನ್ನು ಒಲಿಸಿ ನೀನು ಇಲ್ಲೇ ಸುಲ್ತಾನಿಯಾಗಿರು" ಎಂದು ಹೇಳಿದನು.

ರೋಷನಾರಳು, "ಅಣ್ಣಾ! ನೀನು ನನ್ನ ಎಲ್ಲ ಬಯಕೆಗಳನ್ನು ಈಡೇರಿಸುವೆಯೆಂಬ ನಂಬಿಕೆಯು ನನಗೆ ಪರಿಪೂರ್ಣವಾಗಿದೆ. ಮದುವೆಯ ಮಾತು! ಅದು ಬಲು ದೂರದ ಮಾತು. ಡೆಲ್ಲಿ ಬಾದಷಹನ ಕುವರಿ ನಾನು. ಮತ್ತು ಬಾದಷಹನ ಸೋದರಿ. ಅಂಥಾ ನನ್ನನ್ನು ವರಿಸಲು ಎಷ್ಟೋ ಮಂದಿ ಪುರುಷರು ಹಾರಾಡಿರಬಹುದು. ಇನ್ನೂ ತಪಸ್ಸು ಮಾಡುತ್ತಿರಬಹುದು. ಆ ಮದುವೆಯ ಬಯಕೆಯಿದ್ದರೆ ಎಂದೋ ನಡೆದುಹೋಗುತ್ತಿತ್ತು. ನಾನು ನನ್ನ ಹೃದಯ, ಮನಸ್ಸು, ಪ್ರೇಮ. ಎಲ್ಲವನ್ನೂ ಎರಕಹಲ್ಲಿ ಹೊಯ್ದು ನಿನ್ನಲ್ಲಿ ಅರ್ಪಿಸಿದ್ದೇನೆ. ಅದು ಸೋದರ ಪ್ರೇಮ. ಅದನ್ನು ಕಿತ್ತು ಮತ್ತೊಬ್ಬನಲ್ಲಿಡುವ ಕಲ್ಪನೆಯು ಕೂಡಾ ಅಸಂಭವ. ದೇವರು ಒಂದೇ ಮಣ್ಣಿನಿಂದ ನನನ್ನೂ ನಿನ್ನನ್ನೂ ಎರಕ ಹೊಯ್ದಿದ್ದಾನೆ. ಅದನ್ನಿನ್ನೂ ನೀನು ಅರಿತುಕೊಂಡಿಲ್ಲವೇನು ?" ಎಂದು ಕೇಳಿದಳು.

ಔರಂಗಜೇಬನು ರೋಷನಾರನ್ನು ಬಾಚಿ ತಬ್ಬಿಕೊಂಡು “ಆ ನಿನ್ನ ಸೋದರ ಪ್ರೇಮವನ್ನು ಮೊದಲೇ ಅರಿತುಕೊಂಡವನು ನಾನು. ನನ್ನ ಸಾಮ್ರಾಜ್ಯಕ್ಕಿಂತಲೂ ನೀನೇ ಅಧಿಕಳು” ಎಂದು ಹೇಳುತ್ತಾ ಅವಳ ಕಪೋಲಗಳನ್ನು ಚುಂಬಿಸಿದನು.

ಬಾದಷಹನು ಡೆಲ್ಲಿಗೆ ಹಿಂತಿರುಗುವಗ ಏರ್ಪಾಡುಗಳಾದ್ದವು ಈ ಪರಿವಾರದೊಡನೆ ಬಾದಷಹನು ಡೆಲ್ಲಿಗೆ ಹಿಂತಿರುಗಿದನು.



ಷಯಿಸ್ತಖಾನನು ಬಂಗಾಳಕ್ಕೆ ಹೊರಟುಹೋದ ಮೇಲೆ ಯುವರಾಜ ಮುಅಸಾಮನು ಶಿವಾಜಿಯ ಮೇಲೆ ಯುದ್ಧವನ್ನು ಹೂಡಿದನು. ಮೊಗಲ್ ಸೈನ್ಯಗಳನ್ನು ಜೊತೆಗೊಳಿಸಿ ಸಿಂಹಘಢಕ್ಕೆ ಮುತ್ತಿಗೆ ಹಾಕಿದನು. ನಾಲ್ಕುತಿಂಗಳು ಅನೇಕ ಸ್ಥಳಗಳಲ್ಲಿ ಯುದ್ಧವಾಯಿತು. ಮೊಗಲರಿಗೆ ಸಿಂಹಘಡವು ಅಧೀನವಾಗಲಿಲ್ಲ. ಮಳೆಗಾಲದಲ್ಲಿ ಕಾರ್ಯಾಚರಣೆಯು ಅಸಾಧ್ಯವೆಂದು ತಿಳಿದು ಯುವರಾಜನು ತನ್ನ ರಾಜಧಾನಿಯಾದ ಔರಂಗಾಬಾದಿಗೆ ಹಿಂತಿರುಗಿದನು. ಜೋಧ್‌ಪುರದ ಮಹಾರಾಜನಾದ ಜಸವಂತಸಿಂಗನನ್ನು ಪುಣೆಯಲ್ಲಿ ಬಿಟ್ಟುಹೋದನು. ಮರಾಠರಿಗೂ ಜಸವಂತಸಿಂಗನ ಸೈನ್ಯಗಳಿಗೂ ಅನೇಕ ಯುದ್ಧಗಳಾದವು. ನೇತಾಜಿ ಅನೇಕ ಯುದ್ಧಗಳಲ್ಲಿ ಸರಿಗಟ್ಟಿ ಎದುರಿಸಿದನು. ಶಿವಾಜಿಯು ‘ಮೊಗಲರ ಕಾರ್ಯಾಚರಣೆಯು ತೀವ್ರಗತಿಯಿಂದಿಲ್ಲ. ಏನೋ ಆಟವಾಡುತ್ತಿದ್ದಾರೆ. ಅವರನ್ನು ದೂರದಿಂದ ಸೆಳೆದರೆ ಮಹಾರಾಷ್ಟ್ರಕ್ಕೆ ಕಾಟ ತಪ್ಪುತ್ತದೆ’ ಎಂದು ಆಲೋಚನೆ ಮಾಡಿದನು. ಮೊಗಲರಿಗೆ ಸುಳಿವು ಕೊಡದೇ ಅಹಮದ್‌ನಗರದ ಮೇಲೆ ಪ್ರಬಲವಾದ ಧಾಳಿ ನಡೆಸುವಂತೆ ಏರ್ಪಾಡು ಮಾಡಿದನು. ಈ ಸಮಾಚಾರವು ಯುವರಾಜನಿಗೆ ತಿಳಿದು ಬರುತ್ತಲೇ ಜಸವಂತಸಿಂಗನನ್ನು ಸೈನ್ಯಸಮೇತವಾಗಿ ಅಹಮದ್‌ನಗರದ

ರಕ್ಷಣೆಗೆ ಕಳಿಸಿದನು. ಮರಾಠಾ ಸೇನಾಧಿಪತಿಗಳು ಅಹಮದ್‌ನಗರವನ್ನು ವಶಕ್ಕೆ ತೆಗೆದುಕೊಳ್ಳಬೇಕೆಂದು ಎಂದೂ ಹವಣಿಸಿರಲಿಲ್ಲ. ಅಹಮದ್ ನಗರದ ಧಾಳಿಯು ಫಲಪ್ರದವಾಗಿಯೇ ಆಯಿತು ಮರಾಠರಿಗೆ ಒಳ್ಳೆಯ ಲೂಟಿ ಸಿಕ್ಕಿತು. ಸಾವಿರ ಯುದ್ಧದ ಕುದುರೆಗಳನ್ನೂ ಶಸ್ತ್ರಾಸ್ತ್ರಗಳನ್ನೂ ಸ್ವಾಧೀನಪಡಿಸಿಕೊಂಡು ಹೊರಟುಹೋಗಿದ್ದರು. ಜಸವಂತಸಿಂಗನು ಸೈನ್ಯ ಸಮೇತವಾಗಿ ಅಹಮದ್‌ನಗರದಲ್ಲಿ ಠಾಣೆ ಹಾಕಿದನು. ಶಿವಾಜಿಯು ತನ್ನ ಸಂಗಡಿಗರೊಡನೆ ಹೇಳಿದನು. "ನಮ್ಮ ವ್ಯೂಹ ರಚನೆಯು ಒಳ್ಳೆಯ ಫಲ ವತ್ತಾಗಿದೆ. ಮೊಗಲರು ಅಡಿಗಡಿಗೂ ದಾರಿ ತಪ್ಪುತ್ತಿದ್ದಾರೆ. ಇವರೊಡನೆ ಒಂದುಕಡೆ ಯುದ್ಧದ ಆಟವಾಡಬೇಕು; ಮತ್ತೊಂದು ಕಡೆ ಬಲವಾದ ಪೆಟ್ಟು ಕೊಡಬೇಕು. ನಾಲ್ಕೂ ಕಡೆಗಳಿಂದ ಬೆದರಿಸಿದರೆ ಮಾತ್ರವೇ ಈ ಮೊಗಲರು ದಿಕ್ಕೆಟ್ಟು ಕಂಗಾಲಾಗುತ್ತಾರೆ" ಎಂದು ಹೇಳಿ ಹಾಸ್ಯ ಮಾಡಿದನು. ಮೊಗಲರ ಗಡಿ ಪ್ರದೇಶಗಳಲ್ಲಿ ಅಲ್ಲಲ್ಲಿ ಮರಾಠರು ಸೈನಿಕರು ನುಗ್ಗಿ ಹಾವಳಿ ಮಾಡುತ್ತಿದ್ದರು. ಸೇನಾಧಿಪತಿಗಳು ಮೊಗಲರಿಗೆ ಹೇಗೆ ಪೆಟ್ಟು ಕೊಡಬೇಕೆಂಬುದನ್ನು ಚೆನ್ನಾಗಿ ಅರಿತಿದ್ದರು. ಮರಾಠರ ಸಾವಿರ ಸೈನ್ಯಗಳು ಒಂದುಕಡೆ ಒಟ್ಟಾಗಿರುತ್ತಿರಲಿಲ್ಲ. ಆದರೆ ಇಲ್ಲಿ ಮರಾಠರ ಹತ್ತು ಸಾವಿರ ಸೈನ್ಯಗಳಿವೆ. ಅಲ್ಲಿ ಒಂದು ಸಹಸ್ರ ಸೈನ್ಯಗಳಿವೆ ಎಂಬ ವಾರ್ತೆಗಳು ಯುವರಾಜನಿಗೆ ಬರುತ್ತಲೇ ಇದ್ದವು. ಅಲ್ಲಿ ನೇತಾಜಿಯಿದ್ದಾನೆ, ಇಲ್ಲಿ ತಾನಾಜಿಯು ಬಂದಿದ್ದಾನೆ. ಈ ಸೈನ್ಯದ ಅಗ್ರೇಸರನು ಚಿಟ್ನಿಸ್ ಹೀಗೆ ಮೇಲಿಂದ ಮೇಲೆ ಸಮಾಚಾರಗಳು ಬರುತ್ತಿದ್ದವು. ಆ ಪ್ರಖ್ಯಾತ ಸೇನಾಧಿಪತಿಗಳು ಆ ಗಡಿ ನಾಡಿನಲ್ಲಿ ಸಂಚರಿಸುತ್ತಿದ್ದುದು ನಿಜ. ಆದರೆ ಅಷ್ಟು ದೊಡ್ಡ ಸೈನ್ಯಗಳಿವೆ ಎಂಬ ವಾರ್ತೆಗಳು ಊಹೆ ಮಾತ್ರ ನೇತಾಜಿಯು ಯುದ್ಧದಲ್ಲಿ ಹೇಗೆ ಅಸಮ ಸಾಹಸಿಯೋ ರಾಜಕೀಯ ಸಂಧಾನದಲ್ಲಿಯೂ ಅಷ್ಟೇ ನಿಪುಣನಾಗಿದ್ದನು. ಬಿಜಾಪುರದ ಗಡಿಯಲ್ಲಿ ರುಸ್ತುಂಖಾನನೆಂಬ ನವಾಬನಿದ್ದನು. ಅವನು 'ಈ ಬಿಜಾಪುರವು ಕುಸಿದು ಬೀಳುತ್ತಿದೆ. ನಾನೇಕೆ ಇವರ ಅಧೀನದಲ್ಲಿರಬೇಕು ? ಸ್ವಲ್ಪ ಸಾಹಸ ಮಾಡಿದರೆ ನಾನೂ ಶಿವಾಜಿಯಂತೆ ಸ್ವತಂತ್ರನಾಗುತ್ತೇನೆ' ಎಂದು ಆಲೋಚನೆ ಮಾಡುತ್ತಿದ್ದನು. ಅವನು ಯುವಕ. ಅವನಲ್ಲಿ

ಸೇರಿದ್ದ ಜನರೂ ಅಷ್ಟೇ ಹುಂಬಿನ ಜನರಾಗಿದ್ದರು. ಒಂದೆರಡು ಬಾರಿ ಯುವರಾಜ ಮುಅಸಾಮನು ಆರುಸ್ತುಂಖಾನನನ್ನು ಅಪಮಾನಗೊಳಿಸಿದ್ದನು. ಉದ್ದೇಶಪೂರ್ವಕವಾಗಿ ಮಾಡಿದ ಅಪಮಾನವಲ್ಲ ಅದು. ಯಾವನೋ ಒಬ್ಬ ತರುಣನು ಎಲ್ಲಿಯೋ ಸಣ್ಣ ಗ್ರಾಮದಲ್ಲಿ ಸೈನಿಕರ ಕೂಟವನ್ನು ಕಟ್ಟಿಕೊಂಡು ನವಾಬನೆಂದುಕೊಂಡು ಇದ್ದರೆ ಅವನನ್ನು ಮೊಗಲ್ ಸಾಮ್ರಾಜ್ಯದ ಯುವ ರಾಜನು ಲಕ್ಷ್ಯ ಮಾಡುವನೇ? ಯುವರಾಜನ ಸ್ನೇಹಕ್ಕಾಗಿ ರುಸ್ತುಂ ಖಾನನು ಒಂದೆರಡು ಬಾರಿ ಪ್ರಯತ್ನಪಟ್ಟಿದ್ದನು. ಯುವರಾಜನ ಸಮಾನ ಸ್ಕಂದ ಸ್ನೇಹಿತನೆಂದರೆ ಅದೊಂದು ಹೆಮ್ಮೆ. ಅಲ್ಲವೇ ಮತ್ತೆ!

ರುಸ್ತುಂಖಾನನು ನಜರುಗಳನ್ನು ತೆಗೆದುಕೊಂಡುಹೋಗಿ ಮುಅಸಾಮ ನನ್ನು ಭೇಟಿ ಮಾಡಿದನು. ಯುವರಾಜನು ಆದರದಿಂದ ಮಾತನಾಡಿಸಿ "ನಿಮಗೇನು ಬೇಕು, ಖಾ಼ ಸಾಹೇಬರೇ" ಎಂದು ಪ್ರಶ್ನೆ ಮಾಡಿದನು.

"ಈ ಗಡಿನಾಡಿನಲ್ಲಿ ನಾನೊಬ್ಬ ನವಾಬ. ಮೊದಲು ಈ ಪ್ರದೇಶ ಆದಿಲ್‌ಷಾಹಿಗೆ ಸೇರಿತ್ತು.ಆದಿಲ್‌ಷಾಹಿಯ ಆಶ್ರಯದಲ್ಲಿರುವುದು ನನ್ನಂತಹ ವರಿಗೆ ಅಪಮಾನಕರವಾಗಿದೆ. ಶಿವಾಜೀ ಮಹಾರಾಜನಂತೆ ನಾನೂ ಸ್ವತಂತ್ರ ನಾಗಿದ್ದೇನೆ. ಆದರೆ ನಮ್ಮಂತಹ ಸಣ್ಣರಾಜರ ಸ್ವಾತಂತ್ರ್ಯವು ಎಷ್ಟು ಕಾಲ ಉಳಿದೀತು?ನಾನು ಮೊಗಲ್ ಸಾಮ್ರಾಜ್ಯದೊಳಗೆ ಸೇರಿಬಿಡಬೇಕೆಂದಿದ್ದೇನೆ. ತಾವು ಅನುಗ್ರಹವಿಟ್ಟು ದರಬಾರಿನಿಂದ ಸನ್ನದು ತರಿಸಿ ಕೊಡಬೇಕು" ಎಂದು ವಿನಯದಿಂದ ಪ್ರಾರ್ಥಿಸಿದನು.

ಯುವರಾಜನು "ರುಸ್ತುಂಖಾನ್! ನೀನು ಒಳ್ಳೇ ಯೋಧ್ಯನಂತೆ ಕಾಣುತ್ತಿ. ಈ ಹವ್ಯಾಸವನ್ನು ಬಿಟ್ಟು ನಮ್ಮ ಸೈನ್ಯಕ್ಕೆ ಸೇರಿಬಿಡು. ತಕ್ಕ ಸ್ಥಾನಮಾನಗಳನ್ನು ಕೊಟ್ಟು ಆದರದಿಂದ ನಿನ್ನನ್ನು ಸೇನೆಗೆ ಸೇರಿಸಿಕೊಳ್ಳು ತ್ತೇನೆ. ಮೊಗಲ್ ದರ್ಬಾರಿನಲ್ಲಿ ಈ ಸಣ್ಣ ನವಾಬ್‌ಗಿರಿಗಿಂತಲೂ ಅದು ದೊಡ್ಡ ಪದವಿ. ನಿನಗೆ ಯೋಗ್ಯತೆ ಇದ್ದರೆ ಹತ್ತು ಸಾವಿರ ದಂಡಿನ ಸೇನಾಧಿ ಪತಿಯಾಗಬಹುದು. ಆದಿಲ್‌ಷಾಹಿಗೂ ನಮಗೂ ಒಪ್ಪಂದವಾಗಿದೆ. ಅವರು ಡೆಲ್ಲಿಯ ಸಾಮಂತರೆಂದು ಒಪ್ಪಿಗೆ ಕೊಟ್ಟು ವರ್ಷೇ ವರ್ಷೇ ಕಪ್ಪಕಾಣಿಕೆ ಗಳನ್ನು ನಿಗದಿಯಾಗಿ ಕೊಡುತ್ತಿದ್ದಾರೆ. ನಿನ್ನ ಸಣ್ಣ ನವಾಬ್‌ಗಿರಿಗಾಗಿ

ನಾವು ಆದಿಲ್ ಷಾಹಿಯನ್ನು ಅಗೌರವ ಪಡಿಸುವುದಕ್ಕಾಗುವುದಿಲ್ಲ” ಎಂದು ಹೇಳಿದನು. ರುಸ್ತುಂ ಖಾನನು ಉದ್ವಿಗ್ನನಾಗಿ ಹಿಂದೆ ಮುಂದೆ ಆಲೋಚನೆ ಮಾಡದೆ“ಜಹಾಪನಾ! ಇಂದು ಸಣ್ಣ ನವಾಬನಾದವನು ನಾಳೆ ಸುಲ್ತಾನನಾಗುವುದರಲ್ಲಿ ಆಶ್ಚರ್ಯವೇನೂ ಇಲ್ಲ” ಎಂದ.

ಮುಅಸಾಮುನಿಗೆ ಕೋಪ ಬರಲಿಲ್ಲ. ಅವನು ನಕ್ಕು, “ನೀನಾಡುವ ಮಾತುಗಳು ಡೆಲ್ಲಿಯ ಸಿಂಹಾಸನದ ಮುಂದೆ ಆಡುತ್ತಿದ್ದೇನೆಂದು ಎಚ್ಚರವಿರಲಿ ರುಸ್ತುಂಖಾನ್. ನೀನು ತರುಣ. ನಿನ್ನನ್ನು ನೋಡಿದರೆ ನನಗೆ ಖುಷಿಯಾಗುತ್ತದೆ. ಆದರೆ ದರ್ಬಾರೀ ಮರ್ಯಾದೆಯನ್ನು ಮೀರಿದವರಿಗೆ ಏನುಶಿಕ್ಷೆಯಾಗುವುದೆಂಬುದನ್ನು ಅರಿತಿಲ್ಲವೇ ನೀನು. ಈ ಬಾರಿಗೆ ನಿನ್ನನ್ನು ಕ್ಷಮಿಸಿದ್ದೇನೆ, ಹೋಗು” ಎಂದು ಹೇಳಿ ಕಳುಹಿಸಿದನು.

ಹೀಗೆ ಅಪಮಾನಿತನಾಗಿ ಹಿಂದಿರುಗುತ್ತಿದ್ದ ರುಸ್ತುಂಖಾನನನ್ನು ನೇತಾಜಿಯು ಮಾರ್ಗಮಧ್ಯದಲ್ಲಿ ಎದುರಿಸಿದನು. ಸಣ್ಣ ಪರಿವಾರ. ಯುದ್ಧದ ಸಂಭವವೇ ಇಲ್ಲ. ಇಂತಹ ಸಮಯದಲ್ಲಿ ಏಕಾಏಕೀ ಮರಾಠಾ ಸೈನ್ಯಗಳು ಸುತ್ತುಗಟ್ಟಿವೆ. ಖಾನನು ಧೃತಿಗೆಡಲಿಲ್ಲ. ಧೈರ್ಯವನ್ನು ತಂದುಕೊಂಡು ಸೇನಾಧಿಪತಿಯ ಭೇಟಿಗೆ ಹೇಳಿಕಳುಹಿಸಿದನು. ನೇತಾಜಿಯು ತಾನೇ ಬಂದು ರುಸ್ತುಂಖಾನನನ್ನು ಆಲಂಗಿಸಿದನು “ಬಾ ರುಸ್ತುಂ! ವೀರರಿಗೆ ವೀರರು ಜೋಡಿ. ಯುವರಾಜನ ಸಮ್ಮುಖಕ್ಕೆ ಏಕೆ ಹೋದೆ? ಮುಸಲ್ಮಾನರು ಕೀರಿಟವಿಟ್ಟಾರೆಂದು ಹೋದೆಯಲ್ಲವೇ ? ಬಾ, ನಮ್ಮ ಶಿಬಿರಕ್ಕೆ ಬಾ” ಎಂದು ಬೆನ್ನುತಟ್ಟಿ ಪ್ರೋತ್ಸಾಹಿಸಿ ತನ್ನ ಶಿಬಿರಕ್ಕೆ ಕರೆದೊಯ್ದನು. “ನೋಡು, ರುಸ್ತುಂ, ವೀರರಿಗೆ ಒಂದೇ ಒಂದು ಹಾದಿ ಇರಬೇಕು. ಇದು ನಮ್ಮ ಅನುಭವದ ಮಾತು. ಯಾರಿಗೂ ತಲೆ ಬಾಗಬಾರದು. ನಾವೂ ನೀನೂ ಸಮಾನಸ್ಕಂದರು. ಇಂದಿನಿಂದ ಮೈತ್ರಿ ಮಾಡಿಕೊಳ್ಳೋಣ. ಆದಿಲ್‌ಷಾಹಿಯಾದರೇನು, ಮೊಗಲ್‌ಷಾಹಿಯಾದರೇನು? ನಮಗೆ ಎರಡೂ ಒಂದೇ ನಾವು ಪರಾಕ್ರಮದಿಂದ ಯುದ್ಧಮಾಡಿಗೆದ್ದರೆ ಅದನ್ನು ಅವರಿಗೊಪ್ಪಿಸಬೇಕು. ಸೋತರೆ ಮರಣ, ಇಲ್ಲವೇ ಕಾರಾಗೃಹ. ಸಮಾನಸ್ಕಂದರಲ್ಲಿ ಸ್ನೇಹವು ಬೆಳೆಯುತ್ತದೆ. ಸಿಕ್ಕಿದ ಕಡೆ ನೀನು ಧಾಳಿ ನಡೆಸು. ನಾವು ಮದತ್ತು ಕೊಡು

ತ್ತೇವೆ. ಸಮಯ ಬಂದಾಗ ಇಬ್ಬರೂ ಸೇರಿ ಶಾಸ್ತಿ ಮಾಡೋಣ" ಎಂದು ಹೇಳಿದನು.

"ಸೇನಾಧಿಪತಿಗಳೇ! ಇಂದಲ್ಲ, ಎಂದೋ ಆ ಮಾರ್ಗವನ್ನು ನಿಶ್ಚಯ ಮಾಡಿದ್ದೇನೆ. ಶಿವಾಜಿ ಮಹಾರಾಜರನ್ನು ನೋಡಿ ಅಷ್ಟು ಬುದ್ಧಿ ಕಲಿತಿಲ್ಲವೇ ನಾನು? ಒಂದು ಬಾರಿ ಹಂಗು ಕಳೆದುಕೊಳ್ಳೋಣವೆಂದು ಯುವರಾಜನ ಭೇಟಿಗೆ ಹೋಗಿದ್ದೆ. ಅವನು ನಿರಾಕರಿಸಿದ. ನಾನು ಅವನೆದುರಿನಲ್ಲಿಯೇ ಖಡಾಖಡಿ ಹೇಳಿ ಬಂದಿದ್ದೇನೆ. 'ಇಂದು ಸಣ್ಣ ನವಾಬನಿರಬಹುದು. ನಾಳೆ ಸುಲ್ತಾನನಾಗುವುದನ್ನು ನೋಡುವಿ' ಎಂದು ಹೇಳಿದೆ. ಅದನ್ನು ಕಾರ್ಯತಃ ಮಾಡಿ ತೋರಿಸದಿದ್ದರೆ ನಾನು ರುಸ್ತುಂಖಾನನೇ? ನೋಡಿ ! ನಿಮ್ಮ ಸ್ನೇಹವಾದದ್ದು ನನ್ನ ಪುಣ್ಯ. ಖುದಾನ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಖುರಾನನ್ನು ಮುಟ್ಟಿಪ್ರಮಾಣ ಮಾಡುತ್ತೇನೆ. ಇನ್ನು ಮುಂದೆ ನಾನು ನಿಮ್ಮ ಸ್ನೇಹಿತ" ಎಂದು ನೇತಾಜಿಯ ಕೈ ಮೇಲೆ ಕೈತಟ್ಟಿ ಪ್ರಮಾಣಮಾಡಿದನು. ನೇತಾಜಿಯು ಖಾನನಿಗೆ ರಾಜಯೋಗ್ಯವಾದ ಔತಣವನ್ನು ಮಾಡಿಸಿ, ಉಡುಗರೆಗಳನ್ನು ಕೊಟ್ಟು ಒಂದು ಕುದುರೆಯನ್ನು ಬಹುಮಾನವಾಗಿ ಕೊಟ್ಟು ಕಳಿಸಿದನು.

ರುಸ್ತುಂ ಖಾನನು ಮತ್ತೊಂದು ಕಡೆಯಿಂದ ಜನರನ್ನು ಕಟ್ಟಿಕೊಂಡು ಮೊಗಲ್ ಪ್ರದೇಶದ ಊರುಗಳ ಮೇಲೆ ಲೂಟಿಮಾಡಲಾರಂಭಿಸಿದನು.

ನೇತಾಜಿಯು ಶಿವಾಜಿಯಲ್ಲಿಗೆ ಹೋಗಿ ಈ ಕಥೆಯನ್ನು ಹೇಳಿದನು. "ಒಳ್ಳೆಯ ಕೆಲಸ ಮಾಡಿದೆ, ನೇತಾಜಿ. ಮುಳ್ಳಿನಿಂದ ಮುಳ್ಳು ತೆಗೆಯಬೇಕು. ಹೀಗೆಯೇ ಕೈಗೆ ಸಿಕ್ಕಿದ ಮುಸಲ್ಮಾನರನ್ನು ಎತ್ತಿ ಕಟ್ಟಿ ಸಹಾ ಕೊಡಬೇಕು" ಎಂದು ಹೇಳಿದನು.

ಶಿವಾಜಿಯು ಪ್ರಚಂಡ ಸೈನ್ಯವನ್ನು ತೆಗೆದುಕೊಂಡು ಪೋರ್ಚುಗೀಸರ ಮೇಲೆ ಯುದ್ಧಕ್ಕೆ ಹೊರಟಿದ್ದಾನೆಂಬ ವದಂತಿ ಹಬ್ಬಿತು. ಗುಪ್ತಚಾರರು ಯುವರಾಜನಲ್ಲಿಗೆ ಬಂದು "ಪೋರ್ಚುಗೀಸರಿಗೂ ಶಿವಾಜಿಗೂ ವೈಮನಸ್ಯ ಉಂಟಾಗಿದೆ. ಶಿವಾಜಿಯು ಹತ್ತು ಸಾವಿರ ಕುದುರೆಯ ಬಲವನ್ನೂ ಹತ್ತು ಸಾವಿರ ಕಾಲುಬಲವನ್ನೂ ತೆಗೆದುಕೊಂಡು ಪಶ್ಚಿಮದ ಕಡೆಗೆ ಹೊರಟಿದ್ದಾನೆ

ಗೋವಾ ಕೊಂಕಣ ಸೀಮೆಗಳನ್ನು ಆಕ್ರಮಣಮಾಡುತ್ತಾನೆ” ಎಂದು ಅರಿಕೆ ಮಾಡಿದರು.

ಯುವರಾಜನು “ಒಳ್ಳೆಯದೇ ಆಯಿತು. ಅದೆಲ್ಲಾ ಆದಿಲ್‌ಷಾಹಿಗೆ ಸೇರಿದ ಪ್ರದೇಶಗಳು. ಅವರು ನೋಡಿಕೊಳ್ಳಬೇಕು. ಅಲ್ಲಿ ಸಣ್ಣ ಸಣ್ಣ ರಾಜರೂ ಪಾಳೆಯಗಾರರೂ ಕದನಗಳನ್ನು ಮಾಡುತ್ತಿದ್ದಾರೆ. ಅವರಲ್ಲನೇಕರು ಬಿಜಾಪುರಕ್ಕೆ ವಿರೋಧಿಗಳಾಗಿ ಎದ್ದಿದ್ದಾರೆ. ಶಿವಾಜಿಯು ಅವರೊಡನೆ ಸೇರಿಕೊಳ್ಳಲಿ. ಬಿಜಾಪುರವು ಸಣ್ಣಗಾಗುತ್ತದೆ. ಅದರಿಂದ ನಮಗೆ ಅನುಕೂಲವೇ ಆಯಿತು. ಪೋರ್ಚುಗೀಸರು ಮಾತ್ರ ಈ ಶಿವಾಜಿಯನ್ನು ಸುಮ್ಮನೆ ಬಿಡುವವರಲ್ಲ. ಪೋರ್ಚುಗೀಸ್ ಸೈನಿಕರು ಯುದ್ಧದಲ್ಲಿ ತರಬೇತಾದ ಸೈನಿಕರು. ಅವರಲ್ಲಿ ಬೇಕಾದಷ್ಟು ಬಂದೂಕುಗಳಿವೆ. ತೋಪುಗಳಿವೆ. ಅವರು ಶಿವಾಜಿಯನ್ನು ಹಣ್ಣು ಮಾಡುತ್ತಾರೆ. ಆ ವಿದೇಶೀಯರೆಲ್ಲಾ ರಾಜಕೀಯ ನೈಪುಣ್ಯವುಳ್ಳವರು. ಇಂಗ್ಲೀಷರೂ, ಡಚ್ಚರೂ ಅವರೊಂದಿಗೆ ಸೇರಿಕೊಂಡರೂ ಸೇರಿಕೊಳ್ಳಬಹುದು” ಎಂದು ತನ್ನ ಅಧಿಕಾರಿಗಳೊಂದಿಗೆ ಯುವರಾಜನು ಹೇಳಿಕೊಂಡನು.

ಆ ಕಾಲದಲ್ಲಿ ಸೂರತ್ ನಗರವು ಬಹು ದೊಡ್ಡ ವ್ಯಾಪಾರಸ್ಥಳ. ಅದು ತಪತೀನದಿಯ ದಕ್ಷಿಣದಲ್ಲಿದೆ. ಸಮುದ್ರಕ್ಕೆ ಹನ್ನೆರಡು ಮೈಲಿಗಳ ದೂರದಲ್ಲಿದೆ. ಹಡಗುಗಳು ಸೂರತ್ತಿಗೆ ಬಂದು ಹೋಗುತ್ತವೆ. ಯಾವಾಗಲೂ ಸೂರತ್ತಿನಲ್ಲಿ ಹಡಗುಗಳೂ ಪತ್ತೆಮಾರಿಗಳೂ ದೋಣಿಗಳೂ ತುಂಬಿ ನಿಬಿಡವಾಗಿ ನಿಂತಿರುತ್ತವೆ. ಇಂಗ್ಲೀಷರು, ಪೋರ್ಚುಗೀಸರು, ಫ್ರೆಂಚರು, ಡಚ್ಚರೂ ಇವರ ದೊಡ್ಡ ದೊಡ್ಡ ಕೋಠಿಗಳಿವೆ. ಕೋಟ್ಯಾಧೀಶರಾದ ಮಹಮದೀಯ ವರ್ತಕರಿದ್ದಾರೆ. ಪೇಟೆಯು ಪರದೇಶೀ ವಸ್ತುಗಳಿಂದ ಸರ್ವದಾ ಜಗಜಗಿಸುತ್ತದೆ. ಪ್ರತಿದಿನವೂ ಲಕ್ಷಾಂತರ ರೂಪಾಯಿಗಳ ವ್ಯಾಪಾರವಾಗುತ್ತದೆ. ಸಮುದ್ರತೀರದಿಂದ ಸೂರತ್ತಿನವರೆಗೆ ಸೊಗಸಾದ ರಾಜಮಾರ್ಗವಿದೆ. ಜನರೂ ಬಂಡಿಗಳೂ ಹಗಲಿರುಳೂ ಓಡಿಯಾಡುತ್ತವೆ. ಅನೇಕ ರಾಜಮಾರ್ಗಗಳಿಂದಲೂ ಸಣ್ಣ ಸಣ್ಣ ಬೀದಿಗಳಿಂದಲೂ ನಗರವು ನಿರ್ಮಾಣವಾಗಿದೆ. ರಾಜರು ವಾಸಮಾಡುವಂಥಾ ಮಹಲುಗಳು

ಬೇಕಾದಷ್ಟಿವೆ. ಬಡವರ ನಿವಾಸಗಳಿಗೂ ಕೊರತೆಯಿಲ್ಲ. ನಾನಾ ದೇಶದ ನಾನಾ ಜಾತಿಯ ಜನರು ಆ ನಗರದಲ್ಲಿ ವಾಸಮಾಡುತ್ತಾರೆ. ಎಲ್ಲರೂ ವ್ಯಾಪಾರಿಗಳು. ಕಾರಕೂನರೂ ಸೇವಕರೂ ಬೇಕಾದಷ್ಟು ಮಂದಿ ಇದ್ದಾರೆ. ಆ ಕಾಲದಲ್ಲಿ ಆ ಪಟ್ಟಣವು ಇಪ್ಪತ್ತು ಲಕ್ಷ ಜನಭರಿತವಾದ ಪಟ್ಟಣವೆಂದು ಪ್ರಖ್ಯಾತವಾಗಿದ್ದಿತು. ನಗರದ ಬಹಿರುದ್ಯಾನಗಳು ಅನೇಕವಾಗಿದ್ದವು. ಆ ಉದ್ಯಾನಗಳಲ್ಲಿ ಕಾರಂಜಿಗಳೂ ಲತಾಗೃಹಗಳೂ ಶಿಲಾಮಂಟಪಗಳೂ ಬೇಕಾದಷ್ಟಿದ್ದವು. ನಗರದ ಭಾಗ್ಯವಂತರು ರಥಗಳ ಮೇಲೂ, ದೊಡ್ಡ ದೊಡ್ಡ ಎತ್ತಿನ ಬಂಡಿಗಳ ಮೇಲೂ ಕುಳಿತು ವನಭೋಜನಗಳಿಗಾಗಿಯೂ ವನವಿಹಾರಗಳಿಗಾಗಿಯೂ ಆ ಉದ್ಯಾನಗಳಿಗೆ ಹೋಗುತ್ತಿದ್ದರು. ಕ್ರೈಸ್ತರ ಚರ್ಚುಗಳೂ ಪಾದ್ರಿಗಳೂ ಆ ನಗರದಲ್ಲಿದ್ದವು. ಮಸೀದಿಗಳೂ ಮೌಲ್ವಿಗಳೂ ಖಾಜಿಗಳೂ ಇದ್ದರು. ಹಿಂದುಗಳ ದೇವಾಲಯಗಳೂ ಪುರೋಹಿತರೂ ಇದ್ದರು. ಊರಿನಲ್ಲಿ ಒಳ್ಳೆ ಶಿಸ್ತು ಇದ್ದಿತು. ನಗರ ರಕ್ಷಕರ ಕಾವಲು ಭದ್ರವಾಗಿದ್ದಿತು. ಈ ನಗರವು ಮೊಗಲ್ ಸಾಮ್ರಾಜ್ಯಕ್ಕೆ ಸೇರಿದ ನಗರ, ಭಾರತ ವರ್ಷದಲ್ಲಿ ಪಶ್ಚಿಮ ತೀರದಲ್ಲಿ ಮೊಗಲರ ಕಣ್ಣೆನಂತಿದ್ದ ನಗರ. ಹಿಂದೂಸ್ಥಾನದಿಂದ ಮೆಕ್ಕಾಯಾತ್ರೆಗೆ ಹೊರಡುವ ಮಹಮದೀಯರೆಲ್ಲರೂ ಸೂರತ್ತಿಗೆ ಬಂದು ಅಲ್ಲಿಂದಲೇ ಮೆಕ್ಕಾಯಾತ್ರೆಗೆ ಹೊರಡುತ್ತಿದ್ದರು. ಮೆಕ್ಕಾ ಪುಣ್ಯ ಸ್ಥಳಕ್ಕೆ ಸೂರತ್ ನಗರವು ಹೆಬ್ಬಾಗಿಲೆಂದು ಭಾವಿಸಲ್ಪಟ್ಟಿತ್ತು. ಮೊಗಲ್ ಸಾಮ್ರಾಟರಿಂದ ನೇಮಿಸಲ್ಪಟ್ಟ ಕಿಲ್ಲೇದಾರನು ಈ ನಗರದ ಸರ್ವಾಧಿಕಾರಿಯಾಗಿದ್ದನು. ಮೊಗಲರ ನ್ಯಾಯಸ್ಥಾನವಿದ್ದಿತು. ಆ ನ್ಯಾಯಾಧೀಶರಿಗೂ ಬಹಳ ಗೌರವವಿದ್ದಿತು. ಕೊತ್ವಾಲರು ನಗರ ರಕ್ಷಣೆಯ ಭಾರವನ್ನು ವಹಿಸಿಕೊಂಡಿದ್ದರು. ನಗರ ರಕ್ಷಣೆಗೆ ಹತ್ತು ಸಾವಿರ ಮೊಗಲ್ ಫೌಜು ಇಡಲ್ಪಟ್ಟಿತ್ತು. ಕಿಲ್ಲೇದಾರನಾದ ಇನಾಯತ್‌ಖಾನನು ಬಹು ದರ್ಪದಿಂದ ಅಧಿಕಾರ ಚಲಾಯಿಸುತ್ತಿದ್ದನು. ಇನ್ನೂರು ಮಂದಿ ಮೊಗಲ್ ಸೈನಿಕರ ಬೆಂಗಾವಲಿನ ದಳವಿದ್ದಿತು. ಅವರಿಗೆಲ್ಲಾ ಒಳ್ಳೆಯ ದಿರಸುಗಳಿದ್ದವು. ಆ ದಿರಸುಗಳನ್ನು ಹಾಕಿಕೊಂಡು ಕಿಲ್ಲೇದಾರನ ಹಿಂದೆ ಅವರು ಶಿಸ್ತಿನಿಂದ ನಡೆಯುತ್ತಿದ್ದರೆ ಎಂಥವರಿಗಾದರೂ ಭಯಹುಟ್ಟುವಂತಿತ್ತು. ಕಿಲ್ಲೇದಾರನು ಪ್ರತಿದಿನವೂ ದರಬಾರು ನಡೆಸುತ್ತಿದ್ದನು. ಜನಸಾಮಾನ್ಯರೆಲ್ಲರೂ ಅವನನ್ನು

ನವಾಬನೆಂದು ಕರೆಯುತ್ತಿದ್ದರು. ಅವನ ಸ್ವಂತ ಜೀವನದಲ್ಲಿ ನವಾಬ್‌ಗಿರಿಯ ಐಶಕ್ಕುಗಳೆಲ್ಲಾ ಇದ್ದವು. ಅವನು ನಗರದಲ್ಲಿ ಹೊರಟಾಗ ಆನೆಯ ಮೇಲೆ ಕುಳಿತು ಬರುತ್ತಿದ್ದನು. ಎಡಬಲ ಪಾರ್ಶ್ವಗಳಲ್ಲಿ ಬೆಂಗಾವಲಿನವರೂ ಶಸ್ತ್ರ ಪಾಣಿಗಳಾದ ಮೊಗಲ್ ಸೈನಿಕರೂ ಅಟ್ಟಹಾಸದಿಂದ ಬರುತ್ತಿದ್ದರು. ಈ ನವಾಬನು ಒಳ್ಳೆಯ ಉಪಾಯಗಾರ. ಮಿತಿಮೀರಿದ ದ್ರವ್ಯಾಪೇಕ್ಷೆ. ಎಲ್ಲ ವಿಧದಲ್ಲಿಯೂ ಬೇಕಾದಷ್ಟು ವರಮಾನವು ಬರುತ್ತಿತ್ತು. ಹೊರದೇಶದಿಂದ ಬರುವ ಮಾಲುಗಳ ಸುಂಕಸಾರಿಗೆ ವಸೂಲಿಯು ಬಹಳ ಕಟ್ಟುನಿಟ್ಟಾಗಿದ್ದಿತು. ಎಂಥಾ ದೊಡ್ಡ ವ್ಯಾಪಾರಿಗಳಾದರೂ ಆ ಸುಂಕದ ಕಟ್ಟೆಯ ಜಬರದಸ್ತಿಗೆ ಭಯಪಡುತ್ತಿದ್ದರು. ಆ ನಗರ ರಕ್ಷಣೆಗೆ ಇಡಲ್ಪಟ್ಟಿದ್ದ ಹತ್ತು ಸಾವಿರ ಮೊಗಲ್ ಸೈನ್ಯಕ್ಕೆ ಭತ್ಯ ಸಂಬಳಗಳನ್ನು ನವಾಬನೇ ಕೊಡಬೇಕಾಗಿದ್ದಿತು. ಆ ಹೊರೆಯನ್ನು ತಪ್ಪಿಸಿಕೊಳ್ಳಲು ಯಾವುದೋ ನೆಪಹಚ್ಚಿ ಆ ಸೈನ್ಯಗಳನ್ನು ದೂರ ದೂರ ಪ್ರದೇಶಗಳಿಗೆ ಕಳುಹಿಸಿಬಿಟ್ಟಿದ್ದನು.

ಇಂಗ್ಲೀಷ್ ಕೋಠಿಯು ಬಹಳ ಶಿಸ್ತಿನಿಂದ ಲಾಭಕರವಾಗಿ ನಡೆಯುತ್ತಿದ್ದಿತು. ಕಂಪನಿಯ ಪ್ರೆಸಿಡೆಂಟ್ ಸರ್ ಜಾರ್ಜ್ ಆಕ್ಸಾಂಡರ್ ಎಂಬುವನು ಬಹಳ ಹೆಸರುವಾಸಿಯಾಗಿದ್ದನು. ಮೊಗಲ್ ಕಿಲ್ಲೇದಾರನಿಗೆ ಸರಿಸಮಾನಸ್ಥನಂತೆ ಪ್ರೆಸಿಡೆಂಟ್‌ಗೂ ಬೆಂಗಾವಲಿನವರೂ ಇತರ ಎಲ್ಲ ಐಶಕ್ಕುಗಳೂ ಇದ್ದವು. ಒಂದು ದಿನ ಬಿಸಿಲು ಕಾಲದಲ್ಲಿ ಬೈರಾಗಿಯೊಬ್ಬನು ಚಿಂದಿ ಬಟ್ಟೆಗಳನ್ನು ಧರಿಸಿಕೊಂಡು ಬಿದಿರು ಕೋಲೂರಿಕೊಂಡು ಪೇಟೆಯ ಬೀದಿಯಲ್ಲಿ ಹೋಗುತ್ತಿದ್ದನು. ಆ ಕಾಲದಲ್ಲಿ ಇಂತಹ ಫಕೀರರೂ ಸನ್ಯಾಸಿಗಳೂ ಎಷ್ಟೋ ಮಂದಿ ಸೂರತ್ ಪಟ್ಟಣದಲ್ಲಿ ಅಲೆದಾಡುತ್ತಿದ್ದರು. ಅಂಗಡಿ ಬೀದಿಗಳಲ್ಲಿ ರಥಗಳ ಮತ್ತು ಗಾಡಿಗಳ ಮೇಲೆ ಶ್ರೀಮಂತರೂ ಓಡಿಯಾಡುತ್ತಿದ್ದರು. ಸಾಮಾನ್ಯ ವರ್ತಕರು ಕಾಲು ನಡಿಯಲ್ಲಿಯೇ ಸಂಚಾರಮಾಡುತ್ತಿದ್ದರು. ಬಿಸಿಲು ತಾಪಕ್ಕಾಗಿ ಎಲ್ಲ ಅಂಗಡಿಗಳ ಮುಂದೆಯೂ ಅರವಟ್ಟಿಗಳನ್ನಿಟ್ಟು ಕುಡಿಯುವುದಕ್ಕೆ ನೀರು ಕೊಡುತ್ತಿದ್ದರು. ಬೈರಾಗಿಯು ಒಂದು ಹಿಂದೂ ಅಂಗಡಿಯ ಬಾಗಿಲಿನಲ್ಲಿ ಕುಳಿತು ನೀರಡಿಕೆ ತೀರಿಸಿಕೊಂಡನು. ಆ ಕಾಲದಲ್ಲಿ ಮಂತ್ರವಾದಿಗಳು, ಜ್ಯೋತಿಷ್ಕರು ಎಂದರೆ ಜನ ಮುತ್ತುತ್ತಿದ್ದರು. ಈ ತೇಜಸ್ವಿಯಾದ ಬೈರಾಗಿಯನ್ನು ಕಂಡು "ಏನು ಗೋಸಾಯಿಗಳೇ, ಜ್ಯೋತಿಷ್ಯ

ಹೇಳುತ್ತೀರಾ? ಮಂತ್ರವಾದ ಬಲ್ಲಿರಾ?" ಎಂದು ಅನೇಕರು ಪ್ರಶ್ನೆಗಳನ್ನು ಹಾಕುತ್ತಿದ್ದರು. ಬೈರಾಗಿಯು "ಇಲ್ಲಪ್ಪ, ಪ್ರಶ್ನೆ ಮಂತ್ರಗಳೊಂದೂ ಇಲ್ಲ. ಕೊಂಕಣದ ಕಡೆಯಿಂದ ಸುತ್ತಿಕೊಂಡು ಬರುತ್ತಿದ್ದೇನೆ. ಮಹಾರಾಷ್ಟ್ರದ ಕಡೆಗೆ ಹೋಗುತ್ತೇನೆ" ಎಂದನು. ಜನರು ತಮ್ಮ ತಮ್ಮೊಳಗೇ ಮಾತನಾಡಿ ಕೊಳ್ಳುತ್ತಿದ್ದರು.

"ಶಿವಾಜಿ ಮಹರಾಜ! ಅವನ ಹೆಸರು ಹೇಳಿದರೆ ಸಾಕು. ಮುಸಲ್ಮಾನರು ಹೆದರುತ್ತಾರೆ. ಅತ್ತ ಬಿಜಾಪುರದವರಿಗೂ ಹೊಡೆತ ಕೊಡುತ್ತಾನೆ, ಮೊಗಲರಿಗೂ ಮಣ್ಣು ಮುಕ್ಕಿಸುತ್ತಾನೆ. ಅವನು ಮಂತ್ರವಾದಿ. ಸಮರ್ಥ ರಾಮದಾಸರ ಶಿಷ್ಯ. ಮೊನ್ನೆ ಮೊನ್ನೆ ಮೊಗಲ್ ಸೇನಾಧಿಪತಿ ಷಾಯಿಸ್ತಾ ಖಾನನಿಗೆ ಆದ ಗತಿ ಕೇಳಿಲ್ಲವೇ ನೀವು? ಅಷ್ಟೊಂದು ಮಹಾ ಸೈನ್ಯವಿತ್ತು. ಕಾವಲುಗಾರರಿದ್ದರು. ಪಹರೆಯವರಿದ್ದರು. ಇದ್ದಕ್ಕಿದ್ದಂತೆ ಅರಮನೆಯೊಳಗೆ ಶಿವಾಜಿ ಕಾಣಿಸಿಕೊಂಡು ಎಲ್ಲರನ್ನೂ ಹೊಡೆದಟ್ಟಬಿಟ್ಟ. ಶಿವಾಜಿಯ ಮಂತ್ರವಾದದ ಪವಾಡಗಳು ದೆಹಲಿಯ ಅರಮನೆಯಲ್ಲಿಯೂ ಆಶ್ಚರ್ಯ ವನ್ನುಂಟುಮಾಡಿವೆ. ಈಗ ದೊಡ್ಡ ಸೈನ್ಯ ತೆಗೆದುಕೊಂಡು ಪೋರ್ಚುಗೀಸರ ಮೇಲೆ ಬೀಳುತ್ತಾನಂತೆ. ಗೋವಾ ಹಿಡಿದು ಬಿಡುತ್ತಾನೆ. ಕೊಂಕಣವೂ ಅಷ್ಟೆ.- ಅವನ ಕೈಗೆ ಬಿದ್ದಂತೆಯೇ. ಶಿವಾಜಿ ಮಹಾರಾಜನನ್ನು ಎದುರಿಸು ವವರು ಯಾರೂ ಇಲ್ಲ."

—ಎಂದು ಮಾತನಾಡಿಕೊಳ್ಳುತ್ತಿದ್ದರು. ಬೈರಾಗಿಯು ಈ ಮಾತು ಗಳನ್ನು ಕಿವಿಗೊಟ್ಟು ಕೇಳುತ್ತಾ ಊರಲೆಲ್ಲಾ ಅಲೆದಾಡಿ ನೋಡಿದನು. ಎಲ್ಲ ಕಡೆಯೂ ಶಿವಾಜಿಯ ಗೋವಾ ಯಾತ್ರೆಯ ಮಾತೇ. ಇಂಗ್ಲೀಷ್ ಕೋಠಿಯಲ್ಲಿಯೂ ಈ ಮಾತುಗಳಿಗೇನೂ ಕಡಿಮೆ ಇರಲಿಲ್ಲ. ಪ್ರೆಸಿಡೆಂಟ್ ಆಕ್ಸಂಡರ್ ಕೂಡ ಈ ಮಾತುಗಳನ್ನು ಕೇಳಿದ್ದನು.

"ಶಿವಾಜಿಯು ಇಂದು ಗೋವಾಕ್ಕೆ ಹೊರಟಿದ್ದಾನೆ. ನಾಳೆ ನಮ್ಮ ಮೇಲೆಯೂ ಬರಬಹುದು" ಎಂದನು.

ಮತ್ತೊಬ್ಬ ಇಂಗ್ಲೀಷ್ ಸರದಾರನು "ಶಿವಾಜಿಗೂ ನಮಗೂ ಯಾವ ವೈಮನಸ್ಯಗಳೂ ಇಲ್ಲ. ನಿಕೋಲಸ್ ರಾಯಭಾರಿಯು ಶಿವಾಜಿಯು ಬಹಳ

ದೊಡ್ಡ ಮನುಷ್ಯನೆಂದು ಹೇಳುತ್ತಾನೆ. ಅದೂ ಅಲ್ಲದೇ ಇಲ್ಲಿ ಮೊಗಲರ ಬಲವಾದ ರಕ್ಷಣೆ ಇದೆ" ಎಂದು ಹೇಳಿದನು.

ಆಕ್ಸಂಡರನು "ಇಲ್ಲ ಇಲ್ಲ. ಇಂದಲ್ಲ ನಾಳೆ ಶಿವಾಜಿಯ ದೃಷ್ಟಿ ಈ ನಗರದ ಮೇಲೆ ಬಿದ್ದೇ ಬೀಳುತ್ತದೆ. ನೋಡೋಣ. ಆ ಜಗಳ ಮೊಗಲರದು–ಮರಾಠರದು. ಈ ಮಧ್ಯೆ ನಾವೇಕೆ ತಲೆ ಕೆಡಿಸಿಕೊಳ್ಳಬೇಕು? ಈ ಹಿಂದೂಸ್ಥಾನದಲ್ಲಿ ರಾಜರಿಗೂ ಪಾಳೆಯಗಾರರಿಗೂ ಜಗಳ, ಸುಲ್ತಾನರಿಗೂ ಬಾದಷಹರಿಗೂ ಜಗಳ. ಈ ಮಧ್ಯೆ ನಾವು ಸಿಕ್ಕಿಕೊಂಡರೆ ನಮ್ಮ ವ್ಯಾಪಾರ ಸಾಪಾರಗಳೆಲ್ಲಾ ಹಾಳಾಗಿ ಹೋಗುತ್ತೆ. ಪೋರ್ಚುಗೀಸರು ಅದೇ ತಪ್ಪು ಮಾಡುತ್ತಿದ್ದಾರೆ. ಅವರನ್ನು ನೋಡಿಯಾದರೂ ನಾವು ಬುದ್ಧಿ ಕಲಿಯದಿದ್ದರೆ ಹೇಗೆ?" ಎಂದನು.

ಬೈರಾಗಿಯು ಊರು ನೋಡಿದನು. ಕಿಲ್ಲೇದಾರನ ಕೋಟೆ ಅರಮನೆಗಳನ್ನು ನೋಡಿದನು. ಇಂಗ್ಲೀಷ್, ಫ್ರೆಂಚ್ ಕೋಠಿಗಳನ್ನು ನೋಡಿದನು. ಎಲ್ಲವನ್ನೂ ನೋಡಿಕೊಂಡು ಇದ್ದಕ್ಕಿದ್ದಂತೆ ಮಾಯವಾದನು. ಆ ಗೋಸಾಯಿಯು ಮತ್ತಾರೂ ಅಲ್ಲ. ಶಿವಾಜಿ ಮಹಾರಾಜ.

ಶಿವಾಜಿಯು ತನ್ನ ಶಿಬಿರಕ್ಕೆ ಹೋಗಿ ನಾಲ್ಕು ಸಾವಿರ ಬಲವಾದ ಕುದುರೆಯ ಸೈನ್ಯವನ್ನು ತೆಗೆದುಕೊಂಡು ಏಕಾಏಕಿ ಹೊರಟನು. ಅವನ ವಿಜಯಯಾತ್ರೆಯು ಎತ್ತ ಕಡೆ ಹೊರಟದೆ ಎಂಬುದು ಮರಾಠಾ ಸೈನಿಕರಿಗೆ ತಿಳಿಯಲಿಲ್ಲ. ಒಂದು ವಾರದ ದಿನ ಪ್ರಯಾಣಮಾಡಿ ಸೂರತ್ ನಗರಕ್ಕೆ ಹತ್ತು ಮೈಲಿಗಳ ದೂರದಲ್ಲಿ ಬೀಡುಬಿಟ್ಟನು. ಕಿಲ್ಲೇದಾರ್ ಇನಾಯತ್ ಖಾನನಿಗೆ ಪತ್ರವನ್ನು ಬರೆದು ದೂತರ ಮುಖೇನ ಕಳುಹಿಸಿಕೊಟ್ಟನು.

"ಸೂರತ್ತಿನಲ್ಲಿರುವ ಮೂರು ಮುಸಲ್ಮಾನ್ ವ್ಯಾಪಾರಸ್ಥರನ್ನು ಹಿಡಿಸಿ ತಂದು ಸಮರ್ಪಿಸಬೇಕು. ಹಾಜೀ ಸಯದ್ ಬೇಗ್, ಬಹರ್‌ಜೀ ಬೋರಾ, ಹಾಜೀ ಕ್ವಾಸಿಂ. ಈ ಮೂವರು ಶ್ರೀಮಂತರು ನಮ್ಮಲ್ಲಿ ಹಾಜರಾಗಬೇಕು. ನೀನೂ ಬಂದು ಶರಣಾಗತನಾಗಬೇಕು. ಇದಕ್ಕೆ ತಪ್ಪಿದಲ್ಲಿ ಸೂರತ್ ನಗರವನ್ನೆಲ್ಲ ಮರಾಠಾ ಸೈನಿಕರು ಧ್ವಂಸ ಮಾಡಿಬಿಡುತ್ತಾರೆ" ಎಂದು ಪತ್ರ ಬರೆದು ದೂತರನ್ನಟ್ಟಿದನು.

ಕಿಲ್ಲೇದಾರ್ ಇನಾಯತ್‌ಖಾನನು "ನಾವು ಶರಣಾಗತರಾಗುವ

ಮಾತೆಲ್ಲಿ ಬಂತು ? ಮೊಗಲ್ ಅಧಿಕಾರಿಗಳು ಎಲ್ಲಿಯೂ ತಲೆಬಾಗುವವರಲ್ಲ. ಆ ಮರಾಠಾ ಕಳ್ಳರು ಸೂರತ್ತಿಗೆ ಬಂದರೆ ತಕ್ಕ ಶಾಸ್ತಿಯಾಗುತ್ತದೆ" ಎಂದು ಹೇಳಿ ಕಳುಹಿಸಿದನು.

ಶಿವಾಜಿಯುಸ್ವಲ್ಪವೂ ತಡಮಾಡಲಿಲ್ಲ. ಮರಾಠಾ ಸೈನ್ಯಗಳುಹೋಗಿ ಸೂರತ್ ನಗರವನ್ನೆಲ್ಲಾ ಸುತ್ತುಗಟ್ಟಲೆಂದು ಆಜ್ಞಾಪಿಸಿದನು. ನಾಲ್ಕುಮೈಲಿ ವಿಸ್ತೀರ್ಣದ ಸೂರತ್ ನಗರವು ಮರಾಠಾ ಸೈನಿಕರಿಂದ ಆಕ್ರಮಣ ಮಾಡಿಲ್ಪಟ್ಟಿತು. ಶಿವಾಜಿಯು ಕುದುರೆಯ ಮೇಲೆ ಕುಳಿತು ಕತ್ತಿಯನ್ನು ಹಿಡಿದು ತಾನೇ ಸೂರತ್ ನಗರವನ್ನು ಪ್ರವೇಶ ಮಾಡಿದನು. ನಗರದ ಬಾಗಿಲಿನಲ್ಲಿಯೆ ಡಚ್ ಕೋಠಿ ಇತ್ತು. ಬೋರಾ ಬೇಗ್‌ನ ದೊಡ್ಡ ಮಹಲ್ ಇತ್ತು. ಶಿವಾಜಿಯು ನಿಂತು ಬೇಗ್ ಮನೆಯನ್ನೂ ಡಚ್ ಕೋಠಿಯನ್ನೂ ಲೂಟಿ ಮಾಡಿಸಿದನು. ಸೈನಿಕರು ಸಂದೂಕಗಳನ್ನು ಒಡೆದು ಮುತ್ತು, ರತ್ನ, ಬೆಳ್ಳಿ ಬಂಗಾರಗಳನ್ನೆಲ್ಲಾ ಸಾವಧಾನದಿಂದ ಸ್ವಾಧೀನ ಪಡಿಸಿಕೊಂಡರು. ಪಕ್ಕದಲ್ಲಿಯೇ ಕ್ರಿಸ್ತರ ಗುಡಿ ಇತ್ತು. ಪಾದ್ರಿಗಳು ಬಂದು ಶಿವಾಜಿಯನ್ನು "ನಮಗೆ ರಕ್ಷಣೆಯನ್ನು ಕೊಡಬೇಕು. ಪ್ರಾಣದಾನ ಮಾಡಬೇಕು" ಎಂದು ಪ್ರಾರ್ಥನೆ ಮಾಡಿದರು

ಶಿವಾಜಿಯು "ಕ್ರಿಸ್ತರ ಗುಡಿಯ ತಂಟಿಗೆ ಹೋಗಬಾರದು. ಕ್ರೈಸ್ತರ ಮನೆಗಳಿಗೆ ಕೈ ಹಚ್ಚಬಾರದು. ಕ್ರಿಸ್ತ ಜನರನ್ನು ಕೊಲೆ ಮಾಡಕೂಡದು" ಎಂದು ಅಪ್ಪಣೆ ಮಾಡಿದನು.

ಕಿಲ್ಲೇದಾರ್ ಇನಾಯತ್‌ಖಾನನು ಭಯದಿಂದ ಕೋಟೆಯೊಳಗೆ ಓಡಿ ಹೋಗಿ ತನ್ನ ಅರಮನೆಯಲ್ಲಿ ಅಡಗಿಕೊಂಡನು. ಮರಾಠರು ಎದುರಿಗೆ ಸಿಕ್ಕಿದ ಮೊಗಲರನ್ನು ಕಡಿದುಹಾಕಿದರು. ದೊಡ್ಡ ದೊಡ್ಡ ವ್ಯಾಪಾರಿಗಳ ಅಂಗಡಿ-ಮನೆಗಳನ್ನು ಕ್ರಮಕ್ರಮವಾಗಿ ಲೂಟಿ ಮಾಡಿದರು. ಹಾಜೀ ಸಯದ್ ಬೇಗ್‌ನ ಮನೆಯು ಇಂಗ್ಲೀಷ್ ಕೋಠಿಯ ಪಕ್ಕದಲ್ಲಿತ್ತು. ಆ ಮನೆಯನ್ನು ಪ್ರವೇಶಿಸಿ ಅಲ್ಲಿದ್ದ ಧನಕನಕಗಳನ್ನೆಲ್ಲಾ ದೋಚಿಕೊಂಡರು. ಹಾಜೀ ಕ್ವಾಸಿಂನ ಮನೆಯು ನಗರದ ಮಧ್ಯದಲ್ಲಿಯೇ ಇದ್ದಿತು. ಆ ಮನೆ, ಅಂಗಡಿಗಳನ್ನು ಲೂಟಿ ಮಾಡಿ, ಮನೆಯನ್ನು ನೆಲಸಮ ಮಾಡಿದರು. ಶಿವಾಜಿಯು ಇಂಗ್ಲೀಷ್ ಕೋಠಿಯ ಪ್ರೆಸಿಡೆಂಟನಿಗೆ ಬಂದು ಶರಣಾಗತನಾಗ

ಬೇಕೆಂದೂ, ಇಂಗ್ಲಿಷ್ ಕೋಠಿಯನ್ನು ಮರಾಠರಿಗೆ ಒಪ್ಪಿಸಬೇಕೆಂದೂ ಹೇಳಿ ಕಳುಹಿಸಿದನು.

ಪ್ರೆಸಿಡೆಂಟನು ಒಂದು ದಿನ ಅವಕಾಶ ಕೊಡಬೇಕೆಂದು ಹೇಳಿ ಕಳುಹಿಸಿದನು. ಕೋಠಿಯಲ್ಲಿದ್ದ ಇಂಗ್ಲಿಷ್ ಸರದಾರರೂ, ಅಧಿಕಾರಿಗಳೂ ಎಲ್ಲರನ್ನೂ ಸಭೆ ಸೇರಿಸಿ, ಮುಂದೇನು ಮಾಡಬೇಕೆಂದು ಆಲೋಚನೆ ಮಾಡಿದನು. ಒಬ್ಬಿಬ್ಬರು ಅಧಿಕಾರಿಗಳು "ಮರಾಠಾ ಸೈನ್ಯಗಳು ಸಾವಿರಗಟ್ಟಲೆ ಇವೆ.ಅವರು ಮೇಲೆ ಬಿದ್ದರೆ ನಮ್ಮ ಕೋಠಿಯ ಒಂದು ಹೆಂಚೂ ಉಳಿಯುವುದಿಲ್ಲ. ಮೊಗಲ್ ಸೈನಿಕರ ಸುಳಿವೇ ಕಾಣುವುದಿಲ್ಲ. ನಾವೆಲ್ಲರೂ ಹೋಗಿ ಹಡಗುಗಳ ಸೇರಿಕೊಳ್ಳೋಣ" ಎಂದರು.

ಪ್ರೆಸಿಡೆಂಟ್ ಆಕ್ಸಂಡ್‌ನು "ಹಾಗೆ ಮಾಡಕೂಡದು. ಅದರಿಂದ ಇಂಗ್ಲಿಷ್ ಜನಾಂಗಕ್ಕೆ ಶಾಶ್ವತವಾದ ಅಪಕೀರ್ತಿ ಬರುತ್ತದೆ. ನಮ್ಮ ಕೋಠಿಯ ರಕ್ಷಣೆಗಾಗಿ ನಾವು ಹೋರಾಡಲೇ ಬೇಕು. ಇಂಗ್ಲಿಷರೆಂದರೆ ಎಂತಹವರೆಂದು ಈ ದೇಶದವರಿಗೆ ತೋರಿಸಲೇಬೇಕು. ಇಂದು ನಾವು ಹೇಡಿಗಳಂತೆ ಓಡಿಹೋದರೆ ಈ ದೇಶದಲ್ಲಿ ನಾವು ವ್ಯಾಪಾರ ಮಾಡಲು ಅಸಮರ್ಥರಾಗುತ್ತೇವೆ" ಎಂದು ಹೇಳಿ ಎಲ್ಲರನ್ನೂ ಒಪ್ಪಿಸಿದನು.

ಎಲ್ಲರ ಕೈಗೂ ಬಂದೂಕುಗಳನ್ನೂ ಪಿಸ್ತೂಲುಗಳನ್ನೂ ಕೊಟ್ಟನು. ಕೋಠಿಯ ಮೇಲೆಯೂ ಎತ್ತರವಾದ ಕಟ್ಟಡಗಳ ಮೇಲೆಯೂ ಕೋಠಿಯಲ್ಲಿದ್ದ ನಾಲ್ಕು ತೋಪುಗಳನ್ನು ಎತ್ತಿ ಕಟ್ಟಿಸಿದನು. ಆ ಕೋಠಿಯಲ್ಲಿ ಅಧಿಕಾರಿಗಳೂ ಗುಮಾಸ್ತರೂ ಕಾವಲುಗಾರರೂ ಎಲ್ಲರೂಸೇರಿ ಇನ್ನೂರೈವತ್ತು ಮಂದಿ ಇಂಗ್ಲಿಷರಿದ್ದರು. ಅವರೆಲ್ಲರೂ ಯೋಧರಂತೆ ಕೋಠಿಯನ್ನು ಸಂರಕ್ಷಿಸಲು ನಿಂತರು. ಪ್ರೆಸಿಡೆಂಟನು ಶಿವಾಜಿಗೆ ಉತ್ತರ ಕಳುಹಿಸಿದನು.

"ಇಂಗ್ಲಿಷರಿಗೆ ರಾಜಕೀಯ ಸಂಬಂಧವಿಲ್ಲ. ಆದರೆ ನಾವು ಯಾರಿಗೂ ತಲೆ ಬಾಗುವವರಲ್ಲ. ದೌರಾತ್ಮ್ಯವನ್ನು ತೋರುವವರನ್ನು ನಾವು ಎದುರಿಸಬಲ್ಲೆವು. ಎಲ್ಲಕ್ಕೂ ನಾವು ಸಿದ್ಧರಾಗಿದ್ದೇವೆ" ಎಂದು ಹೇಳಿ ಕಳುಹಿಸಿದನು.

ಮರಾಠಾ ಸೈನಿಕರು ನಾಲ್ಕು ದಿನಗಳು ಅಹೋರಾತ್ರಿ ಸೂರತ್‌ನಗರ

ಜನ್ನು ಲೂಟಿ ಮಾಡಿದರು. ಒಂದು ಅಂಗಡಿ–ಒಬ್ಬ ವರ್ತಕನ ಮನೆ–ಒಬ್ಬ ಶ್ರೀಮಂತನ ಮಹಲು ಬಿಡದೇ ಸಾಂಗೋಪಾಂಗವಾಗಿ ನಾಲ್ಕು ದಿನಗಳು ಲೂಟಿ ನಡೆದವು.

ನಾಲ್ಕನೆಯ ದಿನ ಒಂದು ಚಮತ್ಕಾರವಾದ ಘಟನೆ ನಡೆಯಿತು. ಮುಸಲ್ಮಾನ್ ತರುಣ ಸರದಾರನೊಬ್ಬನು ಶಿವಾಜಿಯ ಶಿಬಿರಕ್ಕೆ ಬಂದು ತಾನು ಮೊಗಲ್ ಅಧಿಕಾರಿಯ ಕಡೆಯಿಂದ ಬಂದಿರುವ ರಾಯಭಾರಿ ಎಂದೂ ಸಂಧಿ ಪ್ರಸ್ತಾಪಕ್ಕಾಗಿ ಬಂದಿರುವುದಾಗಿಯೂ ಶಿವಾಜಿ ಮಹಾರಾಜರ ಭೇಟಿ ಮಾಡಬೇಕೆಂದೂ ಪ್ರಾರ್ಥನೆ ಮಾಡಿದನು. ಶಿವಾಜಿಯು ತನ್ನ ಗುಡಾರ ದೊಳಗೆ ಅವನಿಗೆ ಭೇಟಿ ಕೊಟ್ಟನು. ಆ ತರುಣ ಸರದಾರನು ಶಿವಾಜಿಯ ಮುಂದೆ ಸಲಾಂ ಮಾಡಿ ನಿಂತುಕೊಂಡು–

"ಮಹಾರಾಜನೇ, ನನ್ನನ್ನು ಈ ನಗರದ ಮೊಗಲ್ ರಕ್ಷಣಾಧಿಕಾರಿಗಳು ನಿಮ್ಮಲ್ಲಿಗೆ ಕಳುಹಿಸಿದ್ದಾರೆ. ನಾನು ಸಂಧಿ ಪ್ರಸ್ತಾಪಕ್ಕಾಗಿ ಬಂದಿದ್ದೇನೆ" ಎಂದನು.

ಶಿವಾಜಿಯು ಹಾಸ್ಯಮಾಡಿ ನಕ್ಕು "ನಿಮ್ಮ ಮೊಗಲ್ ಅಧಿಕಾರಿಯ ಸಂಧಿ ಪ್ರಸ್ತಾಪವು ಊರು ಹೋದ ಮೇಲೆ ಕೋಟೆಯ ಬಾಗಿಲು ಮುಚ್ಚಿ ದಂತಿದೆ. ಈ ನಾಲ್ಕೈದು ದಿನಗಳಿಂದ ನಿಮ್ಮ ಮೊಗಲ್ ಅಧಿಕಾರಿಯೂ ನಿಮ್ಮಂತಹ ಸರದಾರರೂ ಏನು ಮಾಡುತ್ತಿದ್ದಿರಿ ? ಹೆಂಗಸರಂತೆ ಕೋಟೆ ಯಲ್ಲಿ ಅವಿತುಕೊಂಡಿದ್ದೀರಿ. ಈಗ ಇಲ್ಲಿ ಬಂದು ಬೇಡಲು ನಿಂತಿದ್ದೀರಿ" ಎಂದನು.

ಸರದಾರನ ಮುಖವು ಕೆಂಪಡರಿತು. ಅವನು ರೋಷನಿಂದ ಕಣ್ಣು ಗಳನ್ನರಳಿಸಿ " ಆ ಮಾತು ಹೇಳಬೇಡಿರಿ. ನಮ್ಮಲ್ಲಿ ಎಲ್ಲರೂ ಹೇಡಿಗಳಲ್ಲ. ಪರಾಕ್ರಮಶಾಲಿಗಳಿದ್ದಾರೆ. ಅದನ್ನು ನೀವೇ ನೋಡಿರಿ" ಎಂದು ಮುಚ್ಚಿಟ್ಟು ಕೊಂಡಿದ್ದ ಕಠಾರಿಯನ್ನು ಕೈಯಲ್ಲಿ ಹಿಡಿದು ಶಿವಾಜಿಯ ಮೇಲೆ ನುಗ್ಗಿದನು. ಅಂಗರಕ್ಷಕರು ಹಿಡಿದ ಕತ್ತಿಗಳಿಂದ ಅವನನ್ನು ತಿವಿದರು. ಅವನು ಹಿಮ್ಮೆಟ್ಟ ಲಿಲ್ಲ, ರಭಸವು ಕುಗ್ಗಲಿಲ್ಲ. ಶಿವಾಜಿಯ ಮೇಲೆ ಬಿದ್ದು ಘಾತಿಸಿದನು. ಅಷ್ಟ ರಲ್ಲಿ ಅಂಗರಕ್ಷಕರು ಅವನ ತಲೆಯನ್ನು ನೀಳಿಬಿಟ್ಟಿದ್ದರು. ಶಿವಾಜಿಯು ಆ ಪೆಟ್ಟನಿಂದ ಕೆಳಗೆ ಬಿದ್ದನು. ಮೈಯೆಲ್ಲಾ ರಕ್ತವಾಗಿತ್ತು. ಮರಾಠಾ ಸೈನಿ

ಕರು ಗಾಬರಿಯಿಂದ 'ಶಿವಾಜಿಯು ಕೊಲೆಯಾಯಿತು' ಎಂದು ಕೂಗುತ್ತ ಓಡಿ ಹೋದರು. ಮರಾಠಾ ಸೈನಿಕರು ರೋಷದಿಂದ ಕಣ್ಣಿಗೆ ಕಂಡವರನ್ನೆಲ್ಲಾ ಕತ್ತರಿಸಿ ಬಿಸುಟರು. ಅನೇಕ ಮನೆಗಳಿಗೆ ಬೆಂಕಿ ಹಚ್ಚಿದರು ದೊಡ್ಡ ಬೊಬ್ಬೆ ಎದ್ದಿತು. ಎಲ್ಲೆಲ್ಲಿಯೂ ಹಾಹಾಕಾರ! ಆರ್ತನಾದಗಳು! ಶಿವಾಜಿಯು ಚೇತರಿಸಿಕೊಂಡು ಗುಡಾರದ ಹೊರಗೆ ಬಂದನು. ತನ್ನ ಸೈನಿಕರನ್ನೆಲ್ಲಾ ಕೂಗಿಕೂಗಿ ಧೈರ್ಯ ಹೇಳಿದನು. ಮರಾಠಾ ಸೈನ್ಯವು ಸ್ವಲ್ಪ ಸಮಾಧಾನ ಸ್ಥಿತಿಗೆ ಬಂದಿತು.

ಸೂರತ್ತಿನಲ್ಲಿ ಇನ್ನು ಇಂಗ್ಲಿಷರ ಕೋಠಿಯೊಂದು ಮಾತ್ರ ಉಳಿದಿತ್ತು. ಶಿವಾಜಿಯು ತನ್ನ ಸೇನಾಧಿಪತಿಗಳನ್ನು ಕರೆದು ಹೇಳಿದನು. "ನಮಗೆ ಬೇಕಾದಷ್ಟು ಲೂಟಿಯು ಸಿಕ್ಕಿದೆ. ಈ ಇಂಗ್ಲಿಷರೊಡನೆ ಹೋರಾಡಿ ನಮಗೆ ಸಿಕ್ಕುವ ಲಾಭವು ಅಷ್ಟರಲ್ಲಿಯೇ ಇದೆ. ನಾವು ಇಲ್ಲಿ ಯುದ್ಧಕ್ಕೆ ಬಂದವರಲ್ಲ ನಮ್ಮ ಕಾರ್ಯವು ಪೂರೈಸಿದೆ. ನಾವು ಸಂಪಾದಿಸಿರುವ ಧನಕನಕಗಳನ್ನೆಲ್ಲಾ ತೆಗೆದುಕೂಂಡು ಹೊರಡಿರಿ" ಎಂದು ಅಪ್ಪಣೆ ಮಾಡಿದನು.

ಮರಾಠರು ನಾಲ್ಕು ದಿವಸಗಳಿಂದ ಸಂಗ್ರಹಿಸಿದ್ದ ಧನಕನಕಗಳನ್ನೂ, ಮುತ್ತು ರತ್ನಗಳನ್ನೂ, ವಸ್ತ್ರಾಭರಣಗಳನ್ನೂ, ಕುದುರೆಗಳ ಮೇಲೆಒಂಟೆಗಳ ಮೇಲೆ ಹೇರಿಕೊಂಡು ಹೊರಟರು. ಆ ಲೂಟಿಯ ಪ್ರತಿಫಲವು ಕೋಟಿ ಕೋಟಿ ರೂಪಾಯಿಗಳು!

ಸೂರತ್ ನಗರವೆಲ್ಲಾ ಸುಟ್ಟು ಉರಿಯುತ್ತಿತ್ತು. ಆ ಹೊಗೆಯಿಂದ ಭೂವ್ಯಾಕಾಶಗಳು ಕುಂದಿ ಕಗ್ಗತ್ತಲೆಯು ಕವಿದಂತಾಗಿತ್ತು. ಉರಿಯು ಆರಲೇ ಇಲ್ಲ. ರಾತ್ರಿಯೆಲ್ಲಾ ಬೆಳಕಾಗಿತ್ತು. ನಗರದಲ್ಲಿ ಏನೂ ಉಳಿಯಲಿಲ್ಲ. ಅಲ್ಲೊಂದು ಇಲ್ಲೊಂದು ಮನೆಗಳು ಉಳಿದುಕೊಂಡವು. ಸೂರತ್ ನಗರವು ಬಹುಕಾಲ ಪುನರ್ನಿರ್ಮಾಣವಾಗಲೇ ಇಲ್ಲ. ನಗರದಲ್ಲೆಲ್ಲಾ ಮುರಿದು ಬಿದ್ದ ಮನೆಗಳು, ಭಸ್ಮರಾಶಿಗಳು. ಬಹುಕಾಲ ಆ ದೃಶ್ಯವು ನೋಡಿದವರಕಣ್ಣಿಗೆಲ್ಲಾ ಸ್ಮಶಾನದಂತೆ ಕಾಣುತ್ತಿದ್ದಿತು. ಬಹುಮಂದಿ ಶ್ರೀಮಂತರು ಭಿಕಾರಿಗಳಾಗಿ ಅಲೆಯುತ್ತಿದ್ದರು.

ದೂರದಲ್ಲಿದ್ದ ಮೊಗಲ್ ಸೈನ್ಯಗಳು ಸೂರತ್ತಿಗೆ ಬಂದು ಸೇರಿದವು. ಅರಮನೆಯಲ್ಲಿಅಡಗಿದ್ದ ಇನಾಯತ್‌ಖಾನನು ಡಂಭದಿಂದ ಹೊರಗೆ ಬಂದನು.

ಜನರೆಲ್ಲರೂ ಅವನನ್ನು ಬೈದರು, ಮಣ್ಣೆರಚಿದರು. ಮೊಗಲ್ ಸೈನ್ಯದ ಫೌಜುದಾರನನ್ನು ಗೌರವಿಸಿ ಪ್ರಶಂಸೆ ಮಾಡಿದರು, ದೆಹಲಿಯಿಂದ ದರಬಾರಿನ ಅಧಿಕಾರಿಗಳು ಬಂದರು, ಪ್ರೆಸಿಡೆಂಟ್ ಸರ್ ಜಾರ್ಜ್ ಆಕ್ಸೆಂಡರ್ನನನ್ನು ಬಹಳ ವಾಗಿ ಗೌರವಿಸಿ ಬಿರುದುಗಳನ್ನು ಕೊಟ್ಟರು. ಪುರಸ್ಕಾರವಾಗಿ ಯಥೇಚ್ಛ ಹಣವನ್ನು ಕೊಟ್ಟರು. ಪ್ರೆಸಿಡೆಂಟ್ ಆಕ್ಸೆಂಡರ್ನನು ಬಿರುದು ಗೌರವಗಳನ್ನು ಮಾತ್ರ ಸ್ವೀಕರಿಸಿ ಹಣದ ಪುರಸ್ಕಾರಗಳನ್ನು ನಿರಾಕರಿಸಿದನು.

## ೬

ಬಾದಷಹನು ಕಾಶ್ಮೀರದಿಂದ ಡೆಲ್ಲಿಗೆ ಹಿಂತಿರುಗುವ ಹೊತ್ತಿಗೆ ಬಿಸಿಬಿಸಿ ಸಮಾಚಾರಗಳು ಕಾದಿದ್ದುವು. ಅವನನ್ನು ಉದ್ರೇಕಿಸುವಂಥಾ ವಾರ್ತೆಗಳು, ಮನನೋಯಿಸುವಂಥಾ ಪ್ರಸಂಗಗಳು. ಸೂರತ್ತಿನ ವಿನಾಶದ ಸಮಾಚಾರ ಗಳು ನಾನಾ ಕಡೆಗಳಿಂದ ಬಂದಿದ್ದವು. ವರ್ತಕರು ಡೆಲ್ಲಿಗೆ ಬಂದು ಖುದ್ದಾಗಿ ಭೇಟಿಮಾಡಿ ತಮಗೆ ಒದಗಿದ ಅನಾಹುತಗಳನ್ನು ಹೇಳಿಕೊಂಡು ಮೊರೆ ಯಿಟ್ಟರು. ಇಂಗ್ಲಿಷ್ ಕಂಪನಿಯಿಂದ "ಸೂರತ್ತಿನಲ್ಲಿ ಶಿವಾಜಿಯು ಕೊಳ್ಳೆ ಹೊಡೆದಿದ್ದಾನೆ. ಮಹಲುಗಳನ್ನು ಸುಟ್ಟುಹಾಕಿದ್ದಾನೆ. ಬಹುಜನಗಳ ಕೊಲೆಯಾಗಿದೆ. ಜನಗಳಿಗೆ ಸುರಕ್ಷಿತವಾಗಿರುವ ಭರವಸೆಯೇ ಹೋಗಿ ಬಿಟ್ಟದೆ" ಎಂದು ವರದಿಯಾಗಿತ್ತು. ಕಿಲ್ಲೇದಾರ್ ಇನಾಯತ್‌ಖಾನನು ಶಿವಾಜಿಯ ಆಕಸ್ಮಿಕ ಪ್ರವೇಶ, ಲೂಟಿಗಳನ್ನು ವರದಿಮಾಡಿ ಇಂಗ್ಲೀಷ್ ಕಂಪನಿಯ ಪ್ರೆಸಿಡೆಂಟ್ ಜಾರ್ಜ್‌ಆಕ್ಸೆಂಡನ್ನನ ಸಾಹಸಕೃತ್ಯಗಳನ್ನುಶ್ಲಾಘಿಸಿ ಬರೆದು ಕಳಿಸಿದ್ದನು. ಮತ್ತೊಂದು ಕಡೆಯಿಂದ ಶಿವಾಜಿಯು ಆದಿಲ್ ಷಾಹಿಗೆ ಸೇರಿದ ಕೊಂಕಣ, ಗೋವಾ ರಾಜ್ಯಗಳನ್ನು ವಶಪಡಿಸಿಕೊಂಡಿದ್ದಾ ನೆಂದು ಸಮಾಚಾರಗಳು ಬಂದಿದ್ದವು. ಇವೆಲ್ಲಾ ಕಿವಿಗೆ ಬಿದ್ದೊಡನೆ ಬಾದ ಷಹನಿಗೆ ಉರಿಯೆದ್ದಂತಾಯಿತು. ಮೊದಲು ಸೂರತ್ತಿಗೆ ಡೆಲ್ಲಿಯಿಂದಲೇ

ಸಮರ್ಥನಾದ ಫೌಜುದಾರನೊಬ್ಬನನ್ನು ಕಳುಹಿಸಬೇಕೆಂದು ಹುಕುಂ ಮಾಡಿದನು. ಅಲ್ಲಿದ್ದ ಇನಾಯತ್‌ಖಾನನ್ನು ಶೂಲಕ್ಕೇರಿಸಬೇಕೆಂದು ಅಪ್ಪಣೆಯಿತ್ತನು. ಇಂಗ್ಲೀಷ್ ಕಂಪನಿಯವರಿಗೆ ಅನೇಕ ರಿಯಾಯಿತಿಗಳನ್ನು ಕೊಡಬೇಕೆಂದು ಹುಕುಂ ಆಯಿತು. ಅಹಮದ್ ನಗರದಲ್ಲಿದ್ದ ಅಧಿಕಾರಿಗಳ ಬೇಫಾಮಿಗಾಗಿ ಅವರಿಗೆಲ್ಲಾ ಶಿಕ್ಷೆ ವಿಧಿಸುವಂತೆ ಆಜ್ಞೆ ಮಾಡಿದನು.

ಯುವರಾಜ ಆಜಂಷಾವನ್ನು ಬಾದಷಹನು ಸೆರೆಯಲ್ಲಿಡಿಸುತ್ತಾನೆಂಬ ಸುದ್ದಿಯು ಅಂತಃಪುರದಲ್ಲೆಲ್ಲಾ ಹರಡಿತ್ತು. ಜೋದ್‌ಪುರದ ಜಸವಂತಸಿಂಗನನ್ನು ಡೆಲ್ಲಿಗೆ ಕರೆಸಿ ಶಿಕ್ಷೆ ವಿಧಿಸಬೇಕೆಂದು ಆಲೋಚನೆ ನಡೆದಿತ್ತು. ರೋಷನಾರಳು ಸಮಯವನ್ನು ಕಾದು ಬಾದಷಹನನ್ನು ಸಮಾಧಾನಗೊಳಿಸಿ ಸದ್ಯಕ್ಕೆ ಯುವರಾಜನಿಗೂ ಜಸವಂತಸಿಂಗನಿಗೂ ಅಪಾಯ ತಟ್ಟದಂತೆ, ಅವಮಾನವಾಗದಂತೆ ಕಾಪಾಡಿದಳು.

ಔರಂಗಸೇಬನು ದಕ್ಷಿಣಕ್ಕೆ ಹೊರಟೇಬಿಡಬೇಕು ಎಂದು ಸಿದ್ಧಾಂತ ಮಾಡಿಕೊಂಡನು. ಛೀ ! ಛೀ ! ಇನ್ನೆಷ್ಟು ಕಾಲ ಈ ಶಿವಾಜಿಯನ್ನು ಉದಾಸೀನ ಮಾಡಲಾದೀತು. ಬಿಜಾಪುರದ ಸುಲ್ತಾನನಂತೂ ತಿಳಿಗೇಡಿಯಾಗಿದ್ದಾನೆ. ಒಬ್ಬನು ಹರಾಂ, ಇನ್ನೊಬ್ಬನು ಬೇಕೂಫ್. ಇವರಿಬ್ಬರನ್ನು ಏಕಕಾಲದಲ್ಲಿ ಶಿಕ್ಷಿಸಬೇಕೆಂದು ಹಠತೊಟ್ಟನು. ಯಾರೂ ಬಾದಷಹನ ಎದುರಿಗೆ ಹೋಗಲು ಧೈರ್ಯಮಾಡುತ್ತಿರಲಿಲ್ಲ. ಬಾದಷಹನು ಪ್ರತಿದಿನವೂ ದರಬಾರಿಗೆ ಕೂಡಾ ಬರುತ್ತಿರಲಿಲ್ಲ. ಮೊಗಲ್ ದರ್ಬಾರಿನಲ್ಲಿ ಒಬ್ಬನಾದರೂ ಶೂರನಿಲ್ಲವೇ—ಎಂದು ಚಿಂತಾಕ್ರಾಂತನಾಗಿದ್ದನು.

ಬಾದಷಹನ ವರ್ಧಂತಿಯ ದಿನವು ಬಂದಿತು. ಆ ದಿನ ಏನೋ ಅಘಟನಘಟನೆಗಳು ನಡೆಯುತ್ತವೆಂದು ಎಲ್ಲರೂ ನಿರೀಕ್ಷಿಸಿದರು. ಆ ದಿನ ದರ್ಬಾರಿನಲ್ಲಿ ಪ್ರಥಮ ಮರ್ಯಾದೆಯು ಮಹಾರಾಜ ಜಯಸಿಂಹನಿಗೆ ಕೊಡಲ್ಪಟ್ಟಿತು. ಜಯಸಿಂಹನು ಸೈನ್ಯಸಮೇತನಾಗಿ ದಖ್ಖನಿಗೆ ಹೋಗಿ ಶಿವಾಜಿಯನ್ನು ದಮನಮಾಡಿ ದಖ್ಖನ್ ರಾಜ್ಯಗಳನ್ನು ಗೆದ್ದು ಬರಬೇಕೆಂದು ಆಜ್ಞಾಪತ್ರವು ಕೊಡಲ್ಪಟ್ಟಿತು. ಬಾದಷಹನು ಜಯಸಿಂಹನನ್ನು ಸಿಂಹಾಸನದಬಳಿಗೆ ಕರೆದು ತನ್ನ ಕೊರಳಲ್ಲಿ ಧರಿಸಿದ್ದ ಮುಕ್ತಾಹಾರವನ್ನು ಜಯಸಿಂಹನಿಗೆ ಹಾಕಿ

ಮರ್ಯಾದೆಮಾಡಿದನು. ಇಂತಹ ಮರ್ಯಾದೆಯು ಬಹು ವರ್ಷಗಳಿಂದ ಯಾರಿಗೂ ದೊರಕಿರಲಿಲ್ಲ. ಜಯಸಿಂಹನಂಥಾ ಮಹಾವೀರರಿಗೆ ಜನ್ಮದಲ್ಲಿ ಒಂದು ಬಾರಿ ಮಾತ್ರ ದೊರಕುವಂಥಾ ಅಪೂರ್ವ ಮರ್ಯಾದೆಯದು ಬಾದಷಹನ ಅಮೋಘವಾದ ಕೃಪಾಕಟಾಕ್ಷದ ಪ್ರತ್ಯಕ್ಷ ನಿದರ್ಶನ. ಡೆಲ್ಲಿಯ ದರ್ಬಾರಿನ ಉಮ್ರಾಗಳು,ನರಪತಿಗಳು, ಸಾಮಂತರಾಜರು, ಮಂತ್ರಿ ಸೇನಾಧಿಪತಿಗಳು ಆ ದರಬಾರಿನಲ್ಲಿ ಜಯಸಿಂಹನ ಸಮೀಪಕ್ಕೆ ಬಂದುಕೊಂಡಾಡಿದರು.

ಜಯಸಿಂಹನು ಮುಖವು ತೇಜೋಹೀನವಾಗಿದ್ದಿತು.ಮನಸ್ಸು ಕಷಾಯದಂತೆ ಕಲಕಿಹೋಗಿತ್ತು. ಬಾಯಿಯಲ್ಲಿ ಮಾತುಗಳು ಹೊರಡದಾಗಿದ್ದವು. ಅವನು ಖಿನ್ನನಾಗಿ ದರಬಾರಿನ ಮಹಾದ್ವಾರಕ್ಕೆ ಬಂದು ನಿರ್ವಿಣ್ಣನಾಗಿ ಪಲ್ಲಕ್ಕಿಯ ಮೇಲೆ ಕುಳಿತುಕೊಂಡನು. ಪಲ್ಲಕ್ಕಿಯು ಜಯಸಿಂಹನ ಅರಮನೆಗೆ ಹೊರಟಿತು. ದರಬಾರಿನ ಮರ್ಯಾದೆಗಳೆಲ್ಲವೂ ಹೊರಟಿದ್ದವು. ರಾಜಮಾರ್ಗದಲ್ಲಿ ಬರುತ್ತಿರುವಾಗ ರಾಜಧಾನಿಯ ಪುರಜನರೆಲ್ಲರೂ ಜಯಘೋಷ ಮಾಡುತ್ತಿದ್ದರು. ಪುಷ್ಪಗಳನ್ನು ಎರಚಿ ಪುಷ್ಪವೃಷ್ಟಿ ಮಾಡುತ್ತಿದ್ದರು.ಜಯಸಿಂಹನು ಪಲ್ಲಕ್ಕಿಯಲ್ಲಿ ಅಚಲನಾಗಿ ಕಂಚಿನ ಮೂರ್ತಿಯಂತೆ ಕುಳಿತಿದ್ದನು. ಅವನಿಗೆ ಆ ರಾಜಮಾರ್ಗದಲ್ಲಿ ನಡೆಯುತ್ತಿದ್ದ ಸಮಾರಂಭಗಳೊಂದೂ ಕಣ್ಣಿಗೆ ಕಾಣಿಸುತ್ತಿರಲಿಲ್ಲ, ಕಿವಿಗೆ ಕೇಳಿಸುತ್ತಿರಲಿಲ್ಲ. "ಭಗವಂತಾ! ನನ್ನ ಮೇಲೆ ಎಂತಹ ಕ್ರೂರ ಶಾಸನವನ್ನು ಕಳುಹಿಸಿಕೊಟ್ಟಿರುವಿ! ಹಿಂದೂ ಧರ್ಮದ ಪುನರುದ್ಧಾರಕ್ಕಾಗಿ ಹೆಣಗುತ್ತಿರುವ ಒಬ್ಬ ರಾಜನ ಮೇಲೆ ನಾನು ಯುದ್ಧಕ್ಕೆ ಹೋಗುವುದೇ ? ಇದನ್ನು ಲೋಕವು ಮೆಚ್ಚುವುದೇ ? ನನ್ನ ಅಪಕೀರ್ತಿಯು ಸಾವಿರಾರು ವರ್ಷಗಳು ಕರಾಳರೂಪದಿಂದ ಈ ರಾಜ್ಯದಲ್ಲಿ ನರ್ತಿಸುವಂತಾಯಿತಲ್ಲಾ ! ನಾನು ಬದುಕಿದ್ದು ಏನು ಫಲ ? ಹಿಂದುವಾಗಿ ಹುಟ್ಟಲಿಲ್ಲವೇ ನಾನು ? ನಾನು ಹಿಂದುವಾಗಿ ಸಾಯುವುದು ನಿನಗಿಷ್ಟವಿಲ್ಲವೇ ?" ಎಂದು ಚಿಂತಿಸುತ್ತಿದ್ದನು. ಒಂದು ಪಕ್ಷ ಈಶ್ವರಾನುಗ್ರಹವು ಆ ಶಿವಾಜಿಗೇ ಇದ್ದರೆ ? ಅವನು ಜನರಾಡುವಂತೆ ನಿಜವಾಗಿಯೂ ಮಂತ್ರವಾದಿಯೇ ಆಗಿದ್ದರೆ, ನನಗೆ ಸೋಲಾದರೆ ಎಂತಹ ಅಪಖ್ಯಾತಿ. ನಮ್ಮ ರಜಪೂತ ವಂಶಕ್ಕೇ ಕಳಂಕ ಹಚ್ಚಿದಂತಾಗುವುದಿಲ್ಲವೇ? ಇಂಥಾ ಮಹೋನ್ನತ ರಜಪೂತ ವಂಶದಲ್ಲಿ ಹುಟ್ಟಿ ಗುಡ್ಡಗಾಡಿನ ಅನಾಮಧೇಯನಿಂದ ಅಪಮಾನಿತನಾಗುವ ಭವಣೆಯನ್ನು

ದೇವರು ನನಗೆ ತಂದೊಡ್ಡಿದನಲ್ಲವೇ ? ಈ ಬಾದಶಹನು ಮಹಾ ಕ್ರೂರಾತ್ಮ ಕೃತ್ರಿಮಿಯೆಂದೂ ನಮಗೆಲ್ಲರಿಗೂ ತಿಳಿದಿತ್ತು. ಈಗ ನನ್ನ ಮೇಲೆ ಈ ದುಷ್ಕಾರ್ಯವನ್ನು ಹೊರಿಸಿ ಪಾತಾಳಕ್ಕೆ ತಳ್ಳಿದ್ದಾನೆ. ಈ ಭಾರತ ವರ್ಷದಲ್ಲಿ ಹಿಂದೂ ಜನರ ಚರಿತ್ರೆಗೆ ಎಂತಹ ಕಪ್ಪುಮಸಿಯನ್ನು ಬಳಿದಿದ್ದಾನೆ ಈ ಪಾಪಿ ! ಹಿಂದುವಿನ ಮೇಲೆ ಹಿಂದುವನ್ನು ಎತ್ತಿಕಟ್ಟಿ ಒಬ್ಬನ ನಾಶ, ಮತ್ತೊಬ್ಬನ ಅಪಖ್ಯಾತಿ–ಹೀಗೆ ಎರಡು ಲಾಭಗಳನ್ನು ಒಂದೇ ಕಾರ್ಯದಲ್ಲಿ ಸಾಧಿಸಿದ್ದಾನೆ. ತಂದೆಯನ್ನೂ, ಸೋದರರನ್ನೂ ಕೊಲೆ ಮಾಡಿಸಿದವನಿಗೆ ಇದೊಂದು ಮಹತ್ಕಾರ್ಯವೇ–ಎಂದು ಆಲೋಚನೆ ಮಾಡುತ್ತಿದ್ದನು, ಪಲ್ಲಕ್ಕಿಯು ಮಹಲಿಗೆ ಬಂದಿಳಿಯಿತು. ಪಲ್ಲಕ್ಕಿಯಿಂದಿಳಿದು ತನ್ನ ಅಂತರಂಗ ಮಹಲಿಗೆ ಹೋಗಿ ಕೊರಳಲ್ಲಿದ್ದ ಹಾರವನ್ನು ತೆಗೆದು ಬಿಸುಟನು. ತಲೆಯ ಮೇಲಿದ್ದ ಉಷ್ಣೀಷವನ್ನು ತೆಗೆದು ಒಗೆದನು. ಮೈಮೇಲಿದ್ದ ಅಂಗರೇಖು ಗಳನ್ನು ಕಿತ್ತುಹಾಕಿದನು. ಅವನ ಈ ಚರ್ಯೆಯನ್ನು ನೋಡಿ ಅಂತಃಪುರ ದವರೆಲ್ಲಾ ಗಾಬರಿಗೊಂಡು ದೂರದೂರ ಸರಿದು ಹೋದರು. ಹರ್ಷದಿಂದ ಆನಂದೋತ್ಸವಗಳು ನಡೆಯಬೇಕಾಗಿದ್ದ ಆ ಮಹಲೆಲ್ಲವೂ ಶ್ಮಶಾನಶಾಂತಿ ಯಿಂದ ನೀರವವಾಗಿದ್ದಿತು. ಕಾವಲುಗಾರರು ಯಾರನ್ನೂ ಒಳಗೆ ಬಿಡುತ್ತಿರ ಲಿಲ್ಲ. ಮನೆಯವರಾರೂ ಹೊರಗೆ ಹೋಗಲಿಲ್ಲ.

ಜಯಸಿಂಹನು ತನ್ನಷ್ಟಕ್ಕೆ ತಾನೇ ಸಮಾಧಾನ ತಂದುಕೊಂಡು ಆಲೋಚಿಸಲು ಆರಂಭಿಸಿದನು. "ಬಾದಶಹನ ಆಜ್ಞೆಯನ್ನು ನಿರಾಕರಿಸುವ ಧೈರ್ಯ ಕೊಡು, ದೇವರೇ" ಎಂದು ಪ್ರಾರ್ಥಿಸಿದನು. "ಚಿಕ್ಕಂದಿನಿಂದಲೂ ಮೊಗಲ್ ಬಾದಷಹರ ಛತ್ರಛಾಯೆಯಲ್ಲಿ ಬೆಳೆದು ಇಷ್ಟು ಅಧಿಕಾರ ಗೌರವ ಮನ್ನಣೆಗಳನ್ನು ಪಡೆದ ನಾನು ಆಜ್ಞೆಯನ್ನು ನಿರಾಕರಿಸುವುದೆಂತು ? ಈ ದರಬಾರಿನಲ್ಲಿ ಯಾವ ಹಿಂದುವಿಗೆ ಈ ನನಗಿರುವಂತಹ ಸ್ಥಾನಮಾನಗಳಿವೆ? ಈ ಹಿಂದೂ ರಾಜರು ಎಷ್ಟು ಧರ್ಮಾಭಿಮಾನವನ್ನು ಧರಿಸಿದ್ದರೆ ತಾನೇ ಏನು ಫಲ ? ಹಿಂದೂ ಧರ್ಮವು ಸ್ವಲ್ಪವಾದರೂ ಉಳಿಯಬೇಕಾದರೆ ನಮ್ಮಂತಹ ವರಿಂದಲೇ. ನಮ್ಮನ್ನು ನೋಡಿ ಈ ಬಾದಷಹನು ಹೆದರುತ್ತಾನೆ. ಇಲ್ಲದಿ ದ್ದರೆ ಆಸೇತು ಹಿಮಾಚಲದವರೆಗೆ ಈ ಹಿಂದುಗಳನ್ನು ಹಿಡಿದು ಹೊಡೆದು

ಬಲಾತ್ಕರಿಸಿ ಮುಸಲ್ಮಾನ್ ಧರ್ಮಕ್ಕೆ ಸೇರಿಸಿಬಿಡುತ್ತಿದ್ದನು. ದೇವರು ಈ ಶಿವಾಜಿಗೂ ಬುದ್ಧಿ ಕೊಡಬಾರದೇಕೆ? ಅವನು ಪೂರ್ಣ ಶರಣಾಗತನಾಗಿ ಬಂದರೆ ಬಾದಷಹರ ಅನುಗ್ರಹವು ಅವನ ಮೇಲೆ ಬೀಳುವಂತೆ ಮಾಡಬಲ್ಲೆ. ಬಾದಷಹನ ಮನಸ್ಸಿನಲ್ಲಿ ಬಿಜಾಪುರ ಗೋಲ್ಕಂಡದ ಸುಲ್ತಾನರನ್ನು ಸದೆ ಬಡಿಯಬೇಕೆಂಬ ತೀವ್ರಾಭಿಲಾಷೆಯಿದೆ. ಆ ಕಾರ್ಯಕ್ಕೆ ಶಿವಾಜಿಯು ತಕ್ಕ ಮನುಷ್ಯ. ಅವನನ್ನು ಆ ಕೆಲಸಕ್ಕೆ ನೇಮಿಸಿಬಿಟ್ಟರೆ ಅವನು ನಿಸ್ಸಂದೇಹವಾಗಿ ಆ ಕಾರ್ಯವನ್ನು ಮುಗಿಸಿಬಿಡುತ್ತಾನೆ. ಅದರಿಂದ ಬಾದಷಹನ ಮನಸ್ಸಿಗೂ ಶಾಂತಿಯಾದಂತೆ ಆಗುತ್ತದೆ ದಕ್ಷಿಣದಲ್ಲಿರುವ ತೀರ್ಥ, ಕ್ಷೇತ್ರ, ದೇವಮಂದಿರಗಳು ಉಳಿದಂತಾಗುತ್ತವೆ. ಹಿಂದೂ ಧರ್ಮಕ್ಕೆ ಇದಕ್ಕಿಂತಲೂ ಉತ್ಕೃಷ್ಟವಾದ ಸೇವೆ ಮತ್ತಾವುದಿದೆ" ಎಂದು ಆಲೋಚಿಸಿದನು. ಮನಸ್ಸು ಶಾಂತಸ್ಥಿತಿಗೆ ಬಂದಿತು.

ದರಬಾರಿನಲ್ಲಿ ಬಹುಮಂದಿ ಮುಸಲ್ಮಾನ್ ಅಧಿಕಾರಿಗಳೂ ಮಂತ್ರಿಗಳೂ ಮಹಾರಾಜಾ ಜಯಸಿಂಹನಿಗೆ ದೊರೆತ ಮರ್ಯಾದೆಗಾಗಿ ಅಸೂಯಾಪರರಾದರು.

ಅವರವರಲ್ಲಿಯೇ ಮಾತನಾಡಿಕೊಂಡರು.

"ಬಾದಷಹನ ಬುದ್ಧಿಗೆ ಗ್ರಹಣ ಹಿಡಿದಂತಾಗಿದೆ. ಶಿವಾಜಿ ಹಿಂದೂ ರಾಜ. ಅವನ ಮೇಲೆ ಯುದ್ಧಕ್ಕೆ ಜಯಸಿಂಹನನ್ನು ಕಳಿಸಬಹುದೇ? ಇದೆಂತಹ ರಾಜನೀತಿ? ದರಬಾರಿನಲ್ಲಿ ಪರಾಕ್ರಮಶಾಲಿಗಳಾದ ಮುಸಲ್ಮಾನ್ ಸೇನಾಧಿಪತಿಗಳಿಲ್ಲವೇ? ಇಡೀ ದರಬಾರಿಗೇ ಅಗೌರವವಾದಂತಾಗಿದೆ" ಎಂದು ಮುಸಲತ್ ಮಾಡಿದರು.

ಷಯಿಸ್ತಾಖಾನನ ಪತ್ನಿಯು ದೆಹಲಿಯಲ್ಲಿಯೇ ಇದ್ದಳು. ಅವಳು ರೋಷನಾರಳನ್ನು ನೋಡಿ "ಮಹಾರಾಜ ಜಯಸಿಂಹರವರೇನೋ ಪ್ರಖ್ಯಾತ ಸೇನಾಧಿಪತಿಗಳು. ಆದರೆ ಶಿವಾಜಿಯ ಮೇಲೆ ಅವರು ಯುದ್ಧಕ್ಕೆ ಹೋದರೆ ಏನೂ ಫಲವಿಲ್ಲ. ಎಷ್ಟಾದರೂ ಹಿಂದುಗಳು—ಹಿಂದುಗಳೆಲ್ಲಾ ಒಂದೇ. ಜೋಧ್‌ಪುರದ ಮಹಾರಾಜ ಜಸವಂತಸಿಂಗನು ಶಿವಾಜಿಗೆ ಅವಕಾಶ ಕೊಟ್ಟಿದ್ದರಿಂದಲೇ ನಮ್ಮ ಪತಿ ಷಯಿಸ್ತಾಖಾನರಿಗೆ ಆ ದುರ್ಗತಿಯು ಬಂತು.

ಈ ರಾಜಪುತ್ರರೂ ಮರಾಠರೂ ಸೇರಿಕೊಂಡುಬಿಟ್ಟರೆ ಮೊಗಲ್ ಸಾಮ್ರಾಜ್ಯಕ್ಕೆ ಮುಳಿಯಾಗುತ್ತಾರೆ. ನೀನೊಬ್ಬಳು ಮಾತ್ರ ಬಾದಷಹರ ಮನಸ್ಸನ್ನು ತಿರುಗಿಸಬಲ್ಲೆ. ನೋಡಮ್ಮಾ, ಮುಸಲ್ಮಾನರ ಮರ್ಯಾದೆ ನಿನ್ನಿಂದ ಉಳಿಯಬೇಕು." ಎಂದು ಹಾವಭಾವಗಳನ್ನು ತೋರಿಕಣ್ಣೀರಿಡುತ್ತಾ ಮರುಳಾಗುವಂತೆ ಮಾತನಾಡಿದಳು.

ರೋಷನಾರಳು"ಅತ್ತೆಯವರೇ, ನೀವು ಹೇಳುವುದೆಲ್ಲಾ ಸರಿಯಾಗಿದೆ. ಷಯಿಸ್ತಾಖಾನರಿಗೆ ಅಪಮಾನವಾದುದು ನನ್ನ ಮನಸ್ಸನ್ನೂ ಕೊರೆಯುತ್ತಿದೆ. ಆ ಅಪಮಾನದ ಸೇಡು ತೀರಿಸುವುದಕ್ಕಾಗಿ ಬೇರೆ ಉಪಾಯ ಹುಡುಕಬೇಕು. ಅದಕ್ಕೆ ಸಮಯ ಕಾಯಬೇಕು. ಬಾದಷಹರು ಭರದರ್ಬಾರಿನಲ್ಲಿ ಮಹಾರಾಜ ಜಯಸಿಂಹನನ್ನು ಗೌರವಿಸಿ ಯುದ್ಧಕ್ಕೆ ನೇಮಿಸಿಬಿಟ್ಟಿದ್ದಾರೆ. ಈಗ ಅದನ್ನು ಹಿಂತಿರುಗಿಸುವುದಕ್ಕೆ ಯಾರಿಗೂ ಶಕ್ತಿಯಿಲ್ಲ. ಮಹಾರಾಜ ಜಯಸಿಂಹನು ಯುದ್ಧಕ್ಕೆ ಹೊರಟು ಗೆದ್ದು ಬಂದರೆ ನಮಗೆ ಸಂತೋಷವೇ ಆಯಿತು. ಅವರು ಅಲ್ಲಿ ತಪ್ಪು ಹೆಜ್ಜೆಯನ್ನಿಟ್ಟರೆ ಆಗ ನಮಗೆ ಅವಕಾಶ ಸಿಕ್ಕಿದಂತಾಗುತ್ತದೆ. ಶಿವಾಜಿಯಾದರೂ ಮಾಡಿದ ತಪ್ಪೇನು? ನಮ್ಮ ಮೊಗಲ್ ರಾಜ್ಯಕ್ಕೆ ಸೇರಿದ ಒಂದು ಪಟ್ಟಣದ ಮೇಲೆಯೂ ಅವನ ಅಧಿಕಾರವಿಲ್ಲ. ಅವನು ಆದಿಲ್ ಷಾಹಿಗೆ ಸೇರಿದವನು. ಅವರಿಗೆ ಪ್ರತಿಯಾಗಿ ಕಾರ್ಯನಡೆಸುತ್ತಾನೆ. ಬಿಜಾಪುರದವರಿಗೆ ಶಕ್ತಿಯಿದ್ದರೆ ಅವರು ಶಿವಾಜಿಯನ್ನು ಹತೋಟಿಗೆತರಬೇಕು. ಬಾದಷಹರು ಈ ಶಿವಾಜಿಯ ವಿಷಯವನ್ನು ವೃಥಾತಲೆಗೆ ಹಚ್ಚಿಕೊಂಡಿದ್ದಾರೆ. ಇರಲಿ, ಸಮಯ ಬರುತ್ತದೆ. ಆಗ ನೋಡೋಣ." ಎಂದು ಹೇಳಿ ಸಮಾಧಾನಗೊಳಿಸಿದಳು.

ಜಯಸಿಂಹನಿಗೆ ದರಬಾರಿನಲ್ಲಿ ನಡೆಯುತ್ತಿರುವ ವಿಚಾರಗಳೆಲ್ಲಾ ತಿಳಿದಿದ್ದವು. ಆದರೆ ಅವನು ಅವನ್ನೆಲ್ಲಾ ಲೆಕ್ಕಿಸುವಂತಹವನಲ್ಲ. ಒಂದೆರಡು ಬಾರಿ ಅರಮನೆಗೆ ಹೋಗಿ ಬಾದಷಹರೊಡನೆ ಶಿವಾಜಿಯ ಮೇಲೆ ಯುದ್ಧ ಮಾಡುವ ವಿಚಾರವಾಗಿ ಮಾತನಾಡಿಕೊಂಡು ಬಂದನು. ಯುದ್ಧಕ್ಕೆ ಹೊರಡಲು ಅನೇಕ ಸೇನಾಧಿಪತಿಗಳನ್ನು ಚುನಾಯಿಸಿದನು. ಮುಖ್ಯವಾಗಿ ದಿಲೇಲ್ ಖಾನ್‌ನನ್ನು ಆರಿಸಿಕೊಂಡನು. ಮೊಗಲ್ ಸೇನಾಧಿಪತಿಗಳಲ್ಲ

ಅವನು ಅತ್ಯಂತ ಸಮರ್ಥನೆಂದೂ, ಸ್ವಾಮಿನಿಷ್ಠನೆಂದೂ ಹೆಸರಾಗಿದ್ದಿತು. ಒಂದು ಬಾರಿ ಅರಮನೆಗೆ ಹೋಗುತ್ತಿರುವಾಗ ಉದ್ರೇಕಗೊಂಡಿದ್ದ ಆನೆಯೊಂದರ ಸೊಂಡಿಲನ್ನು ಹಿಡಿದು ತಿರುವಿ ಬಗ್ಗಿಸಿದ್ದನೆಂದು ಹೇಳಿಕೊಳ್ಳುತ್ತಿದ್ದರು. ಎಲ್ಲ ಸೈನ್ಯಗಳಿಗೂ ಅಧಿಪತಿಯನ್ನಾಗಿ ಅವನನ್ನು ನೇಮಿಸಿದನು.

ಮನೂಚಿ ಎಂಬ ಇಟಾಲಿಯನ್ ಸರದಾರನನ್ನು ತೋಪುಗಳ ಮತ್ತು ಬಂದೂಕಗಳ ಸೈನ್ಯಕ್ಕೆ ಅಧಿಕಾರಿಯನ್ನಾಗಿ ನೇಮಿಸಿದನು. ರಜಪೂತ ಸೈನ್ಯಗಳನ್ನೂ, ಮುಸಲ್ಮಾನ್ ಸೈನ್ಯಗಳನ್ನೂ, ಅಫ್ಘನ್ ಸೈನಿಕರನ್ನೂ ಚುನಾಯಿಸಿದನು. ಈ ಸೈನ್ಯಗಳು ಔರಂಗಾಬಾದಿನ ಬಳಿಯಲ್ಲಿ ಹೋಗಿ ಬೀಡುಬಿಟ್ಟವು. ಅಲ್ಲಿ ಜಯಸಿಂಹನು ಅನೇಕ ವ್ಯವಸ್ಥೆಗಳನ್ನು ಮಾಡಿದನು.

ಮನೂಚಿಯು ಯೂರೋಪಿಯನ್ ಸೈನಿಕರಿಗೆ ತರಬೇತು ಕೊಡುವಂತೆ ಈ ಸೈನಿಕರಿಗೆಲ್ಲಾ ತರಬೇತು ಕೊಟ್ಟನು. ಅದನ್ನು ನೋಡಿ ಜಯಸಿಂಹನು ಬಹಳ ಸಂತೋಷಪಟ್ಟನು. ಮನೂಚಿಯು ಯಾವಾಗಲೂ ಜಯಸಿಂಹನೊಡನೆಯೇ ಸಖನಂತೆ ಇರುತ್ತಿದ್ದನು. ಅನೇಕ ಸಮಯಗಳಲ್ಲಿ ಅವರಿಬ್ಬರೂ ಕುಳಿತು ಇಸ್ಪೀಟು ಆಡುತ್ತಿದ್ದರು. ಜಯಸಿಂಹನು ಎರಡು ಯುರೋಪಿಯನ್ ಸೈನ್ಯಗಳನ್ನೇ ಕರೆ ತರಿಸಿ, ಮೊಗಲ್ ಸೈನ್ಯಕ್ಕೇ ಸೇರಿಸಿಬಿಡಬೇಕೆಂದು ಎಷ್ಟೋ ಬಾರಿ ಹೇಳುತ್ತಿದ್ದನು.

ರಾಜಕೀಯ ಮುತ್ಸದ್ದಿಗಳನ್ನು ಕರೆಸಿ ಹಿಂದೂ ರಾಜರು ಮತ್ತು ಪಾಳೆಯಗಾರರಲ್ಲಿಗೆ ಕಳುಹಿಸಿಕೊಟ್ಟನು. ಅವರು ಹೋಗಿ ಅವರೆಲ್ಲರಿಗೂ ವಿಶೇಷ ಹಣ ಕೊಡುವುದಾಗಿ ಹೇಳಿ,ಶಿವಾಜಿಗೆ ವಿರೋಧವಾಗಿ ಎತ್ತಿ ಕಟ್ಟಿದರು. ಮನೂಚಿಯನ್ನು ಪಶ್ಚಿಮಪ್ರಾಂತಕ್ಕೆ ಕಳುಹಿಸಿದನು. ಅವನು ಅಲ್ಲಿದ್ದ ಸಣ್ಣ ಸಣ್ಣ ರಾಜರುಗಳು ಮತ್ತು ಬಿಜಾಪುರದರಾಜ್ಯಕ್ಕೆಸೇರಿದ ನವಾಬರುಗಳು ಅವರುಗಳೊಡನೆ ಸಂಧಾನ ನಡೆಸಿ ಶಿವಾಜಿಯಮೇಲೆ ಬೀಳುವಂತೆ ಪ್ರೇರೇಪಣೆ ಮಾಡಿದನು. ಮನೂಚಿಯು ಈ ಮೊದಲು ರಾಂಪುರದ ನವಾಬರಲ್ಲಿಗೆ ಹೋಗಿ ಸಂಧಾನಕ್ಕೆ ಆರಂಭ ಮಾಡಿದನು. ಆ ಪ್ರಾಂತದಲ್ಲೆಲ್ಲಾ ರಾಂಪುರವು

ಗಣ್ಯವಾದ ರಾಜ್ಯವಾಗಿತ್ತು. ಅದು ಆದಿಲ್‌ಶಾಹಿಗೆ ಸೇರಿದ ರಾಜ್ಯ. ಆ ರಾಜನು "ಹತ್ತು ದಿನಗಳು ಅವಕಾಶ ಕೊಡಿರಿ. ಈ ಪ್ರಾಂತದಲ್ಲಿರುವ ಪಾಳೆಯಗಾರರನ್ನೂ ರಾಜರನ್ನೂ ಕರೆಸಿ ಮಾತನಾಡುತ್ತೇನೆ. ನಾವೆಲ್ಲರೂ ಒಟ್ಟು ಸೇರಿ ಕಾರ್ಯಾಚರಣೆ ನಡೆಸಿದರೆ ಏನಾದರೂ ಪ್ರಯೋಜನವಾದೀತು. ಒಬ್ಬೊಬ್ಬರಾಗಿ ಮುಂದೆ ನುಗ್ಗಿದರೆ ಮರಾಠರು ಮುರಿದು ಹಾಕುತ್ತಾರೆ." ಎಂದು ಹೇಳಿದನು.

ಮನೂಚಿಯು ಅದಕ್ಕೊಪ್ಪಿ ಅಲ್ಲಿ ಹತ್ತು ದಿನಗಳ ಕಾಲ ಬಿಡಾರ ಮಾಡಿದನು. ಈ ಸಮಯದಲ್ಲಿ ಅವನು ಮೀನು ಹಿಡಿಯುವುದು, ಶಿಕಾರಿ ಮಾಡುವುದು ಇವೆರಡು ಕಾರ್ಯಗಳಲ್ಲಿ ಆಸಕ್ತನಾಗಿದ್ದನು. ಆ ಸಮಯದಲ್ಲಿ ಒಂದೆರಡು ಸ್ವಾರಸ್ಯ ಪ್ರಸಂಗಗಳು ನಡೆದವು. ಕಾಡು ಪ್ರದೇಶ. ಮಧ್ಯದಲ್ಲಿ ಅಲ್ಲಲ್ಲಿ ಹೊಲಗಳು. ಅತ್ತಕಡೆ ಮನೂಚಿಯು ಕುದುರೆಯ ಮೇಲೆ ಕುಳಿತು ಸಂಚಾರ ಮಾಡುತ್ತಿರುವಾಗ ಒಂದು ಸ್ಥಳದಲ್ಲಿ ಕುದುರೆಯು ನಿಂತು ಹೋಯಿತು. ಮುಂದೆ ಹೆಜ್ಜೆ ಇಡಲಿಲ್ಲ, ಅಲುಗಾಡಲಿಲ್ಲ. ಮನೂಚಿಯು ಕುದುರೆಯನ್ನಿಳಿದು ನೋಡಿದನು. ಕುದುರೆಯು ನಿಂತ ಹಾಗೆಯೇ ನಿಂತಿತ್ತು. ಮುಟ್ಟಿ ನೋಡಿದನು. ಕುದುರೆಯು ಸಜೀವವಾಗಿದೆ. ಆದರೆ ಕಲ್ಲಿನಂತಾಗಿ ಬಿಟ್ಟಿದೆ. ಆ ಹಳ್ಳಿಯ ಜನರು ಬಂದು ಸುತ್ತಿಕೊಂಡರು. ಸಾಹೇಬನು ಏನೋನೋ ಮಾಡುತ್ತಾನೆ. ಕುದುರೆ ಅಲ್ಲಾಡನು ಕುದುರೆಯನ್ನು ಅಲ್ಲಿಯೇ ಬಿಟ್ಟು ಹೋಗಲು ಅವನಿಗೆ ಮನಸ್ಸಿಲ್ಲ. ಅದಕ್ಕೆ ಜೀವವಿದೆ. ಉಸಿರಾಡುತ್ತಿದೆ. ಆ ಸಾಹೇಬನ ಅವಸ್ಥೆಯನ್ನು ನೋಡಿ ಹಳ್ಳಿಗರು ಚಪ್ಪಾಳೆ ಹೊಡೆದು ನಗಲಾರಂಭಿಸಿದರು. ಸಾಹೇಬನು ಕೋಪಗೊಳ್ಳಲಿಲ್ಲ. ಆ ಹಳ್ಳಿಗರನ್ನು ಕೇಳಿದನು. "ನೀವು ನನ್ನನ್ನು ತಮಾಷೆ ಮಾಡಿ ನಗುತ್ತಿದ್ದೀರಿ. ಈ ಕುದುರೆ ಏಕೆ ಹೀಗಾಗಿದೆ. ಹೇಳಬಲ್ಲಿರಾ? ಇದಕ್ಕೆ ಉಪಾಯವೇನಾದರೂ ಉಂಟೆ?" ಎಂದು ಕೇಳಿದನು.

ಆ ಹಳ್ಳಿಗರು "ನೀವು ದೊಡ್ಡ ಸರದಾರರಂತೆ ಕಾಣುತ್ತೀರಿ. ನಮ್ಮ ಮೇಲೆ ಕೋಪಮಾಡಬೇಡಿ. ಇದರಲ್ಲೊಂದು 'ಖರಾಮತ್' ಇದೆ. ಈ ಹಳ್ಳಿಯಲ್ಲಿ ಒಬ್ಬ ಮಂತ್ರವಾದಿ ಇದ್ದಾನೆ. ಈ ಹೊಲ ಅವನಿಗೆ ಸೇರಿದ್ದು.

ಇಲ್ಲಿ ಕಾಡುಮೃಗಗಳ ಕಾಟ ಬಹಳವಾಗಿದೆ. ನಾವೆಲ್ಲ ರಾತ್ರೀ ಹಗಲೂ ಕಾಯುತ್ತೇವೆ. ಆ ಮಂತ್ರವಾದಿ ಇಲ್ಲಿ ತಡೆ ಕಟ್ಟಿದ್ದಾನೆ. ಆದರಿಂದ ಹೀಗಾಯಿತು. ಪ್ರತ್ಯಕ್ಷ ಪ್ರಮಾಣ. ಇದೇ 'ಖರಾಮತ್'" ಎಂದು ಹೇಳಿದರು.

ಸಾಹೇಬನಿಗೆ ಇದನ್ನು ನಂಬುವುದು ಕಷ್ಟವಾಯಿತು. ಈ ಚಮತ್ಕಾರ ವನ್ನು ಪರೀಕ್ಷೆಮಾಡಿ ನೋಡಬೇಕೆಂದು ಕುತೂಹಲ ಉಂಟಾಯಿತು. ಅವನು "ತುಂಬಾ ದುಡ್ಡು ಕೊಡುತ್ತೇನೆ. ಆ ಮಂತ್ರವಾದಿಯನ್ನು ಕರೆತನ್ನಿ, ಅವನನ್ನು ಏನೂ ತೊಂದರೆ ಪಡಿಸುವುದಿಲ್ಲ" ಎಂದು ಹೇಳಿದನು. ಹಳ್ಳಿಗರು ಮಂತ್ರವಾದಿಯನ್ನು ಕರೆತಂದರು. ಸಾಹೇಬನು ಆ ಮಂತ್ರವಾದಿಯನ್ನು ಕುರಿತು "ನನ್ನ ಕುದುರೆ ಇಲ್ಲಿ ಕಲ್ಲಾಗಿ ನಿಂತುಬಿಟ್ಟಿದೆ. ಆ ಜನರು ಇದು ನಿನ್ನ ಮಂತ್ರವಾದದ ಖರಾಮತ್ ಎನ್ನುತ್ತಾರೆ. ಇದನ್ನು ಬಿಡಿಸಿ ಕೊಡ ಬಲ್ಲೆಯಾ?" ಎಂದು ಕೇಳಿದನು.

ಮಂತ್ರವಾದಿಯು "ಹುಜೂರ್, ಬಿಡಿಸಿಕೊಡಬಲ್ಲೆ. ನಿಮ್ಮ ಜನ ನಮ್ಮ ಮಂತ್ರಶಕ್ತಿಯನ್ನು ನಂಬುವುದಿಲ್ಲ ಅದಕ್ಕೇನು? ನಿಮ್ಮ ದಾರಿ ನಿಮಗೆ—ನಮ್ಮ ದಾರಿ ನಮಗೆ" ಎಂದನು.

ಸಾಹೇಬನು ಮಂತ್ರವಾದಿಯನ್ನು ಕುರಿತು "ನಾನು ನಿನ್ನೊಡನೆ ವಾದ ಮಾಡುವುದಿಲ್ಲ. ದಯುವಿಟ್ಟು ಕುದುರೆಯನ್ನು ಬಿಡಿಸಿಕೊಡು. ನಿನಗೆ ತುಂಬಾ ಇನಾಮು ಕೊಡುತ್ತೇನೆ" ಎಂದನು.

ಮಂತ್ರವಾದಿಯು ಕುದುರೆಯ ಮುಂದೆ ನಿಂತು ತಲೆಯಿಂದ ಬಾಲದ ವರೆಗೆ ಮಂತ್ರದ ಕೋಲಿನಿಂದ ಸವರಿದನು. ಕುದುರೆಯು ಯಥಾಪ್ರಕಾರ ಹೆಜ್ಜೆಹಾಕಿ ಮನೂಚಿಯ ಪಕ್ಕದಲ್ಲಿ ಬಂದು ನಿಂತಿತು. ಅವನಿಗೆ ಬಹಳ ಆಶ್ಚರ್ಯವಾಯಿತು.

ಅವನು ಮಂತ್ರವಾದಿಯನ್ನು ಕುರಿತು "ನಿನಗೆ ತುಂಬಾ ಹಣ ಕೊಡು ತ್ತೇನೆ. ಆ ಕೋಲನ್ನು ನನಗೆ ಕೊಡುವೆಯಾ?" ಎಂದನು.

"ಬೇಡ, ಸಾಹೇಬರೇ. ಪರೀಕ್ಷೆ ಮಾಡಬೇಡಿ. ನೀವು ಹಿಂದುಗಳ ಮಂತ್ರತಂತ್ರಗಳನ್ನು ನಂಬುವುದಿಲ್ಲ" ಎಂದನು.

"ಮಂತ್ರವಾದಿ, ಸಿಟ್ಟಾಗಬೇಡ. ಕುತೂಹಲದಿಂದ ಕೇಳುತ್ತೇನೆ. ಈ ಮಂತ್ರವು ಪ್ರಾಣಿಗಳ ಮೇಲೆ ಮಾತ್ರ ನಡೆಯುತ್ತದೆಯೋ, ಅಥವಾ ಮನುಷ್ಯರ ಮೇಲೆಯೂ ನಡೆಯುತ್ತದೆಯೋ?"

"ನೋಡಿ ಸಾಹೇಬರೇ, ಮಂತ್ರದಲ್ಲಿ 'ಖರಾಮತ್' ಇದ್ದರೆ ಯಾರ ಮೇಲೆ ಬೇಕಾದರೂ ಚಲಾಯಿಸಬಹುದು. ಅನಾವಶ್ಯಕವಾಗಿ ಪರೀಕ್ಷೆಮಾಡಬಾರದು. ನೋಡಿ, ಈ ಹೊಲದಲ್ಲಿ ಮೂಲಂಗಿ ಇದೆ. ನಿಮಗೆ ಧೈರ್ಯವಿದ್ದರೆ ಅದನ್ನು ಕಿತ್ತು ತನ್ನಿ."

ಸಾಹೇಬನಿಗೆ ಮತ್ತೂ ಆಶ್ಚರ್ಯವಾಯಿತು. ತನ್ನ ಜೊತೆಯಲ್ಲಿದ್ದ ಜೆಂಗಾವಲಿನವನನ್ನು ಕರೆದು "ಆ ಮೂಲಂಗಿಯನ್ನು ಕಿತ್ತು ತಾ" ಎಂದು ಅಪ್ಪಣೆಮಾಡಿದನು. ಸೈನಿಕನು ಮೂಲಂಗಿಗೆ ಕೈಹಾಕಿದನು. ಕೈ ಕಚ್ಚಿಕೊಂಡಿತು! ಮನೂಚಿಗೆ ಆಶ್ಚರ್ಯವಾಯಿತು. "ಸಾಕಪ್ಪಾ ಬಿಡು. ನಿನ್ನ ಮಂತ್ರದಲ್ಲಿ ಬಹಳ 'ಖರಾಮತ್' ಇದೆ. ನಾನೆಂದಿಗೂ ಇದನ್ನು ಮರೆಯುವುದಿಲ್ಲ. ನನ್ನ ಡೈರಿಯಲ್ಲಿ ಬರೆದಿಡುತ್ತೇನೆ. ಇವನ ಕೈ ಬಿಡಿಸು" ಎಂದನು. ಮಂತ್ರವಾದಿಯು ನಗುತ್ತಾ ಕೈ ಬಿಡಿಸಿದನು. ಸಾಹೇಬನು ಅವನಿಗೆ ಮೂರು ಸಾವಿರ ರೂಪಾಯಿನ ಇನಾಮು ಕೊಟ್ಟನು.

ಈ ರಾಜ್ಯದಲ್ಲಿ ಇದೇನೋ ಒಂದು ಖರಾಮತ್ ಇದೆ. ಗುಡ್ಡಗಾಡುಗಳಲ್ಲಿಯೇ ಬೆಳೆದ ಮನುಷ್ಯ ಶಿವಾಜಿಯೂ ಇದನ್ನು ಕಲಿತಿರಬಹುದು. ಆದರಿಂದಲೇ ಅವನು ಮಂತ್ರವಾದಿ—ಮಾಯಾವಿ ಎಂದುಕೊಳ್ಳುತ್ತಾರೆ. ಸುಮ್ಮನೆ ಮಾತು ಹುಟ್ಟುವುದಿಲ್ಲ. ಶಿವಾಜಿಯು ಎಲ್ಲಿಯೋ ಇಂತಹ 'ಖರಾಮತ್' ತೋರಿಸಿರಬಹುದು. ಅದೇ ಮಾಳಿಗೆ ಮಾತು ಬೆಳೆದು ಎಲ್ಲ ಕಡೆಗೂ ಹರಡಿದೆ—ಎಂದುಕೊಂಡನು.

ರಾಂಪುರದ ನವಾಬನು ಜೊತೆಯವರೆನ್ನೆಲ್ಲಾ ಕರೆಸಿ ಮಾತನಾಡಿ ಮೊಗಲ್ ಸೇನಾಧಿಪತಿಗಳಿಗೆ ಸಹಾಯಮಾಡುವುದಾಗಿ ವಚನಕೊಟ್ಟನು. ಮನೂಚಿಯು ಅವರ ಖರ್ಚಿಗೆ ಮೂರು ಲಕ್ಷ ರೂಪಾಯಿಗಳನ್ನು ಕೊಡುವುದಾಗಿ ವಾಗ್ದಾನವಿತ್ತನು. ರಾಂಪುರದ ನವಾಬನನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿ, ಮಹಾರಾಜ ಜಯಸಿಂಹನ ಭೇಟಿಮಾಡಿಸಿ ಖಿಲ್ಲತ್ತುಗಳನ್ನೂ ಮೂರು ಲಕ್ಷಗಳನ್ನೂ ಕೊಡಿಸಿದನು.

ಜೋಧ್‌ಪುರದ ಮಹಾರಾಜ ಜಸವಂತಸಿಂಗನು ಜಯಸಿಂಹನ ಭೇಟಿ ಮಾಡಿದನು. ಜಯಸಿಂಹನು

"ನಾವು ಶಿವಾಜಿಯ ಮೇಲೆ ಯುದ್ಧಕ್ಕೆ ಬಂದಿದ್ದೇವೆ. ನಿನ್ನಂತೆ ನಾನೂ ಹಿಂದು. ಶಿವಾಜಿಯೂ ಹಿಂದು. ಆದರೆ ಅವನು ಮೊಗಲ್ ಸಾಮ್ರಾಟರಿಂಗೆ ಪ್ರಬಲ ವಿರೋಧಿಯಾಗಿದ್ದಾನೆ. ನಾವು ಮೊಗಲ್ ಬಾದಷಹನ ಸೇನಾಧಿಪತಿಗಳಾಗಿದ್ದೇವೆ, ನಮ್ಮ ಕುಲಧರ್ಮದಂತೆ ನಿಷ್ಠೆಯಿಂದ ನಡೆಯ ಬೇಕು" ಎಂದನು.

ಜಸವಂತಸಿಂಗನು "ಮಹಾರಾಜರೇ, ತಾವು ವಯಸ್ಸಿನಲ್ಲಿ ಹಿರಿಯರು. ಎಷ್ಟೋ ಯುದ್ಧಗಳನ್ನು ಜಯಿಸಿರುವ ವೀರಾಗ್ರೇಸರರು. ನನ್ನ ಶರೀರದಲ್ಲಿ ತಮ್ಮಂತೆಯೇ ರಜಪೂತ ರಕ್ತವು ಹರಿಯುತ್ತಿದೆ. ದೆಹಲಿಯ ದರಬಾರಿನವರಿಗೆ ದೂರು ಹೋಗಿದೆ. ಬಾದಷಹರಲ್ಲಿ ಬಿನ್ನಹ ಮಾಡಿಕೊಳ್ಳುವುದೂ ಎದೆಯನ್ನು ಬಗೆದು ತೋರಿಸುವುದೂ ವ್ಯರ್ಥ. ಅವರು ಮುಸಲ್ಮಾನರನ್ನೂ ನಮ್ಮನ್ನೂ ಪಕ್ಷಪಾತದಿಂದ ನೋಡುತ್ತಾರೆ. ಅವರ ಮಾತುಗಳು ಬಾದಷಹರಿಗೆ ಆಪ್ಯಾಯನವಾಗಿರುತ್ತದೆ. ಅಂದೇ ನನ್ನ ರಾಜ್ಯಕ್ಕೆ ಹಿಂತಿರುಗಿ ಹೋಗಿ ಬಾದಷಹರ ಸೇವೆಯಿಂದ ಮುಕ್ತನಾಗಿದ್ದೇನೆಂದು ರಾಯಸ ಬರೆದು ಕಳಿಸಬೇಕೆಂದು ನಿಶ್ಚಯಮಾಡಿದ್ದೆ. ಬಾದಷಹನು ಅದನ್ನು ಸಹಿಸುತ್ತಿರಲಿಲ್ಲವೆಂದು ನಾನು ಬಲ್ಲೆ. ಮತ್ತೇನು ಮಾಡಬಲ್ಲೆ? ಯುದ್ಧ! ಅದು ನಮ್ಮ ಕುಲಧರ್ಮ ರಜಪೂತರಿಗೆ ದೇವರು ಕೊಟ್ಟ ವರ. ಯುದ್ಧ ಮಾಡಿ ರಣಭೂಮಿಯಲ್ಲಿ ಮಡಿಯುತ್ತಿದ್ದೆ. ರಾಜಪುತಾಣವು ಶಾಂತವಾಗಿದೆ ಎಂದು ತಾವು ಭಾವಿಸಬಾರದು. ಪ್ರಕ್ಷುಬ್ಧವಾಗಿಯೇ ಇದೆ. ಏಕೆ ಬಲ್ಲಿರಾ? ಮುಸಲ್ಮಾನರು ನಮ್ಮನ್ನು ಅಪಮಾನ ಮಾಡುತ್ತಾರೆ. ಈ ಬಾದಷಹನಿಗೆ ಎಷ್ಟೋ ಬಂಧುಗಳು. ಅವರಿಗೆಲ್ಲಾ ಅಧಿಕಾರಗಳನ್ನು ಕೊಟ್ಟು ದೆಹಲಿಯಿಂದ ಕಳುಹಿಸಿಬಿಡುತ್ತಾನೆ. ಚೇಳಿಗೆ ಪಾರಪತ್ಯ ಕೊಟ್ಟಂತಾಗುತ್ತದೆ. ಅವರು ಮಾಡುವ ತಪ್ಪುಗಳೆಲ್ಲಾ ನಮ್ಮ ತಲೆ ತಿನ್ನುತ್ತವೆ. ಪುಣೆಯಲ್ಲಿ ಷಯಿಸ್ತಾಖಾನರ ಮೇಲೆ ನಡೆದ ದುರಂತವನ್ನೇ ಉದಾಹರಣೆಗೆ ತೆಗೆದುಕೊಳ್ಳಿ. ರಕ್ಷಣೆಯ ಸರ್ವ ಸೇನಾಧಿಪತಿ ನಾನು. ಹತ್ತು ಸಾವಿರ ರಜಪೂತ ಸೈನ್ಯ ನನ್ನ ಕೈಯಲ್ಲಿದೆ. ಕೋಟೆಯ ಕಾವಲಿನ ಕೊತ್ವಾಲನು ಮುಸಲ್ಮಾನ.

ನಗರ ರಕ್ಷಕರೆಲ್ಲರೂ ಮುಸಲ್ಮಾನರು. ಷಯಿಸ್ತಾಖಾನರ ಅರಮನೆಗೆ ಪಹರಿಯುವರೂ, ಕಾವಲುಗಾರರೂ ಎಲ್ಲರೂ ಮುಸಲ್ಮಾನರು. ರಂಜಾನ್ ಹಬ್ಬದಲ್ಲಿ ರಾತ್ರಿ ಅರಮನೆಯಲ್ಲಿ ಪಲಾವುಗಳ–ಮಿಠಾಯಿಗಳ ಸಮಾರಾಧನೆಯಾಯಿತು. ಕೋಟೆಯ ಕಾವಲುಗಾರರೂ, ಸರದಾರರೂ, ನಗರದ ಉಸ್ತುವಾರಿಯವರೂ, ಅರಮನೆಯ ರಕ್ಷಣಾದಳದವರೂ ಎಲ್ಲರೂ ಹೊಟ್ಟೆ ಬಿರಿಯ ತಿಂದು ಮೈಮರೆತು ಬಿದ್ದಿದ್ದರು. ಯಥೇಚ್ಛ ಮದ್ಯಪಾನ ಮಾಡಿದ್ದರು. ಮೊಗಲ್ ಸೈನಿಕರ ಉಡುಪು ಧರಿಸಿದ್ದರೆ ಮರಾಠರು ಮೊಗಲರು ಎಂಬ ಭೇದವನ್ನರಿಯದೇ ಮೈಮರೆತಿದ್ದರು ಆ ಜನ. ಇದಕ್ಕೆ ಹೊಣೆಯಾರು? ಮಾರನೆಯ ದಿನ ದರಬಾರಿನಲ್ಲಿ ಆ ಷಯಿಸ್ತಾಖಾನನು ಹುಚ್ಚನಾಯಿಯಂತೆ ಬೊಗಳಿದನು. ಅವನನ್ನು ಅಲ್ಲಿಯೇ ಕತ್ತರಿಸಿ ಬಿಡುತ್ತಿದ್ದೆ. ಕೋಪವನ್ನು ತಡೆದುಕೊಂಡು ಹೊರಗೆ ಹೊರಟುಬಂದೆ. ನೋಡಿ, ನಮಗೆಂತಹ ಅಪಮಾನ! ಎಲ್ಲವನ್ನೂ ನಿಮ್ಮೊಡನೆ ಬಿಚ್ಚಿ ಹೇಳಿದ್ದೇನೆ. ನನ್ನನ್ನು ಸ್ವೀಕರಿಸುವುದಾದರೆ ಸ್ವೀಕರಿಸಿರಿ. ಇಲ್ಲದಿದ್ದರೆ ಅಪ್ಪಣೆ ಕೊಡಿರಿ ನಾನು ರಾಜಪುತ್ರಸ್ಥಾನಕ್ಕೆ ಹೋಗುತ್ತೇನೆ. ಈ ಬಾದಷಹರ ಆಸ್ಥಾನ ಗೌರವವೂ ಸಾಕು, ಈ ಅಪಮಾನವೂ ಸಾಕು. ನೀವು ಬಾದಷಹರಿಗೆ ಸರಿಸಮಾನರಾಗಿದ್ದೀರಿ. ನಿಮ್ಮ ಶಿಬಿರದಲ್ಲಿ ಎಷ್ಟು ಜನ ಗುಪ್ತಚಾರರು ಇರುವರೆಂಬುದನ್ನು ಬಲ್ಲಿರಾ? ನಿಮ್ಮ ಮೇಲೆ ಅವರು ಪಿತೂರಿಮಾಡುತ್ತಾರೆ. ನಿಮ್ಮನ್ನು ಬಾದಷಹನು ಏನೂ ಮಾಡಲಾರ. ಆದರೆ ಇದೆಂತಹ ಅಪಮಾನ ಪರಿಸ್ಥಿತಿ, ನೀವೇ ನೋಡಿರಿ" ಎಂದನು.

ಮಹಾರಾಜಾ ಜಯಸಿಂಹನು ತಲೆದೂಗಿದನು. "ಜಸವಂತಸಿಂಗ್, ನೀನು ಸತ್ಯವನ್ನಾಡುತ್ತೀಯೆ. ಶುದ್ಧ ರಜಪೂತನಿಗೆ ಅದು ಅಲಂಕಾರಪ್ರಾಯವೇ ಸರಿ. ನನ್ನ ಅಧಿಕಾರದಲ್ಲಿ ಯಾರಿಗೂ ಅಪಮಾನವಾಗದು. ಒಂದು ಹುಲ್ಲುಕಡ್ಡಿಯೂ ಅಲ್ಲಾಡದು. ರಜಪೂತರಿಗೆ ಕತ್ತಿಗಿಂತಲೂ ದೊಡ್ಡ ದೇವರಿಲ್ಲ. ನಾನು ಕತ್ತಿಯನ್ನು ಮುಟ್ಟಿ ಹೇಳುತ್ತೇನೆ. ನಿನ್ನ ಗೌರವಕ್ಕೆ ಎಳ್ಳಷ್ಟು ಕುಂದಕ ಬರುವುದಿಲ್ಲ. ನಿನ್ನ ಅಧಿಕಾರಕ್ಕೆ ತಡೆಯಿಲ್ಲ. ನೀನು ನಿಷ್ಠೆಯಿಂದ ಯುದ್ಧಮಾಡು" ಎಂದು ಹೇಳಿ ಕಳುಹಿಸಿದನು.

ಯುರಾಜ ಆಜಂಷಹನು ಬಂದು ಜಯಸಿಂಹನ ಭೇಟಿಮಾಡಿದನು. ಅವರಿಬ್ಬರ ಸಂಭಾಷಣೆಯು ಅತ್ಯಂತ ಸೌಹಾರ್ದಯುತವಾಗಿದ್ದಿತು. ಯುವರಾಜನ ಮನಸ್ಸಿನಲ್ಲಿ ಜಯಸಿಂಹನು ಬಾದಷಹನಿಗೆಸಮಾನವಾದವನೆಂಬ ಭಾವನೆ ಇತ್ತು. ಯುವರಾಜನು ಹೇಳಿದನು. "ಜಯಸಿಂಹ ಮಹಾರಾಜರೇ. ತಾವು ಯುದ್ಧಕ್ಕೆ ಬಂದುದು ಒಳ್ಳೆಯದೇ ಆಯಿತು. ಸ್ವಯಂ ಬಾದಷಹರೇ ಬಂದಂತಾಯಿತು. ನಾನು ಈ ದಖ್ಖನ್ನಿನ ಸರ್ವಾಧಿಕಾರಿ ಎಂಬುದೇನೋ ನಿಜ. ಆದರೆ ಎಲ್ಲ ವಿಷಯಗಳಲ್ಲಿಯೂ ತಮ್ಮ ಆಜ್ಞೆಯಂತೆನಡೆಯುತ್ತೇನೆ. ನನ್ನ ವಶದಲ್ಲಿರುವ ಸಮಸ್ತ ಸೇನಾಧಿಪತಿಗಳಿಗೂ ಅಪ್ಪಣೆ ಮಾಡಿದ್ದೇನೆ. ಅವರೆಲ್ಲರೂ ತಮ್ಮ ಆಜ್ಞೆಯಂತೆ ನಡೆಯಬೇಕು. ಶಿಕ್ಷೆ ರಕ್ಷೆಗಳು ನಿಮಗೆ ಸೇರಿದ್ದು. ಇಂದು ದಖ್ಖನ್ನಿನಲ್ಲಿರುವ ಸಮಸ್ತ ಸೈನ್ಯಗಳೂ ತಮ್ಮವು ನೋಡಿ, ಮಹಾರಾಜರೇ. ಬಾದಷಹರಲ್ಲಿ ನನಗೆ ಬಹಳ ಭಕ್ತಿ ಇದೆ ಆದರೆ ಅಧಿಕಾರ ಚಲಾವಣೆಯಲ್ಲಿ ಹೆಜ್ಜೆಹೆಜ್ಜೆಗೂ ಭಿನ್ನಾಭಿಪ್ರಾಯಗಳಿವೆ. ಶಿವಾಜಿಯು ಸೂರತ್ತನ್ನು ಸೂರೆಮಾಡಿದ. ಅದು ನನ್ನ ಅಧಿಕಾರಕ್ಕೆ ಸೇರಿದ್ದಲ್ಲ. ಅಲ್ಲಿ ಬೇರೇ ಫೌಜುದಾರರಿದ್ದಾರೆ, ಕಿಲ್ಲೇದಾರರಿದ್ದಾರೆ. ಅವರ ಮೇಲಿನ ಅಧಿಕಾರ ನೇರವಾಗಿ ದೆಹಲಿಯ ದರ್ಬಾರಿನಿಂದ ನಡೆಯುತ್ತದೆ ಅತ್ತಕಡೆ ಸಮುದ್ರ ತೀರದಲ್ಲಿ ಶಿವಾಜಿಯು ನೌಕಾಬಲವನ್ನು ಕಟ್ಟಿ ದಾಂಧಲೆಮಾಡುತ್ತಿದ್ದಾನೆ. ಖಂಡೆಲ ದ್ವೀಪವು ಅವನ ವಶವಾಗಿದೆ ಎಂದು ಕೇಳಿದ್ದೇನೆ. ಜಂಜೀರಕ್ಕೂ ಕಾಲಿಟ್ಟಿದ್ದಾನೆಂದು ಸಮಾಚಾರ ಬಂದಿದೆ. ಇವೆಲ್ಲಾ ನನಗೆ ಸೇರಿವೆಯೋ ! ದೆಹಲಿಯ ದರ್ಬಾರು ಕಣ್ಣು ಮುಚ್ಚಿಕೊಂಡು ಕುಳಿತಿದ್ದರೆ ನಾವೇನು ಮಾಡಬಹುದು. ಶಿವಾಜಿಯು ಕೊಂಕಣ, ಗೋವಾಗಳಿಗೆ ಹೋಗಿ ಹಾವಳಿ ಮಾಡುತ್ತಾನೆ. ಆ ರಾಜ್ಯವೆಲ್ಲಾ ಆದಿಲ್ ಷಾಹಿಗೆ ಸೇರಿದ್ದು. ಆದಿಲ್‌ಷಾಹೀ ರಾಜ್ಯ ರಕ್ಷಣೆಗೆ ಮೊಗಲ್ ಸೈನ್ಯಗಳನ್ನು ಕಳುಹಿಸಲಾದೀತೇ ! ಇವೆಲ್ಲಾ ಬಾದಷಹರ ಮನಸ್ಸಿನಲ್ಲಿ ನನ್ನ ಮೇಲೆ ಅಸಮಾಧಾನಕ್ಕೆ ಕಾರಣವಾಗಿದೆ. ಇನ್ನು ಮುಂದೆ ತಾವು ಜವಾಬ್ದಾರರು. ನಾನು ನಿರಾತಂಕವಾಗಿ ಕೆಲವು ಕಾಲ ಸುಖವಾಗಿ ಕಳೆಯುತ್ತೇನೆ." ಎಂದು ಹೇಳಿದನು.

ಜಯಸಿಂಹನು "ಯುವರಾಜ, ನಿನ್ನ ಮಾತುಗಳೆಲ್ಲವೂ ಸರಿಯಾಗಿದೆ. ಈ ಮರಾಠಾ ರಾಜ ಶಿವಾಜಿಯ ಪ್ರತಾಪವು ಬಾದಷಹರ ಕಣ್ಣು ಕುಕ್ಕುತ್ತದೆ.

ಆದರಿಂದ ಅವರು ಯಾವಾಗಲೂ ಪ್ರಕ್ಷುಬ್ಧರಾಗಿಯೇ ಇರುತ್ತಾರೆ. ನಾನು ಅವರಿಗೆ ಬರೆದು ಕಳುಹಿಸುತ್ತೇನೆ. ಮತ್ತೇನೂ ಬರಿಯುವುದಿಲ್ಲ. ಈ ದಕ್ಷಿಣ ವ್ಯವಹಾರಗಳನ್ನೆಲ್ಲಾ ಮರೆತುಬಿಡಿ-ಎಂದು ಬರೆದು ಕಳುಹಿಸುತ್ತೇನೆ. ಈ ದೆಹಲಿಯ ಗುಪ್ತಚಾರರನ್ನೆಲ್ಲಾ ಹೊಡೆದು ಓಡಿಸಿಬಿಡುತ್ತೇನೆ. ಈ ಶಿವಾಜಿಯ ವಿಚಾರಣೆ ನಾನು ತೆಗೆದುಕೊಳ್ಳುತ್ತೇನೆ. ನೀನು ಸುಖವಾಗಿರು ಬಾದಷಹರ ಪುತ್ರ ಬಾದಷಹರಿಗೆ ಸಮಾನ. ಅಧಿಕಾರವೆಲ್ಲವೂ ಸುಪುತ್ರವಾಗಿ ನಡೆಯುತ್ತದೆ" ಎಂದು ಹೇಳಿಕಳುಹಿಸಿದನು.

೯

ಮಹಾರಾಜಾ ಜಯಸಿಂಹನು ಯುದ್ಧದ ವ್ಯವಸ್ಥೆಗಳನ್ನೆಲ್ಲಾ ಮಾಡಿದನು. ಆಯಕಟ್ಟಿನ ಜಾಗಗಳಿಗೆಲ್ಲಾ ಸೇನಾನಾಯಕರನ್ನು ನೇಮಿಸಿ ಕಳುಹಿಸಿದನು. ಬಾದಷಹರಿಗೆ ಒಂದು ಪತ್ರ ಬರೆದು ದೂತರ ಮುಖೇನ ಕಳಿಸಿಕೊಟ್ಟನು ಆ ಪತ್ರದ ತಾತ್ಪರ್ಯವು ಈ ರೀತಿ ಇದ್ದಿತು.

"ಯುದ್ಧದ ವ್ಯವಸ್ಥೆಗಳನ್ನೆಲ್ಲಾ ಸಾಂಗೋಪಾಂಗವಾಗಿ ಮಾಡಲಾಗಿದೆ. ನನ್ನ ಉದ್ದೇಶದಂತೆ ಈ ಮರಾಠರೊಡನೆ ಯುದ್ಧವು ಮುಕ್ತಾಯವಾಗಬೇಕಾದರೆ ಆರು ತಿಂಗಳ ಕಾಲವಾಗಬಹುದು. ಶಿವಾಜಿಯು ಕೊಂಕಣದವರೆಗೆ ನೆಲೆಗಳನ್ನು ಏರ್ಪಡಿಸಿಕೊಂಡಿದ್ದಾನೆ. ಅವನನ್ನು ಹಿಡಿದು ಹಾಕದಿದ್ದರೆ ಯುದ್ಧವು ಮುಕ್ತಾಯವಾಯಿತೆಂದುಕೊಳ್ಳುವುದು ಭ್ರಾಂತಿಯಾಗ್ಯುತ್ತದೆ. ನಮ್ಮ ದ್ರವ್ಯ, ಸೈನ್ಯಗಳನ್ನೆಲ್ಲಾ ನಿರರ್ಥಕಗೊಳಿಸಿದಂತಾಗುತ್ತದೆ. ಅವನನ್ನು ಹಿಡಿಯಲೇಬೇಕು.

"ನಾನು ಈ ಯುದ್ಧರಂಗದಲ್ಲಿ ಇರುವವರೆಗೆ ಈ ಮೊಗಲಾಯಿ ರಾಜ್ಯದ ಮತ್ತು ರಣರಂಗದ ಎಲ್ಲ ಅಧಿಕಾರಗಳೂ ನನಗೆ ಕೊಡಲ್ಪಡಬೇಕು. ಎಂಥಾ

ಉನ್ನತಾಧಿಕಾರಿಯನ್ನಾದರೂ ಬರ್ತ್ತರ್ಫ್ ಮಾಡುವ, ಸೇಮಕ ಮಾಡುವ ಅಧಿಕಾರವು ನನಗಿರಬೇಕು. ಈ ಯುದ್ಧಕ್ಕಾಗಿ ಎಷ್ಟು ಹಣವನ್ನಾದರೂ ಖರ್ಚು ಮಾಡಲು ಅಪ್ಪಣೆ ಇರಬೇಕು. ಈ ದಖ್ಖನ್ನಿನಲ್ಲಿ, ಈ ಯುದ್ಧದಲ್ಲಿ ನೆರವಾದವರಿಗೂ ಇತರ ಪಾಳೆಗಾರರಿಗೂ ಜಹಗೀರಿಗಳನ್ನು ಮಂಜೂರ್ಮಾಡುವ ಅಧಿಕಾರವು ನನ್ನದಾಗಿರಬೇಕು. ನಾನು ಈ ದಖ್ಖನ್ನಿನಲ್ಲಿರುವವರೆಗೆ ಬಾದಷಹರ ಬಂಧು ಬಾಂಧವರನ್ನಾಗಲೀ, ಅನುಗ್ರಹ ಪಾತ್ರರನ್ನಾಗಲೀ ಅಧಿಕಾರಕ್ಕೆ ಕಳಿಸಕೂಡದು. ಮೊಗಲ್ ಸಾಮ್ರಾಜ್ಯದ ಹಿತಕ್ಕಾಗಿ, ಪ್ರತಿಷ್ಠೆಗೌರವಗಳಿಗಾಗಿ ಇಷ್ಟು ಅಧಿಕಾರಗಳನ್ನು ಬಾದಷಹರು ನನಗೆ ಅನುಗ್ರಹಿಸಿದರೆ ಮಾತ್ರವೇ ಈ ಯುದ್ಧದ ಪೂರ್ಣಸಾಫಲ್ಯತೆಯಾಗುತ್ತದೆ" ಎಂದು ಬರೆದು ಕಳಿಸಿದನು.

ಬಾದಷಹನು ಸ್ವತಃ ಈ ಪತ್ರವನ್ನು ಓದಿ ನೋಡಿಕೊಂಡನು. ಮೊದಲು ಆಶ್ಚರ್ಯವಾಯಿತು. ಆಮೇಲೆ ಸಾವಧಾನದಿಂದ ಯೋಚನೆ ಮಾಡಿದನು. ಎಂಥಾ ಪರಾಕ್ರಮಶಾಲಿಯಾದರೂ ಎಷ್ಟು ಮಹೋನ್ನತ ಪದವಿಯಲ್ಲಿರುವವನಿಗಾದರೂ ಇಷ್ಟು ಅಧಿಕಾರಿಗಳನ್ನು ಕೊಡಲಾದೀತೆ? ಬಾದಷಹರ ಸಮಸ್ತ ಅಧಿಕಾರಗಳನ್ನೂ ಈ ಜಯಸಿಂಹನು ಕೇಳುತ್ತಿದ್ದಾನೆ. ಇದನ್ನು ಒಪ್ಪಲಾಗುವುದಿಲ್ಲ.

ಒಂದು ಪಕ್ಷ ಒಪ್ಪದಿದ್ದರೆ, ಜಯಸಿಂಹನು ಮುಂದೇನು ಮಾಡುತ್ತಾನೆ ಈ ಪತ್ರದ ವಾಕ್ಯ ವಾಕ್ಯಗಳು ಅಕ್ಷರ ಅಕ್ಷರಗಳು ಏನೇನು ಮಾಡುತ್ತಾನೆಂಬುದನ್ನು ಧ್ವನಿಮಾಡಿ ಹೇಳುತ್ತಲೇ ಇವೆ. ಅವನು ಯುದ್ಧಮಾಡುವುದಿಲ್ಲ. ಒರೆಯಿಂದ ಕತ್ತಿಯನ್ನು ಹೊರಗೆ ಸೆಳೆಯುವುದಿಲ್ಲ. ಮುಂದೇನು ಮಾಡಬೇಕು—ನಾನೇ ಸಾಕ್ಷಾತ್ತಾಗಿ ರಣರಂಗಕ್ಕೆ ಹೋಗಬೇಕು. ಅದರಿಂದ ಜಯಸಿಂಹನನ್ನು ಪೂರ್ಣವಾಗಿ ಅಪಮಾನಗೊಳಿಸಿದಂತಾಗುತ್ತದೆ. ಜಯಸಿಂಹನು ನಮ್ಮನ್ನು ಬಿಟ್ಟು ಹೋಗುವುದಿಲ್ಲ. ಶತ್ರುಗಳೊಡನೆ ಸೇರಿಕೊಳ್ಳುವುದೂ ಇಲ್ಲ. ಆದರೆ, ನಾವು ಮಾತ್ರ ಅವನನ್ನು ಕಳೆದುಕೊಂಡಂತಾಗುತ್ತದೆ, ಅದೇನೋ ನಿರ್ಧರವಾದ ಮಾತೇ.

ಏನೇ ಆಗಲಿ,ನಾನುಜಯಸಿಂಹನನ್ನು ಕಳೆದುಕೊಳ್ಳಲು ತಯಾರಾಗಿಲ್ಲ ಇಷ್ಟು ಅಧಿಕಾರಗಳನ್ನು ಅವನಿಗೆ ಕೊಟ್ಟರೇನಾಗುತ್ತದೆ. ಏನೂ ದೋಷ ವಾಗುವುದಿಲ್ಲ. ಆದರೆ ದೆಹಲಿಯ ದರ್ಬಾರಿನಲ್ಲಿರುವ ದೊಡ್ಡ ದೊಡ್ಡ ಸರದಾರರೆಲ್ಲರೂ ವಿಮುಖರಾಗುತ್ತಾರೆ. ಈ ದೃಷ್ಟಿಯಿಂದ ಸರಿಯಾಗಿ ತೂಕಮಾಡಿ ನೋಡಬೇಕು. ಇವರಾರೂ ಶಿವಾಜಿಯನ್ನು ಅಣಗಿಸಲಾರರು. ದಖ್ಖನ್ನನ್ನು ಹತೋಟಿಗೆ ತರಲಾರರು ಅದು ಸಿದ್ಧವಾಗಿಯೇ ಇದೆ. ಹೀಗಿರು ವಲ್ಲಿ ಜಯಸಿಂಹನಿಗೆ ಮನಃಪೂರ್ವಕವಾಗಿ ಅವನ ಕೋರಿಕೆಯನ್ನು ಈಡೇರಿಸಿ ಕೊಡೋಣ. ಆಗಲೂ ಅವನಿಂದ ಕಾರ್ಯಸಿದ್ಧಿಯಾಗದಿದ್ದರೆ. ನಾವೇ ಖುದ್ದಾಗಿ ರಣಕ್ಷೇತ್ರಕ್ಕೆ ಹೋಗುವುದು ಇದ್ದೇಇದೆ–ಎಂದು ಆಲೋಚಿಸಿ ದನು. ರಾಯಸದವರನ್ನು ಕರೆಸಿ, ಜಯಸಿಂಹನಿಗೆ, ದಖ್ಖನ್ನಿನ ಅತ್ತ ಕಡೆಯ ಮೊಗಲಾಯಿ ಪ್ರಾಂತ್ಯಗಳ ಸಮಸ್ತ ಅಧಿಕಾರಗಳೂ ಕೊಡಲ್ಪಟ್ಟಿವೆ, ಎಂದು ಧಾರಾಳ ಮನಸ್ಸಿನಿಂದ ಉತ್ತರ ಬರೆಯಿಸಿ ಕಳಿಸಿದನು. ಯುವರಾಜಾ ಆಜಂಷಹನಿಗೂ ಈ ವಿವರಗಳನ್ನೆಲ್ಲಾ ಬರೆಸಿಕಳಿಸಿದನು. ನಿನಗೆ, ಇದೆಲ್ಲಾ ಒಪ್ಪಿಗೆಯಾದರೆ ಸಂತೋಷ, ಇಲ್ಲದಿದ್ದರೆ. ನೀನು ದೆಹಲಿಗೆ ಬಂದುಬಿಡು ಎಂದು ತಾನೇ ಎರಡು ಪಂಕ್ತಿಗಳನ್ನು ಬರೆದು ಕಳಿಸಿದನು.

ಆ ಪತ್ರವು ಜಯಸಿಂಹನಿಗೆ ಬಂದು ತಲುಪಿತು. ಜಯಸಿಂಹನು ಆ ಪತ್ರವನ್ನು ನೋಡಿ ಆಶ್ಚರ್ಯಪಟ್ಟನು. ಈ ಬಾದಷಹನು ಎಂತಹ ನಿಷ್ಕಪಟಿ! ಎಂತಹವನಾದರೂ ನನ್ನ ಪತ್ರವನ್ನು ನೋಡಿ ಸಂದೇಹ ಪಡುತ್ತಿದ್ದನು. ಬಾದಷಹನು ಸ್ವಾರ್ಥಕ್ಕಾಗಿ ವಿಧಿಯಿಲ್ಲದೆ ಇದನ್ನು ಒಪ್ಪಿಕೊಂಡವನಲ್ಲ. ಅವನ ಸ್ವಭಾವವೇ ಅಂತಹದಲ್ಲ. ಫಿರಂಗಿಯನ್ನು ಹಾರಿಸಬೇಕಾದರೆ ಎಷ್ಟು ಮದ್ದುಗುಂಡುಗಳನ್ನು ತುಂಬಬೇಕು, ಹೇಗೆ ಬಲವಾಗಿ ಹೊಡೆಯಬೇಕು ಎಂಬುದನ್ನು ಅವನು ಚೆನ್ನಾಗಿ ಬಲ್ಲ. ಯೋಧನು ಯೋಧನ ತೋಳು ಬಲವನ್ನೂ ಮನಶ್ಶಕ್ತಿಯನ್ನೂ ಅಳೆಯಬಲ್ಲ ನನ್ನ ಕಾಗದ ಬಾದಷಹನ ಪ್ರತ್ಯುತ್ತರ ಇವೆರಡೂ ಅದಕ್ಕೆ ತಕ್ಕಂತೆಯೇ ಇವೆ ಎಂದು ಸಂತೋಷಪಟ್ಟು ಕೊಂಡನು.

ಸರಳ ಸ್ವಭಾವಿ ಅಜಂಷಹನು ಬಂದು ಜಯಸಿಂಹನ ಭೇಟಿಮಾಡಿ ಬಾದಷಹನ ಸ್ವಹಸ್ತಾಕ್ಷರದ ಪತ್ರವನ್ನೂ ಅವನ ಕೈಗೆ ಕೊಟ್ಟನು. ಜಯಸಿಂಹನು ಆ ಪತ್ರವನ್ನು ಓದಿ ನೋಡಿಕೊಂಡನು.

"ಯುವರಾಜಾ, ಈ ಪ್ರಕರಣವನ್ನು ತಪ್ಪಾಗಿ ಭಾವಿಸಬೇಡ. ನಿನ್ನ ಅಧಿಕಾರವನ್ನು ಕಿತ್ತುಕೊಂಡು ನಿನ್ನನ್ನು ದೆಹಲಿಗೆ ಕಳುಹಿಸಬೇಕೆಂದು ಬಗೆದವನು ನಾನಲ್ಲ. ಇಂತಹ ಯುದ್ಧ ಪ್ರಸಂಗಗಳಲ್ಲಿ ಸಂಪೂರ್ಣ ಅಧಿಕಾರ ವಿರಬೇಕು. ನಿನಗಿರುವ ಎಲ್ಲ ಅಧಿಕಾರಗಳಿಗಿಂತಲೂ ಹೆಚ್ಚಿನ ಅಧಿಕಾರ ಬೇಕೆಂದು ನಾನು ಕೇಳಿದೆ. ಇವೆಲ್ಲಾ ಬಾದಷಹರಿಗೆ ಮಾತ್ರ ಇರುವ ಅಧಿಕಾರಗಳು. ಅವರು ನನ್ನಲ್ಲಿ ಪೂರ್ಣ ಭರವಸೆಯಿಟ್ಟು ಈ ಅಧಿಕಾರವನ್ನು ನನಗೆ ಕೊಟ್ಟಿದ್ದಾರೆ. ನಾನು ಅದನ್ನು ಸಾರ್ಥಕಗೊಳಿಸಬೇಕು. ನಿನ್ನಲ್ಲಿ ರುವ ಅಧಿಕಾರಗಳೆಲ್ಲಾ ನಿನಗೇ ಇರುತ್ತವೆ. ನೀನು ಇಲ್ಲಿಯೇ ಇರು. ದೆಹಲಿಗೆ ಹೋಗಬೇಕಾದ ಪ್ರಮೇಯವೇನೂ ಇಲ್ಲ" ಎಂದು ಹೇಳಿದನು.

ಅಜಂಷಹನು "ಮಹಾರಾಜರೇ, ಬಾದಷಹರು ತಮ್ಮಲ್ಲಿಟ್ಟಿರುವ ನಂಬಿಕೆ ಗೌರವಗಳು ಎಷ್ಟೆಂಬುದನ್ನು ನಾನು ಬಲ್ಲೆ. ಅಷ್ಟೇ ಅಲ್ಲ; ನನಗೆ ತಮ್ಮಲ್ಲಿ ಅಪಾರ ಗೌರವವಿದೆ. ನನ್ನಿಂದ ತಮಗೆ ಸ್ವಲ್ಪವಾದರೂ ಸೇವೆ ಯಾಯಿತೆಂದು ತಾವು ಸಂತೋಷಪಟ್ಟರೆ ಅದರಿಂದ ನಾನಷ್ಟೋ ಹೆಮ್ಮೆ ಪಡುತ್ತೇನೆ" ಎಂದನು.

ಮಹಾರಾಜನು ವಿಶ್ವಾಸದಿಂದ ಯುವರಾಜನ ಕೈ ಕುಲುಕಿ ಕಳುಹಿಸಿ ಕೊಟ್ಟನು.

ಜಯಸಿಂಹನು ಅಲ್ಲಿಂದ ಪುಣೆಗೆ ಪ್ರಯಾಣಮಾಡಿ ಅಲ್ಲಿ ಬಿಡಾರ ಮಾಡಿದನು.

ಶಿವಾಜಿಗೆ ಜಯಸಿಂಹನು ಯುದ್ಧಕ್ಕೆ ಬಂದಿರುವ ಸಮಾಚಾರವೆಲ್ಲಾ ತಿಳಿಯಿತು. ತನ್ನ ಸೇನಾಧಿಪತಿಗಳನ್ನೂ, ಮಂತ್ರಿಗಳನ್ನೂ ಸೇರಿಸಿ ಮಂತ್ರಾಲೋಚನೆ ಮಾಡಿದನು.

"ಈಗ ನಮ್ಮಲ್ಲಿ ಹೆಚ್ಚು ಸೈನ್ಯಗಳಿಲ್ಲ. ಸುಮಾರು ಇಪ್ಪತ್ತು ಸಹಸ್ರ ಸೈನ್ಯಗಳಿರಬಹುದು. ಮೊಗಲ್ ಮತ್ತು ರಾಜಪೂತ ಸೈನ್ಯಗಳು ಐವತ್ತು

ಸಹಸ್ರಕ್ಕೂ ಹೆಚ್ಚಾಗಿರಬಹುದು. ಅವರಲ್ಲಿ ಶಸ್ತ್ರಾಸ್ತ್ರಗಳೂ, ಬಂದೂಕುಗಳೂ ತೋಪುಗಳೂ ಬೇಕಾದಷ್ಟಿವೆ. ಚುನಾಯಿಸಿದ ಸೇನಾಧಿಪತಿಗಳಿದ್ದಾರೆ. ಮಹಾರಾಜ ಜಯಸಿಂಹನು ಸಾಮಾನ್ಯನಲ್ಲ. ನಾವು ಬಯಲು ಪ್ರದೇಶದಲ್ಲಿ ಯುದ್ಧ ಮಾಡಲೇಕೂಡದು. ನಮ್ಮ ಸೈನ್ಯಗಳನ್ನೆಲ್ಲಾ ಕೋಟೆಗಳ ಒಳಗೂ ಹೊರಗೂ ಜಮಾಯಿಸಬೇಕು. ಈ ಬೇಸಿಗೆಯ ಕಾಲವು ಪೂರೈಸುವವರೆಗೆ ಕೋಟೆಗಳನ್ನು ಉಳಿಸಿಕೊಂಡರೆ ಮುಂದೆ ನೋಡಿಕೊಳ್ಳೋಣ. ಈಗ ಹೆಚ್ಚಾಗಿ ಸೈನ್ಯವನ್ನು ಜಮಾಯಿಸುವುದಕ್ಕೂ ಅವಕಾಶವಿಲ್ಲ ನಮ್ಮಲ್ಲಿ ಹೆಚ್ಚು ಸರಬರಾಜೂ ಇಲ್ಲ. ಆದ್ದರಿಂದ ಕೋಟೆಗಳೊಳಗೇ ಯುದ್ಧ ಮಾಡಬೇಕು" ಎಂದು ನಿರ್ಧಾರ ಮಾಡಿದರು.

ಶಿವಾಜಿಯು ಆ ಸೇನಾಧಿಪತಿಗಳನ್ನೆಲ್ಲಾ ಒಂದೊಂದು ಕೋಟೆಯ ರಕ್ಷಣೆಗೆ ನಿಯಮಿಸಿದನು. ಮಹಾರಾಜ ಜಯಸಿಂಹನಿಗೆ ಒಂದು ಪತ್ರ ಬರೆದು ನಾಲ್ಕು ಮಂದಿ ವೈದಿಕ ಬ್ರಾಹ್ಮಣರನ್ನು ಜಯಸಿಂಹನಲ್ಲಿಗೆ ಕಳುಹಿಸಿ ಕೊಟ್ಟನು.

"ಓ! ಸರದಾರುಗಳಲ್ಲಿ ಸರದಾರಶ್ರೇಷ್ಠನೇ, ರಾಜರುಗಳಲ್ಲಿ ಮಹಾರಾಜನೇ, ಭಾರತದ ಉದ್ಯಾನದ ರಸಾಲವೃಕ್ಷಗಳ ಅಧಿಕಾರಿಯೇ, ಶ್ರೀರಾಮಚಂದ್ರನ ಹೃದಯ ಮತ್ತು ಆತ್ಮದ ಭಾಗವೇ, ಈ ದಿನ ವೀರ ರಜಪೂತರು ನಿನ್ನಿಂದ ತಲೆಯೆತ್ತಿ ನಿಂತಿದ್ದಾರೆ. ಬಾಬರನ ವಂಶದ ಬಾದಷಾಹಿಯ ವೈಭವವು ನಿನ್ನಿಂದ ಶಕ್ತಿಯುತವಾಗಿ ವಿರಾಜಿಸುತ್ತಿದೆ. ಮತ್ತು ಅದು ನಿನ್ನ ಸಹಾಯವನ್ನು ಪಡೆಯುವ ಸೌಭಾಗ್ಯವನ್ನೂ ಹೊಂದಿದೆ. ಓ ಜಯಸಿಂಹ! ಯಾರ ಅದೃಷ್ಟವು ಸದಾ ಮೊಳಕೆಯ ಅವಸ್ಥೆಯಲ್ಲಿರುವುದೋ ಮತ್ತು ಯಾರ ಬುದ್ಧಿಶಕ್ತಿಯು ಸರ್ವದಾ ಪರಿಪೂರ್ಣಾವಸ್ಥೆಯಲ್ಲಿರುವುದೋ, ಅಂತಹ ನೀನು ಶಿವನ ಅನಂತ ವಂದನೆಗಳನ್ನೂ ಹರಕೆಗಳನ್ನೂ ಸ್ವೀಕರಿಸು. ಪ್ರಪಂಚದ ಸೃಷ್ಟಿಕರ್ತನು ನಿನ್ನನ್ನು ರಕ್ಷಿಸಲಿ. ಜಗದೀಶ್ವರನು ನಿನಗೆ ಸದ್ಧರ್ಮದ ಹಾದಿಯನ್ನು ತೋರಲಿ.

ನೀನು ನನ್ನ ಮೇಲೆ ಯುದ್ಧ ಮಾಡುವುದಕ್ಕೂ ದಕ್ಷಿಣಾಪಥವನ್ನು

ಜವಾನ ಮಾಡುವುದಕ್ಕೆ ಬಂದಿರುವೆಯೆಂದು ಕೇಳಿರುವೆನು. ಹಿಂದುಗಳ ಹೃದಯದಿಂದಲೂ ಕಣ್ಣುಗಳಿಂದಲೂ ಚಿಮ್ಮುವ ರಕ್ತಸಿಂಚಿತವಾದ ಖಡ್ಗದ ಪ್ರಭೆಯು ನಿನ್ನ ಮುಖಮಂಡಲದ ಮೇಲೆ ಬೆಳಗಬೇಕೆಂದು ನಿನ್ನ ಇಹಲೋಕದ ಅಪೇಕ್ಷೆಯಾಗಿದೆ. ಆದರೆ ನಿನ್ನ ಮುಖವು ಈಗಾಗಲೇ ಕಾಡಿಗೆಯಿಂದ ಬಳಿಯಲ್ಪಟ್ಟದೆ ಎಂಬುವ ಅರಿವು ನಿನಗಿಲ್ಲ. ಏಕೆಂದರೆ ಅದರಿಂದ ಈ ದೇಶವೂ ಅದರ ಧರ್ಮವೂ ಅಪಾಯ ಸ್ಥಿತಿಯಲ್ಲಿದೆ. ನೀನು ಒಂದು ಕ್ಷಣ ಒಂದೇ ಒಂದು ಕ್ಷಣ ನಿನ್ನ ಕೈಗಳನ್ನೂ ಭುಜಬಲವನ್ನೂ ಯೋಚಿಸಿದೆಯಾದರೆ ಯಾರ ರಕ್ತಸಿಂಚನದಿಂದ ನಿನ್ನ ಖಡ್ಗದ ಪ್ರಭೆಯು ವಿರಾಜಮಾನವಾದುದೋ, ಇಹಲೋಕ ಪರಲೋಕಗಳಲ್ಲಿಯೂ ಆ ಪ್ರಭೆಯ ವರ್ಣಾತಿಶಯವೂ ಅರಿವಾಗುವುದು.

ಮತ್ತು ನೀನು ನಿನ್ನ ಇಚ್ಛಾನುಸಾರವಾಗಿಯೇ ಈ ದಕ್ಷಿಣವನ್ನು ಜಯಿಸಲು ಬಂದಿದ್ದರೆ, ನನ್ನ ಶಿರಸ್ಸನ್ನು ಭೂಮಿಯ ಮೇಲಿಟ್ಟು ನೀನು ಮೆಟ್ಟಿ ಹೋಗಲು ಸಹಾಯಕನಾಗುತ್ತಿದ್ದೆ. ನಾನು ನಿನ್ನ ಸರ್ವಸ್ವ ಬಲದೊಂದಿಗೆ ಬಂದು ಈ ದೇಶದ ಒಂದು ಕೊನೆಯಿಂದ ಮತ್ತೊಂದು ಕೊನೆಯವರೆಗೂ ಗೆದ್ದು ನಿನ್ನ ಪದಾಕ್ರಾಂತ ಮಾಡುತ್ತಿದ್ದೆ. ಆದರೆ ನೀನು ವಸ್ತುತಃ ಔರಂಗಸೇಬನ ಇಚ್ಛೆಯಂತೆಯೂ ಹಿಂದೂಗಳ ಸರ್ವನಾಶವನ್ನು ಬಯಸುವವರಿಂದಲೂ ಉದ್ದೀಪಿತನಾಗಿ ಈ ದಕ್ಷಿಣವನ್ನು ಜಯಿಸಲು ಬಂದಿರುವಿ.

ನಾನು ನಿನ್ನ ವಿಷಯದಲ್ಲಿ ಯಾವ ರೀತಿಯಲ್ಲಿ ನಡೆದುಕೊಳ್ಳುತ್ತೇನೆಂಬುದು ನನಗೆ ತಿಳಿದಿಲ್ಲ. ನಾನು ನಿನ್ನೊಡನೆ ಸೇರಿಕೊಳ್ಳುವುದು ಪೌರುಷದ ಚಿಹ್ನೆಯಲ್ಲ ಏಕೆಂದರೆ ಪರಾಕ್ರಮಶಾಲಿಗಳು ಸಮಯಸಾಧಕರಲ್ಲ. ಎಂದಿಗೂ ಸಿಂಹವು ನರಿಯ ಮಾರ್ಗದರ್ಶನವನ್ನು ಹಿಡಿಯಬಾರದು; ಅಥವಾ ನಾನು ನನ್ನ ಖಡ್ಗವನ್ನಾಗಲೀ ಕೊಡಲಿಯನ್ನಾಗಲೀ ಎತ್ತಿದ್ದೇ ಆದರೆ, ಉಭಯ ಕಡೆಗಳಲ್ಲೂ ಹಿಂದುಗಳು ಬಲಿಯಾಗುತ್ತಾರೆ. ಇದಕ್ಕಿಂತಲೂ ಅತ್ಯಧಿಕವಾದ ದುಃಖಸಂಗತಿಯೆಂದರೆ ಈ ನಮ್ಮ ಖಡ್ಗವು ಮುಸಲ್ಮಾನರ ರಕ್ತ ಪಿಪಾಸುವಾದ ಖಡ್ಗವು, ಬೇರೊಂದು ಕಾರಣಕ್ಕಾಗಿ ಒರೆಯಿಂದ ಸೆಳೆಯಬೇಕಾದ ದೌರ್ಭಾಗ್ಯ ಒದಗಿದೆ. ಒಂದು ಪಕ್ಷ

ಟರ್ಕರು ಈ ರಣರಂಗಕ್ಕೆ ಬಂದಿದ್ದರೆ, ಶಿಕಾರಿಯು ಸಿಂಹದ ಗುಹೆಯ ಬಾಗಿಲಿಗೇ ಬಂದಂತಾಗುತ್ತಿತ್ತು! ಏಕೆಂದರೆ ಅವರು ಅನ್ಯಾಯಪರರೂ, ಅಧರ್ಮೀಯರೂ ಪಾಪಿಷ್ಠರೂ ಆದ ಮನುಷ್ಯವೇಷಧಾರಿಗಳಾದ ರಾಕ್ಷಸರು.

ಯಾವಾಗ ಅಫಸಲ್‌ಖಾನ್, ಷಯಿಸ್ತಾಖಾನ್ ಇವರುಗಳ ಪರಾಕ್ರಮವು ಪ್ರತಿಷ್ಠೆ ಪಡೆಯಲಿಲ್ಲವೋ ಆಗ ನಿನ್ನನ್ನು ಈ ರಂಗಕ್ಕೆ ನಿಯೋಜಿಸಿದ್ದಾನೆ. ಏಕೆಂದರೆ ಆ ಔರಂಗಜೇಬನಿಗೂ ನನ್ನೊಡನೆ ಸೆಣಸುವ ಸಾಮರ್ಥ್ಯವಿಲ್ಲ. ಹಿಂದುಗಳಲ್ಲಿ ಯಾವ ಒಬ್ಬ ವೀರಾಗ್ರೇಸರನೂ ಈ ಪ್ರಪಂಚದಲ್ಲಿ ಬದುಕಿರಬಾರದೆಂಬುದೇ ಅವನ ಅಭಿಲಾಷೆಯಾಗಿದೆ. ಸಿಂಹಗಳು ತಮ್ಮ ತಮ್ಮಲ್ಲೇ ಕಾದಾಡಿ ನಿರ್ವೀರ್ಯವಾಗಿ ಹೋದರೆ ಅರಣ್ಯವನ್ನು ನರಿಗಳೇ ಆಳಬಹುದೆಂದು. ನಿನ್ನ ಬುದ್ಧಿಗೆ ಅವನ ಆ ಗೋಪ್ಯವಾದ ಹಂಚಿಕೆಯು ತಿಳಿಯಲಿಲ್ಲವೇಕೆ? ಇದರಿಂದ ನೀನು ಅವನ ಮಾಯಾಜಾಲದ ಪ್ರಭಾವಕ್ಕೆ ಸಿಲುಕಿದ್ದೀಯೆಂಬುದು ಸುಸ್ಪಷ್ಟವಾಗುತ್ತದೆ. ನೀನು ಈ ಪ್ರಪಂಚದ ಒಳಿತು ಕೆಡಕುಗಳನ್ನು ಅರಿತಿರುವೆ. ನೀನು ಜೀವನದ ಪುಷ್ಪ ಮತ್ತು ಕಂಟಕಗಳನ್ನು ಅನುಭವಿಸಿ ತಿಳಿದಿರುವಿ. ನೀನು ನನ್ನ ಮೇಲೆ ಯುದ್ಧ ಮಾಡಿ ರಣದಲ್ಲಿ ಹಿಂದುಗಳ ತಲೆಗಳನ್ನು ಕೆಳಗುರುಳಿಸುವುದು ನಿನ್ನ ಘನತೆಗೆ ತಕ್ಕದ್ದಲ್ಲ, ಜ್ಞಾನದ ಪೂರ್ಣ ಅನುಭವವನ್ನು ಕಾರ್ಯತಃ ತೋರಬಲ್ಲ ನೀನು ಯೌವನದ ಅಪೂರ್ಣ ಜ್ಞಾನವನ್ನು ಪ್ರದರ್ಶಿಸಬೇಡ. ಸಾದಿಯ ಮಾತುಗಳನ್ನು ಜ್ಞಾಪಕಕ್ಕೆ ತಂದುಕೋ—"ಕುದುರೆಯನ್ನು ಎಲ್ಲ ದಿಕ್ಕುಗಳಲ್ಲಿಯೂ ಓಡಿಸಲು ಸಾಧ್ಯವಿಲ್ಲ. ಕೆಲವು ಸಂದರ್ಭಗಳಲ್ಲಿ ಯುಕ್ತಾಯುಕ್ತತೆಯ ವಿಮರ್ಶೆಯು ಪರಾಕ್ರಮಕ್ಕಿಂತಲೂ ಹೆಚ್ಚಿನದು—" (ಅಂದರೆ ಕೆಲವು ಸಂದರ್ಭಗಳಲ್ಲಿ ಗುರಾಣಿಯನ್ನು ಬಿಸುಟು ಪಲಾಯನ ಮಾಡುವುದೇ ಸರಿಯಾದುದು.) ಹುಲಿಯು ಜಿಂಕೆಯೇ ಮುಂತಾದ ಇತರ ಪ್ರಾಣಿಗಳನ್ನು ಶಿಕಾರಿಮಾಡುತ್ತದೆ. ಎಂದೆಂದಿಗೂ ಸ್ವಭ್ರಾತೃವರ್ಗವಾದ ಸಿಂಹಗಳೊಂದಿಗೆ ಕಾದುವುದಿಲ್ಲ.

ನಿನ್ನ ಖಡ್ಗದಲ್ಲಿ ನಿಜವಾದ ವರ್ಚಸಿದ್ದರೆ, ನಿನ್ನ ಕುದುರೆಯಲ್ಲಿ ನಿಜವಾದ ತೇಜಸ್ಸಿದ್ದರೆ, ನೀನು ನಿನ್ನ ಧರ್ಮಶತ್ರುಗಳನ್ನೂ, ಇಸ್ಲಾಂ

ಧರ್ಮವನ್ನೂ ನಿರ್ಮೂಲೋತ್ಪಾಟನ ಮಾಡುವುದರಲ್ಲಿ ಆಸಕ್ತನಾಗು. ದಾರಾಶಿಕೋವು ಈ ದೇಶವು ಚಕ್ರಾಧೀಶನಾಗಿದ್ದಿದ್ದರೆ ಅವನು ಪ್ರಜೆಗಳನ್ನು ಕಾರುಣ್ಯದಿಂದಲೂ ಅನುಗ್ರಹದಿಂದಲೂ ಕಾಣುತ್ತಿದ್ದನು. ಆದರೆ ನೀನು ಜಸವಂತಸಿಂಹನನ್ನು ಮೋಸಗೊಳಿಸಿದೆ. ನೀನು ನಿನ್ನ ಮನಸ್ಸಿನಲ್ಲಿ ಉಚ್ಚ ನೀಚ ಭಾವನೆಗಳನ್ನು ಯೋಚಿಸಲಿಲ್ಲ. ನೀನು ನರಿಯಂತೆ ನಡೆದುಕೊಂಡಿದ್ದರಿಂದಲೇ ತೃಪ್ತನಾಗದೆ, ಈಗ ಸಿಂಹಗಳೊಂದಿಗೆ ಯುದ್ಧ ಮಾಡಲು ಬಂದಿರುವೆ. ನೀನು ಇದರಿಂದ ಈ ಪ್ರಪಂಚದಲ್ಲಿ ಯಾವುದನ್ನು ಪಡೆಯುವೆ? ನಿನ್ನ ಈ ಇಚ್ಛೆಗಳು ಕೇವಲ ಮರುಮರೀಚಿಕೆಯಾಗಿದೆ. ನೀನು ಕೇವಲ ಪಶುವಿನಂತೆ ನಿನ್ನ ಪ್ರಯತ್ನವನ್ನೆಲ್ಲಾ ಪಟ್ಟು ಸೌಂದರ್ಯವತಿಯಾದ ಕನ್ನಿಕೆಯೊಬ್ಬಳನ್ನು ಅಪಹರಿಸಿ ಆ ಸೌಂದರ್ಯವನ್ನು ಪಾನ ಮಾಡುವ ಮೊದಲೇ ನೀನೇ ನಿನ್ನ ಕೈಗಳಿಂದಲೇ ನಿನ್ನ ಪ್ರತಿಕಕ್ಷಿಗೆ ಒಪ್ಪಿಸುವೆ! ಆ ತುಚ್ಛ ಮನುಷ್ಯನ ಕೃಪೆಯಿಂದ ನೀನು ಹೇಗೆ ತಾನೇ ಹೆಮ್ಮೆಪಡುತ್ತೀ? ಜೋಹರ್‌ಸಿಂಹನು ಮಾಡಿದ ಸೇವೆಗಳಿಗೆ ಸಿಕ್ಕಿದ ಪ್ರತಿಫಲವು ಏನೆಂದು ನೀನು ಬಲ್ಲೆಯಾ? ರಾಜಕುಮಾರ ಛತ್ರಸಾಲನಿಗೆ ಕಷ್ಟಗಳನ್ನು ತಂದೊಡ್ಡಲು ಅವನು ಮಾಡಿದ ಕಾರ್ಯಗಳ ಅರಿವಿದೆಯೇ ನಿನಗೆ? ಇನ್ನೂ ಅನೇಕ ಹಿಂದುಗಳ ಮೇಲೆ ಅವನು ಮಾಡಿರುವ ಅತ್ಯಾಚಾರಗಳ ಪ್ರಜ್ಞೆಯು ನಿನಗಿದೆಯೇ? ನೀನು ಅವನೊಂದಿಗೆ ಸೇರಿಕೊಂಡು ನಿನ್ನ ಉಚ್ಚಕುಲದ ಆತ್ಮಗೌರವವನ್ನು ನಿರ್ಲಕ್ಷಿಸಿದ್ದೀಯೆ. ಈ ರಾಕ್ಷಸನಿಗಾಗಿ ನೀನು ಮಾಡಿರುವ ಈ ಹೀನ ಕಾರ್ಯಗಳಿಗೆ ನಿನ್ನ ಪ್ರತಿಫಲವಾದರೂ ಏನು? ನಿನ್ನನ್ನೂ ಅವನನ್ನೂ ಬಂಧಿಸಿರುವ ಬಂಧನವು ನಿನ್ನ ನಡುಕಟ್ಟಿನ ದಾರಕ್ಕಿಂತಲೂ ಬಲವಾದುದಲ್ಲ. ಅವನು ತನ್ನ ಸ್ವಾರ್ಥ ಸಾಧನೆಗೆ ಅವನ ಸಹೋದರನ ರಕ್ತವನ್ನು ಹೀರುವುದಕ್ಕೂ ತಂದೆಯನ್ನು ಬಲಿಕೊಡುವುದಕ್ಕೂ ಹಿಂತೆಗೆದವನಲ್ಲ. ನೀನು ಒಂದು ವೇಳೆ ನಿನ್ನನ್ನು ಸ್ವಾಮಿಭಕ್ತನೆಂದುಕೊಳ್ಳುವುದಾದರೆ ಷಹಜಹಾನನ ವಿಷಯದಲ್ಲೂ ನೀನು ಇದೇ ಭಾವನೆಯನ್ನು ಇಟ್ಟಿರಬೇಕಿತ್ತು. ನಿನಗೆ ವಿಧಿಯು ಬುದ್ಧಿಶಕ್ತಿಯನ್ನು ಕೊಟ್ಟಿದ್ದೇ ಆದರೆ, ನೀನು ನಿನ್ನ ಮಾನವತ್ವದಲ್ಲಾಗಲೀ ಪೌರುಷದಲ್ಲಾಗಲೀ ಹೆಮ್ಮೆಯನ್ನು ಇಟ್ಟಿದ್ದರೆ, ಯಾವ ಭೂಮಿಯಲ್ಲಿ ಜನಿಸಿದೆಯೋ

ಆ ಭೂಮಾತೆಗೆ ಬಂದಿರುವ ಕಷ್ಟನಿವಾರಣೆಗಾಗಿ, ದೌರ್ಜನ್ಯಗಳಿಂದ ನರಳುತ್ತಿರುವವರ ಕಣ್ಣೀರುಗಳನ್ನು ತೊಡೆಯುವುದಕ್ಕಾಗಿ ನಿನ್ನ ಖಡ್ಗವನ್ನು ಝಳಪಿಸು.

ಹಿಂದುಗಳನ್ನು ದೊಡ್ಡ ಅಪಾಯವು ಮುತ್ತಿರುವಾಗ ನಮ್ಮ ನಮ್ಮಲ್ಲಿ ಯುದ್ಧ ಮಾಡುವ ಸಮಯವು ಇದಲ್ಲ. ನಮ್ಮ ಮಕ್ಕಳು, ನಮ್ಮ ದೇಶ, ನಮ್ಮ ಸಂಪತ್ತು, ನಮ್ಮ ದೇವರು, ನಮ್ಮ ಪವಿತ್ರವಾದ ದೇವಾಲಯಗಳು ಮತ್ತು ತಪಸ್ವಿಗಳು—ಇವುಗಳೆಲ್ಲವೂ ಅವನ ಕುತಂತ್ರದಿಂದ ಅವುಗಳ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿರುವುದೇ ಅಲ್ಲದೆ ಎಷ್ಟು ಮಟ್ಟಿಗೆ ದಂಡನೆಯ ಭಾರವನ್ನು ಹೊರಬಹುದೋ ಅಷ್ಟುಮಟ್ಟಿಗೆ ಈಗಾಗಲೇ ಸಹಿಸಿದೆ. ಇದು ಇದೇ ರೀತಿಯಲ್ಲಿ ಮುಂದುವರಿಯುತ್ತಿದ್ದರೆ, ಈ ಭೂಮಂಡಲದಲ್ಲಿ ನಮ್ಮದೆಂದು ಹೇಳಿಕೊಳ್ಳಲು ಒಂದು ಕುರುಹೂ ಸಹ ಇಲ್ಲದೇ ಹೋಗುತ್ತದೆ. ಕೇವಲ ಕೆಲವೇ ಕೆಲವು ಮಂದಿ ಮುಹಮ್ಮದೀಯರು ಈ ವಿಶಾಲವಾದ ಭೂಖಂಡದ ಮೇಲೆ ತಮ್ಮ ಪ್ರತಿಷ್ಠೆಯನ್ನು ಪಡೆದಿರುವುದು ನಿಜಕ್ಕೂ ಅತ್ಯಂತ ಆಶ್ಚರ್ಯಕರವಾದುದು. ಈ ಪ್ರತಿಷ್ಠೆಗೆ ಅವರ ಭುಜಬಲವು ಸರ್ವಥಾ ಕಾರಣವಲ್ಲ. ನಿನಗೆ ಕಣ್ಣುಗಳಿದ್ದರೆ ಒಂದು ಬಾರಿ ನೋಡು. ನಮ್ಮೊಡನೆ ಯಾವ ರೀತಿಯ ಕುಟಿಲ ನೀತಿಯನ್ನು ಅನುಸರಿಸುತ್ತಾನೆಂದು ನೋಡು ಕಾಲಕಾಲಕ್ಕೆ ಯಾವ ರೀತಿ ತನ್ನ ಬಣ್ಣ ಬದಲಾಯಿಸುತ್ತಾನೆಂದು ನೋಡು. ಅವನು ನಮ್ಮ ಸರಪಳಿಗಳಿಂದಲೇ ನಮ್ಮ ಕಾಲುಗಳನ್ನು ಕಟ್ಟುತ್ತಾನೆ. ನಮ್ಮ ಖಡ್ಗಗಳಿಂದಲೇ ನಮ್ಮ ತಲೆಗಳನ್ನು ಕತ್ತರಿಸುತ್ತಾನೆ.

ಹಿಂದುಗಳನ್ನೂ, ಹಿಂದೂಸ್ಥಾನವನ್ನೂ ಪವಿತ್ರವಾದ ಹಿಂದೂ ಧರ್ಮವನ್ನೂ ರಕ್ಷಿಸಲು ನಾವು ನಮ್ಮ ಸಕಲ ಶಕ್ತಿಗಳನ್ನೂ ಉಪಯೋಗಿಸಬೇಕಾಗಿದೆ. ನಾನು ಈ ಪವಿತ್ರವಾದ ಭೂಮಿಗಾಗಿ ನನ್ನ ಸರ್ವಸ್ವವನ್ನೂ ಧಾರೆಯೆರೆಯಲು ಸಂಕಲ್ಪಿಸಿದ್ದೇನೆ. ನೀನು ನಿನ್ನ ಖಡ್ಗವನ್ನೂ ಬುದ್ಧಿಶಕ್ತಿಯನ್ನೂ ಉಪಯೋಗಿಸಿ ಆ ತುರುಕರಿಗೆ ಸಮಶತ್ರುವಾಗಿ ಸರಿಗಟ್ಟಿ ನಿಲ್ಲು. ನೀನು ಜಸವಂತಸಿಂಹನೊಡನೆ ಸೇರಿಕೊಂಡು ಮೇವಾರದ ರಾಣಾನೊಡನೆ ಪ್ರೀತಿಯನ್ನೂ ಒಗ್ಗಟ್ಟನ್ನೂ ಸಾಧಿಸಿದರೆ ಮಹತ್ಕಾರ್ಯಗಳನ್ನೂ

ಸಾಧಿಸಬಹುದು. ನೀವುಗಳೆಲ್ಲರೂ ಎಲ್ಲ ಕಡೆಗಳಿಂದಲೂ ನುಗ್ಗಿ ಆಕ್ರಮಿಸಿ ಆ ಸರ್ಪವನ್ನು ಬೆಟ್ಟಗಳ ಕಿಬ್ಬಿಯಲ್ಲಿ ಸುಣುಚಿ ಹಾಕಿ, ಅವನ ಅಕೃತ್ಯಗಳಿಗೆ ಅವನೇ ನಿಂದಿಸಿಕೊಳ್ಳುವಂತೆ ಮಾಡಿ, ಈ ದಕ್ಷಿಣವು ಅವನ ಜಾಲದಲ್ಲಿ ಬೀಳದಂತೆ ಮಾಡುವಿರಾ ? ಮತ್ತು ನಾನು ಈ ಮಧ್ಯೆ ಖಡ್ಗಧಾರಿಗಳಾದ ವೀರಪುತ್ರರ ಸಹಾಯದಿಂದ ಬಿಜಾಪುರ ಮತ್ತು ಗೋಲ್ಕಂಡದ ಸುಲ್ತಾನರುಗಳನ್ನು ನೋಡಿಕೊಳ್ಳುತ್ತೇನೆ. ಗುಡುಗುತ್ತಿರುವ ತೋಫುಗಳಿಂದ ಮಳೆಯು ಸುರಿಯುವಂತೆ ನಮ್ಮ ಸೈನಿಕರುಗಳಿಂದ ಖಡ್ಗಗಳ ಮಳೆ ಸುರಿಯುವಂತೆ ಮಾಡುತ್ತೇನೆ. ಈ ದಕ್ಷಿಣದ ಒಂದು ಕೊನೆಯಿಂದ ಮತ್ತೊಂದು ಕೊನೆಯವರೆಗೆ ಇಸ್ಲಾಂ ಧರ್ಮದ ಹೆಸರಿಲ್ಲದಂತೆ, ಕುರುಹು ಇಲ್ಲದಂತೆ ತೊಳೆದುಬಿಡುತ್ತೇನೆ. ಅನಂತರ ಚಾಣಾಕ್ಷರಾದ ರಾಜಕಾರಣ ಪಟುಗಳಿಂದಲೂ ಸೈನ್ಯಬಲದಿಂದಲೂ ಕೂಡಿ ಯಾವ ರೀತಿಯಲ್ಲಿ ನದಿಯು ಪರ್ವತಗಳಿಂದ ಮೊರೆದು ಬರುವಾಗ ಹಾಲಿನಂತೆ ನೊರೆಗಟ್ಟಿಕೊಂಡು ಬರುವುದೋ ಹಾಗೆ ಬಯಲು ಪ್ರದೇಶಕ್ಕೆ ಬರುತ್ತೇನೆ. ಮತ್ತು ತಕ್ಷಣ ನಿಮ್ಮ ಸೇವೆಗಾಗಿ ನಿಮ್ಮ ಮುಂದೆ ಪ್ರತ್ಯಕ್ಷ ಆಗುತ್ತೇನೆ. ನಾವು ಎಲ್ಲ ದಿಕ್ಕುಗಳಿಂದಲೂ ಭೀಷಣವಾದ ಯುದ್ಧರಂಗವನ್ನು ಹೂಡೋಣ. ನಮ್ಮ ಸೈನ್ಯಗಳು ಅಲ್ಲಾಡುತ್ತಿರುವ ದಿಲ್ಲಿಯ ಕೋಟೆಯನ್ನು ಮುಳುಗಿಸುವಂತೆ ಮಾಡುವುದರ ಮೂಲಕ, ಔರಂಗ್ ಎಂದರೆ ಸಿಂಹಾಸನವೂ ಜೇಬ್ ಎಂದರೆ ಅದರ ವೈಭವವೂ ಉಳಿಯದಂತೆ ಮಾಡಿ ಖಡ್ಗಪ್ರಾಯವಾಗಿರುವ ಅವನ ದೌರ್ಜನ್ಯಗಳನ್ನೂ ಮಾಯಾಜಾಲದಂತಿರುವ ಅವನ ನೀತಿಯನ್ನೂ ನಿರ್ಮೂಲಗೊಳಿಸಿ ಅದರ ಮೂಲಕ ವಿಧರ್ಮೀಯರ ರಕ್ತದ ನದಿಯನ್ನು ಹರಿಸಿ ನಮ್ಮ ಪೂಜ್ಯ ಪಿತೃಗಳ ಆತ್ಮಗಳಿಗೆ ಸಂತೋಷವನ್ನುಂಟುಮಾಡಿ ಭಗವಂತನ ದಯೆಯಿಂದ ಅವನನ್ನು ಭೂಗರ್ಭದಲ್ಲಿ ಗೋರಿಮಾಡೋಣ.

ಎರಡು ಹೃದಯಗಳು ಮಿಲನವಾದರೆ, ಅವು ಭಯಂಕರವಾದ ಪರ್ವತವನ್ನೇ ಛೇದಿಸಬಲ್ಲವು. ಅವು ಸಮಸ್ತ ಸೈನ್ಯಗಳನ್ನೂ ಚೆಲ್ಲಾಪಿಲ್ಲಿಯಾಗಿ ಮಾಡಬಲ್ಲವು. ಇನ್ನೂ ಅನೇಕ ಕಾಗದದ ಮೇಲೆ ಬರೆಯಲಾಗದ ವಿಷಯಗಳನ್ನು ನನ್ನೊಡನೆ ಹೇಳಬೇಕಾದುದಿದೆ. ಅನವಶ್ಯಕವಾದ ನಾವು

ನೋವುಗಳನ್ನು ತಪ್ಪಿಸುವ ಸಲುವಾಗಿ ನಿನ್ನೊಡನೆ ನಾನು ಮಾತನಾಡಲು ಉತ್ಸುಕನಾಗಿದ್ದೇನೆ. ನಿನ್ನ ಅಭಿಪ್ರಾಯವೂ ಇಚ್ಛೆಯೂ ಹೀಗೆಯೇ ಇದ್ದರೆ ನಾನು ನಿನ್ನ ಬಳಿಗೆ ಬಂದು ನೀನು ಹೇಳಬೇಕೆಂದಿರುವುದನ್ನು ಕೇಳಲು ಸಿದ್ಧನಾಗಿದ್ದೇನೆ. ನಿನ್ನ ವಾಕ್‌ಕನ್ಯೆಯು ಅಂತರಂಗದಲ್ಲಿ ನನ್ನೊಡನೆ ಬಾಯಿ ಬಿಡಲಿ. ನಾನು ಅದು ಮತ್ತಾರಿಗೂ ತಿಳಿಯದಂತೆ ಕಾಯುತ್ತೇನೆ. ಇದರಿಂದ ನಾವು ಪ್ರಯತ್ನವೆಂಬ ನೇಗಿಲಿಗೆ ಕೈಹಾಕಿ ಆ ಹುಚ್ಚು ರಾಕ್ಷಸನ ಮೇಲೆ ಮಂತ್ರಶಕ್ತಿಯನ್ನು ಪ್ರಯೋಗಿಸೋಣ. ನಾನು ನನ್ನ ಈ ಪವಿತ್ರವಾದ ಖಡ್ಗದ ಮೇಲೂ ನನ್ನ ದಿವ್ಯಾಸ್ತ್ರದ ಮೇಲೂ ಈ ಪುಣ್ಯಭೂಮಿ ಮತ್ತು ಸನಾತನಧರ್ಮದ ಮೇಲೂ ಆಣೆಯಿಟ್ಟು ಹೇಳುತ್ತೇನೆ. ಇದರಿಂದ ನಿನಗೆ ಯಾವ ತೊಂದರೆಯೂ ಆಗುವುದಿಲ್ಲ. ಅಥವಾ ನಾವು ಬೇರಾವುದಾದರೂ ಮಾರ್ಗದಿಂದ ಈ ಮಹತ್ಕಾರ್ಯವನ್ನು ಸಾಧಿಸಿ ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ನಮ್ಮ ಹೆಸರುಗಳು ಉಳಿಯುವಂತೆ ಮಾಡೋಣ. ಅಫಜಲ್ ಖಾನನ ಘಟನೆಯಿಂದ ಸಂಶಯ ಪಡಬೇಡ. ನೀನು ಕೇಳಿರುವ ಸುದ್ದಿಗಳು ಅಸತ್ಯವಾದವುಗಳು. ನನ್ನನ್ನು ಕೊಲೆಮಾಡುವ ಉದ್ದೇಶದಿಂದ ಅವನು ರಹಸ್ಯವಾಗಿ ಹನ್ನೆರಡು ನೂರು ಕುದುರೆಯ ಯೋಧರನ್ನು ಇಟ್ಟುಕೊಂಡಿದ್ದನು. ನಾನು ಮೊಟ್ಟ ಮೊದಲು ಅವನ ಮೇಲೆ ಶಸ್ತ್ರವನ್ನು ಎತ್ತದಿದ್ದರೆ ನಿನಗೆ ಈ ಪತ್ರವನ್ನು ಯಾರು ಬರೆಯುತ್ತಿದ್ದರು? ಆದರೆ ನಿನ್ನ ವಿಷಯದಲ್ಲಿ ಆ ಸಂದೇಹಕ್ಕೆ ಕಾರಣವಿಲ್ಲ. ಏಕೆಂದರೆ ನಮ್ಮಲ್ಲಿ ಆಜನ್ಮ ವೈರತ್ವವು ತಾನೆ ಎಲ್ಲಿದೆ? ಅಥವಾ ನಿನ್ನಿಂದ ನಾನು ಅಪೇಕ್ಷಿಸಿರುವ ಸಮುತ್ತರವು ಬಂದರೆ ನಾನೇ ಏಕಾಕಿಯಾಗಿ ರಾತ್ರಿಯಲ್ಲಿ ಬರುತ್ತೇನೆ, ಮತ್ತು ಷಯಿಸ್ತಾಖಾನನು ತಂದಿದ್ದ ಗುಪ್ತಪತ್ರವನ್ನು ನಿನಗೆ ತೋರಿಸುವುದರ ಮೂಲಕ ನಿನ್ನ ಸಂಶಯಗಳನ್ನು ನಿವಾರಿಸಿ ನಿನ್ನನ್ನು ಮೋಹನಿದ್ರೆಯಿಂದ ಎಚ್ಚರಿಸುವಂತೆ ಮಾಡುತ್ತೇನೆ.

ಅಥವಾ ಈ ಪತ್ರವು ನಿನ್ನ ಮನಸ್ಸಿಗೆ ಹಿಡಿಸದೇ ಇದ್ದ ಪಕ್ಷದಲ್ಲಿ ನಾನು ನನ್ನ ಖಡ್ಗದೊಂದಿಗೆ ಸಿದ್ಧನಾಗಿ ನಿನ್ನ ಸೈನ್ಯವನ್ನು ಎದುರಿಸುತ್ತೇನೆ. ನಾಳೆಯ ದಿನ ಸೂರ್ಯದೇವನು ಯಾವ ಕ್ಷಣ ಸಂಧ್ಯಾಕಾಲದ ಮೇಘಗಳಲ್ಲಿ ತನ್ನ ಮುಖ ಮಂಡಲವನ್ನು ಮುಚ್ಚಿಕೊಳ್ಳುವನೋ ಅದೇ ಕ್ಷಣ ನನ್ನ ಖಡ್ಗ

ವೆಂಬ ಅರ್ಧಚಂದ್ರನು ಬೆಳಗುವನು ಅಷ್ಟೇ. ದೇವರು ನಿನಗೆ ಒಳ್ಳೆಯದನ್ನು ಮಾಡಲಿ".

ಜಯಸಿಂಹನು ಆ ಬ್ರಾಹ್ಮಣನನ್ನು ಗೌರವದಿಂದ ಕಂಡನು. ಅವರು ಕೊಟ್ಟ ಪ್ರಸಾದವನ್ನು ತ್ರಾಕ್ಷತೆಗಳನ್ನು ಭಕ್ತಿಯಿಂದ ಸ್ವೀಕರಿಸಿದನು. ಆ ಪತ್ರವನ್ನು ಆಮೂಲಾಗ್ರವಾಗಿ ಓದಿ ನೋಡಿಕೊಂಡನು.

"ಬ್ರಾಹ್ಮಣೋತ್ತಮರೇ, ಯುದ್ಧ ಪ್ರಮೇಯದಲ್ಲಿ ನಿಮ್ಮಗಳ ದರ್ಶನವಾದದ್ದು ಶುಭಸೂಚನೆ ಎಂದೇ ಭಾವಿಸುತ್ತೇನೆ. ಪತ್ರವ್ಯವಹಾರಗಳಿಂದ ಯುದ್ಧವು ಕೊನೆಗಾಣುವುದಿಲ್ಲ. ನಾನು ನಿಮ್ಮ ಶಿವಾಜಿ ಮಹಾರಾಜರಂತೆಯೇ ಹಿಂದೂ ಎಂಬುದರಲ್ಲಿ ಸಂದೇಹವೇ ಇಲ್ಲ. ನಾನು ಬಾದಷಹರ ಆಜ್ಞಾಧಾರಕ. ಯುದ್ಧವನ್ನು ನಿಲ್ಲಿಸುವುದಕ್ಕೆ ನನಗೆ ಅಧಿಕಾರವಿಲ್ಲ. ರಣಕ್ಷೇತ್ರಕ್ಕೆ ಬಂದು ಧರ್ಮಕ್ಕೆ ಬೆದರಿ ಓಡಿಹೋಗುವುದು ನನ್ನಂತಹ ರಜಪೂತನ ಕ್ಷತ್ರಿಯ ಧರ್ಮವಲ್ಲ. ಶಿವಾಜಿಯು ಬಾದಷಹರಿಗೆ ಸಂಪೂರ್ಣ ಶರಣಾಗತನಾಗಿ ಬರುವುದೊಂದೇ ಮಾರ್ಗ. ಇದನ್ನು ಶಿವಾಜಿಗೆ ತಿಳಿಯಪಡಿಸಿ" ಎಂದು ಹೇಳಿದನು.

ಆ ಬ್ರಾಹ್ಮಣರಿಗೆ ದಕ್ಷಿಣೆಗಳನ್ನೂ ಉಡುಗೊರೆಗಳನ್ನೂ ಕೊಡಿಸಿ ಮರ್ಯಾದೆಯಿಂದ ಕಳುಹಿಸಿದನು.

ಮನೂಚಿಯು ಈ ಪ್ರಸಂಗ ನಡೆಯುವಾಗ ಸಮೀಪದಲ್ಲಿಯೇ ಇದ್ದನು. ಅವನಿಗೆ ಆಶ್ಚರ್ಯವಾಯಿತು.

"ಮಹಾರಾಜ, ಈ ವೈದಿಕ ಬ್ರಾಹ್ಮಣರು ಶತ್ರುಗಳ ಶಿಬಿರಕ್ಕೆ ಎಷ್ಟು ಧೈರ್ಯದಿಂದ ಬರುತ್ತಾರೆ ! ಎಷ್ಟು ಆತ್ಮೀಯತೆಯಿಂದ ಮಾತನಾಡುತ್ತಾರೆ ! ಇವರೆಷ್ಟು ಬುದ್ಧಿವಂತರು, ಧೈರ್ಯಶಾಲಿಗಳು !" ಎಂದು ಆಶ್ಚರ್ಯಗೊಂಡನು.

ಮಹಾರಾಜ ಜಯಸಿಂಹನು "ಕಮಾಂಡರ್ ಸಾಹೇಬರೆ, ಹಿಂದೂ ಧರ್ಮದಲ್ಲಿ ಇದೊಂದು ದೊಡ್ಡ ರಹಸ್ಯವಿದೆ. ಈ ವೈದಿಕ ಬ್ರಾಹ್ಮಣರಲ್ಲಿಯೇ ಆ ಧರ್ಮವು ಉಳಿದಿದೆ. ಇವರಿಗೆ ಶತ್ರು ಮಿತ್ರ ಭೇದವಿಲ್ಲ. ನಮ್ಮ ಬಾದಷಹರಲ್ಲಿಯೂ ಈ ಜನರಿಗೆ ದ್ವೇಷವಿಲ್ಲ. ಇದು ಪುರಾತನ ಕಾಲದಿಂದ ಋಷ್ಯಾಶ್ರಮಗಳಿಂದ ಬೆಳೆದು ಬಂದ ನಾಗರೀಕತೆ. ನಮ್ಮ ಪುರಾಣಗಳಲ್ಲಿ ದೊಡ್ಡ

ರಾಕ್ಷಸ ರಾಜರು ಕೂಡ ಮಹರ್ಷಿಗಳ ತಂಟೆಗೆ ಹೋಗುತ್ತಿರಲಿಲ್ಲ. ಅವರನ್ನು ಗೌರವವಾಗಿ ಕಾಣುತ್ತಿದ್ದರು. ಅದೇ ಧೈರ್ಯ ಈ ಜನರಿಗೆ !" ಎಂದನು.

ಮನೂಚಿಯು ನಮ್ಮಲ್ಲಿಯೂ ಪಾದ್ರಿಗಳೂ, ಪೋಪರೂ ಇದೇ ಜಾತಿಗೆ ಸೇರಿದ ಜನ. ಆದರೆ ರಾಜಕೀಯದಲ್ಲಿ ಇಷ್ಟು ಧೈರ್ಯವಾಗಿ ಅವರು ನಡೆಯಲಾರರು. ನೀವು ಹಿಂದೂ ಎಂದೇ ಅವರ ಧೈರ್ಯ ಇಮ್ಮಡಿ ಯಾಗಿದೆ. ಈ ಶಿವಾಜಿಯು ಇಂತಹ ಉಪಾಯಗಳಿಂದ ಜಯವಾಗುವುದೆಂದು ನಿಜವಾಗಿ ಭಾವಿಸಿದ್ದಾನೆಯೇ ? ಇಲ್ಲ, ಅವನ ಎಷ್ಟೋ ಉಪಾಯಗಳಲ್ಲಿ ಇದೂ ಒಂದು ಮೊದಲನೆಯ ಉಪಾಯ. ಮುಂದೆ ನೀವು ಎಷ್ಟೋ ಉಪಾಯ ಗಳನ್ನು ನೋಡುವಿರಿ" ಎಂದರು.

ಜಯಸಿಂಹನು ದೂತರನ್ನು ಕರೆಸಿ ಫಸಲ್‌ಖಾ ಎಂಬ ಬಿಜಾಪುರದ ಸೇನಾಧಿಪತಿಯನ್ನು ಕರೆಸಿಕೊಂಡನು. "ಫಸಲ್‌ಖಾ, ಈಗ ಸರಿಯಾದ ಸಮಯವು ಬಂದಿದೆ. ಈ ಶಿವಾಜಿಯ ಮೇಲೆ ಮೊಗಲ್ ಸೈನ್ಯಗಳು ಆಕ್ರಮಿಸುತ್ತಾ ಬಂದಿವೆ. ಈ ಸಮಯದಲ್ಲಿ ನೀನು ಶಿವಾಜಿಯ ಮೇಲೆ ಯುದ್ಧ ಮಾಡಿ ನಿನ್ನ ತಂದೆ ಅಫಜಲ್‌ಖಾನನ್ನು ಮೋಸದಿಂದ ಕೊಂದ ಸೇಡನ್ನು ತೀರಿಸಿಕೋ ನಿನಗೆ ಬೇಕಾದಷ್ಟು ಧನಸಹಾಯ ಮಾಡುತ್ತೇನೆ. ಯುದ್ಧದ ನಂತರ ನಿನ್ಗೆ ಖಾಯಂ ಜಹಗೀರಿಯನ್ನು ಕೊಡಿಸುತ್ತೇನೆ" ಎಂದು ಹೇಳಿದನು.

ಫಜಲ್‌ಖಾನನು ಮೊಗಲರ ಕಡೆ ಸೇರಿ ಶಿವಾಜಿಯ ಮೇಲೆ ಯುದ್ಧ ಮಾಡುವುದಾಗಿ ಒಪ್ಪಿಕೊಂಡನು. ಎಷ್ಟೋ ಮಂದಿ ಹಿಂದೂ ಪಾಳೆಗಾರರು ಮೊಗಲರ ಕಡೆ ಸೇರುವುದಾಗಿ ವಚನವಿತ್ತರು. ಮರಾಠಾ ಸರದಾರರನ್ನೂ ಚಿತಾವಣೆ ಮಾಡುವ ಪ್ರಯತ್ನಗಳು ನಡೆಯದೇ ಇರಲಿಲ್ಲ. ಆದರೆ ಅದು ಫಲಕಾರಿಯಾಗಲಿಲ್ಲ. ಅವರೆಂದೂ ಶಿವಾಜಿಗೆ ದ್ರೋಹವೆಸಗಲು ಮುಂದೆ ಬರಲಿಲ್ಲ.

## ೧೦

ಜಯಸಿಂಹನು ತನ್ನ ಸೇನಾಧಿಪತಿಗಳನ್ನೆಲ್ಲಾ ಸಭೆ ಸೇರಿಸಿ ಯುದ್ಧ ಕಾರ್ಯಾಚರಣೆಯು ಹೇಗೆ ಮಾಡಲ್ಪಡಬೇಕು ಎಂಬುದನ್ನು ಆಲೋಚನೆ ಮಾಡಿದನು. ಸೇನಾಧಿಪತಿಗಳು "ದುರ್ಗಗಳನ್ನು ಹಿಡಿಯುವುದರಿಂದ ಹೆಚ್ಚೇನೂ ಪ್ರಯೋಜನವಾಗುವುದಿಲ್ಲ. ಮಳೆಗಾಲವು ಸಮೀಪಿಸುತ್ತಿದೆ. ಅಷ್ಟರಲ್ಲಿ ಆ ದುರ್ಗಗಳನ್ನೆಲ್ಲಾ ವಶಪಡಿಸಿಕೊಳ್ಳಲು ಸಾಧ್ಯವಾಗದು" ಎಂದರು.

ಜಯಸಿಂಹನು "ಒಂದೇ ವರ್ಷವಲ್ಲಾಗಲೀ ಅಥವಾ ಮೂರು ವರ್ಷಗಳಾಗಲೀ ಈ ದುರ್ಗಗಳನ್ನು ಮೊದಲು ನಾವು ಹಿಡಿದುಬಿಡಬೇಕು. ಆಮೇಲೆ ಮರಾಠಾ ಸೈನ್ಯಗಳ ಬಯಲಿಗೆ ಬರುತ್ತವೆ, ನಮ್ಮ ಸೈನ್ಯಬಲ ಶಸ್ತ್ರಾಸ್ತ್ರಗಳ ಬಲಗಳು ಅವರಿಗಿಂತ ನಾಲ್ಮಡಿ ಹೆಚ್ಚಾಗಿವೆ. ಅವರನ್ನು ನಾವು ಸದೆಬಡಿಯಬಹುದು. ದುರ್ಗಗಳು ಮಾತ್ರ ಅವರ ಅಧೀನದಲ್ಲಿದ್ದರೆ ವರ್ಷಾನುಗಟ್ಟಲೆಯಾದರೂ ಈ ಯುದ್ಧವು ಪೂರೈಸುವುದೇ ಇಲ್ಲ" ಎಂದು ಹೇಳಿ ಮೊದಲು ಪುರಂಧರದುರ್ಗಕ್ಕೆ ಮುತ್ತಿಗೆ ಹಾಕಬೇಕೆಂದು ನಿರ್ಧಾರ ಮಾಡಿದನು.

ಪೂರ್ವ ಪಶ್ಚಿಮ ದಕ್ಷಿಣದ ಕಡೆಗಳಿಂದ ಮರಾಠಾ ಸೈನ್ಯಗಳು ಬಾರದಂತೆ ತಡೆಗಟ್ಟಲು ಮೊಗಲ್ ಸೇನಾಧಿಪತಿಗಳನ್ನು ಕಳುಹಿಸಿಕೊಟ್ಟನು. ದಿಲೀರ್ ಖಾನನನ್ನೂ ಕುತುಬ್ದೀನ್ ಖಾನ್‌ನನ್ನೂ ಜೊತೆಯಲ್ಲಿ ಕರೆದುಕೊಂಡು ಪುರಂಧರ ಕೋಟೆಯ ಮೇಲೆ ಹೊರಟನು. ಪುರಂಧರಘಡಕ್ಕೆ ಆರು ಮೈಲಿಗಳ ದೂರದಲ್ಲಿರುವ ಸಾಸ್ವಾಡ್ ಎಂಬಲ್ಲಿ ಮೊಗಲ್ ಸೈನ್ಯಗಳು ಬೀಡುಬಿಟ್ಟತು. ಇದು ಅತ್ಯಂತ ಆಯಕಟ್ಟಿನ ಜಾಗ. ಇಲ್ಲಿ ಐದು ರಸ್ತೆಗಳು ಬಂದು ಕೂಡುತ್ತವೆ. ಜಯಸಿಂಹನ ಹದಿನಾರ್ಕು ಸಾವಿರ ರಜಪೂತ ಸೈನ್ಯವು ಅಲ್ಲಿ ಶಿಬಿರ ಹೂಡಿ ನಿಂತಿತು.

ದಿಲೀಲ್‌ಖಾನನು ಪುರಂಧರಘಡಕ್ಕೆ ಬಲವಾಗಿ ಮುತ್ತಿಗೆ ಹಾಕಿದನು. ಪುರಂಧರ ಕೋಟೆಯು ಎರಡು ಕೋಟೆಗಳಿಂದ ಸುತ್ತುವರಿಯಲ್ಪಟ್ಟಿದೆ. ಎರಡು ಶಿಖರಗಳು ಕಾಣುತ್ತವೆ. ಒಂದು ಬಿಳಿಯ ಶಿಖರ, ಮತ್ತೊಂದು ಕರಿಯ ಶಿಖರ. ಬಿಳಿಯ ಶಿಖರವಿರುವಲ್ಲಿ ಶಿವಾಜಿಯ ಅರಮನೆ ಇತ್ತು. ಆ ಕೋಟೆಗೆ ವಜ್ರಘಡ ಎಂದು ಹೆಸರು. ದಿಲೀಲ್‌ಖಾನನು ಆ ಕೋಟೆಯ ಹೊರಗಡೆ ರಕ್ಷಣೆಯಲ್ಲಿದ್ದ ಮರಾಠಾಸೈನ್ಯದೊಡನೆ ಖಡಾಖಡಿ ಯುದ್ಧಮಾಡಿ ತಳಭಾಗವನ್ನು ಸ್ವಾಧೀನಪಡಿಸಿಕೊಂಡನು. ನಾಲ್ಕೂ ಕಡೆಯಿಂದ ಮರಾಠಾ ಸೈನ್ಯಗಳು ಮೊಗಲ್ ಶಿಬಿರಗಳ ಮೇಲೆ ಆಕಸ್ಮಿಕ ಧಾಳಿಗಳನ್ನು ನಡೆಸುತ್ತಿದ್ದವು. ಮರಾಠಾ ಸೈನ್ಯಗಳು ಮಿಂಚಿನ ವೇಗದಿಂದ ಬಂದು ಮೊಗಲ್ ಸೈನ್ಯಗಳ ಮೇಲೆ ಬಿದ್ದು ಅಪಾರ ನಷ್ಟವನ್ನುಂಟುಮಾಡಿ ಓಡಿಹೋಗುತ್ತಿದ್ದವು. ಈ ಸುದ್ದಿಗಳು ಜಯಸಿಂಹನಿಗೆ ಆಶ್ಚರ್ಯವನ್ನುಂಟುಮಾಡುತ್ತಿದ್ದವು. ಈ ಕಾರ್ಯಾಚರಣೆಯಲ್ಲೆಲ್ಲಾ ನೇತಾಜಿಯು ಮುಂದಾಳಾಗಿ ಬರುತ್ತಿದ್ದನು. ಜಯಸಿಂಹನು ಈ ನೇತಾಜಿಯ ಸಾಹಸವನ್ನು ಮೆಚ್ಚಿ "ಇವನು ಎರಡನೆಯ ಶಿವಾಜಿ" ಎಂದು ಕರೆಯುತ್ತಿದ್ದನು.

ಪುರಂಧರಘಡದ ಮುತ್ತಿಗೆಯು ಸುಲಭವಾಗಿರಲಿಲ್ಲ. ದಿಲೀಲ್‌ಖಾನನು ಎರಡು ತಿಂಗಳ ಮಹಾಸಾಹಸದಿಂದ ಕೋಟೆಯ ತಪ್ಪಲನ್ನು ಮಾತ್ರ ಸ್ವಾಧೀನ ಪಡಿಸಿಕೊಂಡಿದ್ದನು ಮಳೆಗಾಲ ಬಂದುಬಿಡುತ್ತದೆ. ಆಕಾಶದಲ್ಲಿ ಮೇಘಗಳು ಕಟ್ಟುತ್ತಿವೆ. ಮುಂಗಾರು ಮಳೆಗಳು ಭಯಪಡಿಸುತ್ತಿವೆ. ಇಂತಹ ಸಂದರ್ಭದಲ್ಲಿ ದಿಲೀಲ್‌ಖಾನನು ರಾತ್ರಿ-ಹಗಲೂ ಸಾಹಸ ಮಾಡುತ್ತಿದ್ದಾನೆ. ಜಯಸಿಂಹನು ಪ್ರತಿದಿನವೂ ಕೋಟೆಯ ಸಮೀಪಕ್ಕೆ ಹೋಗಿ ಸೈನಿಕರಿಗೆ ಪ್ರೋತ್ಸಾಹಕೊಟ್ಟು ಶಿಬಿರದ ಕಡೆಗೆ ಹಿಂತಿರುಗುತ್ತಿದ್ದಾನೆ. ಈ ಸಮಯದಲ್ಲಿ ಸಯದ್ ಮಹಮುದ್‌ಖಾನನು ಬಂದು "ಮಹಾರಾಜನೇ, ಈ ಕೋಟೆಯನ್ನು ಹಿಡಿಯುವ ಪ್ರಯತ್ನವು ವ್ಯರ್ಥ. ಬೆಟ್ಟವನ್ನಗೆದು ಇಲಿಯನ್ನು ಹಿಡಿದಂತಾಗುತ್ತದೆ. ಆ ಪುರಂಧರ ಕೋಟೆಯಲ್ಲಿ ಏನೂ ಇಲ್ಲ. ಶಿವಾಜಿಯು ಮೋಸಗಾರ. ಅವನ ತಂತ್ರಕ್ಕೆ ನಾವು ಬಲಿಬಿದ್ದಂತಾಗುತ್ತದೆ. ಪೂರ್ವದ ಕಡೆ ಸೈನ್ಯವನ್ನು ತೆಗೆದುಕೊಂಡು ಅಹಮುದ್‌ನಗರವನ್ನು ಹಿಡಿದುಕೊಳ್ಳಲು ಹೋಗುತ್ತಿದ್ದಾನೆ. ಅಲ್ಲಿ ಹೋಗಿ ಅವನೊಡನೆ ಯುದ್ಧಮಾಡಿದರೆ ಸಿಕ್ಕಿಬೀಳುತ್ತಾನೆ" ಎಂದನು.

ಸಯ್ಯದ್ ಮಹಮದ್‌ಖಾನನೇನೋ ಸಮರ್ಥನಾದ ಸೇನಾಧಿಪತಿ ಅವನಿಗೆ ದಿಲೀಲ್‌ಖಾನನ ಮೇಲೆ ಮೊದಲಿಂದಲೂ ಅಸೂಯೆ ಇತ್ತು. ಜಯಸಿಂಹನು ಈ ಸುಳಿವನ್ನು ಮೊದಲೇ ಅರಿತಿದ್ದನು, ಸಮಯವನ್ನು ಕಾಯುತ್ತಿದ್ದನು.

ಜಯಸಿಂಹನು 'ಸಯದ್ ಖಾನ್, ನೀನು ಚುರುಕುಬುದ್ಧಿಯವನು, ಈ ದಖ್ಖನಿನ ಅನುಭವ ನಿನಗೆ ಚೆನ್ನಾಗಿದೆ. ಮೊದಲಿಂದಲೂ ನಿನ್ನ ಮಾತು ಕೇಳಿದ್ದರೆ ಷಯಿಸ್ತಾಖಾನನಂತಹ ಮಹಾ ಸೇನಾನಿಗೆ ಎಂದೆಂದಿಗೂ ಪರಾಭವ ವಾಗುತ್ತಿರಲಿಲ್ಲ. ನಾನೂ ಆ ಪಾಠವನ್ನು ತೆಗೆದುಕೊಳ್ಳದಿದ್ದರೆ ಫಲವೇನು? ನಿನ್ನ ಸೈನ್ಯದೊಂದಿಗೆ ನೀನೇ ಪೂರ್ವ ದಿಕ್ಕಿಗೆ ಹೊರಡು. ಅವಶ್ಯವಿದ್ದರೆ ಸೈನ್ಯಗಳನ್ನು ಕಳುಹಿಸುತ್ತೇವೆ. ಬೇಕಾದಷ್ಟು ಹಣವನ್ನು ತೆಗೆದುಕೊಂಡು ಹೋಗು" ಎಂದು ಹೇಳಿ ಸಯ್ಯದ್‌ಖಾನ್‌ನನ್ನು ರವಾನೆ ಹಾಕಿದನು. ತನ್ನ ಮನಸ್ಸಿನಲ್ಲಿ "ಒಳ್ಳೆಯ ಸಂಧಿ ಸಿಕ್ಕಿತು. ಸಂಶಯವನ್ನು ದೂರವಿಟ್ಟಂತಾ ಯಿತು" ಎಂದು ಸಂತೋಷಪಟ್ಟುಕೊಂಡನು.

ಶಿವಾಜಿಯು ಈ ಜಯಸಿಂಹನನ್ನು ಬೇರೆ ಕಡೆಗೆ ತಿರುಗಿಸಬೇಕೆಂದು ಮಾಡಿದ ಪ್ರಯತ್ನವು ಅಷ್ಟೇನೂ ಫಲದಾಯಕವಾಗಲಿಲ್ಲ. ಮರಾಠರು ಉಪಾಯಗಳನ್ನೇ ಮಾಡುತ್ತಾ ಕಾಲಹರಣ ಮಾಡಲಿಲ್ಲ. ಪ್ರತಿಯೊಬ್ಬ ಮರಾಠಾ ಸೇನಾಧಿಪತಿಯೂ ಈ ಯುದ್ಧದಲ್ಲಿ ಗೆಲ್ಲದಿದ್ದರೆ ಮಹಾರಾಷ್ಟ್ರ ರಾಜ್ಯವೇ ಉಳಿಯುವುದಿಲ್ಲವೆಂದು ಹಠತೊಟ್ಟು, ನಾನಾ ರಣಕ್ಷೇತ್ರಗಳಲ್ಲಿ ಯುದ್ಧ ಮಾಡುತ್ತಿದ್ದರು. ಜಯಸಿಂಹ ಧೈರ್ಯ ಕುಂದಲಿಲ್ಲ. ಆದರೆ ಮೊಗಲ್ ಸೈನ್ಯಗಳು ಬಸವಳಿದಿದ್ದವು. ಅನೇಕ ಸೈನ್ಯಗಳು ಹತವಾಗಿಯೂ ಇದ್ದವು. ಈ ಯುದ್ಧದ ಜಯಾಪಜಯಗಳ ಉಯ್ಯಾಲೆಯು ತೀವ್ರಗತಿಯಿಂದ ಆಡುತ್ತಿತ್ತು.

ಶಿವಾಜಿಯು ಮತ್ತೊಂದು ದೊಡ್ಡ ಸಾಹಸ ಮಾಡಿದನು.

ಪಶ್ಚಿಮ ತೀರದಲ್ಲಿ ದೋಣಿಗಳನ್ನೂ ಪತ್ತೇಮಾರಿಗಳನ್ನೂ ಸಣ್ಣ ಸಣ್ಣ ಹಡಗುಗಳನ್ನೂ ನಿರ್ಮಾಣಮಾಡಿ ಒಂದು ಜಲಸೈನ್ಯವನ್ನೇ ಕಟ್ಟಿಬಿಟ್ಟಿದ್ದನು. ಆ ಹಡಗುಗಳು ಅರಬ್ಬೀ ಟರ್ಕೀ ದೇಶಗಳವರೆಗೆ ವ್ಯಾಪಾರ ನಡೆಸುತ್ತಿದ್ದವು. ವ್ಯಾಪಾರಕ್ಕಿಂತಲೂ ಹೆಚ್ಚಾಗಿ ಇತರ ವ್ಯಾಪಾರಸ್ಥರ ಹಡಗುಗಳನ್ನು ಕೊಳ್ಳೆ

ಹೊಡೆಯುತ್ತಿದ್ದರು. ಮುಸಲ್ಮಾನ್ ವ್ಯಾಪಾರಿಗಳಿಗೂ ಯಾತ್ರಾರ್ಥಿಗಳಿಗೂ ಇದೊಂದು ಗಂಡಾಂತರವೇ ಆಗಿಬಿಟ್ಟಿದ್ದಿತು. ಇಂಗ್ಲೀಷರ ವಶವಲ್ಲಿದ್ದ ಖಂಡೇರಾ ದ್ವೀಪದಿಂದ ಇಂಗ್ಲೀಷರನ್ನೋಡಿಸಿ ಮರಾಠರು ಸ್ವಾಧೀನ ಪಡಿಸಿಕೊಂಡಿದ್ದರು. ಜಂಜೀರಾ ಎಂಬ ದ್ವೀಪಕ್ಕೂ ಕಾಲಿಟ್ಟಿದ್ದರು. ಶಿವಾಜಿಯು ಅತ್ತ ಕಡೆ ಹೆಚ್ಚು ಗದ್ದಲ ಮಾಡಿಸಲು ಆರಂಭಿಸಿದನು. ಇಂಗ್ಲೀಷ್ ರಾಯಭಾರಿಯೂ ಮುಸಲ್ಮಾನ್ ವ್ಯಾಪಾರಿಗಳೂ ಡೆಲ್ಲಿಗೆ ಹೋಗಿ ಮೊರೆಯಿಟ್ಟರು. ಬಾದಷಹನು ತಕ್ಷಣ ಪಶ್ಚಿಮದ ಕಡೆ ಸೈನ್ಯಗಳನ್ನು ಕಳುಹಿಸಬೇಕೆಂದು ಜಯಸಿಂಹನಿಗೆ ಮೇಲಿಂದ ಮೇಲೆ ಪತ್ರಗಳನ್ನು ಬರೆಸಿದನು ಒಂದಕ್ಕೂ ಜಯಸಿಂಹನು ಗಮನ ಕೊಡಲಿಲ್ಲ. ಅತ್ತ ಕಡೆಯಿಂದ ಪುಕಾರು ಹೆಚ್ಚುತ್ತ ಬಂದಿತು. ಬಾದಷಹನಿಗೆ ಗುಜರಾತಿಗೇ ಭಯ ತಟ್ಟಿದೆ ಎಂಬ ಸಂದೇಹ ಬಂದಿತು. ದೆಹಲಿಯಿಂದ ತೀಕ್ಷ್ಣವಾದ ವರಾತ ಬಂದಿತು. ಮಹ ರಾಷ್ಟ್ರ ಸಿಕ್ಕಲಿಲ್ಲ, ಗುಜರಾತು ಕೈ ಬಿಟ್ಟುಹೋಗುತ್ತದೆ—ಎಂದು ಆಕ್ಷೇಪವಾಡಿ ಜಯಸಿಂಹನಿಗೆ ಪತ್ರ ಬರೆಸಿದನು. ಮೊಗಲ್ ಸೇನಾಧಿಪತಿಗಳೆಲ್ಲರೂ ಬಾದಷಹನಿಗೆ ಆಗ್ರಹ ಬರುತ್ತದೆ ಎಂದು ಹೆದರಿದರು.

ಜಯಸಿಂಹನು ಅಲುಗಾಡಲಿಲ್ಲ. ತಾನು ಹಿಡಿದಿರುವ ಮಾರ್ಗವು ಸರಿಯಾಗಿದೆ. ಶಿವಾಜಿಯು ಈ ಸೈನ್ಯದ ಕಟ್ಟಿನಿಂದ ಬಿಡಿಸಿಕೊಳ್ಳಲು ಈ ವ್ಯೂಹವನ್ನು ಹೂಡಿದ್ದಾನೆ. ಈಗ ಬಿಟ್ಟುಬಿಟ್ಟರೆ, ಇನ್ನೆಂದಿಗೂ ಇವನನ್ನು ಜಯಿಸಲಾಗುವುದಿಲ್ಲ ಎಂದು ನಿರ್ಧಾರ ಮಾಡಿದನು. ಇಬ್ಬರು ಮೂವರು ಸೇನಾಧಿಪತಿಗಳು ವಿಮುಖರಾದರು.

ಜಯಸಿಂಹನು ಬಾದಷಹನಿಗಿಂತಲೂ ಕ್ರೂರಿಯೆಂದು ಅವರುಗಳಿಗೆ ತಿಳಿದಿತ್ತು. ಬಾದಷಹನು ಎಲ್ಲ ಅಧಿಕಾರಿಗಳನ್ನೂ ಜಯಸಿಂಹನಿಗೆ ಒಪ್ಪಿಸಿದ್ದಾನೆ, ದಖನ್ನಿನ ಭಂಡಾರವೆಲ್ಲವೂ ಅವನ ಕೈಯಲ್ಲಿದೆ. ಯುವರಾಜನೂ ಜಯಸಿಂಹನ ಆಜ್ಞಾನುವರ್ತಿಯಾಗಿದ್ದಾನೆ, ಈಗ ಅವನಿಗೆ ಎದುರು ಹೇಳುವುದರಿಂದ ಫಲವಿಲ್ಲ ಎಂದುಕೊಂಡು ತೆಪ್ಪಗಾದರು.

ಪುರಂಧರಗಡಕ್ಕೆ ಮುತ್ತಿಗೆಹಾಕಿ ಎರಡು ತಿಂಗಳಾಗಿತ್ತು. ದಿಲೇಲ್ ಖಾನನ ಸಾಹಸದಿಂದ ಕೋಟೆಯ ಬಾಗಿಲು ಫಿರಂಗಿಗಳ ಹೊಡೆತದಿಂದ ಕಳಚಿ ಬಿದ್ದಿತು. ಹೆಬ್ಬಾಗಿಲಿನ ಉಭಯ ಪಾರ್ಶ್ವಗಳಲ್ಲಿಯೂ ಸುರಂಗಗಳನ್ನು

ತೋಡಿ, ಮದ್ದು ಗುಂಡುಗಳನ್ನು ತುಂಬಿ ಬೆಂಕಿ ಹಚ್ಚಿದರು. ಕೋಟೆಯ ಗೋಡೆಯು ಉಭಯ ಪಾರ್ಶ್ವಗಳಲ್ಲಿಯೂ ಒಡೆದು ಬಿತ್ತು. ಪುರಂಧರದ ಕೆಳಗಿನ ಕೋಟೆಗೆ ವಜ್ರಘಡವೆಂದು ಹೆಸರು. ದಿಲೀಲ್ ಖಾನನು ಸೈನ್ಯ ಸಮೇತ ವಜ್ರಕೋಡೆಯೊಳಗೆ ನುಗ್ಗಿದನು. ಅಲ್ಲಿ ಇರಿಸಿದ ಒಂದು ಸಹಸ್ರ ಮರಾಠಾ ಸೈನ್ಯವಿದ್ದಿತು. ಮುರಾರಿಯು ಆ ಸೈನ್ಯದ ಸೇನಾಧಿಪತಿಯಾಗಿ ಮೊಗಲರೊಡನೆ ಹೆಜ್ಜೆಹೆಜ್ಜೆಗೂ ಹೋರಾಡಿದನು. ಮೂರು ದಿನಗಳ ಅಹೋರಾತ್ರಿಯ ಯುದ್ಧ. ಮರಾಠಾ ಸೈನಿಕರು ಏಳುನೂರು ಮಂದಿ ಸತ್ತು ಬಿದ್ದರು. ದಿಲೀಲ್ ಖಾನನು ಮುರಾರಿಯನ ಪರಾಕ್ರಮಗಳನ್ನು ನೋಡಿ ಮೆಚ್ಚಿ "ಮುರಾರಿರಾವ್, ನಾನು ಎಷ್ಟೋ ಯುದ್ಧಗಳನ್ನು ಮಾಡಿದ್ದೇನೆ. ನಿನ್ನಂಥಾ ವೀರಪುರುಷನನ್ನು ಎಲ್ಲಿಯೂ ಕಂಡಿಲ್ಲ. ನೀನು ಯುದ್ಧಬಿಟ್ಟು ಶರಣಾಗತನಾಗು. ಬಾದಷಹನ ಸೈನ್ಯದಲ್ಲಿ ದೊಡ್ಡ ಅಧಿಕಾರಕೊಡಿಸುತ್ತೇನೆ. ಮಾನಮನ್ನಣೆಗಳನ್ನು ಕೊಡಿಸುತ್ತೇನೆ" ಎಂದನು.

ಮುರಾರಿಯು "ಯಾವ ಮರಾಠಾ ಸೈನಿಕನೂ ನಿಮಗೆ ಬಗ್ಗುವುದಿಲ್ಲ. ನಾನು ಶರಣಾಗತನಾಗುವೆನೆಂಬುವನ್ನು ಸ್ವಪ್ನದಲ್ಲಿಯೂ ಎಣಿಸಬೇಡ ನನಗೆ ಸೋಲಿನ ಭಯವಿಲ್ಲ. ಇನ್ನೂ ಮರಾಠರೇ ಗೆಲ್ಲುವರೆಂಬ ಆಶೆ ಮಿಡಿಯುತ್ತಿದೆ. ಎಂದು ಹೇಳಿದನು.

ಆ ದಿನವೇ ಮಧ್ಯಾಹ್ನದೊಳಗಾಗಿ ದಿಲೀಲ್ ಖಾನನ ಗುಂಡು ತಗುಲಿ ಮುರಾರಿಯು ಪ್ರಾಣಬಿಟ್ಟನು.

ದಿಲೀಲ್ ಖಾನನು ಕೋಟೆಯೊಳಗೆ ಪ್ರವೇಶ ಮಾಡಿದಾಗ ಸುಮಾರು ಮುನ್ನೂರು ಜನ ಮರಾಠಾ ಸೈನಿಕರು ಮಾತ್ರ ಉಳಿದಿದ್ದರು. ದಿಲೀಲ್ ಖಾನ್ ಅವರಿಗೆ ಹೇಳಿದನು —"ನೀವೆಲ್ಲರೂ ಸಾಹಸಿಗಳು. ಇನ್ನು ಯುದ್ಧ ಮಾಡಿ ಫಲವಿಲ್ಲ. ನಿಮ್ಮ ಸೇನಾಧಿಪತಿ ಮುರಾರಿಯು ಹೊರಗಡೆ ಸತ್ತು ಬಿದ್ದಿದ್ದಾನೆ. ನೀವು ಶಸ್ತ್ರಗಳನ್ನು ಕೆಳಗಿಟ್ಟು ಶರಣಾಗತರಾಗಿರಿ".

ಆ ಸೈನಿಕರು "ಮುರಾರಿಯು ಹೋದರೇನು ? ನಾವು ಒಬ್ಬೊಬ್ಬರೂ ಮುರಾರಿಯಷ್ಟೇ ಸಮರ್ಥರಿದ್ದೇವೆ. ಕೊನೆಯವರೆಗೆ ಯುದ್ಧ ಮಾಡುತ್ತೇವೆ ಇಲ್ಲಿ ನೂರಾರು ಮರಾಠರು ಇಂದು ಸಾಯಬಹುದು. ಇನ್ನೂ ಎಷ್ಟೋ ಸಹಸ್ರ

ಸಂಖ್ಯೆಯ ಮಹಾರಾಷ್ಟ್ರ ವೀರರಿದ್ದಾರೆ. ಅವರು 'ಮಹಾರಾಷ್ಟ್ರರು ವಜ್ರಘಡ ದಲ್ಲಿ ಸೋಲಸ್ನೊಪ್ಪಿಕೊಂಡರು' ಎಂಬ ಅಪಖ್ಯಾತಿಗೆ ಗುರಿಯಾಗಬಾರದು" ಎಂದು ಹೇಳುತ್ತಾ ಸಾಹಸದಿಂದ ಯುದ್ಧ ಮಾಡಿದರು.

ಮರಾಠಾ ಸೈನಿಕರು ಹೋರಾಡಿ ಹೋರಾಡಿ ಸತ್ತು ಸತ್ತು ಬಿದ್ದರು. ಸುಮಾರು ಐವತ್ತು ಮಂದಿ ಸೈನಿಕರು ಉಳಿದಿರಬಹುದು. ಅವರು ಸೊಕ್ಕಿ ಸೊರಗಿ ಕೋಟೆಯ ಗೋಡೆಯನ್ನು ಒರಗಿ ನಿಂತಿದ್ದರು. ಪ್ರಜ್ಞಾಶೂನ್ಯರಾಗಿ ದ್ದರು. ಮೈಯೆಲ್ಲಾ ರಕ್ತಮಯವಾಗಿದ್ದಿತು. ಮುಖಗಳು ಮದ್ದಿನ ಹೊಗೆ ಕಟ್ಟಿ ಕಪ್ಪಾಗಿ ಕಾಣುತ್ತಿದ್ದವು. ದಿಲೇರ್ ಖಾನನು ಮೆಚ್ಚುಗೆಯಿಂದ ತಾನೇ ಹೋಗಿ ಆ ಸೈನಿಕರನ್ನು ಆಲಂಗಿಸಿದನು. ಅವರನ್ನೆಲ್ಲಾ ಉಪಚರಿಸುವಂತೆ ತನ್ನ ಸೈನಿಕರಿಗೆ ಹೇಳಿದನು. ವಜ್ರಘಡವು ದಿಲೇರ್ ಖಾನನ ವಶವಾಯಿತು. ಅಲ್ಲಿದ್ದ ಶಿವಾಜಿಯ ಅರಮನೆಯನ್ನೂ ಸಂಪತ್ತನ್ನೂ ದಿಲೇರ್ ಖಾನನು ವಶ ಪಡಿಸಿಕೊಂಡನು. ಅಲ್ಲಿಂದ ಮೇಲಿನ ಕೋಟೆಯ ಮುತ್ತಿಗೆಗೆ ಆರಂಭ ಮಾಡಿದನು.

ಜಯಸಿಂಹನಿಗೆ, ಶಿವಾಜಿಯು ರಾಯಘಡದಲ್ಲಿದ್ದಾನೆಂದು ಸುದ್ದಿಯು ಬಂದಿತು. ರಜಪೂತ ಸೈನಿಕರು ರಾಯಘಡಕ್ಕೆ ಹೋಗಿ ಮುತ್ತಿಗೆಹಾಕಿದರು. ಮೊಗಲ್ ಸೈನ್ಯಗಳು ನಾಲ್ಕಾರು ದುರ್ಗಗಳನ್ನು ಏಕಕಾಲದಲ್ಲಿ ಮುತ್ತಿಗೆ ಹಾಕಿದವು.

ಎರಡು ವಾರಗಳು ಉಗ್ರ ಕದನದಲ್ಲಿ ಕಳೆದುಹೋದುವು. ಮೂರನೆಯ ವಾರದಲ್ಲಿ ಪುರಂಧರದ ಮೇಲಿನ ಕೋಟೆಯ ಹೆಬ್ಬಾಗಿಲಿಗೆ ದಿಲೇರ್ ಖಾನನು ಬಂದಿದ್ದನು. ಮನೂಚಿಯು ಮರದ ಅಟ್ಟಣಿಕೆಗಳನ್ನು ಕಟ್ಟಿಸಿ ಅದರ ಮೇಲೆ ಗುರಿಕಟ್ಟಿ ತೋಪುಗಳನ್ನು ನಿಲ್ಲಿಸಿದ್ದನು. ಆ ಪುರಂಧರದ ಮೇಲಿನ ಕೋಟೆ ಯಲ್ಲಿ ಮಹಾರಾಷ್ಟ್ರದ ಮಹಾಮಹಾ ಸೇನಾಧಿಪತಿಗಳ ಅಧಿಕಾರಿಗಳ ಹೆಂಗಸರು ಮಕ್ಕಳು ವಾಸಿಸುತ್ತಿದ್ದರು. ಶಿವಾಜಿಯು "ಇನ್ನು ಯುದ್ಧ ಮಾಡಿ ಫಲವಿಲ್ಲ. ಸಂಧಾನ ಮಾಡಿಕೊಳ್ಳಬೇಕು. ಮುಂದೆ ಕಾಲಬಂದಾಗ ನೋಡಿಕೊಳ್ಳೋಣ" ಎಂದು ಮನಸ್ಸನ್ನು ಗಟ್ಟಿಮಾಡಿಕೊಂಡನು. ಮೂರು ನಾಲ್ಕು ಬಾರಿ ಬ್ರಾಹ್ಮಣರನ್ನು ಸಂಧಿಗಾಗಿ ಪ್ರಾರ್ಥಿಸಿ ಜಯಸಿಂಹನ ಶಿಬಿರಕ್ಕೆ ಕಳಿಸಿದನು. ಜಯಸಿಂಹನು ನಿರಾಕರಣೆ ಮಾಡಿದನು.

ಕಡೆಯ ದಿನ "ಸಂಧಿಯಾದರೆ ಇಂದು ಆಗಬೇಕು. ಇಲ್ಲದಿದ್ದರೆ ಎಂದೆಂದಿಗೂ ಸಂಧಿ ಇಲ್ಲ" ಎಂದು ನಿಶ್ಚಯಿಸಿ ಶಿವಾಜಿಯು ತನ್ನ ಮಂತ್ರಿ ರಘುನಾಥ ಬಲ್ಲಾಳ ಅತ್ರೆಯನ್ನು ಜಯಸಿಂಹನ ಶಿಬಿರಕ್ಕೆ ಕಳಿಸಿಕೊಟ್ಟನು. ಅತ್ರೆಯು ಮಹಾಪ್ರಯತ್ನ ಮಾಡಿ ಜಯಸಿಂಹನ ಭೇಟಿ ಮಾಡಿದನು. ಜಯಸಿಂಹನು "ನಿಮ್ಮ ಶಿವಾಜೀ ಮಹಾರಾಜನನ್ನು ಯಾರೂ ನಂಬುವುದಿಲ್ಲ. ಇಂದು ನೀವು ಪೂರಾ ಸೋತಿದ್ದೀರಿ. ಏನೇ ಆಗಲಿ, ಈ ರಾಯಘಡದಿಂದ ಶಿವಾಜಿಯು ತಪ್ಪಿಸಿಕೊಂಡು ಹೋಗಲಾರ" ಎಂದು ಹೇಳಿದನು.

ಅತ್ರೆಯು ಧೈರ್ಯದಿಂದ ಹೇಳಿದನು—"ಮಹಾರಾಜರವರೇ, ನಾವೆಂದಿಗೂ ಕೊಟ್ಟ ಮಾತಿಗೆ ತಪ್ಪುವವರಲ್ಲ. ಮುಸಲ್ಮಾನರು ಮಾತಿಗೆ ತಪ್ಪುವ ನಿದರ್ಶನಗಳು ತಮಗೇ ಎಷ್ಟೋ ವೇದ್ಯವಿರಬಹುದು. ಶಿವಾಜಿಯು ಓಡಿ ಹೋಗಬೇಕೆಂದು ನಿಶ್ಚಯಮಾಡಿದರೆ ಈಗಲೂ ಓಡಿಹೋಗಬಲ್ಲ. ಈ ಕೋಟೆ ಗಳನ್ನೆಲ್ಲಾ ನಿಮಗೇ ಬಿಟ್ಟು ದಕ್ಷಿಣಕ್ಕೆ ಶಿವಾಜಿಯು ಸುಲಭವಾಗಿ ಹೋಗಬಲ್ಲ. ಒಬ್ಬ ಶಿವಾಜಿಯು ಬದುಕಿದ್ದರೆ ಈ ಮಹಾರಾಷ್ಟ್ರವು ಬದುಕುತ್ತದೆ. ಇವೆರಡು ಕೋಟೆಗಳು ಇಂದೇ ನಿಮ್ಮ ವಶವಾದರೂ ನಿಮಗೆ ಸಿಕ್ಕುವ ಭಾಗ್ಯವೇನು? ಸಾಧ್ವೀಮಣಿಯರಾದ ಸ್ತ್ರೀಯರು, ಮುದ್ದು ಮಕ್ಕಳು. ಮೊಗಲ್ ಸಾಮ್ರಾಜ್ಯ ದಲ್ಲಿಯೇ ಪ್ರಸಿದ್ಧರಾದ ಹಿಂದೂ ಮಹಾರಾಜರಿಂದ ಅವರುಗಳಿಗೆ ಏನೂ ಅಪಹತಿಯಾಗದು. ಅವರ ಪಾತಿವ್ರತ್ಯವು ಅವರನ್ನು ರಕ್ಷಿಸಬಲ್ಲದು. ತಾವು ಸಂಧಿಗೆ ಒಪ್ಪುವುದೂ ಬಿಡುವುದೂ ತಮ್ಮ ಚಿತ್ತ. ಶಿವಾಜಿಗೆ ಒಂದು ಬಾರಿ ಭೇಟಿ ಕೊಡಲು ನೀವು ಒಪ್ಪಿಕೊಳ್ಳಿರಿ. ಅವನು ನಿಮ್ಮ ಶಿಬಿರಕ್ಕೆ ಏಕಾಕಿ ಯಾಗಿ ಬಂದು ನಿಮ್ಮ ದರ್ಶನ ಮಾಡುತ್ತಾನೆ. ಆದರೆ ಅವನನ್ನು ತಾವು ಬಂದ ಹಾಗೆಯೇ ಹಿಂದಕ್ಕೆ ಕಳಿಸುವ ವಾಗ್ದಾನ ಕೊಡಬೇಕು.

ಜಯಸಿಂಹನಂಥಾ ಮಹಾಪರಾಕ್ರಮಿಯೂ ಆ ಪ್ರಾರ್ಥನೆಯನ್ನು ನಿರಾಕರಿಸಲು ಹಿಂದೆಗೆದನು. "ಇದೇನು, ಈ ಮರಾಠಾ ಮಂತ್ರಿಯು ಮಾತು ಗಳಿಂದ ನನ್ನನ್ನು ಜಯಿಸಿದ್ದಾನೆ. ಬಾಯಿ ಕಟ್ಟಿಸಿದ್ದಾನೆ. ಬಾದಷಹನು ಏಕಾಂತದಲ್ಲಿ ನನ್ನಿಂದ ಒಂದು ವಚನವನ್ನು ತೆಗೆದುಕೊಂಡಿದ್ದಾನೆ. ಎಂತಹ ಸಂದರ್ಭದಲ್ಲಿಯೂ ಶಿವಾಜಿಯೊಡನೆ ಸಂಧಿಗೆ ಒಪ್ಪುವುದಿಲ್ಲವೆಂದು ಬಾದಷಹ ನಿಗೆ ವಚನ ಕೊಟ್ಟಿದ್ದೇನೆ. ಈಗ ಈ ಮಂತ್ರಿಯು ಅದಕ್ಕೆ ವಿರುದ್ಧವಾದ

ಮಾನ್ಯದಾನ ಕೇಳುತ್ತಿದ್ದಾನೆ. ಇವನಿಗೆ ಈ ಮಾನ್ಯದಾನ ಕೊಡದಿದ್ದರೆ ನನ್ನ ಮಾನವತ್ವವು ಉಳಿದಂತಾಗುವುದಿಲ್ಲ. ಯುದ್ಧದಲ್ಲಿ ಗೆಲುವಾದರೆ ಅದು ಸೇನಾಧಿಪತಿಗಳ ಪರಾಕ್ರಮ ನನ್ನದೇನಿದೆ? ಒಂದು ದಿನ ಈ ರಣರಂಗದಲ್ಲಿ ಕತ್ತಿ ಹಿಡಿದು ನಾನು ಹೋರಾಡಲಿಲ್ಲ. ಈ ಮಂತ್ರಿಯು ಪ್ರಾರ್ಥಿಸುವ ಔದಾರ್ಯವನ್ನು ತೋರಲೇಬೇಕು"—ಎಂದು ಮನಸ್ಸಿನಲ್ಲಿ ಸಿದ್ಧಾಂತ ಮಾಡಿಕೊಂಡು "ರಘುನಾಥರಾವ್! ನಿನ್ನ ಇಷ್ಟದಂತೆ ಆಗಬಹುದು. ಪೂರ್ಣ ಶರಣಾಗತನಾಗುವನಾದರೆ ಶಿವಾಜಿಯು ನಮ್ಮ ಶಿಬಿರಕ್ಕೆ ಬರಲಿ. ಅವನ ಗೌರವಕ್ಕೆ ಕುಂದಿಲ್ಲ. ಪ್ರಾಣಕ್ಕೆ ಭಯವಿಲ್ಲ. ಸಂಧಿಯು ಮಾತ್ರ ಫಲಿಸದು." ಎಂದು ಹೇಳಿ ಕಳಿಸಿದನು.

ಶಿವಾಜಿಯು ಒಂದು ಸಣ್ಣ ಪಲ್ಲಕ್ಕಿಯಲ್ಲಿ ಕುಳಿತು ಸಾದಾ ದಿರಿಸನ್ನು ಧರಿಸಿ ಜಯಸಿಂಹನ ಶಿಬಿರಕ್ಕೆ ಬಂದನು. ಶಿಬಿರದ ಬಾಗಿಲಿನಲ್ಲಿಯೇ ಜಯಸಿಂಹನ ಸೇನಾಧಿಪತಿಯು ಶಿವಾಜಿಯನ್ನು ಎದುಗೊಂಡು ಕರೆತಂದನು.

ಜಯಸಿಂಹನ ದೊಡ್ಡ ಪಟಭವನವು ಅನರ್ಘ್ಯವಾದ ರತ್ನಗಂಬಳಿಗಳಿಂದಲೂ ಮಿರಮಿರುಗುವ ಪರದೆಗಳಿಂದಲೂ ಅಲಂಕೃತವಾಗಿತ್ತು. ರಜಪೂತ ಸರದಾರರು ಖಡ್ಗಧಾರಿಗಳಾಗಿ ಬಹು ಎಚ್ಚರಿಕೆಯಿಂದ ಕಾಯುತ್ತಿದ್ದರು.

ಅಫಜಲ್‌ಖಾನನ ದುರಂತ ವೃತ್ತಾಂತವನ್ನು ಕೇಳಿ ಅವರೆಲ್ಲರೂ ಏನಾಗುವುದೋ ಎಂದು ಶಂಕಿತರಾಗಿದ್ದರು. ರಜಪೂತ ಸೇನಾಧಿಪತಿಗಳು "ಶಿವಾಜಿಯು ಮಾಯಾವಿ. ಅವನನ್ನು ಹತ್ತಿರ ಸೇರಿಸಕೂಡದು" ಎಂದು ಎಚ್ಚರಿಕೆ ಕೊಟ್ಟಿದ್ದರು. ಅವನ್ನೆಲ್ಲಾ ಲಕ್ಷ್ಯಮಾಡದೇ ಜಯಸಿಂಹನು ತಾನೇ ಬಂದು ಗುಡಾರದ ಬಾಗಿಲಿನಲ್ಲಿ ಎದುರುಗೊಂಡನು. ಶಿವಾಜಿಯ ಜೊತೆಯಲ್ಲಿ ನಾಲ್ಕು ಮಂದಿ ವೈದಿಕ ಬ್ರಾಹ್ಮಣರು ಮಾತ್ರ ಬಂದಿದ್ದರು. ಅವರನ್ನು ಹೊರಗೇ ನಿಲ್ಲಿಸಿ ಶಿವಾಜಿಯು ಜಯಸಿಂಹನ ಗುಡಾರದೊಳಗೆ ಪ್ರವೇಶ ಮಾಡಿದನು. ಜಯಸಿಂಹನು ಶಿವಾಜಿಯನ್ನು ಆಲಂಗಿಸಿ ತನ್ನ ಆಸನದ ಮೇಲೆಯೇ ಕುಳ್ಳಿರಿಸಿಕೊಂಡನು.

ಶಿವಾಜಿಯು "ಜಯಸಿಂಹ ಮಹಾರಾಜರೇ, ತಾವು ವಯಸ್ಸಿನಲ್ಲಿಯೂ ದೊಡ್ಡವರು. ನಿಮ್ಮ ಸೈನ್ಯಗಳೂ ಬಹಳ ಹೆಚ್ಚಾಗಿವೆ. ಯುದ್ಧದಿಂದ

ಪ್ರಯೋಜನವಿಲ್ಲ. ಅನ್ಯಾಯವಾಗಿ ಪ್ರಾಣಹಾನಿಯಾಗುತ್ತದೆ. ಸಂಧಿ ಮಾಡಿಕೊಳ್ಳೋಣ” ಎಂದು ಹೇಳಿದನು.

ಜಯಸಿಂಹನು “ಶಿವಾಜೀ ಮಹಾರಾಜ್, ನೀವು ಶರಣಾಗತನಾಗುವು ದೊಂದೇ ಮಾರ್ಗ. ಹಾಗಾದರೆ ಮಾತ್ರ ಯುದ್ಧವನ್ನು ನಿಲ್ಲಿಸುತ್ತೇನೆ” ಎಂದನು.

ಶಿವಾಜಿಯು “ನಾನು ಶರಣಾಗತನಾಗಿಯೇ ಬಂದಿದ್ದೇನಲ್ಲಾ. ನಾನು ಬಂದಿರುವ ರೀತಿಯಲ್ಲಿಯೇ ಅದು ಸ್ಪಷ್ಟವಾಗುತ್ತಿದೆ. ಇನ್ನು ಸಂಧಿಯ ಶರತ್ತುಗಳನ್ನು ಹೇಳಿರಿ” ಎಂದನು.

ಜಯಸಿಂಹನು ಶರತ್ತುಗಳ ಮಾತೇ ಇಲ್ಲ. ಅದನ್ನು ಮೊದಲೇ ನಿಮ್ಮ ಮಂತ್ರಿ ರಘುನಾಥಬಲ್ಲಾಳನೊಡನೆ ಖಡಾಖಂಡಿತವಾಗಿ ಹೇಳಿ ಕಳುಹಿಸಿದ್ದೇನೆ. ನಿನ್ನ ಎಲ್ಲ ಕೋಟೆಗಳನ್ನೂ ಮೊಗಲರಿಗೆ ಒಪ್ಪಿಸಿಬಿಡಬೇಕು. ಆ ಕೋಟೆಗಳಲ್ಲೆಲ್ಲಾ ಮೊಗಲ್ ಸೈನ್ಯಗಳಿರುವುದಕ್ಕೆ ನೀನು ಒಪ್ಪಿಕೊಳ್ಳ ಬೇಕು. ನೀನು ಸಂಪಾದನೆಮಾಡಿರುವ ರಾಜ್ಯದ ಮೇಲಧಿಕಾರವನ್ನು ನಿನಗೆ ಕೊಡಿಸುತ್ತೇನೆ. ನೀನು ಮೊಗಲ್ ಬಾದಷಹರಿಗೆ ಅಧೀನನಾಗಿ ಇಲ್ಲಿ ರಾಜನೆನಿಸಿಕೊಂಡಿರಬಹುದು. ಕ್ರಮವಾಗಿ ಪೊಗದಿ, ಕಪ್ಪಕಾಣಿಕೆಗಳನ್ನು ಒಪ್ಪಿಸುತ್ತಾ ಬರಬೇಕು. ಅಥವಾ ಇವೆಲ್ಲವನ್ನೂ ಬಿಟ್ಟು ದೆಹಲಿಯ ದರ್ಬಾರಿಗೆ ಹೋಗುವುದಾದರೆ ಇನ್ನೂ ಕ್ಷೇಮ. ಅಲ್ಲಿ ನಿನ್ನನ್ನು ದೊಡ್ಡ ಸೇನಾಧಿಪತಿಯಾಗಿ ಮಾಡಿಸುತ್ತೇನೆ. ಹೆಚ್ಚೇಕೆ? ನನ್ನ ಸರಿಸಮಾನಸ್ಥನಂತೆ ಗೌರವ, ಮಾನ, ಮನ್ನಣೆಗಳನ್ನು ಕೊಡಿಸುತ್ತೇನೆ” ಎಂದನು.

ಶಿವಾಜಿಯು ತಲೆಯನ್ನಲ್ಲಾಡಿಸಿ ಅಸಮ್ಮತಿಯನ್ನು ಸೂಚಿಸಿದನು.

ಆ ಸಮಯಕ್ಕೆ ಸರಿಯಾಗಿ ಭೂಮಿಯು ಬಿರಿದಂತೆ ಢಮಾಂ ಢಮಾಂ ಎಂದು ಶಬ್ದವಾಯಿತು.

ಜಯಸಿಂಹನು ಹೊರಗೆ ಬಂದು ನಿಂತುಕೊಂಡನು. ಅವನ ಜೊತೆ ಯಲ್ಲಿ ಶಿವಾಜಿಯೂ ಡೇರೆಯಿಂದ ಹೊರಗೆ ಬಂದು ಜಯಸಿಂಹನ ಪಕ್ಕದಲ್ಲಿ ನಿಂತುಕೊಂಡನು. ಪುರಂಧರಘಡದ ಮೇಲಿನ ಕೋಟೆಯು ಫಿರಂಗಿಯ ಹೊಡೆತಕ್ಕೆ ಒಡೆದು ಬೀಳುತ್ತಿತ್ತು. ಮೊಗಲ್ ಸೈನ್ಯಗಳು ಭರದಿಂದ ಕೋಟೆ ಯೊಳಗೆ ನುಗ್ಗುತ್ತಿತ್ತು. ಮರಾಠಾ ಸೈನ್ಯಗಳು ಪ್ರಾಣದ ಮೇಲೆ ಹಂಗು

ತೊರಿದು ಯುದ್ಧಕ್ಕೆ ಸಿದ್ಧವಾಗಿದ್ದವು. ಆ ದೃಶ್ಯವನ್ನು ನೋಡಿ ಶಿವಾಜಿಯ ಹೃದಯವು ಕರಗಿ "ಜಯಸಿಂಹ ಮಹಾರಾಜರೇ, ಯುದ್ಧವನ್ನು ಇಲ್ಲಿಸಿ. ಅನ್ಯಾಯವಾದ ಕೊಲೆ" ಎಂದು ಕೂಗಿಕೊಂಡನು.

ಜಯಸಿಂಹನು "ನಿಮ್ಮ ಕಡೆಯವರು ಯುದ್ಧಮಾಡುವುದಿಲ್ಲ. ಇನ್ನು ಕೆಲವು ಕ್ಷಣಗಳೊಳಗಾಗಿ ಶರಣಾಗತರಾಗುತ್ತಾರೆ" ಎಂದನು.

ಶಿವಾಜಿಯು ನಕ್ಕು "ಇಲ್ಲ, ಆ ಸಂಭವವೇ ಇಲ್ಲ. ಅಲ್ಲಿ ಇರುವ ಮರಾಠರು ಕಟ್ಟಕಡೆಯ ಮನುಷ್ಯನು ಸತ್ತು ಬೀಳುವವರೆಗೆ ಯುದ್ಧ ಮಾಡುತ್ತಾರೆ. ನಾನು ನಿಮ್ಮ ಶರತ್ತುಗಳೆಲ್ಲವನ್ನೂ ಒಪ್ಪುತ್ತೇನೆ. ಯುದ್ಧವನ್ನು ನಿಲ್ಲಿಸಿರಿ" ಎಂದು ಶಿವಾಜಿಯು ಕೇಳಿಕೊಂಡನು.

ಮೀರ್ ತುಜಾಖಾನ್ ಮತ್ತು ಘಾಜೀಬೇಗ್ ಈ ಇಬ್ಬರು ಸೇನಾನಾಯಕರೊಡನೆ ಯುದ್ಧವನ್ನು ನಿಲ್ಲಿಸಬೇಕೆಂದು ದಿಲೇರ್ ಖಾನನಿಗೆ ಜಯಸಿಂಹನು ಹೇಳಿ ಕಳುಹಿಸಿದನು.

ಶಿವಾಜಿಯು ತನ್ನ ಜೊತೆಯಲ್ಲಿ ಬಂದಿದ್ದ ಬ್ರಾಹ್ಮಣನೊಬ್ಬನ ಕೈಯಲ್ಲಿ "ಯುದ್ಧವನ್ನು ನಿಲ್ಲಿಸಬೇಕು ಎಂದು ತನ್ನ ಕಡೆಯ ಸೇನಾಧಿಪತಿಗೆ ಬರೆದು ಕಳುಹಿಸಿದನು.

ಆ ಕಾಗದವನ್ನು ನೋಡಿ ಮರಾಠಾ ಸೇನಾಧಿಪತಿಯು ನಂಬಲಿಲ್ಲ. "ಇದರಲ್ಲೇನೋ ವಂಚನೆಯಿದೆ" ಎಂದು ಸಂದೇಹಪಟ್ಟನು. ಆದರೆ ಮೊಗಲ್ ಸೈನ್ಯಗಳು ಯುದ್ಧವನ್ನು ನಿಲ್ಲಿಸಿದವು.

ಜಯಸಿಂಹನು ಯುದ್ಧವನ್ನು ನಿಲ್ಲಿಸಬೇಕೆಂದು ಹೇಳಿಕಳುಹಿಸಿದ ಆಜ್ಞೆಯನ್ನು ಕೇಳಿ ದಿಲೇರ್ ಖಾನ್ ಹುಚ್ಚು ಹುಚ್ಚಾಗಿ ರೇಗಿಕೊಂಡನು.

"ಎಂತಹ ಅನ್ಯಾಯ ! ಎಷ್ಟು ಜನರನ್ನು ಬಲಿಕೊಟ್ಟಿದ್ದೇವೆ ! ಎಷ್ಟು ಸಾಹಸ ಮಾಡಿ ಈ ದುರ್ಗವನ್ನು ಹಿಡಿದಿದ್ದೇವೆ ! ಪ್ರತ್ಯಕ್ಷವಾದ ಮಹಾ ವಿಜಯವು ಕಣ್ಣೆದುರಿಗೆ ನಿಂತಿದೆ. ಇಂತಹ ಸಮಯದಲ್ಲಿ ಯುದ್ಧವನ್ನು ನಿಲ್ಲಿಸುವುದೆ? ಇದೆಂತಹ ಮೂರ್ಖತನ!" ಎಂದು ಕೂಗುತ್ತಾ ತಲೆಯ ಮೇಲಿದ್ದ ಉಷ್ಣೀಷವನ್ನು ಕಿತ್ತು ನೆಲಕ್ಕೆ ಒಗೆದನು. ಕೈಲಿದ್ದ ಕತ್ತಿಯನ್ನು ಎರಡು ಕೈಗಳಿಂದಲೂ ಬಲವಾಗಿ ಬಗ್ಗಿಸಿ ಮುರಿದು ನೆಲದ ಮೇಲೆ

ಬಿಸಿದನು. ಕೈಯಲ್ಲಿ ರಕ್ತವು ತೊಟ್ಟಿಕ್ಕುತ್ತಿತ್ತು. ಮೀರ್ ತುಜಾಖಾನನೂ, ಘಾಜೀಬೇಗನೂ ದಿಲೀಲ್ ಖಾನನ ಈ ಉದ್ರೇಕವನ್ನು ಕಂಡು ಭಯದಿಂದ ಓಡಿಬಂದು ಜಯಸಿಂಹನಿಗೆ ತಿಳಿಸಿದರು.

ಯುದ್ಧವು ನಿಂತಿತು. ದಿಲೀಲ್‌ಖಾನನು ತನ್ನ ಶಿಬಿರಕ್ಕೆ ಹಿಂದಿರುಗಿದನು.

ಜಯಸಿಂಹನು"ಶಿವಾಜೀ. ನೀನೇ ಖುದ್ದಾಗಿ ಹೋಗಿ ಆ ದಿಲೀಲ್ ಖಾನನೊಂದಿಗೆ ಮಾತನಾಡಿ ಬಾ. ಅವನಿಗೆ ನಿನ್ನನ್ನು ನೋಡಿದರೆ ಸಮಾಧಾನವಾಗುತ್ತದೆ" ಎಂದು ಹೇಳಿ ಕಳುಹಿಸಿದನು.

ರಜಪೂತ ಸೇನಾನಾಯಕರಾದ ಉದಯರಾಜ್ ಮತ್ತು ಉಗ್ರಸೇನ್ ಸರದಾರರು ಶಿವಾಜಿಯನ್ನು ದಿಲೀಲ್‌ಖಾನನ ಭೇಟಿಗೆ ಕರೆದುಕೊಂಡು ಹೋದರು.

ದಿಲೀಲ್‌ಖಾನನು ತನ್ನ ಗುಡಾರದಿಂದ ಹೊರಗೆ ಬಂದು ಶಿವಾಜಿಯನ್ನು ಎದುರುಗೊಂಡು ಡೇರೆಯೊಳಕ್ಕೆ ಕರೆದುಕೊಂಡು ಹೋದನು. ಅವರಿಬ್ಬರಿಗೂ ಸಂಭಾಷಣೆಗಳಾದುವು. ದಿಲೀಲ್ ಖಾನನು ಶಿವಾಜಿಯ ಮಾತುಗಳನ್ನು ಕೇಳಿ ಹರ್ಷಚಿತ್ತನಾದನು.

ಶಿವಾಜೀ ಮಹಾರಾಜರೇ, ನಿಮ್ಮ ಮರಾಠಾ ಸೈನಿಕರು ನಿಜವಾಗಿಯೂ ಅಸಮಸಾಹಸಿಗಳು, ಮಹಾಪರಾಕ್ರಮಿಗಳು. ಇಷ್ಟು ಸಣ್ಣ ಸೈನ್ಯಗಳು ಮಹಾ ಸೈನ್ಯಗಳ ಮುಂದೆ ಬಂದೂಕು, ತೋಪುಗಳಿಗೆ ಎದೆಕೊಟ್ಟು ನಿಲ್ಲುವ ಧೈರ್ಯವನ್ನು ನಾನು ಮೆಚ್ಚಿದ್ದೇನೆ. ನಿಮ್ಮ ಸೈನಿಕರು ಒಂದು ಹೆಜ್ಜೆ ಹಿಂದಿಡುವುದಿಲ್ಲ. ಮೊಗಲ್ ಬಾದಶಹನಿಗೆ ಇಂತಹದೊಂದು ಸೈನ್ಯವಿದ್ದರೆ ಕಾಬೂಲ್ ಕಾಂದಹಾರ್‌ಗಳನ್ನೂ, ಬರ್ಮಾದೇಶವನ್ನೂ ಸುಲಭವಾಗಿ ಜಯಿಸಬಹುದು" ಎಂದು ಪ್ರಶಂಸೆಮಾಡಿದನು.

ದಿಲೀಲ್‌ಖಾನನೇ ಶಿವಾಜಿಯನ್ನು ಜಯಸಿಂಹ ಮಹಾರಾಜರ ಶಿಬಿರಕ್ಕೆ ಕರೆದುಕೊಂಡು ಹೋಗಿ "ಮಹಾರಾಜರೇ, ಈ ಶಿವಾಜಿಯು ಬಹಳ ಪರಾಕ್ರಮಿ. ಇವನ ಸೈನಿಕರೆಲ್ಲರೂ ಶೂರರು ಮತ್ತು ಸಾಹಸಿಗಳು. ಇವರನ್ನು ವಿಶೇಷ ಗೌರವದಿಂದ ಕಾಣುವಂತೆ ಬಾದಶಹರಿಗೆ ಶಿಫಾರಸುಮಾಡಬೇಕು" ಎಂದು ಅರಿಕೆ ಮಾಡಿದನು.

ಜಯಸಿಂಹನಿಗೆ ಸಂತೋಷವಾಯಿತು. ಅನಂತರ ಜಯಸಿಂಹನೂ ಶಿವಾಜಿಯೂ ಕುಳಿತು ಸಂಧಿಪ್ರಸ್ತಾಪವನ್ನು ಇತ್ಯರ್ಥಮಾಡಿದರು. ಶಿವಾಜಿಯ ವಶದಲ್ಲಿರುವ ಇಪ್ಪತ್ತುಮೂರು ಕೋಟೆಗಳನ್ನು ಮೊಗಲರಿಗೆ ಒಪ್ಪಿಸಿ ಬಿಡಬೇಕು. ಒಂಭತ್ತು ಕೋಟೆಗಳನ್ನು ಮಾತ್ರ ಶಿವಾಜಿಯು ಸ್ವಂತ ವಾಗಿ ಇಟ್ಟುಕೊಳ್ಳಬಹುದು. ಒಂದು ಲಕ್ಷ ಹೊನ್ನನ್ನು ಶಿವಾಜಿಯು ದೆಹಲಿಗೆ ಪೊಗದಿ ಕೊಡಬೇಕು. ಸಾಮಂತ ರಾಜನೆಂದು ಒಪ್ಪಿಕೊಳ್ಳಬೇಕು. ಶಿವಾಜಿಯು ಪ್ರಾಮಾಣಿಕತೆಯಿಂದ ದಖ್ಖನ್ನಿನ ಯುದ್ಧದಲ್ಲಿ ಮೊಗಲರಿಗೆ ಸಹಾಯಮಾಡಬೇಕು. ಈ ರೀತಿ ಶರತ್ತುಗಳಾದವು.

ಶಿವಾಜಿಯು "ಮಹಾರಾಜ, ಕಡೆಯಲ್ಲಿ ನನ್ನದೊಂದು ಪ್ರಾರ್ಥನೆ ಇದೆ. ನಾನು ಆಮರಣಾಂತ ತಮಗೆ ಅಧೀನನಾಗಿರುತ್ತೇನೆ. ಶಕ್ತಿ ಇದ್ದಷ್ಟು ಸೇವೆ ಮಾಡುತ್ತೇನೆ. ಆದರೆ ನಾನು ಎಂದೆಂದಿಗೂ ಬಾದಷಹರ ಸಮ್ಮುಖಕ್ಕೆ ಹೋಗುವುದಿಲ್ಲ. ಅಂತಹ ರಿಯಾಯಿತಿಯನ್ನು ನನಗೆ ಕೊಡಿಸಬೇಕು. ರಾಜಾಸ್ಥಾನದಲ್ಲಿ ಉದಯಪುರದ ಮಹಾರಾಜರಿಗೆ ಮೊಗಲ್ ಸಾಮ್ರಾಟ ರಿಂದ ಇಂತಹ ರಿಯಾಯಿತಿಯು ಕೊಡಲ್ಪಟ್ಟಿದೆ. ನನ್ನ ಮಗ ಶಂಭೋಜೀ ಯನ್ನು ಮೊಗಲ್ ಬಾದಷಹರ ವಶಕ್ಕೇ ಒಪ್ಪಿಸುತ್ತೇನೆ" ಎಂದು ಕೇಳಿ ಕೊಂಡನು.

ಮಹಾರಾಜ ಜಯಸಿಂಹನು "ಈ ನಿನ್ನ ಕೋರಿಕೆಯನ್ನು ಬಾದಷಹರಿಗೆ ಪತ್ರಮುಖೇನ ತಿಳಿಸುತ್ತೇನೆ. ಈ ಅರ್ಥಕ್ಕೆ ಅವರನ್ನು ಒಪ್ಪಿಸುತ್ತೇನೆಂದು ನಿನಗೆ ವಾಗ್ದಾನ ಮಾಡುತ್ತೇನೆ" ಎಂದು ಹೇಳಿದನು.

ಮೊಗಲ್ ಸಾಮ್ರಾಟರಿಗೂ ಶಿವಾಜಿಗೂ ಸಂಧಿಯಾಗಿದೆ ಎಂದು ದೇಶದಲ್ಲೆಲ್ಲಾ ಡಂಗೂರ ಹೊಡೆಸಿದರು. ಸೇನಾಧಿಪತಿ ದಾವೂದ್ ಖಾನನೇ ಮುಂತಾದವರು ಈ ಸಂಧಿಯಿಂದ ಬಹಳವಾಗಿ ಅಸಮಾಧಾನ ಗೊಂಡರು. "ಮಹಾರಾಜ ಜಯಸಿಂಹನ ಕೃತ್ರಿಮ ಸಂಧಾನವು ಇದರಲ್ಲಡಗಿದೆ" ಎಂದು ಅವರುಗಳು ಮಾತನಾಡಿಕೊಂಡರು.

# ೧೧

ಶಿವಾಜಿಯು ರಾಯಘಡಕ್ಕೆ ಹೋಗಿ ಸೇರಿದನು. ಯುದ್ಧವು ಪೂರೈಸಿ ಹೋಗಿದ್ದರೂ ಸೈನ್ಯ ಶಿಬಿರಗಳೆಲ್ಲಾ ಹಾಗೆಹಾಗೆಯೇ ಇದ್ದಲ್ಲಿಯೇ ಇದ್ದವು. ಬಾದಷಹನಿಂದ ಈ ಸಂಧಿಗೆ ಇನ್ನೂ ಒಪ್ಪಿಗೆಯ ಪತ್ರವು ಬಂದಿರಲಿಲ್ಲ. ದೆಹಲಿಯಲ್ಲಿ ಈ ಸಂಧಿಯ ವಿಚಾರವಾಗಿ ಅನೇಕ ಮಾತುಗಳು ನಡೆಯುತ್ತಿದ್ದವು "ಜಯಸಿಂಹನು ಇಷ್ಟೊಂದು ಅಟ್ಟಹಾಸಮಾಡಿ ಸಾಧಿಸಿದ್ದೇನು ? ಕಡೆಗೂ ಸಂಧಿ!" ಎಂದು ಬಹುಮಂದಿ ರಾಜಬಂಧುಗಳು ಲೊಚಗುಟ್ಟುತ್ತಿದ್ದರು. ಷಯಿಸ್ತಾಖಾನನ ಹೆಂಡತಿಯು ಅಂತಃಪುರದಲ್ಲೆಲ್ಲಾ ವಿಷಬೀಜವನ್ನು ಬಿತ್ತಿ ಉದ್ರೇಕಗೊಳಿಸಿದ್ದಳು. ಬಾದಷಹನು ಎಲ್ಲ ವಿಚಾರಗಳನ್ನೂ ಶಾಂತಚಿತ್ತದಿಂದ ಆಲೋಚಿಸುತ್ತಿದ್ದನು ಗುಪ್ತಚಾರರ ಮುಖೇನ ಪ್ರತಿಯೊಂದು ಅಂಶವನ್ನೂ ಕೇಳಿ ತಿಳಿದುಕೊಂಡಿದ್ದನು. ಆ ಸಮಯದಲ್ಲಿ ಯುವರಾಜ ಆಜಂಷಹನು ದೆಹಲಿಯಲ್ಲಿಯೇ ಇದ್ದನು. ಅವನು ದಖ್ಖನ್ನಿನಿಂದ ಹಿಂತಿರುಗಿ ಬಂದು ನಾಲ್ಕು ತಿಂಗಳುಗಳಾದವು. ಬಾದಷಹನು ಯುವರಾಜನನ್ನು ಸಮ್ಮುಖಕ್ಕೆ ಕರೆಸಿ ಮಾತನಾಡಿರಲಿಲ್ಲ. ಆಜಂಷಹನಿಗೆ ಜಯಸಿಂಹನ ಮೇಲೆ ಅಸಮಾಧಾನವಾಗಿರಬಹುದೆಂದೂ ಯುದ್ಧವು ಪೂರೈಸುವ ತನಕಅವನೊಡನೆ ಮಾತನಾಡಬಾರನೆಂದೂ ಬಾದಷಹನು ಮನಸ್ಸಿನಲ್ಲಿ ನಿಶ್ಚಯ ಮಾಡಿಕೊಂಡಿದ್ದನು. ಆಜಂಷಹನು ಬಾದಷಹನ ಮನಸ್ಸನ್ನು ಚೆನ್ನಾಗಿ ಅರಿತಿದ್ದನು. ಅವನೂ ತಂದೆಯ ಭೇಟಿಯನ್ನು ಅಪೇಕ್ಷಿಸಿರಲಿಲ್ಲ. ಬಾದಷಹನು ಆಜಂಷಹನನ್ನು ಸಮ್ಮುಖಕ್ಕೆ ಕರೆಸಿದನು.

ಯುವರಾಜನು ಬಂದು ವಿನಯದಿಂದ ತಂದೆಯನ್ನು ಅಭಿವಾದನ ಮಾಡಿದನು. ಬಾದಷಹನು ಯುವರಾಜನನ್ನು ಸಮೀಪದಲ್ಲಿ ಕುಳ್ಳಿರಿಸಿಕೊಂಡು "ಮಿರ್ಜಾ, ರಾಜಾ ಜಯಸಿಂಹರವರು ಶಿವಾಜಿಯೊಡನೆ ಸಂಧಿ ಮಾಡಿಕೊಂಡಿದ್ದಾರೆಂದು ಕೇಳಿದ್ದೀಯಾ?" ಎಂದ.

"ಚೆನ್ನಾಗಿ ಕೇಳಿದ್ದೇನೆ, ಜಹಾಪನಾ."

ಬಾದಷಹನು ಜಯಸಿಂಹನ ಪತ್ರವನ್ನು ಯುವರಾಜನ ಕೈಗೆ ಕೊಟ್ಟು "ನೀನು ದಖ್ಖನ್ನಿನ ಸಮಾಚಾರವನ್ನೆಲ್ಲಾ ಚೆನ್ನಾಗಿ ತಿಳಿದಿದ್ದೀಯೆ. ಈ ಶರತ್ತುಗಳನ್ನು ಒಪ್ಪಿಕೊಳ್ಳಬಹುದೇ?" ಎಂದು ಪ್ರಶ್ನೆಮಾಡಿದನು.

ಯುವರಾಜನು ಆ ಪತ್ರವನ್ನು ಆಮೂಲಾಗ್ರವಾಗಿ ಓದಿನೋಡಿ "ಷಹಾನ್‌ಷಹಾ, ಈ ಪತ್ರದಲ್ಲಿರುವುದೆಲ್ಲಾ ವಿಹಿತವಾಗಿಯೇ ಕಾಣುತ್ತದೆ. ಲೆಖ್ಖಕ್ಕೆ ಒಂಭತ್ತು ಕೋಟೆಗಳು ಶಿವಾಜಿಗೆ ಬಿಡಲ್ಪಟ್ಟವೆ. ಒಂದೆರಡು ಕೋಟೆಗಳು ಮಾತ್ರ ಮುಖ್ಯವಾದ ಕೋಟೆಗಳು. ಉಳಿದುದೆಲ್ಲಾ ಲೆಖ್ಖಕ್ಕೆ ಮಾತ್ರ. ಶಿವಾಜಿಯು ಸೇನಾಧಿಪತಿಗಳನ್ನು ಕಟ್ಟಿಹಾಕಲು ಆ ಕೋಟೆಗಳನ್ನು ಉಳಿಸಿಕೊಟ್ಟಿದ್ದಾರೆ. ಸುತ್ತಲೂ ನಮ್ಮ ರಾಜ್ಯಗಳು ಬರುತ್ತವೆ. ಮಧ್ಯೆ ಶಿವಾಜಿಯೂ ಅವನ ಸೇನಾಧಿಪತಿಗಳೂ ಇದ್ದರೆ ಅವರನ್ನು ಬಂಧನದಲ್ಲಿಟ್ಟಂತೆಯೇ ಆಗುತ್ತದೆ. ಬಹುಶಃ ಜಯಸಿಂಹ ಮಹಾರಾಜರೂ ಇದನ್ನೇ ಆಲೋಚನೆ ಮಾಡಿರಬಹುದು. ದಖ್ಖನ್ನಿನಲ್ಲಿರುವ ಸರ್ವಾಧಿಕಾರಿಯು ಎಚ್ಚರಿಕೆಯಿಂದಿದ್ದರೆ ಈ ಶಿವಾಜಿಯನ್ನು ಯಾವಾಗಲೂ ಹತೋಟಿಯಲ್ಲಿಟ್ಟುಕೊಂಡಿರಬಹುದು. ಈ ಪತ್ರದಲ್ಲಿ ಇನ್ನೆರಡು ಅಂಶಗಳಿವೆ. ಶಿವಾಜಿಯು ನಮ್ಮ ಕಡೆಯವನ್ನಾಗಿ ಯುದ್ಧ ಮಾಡುವುದಾಗಿ ಒಪ್ಪಿಕೊಂಡಿದ್ದಾನೆ. ಬಿಜಾಪುರದವರು ನಮ್ಮ ಮೇಲೆ ಕೋಟಲೆ ಮಾಡುತ್ತಲೇ ಇದ್ದಾರೆ. ಶಿವಾಜಿಯನ್ನು ಈ ಬಿಜಾಪುರದ ಮೇಲೆ ಯುದ್ಧಕ್ಕೆ ಕಳುಹಿಸಿದರೆ ಆದಿಲ್‌ಷಾಹಿಯ ಸೊಕ್ಕು ಮುರಿಯಲು ತಕ್ಕ ಗಿರಾಕಿಯನ್ನೇ ಉಪಯೋಗಿಸಿದಂತೆ ಆಗುತ್ತದೆ.

"ಮತ್ತೊಂದು ಅಂಶ. ದರಬಾರಿಗೆ ಬರುವುದಿಲ್ಲವೆನ್ನುತ್ತಾನೆ. ಇದನ್ನು ಅಗೌರವವೆಂದು ಭಾವನೆ ಮಾಡುವುದು ತಪ್ಪು. ಶಿವಾಜಿಯಲ್ಲಿ ಹಿಂದೂ ಮತದ ಮೂಢ ಭಾವನೆಯು ತುಂಬಿದೆ. ಮೊದಲಿನಿಂದಲೂ ಗುಡ್ಡಗಾಡುಗಳಲ್ಲಿ ಬೆಳೆದವನು. ಸಾಧುಸಂತರಲ್ಲಿ ವಿದ್ಯೆ ಕಲಿತವನು. ದೆಹಲಿಯ ದರ್ಬಾರಿಗೆ ಬಂದರೆ ಜಾತಿ ಕೆಟ್ಟುಹೋಗುತ್ತದೆ. ಮುಸಲ್ಮಾನನಾಗಿಬಿಡುತ್ತೇನೆ—ಎಂಬ ಭಯವಿದೆ ಅವನಿಗೆ ಅವನು ಹೀಗೆಯೇ ಮುಸಲ್ಮಾನ್ ಸೇನಾಧಿಪತಿಗಳೊಡನೆ ಸರದಾರರೊಡನೆ ಕಲೆತು ಬೆರೆತು ಒಡನಾಡಿದರೆ

ಜಯಸಿಂಹ ಮಹಾರಾಜರಂತಹವರನ್ನು ನೋಡಿ ಪಾಠ ಕಲಿಯುತ್ತಾನೆ. ಬೇಡಿಕೊಂಡು ತಾನಾಗಿ ದೆಹಲಿಯ ದರಬಾರಿಗೆ ಬರುತ್ತಾನೆ. ಈ ದರಬಾರಿನ ವಿಷಯಗಳು ಚೆನ್ನಾಗಿ ತಿಳಿದರೆ, ಈ ದರಬಾರಿನಲ್ಲಿ ಉನ್ನತ ಗೌರವವು ದೊರೆಯುವುದೆಂದರೆ ಯಾವನು ತಾನೇ ಇಲ್ಲಿಗೆ ಬರುವುದಿಲ್ಲ? ಸದ್ಯಕ್ಕೆ ಇದೊಂದು ವಿಷಯವನ್ನು ಬಾದಷಹರು ಉಪೇಕ್ಷೆ ಮಾಡಬಹುದು. ಇಷ್ಟರ ಮೇಲೆ ಮಹಾಪ್ರಭುಗಳವರ ಚಿತ್ತ" ಎಂದನು.

ಬಾದಷಹನು ಸಂತೋಷವನ್ನು ವ್ಯಕ್ತಪಡಿಸಿ, "ಯುವರಾಜಾ, ಜಯಸಿಂಹ ಮಹಾರಾಜನಿಗೆ ನಾವು ಸರ್ವಾಧಿಕಾರವನ್ನು ಕೊಟ್ಟದ್ದು ನಿನ್ನ ಮನಸ್ಸಿಗೆ ಖತಿಯನ್ನುಂಟುಮಾಡಿದೆ ಎಂದು ಬಗೆದಿದ್ದೆ. ನೀನು ಸಹಜ ವಾಗಿಯೇ ಅದನ್ನು ತೆಗೆದುಕೊಂಡಿರುವೆ. ಇದಕ್ಕಾಗಿ ನನಗೆ ಮೆಚ್ಚುಗೆ ಯುಂಟಾಗಿದೆ" ಎಂದನು.

"ಜಹಾಪನಾ, ನಾನು ಒಮ್ಮೆಯಾದರೂ ಹಾಗೆ ಭಾವಿಸಲೇ ಇಲ್ಲ. ಜಯಸಿಂಹ ಮಹಾರಾಜರಿಗೆ ಹುಜೂರಿನಿಂದ ಅಂತಹ ಅಧಿಕಾರ ಪತ್ರ ಕೊಡದಿದ್ದರೂ ನಾನು ಅವರ ಅಪ್ಪಣೆಯನ್ನು ಚಾಚೂ ತಪ್ಪದೇ ನೆರವೇರಿಸು ತ್ತಿದ್ದೆ. ಈ ದೆಹಲಿಯ ಸಾಮ್ರಾಜ್ಯದ ಗೌರವವನ್ನು ಕಾಪಾಡುವುದರಲ್ಲಿ ನನಗಿಂತಲೂ, ಮತ್ತಾವ ದೊಡ್ಡ ಸರದಾರರಿಗಿಂತಲೂ, ಜಯಸಿಂಹ ಮಹಾರಾಜರಿಗೆ ಹೆಚ್ಚು ಶ್ರದ್ಧೆ ಇದೆ—ಎಂದು ನಾನು ನಂಬಿದ್ದೇನೆ. ಈ ದರಬಾರಿನಲ್ಲಿರುವವರಿಗೆಲ್ಲಾ ಆ ಅಂಶದಲ್ಲಿ ಭಿನ್ನಾಭಿಪ್ರಾಯವೇ ಇಲ್ಲ. ಆವರು ಹಿಂದುಗಳು ಎಂಬ ಭಾವನೆಯಿಂದ ಈ ದರಬಾರಿನ ಅನೇಕ ದೊಡ್ಡ ಮನುಷ್ಯರು ಅವರ ಮೇಲೆ ಅಸೂಯೆ ಅಸಮಾಧಾನಗಳನ್ನಿಟ್ಟುಕೊಂಡಿದ್ದಾರೆ. ಅವರು ಹಿಂದುಗಳಾಗಿರುವುದೇ ಒಳ್ಳೆಯದಾಗಿದೆ ಎಂದು ನನ್ನ ಭಾವನೆ. ಮೊಗಲ್ ಸಾಮ್ರಾಜ್ಯದಲ್ಲಿ ಕೋಟ್ಯಾಂತರಜನ ಹಿಂದುಗಳಿದ್ದಾರೆ. ಅವರೆಲ್ಲರೂ ಜಯಸಿಂಹ ಮಹಾರಾಜವನ್ನು ನೋಡಿ ರಾಜಭಕ್ತಿಯಿಂದ ನಡೆದುಕೊಂಡರೆ ಮೊಗಲ್ ದರ್ಬಾರಿನಲ್ಲಿ ತಮಗೂ ಮಾನಮನ್ನಣೆಗಳೂ ಉನ್ನತ ಸ್ಥಾನಗಳೂ ದೊರೆಯುತ್ತವೆಂಬ ಆಸೆಯಿಂದ ಬಾದಷಹರ ಸೇವೆಮಾಡುತ್ತಾರೆ. ರಾಜ

ಪುಟಾಣವು ತಮ್ಮ ಹದ್ದಿನಲ್ಲಿದೆ. ಮರಾಠರೂ ತಮ್ಮ ಹದ್ದಿಗೆ ಬಂದಂತೆ ಆಗಿದೆ. ಇನ್ನು ಮುಂದೆ ಮೊಗಲ್ ಸಾಮ್ರಾಜ್ಯವು ದಕ್ಷಿಣ ಸಮುದ್ರದವರೆಗೆ ಬೆಳೆಯುತ್ತದೆ" ಎಂದು ಹೇಳಿದನು.

ಬಾದಷಹನು ಆಜಂಷಹನನ್ನು ಆಲಂಗಿಸಿ ಹರಿಸಿ ಕಳುಹಿಸಿದನು.

ಮಹಾರಾಜಾ ಜಯಸಿಂಹನಿಗೆ "ನಿಮ್ಮ ಇಷ್ಟದಂತೆ ಶಿವಾಜಿಯು ಸಂಧಿಯನ್ನು ಒಪ್ಪಿಕೊಳ್ಳಲಾಗಿದೆ ದೆಹಲಿಯಿಂದ ಶಿವಾಜಿಯ ಬಹುಮಾನಾರ್ಥ ಒಂದು ಪಟ್ಟದಾನೆಯನ್ನೂ ಖಿಲ್ಲತ್ತುಗಳನ್ನೂ ಬಿರುದುಬಾವಲಿಗಳನ್ನೂ ಕಳುಹಿಸಿಕೊಡಲಾಗಿದೆ" ಎಂದು ರಾಯಸ ಬರೆಸಿ, ಔರಂಗಾಬಾದಿಗೆ ಕಳುಹಿಸಿ ಕೊಟ್ಟನು.

ಈ ಸಮಯಕ್ಕೆ ಯುದ್ಧ ನಿಂತು ಮೂರು ತಿಂಗಳುಗಳು ಕಳೆದು ಹೋಗಿದ್ದವು. ಶಿವಾಜಿಯು ಪದೇ ಪದೇ ಜಯಸಿಂಹನನ್ನು ಬಂದು ಭೇಟಿ ಮಾಡಿ ಮಾತು ಕಥೆಗಳನ್ನಾಡಿಕೊಂಡು ಹೋಗುತ್ತಿದ್ದನು. ಮನೂಚಿಯೂ ದಿಲೇರ್‌ಖಾನನೂ ಶಿವಾಜಿಯನ್ನು ಬಹಳವಾಗಿ ಮೆಚ್ಚಿಕೊಂಡಿದ್ದರು. ಮನೂಚಿಯು ಜಯಸಿಂಹನೊಡನೆ ಎಷ್ಟೋ ಬಾರಿ ಹೇಳಿದನು. ಈ ಶಿವಾಜಿಯು ಬಹಳ ಸಾಹಸಿ. ರಾಜಲಕ್ಷಣಗಳಿಂದ ಕೂಡಿರುವ ಮಹಾ ಪುರುಷ. ಇವನನ್ನು ನಿಮ್ಮ ಜೊತೆಯಲ್ಲಿಯೇ ಇಟ್ಟುಕೊಂಡಿದ್ದರೆ ದೆಹಲಿಯ ಸಿಂಹಾಸನಕ್ಕೆ ಬಹಳ ಭದ್ರತೆಯುಂಟಾಗುತ್ತದೆ" ಎಂದು ಹೇಳುತ್ತಿದ್ದನು.

ದೆಹಲಿಯಿಂದ ರಾಜಸವು ಬರುತ್ತಲೇ ಜಯಸಿಂಹನು ಶಿವಾಜಿಯನ್ನು ಕರೆಸಿ ದರ್ಬಾರು ನಡೆಸಿ ಬಾದಷಹರಿಂದ ಬಂದ ಖಿಲ್ಲತ್ತುಗಳನ್ನೆಲ್ಲಾ ಶಿವಾಜಿಗೆ ಒಪ್ಪಿಸಿ ಗೌರವ ಮಾಡಿದನು.

೧೨

ಜಯಸಿಂಹನ ದೃಷ್ಟಿಯು ಬಿಜಾಪುರದ ಮೇಲೆ ಹೊರಳಿತು. ಅದಿಲ್ ಷಾಹಿಯ ರಾಜ್ಯವು ವಿಶಾಲವಾಗಿದ್ದಿತು. ಆದರೆ ಆ ರಾಜ್ಯದಲ್ಲಿ ಸಣ್ಣ ಸಣ್ಣ ಪಾಳೆಯಗಾರರು ಪರಸ್ಪರ ಹೋರಾಡುತ್ತಿದ್ದರು. ಬಿಜಾಪುರದ ಸೇನಾಧಿಪತಿಗಳು ಹದ್ದು ಮೀರಿ ತನ್ನಷ್ಟಕ್ಕೆ ತಾವೇ ನವಾಬರಾಗಿಬಿಟ್ಟಿದ್ದರು. ಅವರು ಮೊಗಲ್ ಸಾಮ್ರಾಜ್ಯಕ್ಕೆ ಸೇರಿದ ಅನೇಕ ಪ್ರದೇಶಗಳ ಮೇಲೆ ದಂಡೆತ್ತಿ ಬಂದು ಲೂಟಿ ಮಾಡಿಕೊಂಡು ಹೋಗುತ್ತಿದ್ದರು. ಕೊಂಕಣದ ಕಡೆಯೂ ವಿಶೇಷ ಗದ್ದಲವೆದ್ದಿದ್ದಿತು. ಜಯಸಿಂಹನು ಈ ಅದಿಲ್‌ಷಾಹಿ, ಗೋಲ್ಕಂಡಗಳನ್ನು ಮುರಿದುಹಾಕಿದ್ದಲ್ಲದೇ ಮೊಗಲ್ ಸಾಮ್ರಾಜ್ಯಕ್ಕೇ ಭದ್ರತೆ ಇಲ್ಲವೆಂದು ನಿಶ್ಚಯಿಸಿಕೊಂಡನು. ಬಿಜಾಪುರ, ಗೋಲ್ಕಂಡಗಳ ಮೇಲೆ ಯುದ್ಧವನ್ನು ಎತ್ತುವುದಕ್ಕೆ ಒಂದೇ ಒಂದು ಶಂಕೆ ಅವೆರಡೂ ಮುಸಲ್ಮಾನ್ ರಾಜ್ಯಗಳು. ಬಾದಷಹನ ಒಪ್ಪಿಗೆ ಪಡೆಯುವುದು ಒಳ್ಳೆಯದೆಂದು ಆಲೋಚನೆ ಮಾಡಿದನು. ದೆಹಲಿಗೆ ಪತ್ರಬರೆದು ಕೊಟ್ಟು ದೂತರನ್ನಟ್ಟಿದನು.

"ರಜಪುತ ಸೈನ್ಯಗಳೂ ಮರಾಠಾ ಸೈನ್ಯಗಳೂ ಮೊಗಲ್ ಸೈನ್ಯಗಳೂ ಸಿದ್ಧವಾಗಿವೆ. ಬಿಜಾಪುರದ ರಾಜ್ಯದಲ್ಲಿ ಒಂದು ಕಡೆ ಅಭದ್ರತೆ, ಮತ್ತೊಂದು ಕಡೆ ಅರಾಜಕತೆ. ಬಿಜಾಪುರದ ಸೇನಾಧಿಪತಿಗಳು ಹದ್ದು ಮೀರಿ ದೆಹಲೀ ಸಾಮ್ರಾಜ್ಯದ ಪ್ರಾಂತ್ಯಗಳ ಮೇಲೆ ಬಿದ್ದು ಲೂಟಿಮಾಡುತ್ತಾರೆ. ಇದನ್ನೆಲ್ಲಾ ಹತೋಟಿಗೆ ತರಲು ಒಂದೇ ಮಾರ್ಗ. ಬಿಜಾಪುರ, ಗೋಲ್ಕಂಡಗಳನ್ನು ಪೂರ್ಣವಾಗಿ ಗೆದ್ದು ಸ್ವಾಧೀನ ಪಡಿಸಿಕೊಳ್ಳಬೇಕು. ಅಲ್ಲಿಯ ಸುಲ್ತಾನರುಗಳನ್ನು ಹಿಡಿದು ಅಹಮದ್ ನಗರದ ಬಂಧನದಲ್ಲಿ ಇಡಬೇಕು. ಇದಕ್ಕೆಲ್ಲಾ ಶಿವಾಜಿಯು ಸ್ವಯಂ ನಮ್ಮೊಡನೆ ಸೇರಿಯುದ್ಧ ಮಾಡಲು ಒಪ್ಪಿಕೊಂಡಿದ್ದಾನೆ. ಬಿಜಾಪುರದ ರಾಜ್ಯದ ಮೇಲೆ ಅವನೆಷ್ಟೋ ಬಾರಿ ಧಾಳಿ ನಡೆಸಿದ್ದಾನೆ. ಈ

ಯುದ್ಧದಲ್ಲಿ ಅವನನ್ನು ಉಪಯೋಗಿಸಿದರೆ ನಮಗೆ ಬಹಳ ಲಾಭವಾಗುತ್ತದೆ. ಇವಕ್ಕೆಲ್ಲಾ ಬಾದಷಹರ ಖುದ್ದು ಅಪ್ಪಣೆಯು ಬೇಕು. ಈ ಕಾರ್ಯವನ್ನು ಪೂರೈಸಿ ನಾನು ದೆಹಲಿಗೆ ಹಿಂತಿರುಗುತ್ತೇನೆ. ಯುವರಾಜ ಆಜಂಷಹರನ್ನು ಈಗಲೇ ಔರಂಗಾಬಾದಿಗೆ ಕಳುಹಿಸಬೇಕು" ಎಂದು ಪತ್ರ ಬರೆದು ಕಳುಹಿಸಿದನು.

ಇತ್ತ ಕಡೆ ಯುದ್ಧಸನ್ನಾಹಗಳನ್ನೆಲ್ಲಾ ಶೀಘ್ರಗತಿಯಿಂದಮುಂದುವರಿಸ ತೊಡಗಿದನು. ಶಿವಾಜಿಯನ್ನು ಕರೆಕಳುಹಿಸಿ ಬಿಜಾಪುರದ ಯುದ್ಧ ಪ್ರಸ್ತಾಪವನ್ನು ವಿವರವಾಗಿ ತಿಳಿಸಿದನು. ಶಿವಾಜಿಯನ್ನು "ನೀವು ಈ ಯುದ್ಧದಲ್ಲಿ ಜಯವನ್ನು ಗಳಿಸಿದರೆ ನಿಮ್ಮನ್ನೇ ದಖ್ಖನಿನ ಸರ್ವಾಧಿಕಾರಿಗಳಾಗಿ ನೇಮಿಸುವಂತೆ ಬಾದಷಹರಿಂದ ಆಜ್ಞೆ ಮಾಡಿಸುತ್ತೇನೆ. ಈ ಅರ್ಥವನ್ನು ಸೂಚಿಸಿ ಈ ಮುಂಚೆಯೇ ದೆಹಲಿಗೆ ಪತ್ರ ಬರೆದು ಕಳುಹಿಸಿದ್ದೇನೆ" ಎಂದು ಹೇಳಿದನು.

ಶಿವಾಜಿಯು "ಬಿಜಾಪುರದ ಮೇಲೆ ಯುದ್ಧ ಮಾಡುವುದೆಂದರೆ ನಾವು ಯಾಗಲೂ ಸಿದ್ಧರಾಗಿಯೇ ಇದ್ದೇವೆ. ಆದರೂ ನಮ್ಮ ಸೇನಾಧಿಪತಿಗಳಾದ ನೇತಾಜಿ ತಾನಾಜಿಗಳೊಡನೆಯೂ ಮಂತ್ರಿಗಳೊಡನೆಯೂ ಸಮಾಲೋಚನೆ ಮಾಡಿ ಕೂಡಲೇ ತಿಳಿಯಪಡಿಸುತ್ತೇನೆ. ವೈಯಕ್ತಿಕವಾಗಿ ತಾವು ನನ್ನನ್ನು ಬಹಳ ಗೌರವಿಸುತ್ತೀರಿ, ವಿಶ್ವಾಸವಿಟ್ಟಿದ್ದೀರಿ. ಆದರಿಂದ ಧೈರ್ಯವಾಗಿ ನನ್ನ ಮನಸ್ಸಿನಲ್ಲಿರುವುದನ್ನು ಹೇಳುತ್ತೇನೆ. ನಮ್ಮ ಮರಾಠರಿಗೆ ಮುಸಲ್ಮಾನರಲ್ಲಿ ಸರ್ವಥಾ ನಂಬಿಕೆ ಇಲ್ಲ. ಈ ಕಾರಣದಿಂದ ಬಾದಷಹರು ಅನುಗ್ರಹಿಸಿದರೂ ನಾನು ದಖ್ಖನ್ನಿನ ಸರ್ವಾಧಿಕಾರಿಯಾಗುವುದು ಅಸಂಭವ ನನಗೆ ದೆಹಲಿಯ ದರಬಾರಿನ ಯಾವ ಅಧಿಕಾರ ಗೌರವಗಳಲ್ಲಿಯೂ ಆಸೆ-ಆಕಾಂಕ್ಷೆಗಳಿಲ್ಲ. ಇದು ನಿಜವಾದ ಮಾತು" ಎಂದನು.

ಜಯಸಿಂಹನು ನಗುತ್ತಾ "ನಾನು ನಿಮ್ಮ ಅಭಿಪ್ರಾಯಗಳನ್ನು ಅರ್ಥ ಮಾಡಿಕೊಳ್ಳಬಲ್ಲೆ. ಆದರೆ ನೀವು ಬಾದಷಹರನ್ನು ಇನ್ನೂ ಅರ್ಥಮಾಡಿಕೊಂಡಿಲ್ಲ. ದೆಹಲಿಯ ದರ್ಬಾರಿನ ರೀತಿನೀತಿಗಳೇ ಬೇರೆ. ಬಾದಷಹರ ಮನಸ್ಸಿನ ಪರಿಯೇ ಬೇರೆ. ನೀವು ಪೂರ್ಣ ಅನುಗ್ರಹಪಾತ್ರರಾದರೆ ಬಾದಷಹ ಬಹಳವಾಗಿ ಮೆಚ್ಚಿಕೊಳ್ಳುವಿರಿ. ವೀರ್ಯ ಪರಾಕ್ರಮ ಸಾಹಸಗಳು ಒಂದು

ಕಡೆ, ಮತಭಾವನೆಯು ಮತ್ತೊಂದು ಕಡೆ. ಹೀಗೆ ಬಾದಷಹರ ಹೃದಯ ದಲ್ಲಿ ಎರಡು ಪ್ರವಾಹಗಳು ಹರಿಯುತ್ತಿವೆ. ವೀರ್ಯ ಪರಾಕ್ರಮಗಳನ್ನು ನೋಡಿ ಮೆಚ್ಚಿದರೆ ಬಾದಷಹನು ಮತದ ಭಾವನೆಗೆ ಮನಗೊಡುವುದಿಲ್ಲ ಒಂದು ದಿನವಾದರೂ ನನ್ನನ್ನು ಮಹಮ್ಮದೀಯ ಮತಕ್ಕೆ ಸೇರಿಸಿಬಿಡ ಬೇಕೆಂದು ಬಾದಷಹನು ಯೋಚಿಸಿದುದೇ ಇಲ್ಲ. ಹಿಂದುಗಳೆಲ್ಲರೂ ಪರಮ ಪವಿತ್ರರು, ಜ್ಞಾನಿಗಳು, ಶ್ರೀರಾಮಚಂದ್ರನಂತಹವರು" ಎಂದು ನೀವು ಬಗೆ ಯುವುದೂ ತಪ್ಪು. ತರುಣ ಹಿಂದೂ ಸರದಾರರು ಆ ದೆಹಲಿಯ ದರ್ಬಾರಿನ ಸೌಭಾಗ್ಯ ವೈಭವಗಳನ್ನು ನೋಡಿ ತಾವಾಗಿಯೇ ಮುಸಲ್ಮಾನರಾಗುತ್ತಾರೆ. ಆಮೇಲೆ ಭಗ್ನಮನೋರಥರಾಗಿ ಬಾದಷಹನು ಬಲಾತ್ಕಾರ ಮಾಡಿ ಮಹಮ್ಮ ದೀಯ ಮತಕ್ಕೆ ಸೇರಿಸಿದನೆಂದು ಗೊಣಗುತ್ತಾರೆ. ಬಾದಷಹನು ಹಿಂದು ಗಳನ್ನು ಬಲಾತ್ಕಾರಪಡಿಸಿ ಮಹಮ್ಮದೀಯ ಮತಕ್ಕೆ ಸಾವಿರಗಟ್ಟಲೆ ಸೇರಿಸಿದ್ದೂ ಉಂಟು. ಅದು ನಿಮ್ಮಂತಹ ಪರಾಕ್ರಮ ಶಾಲಿಗಳನ್ನಲ್ಲ" ಎಂದನು.

ಶಿವಾಜಿಯು ಜಯಸಿಂಹನಿಗೆ ವಂದಿಸಿ ಅಪ್ಪಣೆ ಪಡೆದು ರಾಯಘಡಕ್ಕೆ ಹೊರಟುಹೋದನು.

ಬಿಜಾಪುರದ ಮೇಲೆ ಮೊಗಲ್ ಸೈನ್ಯಗಳು ಯುದ್ಧಕ್ಕೆ ಹೊರಟವು. ಎಡಗಡೆ ಶಿವಾಜಿಯ ಮರಾಠಾ ಸೈನ್ಯ. ತಾನಾಜಿ, ನೇತಾಜಿ ಮೊದಲಾದ ಸೇನಾನಾಯಕರು. ಬಲಗಡೆ ದಿಲೇಲ್‌ಖಾನನ ಮೊಗಲ್ ಮತ್ತು ಅಫ್‌ಘನ್ ಸೈನ್ಯಗಳು. ಶಿವಾಜಿಯು ಮೊದಲು ಮಂಗಲಬೀರ್ ಎಂಬ ಕೋಟೆಯನ್ನು ಸಾಹಸದಿಂದ ಹಿಡಿದನು. ಆಮೇಲೆ ವಿದ್ಯುದ್ವೇಗದಿಂದ ಬಿಜಾಪುರಕ್ಕೆ ನಲವತ್ತು ಮೈಲಿಗಳ ದೂರದಲ್ಲಿದ್ದ ಫಲ್ಟಾನ್ ಕೋಟೆಯನ್ನು ಹಿಡಿದನು. ಬಿಜಾಪುರದ ಸಮೀಪದಲ್ಲಿದ್ದ ತಾತವಾಡ,ಕಲಾನ್ ಕೋಟೆಗಳನ್ನು ಹಿಡಿದನು. ಈ ನಾಲ್ಕು ಕೋಟೆಗಳನ್ನು ಜಯಸಿಂಹನಿಗೆ ಒಪ್ಪಿಸಿದನು. ಈ ವರದಿಗಳೆಲ್ಲಾ ಬಾದಷಹನಿಗೆ ಸುಲಾವಣೆಯಾಯಿತು. ಬಾದಷಹನು ಶಿವಾಜಿಯ ಸಾಹಸಕ್ಕೆ ಮೆಚ್ಚಿ ದೆಹಲಿಯಿಂದಮೊಗಲ್ ಪಟ್ಟಾಂಕಿತಗಳನ್ನೂ ಬಿರುದುಬಾವಲಿಗಳನ್ನೂ ವಜ್ರದ ಹಿಡಿಯುಳ್ಳ ಕತ್ತಿಯನ್ನೂ ಶಿವಾಜಿಗೆ ಮರ್ಯಾದಾರ್ಥವಾಗಿ ಕಳುಹಿಸಿ

ಕೊಟ್ಟನು. ಅನಂತರ ಬಿಜಾಪುರದ ಸಮೀಪದಲ್ಲಿ ಮೊಗಲ್ ಸೈನ್ಯವು ಬೀಡು ಬಿಟ್ಟಿತ್ತು. ಆ ಸ್ಥಳದಲ್ಲಿ ಬಿಜಾಪುರದ ಸೈನಕ್ಕೂ ಮೊಗಲ್ ಸೈನಕ್ಕೂ ಬಲವಾದ ಯುದ್ಧವಾಯಿತು. ಬಿಜಾಪುರದ ಸೇನಾಧಿಪತಿಗಳು ಷರ್ಜಾ ಖಾನ್, ಖವಾಸ್‌ಖಾನ್, ಜಾದವರಾವ್ ಮತ್ತು ವೆಂಕಾಜಿ ಇವರು ಯುದ್ಧ ಮಾಡಿದರು. ಶಿವಾಜಿಯ ತಮ್ಮನಾದ ವೆಂಕಾಜಿಯು ಬಹಳ ಪರಾಕ್ರಮ ದಿಂದ ಶಿವಾಜಿಯೊಡನೆ ಯುದ್ಧಮಾಡಿದನು. ಸುಮಾರು ನಾಲ್ಕು ದಿನಗಳು ಈ ಯುದ್ಧವು ನಡೆದು ಬಿಜಾಪುರದವರೆಲ್ಲಾ ಸೋತು ಓಡಿಹೋದರು. ಜಯಸಿಂಹನು ಬಿಜಾಪುರದ ಕೋಟೆಯ ಮೇಲೆ ಯುದ್ಧಮಾಡಬೇಕೇಬೇಡವೇ ಎಂದು ಸಂದೇಹಗ್ರಸ್ತನಾದನು. ಬಿಜಾಪುರದ ಕೋಟೆಯೊಳಗೆ ಬಲವಾದ ಸೈನ್ಯಜಮಾವಣೆಯಾಗಿತ್ತು. ಕೋಟೆಕೊತ್ತಲಗಳೆಲ್ಲಾ ಅಚ್ಚುಗಟ್ಟಾಗಿದ್ದವು. ಬತೇರಿಗಳ ಮೇಲೆ ಬಲವಾದ ಫಿರಂಗಿಗಳನ್ನು ಏರಿಸಿದ್ದರು. ಕೋಟೆಯೊಳಗೆ ಯಥೇಚ್ಛವಾದ ಆಹಾರಸಾಮಗ್ರಿಗಳ ಸಂಗ್ರಹವಿದ್ದಿತು. ಜಲಸಮೃದ್ಧಿ ಯಿದ್ದಿತು. ಇದನ್ನೆಲ್ಲಾ ಗುಪ್ತಚಾರರ ಮುಖೇನ ಜಯಸಿಂಹನು ತಿಳಿದು ಕೊಂಡು ಈ ಸಮಯದಲ್ಲಿ ಯುದ್ಧಮಾಡುವುದು ಪ್ರಯೋಜನಕಾರಿಯಲ್ಲ ವೆಂದು ತನ್ನಷ್ಟಕ್ಕೆ ತಾನೇ ನಿರ್ಧಾರ ಮಾಡಿಕೊಂಡನು. ಜಯಸಿಂಹನು ಔರಂಗಾಬಾದಿನಲ್ಲಿದ್ದಾಗ ಬಿಜಾಪುರದ ವೃತ್ತಾಂತವನ್ನು ನಾನಾವಿಧವಾಗಿ ಕೇಳಿ ತಿಳಿದುಕೊಂಡಿದ್ದನು. ಬಿಜಾಪುರದ ಒಳಗೂ ಹೊರಗೂ ಅನೇಕ ಅಂತಃಕಲಹಗಳಿವೆ. ಮತ್ತು ದರಬಾರಿನಲ್ಲಿ ಒಬ್ಬರ ತಲೆಯನ್ನೊಬ್ಬರು ತೆಗೆಯ ಬೇಕೆಂದು ಹೊಂಚುಹಾಕುತ್ತಿದ್ದಾರೆ ಸದ್ಯಕ್ಕೆ ಬಿಜಾಪುರದ ಕೋಟೆಯಲ್ಲಿ ರಕ್ಷಣೆಯೇ ಇಲ್ಲ--ಎಂದು ಕೇಳಿ ಅದನ್ನೇ ನಂಬಿದ್ದನು. ಆದರೆ ಈ ಸಮಯ ದಲ್ಲಿ ಅವರೆಲ್ಲರೂ ಒಂದಾಗಿ ಯುದ್ಧ ಸನ್ನದ್ಧರಾಗಿದ್ದಾರೆ.ಕೋಟೆ ಭದ್ರವಾಗಿದೆ ಮೊಗಲ್ ಸೈನ್ಯದಲ್ಲಿ ದೊಡ್ಡದೊಡ್ಡ ಫಿರಂಗಿಗಳಿಲ್ಲ. ಈಗ ಯುದ್ಧಮಾಡು ವುದರಿಂದ ಸಾರ್ಥಕವಿಲ್ಲ ಎಂದು ನಿಶ್ಚಯಿಸಿ ಮೊಗಲ್‌ಸೈನ್ಯಗಳನ್ನು ಹಿಂದಕ್ಕೆ ಹೋಗಬೇಕೆಂದು ಅಪ್ಪಣೆ ಮಾಡಿದನು. ಈ ರಹಸ್ಯವನ್ನು ಕುರಿತು ಮೊದಲು ಶಿವಾಜಿಯೊಡನೆ ಯೋಚನೆ ಮಾಡಿದನು. ಶಿವಾಜಿಯು ಅದಕ್ಕೆ ಒಪ್ಪಿ ಕೊಂಡು ಹೇಳಿದನು--"ಈ ಬಿಜಾಪುರದ ವಿಚಾರವನ್ನು ನನಗೆ ಬಿಟ್ಟುಬಿಡಿ.

ನಾನು ಹೇಗೆಯೋ ಈ ಕೋಟೆಯನ್ನು ಗೆದ್ದು ಮೊಗಲ್ ಬಾದಶಹರಿಗೆ ಒಪ್ಪಿಸುತ್ತೇನೆ. ಆದಿಲ್‌ಶಹನನ್ನು ಹಿಡಿದು ಕೊಡುತ್ತೇನೆ. ಇದು ನನ್ನ ಭರವಸೆ. ಈಗ ಯುದ್ಧ ಮಾಡೋಣವೆಂದರೆ ಮಾಡೋಣ. ನಮ್ಮ ಸೈನಿಕರು ಯಾವುದಕ್ಕೂ ಹಿಂತೆಗೆಯುವವರಲ್ಲ. ಬಿಟ್ಟುಬಿಡೋಣವೆಂದರೆ ಬಿಡೋಣ. ಇದರಲ್ಲಿ ನಮ್ಮ ಜವಾಬ್ದಾರಿಯೇನೂ ಇಲ್ಲ."

ದಿಲೇರ್ ಖಾನನನ್ನು ಜಯಸಿಂಹನು ಕರೆಸಿ ಹಿಮ್ಮೆಟ್ಟಬೇಕೆಂದು ಸೂಚನೆ ಕೊಟ್ಟನು. ದಿಲೇರ್ ಖಾನನು "ಈಗ ಹಿಮ್ಮೆಟ್ಟುವುದು ಮೊಗಲ್ ಬಾದಶಹರಿಗೆ ಬಹಳ ಅಗೌರವವಾದಂತಾಗುತ್ತದೆ. ಒಂದು ಬಾರಿ ಅವರೇ ಸ್ವತಃ ಬಂದು ಡೆಕ್ಕನಿಯ ಗಲಿಬಿಲಿಗಳಿಂದ ಹಿಂದಕ್ಕೆ ಹೋದರು. ಈಗ ಬಾದಶಹರಿಗೆ ಸಮಾನಸ್ಕಂಧರಾದ ತಾವು ಬಂದು ಹಿಂದಕ್ಕೆ ಹೋದರೆ ಡೆಲ್ಲಿ ಯವರು ಬಿಜಾಪುರದ ಯೋಚನೆಯನ್ನೇ ಬಿಟ್ಟುಬಿಡಬಹುದು. ಬಿಜಾಪುರಗಳ ಜಂಭಕ್ಕೆ ಎದುರಿಲ್ಲದಂತಾಗುತ್ತದೆ. ನಾವು ಯುದ್ಧಕ್ಕಾಗಿ ಹುಟ್ಟಿದವರು ಯುದ್ಧದಲ್ಲಿ ಸಾಯುವವರು. ಇದುವರೆಗೆ ನಮಗೆ ಒಂದು ಯುದ್ಧದಲ್ಲಾದರೂ ಅಪಜಯವಾಗಿಲ್ಲ. ನಾವು ಇಲ್ಲಿಯೇ ಬಲವಾದ ಯುದ್ಧ ಹೂಡೋಣ. ನಾಲ್ಕಾರು ತಿಂಗಳುಗಳಾದರೂ ಆಗಬಹುದು. ನಮಗೆ ಜಯವು ಖಂಡಿತ. ಮರಾಠರು, ಮೊಗಲರು, ರಜಪೂತರು—ಮೂರು ಶಕ್ತಿಗಳು ಏಕತ್ರ ಬಂದು ಹಲ್ಲೆಮಾಡುತ್ತಿರುವಾಗ ನಮ್ಮನ್ನೆದುರಿಸುವ ಧೈರ್ಯವು ಬಿಜಾಪುರಿಗಳಿಗೆ ಎಲ್ಲಿ ಬರಬೇಕು? ಭಾರಿ ತೋಪುಗಳಿಲ್ಲದಿದ್ದರೆ ಔರಂಗಾಬಾದಿನಿಂದ ತರಿಸೋಣ. ಅಹಮದ್ ನಗರದಿಂದ ಬರುತ್ತವೆ. ಈ ಯುದ್ಧವನ್ನು ಬಿಡುವ ಪ್ರಸಂಗವು ನಮಗೇನು ಬಂದಿದೆ? ಬೇ ಅದಬ್, ಮಾಫ್ ಮಾಡಬೇಕು. ನಾನು ಒಂದು ಹೆಜ್ಜೆಯನ್ನೂ ಹಿಂದಕ್ಕಿಡುವವನಲ್ಲ. ನಿಮ್ಮ ಕೈಯಿಂದಲೇ ಬೇಕಾದರೂ ನನ್ನನ್ನು ಕತ್ತರಿಸಿ ಬಿಸುಟುಬಿಡಿ. ಅದನ್ನು ನನ್ನ ಭಾಗ್ಯವೆಂದು ಕೊಳ್ಳುತ್ತೇನೆ" ಎಂದು ಹೇಳಿದನು.

ಜಯಸಿಂಹನಿಗೆ ಸ್ತಂಭೀಭಾವ ಉಂಟಾಯಿತು. ಒಂದೆರಡು ದಿವಸಗಳು ಹೀಗೆಯೇ ಕಳೆದವು. ಅಷ್ಟರಲ್ಲಿ ಔರಂಗಾಬಾದಿನಿಂದ ಸುದ್ದಿಯು ಬಂದಿತು. ಬಿಜಾಪುರದ ಇಬ್ಬರು ಸೇನಾಧಿಪತಿಗಳು ಮೊಗಲ್ ಪ್ರಾಂತ್ಯಗಳನ್ನು ಕೊಳ್ಳೆ

ಹೊಡೆಯುತ್ತಿದ್ದಾರೆಂದು ಸುದ್ದಿ ಬಂದಿತು. ಜಯಸಿಂಹನು ದಿಲೀಲ್‌ಖಾನ ನನ್ನು ಕರೆಸಿ ಆ ಪತ್ರವನ್ನು ಅವನ ಕೈಗೆ ಕೊಟ್ಟು "ನಾನು ಮೊಗಲ್ ಸೈನ್ಯ ಗಳು ಹಿಂತಿರುಗುವಂತೆ ಅಪ್ಪಣೆ ಮಾಡಿಬಿಟ್ಟಿದ್ದೇನೆ. ನನ್ನ ಅಪ್ಪಣೆಯನ್ನು ಯಾರೂ ಮೀರಕೂಡದು" ಎಂದು ಕಠಿಣವಾದ ಆಜ್ಞೆ ಮಾಡಿದನು. ಸೈನ್ಯ ಗಳು ಹಿಂತಿರುಗಿದವು.

ಮೊಗಲ್ ಸೈನ್ಯಗಳು ಪರೇಂದ ಎಂಬ ಸ್ಥಳದಲ್ಲಿ ಬೀಡುಬಿಟ್ಟವು. ಸೇನಾಧಿಪತಿಗಳ ಮನಸ್ಸಿನಲ್ಲಿ ಶಾಂತಿಯಿರಲಿಲ್ಲ ಪರಸ್ಪರ ಸಂದೇಹ ಅಪ ಮಾನಗಳು ತಾಂಡವವಾಡುತ್ತಿದ್ದವು. ದಿಲೀಲ್‌ಖಾನನು ತನ್ನ ಆಪ್ತರಾದ ಮುಸಲ್ಮಾನ್ ಸರದಾರರುಗಳನ್ನು ಗೋಪ್ಯವಾಗಿ ಕಲೆತು ಸಮಾಲೋಚನ ಮಾಡಿದನು. ಇದೆಲ್ಲಾ ಶಿವಾಜಿಯ ಕೃತ್ರಿಮ. ಈ ಜಯಸಿಂಹ ಮಹಾರಾಜರು ಶಿವಾಜಿಯ ಕೃತ್ರಿಮಕ್ಕೆ ಒಳಪಟ್ಟಿದ್ದಾರೆ. ಈ ಶಿವಾಜಿಯ ತಂದೆಯು ಈ ಬಿಜಾಪುರದ ಉಪ್ಪುಂಡು ಬದುಕಿದವನು. ಇಂದು ಷಾಜಿಯು ಸತ್ತು ಹೋಗಿದ್ದರೂ ಶಿವಾಜಿಯ ಚಿಕ್ಕಮ್ಮ ಬಂಧು ಬಳಗಗಳು ಈ ಕೋಟೆಯಲ್ಲಿ ಇದ್ದಾರೆ ಶಿವಾಜಿಯ ತಮ್ಮ ವೆಂಕಾಜಿಯು ಸೇನಾಧಿಪತಿಯಾಗಿದ್ದಾನೆ. ಬಿಜಾಪುರಿ ಸರದಾರರು ಸೆರೆ ಸಿಕ್ಕಿ ಶಿವಾಜಿಯೊಡನೆ ಸಂಧಾನಮಾಡಿದ್ದಾರೆ. ಶಿವಾಜಿಯೇ ಇಷ್ಟು ಅನರ್ಥಗಳಿಗೆ ಕಾರಣ ಮೊಗಲ್ ಸಾಮ್ರಾಟರ ಮುಖಕ್ಕೆ ಮಸಿ ಬಳಿದಂತೆ ಮಾಡಿದ್ದಾನೆ.ನಾವೇನು ಮಾಡಬಲ್ಲೆವು?ದಖ್ಖನ್ನಿನ ಅಪ್ರತಿಹತವಾದ ಅಧಿಕಾರವು ಜಯಸಿಂಹ ಮಹಾರಾಜರ ಕೈಯಲ್ಲಿದೆ. ಈಗ ನಾವು ಅವಿನಯವನ್ನು ತೋರಿ ಎದುರುಬಿದ್ದರೂ ನಮಗೇ ಕ್ರೂರ ದಂಡನೆ ಯಾಗುತ್ತದೆ. ಹೆಸರಿಲ್ಲದೇ ಹೋಗುತ್ತದೆ. ಈ ಶಿವಾಜಿಯನ್ನು ಗೋಪ್ಯ ವಾಗಿ ಕೊಲೆ ಮಾಡಿಬಿಡಬೇಕು. ಆದರಿಂದ ಎಲ್ಲವೂ ತಿಳಿದ ಮೇಲೆ ಬಾದಷಹರಿಗೆ ಸಂತೋಷವಾಗುತ್ತದೆ. ಬಿಜಾಪುರವು ಉಳಿಯಲಿ, ಹೋಗಲಿ; ಬಾದಷಹರು ಜಯಸಿಂಹ ಮಹಾರಾಜರನ್ನು ದಖನ್ನಿಗೆ ಕಳಿಸಿದ್ದು ಶಿವಾಜಿ ಯನ್ನು ಹಿಡಿದು ತರಬೇಕು ಅಥವಾ ಕೊಲೆ ಮಾಡಬೇಕು ಎಂದೇ ಅಲ್ಲವೆ? ನಾವು ಶಿವಾಜಿಯ ಕೊಲೆ ಮಾಡಿಬಿಟ್ಟರೆ ಜಯಸಿಂಹ ಮಹಾರಾಜರು ಮಾಡ ಲಾರದ ಕೆಲಸವನ್ನು ನಾವು ಸಾಧಿಸಿದಂತಾಗುತ್ತದೆ—ಎಂದು ನಿಶ್ಚಯ ಮಾಡಿ

ಕೊಂಡರು. ಈ ಕಾರ್ಯಕ್ಕೆ ಒಬ್ಬ ದರ್ವಿಯನ್ನು ಹುಡುಕಬೇಕು. ಅವನು ಒಬ್ಬ ರಜಪೂತನೇ ಆದರೆ ಇನ್ನೂ ಒಳ್ಳೆಯದು ಎಂದು ಮಸಲತ್ತು ಮಾಡಿದರು. ಆ ಶಿಬಿರದಲ್ಲಿ ಒಂದು ವಾರವು ಕಳೆಯಿತು. ಎರಡುವಾರಗಳು ಕಳೆದವು. ಸೈನ್ಯಗಳು ಅಲ್ಲಿಂದ ಬಿಟ್ಟು ಕದಲುವಂತೆ, ಜಯಸಿಂಹನುಅಪ್ಪಣೆ ಕೊಡಲಿಲ್ಲ. ಅಂತರಂಗ ಕಾರಣವು ಯಾರಿಗೂ ತಿಳಿದಿರಲಿಲ್ಲ. ಜಯಸಿಂಹನು ಬಿಜಾಪುರದ ಆಕ್ರಮಣವನ್ನು ಬಿಟ್ಟು ಹಿಂತಿರುಗಲು ಬಾದಷಹರಿಗೆ ಅಪ್ಪಣೆ ಬೇಡಿ ಗುಪ್ತಪತ್ರವನ್ನು ಕಳಿಸಿದ್ದನು. ವ್ಯಾಜ್ಯಾಂತರಗಳಿಂದ ಉತ್ತರ ನಿರೀಕ್ಷೆ ಮಾಡುತ್ತಾ ಅಲ್ಲಿ ಕಾಲಹರಣ ಮಾಡುತ್ತಿದ್ದನು.

ಶಿವಾಜಿಯ ಮೇಲೆ ನಡೆಯುತ್ತಿರುವ ಪಿತೂರಿಯು ಹೇಗೋ ಜಯಸಿಂಹನ ಕಿವಿಗೆ ಬಿದ್ದಿತ್ತು. ಅವನು ಬಹು ಜಾಗರೂಕತೆಯಿಂದ ಶಿವಾಜಿಯ ರಕ್ಷಣೆ ಮಾಡುತ್ತಿದ್ದನು. ಶಿವಾಜಿಯು ಅತ್ತಲೂ ಇಲ್ಲ, ಇತ್ತಲೂ ಇಲ್ಲ,—ಹೀಗೆ ಮಾರ್ಗಮಧ್ಯದಲ್ಲಿ ಕುಳಿತಿರುವುದು ಅವನಿಗೆ ಸರಿತೋರಲಿಲ್ಲ. ಅವನು ಜಯಸಿಂಹನನ್ನು ನೋಡಿ ಮಾತನಾಡಿದನು.

"ಮಹಾರಾಜರೇ, ಹೇಗೂ ನಾವು ಬಿಜಾಪುರದ ಆಕ್ರಮಣವನ್ನು ಬಿಟ್ಟು ಹಿಂತಿರುಗಿದ್ದೇವೆಂದು ನಾನು ಭಾವಿಸುತ್ತೇನೆ. ಯುದ್ಧದ ರೀತಿ ನೀತಿಗಳಲ್ಲಿ ನಿಮಗೂ ನನಗೆ ಬಹಳ ವ್ಯತ್ಯಾಸಗಳಿವೆ. ಏಕತ್ರ ನಮ್ಮ ಸೈನ್ಯಗಳು ಹೀಗೆ ಕೆಲಸವಿಲ್ಲದೆ ಒಂದೇ ಕಡೆ ನಿಂತರೆ, ಆಟಪಾಟಗಳಲ್ಲಿ ಮಾತುಕಥೆಗಳಲ್ಲಿ ಮರಾಠರು ರಜಪೂತರು ಮೊಗಲರೂ ಕಸಿವಿಸಿ ಮಾಡಿಕೊಳ್ಳುತ್ತಾರೆ. ಆದರಿಂದ ಸೇನಾಧಿಪತಿಗಳ ಮನಸ್ಸೂ ಕೆಡುತ್ತದೆ. ನನಗೆ ಅಪ್ಪಣೆ ಕೊಡಿರಿ. ಬಹುದಿವಸಗಳಿಂದ ನನ್ನ ಮನಸ್ಸಿನಲ್ಲಿ ಒಂದು ಆಕಾಂಕ್ಷೆ ಇದೆ. ಆ ಪನ್ಹಾಲ ದುರ್ಗವು ಬಹು ಮುಖ್ಯವಾದ ದುರ್ಗ. ಅದು ಬಿಜಾಪುರಿಗಳ ಕೈ ಸೇರಿ ಹೋಗಿದೆ. ಈಗ ಅದನ್ನು ಗೆದ್ದು ಮೊಗಲ್ ದರ್ಬಾರಿಗೆ ನನ್ನ ಕಾಣಿಕೆಯಾಗಿ ಒಪ್ಪಿಸುತ್ತೇನೆ" ಎಂದು ಕೇಳಿದನು.

ಜಯಸಿಂಹನಿಗೆ ಒಳ್ಳೆಯ ಸಮಯವು ಸಿಕ್ಕಿದಂತಾಯಿತು. ತನ್ನ ಶಿಬಿರದಲ್ಲಿ ದಿಲೀರ್ ಖಾನನಾಗಲೀ, ಅವನ ಕಡೆಯವರಾಗಲೀ ಶಿವಾಜಿಯ ಮೇಲೆ ಆಘಾತಮಾಡಿಬಿಟ್ಟರೆ,ತನಗೆ ಶಾಶ್ವತವಾದ ಅಪಖ್ಯಾತಿಯು ಬರುತ್ತದೆ. ಮತ್ತು ಮೊಗಲ್ ಬಾದಷಹನಿಗೆ—ಇಷ್ಟು ಸೇವೆ ಮಾಡಿರುವ ಈ ವೀರನನ್ನು

ಮೊಗಲ್ ಶಿಬಿರದಲ್ಲಿಯೇ ಬಲಿಕೊಡುವುದು ಬಾದಷಹರಿಗೆ ಕಳಂಕವಾಗುತ್ತದೆ—ಎಂದು ಯೋಚನೆ ಮಾಡಿ ಎರಡೊಂದು ಕೆಲಸ ಸಾಧಿತವಾಯಿತೆಂದು ಬಗೆದು ಶಿವಾಜಿಗೆ ಅಪ್ಪಣೆಕೊಟ್ಟು ಕಳಿಸಿದನು. ಅವನ ಜೊತೆಗೆ ತನ್ನ ಮಗ ಕಿರಾತಸಿಂಗನನ್ನೂ ರವಾನೆ ಹಾಕಿದನು. ಶಿವಾಜಿಯು ತನ್ನ ಸೈನ್ಯಸಮೇತವಾಗಿ ಪಸ್ಹಾಲದ ಕಡೆಗೆ ಹೊರಟುಹೋದನು.

ದಿಲೇಲ್ ಖಾನನ ಮಸಲತ್ತು ಕುಸಿದು ಬಿದ್ದಂತಾಯ್ತು. ದಿಲೇಲ್ ಖಾನನು ತನ್ನ ಸಂಗಡಿಗರೊಂದಿಗೆ ಹೇಳಿದನು—"ಈ ಜಯಸಿಂಹ ಮಹಾರಾಜನು ಬಹಳ ಕೃತ್ರಿಮಿ. ಶಿವಾಜಿಯನ್ನು ಈ ಶಿಬಿರದಿಂದ ತಪ್ಪಿಸಿ ಓಡಿಸಿದ್ದಾನೆ. ನಮ್ಮ ಸನ್ನಾಹವೆಲ್ಲಾ ವ್ಯರ್ಥವಾಯಿತು. ಆದರೆ ಈ ಮಹಾರಾಜನು ಇದರ ಪ್ರತಿಫಲವನ್ನು ಅನುಭವಿಸಲೇ ಬೇಕಾಗುತ್ತದೆ. ಇವನು ಮಾಡುತ್ತಿರುವ ಒಂದೊಂದು ಕಾರ್ಯಗಳೂ ಬಾದಷಹರಿಗೆ ವಿರೋಧವಾದವುಗಳೇ. ಇದಕ್ಕೆ ತಕ್ಕ ಪ್ರಾಯಶ್ಚಿತ್ತವಾಗುತ್ತದೆ. ಮೊಗಲ್ ಸಾಮ್ರಾಜ್ಯದಲ್ಲಿ ಇಷ್ಟು ಖ್ಯಾತಿ ಗಳಿಸಿದ ಈ ಮಹಾರಾಜನಿಗೆ ಈ ದುರ್ಬುದ್ಧಿಯು ಏಕೆ ಬಂದಿತೋ ದೇವರೇ ಬಲ್ಲ. ಇವನ ಅವನತಿಗೆ ಆರಂಭವಾಗಿದೆ. ಅವತಾರವು ಮುಗಿದಂತೆಯೇ" ಎಂದು ಹೇಳಿ ತನ್ನ ಕಡೆಯ ಗುಪ್ತಚಾರರನ್ನು ಡೆಲ್ಲಿಗೆ ಅಟ್ಟಿದನು. ಡೆಲ್ಲಿಯಲ್ಲಿ ಜಯಸಿಂಹನಿಗೆ ವಿರೋಧಿಗಳಾದ ಮಂತ್ರಿಗಳಿದ್ದರು. ದಿಲೇಲ್ ಖಾನನು ಅವರಿಗೆ ಜಯಸಿಂಹನ ಮೇಲೆ ದೂರುಗಳನ್ನು ಕಳಿಸಿಕೊಟ್ಟನು.

## ೧೩

ಶಿವಾಜಿಯು ತನ್ನ ಸೈನ್ಯಸಮೇತವಾಗಿ ಪನ್ಹಾಲಾಕ್ಕೆ ಸಮೀಪದಲ್ಲಿ ಬೀಡುಬಿಟ್ಟನು. ಜಯಸಿಂಹನು ಶಿವಾಜಿಯ ನಿಷ್ಠೆ ಮತ್ತು ಪರಾಕ್ರಮಗಳನ್ನು ವಿವರವಾಗಿ ಬಾದಷಹನಿಗೆ ಬರೆಸಿದ್ದನು. ಶಿವಾಜಿಯು ಬಿಜಾಪುರದ ಮೇಲೆ

ಯುದ್ಧ ಮಾಡಲೇಬೇಕೆಂದು ಹಠಮಾಡಿದನೆಂದೂ ತಾನೇ ಅದಕ್ಕೆ ಅವಕಾಶ ಕೊಡಲಿಲ್ಲವೆಂದೂ ಬರೆಸಿದ್ದನು. ಪನ್ಹಾಲಾ ಒಂದು ಆಯಕಟ್ಟಿನ ಜಾಗ. ಅದು ಬಿಜಾಪುರ ಮತ್ತು ಮೊಗಲ್ ರಾಜ್ಯಗಳ ಗಡಿಯಲ್ಲಿದೆ. ಅಲ್ಲಿ ಅತ್ಯಂತ ಸಮರ್ಥರಾದ ಸಿದ್ದೀ ಮಸೂದ್ ಮತ್ತು ರಣದುಲ್ಲಾಖಾನರೆಂಬ ಬಿಜಾಪುರಿ ಸೇನಾಧಿಪತಿಗಳಿದ್ದಾರೆ. ಅವರ ಕೈಯಲ್ಲಿ ಬಲವಾದ ಸೈನ್ಯವಿದೆ. ಅವರು ಮೊಗಲ್ ರಾಜ್ಯದ ಮೇಲೆ ಬಿದ್ದು ಕೊಳ್ಳೆ ಹೊಡೆಯುತ್ತಿದ್ದಾರೆ. ಅವರನ್ನು ನಾಶಮಾಡಲು ನಾನೇ ಶಿವಾಜಿಯನ್ನು ಅವನ ಸೈನ್ಯಸಮೇತ ಕಳಿಸಿಕೊಟ್ಟಿದ್ದೇನೆ—ಎಂದು ಜಯಸಿಂಹನು ಬಾದಶಹನಿಗೆ ಪತ್ರ ಬರೆದು ಕಳಿಸಿದನು. ಶಿವಾಜಿಯು ಪನ್ಹಾಲಾ ದುರ್ಗದ ಪ್ರತಿಯೊಂದು ಭಾಗವನ್ನೂ ಚೆನ್ನಾಗಿ ಅರಿತವನಾಗಿದ್ದನು. ನೇತಾಜಿಯನ್ನು ಮುಂದೆ ಕಳುಹಿಸಿ, ಹಿಂದುಗಡೆಯಿಂದ ನೇತಾಜಿಯು ಪನ್ಹಾಲಾವನ್ನು ಆಕ್ರಮಿಸಬೇಕೆಂದೂ ಶಿವಾಜಿಯು ಮುಂದುಗಡೆಯಿಂದ ಆಕ್ರಮಣ ಮಾಡುವುದಾಗಿಯೂ ಒಂದೇ ಏಟಿಗೆ ಪನ್ಹಾಲವನ್ನು ತೆಗೆದುಕೊಂಡು ಬಿಡಬೇಕೆಂದೂ ಮಾತುಕತೆಗಳನ್ನು ನಿಗದಿ ಮಾಡಿಕೊಂಡಿದ್ದರು. ಶಿವಾಜಿಯ ಸೈನ್ಯಗಳು ಅರ್ಧರಾತ್ರಿಯ ಮೇಲೆ ಪನ್ಹಾಲವನ್ನು ಮುತ್ತಿದವು. ಕೋಟೆಯೊಳಗೆ ಆರು ಸಹಸ್ರ ಬಿಜಾಪುರಿ ಸೈನ್ಯಗಳು ಸನ್ನದ್ಧವಾಗಿದ್ದವು. ಆ ಮೂರನೇ ಜಾವದಲ್ಲಿ ಮರಾಠರಿಗೂ ಬಿಜಾಪುರ ಸೈನಿಕರಿಗೂ ಘೋರ ಯುದ್ಧವಾಯಿತು ಬೆಳಕು ಹರಿಯಿತು. ಶಿವಾಜಿಯು ನೋಡಿದನು. ಸಾವಿರ ಮಂದಿ ಮರಾಠಾ ಸೈನಿಕರು ರಣರಂಗದಲ್ಲಿ ಸತ್ತು ಬಿದ್ದಿದ್ದರು. ಶಿವಾಜಿಯು ಇನ್ನು ಯುದ್ಧ ಮಾಡುವುದು ವ್ಯರ್ಥ ಎಂದುಕೊಂಡು ತನ್ನ ಸೈನಿಕರನ್ನು ನಡೆಸಿಕೊಂಡು ವಿಶಾಲಘಡಕ್ಕೆ ಹೋಗಿ ಸೇರಿದನು.

ಮೊದಲೇ ಮಾತನಾಡಿದಂತೆ ನೇತಾಜಿಯು ಆ ಸಮಯಕ್ಕೆ ಬರಲೇ ಇಲ್ಲ. ಅವನಿಗೇನಾಗಿದೆ, ಅವನು ಅತ್ತ ಕಡೆಯಿಂದ ಬಂದು ಮುತ್ತಿದ್ದರೆ ಪನ್ಹಾಲವು ನಮ್ಮ ಕೈಗೆ ಸಿಕ್ಕಿಹೋಗುತ್ತಿತ್ತು. ನೇತಾಜಿಗೆ ಏನಾದರೂ ಅಪಾಯ ಸಂಭವಿಸಿರಬಹುದೇ ಎಂದು ಚಿಂತಿಸತೊಡಗಿದನು. ನೇತಾಜಿಯ ಸಮಾಚಾರವನ್ನು ತಿಳಿದು ಬರಬೇಕೆಂದು ದೂತರನ್ನಟ್ಟಿದನು. ನೇತಾಜಿಯು ಆದಿಲ್‌ಶಾಹಿಯ ಸೈನ್ಯದ ಕಡೆಗೆ ಸೇರಿಹೋಗಿದ್ದಾನೆಂದು ಸಮಾಚಾರವು ಬಂದಿತು. ಶಿವಾಜಿಯು ಮೊದಲು ಇದನ್ನು ನಂಬಲೇ ಇಲ್ಲ. ಶಿವಾಜಿಯ

ಸಮಸಮ ಬಲ ಪರಾಕ್ರಮಶಾಲಿಯಾದ ನೇತಾಜಿಯು ಶತ್ರುಗಳ ಪಕ್ಷ ಸೇರುವುದೆಂದರೇನು ? ಇದೆಂಥಾ ಅನ್ಯಾಯ ? ನಮ್ಮ ಮರಾಠರಿಗೆ ಇದು ಎಂದೂ ಅಳಿಸಲಾರದ ಕಳಂಕವಾಗಿ ಉಳಿದುಕೊಂಡಿತಲ್ಲಾ ! ಎಷ್ಟೋ ಯುದ್ಧಗಳನ್ನು ಮಾಡಿದ್ದೇನೆ. ಆ ಯುದ್ಧಗಳಲ್ಲಿ ನೇತಾಜಿಯು ಸತ್ತು ಹೋಗಿದ್ದರೆ ನನಗೆ ಅಪಮಾನವಿರಲಿಲ್ಲ—ಎಂದು ಖೇದಪಟ್ಟುಕೊಂಡನು. ನೇತಾಜಿಗೆ ಜಹಗೀರುಗಳನ್ನು ಕೊಡುವುದಾಗಿಯೂ, ನಾಲ್ಕು ಲಕ್ಷ ಹೊನ್ನು ಕೊಡುವುದಾಗಿಯೂ ಪ್ರೇರೇಪಿಸಿ ಆದಿಲ್‌ಷಾಹಿಯ ಸೇನಾಧಿಪತಿಗಳು ಅವನನ್ನು ತಮ್ಮ ಕಡೆಗೆ ಸೆಳೆದುಬಿಟ್ಟಿದ್ದರು. ಅವರ ಇಷ್ಟದಂತೆ ಅವನು ಮೊಗಲರ ರಾಜ್ಯಗಳ ಮೇಲೆ ಧಾಳಿಮಾಡಲಾರಂಭಿಸಿದನು. ಈ ಸಮಾಚಾರವು ಜಯಸಿಂಹನಿಗೆ ತಿಳಿಯಿತು. ನೇತಾಜಿಯ ಪರಾಕ್ರಮವನ್ನು ಅವನು ಬಹಳ ಮೆಚ್ಚಿಕೊಂಡಿದ್ದನು. ಇವನು ಎರಡನೆಯ ಶಿವಾಜಿ ಎಂದು ಹೊಗಳುತ್ತಿದ್ದನು. ಅವನನ್ನು ನಿಗ್ರಹಿಸುವುದಕ್ಕಿಂತಲೂ ಸಂಗ್ರಹಿಸುವುದೇ ಒಳ್ಳೆಯ ಉಪಾಯವೆಂದು ತಿಳಿದು ಜಯಸಿಂಹನೂ ತನ್ನ ಮುತ್ಸದ್ದಿಗಳನ್ನು ಕಳಿಸಿ ನೇತಾಜಿಯೊಡನೆ ಸಂಧಾನ ಬೆಳೆಸಿದನು.

ನೇತಾಜಿಗೆ ಜಹಗೀರಿಯನ್ನು ಕೊಟ್ಟರು. ಐದು ಸಾವಿರ ಸೈನ್ಯದ ಸುಬೇದಾರಿಯನ್ನು ಕೊಟ್ಟರು ಐವತ್ತು ಸಹಸ್ರ ಹೊನ್ನುಗಳನ್ನು ನಗದಾಗಿ ಕೊಟ್ಟರು. ನೇತಾಜಿಯು ಮೊಗಲರ ಕಡೆ ಪೂರ್ತಿಯಾಗಿ ಸೇರಿಕೊಂಡನು. ಶಿವಾಜಿಯು ಈ ಸಮಾಚಾರಗಳನ್ನೆಲ್ಲಾ ವಿವರವಾಗಿ ತಿಳಿದುಕೊಂಡು ಖಿನ್ನನಾದನು. ಅವನ ಸ್ಥಾನಕ್ಕೆ ಪ್ರತಾಪರಾವ್ ಎಂಬ ಸೇನಾನಾಯಕನನ್ನು ನೇಮಿಸಿದನು. ಆದರೆ ಶಿವಾಜಿಯು ಬಹುಕಾಲದವರೆಗೆ ಈ ನೇತಾಜಿಯ ಅಧೋಗತಿಯನ್ನು ನೆನೆನೆನೆದು ದುಃಖಿಸುತ್ತಿದ್ದನು.

## ೧೪

ಜಯಸಿಂಹನು ಬಿಜಾಪುರದ ಮುತ್ತಿಗೆಯನ್ನು ಬಿಟ್ಟುಬಂದ ಮೇಲೆ ಹರ್ಷಚಿತ್ತನಾಗಿರಲಿಲ್ಲ. ದಖ್ಖನ್ನಿನ ಆಂದೋಳನವು ಸರ್ವದಾ ಅವನ ಮನಸ್ಸನ್ನು ಕುಕ್ಕುತ್ತಿತ್ತು. ದಖ್ಖನ್ನಿನಲ್ಲಿ ಸರ್ವತ್ರ ಗಲಭೆಗಳು ನಡೆಯುತ್ತಿತ್ತು. ಬಿಜಾಪುರ, ಗೋಲ್ಕಂಡಗಳು ಕೊನೆಮುಟ್ಟದಲ್ಲದೇ ಈ ದಖನ್ನಿನಲ್ಲಿ ಶಾಂತಿಯು ಉದ್ಭವಿಸುವುದಿಲ್ಲ. ಈ ಪುಂಡರನ್ನು ಅಣಗಿಸುವುದಕ್ಕೆ ಶಿವಾಜಿಯೊಬ್ಬನೇ ಸಮರ್ಥನು ಎಂದು ಜಯಸಿಂಹನಿಗೆ ಮನದಟ್ಟಾಗಿತ್ತು. ದಿನ ದಿನಕ್ಕೆ ಶಿವಾಜಿಯ ಮೇಲಿನ ಪ್ರೇಮವು ಜಯಸಿಂಹನಿಗೆ ಅಧಿಕವಾಗುತ್ತಾ ಬಂದಿದ್ದಿತು. ಶಿವಾಜಿಯಲ್ಲಿ ಎರಡೇ ಎರಡು ದೋಷಗಳನ್ನು ಅವನು ಕಂಡಿದ್ದನು. ಮೊದಲನೆಯ ದೋಷವೆಂದರೆ ಅವನಿಗೆ ಮುಸಲ್ಮಾನರ ನೆರಳು ಕಂಡರಾಗದು. ಮತ್ತೊಂದು ಯಾರಿಗೂ ಬಗ್ಗಿ ನಡೆಯುವ ಅಭ್ಯಾಸವೇ ಶಿವಾಜಿಗೆ ಇರಲಿಲ್ಲ. ಸಂದರ್ಭ ಒದಗಿದರೆ ಇವು ಸದ್ಗುಣಗಳಾಗಿಯೇ ಪರಿಣಮಿಸ ಬಾರದೇಕೆ ? ಶಿವಾಜಿಯು ಹಳ್ಳಿಯಲ್ಲಿ ಹುಟ್ಟಿದವನು. ಗುಡ್ಡಗಾಡಿನ ಜನ ರಲ್ಲಿ ಬೆಳೆದವನು. ಸಾಧುಸಂತರು ಅವನ ಗುರುಗಳು. ಇಂತಹವನಿಗೆ ಮೊಗಲ್ ದರ್ಬಾರಿನ ಮರ್ಯಾದೆಗಳೂ ಸಂಪ್ರದಾಯಗಳೂ ಹೇಗೆ ಸರಿಬೀಳ ಬೇಕು ? ಈ ಶಿವಾಜಿಯನ್ನೊಮ್ಮೆ ದೆಹಲಿಯ ದರ್ಬಾರಿಗೆ ಕಳುಹಿಸಬೇಕು. ಅಲ್ಲಿ ಇವನಿಗೆ ವಿಶೇಷ ಗೌರವ ದೊರೆಯುವಂತೆ ಮಾಡಿಸಬೇಕು. ಆಗ ಶಿವಾಜಿಯು ಬಾದಷಹನಿಗೆ ಸರಿಯಾದ ಮಿತ್ರನಾಗುತ್ತಾನೆ. ಬಾದಷಹನನ್ನು ಈ ಹಿಂದೂ ಜನರೆಲ್ಲರೂ ತಪ್ಪು ತಪ್ಪಾಗಿ ಭಾವಿಸುತ್ತಾರೆ. ಬಾದಷಹನು ನಿಜವಾದ ಪರಾಕ್ರಮಿಗಳನ್ನೂ, ಶೂರರನ್ನೂ, ಸಾಹಸಿಗಳನ್ನೂ ಕಂಡರೆ ಪ್ರೀತಿಸುತ್ತಾನೆ, ಗೌರವಿಸುತ್ತಾನೆ. ರಾಜ್ಯ ಶಿಖರಗಳ ಮೇಲೆ ಕೊಂಡು ಹೋಗಿಡುತ್ತಾನೆ—ಎಂದು ಆಲೋಚನೆ ಮಾಡಿದನು. ಬಾದಷಹನಿಗೆ ಜಯಸಿಂಹನು ಈ ವಿಚಾರವಾಗಿ ಅನೇಕ ಪತ್ರಗಳನ್ನು ಬರೆದಿದ್ದನು. ಅವು ಗಳಲ್ಲಿ ಒಂದು ಪತ್ರವು ಈ ರೀತಿಯಾಗಿದ್ದಿತು.

"ಷರ್ಹಾಷಹಾ ಔರಂಗಸೇಬ್ ಬಾದಷಹರವರೇ,

"ಈ ದಖ್ಖನ್ ರಾಜ್ಯಗಳೆಲ್ಲವೂ ಪ್ರಕ್ಷುಬ್ಧವಾಗಿದೆ. ಕೊಂಕಣದ ಅವಸ್ಥೆಯೂ ಇದೇ ರೀತಿಯಾಗಿದೆ. ಇಲ್ಲಿರುವ ಬಿಜಾಪುರ. ಗೋಲ್ಕಂಡಗಳ ಸುಲ್ತಾನರನ್ನು ನಿರ್ಮೂಲಮಾಡಿದಲ್ಲದೇ ಈ ದಖ್ಖನ್ ಪ್ರದೇಶವು ಶಾಂತ ವಾಗುವುದಿಲ್ಲ. ಸುಭಿಕ್ಷವಾಗುವದಿಲ್ಲ. ಮೊಗಲ್ ಸಾಮ್ರಾಜ್ಯದ ಕೈಸೇರು ವದಿಲ್ಲ. ಆ ಸುಲ್ತಾನರುಗಳಿಬ್ಬರೂ ಅತ್ಯಂತ ಅಸಮರ್ಥರು. ಭೋಗ ಪರಾಯಣರು. ಈ ಅರಾಜಕತೆಗೆ ಇದೇ ಮೂಲಕಾರಣ. ಪಾಳೆಯ ಗಾರರೂ. ಚಿಕ್ಕಚಿಕ್ಕ ರಾಜರೂ ಎಲ್ಲೆಲ್ಲಿಯೂ ಕೊಳ್ಳೆಹೊಡೆಯುತ್ತಾರೆ. ಬಿಜಾಪುರದ ಸೇನಾಧಿಪತಿಗಳು ಹದ್ದುಮೀರಿ ಸೈನ್ಯಗಳನ್ನು ಕಟ್ಟಿಕೊಂಡು ಮತ್ತೊಂದು ಕಡೆ ಕೊಳ್ಳೆ ಹೊಡೆಯುತ್ತಾರೆ. ಗಡಿ ಪ್ರಾಂತ್ಯಗಳಲ್ಲಿರುವ ನಮ್ಮ ರಾಜ್ಯದ ಮೇಲೆಯೂ ಇವರುಗಳು ಸೂರೆಮಾಡುತ್ತಾರೆ. ಇವಕ್ಕೆಲ್ಲಾ ತಕ್ಕ ಮನುಷ್ಯನೆಂದರೆ ಶಿವಾಜಿಯೊಬ್ಬನೇ. ಅನೇಕ ಮರಾಠಾ ಸರದಾರರೂ ಅವರ ಕಡೆಗೇ ಸೇರಿಹೋಗಿದ್ದಾರೆ. ಈ ಶಿವಾಜಿಯೂ ಅವರ ಕಡೆ ಸೇರಿ ಬಿಟ್ಟರೆ ನಮಗೆ ದಕ್ಷಿಣದ ಆಸೆಯೇ ಇಲ್ಲದಂತಾಗುತ್ತದೆ. ಇವನನ್ನು ನಮ್ಮ ಕಡೆಗೆ ಬೇಗ ಸೇರಿಸಿಕೊಂಡುಬಿಡಬೇಕು. ನಾನು ಅವನನ್ನು ಬಹುಮಟ್ಟಿಗೆ ಹದಮಾಡಿ ಇಟ್ಟಿದ್ದೇನೆ. ಶಿವಾಜಿಯನ್ನು ದೆಹಲಿಯ ದರ್ಬಾರಿಗೆ ಕರೆಸಿಕೊಂಡು ವಿಶೇಷ ಗೌರವ ಕೊಟ್ಟು ಈ ದಖ್ಖನ್ನಿನ ವಿಜಯಕಾರ್ಯಕ್ಕೆ ಅವನನ್ನು ನೇಮಿಸಿಬಿಟ್ಟರೆ ಇವರನ್ನೆಲ್ಲಾ ಸದೆಬಡಿದು ದಖ್ಖನ್ ರಾಜ್ಯ ವನ್ನು ಹತೋಟಿಗೆ ತರುತ್ತಾನೆ. ಅವನು ನಿಷ್ಠಾವಂತನಾಗಿ ನಡೆದು ಕೊಳ್ಳುತ್ತಾನೆ. ಅವನಲ್ಲಿ ತಮಗೆ ಕಾಣಬಹುದಾದ ದೋಷವೆಂದರೆ ಒಂದೇ ಒಂದು. ಹಿಂದೂ ಮತಾಭಿಮಾನದ ಹುಚ್ಚು ಅವನ ತಲೆಯಲ್ಲಿ ತುಂಬಿಕೊಂಡಿದೆ. ಅವನು ಕಾಡುಜನರೊಡನೆ ಬೆಳೆದವನು. ಸಾಧು ಸಂತರೊಡನೆ ಸರ್ವದಾ ಸಹವಾಸ ಮಾಡುವವನು. ದೆಹಲಿಯ ದರ್ಬಾರಿನ ಅನುಗ್ರಹ ಪ್ರಕಾಶಗಳು ಅವನ ಮೇಲೆ ಬಿದ್ದರೆ ಅವನು ಸರಿಹೋಗುತ್ತಾನೆ. ಖಾವಂದರವರು ಈ ನನ್ನ ಕೋರಿಕೆಯನ್ನು ಸಫಲಗೊಳಿಸಿದರೆ ಇಲ್ಲಿ ಅವನನ್ನು ಕೆಲಸಕ್ಕೆ ಹಚ್ಚಿ ನಾನು ದೆಹಲಿಗೆ ತಮ್ಮ ಸನ್ನಿಧಾನಕ್ಕೆ

ಹೊರಟುಬರುತ್ತೇನೆ. ನನಗೆ ಈ ದಖ್ಖನ್ನಿನ ವಾತಾವರಣವು ಪ್ರಿಯಕರವಾಗಿಲ್ಲ"

"ಜಯಸಿಂಹ"

ಈ ಪತ್ರವು ಬಾದಷಹನ ಕೈ ಸೇರಿತು. ಬಿಜಾಪುರದಿಂದ ಜಯಸಿಂಹನು ಹಿಂತಿರುಗಿದ ಮೇಲೆ ಅವನು ಬಾದಷಹನ ಆಗ್ರಹಪಾತ್ರನಾಗಿದ್ದಾನೆಂದು ದರಬಾರಿಗಳೆಲ್ಲಾ ಭಾವನೆ ಮಾಡಿದ್ದರು. ಎಷ್ಟೋ ವಿಧವಾಗಿ ಜಯಸಿಂಹನ ಮೇಲೆ ಬಾದಷಹನಲ್ಲಿ ದೂರು ಕೊಟ್ಟು ಅವನ ಕಿವಿಯನ್ನು ಬೆಚ್ಚಗೆ ಮಾಡಿದ್ದರು. ಆದರೆ ಔರಂಗಜೇಬನ ಹೃದಯದ ಅಂತರಂಗವು ಬೇರೆಯಾಗಿತ್ತು. "ನಾನು ಹತ್ತು ವರ್ಷಗಳ ಹಿಂದೆಯೇ ಬಿಜಾಪುರವನ್ನು ಮುತ್ತಿಗೆ ಹಾಕಿ ಬಿಟ್ಟು ಬಂದೆನಲ್ಲವೇ? ಈ ವೃದ್ಧಾಪ್ಯದಲ್ಲಿ ಬಲಾಬಲಗಳನ್ನು ನೋಡಿ ಅಳೆದುಕೊಂಡು ಜಯಸಿಂಹ ಮಹಾರಾಜನು ಬಿಟ್ಟುಬಂದಿದ್ದಾನೆ. ಅದನ್ನು ದೋಷವೆಂದು ಎಣಿಸಲಾದೀತೇ? ಶಿವಾಜಿಯನ್ನು ಪೂರ್ಣವಾಗಿ ಹತೋಟಿಗೆ ತಂದಿದ್ದಾನೆ. ಶಿವಾಜಿಯು ಸ್ವಸಾಮರ್ಥ್ಯದಿಂದ ಸಂಪಾದಿಸಿದ್ದ ರಾಜ್ಯಗಳನ್ನೆಲ್ಲಾ ಮೊಗಲಾಯಿ ಆಡಳಿತಕ್ಕೆ ಸೇರಿಸಿದ್ದಾನೆ. ಇವೆಲ್ಲಾ ಜಯಸಿಂಹನ ರಾಜನೀತಿಯ ಫಲವಲ್ಲವೇ?" ಎಂದುಕೊಳ್ಳುತ್ತಿದ್ದನು. ಇಷ್ಟೇ ಅಲ್ಲ. ಅಂತಃಪುರದಲ್ಲಿ ಉದಯಪುರಿ ಬೇಗಂ ಒಂದು ಕಡೆ, ರೋಷನಾರಳು ಮತ್ತೊಂದು ಕಡೆ, ಜಯಸಿಂಹನಿಗೆ ಪೂರ್ಣ ಬೆಂಬಲ ಕೊಡುತ್ತಿದ್ದ ಶಕ್ತಿ ದೇವತೆಗಳಂತಿದ್ದರು. ಈ ಅಂತರಂಗವು ದರ್ಬಾರಿನಲ್ಲಿ ಅನೇಕರಿಗೆ ತಿಳಿದಿದ್ದರೂ ಶೀಘ್ರಕೋಪಿ ಬಾದಷಹನನ್ನು ಉದ್ರೇಕಗೊಳಿಸಬಹುದೆಂಬ ಹವಣಿಕೆಯಿಂದ ವಿರೋಧಿಗಳು ಸತತ ಪ್ರಯತ್ನ ಮಾಡುತ್ತಲೇ ಇದ್ದರು. ಬಾದಷಹನು ಜಯಸಿಂಹನಿಗೆ ಪತ್ರ ಬರೆದು ಕಳುಹಿಸಿಕೊಟ್ಟನು.

"ದಖ್ಖನ್ನಿನ ರಾಜಕೀಯ ವಿಷಯಗಳಲ್ಲಿ ಮಿರ್ಜಾರಾಜರವರ ಸಮಾಲೋಚನೆಗಳು ಪ್ರಶಸ್ತವಾಗಿದೆಯೆಂದೇ ನಮ್ಮ ಭಾವನೆ. ಶಿವಾಜಿಯನ್ನು ದರ್ಬಾರಿಗೆ ಕಳುಹಿಸಿಕೊಡಿರಿ. ಅವನಿಗೆ ಇಲ್ಲಿ ಬಹಳ ಗೌರವವನ್ನು ಮಾಡಿ ಕಳುಹಿಸಿಕೊಡುತ್ತೇವೆ" ಎಂಬುದಾಗಿ ಬಾದಷಹನು ಪತ್ರ ಬರೆದು ಕಳುಹಿಸಿದನು.

ಜಯಸಿಂಹನು ಶಿವಾಜಿಯನ್ನು ಕರೆಸಿ ಪ್ರಸ್ತಾಪಮಾಡಿದನು. "ಬಾದಷಹರು ನಿನ್ನನ್ನು ನೋಡಬೇಕೆಂದು ವಿಶೇಷವಾಗಿ ಬಯಸುತ್ತಾರೆ. ಪುರಂಧರದ ಕೌಲು ಮಾಡಿಕೊಂಡಾಗ ಬಾದಷಹರ ಸಮ್ಮುಖಕ್ಕೆ ಹೋಗು ವುದಿಲ್ಲವೆಂದು ಹೇಳಿದ್ದೀಯೆ. ಆ ಬಗ್ಗೆ ನಾನೂ ವಚನ ಕೊಟ್ಟಿದ್ದೇನೆ. ಈಗ ಪರಿಸ್ಥಿತಿಯು ಬಹಳ ಬದಲಾವಣೆಯಾಗಿದೆ. ನೀನು ನಮ್ಮವನೇ ಆಗಿ ಬಿಟ್ಟಿದ್ದೀಯೆ. ಹೆಚ್ಚೇಕೆ, ನೀನು ನಮ್ಮ ಬಲಗೈ ಆಗಿದ್ದೀ ಎಂದು ಈ ದಕ್ಖನ್ ರಾಜ್ಯಕ್ಕೆ ರಾಜ್ಯವೇ ಸಾರಿ ಹೇಳುತ್ತಿದೆ. ನೀನು ದೆಹಲಿಗೆ ಹೋಗುವುದು ದರ್ಬಾರಿನ ಅಧಿಕಾರಿಯಂತಲ್ಲ, ಸೇವಕನಂತೆಯೂ ಅಲ್ಲ. ಬಾದಷಹರು ನಿನ್ನನ್ನು ಸ್ನೇಹಿತನಂತೆ ಪುರಸ್ಕರಿಸಿ, ಗೌರವಿಸಲು ಒಪ್ಪಿಕೊಂಡಿ ದ್ದಾರೆ. ನೀನು ದೆಹಲಿಯ ದರ್ಬಾರಿಗೆ ಹೋಗಿ ಗೌರವವನ್ನು ಪಡೆದು ಬಂದರೆ ನಿನ್ನನ್ನು ಈ ದಖ್ಖನ್ನಿನಲ್ಲಿ ಮೊಗಲ್ ಸಾಮ್ರಾಜ್ಯದ ಸರ್ವಾಧಿಕಾರಿ ಯನ್ನಾಗಿ ಮಾಡಬೇಕೆಂದು ನನ್ನ ಆಸೆ ಇದೆ. ದೆಹಲಿಗೆ ಪ್ರಯಾಣಮಾಡು" ಎಂದು ಹೇಳಿದನು.

ಶಿವಾಜಿಯು "ಮಹಾರಾಜರವರೇ. ತಮ್ಮ ಪ್ರೀತಿಯ ಮಾತುಗಳನ್ನು ಅಲ್ಲಗೆಳೆಯುವ ಮನಸ್ಸು ನನಗಿಲ್ಲ. ಆದರೆ ನಮ್ಮಾರೊಬ್ಬರೂ ಬಾದಷಹ ನನ್ನು ನಂಬುವುದೇ ಇಲ್ಲ. ನಿಮ್ಮ ಗೌರವದಲ್ಲಿ ನಮ್ಮವರಿಗೆಲ್ಲಾ ಬಹಳ ವಿಶ್ವಾಸವಿದೆ. ನಾನು ನಮ್ಮ ಸಂಗಡಿಗರೊಡನೆ ಸಮಾಲೋಚನೆ ಮಾಡಿ ತಮಗೆ ಉತ್ತರ ಕೊಡುತ್ತೇನೆ" ಎಂದು ಹೇಳಿ ರಾಯಘಡಕ್ಕೆ ಹಿಂತಿರುಗಿದನು.

ಮಂತ್ರಿಗಳನ್ನೂ ಸೇನಾಧಿಪತಿಗಳನ್ನೂ ಸಭೆ ಸೇರಿಸಿ ದೆಹಲಿಯ ದರ್ಬಾರಿಗೆ ಹೋಗುವ ಪ್ರಕರಣವನ್ನು ಅವರ ಮುಂದೆ ವಿವರಿಸಿ ಹೇಳಿದನು.

ರಘುನಾಥಬಲ್ಲಾಳನು ಇದಕ್ಕೊಪ್ಪಲಿಲ್ಲ "ಮಹಾರಾಜರೇ.. ನಾನೊಂದೇ ಮಾತನ್ನು ಹೇಳುತ್ತೇನೆ. ಈ ತುರುಕರ ಸಹವಾಸ ನಮಗೆ ಎಂದೆಂದಿಗೂ ಬೇಡ. ಇದ್ದರೆ ಅವರ ವಿರೋಧವೇ ನಮಗಿರಲಿ. ಅಲ್ಲಿಗೆ ಹೋಗಿ ನಾವು ಪಡೆಯಬಹುದಾದ ಪ್ರಯೋಜನವೇನಿದೆ? ಏನಾದರೂ ರಾಜಕಾರ್ಯಗಳಿದ್ದರೆ ಮಂತ್ರಿಗಳೋ, ಸೇನಾಧಿಪತಿಗಳೋ ಹೋಗಿಬರಬಹುದು. ಅಥವಾ ಸರ್ವ ತಂತ್ರ ಸ್ವತಂತ್ರರಾದ ಜಯಸಿಂಹ ಮಹಾರಾಜರೇ ಎಲ್ಲವನ್ನೂ ಮಂಜೂರು ಮಾಡಬಹುದು. ಬಾದಷಹನಿಗಿರುವ ಸಮಸ್ತ ಅಧಿಕಾರಗಳೂ ದಖ್ಖನ್ನಿನಲ್ಲಿ

ಜಯಸಿಂಹ ಮಹಾರಾಜರಿಗೆ ಸಂಪೂರ್ಣವಾಗಿದೆ. ಬಾದಷಹನು ನಿಮ್ಮನ್ನು ನೋಡಬೇಕೆಂಬುದರ ಅರ್ಥವೇನು ? ಇದರಲ್ಲಿ ಏನೋ ಕಪಟನೀತಿ ಇರ ವಂತೆ ನನಗೆ ತೋರುತ್ತದೆ. ನೀವು ಒಬ್ಬರಿದ್ದು ನಾವೆಲ್ಲರೂ ಸತ್ತುಹೋದರೂ ಮಹಾರಾಷ್ಟ್ರವನ್ನು ಉಜ್ಜೀವನ ಗೊಳಿಸಬಲ್ಲಿರಿ. ಹಿಂದೂ ಧರ್ಮವನ್ನು ಉದ್ಧಾರ ಮಾಡಬಲ್ಲಿರಿ. ದುರ್ದೈವಶಾತ್ ನಿಮಗೇನಾದರೂ ಅಪಾಯ ತಟ್ಟಿದರೆ ನಾವೆಲ್ಲರೂ ಬದುಕಿದ್ದರೂ ಸತ್ತಂತೆಯೇ. ಈ ಮಹಾರಾಷ್ಟ್ರವು ಮೊಗಲರ ಪದಾಘಾತದಿಂದ ಪುಡಿಪುಡಿಯಾಗಿ ಹೋಗುತ್ತದೆ" ಎಂದನು.

ತಾನಾಜಿಯು "ಶಿವಾಜೀ ಪ್ರಭುಗಳೇ. ಮಂತ್ರಿಗಳು ಹೇಳುವ ಮಾತಿನಲ್ಲಿ ದೂರದೃಷ್ಟಿ ಇದೆ. ಬಹಳ ರಾಜನೀತಿಯೂ ತುಂಬಿದೆ. ಆದರೆ ನನ್ನದೊಂದು ಮಾತಿದೆ. ಈ ಜಯಸಿಂಹ ಮಹಾರಾಜರು ಇಲ್ಲಿಗೆ ಬಂದ ಹೊಸತರಿಯಲ್ಲಿ ಏನೇನೋ ಭಾವನೆಗಳಿದ್ದವು, ಈಗ ನೋಡಿ. ಎಲ್ಲವೂ ಪರಿ ವರ್ತನೆಯಾಗಿದೆ. ಬಾದಷಹನನ್ನು ಕಂಡರೆ ನಾವು ಭಯಪಡಲೇಕೆ ? ಅಪಾಯವೇನೋ ಇದೆ ಎಂದುಕೊಳ್ಳೋಣ. ನಾವು ಎಷ್ಟೋ ಅಪಾಯಗಳಿಗೆ ತಲೆಕೊಟ್ಟು ನುಗ್ಗಿ ಜಯಿಸಿಬಂದಿಲ್ಲವೇ? ಆ ಬಾದಷಹನು ನಮ್ಮ ಮಹಾರಾಜ ರನ್ನು ಒಂದು ಬಾರಿ ನೋಡಲಿ. ಅವನಿಗೆ ನಾವು ಎಂತಹ ಪರಾಕ್ರಮಿ ಗಳೆಂಬುದು ತಿಳಿದೇ ಇದೆ. ಹಿಂದೂ ರಾಜನು ಮೊಗಲ್ ಸಾಮ್ರಾಟನನ್ನು ಲಕ್ಷ್ಯಮಾಡದೇ ದಹಲಿಯನ್ನು ಗಡಗುಟ್ಟಿಸಿ ಬಂದನೆಂಬ ಕೀರ್ತಿಯು ಈ ಇಡೀ ಹಿಂದೂಸ್ಥಾನದಲ್ಲಿ ವ್ಯಾಪಿಸುತ್ತದೆ. ಅಂಜುತ್ತಾ ಅಂಜುತ್ತಾ ಹಿಂಜರಿಯು ತ್ತಿದ್ದರೆ ಈ ಬಾದಷಹನ ಅಂಜಿಕೆಯು ನಮಗೆ ಉಳಿದೇ ಉಳಿಯುತ್ತದೆ. ನಮ್ಮ ಮಹಾರಾಜರು ದೆಹಲಿಗೆ ಒಂದು ಬಾರಿ ಹೋಗಿ ಬರುವುದರಲ್ಲಿ ಬಹಳ ಖರಾಮತ್ತಿದೆ. ಇದೇ ನಮ್ಮ ಅಭಿಪ್ರಾಯ" ಎಂದನು.

ಅಲ್ಲಿ ನೆರೆದಿದ್ದ ಸೇನಾಧಿಪತಿಗಳು, ಮಂತ್ರಿಗಳೂ ಅದನ್ನೇ ಅನು ಮೋದಿಸಿದರು. ಶಿವಾಜಿಗೆ ದೆಹಲಿಗೆ ಹೋಗಿ ಬಾದಷಹನನ್ನು ನೋಡಿ ಬರುವುದರಲ್ಲಿ ಒಂದು ಕುತೂಹಲವಿದ್ದಿತು. ಅಭಿನಿವೇಶವೂ ಇತ್ತು. ಅಭಿನಿವೇಶ ವೆಂದರೆ ಪಶ್ಚಿಮದಲ್ಲಿ ಜಂಜೀರಾ ದ್ವೀಪದ ಮೇಲೆ ಶಿವಾಜಿಯು ಕಣ್ಣಿದ್ದಿತು. ಬಾದಷಹನಿಂದ ಆ ದ್ವೀಪವನ್ನು ಪುರಸ್ಕಾರವಾಗಿ ಪಡೆದುಬಿಟ್ಟರೆ ಅಲ್ಲಿ ಹಡಗು ಗಳ ನಿರ್ಮಾಣಮಾಡಿ ಜಲಸೈನ್ಯವನ್ನಿಟ್ಟು ಮಹಾರಾಷ್ಟ್ರದ ವಿದೇಶೀ

ವ್ಯಾಪಾರವನ್ನು ಬಲಪಡಿಸಬೇಕು. ಈ ಮರಾಠಾ ರಾಜ್ಯವನ್ನು ಆ ಪಶ್ಚಿಮ ತೀರದವರೆಗೆ ಹಬ್ಬಿಸಬೇಕು. ಈ ರಾಜ್ಯಕ್ಕೆ ಆ ಜಂಜೀರಾ ಹಿಡಿದುಬಿಟ್ಟರೆ ಪಶ್ಚಿಮದ ಕಡೆ ನಿರುಪಾಧಿಕವಾದ ಭದ್ರತೆಯನ್ನುಂಟು ಮಾಡಿದಂತಾಗುತ್ತದೆ. ಇದು ಶಿವಾಜಿಯ ಅಂತರಂಗದ ಆಸೆಯಾಗಿತ್ತು.

ಕುತೂಹಲವೆಂದರೆ—ಈ ಔರಂಗಜೇಬನು ಎಂತಹ ಮನುಷ್ಯ? ಅವನ ಆಜ್ಞೆಯು ಇಷ್ಟು ಅಪ್ರತಿಹತವಾಗಿ ನಡೆಯುವಂತಹ ಸಾಮರ್ಥ್ಯವು ಅವನಿಗೆ ಹೇಗೆ ಬಂದಿದೆ? ಮಹಾರಾಜ ಜಯಸಿಂಹರಂತಹ ರಜಪೂತ ಮಹಾಪುರುಷರು ಕೂಡ ಈ ಬಾದಷಹನಿಗೆ ಇಷ್ಟೊಂದು ಹೆದರಿ ನಡೆಯುವಂತಹ ರಹಸ್ಯವೇನಿದೆ? —ಎಂಬುದನ್ನು ಪ್ರತ್ಯಕ್ಷ ಕಂಡುಹಿಡಿಯಬೇಕು. ನನ್ನ ಮೇಲೆ ಅಪಾಯ ವೆಂದರೇನು? ಬಾದಷಹನು ನನ್ನನ್ನು ಕೊಲೆಮಾಡಬಹುದು. ರಕ್ಷಿಸುವವನು ಶ್ರೀ ರಾಮಚಂದ್ರಸಿದ್ಧಾನೆ. ಕೊಲೆಯೆಂಬುದು ಮಹತ್ಕಾರ್ಯವೇನೂ ಅಲ್ಲ. ಸಣ್ಣ ಕಾರ್ಯ. ಯಾರು ಎಲ್ಲಿ ಬೇಕಾದರೂ ಅದನ್ನು ಮಾಡಿಬಿಡಬಹುದು. ಒಂದು ಕ್ಷಣ, ಒಂದೇ ಒಂದು ಕ್ಷಣ ಅಫಜಲ್‌ಖಾನನ ಕಡೆಗಿದ್ದಿದ್ದರೆ ನಾನೇ ಅಂದು ಕೊಲೆಯಾಗುತ್ತಿದ್ದೆ. ದೇವರ ಕೃಪೆ ಆ ಕ್ಷಣದಲ್ಲಿ ನನ್ನ ಕಡೆ ಒಲಿಯಿತು. ಇನ್ನೊಂದು ಪರ್ಯಾಯ ನನ್ನನ್ನು ಬಾದಷಹನು ಹಿಡಿದು ಬಂಧನದಲ್ಲಿ ಇಡಿಸಬಹುದು. ಎಂತಹ ಬಂಧನದಿಂದಲಾದರೂ ನಾನು ತಪ್ಪಿಸಿ ಕೊಂಡು ಬರಬಲ್ಲೆ—ಎಂದು ನಿರ್ಧಾರ ಮಾಡಿಕೊಂಡನು ಎಲ್ಲಕ್ಕೂ ಕಡೆಯ ಆಜ್ಞೆ ಮಾತೂಶ್ರೀಯವರದು. "ಮಾತೂಶ್ರೀ ಜೀಜಾಬಾಯಿ ಯವರನ್ನು ಕೇಳಿಬಿಡುತ್ತೇನೆ. ಅವರ ಮಾತು ಅಖೈರು ಮಾತು" ಎಂದು ಕೊಂಡನು.

ಶಿವಾಜಿಯು ಜೀಜಾಬಾಯಿಯವರಲ್ಲಿಗೆ ಹೋಗಿ ಅವರ ಪಾದಗಳಿಗೆರಗಿ "ತಾಯೀ, ಬಾದಷಹರ ದರ್ಬಾರಿಗೆ ಹೋಗಿಬರುವ ಪ್ರಸಂಗ ಒದಗಿದೆ, ಅಪ್ಪಣೆಯೇ!" ಎಂದು ಕೇಳಿದನು.

ಜೀಜಾಬಾಯಿಯು ಎರಡು ಹಸ್ತಗಳನ್ನೂ ಮಗನ ತಲೆಯ ಮೇಲಿಟ್ಟು, "ಹೋಗಿ ಬಾ, ಶಿವಾ, ರಾಮರು ಕಾಪಾಡುತ್ತಾರೆ" ಎಂದು ಹೇಳಿ ಕಳುಹಿಸಿದಳು.

ಶಿವಾಜಿಯು ಮಾತೃದೇವತೆಯ ಅಪ್ಪಣೆಯನ್ನು ಪಡೆದು ಜಯಸಿಂಹನ ಸಮ್ಮುಖಕ್ಕೆ ಹೋಗಿ "ಮಹಾರಾಜರೇ, ನಿಮ್ಮ ಇಷ್ಟದಂತೆ ದೆಹಲಿಯ ದರ್ಬಾರಿಗೆ ಹೋಗಲು ಸಿದ್ಧವಾಗಿದ್ದೇನೆ ನನ್ನ ಸಂಗಡಿಗರೆಲ್ಲರೂ ಇದಕ್ಕೆ ಒಪ್ಪಿದ್ದಾರೆ. ನನ್ನ ಮಂತ್ರಿಗಳು ನನ್ನ ಮೇಲಿರುವ ಪ್ರೇಮದಿಂದ ನನಗೆ ಏನಾದರೂ ಅಪಾಯ ಸಂಭವಿಸಬಹುದೆಂದು ಶಂಕಿಸುತ್ತಾರೆ. ಅವೆಲ್ಲಾ ತಮಗೆ ಸೇರಿದ್ದು. ನಾನು ದೆಹಲಿಯ ದರ್ಬಾರಿಗೆ ಹೋಗಲು ಸಿದ್ಧವಾಗಿದ್ದೇನೆ" ಎಂದು ಹೇಳಿದನು.

ಜಯಸಿಂಹನು "ಶಿವಾಜೀ. ನಿನ್ನ ಮಾನ, ಪ್ರಾಣ ಸಂರಕ್ಷಣೆಯು ನನಗೆ ಸೇರಿದ್ದು. ನನ್ನ ಮಗ ಕುಮಾರ ರಾಮಸಿಂಹನನ್ನು ನಿನ್ನ ರಕ್ಷಣೆಗೆ ಕಳುಹಿಸುತ್ತೇನೆ" ಎಂದು ಹೇಳಿ ಶಿವಾಜಿಯ ಕೈ ಮೇಲೆ ಕೈ ತಟ್ಟಿ ಪ್ರಮಾಣ ಮಾಡಿದನು.

ಶಿವಾಜಿಯು ತನ್ನ ರಾಜಧಾನಿಗೆ ಹೋಗಿ ಎಲ್ಲವನ್ನೂ ಸಿದ್ಧಪಡಿಸಿದನು. ಮಾತೂಶ್ರೀ ಜೀಜಾಬಾಯಿಯವರು ತಾನು ಹಿಂದಿರುಗಿ ಬರುವವರೆಗೆ ತನ್ನ ಸ್ಥಾನದಲ್ಲಿ ರಾಜ್ಯದ ಅಧಿಷ್ಠಾತ್ರಿಯಾಗಿರಬೇಕೆಂದು ಗೊತ್ತುಮಾಡಿದನು ಮಂತ್ರಿಗಳೂ ಸೇನಾಧಿಪತಿಗಳೂ ತಾನಿರಲಿ ಇಲ್ಲದಿರಲಿ, ಬದುಕಿಗಲಿ ಸತ್ತು ಹೋಗಲಿ, ತಮ್ಮ ತಮ್ಮ ಕಾರ್ಯಗಳಲ್ಲಿ ರಾಜ್ಯನಿಷ್ಠೆಯಿಂದ ಜಾಗರೂಕರಾಗಿರಬೇಕೆಂದು ಅಪ್ಪಣೆ ಮಾಡಿದನು. ಅಧಿಕಾರಿಗಳೆಲ್ಲರೂ ಶಾಸನಬದ್ಧರಾಗಿ ನ್ಯಾಯಬದ್ಧರಾಗಿ ಧರ್ಮದಿಂದ ನಡೆಯಬೇಕೆಂದು ಬುದ್ಧಿವಾದ ಹೇಳಿದನು. ತನ್ನ ಅಧೀನದಲ್ಲಿದ್ದ ದುರ್ಗಗಳಿಗೆಲ್ಲಾ ಭೇಟಿಯಿತ್ತು ಅಧಿಕಾರಿಗಳಿಗೆ ಕಾವಲುಗಾರರಿಗೆ ಮಹಾಜನಗಳಿಗೆ ಎಲ್ಲರಿಗೂ ತನ್ನ ದೆಹಲಿಯ ಪಯಣವನ್ನು ತಿಳಿಸಿ, ಪರಸ್ಪರ ಸ್ನೇಹ ವಿಶ್ವಾಸಗಳಿಂದಲೂ ಧರ್ಮದಿಂದಲೂ ನಡೆಯಬೇಕೆಂದು ಸಂದೇಶವಿತ್ತನು. ಇಡೀ ಪ್ರಜಾವರ್ಗವು ಶ್ರೀ ರಾಮಚಂದ್ರನು ದಂಡಕಾರಣ್ಯಕ್ಕೆ ಹೊರಟಾಗ ಖಿನ್ನರಾದಂತೆ ಖಿನ್ನರಾದರು. ಬ್ರಾಹ್ಮಣರು ವೇದಾಶೀರ್ವಾದಗಳನ್ನು ಮಾಡಿ ಹರಿಸಿದರು. ದೇವಾಲಯಗಳಲ್ಲಿ ವಿಶೇಷ ಪೂಜೆ ಪುನಸ್ಕಾರಗಳನ್ನು ಮಾಡಿ, ಶಿವಾಜೀ ಮಹಾರಾಜರಿಗೆ ಕ್ಷೇಮವನ್ನು ಕೋರಿ ಪ್ರಾರ್ಥನೆ ಮಾಡಿದರು.

ಶಿವಾಜಿಯ ಜೊತೆಯಲ್ಲಿ ಇನ್ನೂರು ಜನ ರಾಜಭಟರು ಹೊರಟರು. ನೂರುಮಂದಿ ಬೆಂಗಾಲಿನ ರಕ್ಷಣಾಬಲ ಹೊರಟಿತು. ಜೊತೆಯಲ್ಲಿ ಕುಮಾರ ಶಂಭೂಜೀಯನ್ನೂ ಕರೆದುಕೊಂಡು ಹೊರಟನು. ನೀರಾಜೀರಾವ್ ಜೀ, ದತ್ತ ತ್ರ್ಯಂಬಕ್ ಮತ್ತು ರಘುಮಿತ್ರ–ಈ ಸೇನಾನಾಯಕರುಗಳು ಹೊರಟರು.

ಶಿವಾಜಿಯು ಜಯಸಿಂಹನ ಭೇಟಿಮಾಡಿ ಪ್ರಯಾಣಕ್ಕೆ ಅಪ್ಪಣೆ ಬೇಡಿದನು. ಜಯಸಿಂಹನು ಬೆಂಗಾಲಿಗಾಗಿ ತನ್ನ ಮಗ ಕುಮಾರ ರಾಮಸಿಂಹನನ್ನೂ ಸೇನಾಧಿಪತಿ ಘಾಜೀಬೇಗ್‌ನನ್ನೂ ಕಳುಹಿಸಿಕೊಟ್ಟನು. ಉತ್ತರ ದೇಶದಲ್ಲಿ ಪ್ರತಿಯೊಂದು ಸ್ಥಳದಲ್ಲಿಯೂ ಶಿವಾಜಿಯ ಪ್ರಯಾಣಕ್ಕೂ ಮೊಕ್ಕಾಂಗಳಿಗೂ ರಾಜಯೋಗ್ಯವಾದ ಏರ್ಪಾಟುಗಳನ್ನೂ ಮಾಡಬೇಕೆಂದು ದೆಹಲಿಯ ದರ್ಬಾರಿನಿಂದ ಆಜ್ಞೆಯಾಗಿತ್ತು. ಪ್ರಯಾಣದ ವೆಚ್ಚಕ್ಕಾಗಿ ಮೊಗಲ್ ಬೊಕ್ಕಸದಿಂದ ಒಂದು ಲಕ್ಷ ಹೊನ್ನುಗಳನ್ನು ಕೊಡಬೇಕೆಂದು ಆಜ್ಞೆಯಾಗಿತ್ತು. ಇಷ್ಟೊಂದು ಏರ್ಪಾಟುಗಳನ್ನು ಮಾಡಿಸಿ ಜಯಸಿಂಹ ಮಹಾರಾಜನು ಸಂಭ್ರಮದಿಂದ ಶಿವಾಜಿಯನ್ನು ದೆಹಲಿಯ ದರ್ಬಾರಿಗೆ ಕಳುಹಿಸಿಕೊಟ್ಟನು.

## ೧೫

ಶಿವಾಜಿಯು ದೆಹಲಿಗೆ ಪ್ರಯಾಣವಾಗಿ ಹೊರಟು ಮೊಟ್ಟಮೊದಲು ಔರಂಗಾಬಾದಿಗೆ ಬಂದನು. ಆ ಸಮಯದಲ್ಲಿ ನಗರವು ಮೊಗಲರ ದಖ್ಖನ್ ರಾಜಧಾನಿಯಾಗಿತ್ತು. ಅಲ್ಲಿ ಸಾಯ್ ಶಿಕಾನ್ ಖಾನನು ಮುಖ್ಯಾಧಿಕಾರಿಯಾಗಿದ್ದನು ಅವನು ಅರಮನೆಯಲ್ಲಿ ದರ್ಬಾರು ಮಾಡುತ್ತಾ "ಈ ಶಿವಾಜಿಯು ಒಬ್ಬ ಜಮೀನುದಾರನ ಮಗ. ಇವನನ್ನು ನಾವು ಎದುರುಗೊಳ್ಳುವುದೇನು" ಎಂದು ಅಲಕ್ಷ್ಯಮಾಡಿ, ಒಬ್ಬ ಸಣ್ಣ ಅಧಿಕಾರಿಯನ್ನು ಎದುರುಗೊಳ್ಳುವುದಕ್ಕೆ ಕಳುಹಿಸಿದನು. ಆ ಅಧಿಕಾರಿಯು ನಗರದ ಬಾಗಿಲಿನಲ್ಲಿ ಶಿವಾಜಿಯನ್ನು ಎದುರುಗೊಂಡು "ಖಾನ್ ಬಹದ್ದೂರ್‌ರವರು ದರ್ಬಾರಿನಲ್ಲಿ

ದ್ದಾರೆ. ತಮ್ಮನ್ನು ಅಲ್ಲಿಗೇ ದಯಮಾಡಿಸಬೇಕೆಂದು ತಿಳಿಸಿದ್ದಾರೆ" ಎಂದು ಹೇಳಿದನು

ಶಿವಾಜಿಯು ಅವನ ಮಾತಿಗೆ ಉತ್ತರಕೊಡಲಿಲ್ಲ ಕುದುರೆಯನ್ನು ತನ್ನ ಬಿಡಾರಕ್ಕೆ ಹಿಂತಿರುಗಿಸಿದನು. ಮರಾಠಾ ಸರದಾರರು ದಿರುಸುಗಳನ್ನು ಧರಿಸಿಕೊಂಡು ಅವನ ಹಿಂದೆಯೇ ನಡೆದುಹೋದರು. ಶಾಫ್ ಶಿಕಾನ್ ಖಾನನಿಗೆ ಈ ಸುದ್ದಿಯು ತಿಳಿದುಬಂದಿತು ಅವನು ಗಾಬರಿಗೊಂಡನು "ಎಂತಹ ಅಚಾತುರ್ಯ ನಡೆದುಹೋಯಿತು! ಬಾದಷಹರಿಗೆ ಆಗ್ರಹ ಬರುವುದು ನಿಶ್ಚಯ. ಅವರು ಶಿವಾಜೀ ಮಹಾರಾಜನನ್ನು ಎಷ್ಟೊಂದು ಗೌರವದಿಂದ ಕರೆಸಿಕೊಳ್ಳುತ್ತಿದ್ದಾರೆ! ಸರ್ವಾಧಿಕಾರಿಗಳಾದ ಮಿರ್ಜಾರಾಜಾ ಜಯಸಿಂಹರವರು ಎಷ್ಟು ಮನ್ನಣೆ ಮಾಡುತ್ತಾರೆ! ಇವನ್ನೆಲ್ಲಾ ಗಮನಿಸದೇ ನಾನು ನಿರ್ಲಕ್ಷ್ಯಮಾಡಿದ್ದು ಎಂತಹ ಅಪರಾಧವಾಯಿತು!" ಎಂದು ಪೇಚಾಡಿಕೊಂಡನು.

ನಂತರ ತನ್ನ ಅಧಿಕಾರಿಗಳೊಡನೆಯೂ ಬೆಂಗಾನಲಿನವರೊಡನೆಯೂ ಶಿವಾಜಿಯು ಬಿಡಾರಮಾಡಿದ್ದ ನಿವಾಸಕ್ಕೆ ಹೋಗಿ ಭೇಟಿಮಾಡಿದನು ತನ್ನ ಅಚಾತುರ್ಯದಿಂದ ನಡೆದ ಕಾರ್ಯಕ್ಕಾಗಿ ಕ್ಷಮಾಪಣೆ ಬೇಡಿದನು ಶಿವಾಜಿಯು ಸಾಫ್ ಶಿಕಾನ್ ಖಾನನ್ನು ಅತ್ಯಂತ ಗೌರವದಿಂದ ನೋಡಿ ಮಾತನಾಡಿದನು. "ದೊಡ್ಡ ದೊಡ್ಡ ಅಧಿಕಾರ ಸ್ಥಾನಗಳಲ್ಲಿ ಇಂತಹ ಸಣ್ಣ ಪುಟ್ಟ ಅಚಾತುರ್ಯಗಳು ನಡೆದೇ ನಡೆಯುತ್ತವೆ. ದೊಡ್ಡವರು ಅದನ್ನೆಲ್ಲಾ ಮನಸ್ಸಿಗೆ ತೆಗೆದುಕೊಳ್ಳಬಾರದು. ನಮ್ಮ ವಿಷಯದಲ್ಲಿ ನಿಮ್ಮ ಆದರ ವಿಶ್ವಾಸಗಳಿಗೆ ಏನೂ ಕೊರತೆಯಾಗಿಲ್ಲ. ನಮ್ಮ ವಸತಿಗಾಗಿ ನೀವಿಲ್ಲಿ ಎಂತಹ ರಾಜಯೋಗ್ಯವಾದ ಏರ್ಪಾಟುಗಳನ್ನು ಮಾಡಿದ್ದೀರಿ. ಇದಕ್ಕಿಂತಲೂ ಹೆಚ್ಚಿನದೇನು ಬೇಕಾಗಿದೆ? ಈ ನಗರದ ಜನಸ್ತೋಮವೇ ನಮ್ಮನ್ನು ಎದುರುಗೊಂಡು ಗೌರವಿಸಿದೆ" ಎಂದು ಹೇಳಿ ಆ ಅಧಿಕಾರಿಯನ್ನು ಸಮಾಧಾನಗೊಳಿಸಿದನು. ಖಾನ್‌ಸಾಹೇಬನು ಶಿವಾಜಿಯ ಸೌಜನ್ಯವನ್ನು ಕಂಡು ಲಜ್ಜಿತನಾದನು.

ಮಾರನೆಯ ದಿವಸ ಶಿವಾಜಿಯು ಪಲ್ಲಕ್ಕಿಯ ಮೇಲೆ ಕುಳಿತು ತನ್ನ ಪರಿವಾರದೊಂದಿಗೆ ಅರಮನೆಗೆ ಹೋಗಿ ಖಾನ್‌ಸಾಹೇಬನಿಗೆ ಪ್ರತಿಭೇಟಿಯಿತ್ತನು ಖಾನ್‌ಸಾಹೇಬನು ಅತ್ಯಂತ ಗೌರವದಿಂದ ಶಿವಾಜಿಯನ್ನು ಸ್ವಾಗತಿಸಿ, ತನ್ನ ದರ್ಬಾರಿನಲ್ಲಿ ಶಿವಾಜಿಗೆ ಸಮಾನಾಸನವನ್ನಿತ್ತು ಕುಳ್ಳಿರಿಸಿ,

ದೆಹಲಿಯ ದರ್ಬಾರಿನಿಂದ ಬಂದಿದ್ದ ಖಿಲ್ಲತ್ತುಗಳನ್ನೂ ಬಿರುದು ಬಾವಲಿ ಗಳನ್ನೂ ಶಿವಾಜಿ ಮಹಾರಾಜನಿಗೆ ಸಂಪ್ರದಾಯ ಪ್ರಕಾರವಾಗಿ ಒಪ್ಪಿಸಿ, ಒಂದು ಲಕ್ಷ ಹೊನ್ನುಗಳನ್ನು ಸಮರ್ಪಣೆ ಮಾಡಿದನು.

"ಶಿವಾಜೀ ಮಹಾರಾಜರೇ, ತಮ್ಮ ಪ್ರಯಾಣದ ಖರ್ಚಿಗಾಗಿ ಈ ಹೊನ್ನುಗಳನ್ನು ತಮಗೆ ಸಮರ್ಪಿಸಬೇಕೆಂದು ಬಾದಷಹರ ಅಪ್ಪಣೆಯಾಗಿದೆ" ಎಂದು ಹೇಳಿದನು.

ಶಿವಾಜಿಯು ಕಡೆಯವರು ಆ ಮುಖ್ಯಾಧಿಕಾರಿಗೆ ಪ್ರತಿಯಾಗಿ ಖಿಲ್ಲತ್ತು ಗಳನ್ನು ಒಪ್ಪಿಸಿದರು.

ಶಿವಾಜಿಯು ತನ್ನ ಪರಿವಾರದೊಂದಿಗೆ ಉತ್ತರಕ್ಕೆ ಪ್ರಯಾಣಮಾಡಿದನು "ಶಿವಾಜಿಯು ದೆಹಲಿಗೆ ಹೊರಟಿದ್ದಾನೆ" ಎಂದು ಊರುಊರುಗಳಲ್ಲಿಯೂ ಪ್ರಸಿದ್ಧವಾಗಿತ್ತು. ಮಾರ್ಗಮಧ್ಯದಲ್ಲಿ ಹಿಂದೂ ಜನರು ಉತ್ಸಾಹದಿಂದ ಶಿವಾಜಿಗೆ ಅಭೂತಪೂರ್ವ ಗೌರವವನ್ನು ಸಲ್ಲಿಸುತ್ತಿದ್ದರು. ಆ ಜನರು ಅಷ್ಟೊಂದು ವೈಭವದಿಂದ ದೆಹಲಿಯ ದರ್ಬಾರಿಗೆ ತೆರಳುವ ಯಾವ ಹಿಂದೂ ರಾಜನನ್ನೂ ಎಂದೂ ಕಂಡಿರಲಿಲ್ಲ. ಆ ಜನರ ಉತ್ಸಾಹಕ್ಕೆ ಪಾರವೇ ಇಲ್ಲ. ಶಿವಾಜಿಯು ಅವರನ್ನೆಲ್ಲಾ ಪ್ರೀತಿ ವಿಶ್ವಾಸಗಳಿಂದ ಮಾತನಾಡಿಸುತ್ತಾ ಸುಖ ದುಃಖಗಳನ್ನು ವಿಚಾರಿಸುತ್ತಾ ಹೋದನು. ದಾರಿಯುದ್ದಕ್ಕೂ ಬಡಬಗ್ಗರಿಗೆ ಮುಕ್ತಹಸ್ತದಿಂದ ದಾನಮಾಡಿದನು. ವೈದಿಕರಿಂದಲೂ ಹಿರಿಯರಿಂದಲೂ ಆಶೀರ್ವಾದಗಳನ್ನು ಪಡೆಯುತ್ತ ಹೋದನು. ಮಧ್ಯಮಾರ್ಗದಲ್ಲಿ ಪ್ರತಿ ಯೊಂದು ಮೊಕ್ಕಾಂನಲ್ಲಿಯೂ ಮೊಗಲ್ ಅಧಿಕಾರಿಗಳು ವಸತಿ, ಆತಿಥ್ಯ, ಗೌರವಗಳ ಏರ್ಪಾಡುಗಳನ್ನು ಮಾಡಿದ್ದರು. ಅವೆಲ್ಲವೂ ರಾಜಯೋಗ್ಯ ವಾಗಿದ್ದವು. ಶಿವಾಜಿಯ ಮನಸ್ಸಿನಲ್ಲಿ "ಈ ಬಾದಷಹನು ಎಷ್ಟೊಂದು ಜಾಗರೂಕತೆಯಿಂದ ನಮ್ಮ ಪ್ರಯಾಣದ ಸೌಕರ್ಯಗಳನ್ನು ಏರ್ಪಡಿಸಿದ್ದಾನೆ" ಎಂದು ಆಶ್ಚರ್ಯಪಟ್ಟುಕೊಂಡನು. ಮಾರ್ಗಮಧ್ಯದಲ್ಲಿ ದೆಹಲಿಯ ದರ್ಬಾರಿ ನಿಂದ ಶಿವಾಜಿಗೆ ಪತ್ರವು ಬಂದಿದ್ದಿತು.

"ಬಾದಷಹರವರಿಗೆ ಐವತ್ತನೆಯ ವರ್ಷದ ವರ್ಧಂತಿಯು ನಡೆಯುತ್ತದೆ. ಈ ವರ್ಧಂತಿಯು ಆಗ್ರಾದಲ್ಲಿ ನಡೆಯುವ ಏರ್ಪಾಡಾಗಿದೆ. ಆ

ಸಮಯಕ್ಕೆ ಸರಿಯಾಗಿ ಒಂದು ದಿನ ಮುಂಚಿತವಾಗಿಯೇ ಶಿವಾಜಿ ಮಹಾರಾಜರು ಆಗ್ರಾಕ್ಕೆ ದಯಮಾಡಿಸಬೇಕು. ವರ್ಧಂತ್ಯುತ್ಸವದಲ್ಲಿ ಭಾಗವಹಿಸಿ ಬಾದಷಹರೊಡನೆ ಯಥಾಸಾವಕಾಶ ಮಾತುಕಥೆಗಳನ್ನು ಪೂರೈಸಬಹುದು. ದರ್ಬಾರಿನಲ್ಲಿ ಬಾದಷಹರವರು ಮಹಾರಾಜರವರಿಗೆ ಗೌರವಗಳನ್ನೂ ಪಟ್ಟಾಂಕಿತಗಳನ್ನೂ ಅನುಗ್ರಹಿಸುತ್ತಾರೆ. ಅವೆಲ್ಲವನ್ನೂ ಸ್ವೀಕರಿಸಿ ತಮ್ಮ ರಾಜ್ಯಕ್ಕೆ ಹಿಂತಿರುಗಬಹುದು. ವರ್ಧಂತ್ಯುತ್ಸವ ಸಮಯವು ಸಮೀಪಿಸುತ್ತಲಿರುವುದರಿಂದ ದೂರ ದೂರ ಮೊಕ್ಕಾಂಗಳನ್ನು ಮಾಡಿಕೊಂಡು ಬೇಗಬೇಗ ಬರಬೇಕೆಂದು ಕೋರಲಾಗಿದೆ" ಎಂದು ದರ್ಬಾರಿನಿಂದ ಬಂದ ದೂತರು ಶಿವಾಜಿಯ ಭೇಟಿಮಾಡಿ ಪತ್ರವನ್ನು ಒಪ್ಪಿಸಿದರು.

ಶಿವಾಜಿಯು ಅದೇರೀತಿ ಪ್ರಯಾಣಗಳನ್ನು ತ್ವರಿತಗತಿಯಿಂದ ಮುಂದುವರಿಸುತ್ತಾ ಆಗ್ರಾನಗರಕ್ಕೆ ಆರು ಮೈಲಿಗಳ ದೂರದಲ್ಲಿರುವ ಮಲಿಕ್ ಚಂದ್ ಸರಾಯ್‌ಗೆ ಹೋಗಿ ಸೇರಿದನು. ಗೊತ್ತಾಗಿದ್ದ ದಿನಕ್ಕಿಂತ ಒಂದು ದಿನ ಮೀರಿಹೋಗಿದ್ದಿತು. ಬಾದಷಹನ ದರ್ಬಾರಿಗೆ ಬರುವ ಮಾನ್ಯ ಅತಿಥಿಗಳೆಲ್ಲರೂ ಒಂದು ದಿನ ಮುಂಚಿತವಾಗಿ ಬಂದಿರಬೇಕು. ದಿವಾನೀಆಂನಲ್ಲಿ ನಡೆಯುವ ವೈಭವೋಪೇತವಾದ ದರ್ಬಾರಿನಲ್ಲಿ ಹಾಜರಿರಬೇಕು. ಇದು ದೆಹಲಿ ದರ್ಬಾರಿನ ಸಂಪ್ರದಾಯ.

ಶಿವಾಜಿಯ ಆತಿಥ್ಯಗಳಿಗೆ ಏರ್ಪಾಡು ಮಾಡುವುದಕ್ಕೋಸ್ಕರ ಕುಮಾರ ರಾಮಸಿಂಗನು ಮುಂಗಡವಾಗಿಯೇ ಆಗ್ರಾಕ್ಕೆ ಹೋಗಿದ್ದನು. ಆಗ್ರಾ ಅರಮನೆಯ ಸಮೀಪದಲ್ಲಿಯೇ ಮಹಾರಾಜ ಜಯಸಿಂಹನ ಭವ್ಯವಾದ ಅರಮನೆ ಇದ್ದಿತು. ಆ ಅರಮನೆಯಲ್ಲಿಯೇ ಶಿವಾಜಿಯ ಬಿಡಾರದ ಏರ್ಪಾಡುಗಳಾಗಿದ್ದಿತು. ಬಾದಷಹನು ರಾಜರಿಗೆ ಸಲ್ಲಿಸಬೇಕಾದ ದರ್ಬಾರೀ ಮರ್ಯಾದೆಗಳೊಡನೆ ಶಿವಾಜಿಯನ್ನು ನಗರದ್ವಾರದಲ್ಲಿಯೇ ಎದುರುಗೊಂಡು ಕರೆತರಬೇಕೆಂದು ಅಪ್ಪಣೆಮಾಡಿದ್ದನು. ನಿಗದಿಯಾದ ದಿನ ಸಮಯಕ್ಕೆ ಸರಿಯಾಗಿ ಶಿವಾಜಿಯು ಬಂದು ಸೇರದಿದ್ದುದರಿಂದ ಎಲ್ಲವೂ ತಲೆಕೆಳಗಾಗಿ ಹೋದಂತಾಯಿತು. ಕುಮಾರ ರಾಮಸಿಂಗನು ಗಾಬರಿಗೊಂಡನು. ಶಿವಾಜಿಗೆ ದರ್ಬಾರಿನ ಮರ್ಯಾದೆಗಳೇ ತಿಳಿದಿಲ್ಲವೆಂದು ವ್ಯಥೆಪಟ್ಟುಕೊಂಡನು.

ಬಾದಷಹನೂ ಕೂಡ "ಶಿವಾಜಿ ರಾಜ ಬರಲಿಲ್ಲವೇ?" ಎಂದು ವಿಚಾರಿಸಿದ್ದನು.

ಶಿವಾಜಿಯು ಮನಿಕ್‌ಚಂದ್ ಸರಾಯ್‌ಗೆ ಬಂದ ಸಮಾಚಾರವು ರಾಮಸಿಂಗನಿಗೆ ತಿಳಿಯಿತು. ಆದರೆ ದರ್ಬಾರಿಗೆ ಹೊತ್ತು ಮೀರಿದುದರಿಂದ ರಾಮಸಿಂಗನು ಮುತ್ಸದ್ದಿ ಮುನ್ಷಿಗಿರಿಧರಲಾಲರನ್ನು ಶಿವಾಜಿಯ ಬಳಿಗೆ ಕಳುಹಿಸಿ ತಾನು ದಿವಾನೀಆಂನಲ್ಲಿ ನಡೆಯುವ ದರ್ಬಾರಿಗೆ ಹೊರಟು ಹೋಗಿದ್ದನು. ಶಿವಾಜಿಯು ಆ ದಿನ ಮಧ್ಯಾಹ್ನೋತ್ತರ ಆಗ್ರಾ ನಗರಕ್ಕೆ ಪ್ರವೇಶಮಾಡಿದನು. ರಾಜಮರ್ಯಾದೆಗಳು ಜೇಓಂದು ಕಡೆ ಕಾದಿದ್ದವು. ಶಿವಾಜಿಯು ಪರಿವಾರ ಸಮೇತನಾಗಿ ಮತ್ತೊಂದು ಮಹಾದ್ವಾರದಿಂದ ನಗರವನ್ನು ಪ್ರವೇಶಮಾಡಿದನು. ರಾಮಸಿಂಗನಿಗೆ ಸಮಾಚಾರವು ಮುಟ್ಟಿತು. ಅವನು ಲಗುಬಗೆಯಿಂದ ನಗರದ ರಾಜಮಾರ್ಗದಲ್ಲಿ ಶಿವಾಜಿಯನ್ನು ಎದುರುಗೊಂಡು ಬಿಡಾರಕ್ಕೆ ಕರೆದೊಯ್ದುನು.

ರಾಮಸಿಂಗನಿಗೆ ಶಿವಾಜಿಯ ವಿಷಯದಲ್ಲಿ ವಿಶೇಷ ವಿಶ್ವಾಸಗೌರವಗಳಿದ್ದವು. "ಶಿವಾಜಿಯು ಬುದ್ಧಿವಂತ. ಏನೋ ಕಾರಣದಿಂದ ಹೀಗೆ ಮಾಡಿದ್ದಾನೆ" ಎಂದು ಭಾವಿಸಿಕೊಂಡನು. ಆದರೂ ಈ ಅಚಾತುರ್ಯವನ್ನು ಬಾದಷಹನು ಹೇಗೆ ಪರಿಗ್ರಹಿಸುತ್ತಾನೋ ಎಂಬ ಭೀತಿ ಇದ್ದೇ ಇದ್ದಿತು. ತಾನೇ ಖುದ್ದಾಗಿ ಹೋಗಿ ಬಾದಷಹನ ಭೇಟಿಮಾಡಿ "ಶಿವಾಜಿ ಮಹಾರಾಜನು ಬಂದಿದ್ದಾನೆ ಅವನನ್ನು ಜಯಸಿಂಹನ ಅರಮನೆಯಲ್ಲಿ ಇಳಿಸಲಾಗಿದೆ" ಎಂದು ಅರಿಕೆ ಮಾಡಿದನು. ಮಾರ್ಗದಲ್ಲಿ ಒಂದು ದಿನ ದಾರಿ ತಪ್ಪಿಹೋದುದರಿಂದ ಸಮಯಕ್ಕೆ ಸರಿಯಾಗಿ ಬಂದು ಸೇರಲಾಗಲಿಲ್ಲವೆಂದೂ ಶಿವಾಜಿಯು ಖಿನ್ನನಾಗಿದ್ದಾನೆಂದೂ ತಿಳಿಯಪಡಿಸಿದನು. ಬಾದಷಹನ ಮುಖಭಾವದಲ್ಲಿ ಏನೂ ವ್ಯತ್ಯಾಸ ಕಾಣಲಿಲ್ಲ. "ಶಿವಾಜಿಯು ಎಂದೂ ದರ್ಬಾರಿಗೆ ಬಂದವನಲ್ಲ. ಇಲ್ಲಿಯ ಸಂಪ್ರದಾಯಗಳೊಂದೂ ಅವನಿಗೆ ತಿಳಿಯದು. ಆದರಿಂದ ತಪ್ಪೇನೂ ಇಲ್ಲ. ನಾಳೆ ದಿವಾನೀಖಾಸ್‌ನಲ್ಲಿ ನಡೆಯುವ ದರ್ಬಾರಿಗೆ ಶಿವಾಜಿಯನ್ನು ಕರೆದುಕೊಂಡು ಬಾ. ಅವನ ಯೋಗಕ್ಷೇಮಗಳನ್ನು ಸರಿಯಾಗಿ ನೋಡಿಕೋ" ಎಂದು ಅಪ್ಪಣೆಮಾಡಿದನು.

ಆಗ್ರಾದ ದಿವಾನೀಖಾಸ್ ದರ್ಬಾರು ಮಂದಿರವು ಜಗಜಗಿಸುತ್ತಿದ್ದಿತು. ಆ ವಿಶಾಲ ಭವನದಲ್ಲಿ ಎತ್ತರವಾಗಿ ಗದ್ದುಗೆಯು ತಯಾರಾಗಿದ್ದಿತು. ಅದರ

ಮೇಲೆ ಕಲಾಬತ್ತಿನ ಹೂಗಳಿಂದ ಥಳಥಳಿಸುವ ರೇಷ್ಮೆಯ ವಸ್ತ್ರಗಳನ್ನು ಒಪ್ಪಯಿಸಿ ಅಲಂಕರಿಸಿದ್ದರು. ಆ ಗದ್ದುಗೆಯ ಮೇಲೆ ರತ್ನಖಚಿತವಾದ ಮಯೂರಾಸನವೂ, ಆ ಸಿಂಹಾಸನದ ಮೇಲುಗಡೆ ಛತ್ರವೂ ಅಲಂಕೃತವಾಗಿದ್ದಿತು. ಹಿಂದುಗಡೆ ಡಮಾಸಿನ ಪರದೆಯು ಇಳಿಬಿಟ್ಟಿದ್ದಿತು. ಉಭಯ ಪಾರ್ಶ್ವಗಳಲ್ಲಿಯೂ ಜರಿಯ ಪರದೆಗಳು ತೂಗಾಡುತ್ತಿದ್ದವು. ಮುಂದುಗಡೆ ಬೆಳ್ಳಿಯ ಕಟಕಟೆಯು ಮಾಡಲ್ಪಟ್ಟಿದ್ದಿತು. ಗದ್ದುಗೆಯ ಉಭಯ ಪಾರ್ಶ್ವಗಳಲ್ಲಿಯೂ ಸಾಲುಸಾಲಾಗಿ ಬೆಳ್ಳಿಯ ಆಸನಗಳು ಅಲಂಕೃತವಾಗಿದ್ದವು. ಉಮ್ರಾನರಪತಿಗಳೂ, ಸಾಮಂತರುಗಳೂ ಕೂಡುವ ಆಸನಗಳೊಂದು ಕಡೆ, ಮಂತ್ರಿ ಸೇನಾಧಿಪತಿಗಳು ಕೂಡುವ ಆಸನಗಳು ಮತ್ತೊಂದು ಕಡೆ. ದರ್ಬಾರಿಗಳೆಲ್ಲರೂ ಬಾದಷಹರ ಆಗಮನವನ್ನು ನಿರೀಕ್ಷಿಸುತ್ತಾ ನಿಂತಿದ್ದರು. ಮೇಲುಗಡೆ ಜನಾನಾದ ರಾಣಿಯರು ಬಂದು ಕುಳಿತು ದರ್ಬಾರನ್ನು ವೀಕ್ಷಿಸುವ ಏರ್ಪಾಡಾಗಿತ್ತು. ವಾದ್ಯ ಘೋಷಗಳು ಮೊಳಗುತ್ತಿತ್ತು. ಹೊರಗೆ ನಗಾರಿಯ ಸದ್ದು ಆರಂಭವಾಯಿತು. ವಂಧಿಮಾಗಧರು ಪರಾಕು ಹೇಳುತ್ತಾ ಚಿನ್ನದ ಸೋಟಾಗಳನ್ನು ಧರಿಸಿ ಬಂದರು ಬಾದಷಹನು ಮೆಲ್ಲಗೆ ಅಡಿ ಇಡುತ್ತಾ ಬಲಗಡೆಯಿಂದ ಗದ್ದುಗೆಯ ಮೇಲೆ ಬಂದು ನಿಂತನು. ಅಮೂಲ್ಯವಾದ ಬನಾರಸ ದಿರಸುಗಳನ್ನು ಧರಿಸಿ, ಚಿನ್ನದ ಗೊಂಡೆಗಳನ್ನೂ ಹೂಗಳನ್ನೂ ಧರಿಸಿಕೊಂಡು, ಸರಪೇಷ್ ಉಷ್ಣೀಷಗಳನ್ನು ಧರಿಸಿ, ಬಿಚ್ಚುಗತ್ತಿಯನ್ನು ಎತ್ತಿ ಹಿಡಿದು ಅಂಗರಕ್ಷಕರು ಬಾಕಷಹನ ಹಿಂದುಗಡೆ ಬಂದರು. ಬಾದಷಹನು ದರ್ಬಾರಿಗೆ ಬಂದೊಡನೆಯೇ ದರ್ಬಾರಿಗಳೆಲ್ಲರೂ ಮುಕ್ತಕಂಠದಿಂದ ಜಯಕಾರಮಾಡಿದರು. ಬಾದಷಹನು ಸಿಂಹಾಸನದ ಮೇಲೆ ಮಂಡಿಸುತ್ತಲೇ ಮೇಲ್ಛಾವಣಿಯಿಂದ ಸುವಾಸಿತ ಪುಷ್ಪಗಳೂ ಚಿನ್ನದ ಪುಷ್ಪಗಳೂ ದರ್ಬಾರಿನಲ್ಲಿ ಎರಚಲ್ಪಟ್ಟವು.

ಅನರ್ಘ್ಯ ದಮಾಸನ್ನೂ ಜೂಲನ್ನೂ ಹೊದ್ದಿಸಿ ಚಿನ್ನದ ಗೊಂಡೆಗಳಿಂದಲೂ ಮುಖವಾಡದಿಂದಲೂ ಅಲಂಕೃತವಾಗಿದ್ದ ಪಟ್ಟದಾನೆಯನ್ನು ಮಾವುತರು ಕರೆತಂದು ಸಿಂಹಾಸನದ ಮುಂದೆ ನಿಲ್ಲಿಸಿದರು. ಆ ಗಜರಾಜನು ಮಂಡಿಗಳನ್ನು ಬಗ್ಗಿಸಿ ಸೊಂಡಿಲೆತ್ತಿ ಝೇಂಕರಿಸಿ ಮುಜುರೆ ಮಾಡಿದನು. ಮಾವುತರು ಗಜರಾಜನನ್ನು ಕರೆದುಕೊಂಡು ಹೋದರು.

ಅನಂತರ ಅವರವರ ಅಂತಸ್ತಿನಂತೆ ಉಮ್ರಾಗಳೂ ಸಾಮಂತ ನರಪತಿಗಳೂ ಖಿಲ್ಲತ್ತುಗಳನ್ನು ತೆಗೆದುಕೊಂಡು ಗದ್ದುಗೆಯ ಮೇಲೆ ಹೋಗಿ ಬಾದಷಹನ ಸಿಂಹಾಸನದ ಮುಂದೆ ಸಮರ್ಪಿಸಿ ಮಂಡಿಯೂರಿ ಬಗ್ಗಿ ಎರಡು ಕೈಗಳಿಂದಲೂ ನೆಲಮುಟ್ಟಿ ಕುರ್ನೀಸಾತ್ ಮಾಡಿ ಮತ್ತೊಂದು ಕಡೆ ಗದ್ದುಗೆಯ ಮೇಲಿನಿಂದ ಇಳಿದು ತಮ್ಮ ಆಸನಗಳಲ್ಲಿ ಕುಳಿತುಕೊಳ್ಳುತ್ತಿದ್ದರು. ವಂದಿಮಾಗಧರು ಆ ಉಮ್ರಾನರಪತಿಗಳು ಬಾದಷಹನ ಸಮ್ಮುಖಕ್ಕೆ ಬಂದಾಗ ಅದರ ಬಿರುದುಗಳೊಡನೆ ನಾಮಧೇಯಗಳನ್ನು ಘಟ್ಟಿಯಾಗಿ ಉಚ್ಚರಿಸುತ್ತಿದ್ದರು.

ರಾಮಸಿಂಗನು ಶಿವಾಜಿಯನ್ನು ಗದ್ದುಗೆಯ ಮೇಲೆ ಕರೆದುಕೊಂಡು ಹೋಗಿ ನಿಲ್ಲಿಸಿದನು. ಶಿವಾಜಿಯು ಖಿಲ್ಲತ್ತಿನ ತಟ್ಟೆಗಳನ್ನು ಮಣೆಯ ಮೇಲಿಟ್ಟನು. ಬಾದಷಹನು "ಶಿವಾಜೀ ರಾಜಾ, ಬಾ" ಎಂದು ಕೈನೀಡಿದನು ಆ ದರ್ಬಾರಿನಲ್ಲಿ ಬಾದಷಹನ ಬಾಯಿಂದ ನಾಮಧೇಯವು ಉಚ್ಚರಿಸಲ್ಪಡುವುದು ಮಹೋನ್ನತ ಗೌರವ. ಔರಂಗಜೇಬನು ಪಟ್ಟಕ್ಕೆ ಬಂದಂದಿನಿಂದ ಅಂತಹ ಗೌರವವು ಯಾರಿಗೂ ಲಭ್ಯವಾಗಿರಲಿಲ್ಲ ಶಿವಾಜಿಯು ಸ್ವಲ್ಪ ತಬ್ಬಿಬ್ಬಾದನು. ಅವನು ಸಂಪ್ರದಾಯದಂತೆ ಕುರ್ನೀಸಾತ್ ಮಾಡಲಿಲ್ಲ. ಎರಡು ಕೈಗಳಿಂದಲೂ ಸಲಾಂ ಮಾಡಿದನು. ಬಾದಷಹನು ನಜರು ತಟ್ಟೆಯನ್ನು ಕೈಯಿಂದ ಮುಟ್ಟಲಿಲ್ಲ. ರಾಜಭಟರು ಶಿವಾಜಿಯನ್ನು ಕೈಹಿಡಿದು ಗದ್ದುಗೆಯಿಂದ ಇಳಿಸಿ ಕರೆದೊಯ್ದು ಎಲ್ಲಿಯೋ ಹಿಂದಿನ ಸಾಲಿನಲ್ಲಿ ಕುಳ್ಳಿರಿಸಿದರು. ದರ್ಬಾರಿನಲ್ಲಿ ಏನೋ ಒಂದು ವಿಧವಾದ ಬಿಸಿಬಿಸಿ ವಾತಾವರಣ ಎದ್ದಿತು. ಶಿವಾಜಿಯು ತನ್ನ ಆಸನದಲ್ಲಿ ಕುಳಿತು ಉದ್ರಿಕ್ತನಾದನು. ಪಕ್ಕದಲ್ಲಿದ್ದವರನ್ನು "ಇದು ಯಾವ ಆಸನ ?" ಎಂದು ಕೇಳಿದನು. "ಇದು ಮೂರನೆಯ ದರ್ಜೆಯ ಆಸನ. ಐದು ಲಕ್ಷ ಹೊನ್ನಿನ ಸರದಾರರುಕೂಡುವ ಆಸನ" ಎಂದು ಹೇಳಿದರು. ಶಿವಾಜಿಯು ಬಡಬಡಿಸತೊಡಗಿದನು. ರಾಮಸಿಂಗನು ಗಾಬರಿಗೊಂಡು ಅವನ ಸಮೀಪಕ್ಕೆ ಬಂದು ಸಮಾಧಾನಗೊಳಿಸಿದನು.

ಶಿವಾಜಿಯು ರಾಮಸಿಂಗನನ್ನು ಕುರಿತು "ಈ ಮುಂದಿನ ಸಾಲಿನಲ್ಲಿ

ಕುಳಿತಿರುವವನರಾರು ?" ಎಂದು ಕೇಳಿದನು.

"ಜೋದ್‌ಪುರದ ಮಹಾರಾಜ ಜಸವಂತಸಿಂಗ್, ವಜೀರ್ ಜಾಫರ್ ಖಾನ್" ಎಂದು ರಾಮಸಿಂಗನು ಹೇಳಿದನು.

"ಓಹೋ! ಈ ಪರಾಕ್ರಮಶಾಲಿಗಳು ಮುಂದಿನ ಸಾಲಿನಲ್ಲಿ ಕುಳಿತಿದ್ದಾರೆಯೋ ? ನನ್ನ ಸೈನಿಕರ ಎದುರಿನಲ್ಲಿ ನಿಂತು ಯುದ್ಧ ಮಾಡ ಲಾರದೇ ಇವರುಗಳೆಷ್ಟೋ ಬಾರಿ ಪಲಾಯನ ಮಾಡಿದ್ದಾರೆ. ಈ ದರ್ಬಾರಿ ನಲ್ಲಿ ಆವರ ಹಿಂದುಗಡೆ ನಾನು ಕುಳಿತುಕೊಳ್ಳಬೇಕು. ಇದೆಂತಹ ಅಪಮಾನ !" ಎಂದು ಕೂಗುತ್ತಾ ಸರ್ರನೆದ್ದು ದರ್ಬಾರಿನಿಂದ ಹೊರಗೆ ಹೊರಟುಹೋದನು.

ರಾಮಸಿಂಗನು ಗಾಬರಿಯಿಂದ ದರ್ಬಾರಿನ ಮಹಾದ್ವಾರದಲ್ಲಿ ತಡೆದು ನಿಲ್ಲಿಸಿ "ಮಹಾರಾಜ, ಇದೇನು ಹೀಗೆ ಮಾಡಿಬಿಟ್ಟೆ ! ನಿನ್ನ ಆಚರಣೆಯು ದರ್ಬಾರಿಗೆ ಅಪಮಾನಕರ" ಎಂದು ಹೇಳಿದನು.

ಶಿವಾಜಿಯು "ಈ ದರ್ಬಾರಿಗೆ ಧಿಕ್ಕಾರವಿರಲಿ. ನನಗಿಲ್ಲಿ ಸ್ಥಳವಿಲ್ಲ. ನನ್ನ ಭವಿಷ್ಯವು ನನಗೆ ಗೋಚರವಾಗುತ್ತಿದೆ. ನಿನ್ನ ಕೈಲಿರುವ ಖಡ್ಗದಿಂದ ನನ್ನನ್ನು ಕತ್ತರಿಸಿಹಾಕು. ಇಲ್ಲವೇ ಕತ್ತಿಯನ್ನಿತ್ತಕೊಡು. ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ. ನನ್ನ ಅವತಾರವು ಇಲ್ಲಿಗೆ ಪೂರ್ತಿಯಾಯಿತು"ಎಂದು ಘರ್ಜಿಸಿದನು.

ಹಿಂದೆ ಮುಂದೆ ನೋಡದೇ ತನ್ನ ಪಲ್ಲಕ್ಕಿಯಲ್ಲಿ ಕುಳಿತು ಬಿಡಾರಕ್ಕೆ ಹೊರಟುಹೋದನು.

ಬಾದಷಹನು ಇವೆಲ್ಲವನ್ನೂ ಗಮನಿಸಿದರೂ ಗಮನಕೊಡದವನಂತೆ ಉದಾಸೀನಭಾವದಿಂದಿದ್ದನು. ಸಭೆಯು ಭರಕಾಸ್ತಾಯಿತು, ಬಾದಷಹನು ಸಿಂಹಾಸನದಿಂದ ಎದ್ದು ಅಂತಃಪುರದೊಳಗೆ ಹೋದನು. ರಾಮಸಿಂಗನು ತಕ್ಷಣ ಬಾದಶಹನ ಭೇಟಿಮಾಡಿ "ಶಿವಾಜಿಯು ಪ್ರಯಾಣದಿಂದ ದಣಿದಿದ್ದನು. ಈ ದರಬಾರಿನ ಜಗಜಗಿಯನ್ನು ನೋಡಿ ಗಾಬರಿಗೊಂಡನು. ಅವನ ಬುದ್ಧಿಯೇ ವಿಕಲ್ಪವಾದಂತಾಗಿತ್ತು. ಅವನ ನಡತೆಯು ಅವಿನಯವಲ್ಲ, ದಿಗ್ಭ್ರಾಂತಿ" ಎಂದು ಕ್ಷಮಾಪ್ರಾರ್ಥನೆ ಮಾಡಿದನು.

ಬಾದಷಹನು "ನನಗೆ ಅರ್ಥವಾಗುತ್ತದೆ, ರಾಮಸಿಂಗ್. ಈ ದರ್ಬಾರಿ

ನಲ್ಲಿ ಎಂತಹನಾದರೂ ತಬ್ಬಿಬ್ಬಾಗುತ್ತಾರೆ. ಶಿವಾಜಿಯು ಎಂದೂ ಇಂತಹ ದರ್ಬಾರನ್ನು ಕಂಡು ಕೇಳಿಲ್ಲ. ಕಾಡಿನಲ್ಲಿಯೇ ಮೃಗರಾಜನಂತೆ ಬೆಳೆದು ಕಾಡುಜನರಿಂದ ರಾಜನೆನಿಸಿಕೊಂಡವನು ಅವನ ತಪ್ಪನ್ನು ನಾವು ಎಣಿಸುವುದಿಲ್ಲ. ನೀನು ಜಾಗರೂಕತೆಯಿಂದ ಅವನ ಆರೋಗ್ಯವನ್ನು ನೋಡಿಕೋ. ಸ್ವಲ್ಪ ಕಾಲಾನಂತರ ಅವನಿಗೆ ಹೇಳಿಕಳುಹಿಸುತ್ತೇನೆ" ಎಂದು ಹೇಳಿ ಕಿರುನಗೆಯನ್ನು ನಕ್ಕನು. ಆ ನಗುವಿನಲ್ಲಿ ಫಣಿರಾಜನ ವಿಷಜ್ವಾಲೆಯನ್ನು ಕಾಣಬಹುದಾಗಿತ್ತು! ಪ್ರಳಯಕಾಲದ ಕಾರ್ಮೋಡಗಳ ಮಿಂಚಿನ ಝಳಪನ್ನು ನೋಡಬಹುವಾಗಿತ್ತು. ರಾಮಸಿಂಗನ ಹೃದಯವು ನಡುಗಿತು. ಅವನು ಅರ್ಥವಾದರೂ ಅರ್ಥವಾಗದವನಂತೆ ನಟಿಸಿ ಕುರ್ನಿಸಾತ್ ಮಾಡಿ ಬಾದಷಹನ ಸಮ್ಮುಖದಿಂದ ಹಿಂತಿರುಗಿದನು.

ದರಬಾರಿಗಳೆಲ್ಲಲ್ಲಾ ಕಲಕಲವೆದ್ದಿತು. ಎಲ್ಲರ ಬಾಯಲ್ಲಿಯೂ ಶಿವಾಜಿಯ ಅವಿನಯದ ಮಾತೇ ಮಾತು. ಶಿವಾಜಿಯ ಅವಿನಯಕ್ಕಿಂತಲೂ ಬಾದಷಹನ ಕ್ಷಮೆಯು ಅವರಲ್ಲಿ ಆಶ್ಚರ್ಯವನ್ನುಂಟುಮಾಡಿತ್ತು. ವಯೋವೃದ್ಧರಾದ ಉಮ್ರಾಗಳೂ, ಖಾಜಿಗಳೂ "ನಾಗರಿಕತೆಯನ್ನರಿಯದ ಹಿಂದೂ ಕಾಫರ ಶಿವಾಜಿ. ಅವನಿಗೆ ದರ್ಬಾರಿನ ಮರ್ಯಾದೆಗಳೆಲ್ಲಿ ತಿಳಿಯುತ್ತವೆ. ಅವನನ್ನು ದರ್ಬಾರಿಗೆ ಕರೆತಂದುದೇ ತಪ್ಪು" ಎಂದು ಹೇಳಿದನು.

ಮತ್ತೆ ಕೆಲವರು ಮುಸಲ್ಮಾನ್ ಸರ್ದಾರರು "ಖೋಡಿ, ಲಫಂಗ! ಮೋಸಗಾರ, ದೊಡ್ಡ ಕಳ್ಳ. ಬಾದಷಹರ ಎದುರಿನಲ್ಲಿಯೂ ಅವಿನಯ ತೋರಿದ್ದಾನೆ. ತಕ್ಕ ಶಿಕ್ಷೆಯಾಗುತ್ತದೆ. ಪೇಟೆಯ ನಡುಚೌಕದಲ್ಲಿ ತುಂಡುತುಂಡುಗಳಾಗಿ ಕತ್ತರಿಸಿ ಕಾಗೆ ಹದ್ದುಗಳಿಗೆ ಹಾಕಿಸಬೇಕು ಇವನನ್ನು" ಎಂದು ಉದ್ಗಾರ ತೆಗೆದರು.

ಕೆಲವರು ರಜಪೂತ ಯುವಕರು "ಶಿವಾಜಿಯು ಕಾಡುಮನುಷ್ಯನೆಂಬುದೇನೋ ನಿಜ. ಆದರೂ ವೀರಾಗ್ರೇಸರ ಯಾರಿಗೂ ತಲೆಬಾಗದ ರಣಧೀರ ಬಹದ್ದೂರ್ ಅವನು. ಹಿಂದುಗಳ ವರ್ಚಸ್ಸನ್ನು ಒಮ್ಮೆಯಾದರೂ ತೋರಿದ್ದಾನೆ. ಈ ಮೊಗಲ್ ಬಾದಷಹರ ದರ್ಬಾರಿನಲ್ಲಿ ಒಬ್ಬ ಹಿಂದೂ ವೀರನು ಹೀಗೆ ಬಂದು ನಿರ್ಲಕ್ಷ್ಯದಿಂದ ಬಾದಷಹನನ್ನು ಎದುರಿಸಿದ ಸಾಹಸವನ್ನು ನಾವೆಂದೂ ಕಂಡು ಕೇಳಿಲ್ಲ. ಈ ದೃಷ್ಟಾಂತವು ಭಾರತ ವರ್ಷದ

ಹಿಂದೂ ವೀರರಿಗೆ ಇನ್ನು ಮೇಲೆ ಆದರ್ಶವಾಗಿ ಪರಿಣಮಿಸುತ್ತದೆ” ಎಂದು ತಮ್ಮತಮ್ಮಲ್ಲಿಯೇ ಮಾತನಾಡಿಕೊಂಡು ಸಂತಸಪಟ್ಟುಕೊಂಡರು.

ಆ ದರ್ಬಾರಿನ ಮೇಲುಚಾವಣಿಯಲ್ಲಿ ಪರದೆಯ ಹಿಂದೆ ಅಂತಃಪುರ ರಮಣಿಯರು ಕುಳಿತಿದ್ದರು. ಶಿವಾಜಿಯು ವರ್ತನೆಯನ್ನು ನೋಡಿ ಕೆಲವರು ಹಾಹಾಕಾರ ಮಾಡಿದರು.

ಮತ್ತೆ ಕೆಲವರಿಗೆ ಹೃದಯವು ಕಲಕಿದಂತಾಯಿತು. ಕೆಲವರು ರೋಷ ದಿಂದ ತುಟಿ ಕಚ್ಚಿಕೊಂಡರು. ಒಬ್ಬ ರಮಣಿಯು ಮಾತ್ರ “ವೀರ ಪುರುಷ ನವನು. ಎಂತಹ ಕಾಂತಿ. ಎಂತಹ ತೇಜಸ್ಸು. ಅವನು ನಿಜವಾದ ಗಂಡು” ಎಂದು ಉತ್ಕಂಠಿತಳಾಗಿ ಹೇಳಿದಳು.

ಅವಳು ಜಿನೀತ್ ಉನ್ನೀಸಾ. ಔರಂಗಜೇಬನ ಪ್ರಿಯಪುತ್ರಿ.

## ೧೩

ಶಿವಾಜಿಯು ತನ್ನ ಬಿಡಾರಕ್ಕೆ ಹಿಂತಿರುಗಿ ಬಂದು ಯೋಚನಾಕ್ರಾಂತ ನಾಗಿ ಏಕಾಂತದಲ್ಲಿ ಕುಳಿತಿದ್ದನು. ಅವನ ಮನಸ್ಸು ಖಿನ್ನವಾಗಿರಲಿಲ್ಲ. ಭಯದಿಂದ ತಡಬಡಿಸುತ್ತಲೂ ಇರಲಿಲ್ಲ. “ನಾನು ದರ್ಬಾರಿನಲ್ಲಿ ನಡೆದು ಕೊಂಡ ರೀತಿಯು ಸರಿಯೇ ?” ಎಂದು ಆಲೋಚನೆ ಮಾಡುತ್ತಿದ್ದನು. ಎಷ್ಟು ಯೋಚಿಸಿದರೂ ಅವನಿಗೆ ತನ್ನ ತಪ್ಪೇನೂ ಇರುವಂತೆ ತೋರಲಿಲ್ಲ. “ಈ ಮೊಗಲ್ ರಾಜಧಾನಿಗೆ ನಾನು ಬಂದಿದ್ದೇ ತಪ್ಪಾಯಿತೇನು ?” ಎಂದು ಆಲೋಚನೆ ಮಾಡಿಕೊಂಡನು. ಅದರಲ್ಲಿಯೂ ಏನೂ ತಪ್ಪಿಲ್ಲ. ಇವೆಲ್ಲಾ ಭವಾನಿಯ ಇಚ್ಛೆಯಂತ ನಡೆದಿವೆ. ಗುರುವರ್ಯರಾದ ಸಮರ್ಥ ರಾಮದಾಸರು ನನ್ನ ವಿಷಯವಾಗಿ ಆಲೋಚನೆ ಮಾಡುತ್ತಲೇ ಇರುತ್ತಾರೆ. ಇಂತಹ ದುರೂಹ ಪ್ರಸಂಗಗಳಲ್ಲಿ ಗುರುಗಳು ನನ್ನನ್ನು ರಾಮಚಂದ್ರನಿಗೆ ಸಮರ್ಪಣೆ ಮಾಡಿ ಬಿಡುತ್ತಾರೆ. ನಾನೂ ಅಷ್ಟೆ :

ಸರ್ವಸ್ವಂ ಮೇ ರಾಮಚಂದ್ರೋ ದಯಾಳುಃ
ಅನ್ಯಂ ದೈವಂ ನೈವ ಜಾನೇ ನಜಾನೇ ।

ಎಂದು ಹೇಳಿ ರಾಮಚಂದ್ರನನ್ನು ಧ್ಯಾನಮಾಡಿ ಕೈಮುಗಿದನು.

ಆ ಸಮಯಕ್ಕೆ ಸರಿಯಾಗಿ ಕುಮಾರ ರಾಮಸಿಂಗನು ಶಿವಾಜಿಯು ಕುಳಿತಿದ್ದ ಕೋಣೆಯೊಳಕ್ಕೆ ಬಂದು ಶಿವಾಜಿಯನ್ನು ಅಭಿವಂಧಿಸಿದನು. ಶಿವಾಜಿಯು ಎದ್ದುನಿಂತು ಆದರದಿಂದ ರಾಮಸಿಂಗನ ಎರಡು ಕೈಗಳೂ ಹಿಡಿದುಕೊಂಡು ಸಮೀಪದಲ್ಲಿ ಕುಳ್ಳಿರಿಸಿಕೊಂಡನು.

"ರಾಮಸಿಂಗರೇ, ದರ್ಬಾರಿನ ಸಮಾಚಾರವೇನು ?" ಎಂದು ಪ್ರಶ್ನೆಮಾಡಿದನು.

ರಾಮಸಿಂಗವರೇ, "ಶಿವಾಜೀ ಮಹಾರಾಜ್, ನಾನು ನಿನ್ನ ಮಿತ್ರನೆಂದು ತಿಳಿದುಕೋ. ನಾವು ರಜಪೂತರು. ಸುಳ್ಳು ಹೇಳುವವರಲ್ಲ. ಮುಖಸ್ತುತಿ ಮಾಡುವವರೂ ಅಲ್ಲ. ದರ್ಬಾರಿನ ಪದ್ಧತಿಯಂತೆ ನಿನ್ನ ನಡವಳಿಕೆಯು ತಪ್ಪಿತು. ನಾನು ನಿನಗೆ ಪ್ರತಿಯೊಂದು ಅಂಶಗಳನ್ನೂ ಮೊದಲೇ ತಿಳಿಯಪಡಿಸಿದ್ದೆ. ನೀನು ಆ ದರ್ಬಾರಿನಲ್ಲಿ ಗಾಬರಿಯಿಂದ ಮರೆತು ಹಾಗೆ ತಪ್ಪು ಮಾಡಿರಬಹುದು" ಎಂದನು.

"ನಾವೂ ಹಾಗೆಯೇ, ರಾಮಸಿಂಗ್. ಮಾತಿನಲ್ಲೊಂದು ಕೃತಿಯಲ್ಲೊಂದು ಮಾಡುವವರಲ್ಲ. ದರ್ಬಾರಿಗಳ ದೃಷ್ಟಿಯಿಂದ ನಾನು ಬಾದಷಹನ ಸಿಂಹಾಸನದ ಮುಂದೆ ಮಂಡಿಯೂರಿ ತಲೆಯನ್ನು ಭೂಮಿಗೆ ಮುಟ್ಟಿಸಿ ಕುರ್ನೀಸಾತ್ ಮಾಡಲಿಲ್ಲವೆಂದು ನಿಮ್ಮೆಲ್ಲರಿಗೂ ಮನಸ್ಸು ಕಲಕಿದೆ. ಅದು ನನ್ನ ಮಹಾಪರಾಧವೆಂದು ನೀವುಗಳೆಲ್ಲರೂ ಬಗೆದಿದ್ದೀರಿ. ಬಾದಷಹನಿಗೂ ಅದೇ ಆಗ್ರಹ ಬಂದಿರಬಹುದು. ಅದನ್ನೆಲ್ಲಾ ನಾನು ಲೆಕ್ಕಿಸುವವನಲ್ಲ. ಹಾಗೆ ಮಾಡಿದರೆ ಹಿಂಧೂಧರ್ಮಕ್ಕೆ ಅಪಚಾರ ಮಾಡಿದಂತಾಗುವುದೆಂದು ನನ್ನ ದೃಢವಾದ ನಂಬಿಕೆಯಿದೆ. ಹಿಂದಿನ ಕಥೆಯೊಂದನ್ನು ಹೇಳುತ್ತೇನೆ, ಕೇಳು—

"ನನ್ನ ತಂದೆ ಷಾಜೀಯವರು ಬದುಕಿದ್ದಾಗ ನಾನು ಚಿಕ್ಕಬಾಲಕನಾಗಿದ್ದೆ. ನನ್ನನ್ನು ಆದಿಲ್‌ಷಾಹೀ ಸುಲ್ತಾನರ ದರ್ಬಾರಿಗೆ ಕರೆದುಕೊಂಡು ಹೋಗಿ ಒಪ್ಪಿಸಿದರು. ಅದು ದರ್ಬಾರಿನ ಪದ್ಧತಿ. ಆಗ ನಾನು ಕುರ್ನೀಸಾತ್ ಮಾಡಲಿಲ್ಲ. ಮರಾಠರ ಕುಲಪದ್ಧತಿಯಂತೆ ಕೈಮುಗಿದು ನಿಂತುಕೊಂಡೆ.

ಆ ಸುಲ್ತಾನನು ಆಗ್ರಹ ಮಾಡಲಿಲ್ಲ ಹುಡುಗನೆಂದು ಕ್ಷಮಿಸಿರಬಹುದು. ಆದರೆ ನಮ್ಮ ತಂದೆ ಕ್ಷಮಿಸಲಿಲ್ಲ. ನನ್ನನ್ನೂ, ನನ್ನ ತಾಯಿ ಜೀಜಾಬಾಯಿಯವರನ್ನೂ ಅಂದೇ ಪರಿತ್ಯಜಿಸಿದರು. ಪುನಃ ನಾವು ನಮ್ಮ ಹಳ್ಳಿಗೆ ಬಂದು ಹಳ್ಳಿಗಾಡಿನ ಬಡವರಾಗಿ ನಿಂತೆವು.

"ಇಂದು ನೀನು ನನ್ನಲ್ಲಿ ಕಂಡ ವರ್ತನೆ ಅದೇ ಆಗಿದೆ. ನಮ್ಮ ತಂದೆಯಿಂದ ಪರಿತ್ಯಕ್ತನಾದ ನಾನು ಇಂದು ನಿಮ್ಮಿಂದ ಕ್ಷಮೆಯನ್ನು ನಿರೀಕ್ಷಿಸುವುದೆಂತು? ಮೊಗಲ್ ದರ್ಬಾರಿನ ಶಿಸ್ತಿನಿಂದ ನಾನು ಅಪರಾಧಿಯಾಗಿದ್ದರೆ ಅದಕ್ಕೆ ಬೇಕಾದ ಶಿಕ್ಷೆಯನ್ನು ವಿಧಿಸಬಹುದು."

ರಾಮಸಿಂಗನು "ಶಿವಾಜೀ ಮಹಾರಾಜಾ. ಇದು ತಪ್ಪು—ಇದು ಸರಿ ಎಂದು ಲೆಕ್ಕ ಹಾಕುವುದರಿಂದ ಈಗ ಪ್ರಯೋಜನವೇನು? ನಡೆದದ್ದು ನಡೆದುಹೋಯಿತು. ದೆಹಲಿಯ ಬಾದಷಹರ ದರ್ಬಾರಿನಲ್ಲಿ ನಿನ್ನ ವರ್ತನೆಯು ಅಪರಾಧವೇ ಸರಿ. ಅದರಲ್ಲಿ ಆಶ್ಚರ್ಯ ಒಂದುಂಟು! ಬಾದಷಹನಿಗೆ ಕಿಂಚಿತ್ತಾದರೂ ಅಸಮಾಧಾನವಾಗಿರಲಿಲ್ಲ. ನಾನು ನಿನಗಾಗಿ ಬಾದಷಹನಲ್ಲಿ ಕ್ಷಮಾಪಣೆ ಬೇಡಿಕೊಂಡೆ. ಬಾದಷಹನು 'ಅದೇನೂ ಇಲ್ಲ, ರಾಮಸಿಂಗ್. ಶಿವರಾಜನನು ಏನೂ ತಪ್ಪಿಲ್ಲ. ಅವನು ನಮ್ಮ ದರ್ಬಾರನ್ನೆಂದೂ ನೋಡಿಲ್ಲ. ಗಾಬರಿಗೊಂಡು ಅಚಾತುರ್ಯದಿಂದ ಹಾಗೆ ನಡೆದುಕೊಂಡಿರಬಹುದು. ನಮಗೇನೂ ಖತಿ ಇಲ್ಲ. ನೀನು ಶಿವರಾಜನನ್ನು ಸರಿಯಾಗಿ ನೋಡಿಕೋ' ಎಂದು ಅವನೇ ಹೇಳಿದನು.

"ಅದು ನಿನ್ನ ಮೆಹರ್ಬಾನ್. ಆ ಬಾದಷಹನ ಔದಾರ್ಯವೆಂದುಕೊಳ್ಳೋಣ, ನನಗೆ ಈ ರಾಜಧಾನಿಯಲ್ಲಿ ಒಂದು ಕ್ಷಣವಿರುವುದಕ್ಕೂ ಮನಸಿಲ್ಲ. ನೀನು ಹೋಗಿ ಬಾದಷಹನಲ್ಲಿ ಹೇಳಿ ಅಪ್ಪಣೆಪಡೆದು ಬಾ. ನನ್ನನ್ನು ನಮ್ಮ ರಾಜ್ಯಕ್ಕೆ ಕಳುಹಿಸಿಬಿಡು. ಬಹಳ ಉಪಕಾರ ಮಾಡಿದಂತಾಗುತ್ತದೆ. ನಾನು ಜನ್ಮಾವಧಿ ಆ ಉಪಕಾರಸ್ಮರಣೆ ಮಾಡುತ್ತೇನೆ.

"ಶಿವಾಜೀ ಮಹಾರಾಜ್, ನೀನು ಭಯಪಟ್ಟಂತೆ ಕಾಣುತ್ತದೆ. ಸಂದೇಹವನ್ನು ಹಚ್ಚಿಕೊಂಡಂತೆ ತೋರುತ್ತದೆ. ಹಾಗೆ ಭಾವಿಸಬೇಡ. ನೀನು ಹೀಗೆ ಹೊರಟುಹೋದರೆ ಬಾದಷಹನ ದರ್ಬಾರಿಗೆ ಬಂದು ಏನು ತಾನೇ ಸಾಧಿಸಿದಂತೆ ಆಯಿತು? ನಮ್ಮ ತಂದೆಯವರು ಮಾಡಿದ ಸಂಕಲ್ಪ, ವಾಗ್ದಾನಗಳೆಲ್ಲಾ

ವ್ಯರ್ಥವಾದಂತಾಗುತ್ತದೆ. ಈ ದರ್ಬಾರಿನಲ್ಲಿ ನಮಗಾಗದವರು ಎಷ್ಟೋ ಮಂದಿ ಇದ್ದಾರೆ. ಅವರೆಲ್ಲಾ ಶಿವಾಜಿಯು ಭಯಪಟ್ಟು ಓಡಿಹೋದನೆಂದು ಪರಿಹಾಸ್ಯ ಮಾಡಿ ನಗುತ್ತಾರೆ. ನಾನು ನಮ್ಮ ತಂದೆಯವರ ಮಾತಿನಂತೆ ಮತ್ತೊಮ್ಮೆ ನಿನಗೆ ಏಕಾಂತದಲ್ಲಿ ಬಾದಷಹರ ಭೇಟಿ ಮಾಡಿಸುತ್ತೇನೆ. ನಿನ್ನನ್ನು ನೋಡಿ ಬಾದಷಹನು ಮೆಚ್ಚಿಕೊಳ್ಳುತ್ತಾನೆ ಅವನಿಗೂ ನಿನಗೂ ಸ್ನೇಹವಾಗುತ್ತದೆ. ಅಷ್ಟುಮಾಡದೇ ನೀನು ಹೊರಟುಹೋಗುವುದೂ ಸರಿಯಲ್ಲ."

ಶಿವಾಜಿಯು ರಾಮಸಿಂಗನನ್ನು ವಂದಿಸಿ ಕಳುಹಿಸಿದನು.

ಮತ್ತೆ ಶಿವಾಜಿಯು ಆಲೋಚನೆಯಲ್ಲಿ ಬಿದ್ದನು. "ರಾಮಸಿಂಗನು ಏನು ಹೇಳಿದರೇನು ? ನನಗೆ ಗೊತ್ತಿದೆ. ಬಾದಷಹನಿಗೆ ನನ್ನಮೇಲೆ ಆಗ್ರಹ ಉಂಟಾಗಿದೆ. ಇಲ್ಲಿಂದ ಹೇಗಾದರೂ ತಪ್ಪಿಸಿಕೊಂಡು ಹೊರಟುಹೋಗಬೇಕು. ಆಮೇಲೆ ಬಾದಷಹನಿಗೆ ನನ್ನ ಕೈ ತೋರಿಸುತ್ತೇನೆ." ಎಂದುಕೊಂಡನು.

ಮೂರುನಾಲ್ಕು ದಿನಗಳು ದರ್ಬಾರಿನ ದೊಡ್ಡದೊಡ್ಡ ಉಮ್ರಾಗಳೂ, ನರಪತಿಗಳೂ, ಸರ್ದಾರರೂ ಬಂದುಬಂದು ಶಿವಾಜಿಯ ಭೇಟಿಮಾಡಿಕೊಂಡು ಹೋಗುತ್ತಿದ್ದನು. ಇವರಲ್ಲಿ ಹಿಂದೂಗಳೂ, ಮುಸಲ್ಮಾನರೂ ಎಲ್ಲರೂ ಇದ್ದರು. ಶಿವಾಜಿಯು ಎಲ್ಲರನ್ನೂ ಬಹು ಮರ್ಯಾದೆಯಿಂದ ನೋಡಿ ಸೌಜನ್ಯ ದಿಂದ ಮಾತುಕತೆಗಳನ್ನಾಡಿ ಕಳುಹಿಸುತ್ತಿದ್ದನು. ಇದು ಶಿವಾಜಿಯ ಸಂಗಡಿ ಗರಿಗೆ ಒಂದು ವಿಧವಾದ ಆಶ್ಚರ್ಯವನ್ನುಂಟುಮಾಡಿತ್ತು. ನೀಲಾಜೀರಾವ್ ದತ್ತ ತ್ರ್ಯಂಬಕ್ ಮತ್ತು ರಘುಮಿತ್ರ ಈ ಮೂವರು ಮರಾಠಾ ಸರ್ದಾರರೂ ಬಹು ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದರು. ಬಂದು ಹೋಗುವವರ ಮೇಲೆ ಕಣ್ಣುಕಿವಿಗಳನ್ನು ಬಹಳ ಹುಷರಾಗಿಟ್ಟಿದ್ದರು. ಅವರವರು ಗೋಪ್ಯವಾಗಿ ಮಾತನಾಡಿಕೊಂಡರು.

ಶಿವಾಜೀ ಮಹಾರಾಜನು ಬಾದಷನು ದರ್ಬಾರಿನಲ್ಲಿ ಗೌರವದಿಂದ ನಡೆದುಕೊಳ್ಳಲಿಲ್ಲ. ಅವರೂ ಶಿವಾಜೀ ಮಹಾರಾಜನಿಗೆ ಮರ್ಯಾದೆ ಮಾಡಲಿಲ್ಲ. ಶಿವಾಜಿಯು ಕೋಪಗೊಂಡು ಗದ್ದಲವೆಬ್ಬಿಸಿಬಿಟ್ಟು ಹೊರಟು ಬಂದ. ಈ ದರ್ಬಾರಿನಲ್ಲಿ ಮಹೋನ್ನತ ಸ್ಥಾನಗಳಲ್ಲಿ ಇರುವವರೆಲ್ಲಾ ಬಂದು

ಶಿವಾಜೀ ಮಹಾರಾಜನನ್ನು ಭೇಟಿಮಾಡಿಕೊಂಡು ಹೋಗುತ್ತಿದ್ದಾರೆ. ಇದರ ರಹಸ್ಯವೇನು?

ಮರ್ಯಾದೆ, ಅವಮರ್ಯಾದೆಗಳೆರಡನ್ನೂ ಅವರು ಚೆನ್ನಾಗಿ ಬಲ್ಲರು, ಈ ರಜಪೂತರು ಶಿವಾಜಿಯು ವೀರಪುರುಷನೆಂಬ ಮೆಚ್ಚುಗೆಯಿಂದ ಬಂದು ನೋಡಿಕೊಂಡು ಹೋಗುತ್ತಾರೆ. ಮುಸಲ್ಮಾನ ಸರದಾರರು ಈ ಪ್ರಕರಣ ದಲ್ಲಿ ಶಿವಾಜಿಯು ಹೋಗಿದ್ದಾನೆ? ಖಿನ್ನನಾಗಿದ್ದಾನೆಯೇ. ಧೈರ್ಯ ದಿಂದಿದ್ದಾನೆಯೇ, ಎಂಬ ಲಗುಬಿಗಿಯನ್ನು ನೋಡಿಕೊಂಡು ಹೋಗಲು ಬರುತ್ತಾರೆ. ನಮಗೆ ಇಲ್ಲಿರುವವರೆಗೂ ಅಡಿಗಡಿಗೂ ಅಪಾಯ ಉಂಟು ಶಿವಾಜಿಯು ಇದನ್ನು ಬಲ್ಲನು—ಎಂದು ಮಾತನಾಡಿಕೊಳ್ಳುತ್ತಿದ್ದರು.

ವಾರ ಕಳೆಯಿತು. ಹತ್ತು ದಿನ ಕಳೆಯಿತು. ರಾಮಸಿಂಗನು ಪ್ರತಿದಿನವೂ ಬಂದು ಸ್ವಲ್ಪಹೊತ್ತು ಶಿವಾಜಿಯೊಡನೆ ಮಾತನಾಡುತ್ತಾ ಕಾಲಕಳೆದು ಹೋಗುತ್ತಿದ್ದನು.

“ಬಾದಷಹರಿಗೆ ಮೈ ಸ್ವಸ್ಥವಿಲ್ಲ. ಸ್ವಲ್ಪ ಆಲಸ್ಯವಾಗಿದೆ ಆದರೂ ನಿನ್ನ ಯೋಗಕ್ಷೇಮವನ್ನು ಆದರದಿಂದ ವಿಚಾರಿಸುತ್ತಾರೆ. ಸ್ವಲ್ಪ ಲಘುವಾಗುತ್ತಲೇ ಭೇಟಿಮಾಡಿಸುತ್ತೇನೆ” ಎಂದು ಹೇಳಿ ಹೋದನು.

ಶಿವಾಜಿಯ ಸಂಗಡಿಗರಾದ ಮೂವರು ಮುಖ್ಯ ಮರಾಠಾ ಸರ್ದಾರರು ಶಿವಾಜಿಯೊಡನೆ ಅಂತರಂಗದಲ್ಲಿ ಸೇರಿ ಮಾತನಾಡಿದರು.

“ಮಹಾರಾಜರೇ. ಪರಿಸ್ಥಿತಿಯು ಸರಿಯಾಗಿಲ್ಲ. ನಮ್ಮ ನಿವಾಸಸ್ಥಾನದ ಸುತ್ತಲೂ ಬಲವಾದ ಮೊಗಲ್ ಸೈನಿಕರ ಕಾವಲಿದೆ. ಎಲ್ಲರೂ ಶಸ್ತ್ರಧಾರಿ ಗಳಾಗಿದ್ದಾರೆ. ನಮ್ಮ ಕಡೆಯವರು ಹೊರಗೆ ಹೋಗುವಾಗ ಒಳಗೆ ಬರುವಾಗ ತನಿಖೆಮಾಡುತ್ತಾರೆ. ಕಾವಲುಗಾರರ ಮೊಕ್ತೇಸರ ಸಿದ್ದೀ ಫುಲೂದ್ ಎಂಬುವವನಿದ್ದಾನೆ. “ನಮ್ಮ ಕಡೆಯವರನ್ನೇಕೆ ತನಿಖೆಮಾಡುತ್ತೀರಿ ?” ಎಂದು ಅವನನ್ನು ವಿಚಾರಿಸಿದೆ.

ಅವನು ‘ಬಾದಷಹರ ಖುದ್ದು ಹುಕುಂ ಆಗಿದೆ. ಇಲ್ಲಿ ನಿಮ್ಮ ಮಹಾರಾಜನಿಗೆ ಆಗದವರು ಷ್ಟೋ ಮಂದಿ ಇದ್ದಾರೆ ಅವರು ಬಂದು ಮೋಸದಿಂದ ಶಿವಾಜಿಯನ್ನು ಘಾತಿಸಬಹುದು. ವೇಷಾಂತರಗಳಿಂದಲೇ ಬರಬಹುದು. ನಿಮ್ಮ ಮರಾಠನಂತೆ ಬರಬಹುದು. ಬಾಹ್ಯರಂತೆ

ಬರಬಹುದು. ಮುಸಲ್ಮಾನರಂತೆಯೂ ಬರಬಹುದು. ನಿಮ್ಮ ಮಹಾರಾಜರಿಗೇನಾದರೂ ಅಪಘಾತವಾದರೆ ದೆಹಲಿಯ ದರ್ಬಾರಿಗೆ ಶಾಶ್ವತವಾದ ಅಪಕೀರ್ತಿ ಬರುತ್ತದೆ. ಅದಕ್ಕಾಗಿ ಬಂದೋಬಸ್ತು ಮಾಡಿದ್ದೇವೆ' ಎಂದು ಹೇಳಿದ ಈ ಮಾತುಗಳನ್ನು ನಂಬುವುದಕ್ಕಾಗುವುದಿಲ್ಲ. ನಮ್ಮನ್ನು ಪೂರ್ಣವಾಗಿ ಬಂಧನದಲ್ಲಿಟ್ಟಿದ್ದಾರೆ" ಎಂದು ಹೇಳಿದರು.

ಶಿವಾಜಿಯು ಸ್ವಲ್ಪ ಹೊತ್ತು ಮೌನವಾಗಿ ಕುಳಿತಿದ್ದು ನಿಟ್ಟುಸಿರುಬಿಟ್ಟು "ಭವಾನಿ ಇದ್ದಾಳೆ. ಜಾಗರೂಕತೆಯಿಂದ ಇರಿ" ಎಂದು ಹೇಳಿದನು.

ರಾಮಸಿಂಗನು ಬಂದು ಹೋಗುವುದೂ ನಿಂತುಹೋಯಿತು. ಯಾರೂ ಇತ್ತ ಕಡೆ ಸುಳಿಯುತ್ತಿರಲಿಲ್ಲ. ಶಿವಾಜಿಯು ಬಂಧನದಲ್ಲಿದ್ದೇನೆ–ಎಂದು ಖಚಿತಮಾಡಿಕೊಂಡನು.

ಪೋಲೀಸರ ಸಿದ್ದಿಫುಲಾದನು ಶಿವಾಜಿಯನ್ನು ಪದೇ ಪದೇ ಬಂದು ಭೇಟಿ ಮಾಡುತ್ತಿದ್ದನು. ಯಾವಾಗಲೂ ಶಿವಾಜಿಯ ಮೇಲೆ ಕಣ್ಣಿಟ್ಟು ಸರ್ಪಕಾವಲಾಗಿ ನೋಡಿಕೊಳ್ಳುತ್ತಿದ್ದನು.

ಬಾದಷಹನ ಅಂತರಂಗ ವಿಚಾರಗಳೇ ಬೇರೆ ವಿಧವಾಗಿದ್ದವು. "ಈ ಶಿವಾಜಿ ಬಹಳ ತುಂಟ. ಕೈಗೆ ಸಿಕ್ಕಿದ್ದಾನೆ. ಇವನನ್ನು ಬಿಡಕೂಡದು. ಸಾಯುವ ತನಕ ಕಾರಾಗೃಹದಲ್ಲಿರಲಿ. ಅಥವಾ ಸಮಯ ನೋಡಿ ಮುಗಿಸಿಯೇ ಬಿಡೋಣ" ಎಂದು ಆಲೋಚನೆ ಮಾಡುತ್ತಿದ್ದನು.

ನಾನಾಮುಖವಾಗಿ ಮುಸಲ್ಮಾನ್ ಸರದಾರರೆಲ್ಲರೂ ಔರಂಗಜೇಬನಿಗೆ ಅದೇ ಸಲಹೆ ಕೊಡುತ್ತಿದ್ದರು. ಷಯಿಸ್ತಾಖಾನನ ಕಡೆಯವರೆಲ್ಲರೂ ಶಿವಾಜಿಯನ್ನು ಕೊಲ್ಲಿಸಲೇಬೇಕೆಂದು ನಾನಾವಿಧವಾದ ಪ್ರಯತ್ನಗಳನ್ನು ಮಾಡುತ್ತಿದ್ದರು. ಷಯಿಸ್ತಾಖಾನನ ಹೆಂಡತಿಯ ಅವಾಂತರ ಹೇಳತೀರದು. ಅವಳು ತನ್ನ ಮಗನನ್ನು ಕಳೆದುಕೊಂಡಿದ್ದಾಳೆ. ಪತಿಯು ಪದಚ್ಯುತನಾಗಿದ್ದಾನೆ. ಆ ಸೇಡು ತೀರಿಸಿಕೊಳ್ಳಲು ಈಗ ಒಳ್ಳೆಯ ಸಮಯ ಸಿಕ್ಕಿದೆ. ಅವಳೇಕೆ ಬಿಟ್ಟಾಳು?

ಬಾದಷಹನ ಅರಮನೆಯಲ್ಲಿ ಅವಳ ಸ್ಥಾನಮಾನಗಳು ಸಾಮಾನ್ಯವಾದವುಗಳಲ್ಲ. ಅವಳು ಔರಂಗಜೇಬನ ಸೋದರಮಾವನ ಹೆಂಡತಿ.

ದರ್ಬಾರಿನ ಮುಖ್ಯಮಂತ್ರಿ ವಜೀರ್ ಜಾಫರನು ಅವಳ ಅಣ್ಣ.

ವಜೀರ್ ಜಾಫರನಿಗೂ ಔರಂಗಜೇಬನ ಸೋದರಿಯಾದ ಜಹನಾರ ಳಿಗೂ ಇವಳಿಗೂ ಅತ್ಯಂತ ಪ್ರೇಮವಿತ್ತು. ಜಹನಾರಳಿಗೆ ಶಿವಾಜಿಯಿಂದ ಅಪಚಾರವೂ ಆಗಿತ್ತು. ಸೂರತ್ತಿನ ವರಮಾನ ಹನ್ನೆರಡು ಲಕ್ಷ ವರಹಗಳನ್ನು ಜಹನಾರಳಿಗೆ ಕೊಡಬೇಕೆಂದು ಬಾದಷಹನು ಆಜ್ಞೆಮಾಡಿದ್ದನು. ಶಿವಾಜಿಯು ಲೂಟಿಮಾಡಿ ಹಾವಳಿಮಾಡಿದುದರಿಂದ ಆ ವರಮಾನಕ್ಕೆ ಕಲ್ಲುಬಿದ್ದಿತ್ತು. ಅವಳೂ ಷಯಿಸ್ತಾಖಾನನ ಹೆಂಡತಿಯೊಡನೆ ಸೇರಿ ಶಿವಾಜಿಯ ಮೇಲೆ ಪ್ರಬಲ ವಾದ ಅಭಿಯೋಗ ನಡೆಸಿದ್ದಳು.

ಔರಂಗಜೇಬನು ಮಂತ್ರಿಗಳನ್ನೆಲ್ಲಾ ಕರೆಸಿ ಮಂತ್ರಾಲೋಚನೆ ಮಾಡಿ ದನು. ಬಾದಷಹನು ಮಂತ್ರಿಗಳಿಗೆ ಹೇಳಿದನು.

"ಈಗ ಶಿವಾಜಿಯು ನನ್ನ ಕೈಗೆ ಸಿಕ್ಕಿದ್ದಾನೆ. ಇವನು ದರ್ಬಾರಿಗೆ ಬಹಳ ತೊಂದರೆಕೊಟ್ಟಿರುವ ತುಂಟಿಕೋರ. ಇವನನ್ನು ಆಮರಣಾಂತ ಬಂಧನ ದಲ್ಲಿಡಬೇಕೇ, ಕೊಲ್ಲಿಸಿಬಿಡಬೇಕೆ? ಇದನ್ನು ನೀವು ಖಚಿತವಾಗಿ ಹೇಳಬೇಕು.

"ಮತ್ತೊಂದು ಪಕ್ಷ ಅವನನ್ನು ಬಿಟ್ಟುಬಿಡಬೇಕೆಂದೂ ಇದೆ. ಮಿರ್ಜಾ ರಾಜ ಜಯಸಿಂಹರವರು ಅವನ ಕಡೆಗಿದ್ದಾರೆ. ಅದನ್ನೂ ಯೋಚನೆ ಮಾಡಬೇಕು" ಎಂದು ಹೇಳಿದನು.

ಮಂತ್ರಿಗಳು ಒಬ್ಬೊಬ್ಬರು ಒಂದೊಂದು ವಿಧವಾಗಿ ಮಾತನಾಡಿದರು.

ಒಬ್ಬ ಮಂತ್ರಿಯು "ಅಫ್ಘಾನೀಸ್ಥಾನ್, ಕಾಬುಲೂಗಳ ಕಡೆ ಕಾಡು ಜನರು ನಮಗೆ ವಿರುದ್ಧವಾಗಿ ಬಲವಾದ ದಂಗೆ ಎದ್ದಿದ್ದಾರೆ ಈ ಶಿವಾಜಿ ಯನ್ನು ಅವರ ಮೇಲೆ ಯುದ್ಧಕ್ಕೆ ಕಳುಹಿಸಿಬಿಡೋಣ ಆ ಜನರೇ ಅವನನ್ನು ತಿಂದು ಹಾಕಿ ಬಿಡುತ್ತಾರೆ. ಗೆದ್ದು ಬಂದರೆ ಸಂತೋಷವೇ ಆಯಿತು" ಎಂದು ಹೇಳಿದನು.

ಮುಖ್ಯಮಂತ್ರಿ ವಜೀರ್‌ಜಾಫರ್‌ಖಾನನು ಎದ್ದುನಿಂತು ಸಲಾಮ್ ಮಾಡಿ ಹೇಳಿದನು "ಬಾದಷಹರವರ ಘನವಾದ ಮಂತ್ರಿಮಂಡಲದಲ್ಲಿ ಇಂತಹ ಮಾತುಗಳನ್ನಾಡುವುದು ಉಚಿತವಲ್ಲ ಎಫೂದೀ ಜನರು ದಂಗೆ ಎದ್ದಿದ್ದರೆ

ಅವರನ್ನು ದಮನ ಮಾಡುವುದಕ್ಕೆ ನಮ್ಮ ದರ್ಬಾರಿಗೆ ತಾಖತ್ತಿದೆ. ಸಮರ್ಥ ರಾದ ಸೇನಾಧಿಪತಿಗಳಿದ್ದಾರೆ. ಈ ಶಿವಾಜಿಯನ್ನು ಅಲ್ಲಿಗೆ ಕಳುಹಿಸಿದರೆ ಅವನು ಪರಾರಿಯಾಗಬಹುದು. ಅಥವಾ ಆ ಕಾಡುಜನರೊಂದಿಗೆ ಸೇರಿ ಕೊಂಡು ನಮ್ಮ ಮೇಲೆಯೇ ತಿರುಗಿ ಬೀಳಬಹುದು.

"ಮಿರ್ಜಾರಾಜ ಜಯಸಿಂಹರವರ ಮಾತನ್ನೂ ಗೌರವಿಸಬೇಕಾದದ್ದೇ. ಈಗ ಅವರ ಮಾತು ತಾನಾಗಿಯೇ ಹಾರಿಹೋಗಿದೆ ಶಿವಾಜಿಯು ಸಾಮ್ರಾಟ ರಿಗೆ ದರ್ಬಾರಿನಲ್ಲಿ ಅಗೌರವ ಮಾಡಿದ್ದಾನೆ ಹದ್ದುಮೀರಿ ಮಾತನಾಡಿದ್ದಾನೆ. ಆ ನಡುವಳಿಕೆಯನ್ನು ಜಯಸಿಂಹ ಮಹಾರಾಜರಾದರೂ ಎಂದಿಗೂ ಸರಿ ಯೆಂದು ಹೇಳಲಾಗುವುದಿಲ್ಲ. ಆಗ ಅವರ ಅರ್ಜಿ ಹರಿದುಹೋಯಿತು ಶಿವಾಜಿಯು ತಾನಾಗಿಯೇ ತಂದುಕೊಂಡ ಆಪತ್ತು ಅದು.

"ಅದರೆ ಬಾದಷಹರವರು ಔದಾರ್ಯದಿಂದ ಆ ಅಪರಾಧವನ್ನು ಸಣ್ಣ ದೆಂದು ಭಾವಿಸಿ ಕಾರಾಗೃಹದಲ್ಲಿಡಬಹುದು.

"ಇವನು ಹಿಂದೆ ಮಾಡಿದ ಅಪರಾಧಗಳನ್ನು ನಾವು ಅಲಕ್ಷ್ಯಮಾಡು ವಂತಿಲ್ಲ. ಇವನೂ ಇವನ ಸಂಗಡಿಗರೂ ಸೇರಿ ಎಷ್ಟೋ ಬಾರಿ ಮೊಗಲ್ ರಾಜ್ಯಗಳನ್ನು ಕೊಳ್ಳೆಹೊಡೆದಿದ್ದಾರೆ. ಸೂರತ್ತಿನಲ್ಲಿ ಶಿವಾಜಿಯು ನಡೆಸಿದ ದುಂಧಲೆಯಿಂದ ವಿದೇಶೀಯರು ಕೂಡ ನಮ್ಮನ್ನು ನೋಡಿ ನಗು ವಂತಾಗಿದೆ.

"ನಮ್ಮ ಸಾಮ್ರಾಜ್ಯದ ಸೇನಾಧಿಪತಿ ಷಯಿಸ್ತಾಖಾನರ ಮೇಲೆ ಅವನು ನಡೆಸಿರುವ ಕಾರುಬಾರುಗಳೂ ಅವರ ಮಗ ಅಬುಲ್‌ಫತ್ ಖಾನನ ಕೊಲೆ ಇವೆಲ್ಲವೂ ಮುಸಲ್ಮಾನ್ ಸರ್ದಾರರಿಗೆ ತಲೆತಗ್ಗಿಸುವಂತೆ ಮಾಡಿವೆ. ಇವನ್ನೆಲ್ಲಾ ಪರ್ಯಾಲೋಚಿಸಿದರೆ ಶಿವಾಜಿಯು ಮರಣದಂಡನೆಗೆ ಅರ್ಹ ನಾದವನೆಂದು ಖಚಿತವಾಗುತ್ತದೆ.

"ಮತ್ತೊಂದು ಮಾತಿದೆ. ಷಹಾಪಹರವರು ಮಾಫ್ ಮಾಡಬೇಕು. ಜಯಸಿಂಹ ಮಹಾರಾಜರು ದಖ್ಖನ್ನಿಗೆ ಹೋಗಿ ಮಾಡಿದ್ದೇನು? ಸೇನಾಧಿಪತಿ ದಿಲೀಲ್‌ಖಾನರೂ, ದಾವೂದ್‌ಖಾನರೂ ಶಿವಾಜಿಯ ಕೋಟೆಗಳನ್ನು ಸ್ವಾಧೀನ ಪಡಿಸಿಕೊಂಡು ಅವನನ್ನು ಸೆರೆಹಿಡಿದರು. ಮಹಾರಾಜ ಜಯಸಿಂಹರು

ಅವನಿಗೆ ಕ್ಷಮೆತೋರಿ ಗೌರವಿಸಿ ಮನ್ನಣೆಮಾಡಿ ರಾಜಿ ಮಾಡಿಕೊಂಡರು. ಇದು ನಮ್ಮ ದರ್ಬಾರಿಗೆ ಅಪಮಾನಕರವೆಂದು ಹೇಳದೇ ಗತ್ಯಂತರವಿಲ್ಲ.

"ಆಮೇಲೆ ನಡೆದ ಬಿಜಾಪುರದ ಅವಹೇಳನ ಪ್ರಸಂಗವಂತೂ ಮೊಗಲ್ ಸಾಮ್ರಾಜ್ಯದ ಧವಳ ಕೀರ್ತಿಗೆ ಮಸಿ ಬಳಿದಂತಾಗಿದೆ.

"ಶಿವಾಜಿಯನ್ನು ಶೂಲಕ್ಕೇರಿಸುವುದೇ ನ್ಯಾಯುವಾಗಿದೆ" ಎಂದು ಹೇಳಿದನು.

ಎಲ್ಲ ಮಂತ್ರಿಗಳೂ ಆ ಮಾತಿಗೆ ತಲೆದೂಗಿದರು. ಬಾದಷಹನು ಮೌನದಿಂದ ಮಂತ್ರಾಲೋಚನಾ ಸಭೆಯನ್ನು ವಿಸರ್ಜನೆ ಮಾಡಿದನು.

ಔರಂಗಜೇಬನ ಮುಖವು ಕೆಂಪಗೆ ಅಗ್ನಿಕುಂಡದಂತೆ ಜ್ವಲಿಸುತ್ತಿತ್ತು. ಅವನು ರಾಜಬಂದಿಗಳ ಬಂದೀಖಾನೆಯ ಮುಖ್ಯಾಧಿಕಾರಿ ರಾತಾನ್‌ದಾಜ್‌ನನ್ನು ಕರೆಕಳುಹಿಸಿದನು. ರಾದಾನ್‌ದಾಜ್‌ನು ಬಂದು ಬಾದಷಹರ ಭೇಟಿ ಮಾಡಿದನು. ಘೋರವಾದ ಶಿಕ್ಷೆಗಳನ್ನು ಕೊಡುವುದರಲ್ಲಿ, ಕೊಲೆ ಮಾಡುವುದರಲ್ಲಿ ಅವನು ನಿಸ್ಸೀಮನೆಂದು ಹೆಸರು ವಾಸಿಯಾಗಿತ್ತು. ಅವನ ಹೆಸರು ಹೇಳೀದರೇ ದರ್ಬಾರಿಗಳ ಹೃದಯಗಳು ನಡುಗುತ್ತಿತ್ತು. ಬಾದಷಹನು ಅವನಿಗೆ ಅಪ್ಪಣೆ ಮಾಡಿದನು.

"ಮಿರ್ಜಾರಾಜಾ ಜಯಸಿಂಹರ ಅರಮನೆಯಲ್ಲಿ ಮರಾಠಾ ಜನರ ನಾಯಕನಾದ ಶಿವಾಜಿಯು ಬಂಧನದಲ್ಲಿದ್ದಾನೆ. ಅವನನ್ನು ನಿನ್ನ ಅಧೀನಕ್ಕೆ ತೆಗೆದುಕೋ. ನಿನ್ನ ಕಾರಾಗಾರಕ್ಕೆ ಕರೆದುಕೊಂಡು ಹೋಗು. ಅವನಿಗೆ ಚಿತ್ರಹಿಂಸೆಗಳನ್ನು ಕೊಟ್ಟು ಕೊಲೆಮಾಡಬೇಕು"

ಈ ಸಮಾಚಾರಗಳು ದರ್ಬಾರಿನಲ್ಲಿ, ಅರಮನೆಯಲ್ಲಿ ಆಗ್ರಾ ನಗರದ ರಾಜಬೀದಿಗಳಲ್ಲಿ 'ಗುಸುಗುಸು' ಮಾತುಗಳಾಗಿ ಹಬ್ಬಿದವು.

ರಾಮಸಿಂಗನು ಬಾದಷಹರ ಭೇಟಿಮಾಡಿದನು ಬಾದಷಹನು ಎಂದಿನಂತೆ ಸರಳವಾಗಿರಲಿಲ್ಲ. ಕಠಿಣಮನಸ್ಕನಾಗಿಯೇ ಹುಬ್ಬುಗಂಟಿಕ್ಕಿ ಮೌನ ಮುದ್ರೆಯಿಂದ ಕುಳಿತಿದ್ದನು.

ರಾಮಸಿಂಗನು ವಿನಯದಿಂದ "ಜಹಪನಾ, ಶಿವಾಜಿಯ ವಿಷಯಕ್ಕೆ ಏನು ಅಪ್ಪಣೆಯಾಗಿದೆ?" ಎಂದು ಕೇಳಿದನು.

"ಅವನ ಅಪರಾಧಗಳನ್ನೆಲ್ಲಾ ಗಮನಿಸಿದ್ದೇವೆ. ಅವನಿಗೆ ಮರಣ ದಂಡನೆ ವಿಧಿಸಲ್ಪಟ್ಟಿದೆ."

ರಾಮಸಿಂಗನು "ಹಾ ! ಹಾ !" ಎಂದು ಉದ್ಗಾರ ಮಾಡುತ್ತಾ ಬಾದಷಹನ ಪಾದಗಳ ಮೇಲೆ ತಲೆಯಿಟ್ಟು ವಂದಿಸಿ ನಿರ್ವಿಣ್ಣನಾಗಿ ಎದ್ದು ನಿಂತನು. ಅವನ ಕಣ್ಣುಗಳಲ್ಲಿ ಧಾರಾಕಾರವಾಗಿ ಕಂಬನಿ ಸುರಿಯುತ್ತಿತ್ತು.

ಬಾದಷಹನ ಮನಸ್ಸು ಕೊಂಚಮಟ್ಟಿಗೆ ಚಲಿಸಿತು.

"ರಾಮಸಿಂಗ್, ನೀನು ಹೇಳುವುದೇನಾದರೂ ಇದ್ದರೆ ಹೇಳು,"

"ಬಾದಷಹರ ಅಪ್ಪಣೆಯಾದ ಮೇಲೆ ಪ್ರತಿ ಮಾತನಾಡುವುದಕ್ಕೆ ನಾನಾರು ? ನನ್ನ ಮನಸ್ಸಿನಲ್ಲಿಯೇ ಆಲೋಚನೆ ಮಾಡಿಕೊಳ್ಳುತ್ತಿದ್ದೇನೆ. ಮೊದಲು ನನಗೆ ಶಿಕ್ಷೆಯಾಗಿ ಆಮೇಲೆ ಶಿವಾಜಿಗೆ ಶಿಕ್ಷೆಯಾಗಿದ್ದರೆ ಬಹಳ ಚೆನ್ನಾಗಿತ್ತು. ಅವನಿಗೆ ವಾಗ್ದಾನಮಾಡಿ ಪ್ರಾಣಭಿಕ್ಷೆ ನೀಡಿ ನಾವು ಅವನನ್ನು ಇಲ್ಲಿಗೆ ಕರೆತಂದಾಗಿದೆ. ಇದರಿಂದ ನಮ್ಮ ಕುಲಕ್ಕೇ ಕಳಂಕ ತಟ್ಟಿದಂತಾಗಿದೆ.

"ಹುಜೂರ್. ಅವನೆಷ್ಟರವನು ! ನಮ್ಮ ಧಮನಿಗಳಲ್ಲಿ ಈ ರಜಪೂತ ರಕ್ತವು ಹರಿಯುತ್ತಿದೆ. ಅವನೊಡನೆ ಯುದ್ಧಮಾಡಿ ಹೊಡೆದು ಹಾಕುವ ಶಕ್ತಿಯು ನಮಗಿದೆ. ಅವನನ್ನು ಹೀಗೆ ಕರೆತಂದು ಕೊಲೆಗೊಡ್ಡುವುದು ಯಾವ ಧರ್ಮ ?"

"ರಾಮಸಿಂಗ್, ನಿನ್ನನ್ನು ಹುಟ್ಟಿದಂದಿನಿಂದ ನನ್ನ ಮಗನಂತೆ ಭಾವಿಸಿದ್ದೇನೆ. ಮಗುವಾಗಿದ್ದಾಗ ತೊಡೆಯ ಮೇಲಿಟ್ಟು ಮುದ್ದಾಡಿದ್ದೇನೆ. ದೊಡ್ಡವನಾದ ಮೇಲೆ ನೀನು ಆಜಾನುಬಾಹು, ವೀರಪುರುಷ. ಕ್ಷಾತ್ರತೇಜದಿಂದ ಬೆಳಗುವ ನಿನ್ನ ಮುಖ,ಯುದ್ಧಗಳಲ್ಲಿ ವೀರಾವೇಶದಿಂದ ಹೋರಾಡುವ ನಿನ್ನ ಪರಾಕ್ರಮ, ಇವುಗಳನ್ನೆಲ್ಲಾ ನೋಡಿ ನೋಡಿ ಪರಮಾನಂದದಿಂದ ಹಿಗ್ಗಿದ್ದೇನೆ. ನೀನು ಆ ಕಾಫರ ಶಿವಾಜಿಯ ಮಮತೆಯನ್ನು ಕಟ್ಟಿಕೊಂಡು ಕಣ್ಣೀರಿಡುತ್ತಿರುವುದನ್ನು ನೋಡಿ ನನಗೆ ಆಶ್ಚರ್ಯವಾಗುತ್ತದೆ. ಖೇದವಾಗುತ್ತದೆ, ಹೇಳು. ಶಿವಾಜಿಯ ಕಡೆ ಏನು ವಾದವನ್ನು ಹೇಳಲಿಚ್ಛಿಸುವೆಯೋ ಅದನ್ನು ಪೂರ್ಣವಾಗಿ ಹೇಳು" ಎಂದು ಬಾದಷಹನು ಹೇಳಿದನು.

ರಾಮಸಿಂಗನು ಸಲಾಂ ಮಾಡಿ "ಷಹಾನ್‌ಷಹಾ, ಶಿವಾಜಿಯ ಕಡೆ

ಒಂದು ಮಾತನ್ನು ಹೇಳುವುದಕ್ಕೂ ನಾನು ಹುಜೂರಿಗೆ ಬಂದಿಲ್ಲ. ನನ್ನ ತಂದೆ ಮಹಾರಾಜ ಜಯಸಿಂಹನವರ ಪರವಾಗಿ, ನನ್ನ ಪರವಾಗಿ ಎರಡು ಮಾತು ಗಳನ್ನು ಹೇಳಲು ಬಂದಿದ್ದೇನೆ. ಅದಕ್ಕೆ ಕೃಪೆಮಾಡಿ ಅವಕಾಶ ಕೊಡೋಣ ವಾಗಿದೆ. ಖಾವಂದರವರು ಸಾವಧಾನದಿಂದ ಆಲಿಸಬೇಕು.

"ನನ್ನ ತಂದೆ ಜಯಸಿಂಹ ಮಹಾರಾಜರು ಹನ್ನೆರಡು ವರ್ಷ ವಯಸ್ಸಿನ ಬಾಲ್ಯ ವಯಸ್ಸಿನಲ್ಲಿ ಬಾದಷಹರ ದರ್ಬಾರಿಗೆ ಬಂದರಂತೆ. ಅವರನ್ನು ಬೆಳೆಸಿ ವಿದ್ಯೆ ಕಲಿಸಿ, ಶಸ್ತ್ರಾಭ್ಯಾಸ ಮಾಡಿಸಿ, ಮಾನ ಮನ್ನಣೆಗಳನ್ನಿತ್ತು 'ಮಿರ್ಜಾ ರಾಜ' ಎಂಬ ಉಮ್ರಾಗಳ ದರ್ಜೆಗೆ ಏರಿಸಿದವರು ಖಾವಂದರಲ್ಲವೆ? ಅಂದಿನಿಂದ ಇಂದಿನವರೆಗೆ ಆ ರಜಪೂತವೀರನು ತಮ್ಮ ಪಾದದೆಡೆಯಲ್ಲಿ ಒಂದಾದರೂ ಅಪಚಾರವೆಸಗಿದ ನಿದರ್ಶನ ಉಂಟೇ ? ಈ ಇಡೀ ಹಿಂದೂಸ್ಥಾನದಲ್ಲಿ ರಣ ಕ್ಷೇತ್ರದಲ್ಲಿಯಾಗಲೀ. ಪ್ರಪಂಚದಲ್ಲೇ ವಿಖ್ಯಾತವಾದ ಈ ದೆಹಲಿಯ ದರ್ಬಾರಿ ನಲ್ಲಿಯಾಗಲೀ ಅದರ ಗೌರವಕ್ಕೆ ಕುಂದಕ ಉಂಟಾದ ಉದಾಹರಣೆಯು ಒಂದಾದರೂ ಉಂಟೇ ? ಜಯಸಿಂಹ ಮಹಾರಾಜರು ಈ ಶಿವಾಜಿಗೆ 'ದರ್ಬಾರಿ ನಲ್ಲಿ ಗೌರವ ಮಾಡಿಸುತ್ತೇನೆ. ಬಾದಷಹರ ಅನುಗ್ರಹಕ್ಕೆ ಪಾತ್ರನನ್ನಾಗಿ ಮಾಡಿಸುತ್ತೇನೆ' ಎಂದು ವಾಗ್ದಾನ ಕೊಟ್ಟು ಅವನನ್ನು ಸನ್ನಿಧಾನಕ್ಕೆ ಕಳು ಹಿಸಿದ್ದಾರಲ್ಲವೇ ? ಈ ಪ್ರಸಂಗದಲ್ಲಿ ನನ್ನ ತಂದೆ ಜಯಸಿಂಹ ಮಹಾರಾಜರ ಸದ್ಭಾವನೆಯಲ್ಲಿ ಕಿಂಚಿತ್ತಾದರೂ ಲೋಪವಿದೆಯೋ ? ಈ ವೃದ್ಧಾಪ್ಯದಲ್ಲಿ ಈ ಪ್ರಸಂಗದಿಂದ ಅವರಿಗೆಷ್ಟು ಅಪಕೀರ್ತಿಯು ಬರುತ್ತದೆ. ದೆಹಲಿಯ ದರ್ಬಾರಿ ನಲ್ಲಿ ಇಂತಹ ಮಹೋನ್ನತ ಪದವಿಯಲ್ಲಿರುವ ಜಯಸಿಂಹ ಮಹಾರಾಜರಿಗೆ ಅಪಕೀರ್ತಿಯು ತಟ್ಟಿದರೆ ಅದು ಮರಣಕ್ಕಿಂತಲೂ ಅಧಿಕವಾದದ್ದು.

"ಜಹಾಪನಾ, ನನ್ನ ಮಾತು ಹೇಳುತ್ತೇನೆ. ನಮ್ಮ ತಂದೆಯವರು ಅವನನ್ನು ನನ್ನ ರಕ್ಷಣೆಗೆ ವಹಿಸಿಕೊಟ್ಟಾಗಿನಿಂದ ನಾನು ಅವನನ್ನು ಸ್ನೇಹಿತ ನಂತೆ ನೋಡಿಕೊಳ್ಳುತ್ತಿದ್ದೇನೆ. ಈಗ ನಾನು ಮಿತ್ರದ್ರೋಹವೆಸಗಿದೆನೆಂದು ಅವನ ಅಂತರಾತ್ಮವು ಮಿಡಿಯುವುದಿಲ್ಲವೇ ? ಅವನನ್ನು ನಾನು ಹುಜೂರ್ ಸನ್ನಿಧಾನಕ್ಕೆ ಕರೆತರುತ್ತೇನೆ. ತಾವು 'ನೀನು ಅಪರಾಧಿ' ಎಂದು ಹೇಳಿ ಮೊಗಲ್ ರಾಜ್ಯದಿಂದ ಗಡೀಪಾರು ಮಾಡಿಸಿಬಿಡಿರಿ. ನಾನೇ ಅವನ ಮೇಲೆ ಯುದ್ಧ ಮಾಡಿ ಸೆರೆಹಿಡಿದು ತರುತ್ತೇನೆ. ಅಥವಾ ರಣರಂಗದಲ್ಲಿ ಅವನ ತಲೆ

ಯನ್ನು ಕಡಿದು ತಂದು ತಮ್ಮ ಪಾದಗಳಿಗೆ ಒಪ್ಪಿಸುತ್ತೇನೆ. ಅದು ನನ್ನ ರಜಪೂತ ಕುಲಕ್ಕೆ ಭೂಷಣಪ್ರಾಯವಾಗಿರುತ್ತದೆ. ಅಂತಹ ವರಪ್ರದಾನವನ್ನು ತಮ್ಮಿಂದ ನಾನು ಬೇಡುತ್ತಿದ್ದೇನೆ" ಎಂದು ಹೇಳಿ ಬಗ್ಗಿ ಸಲಾಮು ಮಾಡಿದನು.

ಬಾದಷಹನು "ಕುಮಾರ ರಾಮಸಿಂಗ್, ನೀನು ನನ್ನವನು. ಆದರೆ ದರ್ಬಾರೆಲ್ಲವೂ ವಿರುದ್ಧವಾಗಿದೆ. ಜಯಸಿಂಹ ಮಹಾರಾಜರು ಎಲ್ಲರಿಗಿಂತ ದೊಡ್ಡವರು. ಅವರ ಮಾತಿಗೂ ಮನ್ನಣೆ ಕೊಡಲೇಬೇಕು. ನಾಳೆ ಖಚಿತ ವಾದ ಉತ್ತರ ಕೊಡುತ್ತೇನೆ" ಎಂದು ಹೇಳಿ ಕಳುಹಿಸಿದನು.

ರಾಮಸಿಂಗನ ಮನಸ್ಸಿಗೆ ಸಮಾಧಾನವಾಯಿತು. ಗಾಢಾಂಧಕಾರದಲ್ಲಿ ಅಸ್ಪಷ್ಟವಾದ ಬೆಳಕು ಕಂಡಂತಾಯಿತು. ಅವನು ತನ್ನ ಮನೆಗೆ ಹಿಂತಿರುಗಿದನು.

ಬಾದಷಹನು ಅಂತಃಪುರಕ್ಕೆ ಹೊರಟುಹೋದನು.

ಆ ದಿನ ಸಂಧ್ಯಾಕಾಲ ಔರಂಗಜೇಬನು ಪ್ರಾರ್ಥನೆಯನ್ನು ಮುಗಿಸಿ ಕುಳಿತುಕೊಂಡಿದ್ದನು. ಅವನ ಮನಸ್ಸಿನಲ್ಲಿ ರಾಮಸಿಂಗನ ಮಾತುಗಳು ಬುದ್ಬುದಾಕಾರವಾಗಿ ಪುನರಾವರ್ತನೆಯಾಗುತ್ತಿದ್ದುವು. ಒಂದು ಕಡೆ ಜಯ ಸಿಂಹನ ಮೇಲಿದ್ದ ಪ್ರೀತಿ ಗೌರವಗಳು, ಮತ್ತೊಂದು ಕಡೆ ಶಿವಾಜಿಯ ಮೇಲಿದ್ದ ದ್ವೇಷ ಕ್ರೋಧಗಳು. ಇವು ಅವನ ಮನಃಪಟಲದ ಮೇಲೆ ಒಂದು ಭಯಂಕರ ಹೋರಾಟ ನಡೆಸುತ್ತಿತ್ತು. ಆ ಸಮಯಕ್ಕೆ ಸರಿಯಾಗಿ ಬಾಗಿಲು ತೆರೆಯಲ್ಪಟ್ಟಿತು. ಇಬ್ಬರು ಅಂತಃಪುರ ರಮಣಿಯರು ಒಳಗೆ ಬಂದು ಕದ ವನ್ನು ಮುಚ್ಚಿ ಬಾದಷಹನಿಗೆ ಅಭಿವಾದನ ಮಾಡಿದರು. ಬಾದಷಹನ ಪೀಠದ ಮುಂದೆ ಖುರಾನ್ ಪುಸ್ತಕವು ತೆರೆದಿಡಲ್ಪಟ್ಟಿದ್ದಿತ್ತು. ಆ ಕೋಣೆಯಲ್ಲಿ ಪ್ರಾರ್ಥನಾ ಕಾಲದಲ್ಲಿ ಇದ್ದ ಮಂದಪ್ರಕಾಶವು ಆ ಅಂತಃಪುರ ರಮಣಿಯರ ಬೆಡಗಿನಿಂದ ಉಜ್ವಲ ಪ್ರಭೆಯನ್ನು ಬೀರುತ್ತಿರುವಂತೆ ಭಾಸವಾಯಿತು. ತಲೆ ಬಾಗಿ ಕುಳಿತಿದ್ದ ಔರಂಗಜೇಬನು ತಲೆಯೆತ್ತಿ ನೋಡಿದನು. ಜಿನೀತುನ್ನಿಸಾ ಮತ್ತು ರೋಷನಾರ. ಬಾದಷಹನು ಅವರಿಬ್ಬರನ್ನೂ ಏಕಕಾಲದಲ್ಲಿ ಏಕತ್ರ ನೋಡಿ ಆಶ್ಚರ್ಯಚಕಿತನಾದನು. ಜಿನೀತುನ್ನೀಸಳು ಯಾವಾಗಲೂ ಬರುವವಳಲ್ಲ, ಎಂದೂ ದರ್ಬಾರಿನ ವಿಷಯಗಳನ್ನು ಮಾತನಾಡುವವಳಲ್ಲ.

ರೋಷನಾರಳು ಹಾಗಲ್ಲ. ಪ್ರತಿಯೊಂದು ವಿಷಯದಲ್ಲಿಯೂ ಅವಳ ವ್ಯಾಪಕತೆಯುಂಟು. ರೋಷನಾರಳು ಬಾದಷಹನಿಗೆ ಮಂತ್ರಿ, ಸಖಿ, ಸೋದರಿ, ಆಪ್ತಳು. ಬಾದಷಹನ ಸರ್ವಸ್ವವನ್ನೂ ಸೂರೆಗೊಳ್ಳುವ ವರ್ಚಸ್ಸುಳ್ಳವಳು.

ಬಾದಷಹನು "ಇದೇನಾಶ್ಚರ್ಯ, ಅತ್ತಿ ಸೊಸೆಯರಿಬ್ಬರೂ ಒಟ್ಟಿಗೆ ಬಂದಿದ್ದೀರಿ, ಕುಳಿತುಕೊಳ್ಳಿ" ಎಂದನು.

ರೋಷನಾರಳು "ಜಹಾಪನಾ! ಇಬ್ಬರೂ ತಮಗೆ ಆಶ್ಚರ್ಯವಾಗುವಂಥಾ ಒಂದು ವರವನ್ನು ಬೇಡಲು ಬಂದಿದ್ದೇವೆ" ಎಂದಳು.

"ವರ! ವರವೆಂದರೇನು? ನೀವು ಬೇಡುವಂಥದೇನಿದೆ? ನಿಮಗೆ ಇಲ್ಲವೆಂದು ಹೇಳುವುದಾದರೂ ನನ್ನಲ್ಲೇನಿದೆ ಹೇಳು ತಂಗಿ. ಚಮತ್ಕಾರವಾಗಿ ಮಾತನಾಡುತ್ತಿ."

"ಜಹಾಪನಾ! ತಮಗೆ ಅಪ್ರಿಯವಾದ ಮಾತು ಅಂಥದನ್ನು ಕೇಳಲು ಹಿಂಜರಿಯುತ್ತೇವೆ."

"ಕೇಳು ತಂಗಿ, ನಮ್ಮಂಥವರಿಗೆ ಪ್ರಿಯಾಪ್ರಿಯಗಳೆಂದರೇನು? ಇಂದು ಪ್ರಿಯವಾದುದು ನಾಳೆ ಅಪ್ರಿಯ. ಈ ಖುದಾನ ಪ್ರೇಮವೊಂದು ಮಾತ್ರ ಎಂದೆಂದಿಗೂ ಶಾಶ್ವತವಾದದ್ದು." ಎಂದು ಹೇಳುತ್ತಾ ಖುರಾನಿನ ಕಡೆಗೆ ಕೈ ತೋರಿಸಿದನು. ರೋಷನಾರಳು ಖುರಾನಿಗೆ ವಂದಿಸಿ, "ಷಹಾನ್‌ಷಹಾ, ಆ ಶಿವಾಜಿಯ ಪ್ರಾಣಭಿಕ್ಷೆ ಬೇಡಲು ಬಂದಿದ್ದೇನೆ" ಎಂದು ಹೇಳಿದಳು.

ಔರಂಗಜೇಬನು "ಹಾ! ಹಾ! ನಿನಗೆ ಹುಚ್ಚು ಹಿಡಿದಿದೆ. ಕಾಫರನ ಮಾತನ್ನು ಇಲ್ಲಿ ಎತ್ತಲು ನಿನಗೆ ನಾಚಿಕೆಯಿಲ್ಲವೇ? ಖುದಾನ ಬೆಳಕಿನಿಂದ ಪವಿತ್ರವಾದ ಈ ಸ್ಥಳದಲ್ಲಿ ಕಾಫರನ ಹೆಸರು ಹೇಳಲು ನಿನಗೆ ಹೇಗೆ ಮನಸ್ಸು ಬಂತು, ಹೇಳು! ಅವನಿಗಾಗಿ ನೀನೇಕೆ ಶಿಫಾರ್ಸು ಮಾಡಲು ಬಂದಿರುವೆ? ಯಾರು ನಿನ್ನನ್ನು ಚಿತಾವಣೆ ಮಾಡಿದವರು? ಹೆಡೆಯೆತ್ತಿದ ಘಟಸರ್ಪದ ಬಾಯಿಗೆ ಕೈ ಇಡಲು ಬಂದಿರುವೆ."

"ಜಹಾಪನಾ! ಶಾಂತಿಯಿಂದ ಕೇಳಬೇಕು. ಆ ಶಿವಾಜಿಗೆ ವಿಚಾರಣೆ ಇಲ್ಲದೇ ಮರಣದಂಡನೆಯಾಗಿದೆಯೆಂದು ಅಂತಃಪುರದಲ್ಲೆಲ್ಲರೂ ಮಾತನಾಡುತ್ತಾರೆ. ಅವನ ತಪ್ಪು ವಿಚಾರಣೆಯಾಗಿದೆಯೇ? ದರಬಾರಿನ ಖಾಜೀಸಾಹೇಬರು

ಈ ಶಿಕ್ಷೆಯೂ ಸರಿಯೆಂದು ಒಪ್ಪಿಕೊಂಡಿದ್ದಾರೆಯೋ ?"

"ಹುಷ್ ! ಮಾತನಾಡಬೇಡ, ಅವನ ತಪ್ಪು ಪ್ರತ್ಯಕ್ಷ ಸಾಬೀತಾಗಿದೆ. ಒಂದೇ, ಎರಡೇ, ಎಣಿಸಲಾರದಷ್ಟು ಅಪರಾಧಗಳಿವೆ. ಅವನು ಹರಾಂ ! ಕಾಫರ! ಅವನ ತಪ್ಪುಗಳನ್ನು ನಾನು ಹೇಳಬೇಕೆ? ಈ ದರಬಾರಿನ ಕಂಬ ಕಂಬಗಳೂ ನುಡಿಯುತ್ತವೆ."

"ಷಹಾನ್‌ಷಹಾ ! ಶಾಂತರಾಗಿರಿ. ಮಿರ್ಜಾರಾಜಾ ಜಯಸಿಂಹರು ಈ ದರಬಾರಿನಲ್ಲಿ ಗೌರವ ಕೊಡಿಸುತ್ತೇನೆಂದು ಅವನನ್ನು ಇಲ್ಲಿಗೆ ಕಳಿಸಿಕೊಟ್ಟರು. ಈ ದರಬಾರಿನಲ್ಲಿ ಅವನ ಮೇಲೆ ಬೆಟ್ಟದಷ್ಟು ಪಿತೂರಿಯು ನಡೆದಿದೆ."

"ಪಿತೂರಿ ! ಯಾರು ಪಿತೂರಿ ನಡೆಸಿದವರು? ಅದಕ್ಕೆ ಸಾಕ್ಷಿಯೇನಿದೆ?"

"ಜಹಪನಾ ! ಬೇರೆ ಸಾಕ್ಷಿ ಏಕೆ ಬೇಕು ? ನಾನೇ ಸಾಕ್ಷಿ. ನನ್ನೊಡನೆ ದೊಡ್ಡದೊಡ್ಡ ದರಬಾರಿಗಳು ಬಂದು ಅವನಿಗೆ ವಿರೋಧವಾಗಿ ಬೇಕಾದಷ್ಟು ದೂರುಗಳನ್ನು ಹೇಳಿದ್ದಾರೆ. ಹುಜೂರು ಸನ್ನಿಧಾನಕ್ಕೆ ಕರೆಸಿ ಅವನನ್ನು ವಿಚಾರಣೆಮಾಡಿ ಶಿಕ್ಷೆ ವಿಧಿಸಿದ್ದರೆ, ಅದು ಬಾದಷಹರ ಗಾಂಭೀರ್ಯಕ್ಕೆ ತಕ್ಕಂತಿತ್ತು."

"ವಿಚಾರಣೆ ! ಏನು ವಿಚಾರಣೆ ಮಾಡಬೇಕು ?"

"ಅವನ ತಪ್ಪೇನಿದೆಯೋ ಆ ವಿಚಾರಣೆ, ಈ ಪಿತೂರಿಕಾರರೆಲ್ಲಾ ಎದುರಿಗೆ ಬಂದು ಖುದಾನ ಮೇಲೆ ಆಣೆ ಇಟ್ಟು ಖಾಜೀ ಸಾಹೇಬರ ಮುಂದೆ ನುಡಿಯಲಿ. ಮಿರ್ಜಾರಾಜಾ ಜಯಸಿಂಹರವರು ಬಂದು ಪ್ರತಿವಾದ ಮಾಡಲಿ. ಆಗ ತಪ್ಪು ಸಾಬೀತಾದರೆ, ಆ ಶಿವಾಜಿಯೂ ಜಯಸಿಂಹ ಮಹಾರಾಜರೂ ಇಬ್ಬರೂ ತಪ್ಪಿತಸ್ಥರಾಗುತ್ತಾರೆ. ಇಲ್ಲದಿದ್ದರೆ ಈ ದೂರು ಕೊಟ್ಟವರು ಬಯಲಿಗೆ ಬಂದು ಶಿಕ್ಷಾರ್ಹರಾಗುತ್ತಾರೆ. ಈಗ ಅವಸರವೇಕೆ? ಆ ಶಿವಾಜಿಯು ಬಂಧನದಲ್ಲೇ ಇರಲಿ. ಇನ್ನೂ ಕಟ್ಟುನಿಟ್ಟಾದ ಬಂಧನವನ್ನು ವಿಧಿಸಿರಿ. ನಾನೇ ಖುದ್ದಾಗಿ ಅವನ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತೇನೆ. ಭರದರ್ಬಾರಿನಲ್ಲಿ ವಿಚಾರಣೆಯಾಗಲಿ !"

ಔರಂಗಜೇಬನು ನಕ್ಕು "ಎಲ್ಲದಕ್ಕಿಂತಲೂ ಅತಿಶಯವಾದ ಮಾತಿದು. ನೀನು ಅವನ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವ ಮಾತು! ಎಲ್ಲದ

ಕ್ಕಿಂತಲೂ ಇದು ಆಶ್ಚರ್ಯವಾಗಿದೆ. ರೋಷನಾರಾ, ನಿಜವಾಗಿ ಮಾತನಾಡುತ್ತಿರುವೆಯೋ ಪರಿಹಾಸ್ಯ ಮಾಡುತ್ತಿರುವೆಯೋ ?”

“ಜಹಾಪನಾ ! ತಮ್ಮ ಮುಂದೆ ಪರಿಹಾಸ್ಯ ಮಾಡುವುದೆಂದರೇನು ? ಇಷ್ಟೆಲ್ಲಾ ತರಳೆ ತಾಪತ್ರಯಗಳೇಕೆ ? ಖಾಜೀ ಸಾಹೇಬರನ್ನು ಇಲ್ಲಿಗೆ ಕರೆಸಿಬಿಡಿರಿ. ಈ ಖುರಾನಿನ ಮುಂದೆ ಅವರು ತೀರ್ಪು ಕೊಡಲಿ. ಆಮೇಲೆ ಮರಣದಂಡನೆಯಾಗಲಿ. ನಾನೇ ಕತ್ತಿಯಿಂದ ಆ ಶಿವಾಜಿಯ ತಲೆಯನ್ನು ಕತ್ತರಿಸಿ ತಂದು ಬಾದಷಹರ ಪಾದಗಳಿಗೊಪ್ಪಿಸುತ್ತೇನೆ.”

“ಒಳ್ಳೆಯ ಮಾತು. ಖಾಜೀಸಾಹೇಬರನ್ನು ಇಲ್ಲಿಗೆ ಕರೆಸಬೇಕು. ನಾನು ಆ ಕಾಫರನ ಮೇಲೆ ದೂರು ಹೇಳಬೇಕು. ಸ್ವಯಂ ರೋಷನಾರಾ ಪ್ರತಿವಾದ ಮಾಡುತ್ತಾಳೆ. ತೀರ್ಪು ಗೊತ್ತೇ ಇದೆ. ನಿನ್ನ ಕಡೆಗೇ ತೀರ್ಪು. ಆ ಮಾತು ಹಾಗಿರಲಿ. ಅವನು ಇಂದೇ ಶೂಲಕ್ಕೇರಿದರೇನು, ಮತ್ತೊಂದು ದಿನವಾದರೇನು ? ನಮ್ಮ ಕೈಗೆ ಸಿಕ್ಕಿದ್ದಾನೆ. ಬಂಧನದಲ್ಲಿಟ್ಟಿದ್ದೇವೆ. ನಿನಗೇಕೆ ಅವನಲ್ಲಿ ಇಷ್ಟೊಂದು ಆಸಕ್ತಿ ?”

“ಆ ಮಾತು ಬೇರೆ ಜಹಾಪನಾ ! ನಾನೊಬ್ಬಳೇ ಅಲ್ಲ. ಈ ಅಂತಃಪುರದಲ್ಲಿ ನಾನು ಮತ್ತು ಈ ಜಿನೀತ್‌ಉನ್ನೀಸಾ ನಮಗಿಬ್ಬರಿಗೂ ಅವನಲ್ಲಿ ಆಸಕ್ತಿಯುಂಟಾಗಿದೆ. ಉಳಿದವರೆಲ್ಲರೂ ಅವನ ವಿರೋಧಿಗಳೇ. ಅವನು ಅತ್ಯಂತ ಪರಾಕ್ರಮಿಯೆಂದು ನಾವು ಕಥೆಗಳನ್ನು ಕೇಳಿದ್ದೇವೆ. ಯಾರಿಂದಲೂ ಅವನನ್ನು ಜಯಿಸುವುದಕ್ಕಾಗದೆ ಮಿರ್ಜಾರಾಜಾ ಜಯಸಿಂಹರನ್ನೇ ಯುದ್ಧಕ್ಕೆ ಕಳಿಸಿದಿರೆಂದು ಕೇಳಿದ್ದೇವೆ. ನೂರು ಯುದ್ಧಗಳಲ್ಲಿ ಗೆದ್ದ ಜಯಸಿಂಹರು ಈ ಶಿವಾಜಿಯನ್ನು ಪಳಗಿಸಿ ತಮ್ಮ ದರಬಾರಿನಲ್ಲಿ ಗೌರವ ಕೊಡಿಸಿ ದರಬಾರಿನ ಸೇವಕನನ್ನಾಗಿ ಮಾಡಬೇಕೆಂದು ಇಲ್ಲಿಗೆ ಕಳುಹಿಸಿದರಂತೆ. ಅದು ಎಂತಹ ಸುಯೋಗದಲ್ಲಿ ? ಬಾದಷಹರ ಐವತ್ತನೆಯ ವರ್ಷ ವರ್ಧಂತಿಯ ಮಹೋತ್ಸವ ಸಮಯದಲ್ಲಿ. ಇಂಥಾ ಸಮಯದಲ್ಲಿ ಅಪರಾಧಿಗಳನ್ನು ಖುಲಾಸೆ ಮಾಡುತ್ತಾರೆ. ಅದಕ್ಕೆ ಪ್ರತಿಯಾಗಿ ಆ ಮಹಾ ಪರಾಕ್ರಮಶಾಲಿಯ ಮರಣದಂಡನೆ. ಅದಕ್ಕಾಗಿ ಈ ದರಬಾರಿನಲ್ಲಿ ಬಾಲ್ಯದಿಂದಲೂ ಸೇವೆ ಮಾಡಿರುವ ಮಹಾ ಪರಾಕ್ರಮಶಾಲಿ ಜಯಸಿಂಹ ಮಹಾರಾಜರು ನಾಲಿಗೆ ಹಿರಿದುಕೊಂಡು ಪ್ರಾಣ ಬಿಡಬೇಕು. ಇಂಥಾ ಕಾರ್ಯವು ಈ ಸಮಯದಲ್ಲಿ ಬಾದಷಹರಿಂದ

ಆಗಬಹುದೇ ? ಇದಕ್ಕೆಲ್ಲಾ ಒಂದೇ ಒಂದು ಮೂಲಕಾರಣ: ಆ ನಿರ್ಭಾಗ್ಯ ವೀರಪುರುಷನು ಹಿಂದೂ. ಇದು ಸತ್ಯವಾದ ಮಾತು. ಹೌದೋ ಅಲ್ಲವೋ ಹೇಳಿ, ಅಣ್ಣಾಜೀ. ಈಗ ಆ ಖುರಾನಿನ ಕಡೆಗೆ ಕೈತೋರಿಸಿ ಹೇಳಿ!"

ಔರಂಗಸೇಬನು ಅವರಿಬ್ಬರ ಮುಖಗಳನ್ನೂ ಒಂದು ಬಾರಿ ದಿಟ್ಟಿಸಿ ನೋಡಿ ತಲೆ ತಗ್ಗಿಸಿಕೊಂಡು ಕುಳಿತನು.

"ಹೌದು ಎನ್ನಿ! ನಾನು ಅವನನ್ನು ಮುಹಮುದೀಯುನನ್ನಾಗಿ ಮಾಡುತ್ತೇನೆ. ಆಗ ಏನು ಹೇಳುವಿರಿ? ಆ ಶಿವಾಜಿಯು ಮೂರ್ಖ. ಅವನು ಮುಹಮುದೀಯುನಾಗಿದ್ದರೆ ಬಾದಷಹರ ದರಬಾರಿನಲ್ಲಿ ಸಿಂಹಾಸನದ ಪಕ್ಕದಲ್ಲಿ ಕುಳ್ಳಿರಿಸಿಕೊಳ್ಳುತ್ತಿದ್ದಿರಿ. ಈಗ ಅದನ್ನೇ ಹೇಳುವುದಕ್ಕೆ ಬಂದಿದ್ದೇನೆ. ಅವನನ್ನು ಮಹಮುದೀಯುನನ್ನಾಗಿ ಮಾಡುತ್ತೇನೆ. ಆಗ ಅವನ ಅಪರಾಧವನ್ನು ಮನ್ನಿಸಬಹುದಷ್ಟೆ."

ಔರಂಗಸೇಬನು ತಲೆಯೆತ್ತಿ ಬಿರುಗಣ್ಣು ಬಿಟ್ಟು ರೋಷನಾರಳ ಕಡೆಗೆ ನೋಡುತ್ತಾ "ಅದು ಅಸಂಭವ. ಅಸಾಧ್ಯವಾದ ಕಾರ್ಯ. ಯಾರಿಂದಲೂ ಆಗದ ಮಾತು" ಎಂದ.

ರೋಷನಾರಳು ನಗುತ್ತಾ "ಬಾದಷಹರಿಂದಲೂ ಸಾಧಿಸಲಾಗದ ಮಾತೇ ಅದು. ಹಾಗಾದರೆ ಈ ಜಗತ್ತಿನಲ್ಲಿ ಬಾದಷಹರಿಂದಲೂ ಸಾಧ್ಯವಾಗದ ಒಂದು ಮಹತ್ಕಾರ್ಯವಿದೆ. ಅದನ್ನು ಈ ತಂಗಿ ಮತ್ತು ಈ ಪ್ರೇಮದ ಕುವರಿ ಇವರು ಸಾಧಿಸುತ್ತೇವೆಂದು ಬಂದಿದ್ದಾರೆ. ನಾವು ಸಾಧಿಸಿದರೆ ಬಾದಷಹರು ಪರಾಜಯುವನ್ನೊಪ್ಪಿಕೊಳ್ಳಬೇಕು. ಅಂತಹ ಸಾಹಸದ ಪ್ರಯತ್ನಕ್ಕಾದರೂ ಒಂದು ಖಿತಾಬ್ ಸಿಕ್ಕಲೇಬೇಕು. ಅದನ್ನು ಬೇಡುವುದಕ್ಕೆ ನಾವು ಬಂದಿದ್ದೇವೆ."

"ರೋಷನಾರಾ? ಅವನಿಗೆ ನೀನು ಇಂದು ಪ್ರಾಣದಾನ ಮಾಡಿ ಬದುಕಿಸಿದೆ. ಬದುಕಿಕೊಳ್ಳಲಿ. ಆದರೆ ಅವನನ್ನು ಪವಿತ್ರ ಮುಸಲ್ಮಾನ್ ಧರ್ಮಕ್ಕೆ ಸೇರುವಂತೆ ಮಾಡುವುದು ನಿನ್ನಿಂದ ಅಸಾಧ್ಯವಾದ ಕರ್ಮ. ನೀನು ಇನ್ನೂ ಆ ಮಾತನ್ನು ನಿಜವಾಗಿ ಹೇಳುತ್ತಿರುವೆಯಾ ?"

"ಹೌದು! ಜಹಪನಾ. ಸತ್ಯವಾಗಿ ಹೇಳುತ್ತಿದ್ದೇನೆ. ತಮಗೆ ಭಗವಂತನಿರುವಂತೆಯೇ ನನಗೂ ಆ ಖುದಾನಿದ್ದಾನೆ. ಅವನ ಪ್ರೇರಣೆಯಾಗಿದೆ.

ಅವರಿಂದಲೇ ಬಂದು ನಿಮ್ಮಲ್ಲಿ ಬೇಡುತ್ತಿದ್ದೇನೆ."

"ಒಳ್ಳೆಯದು ಹೋಗು! ನಿನ್ನ ಇಷ್ಟದಂತಾಗಲಿ" ಎಂದು ಬಾದಷಹನು ಹೇಳಿದನು.

ಆ ಇಬ್ಬರು ಸ್ತ್ರೀಯರ ಮುಖಾರವಿಂದಗಳೂ ಅರಳಿದವು. ರೋಷನಾರಳು "ಪ್ಯಾರೀ ಜನೀತ್, ನಮ್ಮ ಕೆಲಸವಾಯಿತು. ನೀನು ಹೋಗು! ಈ ಬಾದಷಹರು ಇಂದು ನಮ್ಮಿಬ್ಬರಿಗೂ ಸೋತಿದ್ದಾರೆ. ಅವರಿಗೆ ಸ್ವಲ್ಪ ಸಮಾಧಾನ ಮಾಡಿಬರುತ್ತೇನೆ" ಎಂದಳು.

ಜನೀತುನ್ನೀಸಳು ಅಭಿವಾದನ ಮಾಡಿ ಹೊರಟುಹೋದಳು.

ಬಾದಷಹನು "ರೋಷನಾರಾ! ಇದೇನು ತಂತ್ರ, ಇದೇನು ಅಭಿಯೋಗ? ಈ ವಿಷಯಕ್ಕೆ ನೀನೇಕೆ ಕೈ ಹಚ್ಚಿದೆ. ಈ ಕುಮಾರಿಯೇಗೆ ನಿನ್ನ ಸೆರಗು ಹಿಡಿದು ಇಲ್ಲಿಯವರೆಗೆ ಬಂದಳು? ಇದೆಲ್ಲಾ ಏನು? ನೀನು ಆ ಶಿವಾಜಿಯ ಮೇಲೆ ಭರವಸೆಯಿಟ್ಟು ಇಷ್ಟು ಮುಂದುವರಿದುದು ಹೇಗೆ? ಈಗ ಹೇಳು. ನಿನ್ನ ಮನಸ್ಸಿನಲ್ಲಿ ಇದು ಸಾಧ್ಯವಾಗುವ ಕಾರ್ಯವೆಂದು ನಂಬಿರುವೆಯಾ?"

"ಹೌದು, ಅಣ್ಣಾಜೀ! ಸ್ತ್ರೀಯರಿಂದ ಸಾಧ್ಯವಾಗದ ಕಾರ್ಯ ಈ ಲೋಕದಲ್ಲೇನುಂಟು? ಆ ಸ್ತ್ರೀಶಕ್ತಿಯು ನಿಮ್ಮೆಲ್ಲರನ್ನು ಜಯಿಸಬಲ್ಲುದೋ ಜಯಿಸಲಾರದೋ ಹೇಳಲಾರೆ. ತಮ್ಮನ್ನೂ ಜಯಿಸಬಲ್ಲದೆಂದೇ ನನ್ನ ಭಾವನೆ. ಇನ್ನು ಆ ಶಿವಾಜಿಯ ಮಾತೇನು?"

ಔರಂಗಜೇಬನು "ಯಾವ ಉಪಾಯವನ್ನು ಹುಡುಕಿದ್ದೀ, ರೋಷನಾರಾ?" ಎಂದನು.

"ಉಪಾಯವೇ, ದೊಡ್ಡ ಪುರಸ್ಕಾರ. ನೀವು ಅವನಿಗೆ ಈ ದರ್ಬಾರಿನಲ್ಲಿ ಉನ್ನತಸ್ಥಾನವನ್ನು ಕೊಡಬಲ್ಲಿರಿ. ಅದನ್ನು ಅವನೇ ಸಂಪಾದಿಸಿಕೊಳ್ಳಬಲ್ಲ. ಸ್ವಯಂ ಪರಾಕ್ರಮದಿಂದ ಬಿಜಾಪುರವನ್ನು ಗೆದ್ದು ತಂದು ಬಾದಷಹರ ಪಾದಕ್ಕೊಪ್ಪಿಸಿ ಅದಕ್ಕಿಂತಲೂ ಅಧಿಕ ಪುರಸ್ಕಾರವನ್ನು ಪಡೆಯಬಲ್ಲ. ಕಾಬೂಲ್ ಕಾಂದಹಾರಗಳನ್ನು ಗೆದ್ದು ತಂದು ಪಾದಗಳಿಗೊಪ್ಪಿಸಬಲ್ಲ.

"ರಾಜ್ಯವನ್ನು ಕಟ್ಟಬೇಕೆಂದರೆ ಸ್ವಭುಜ ಬಲದಿಂದ ರಾಜ್ಯವನ್ನು ಕಟ್ಟಬಲ್ಲ. ಅದಕ್ಕೆ ನಿಮ್ಮ ಅನುಗ್ರಹವೇಕೆ, ನನ್ನ ಅನುಗ್ರಹವೇಕೆ? ಆದರೆ

ನಾನು ಕೊಡುವ ಪುರಸ್ಕಾರವು ಅಮೂಲ್ಯವಾದದು. ಅವನು ನೂರು ವರ್ಷಗಳು ತಪಸ್ಸು ಮಾಡಿದರೂ ಲಭಿಸದಂತಹುದು."

"ಅದೇನು ಪುರಸ್ಕಾರ, ರೋಷನಾರಾ, ಹೇಳಬಾರದೇ? ಇದೇನು ನನ್ನ ಮುಂದೆ ಇಂದ್ರಜಾಲ ಮಾಡುತ್ತಿರುವೆಯಾ? ಹೇಳು, ಅಂತಹ ಪುರಸ್ಕಾರ ವಾವುದು?"

"ಷಹಾನ್‌ಷಹಾ ಬಾದಷಹರಿಗೆ ಇಷ್ಟು ಬುದ್ಧಿ ಹೊಳೆಯಲಿಲ್ಲವೇ ? ಆ ಶಿವಾಜಿಯು ನನ್ನ ಮಾತು ಕೇಳಿ ಮುಸಲ್ಮಾನನಾದರೆ ಈ ಜಿನೀತಳನ್ನು ಅವನಿಗೆ ಪುರಸ್ಕಾರ ಕೊಡುತ್ತೇನೆ. ಈಗ ಹೇಳಿರಿ, ನಾನು ಗೆಲ್ಲುವೆನೋ ಇಲ್ಲವೋ ?"

ಬಾದಷಹನು ಮುಗುಳುನಗೆಯಿಂದ "ರೋಷನಾರ, ಈ ಹುಚ್ಚು ನಿನಗೇಕೆ ಹಿಡಿಯಿತು?" ಎಂದ.

"ನನಗಲ್ಲ, ಅಣ್ಣಾಜೀ. ಆ ಕುವರಿ ಜಿನೀತಳಿಗೆ ಆ ಹುಚ್ಚು ಹಿಡಿದಿದೆ. ಅಷ್ಟೇ! ಈಗ ಗೊತ್ತಾಯಿತೇ, ನಿಮಗೆ. ಅವಳ ಮನಸ್ಸನ್ನು ಒಲಿಸಿಕೊಳ್ಳಲು ಎಷ್ಟೋ ರಜಪೂತರೂ; ದೊಡ್ಡದೊಡ್ಡ ಮುಸಲ್ಮಾನ್ ಸರದಾರರೂ ಕಾದು ನಿಂತಿದ್ದಾರೆ. ಅವಳ ಮನವು ಆ ಹಿಂದುವಿನ ಮೇಲೆ ಒಲಿದಿದೆ. ಅದು ಅಸಂಭವ. ತಮ್ಮ ಆಜ್ಞೆಯನ್ನು ಪಡೆಯದೇ ಅವಳ ಮನೋರಥಗಳು ಫಲಿಸವು. ಅವನ ಪರಾಕ್ರಮವನ್ನು ನೀವೆಷ್ಟು ಮೆಚ್ಚಿಕೊಂಡರೂ ಹಿಂದುವಿಗೆ ನೀವು ಈ ಅಮೂಲ್ಯರತ್ನವನ್ನು ಕೊಡಲೊಪ್ಪುವುದಿಲ್ಲ. ಅದಕ್ಕಿರುವುದು ಒಂದೇ ಒಂದು ಉಪಾಯ. ಅದು ಶಿವಾಜಿಯನ್ನು ಪವಿತ್ರ ಇಸ್ಲಾಂ ಧರ್ಮಕ್ಕೆ ಸೇರಿಸಿಬಿಡುವುದು. ಆ ಕಾರ್ಯವನ್ನು ನಾನು ಒಪ್ಪಿಕೊಂಡಿದ್ದೇನೆ."

ಔರಂಗಜೇಬನು ಬಹಳ ಹೊತ್ತು ಮೌನದಿಂದಿದ್ದನು. "ರೋಷನಾರಾ, ನಿನ್ನ ಇಷ್ಟಕ್ಕೆ ವಿರೋಧವಿಲ್ಲ. ಆದರೆ ಈ ಮಾತು ಯಾರ ಕಿವಿಗೂ ಬೀಳಬಾರದು. ನನ್ನ ಪ್ರಯತ್ನವು ಭಗ್ನವಾದರೆ ನನಗೆಂಥಾ ಅವಮಾನ ! ಈ ದೆಹಲಿಯ ಸಿಂಹಾಸನಕ್ಕೆ ಎಂತಹ ಅವಮಾನ ! ಅದನ್ನು ಚೆನ್ನಾಗಿ ಯೋಚಿಸಿರುವೆಯಾ? "

"ಹೌದು ! ಜಹಾಪನಾ. ನಾವಿಬ್ಬರೂ ಬಹಳ ಯೋಚಿಸಿದ್ದೇವೆ. ಇಲ್ಲದಿದ್ದರೆ ಇಂಥಾ ಅಪ್ರಿಯ ವಿಚಾರವನ್ನು ತಮ್ಮ ಮುಂದೆ ಬಂದು ಹೇಳಲು

ಧೈರ್ಯಮಾಡುತ್ತಿದ್ದೆವೇ? ನಮಗೆ ಆ ಸಾಹಸವೆಲ್ಲಿ ಬರಬೇಕು. ಬಾದಷಹರ ಆಜ್ಞೆಗೆ ಈ ಇಡೀ ಹಿಂದೂಸ್ಥಾನದಲ್ಲಿ ಪ್ರತಿಯುಂಟೇ? ಅದು ಖುದಾನು ನಿಮ್ಮ ಮೇಲೆ ಅನುಗ್ರಹಿಸಿರುವ ಮಹಾ ವರಪ್ರಸಾದ. ಅದನ್ನು ಚೆನ್ನಾಗಿ ಬಲ್ಲವಳು ನಾನು."

## ೧೬

ಆಗ್ರಾ ಪಟ್ಟಣದಲ್ಲಿ ಅರಮನೆಯ ಪಕ್ಕದಲ್ಲಿಯೇ ಮಹಾರಾಜ ಜಯ ಸಿಂಹನ ಮಹಲು ಇದ್ದಿತು. ಆ ಮಹಲು ಅರಮನೆಯಷ್ಟು ದೊಡ್ಡದಲ್ಲ ದಿದ್ದರೂ ಭವ್ಯವಾದ ಮಹಲು. ಆ ಮಹಲಿನ ಪ್ರತಿಯೊಂದು ಕೋಣೆಗಳೂ, ಹಜಾರಗಳೂ ಅಮೃತಶಿಲೆಗಳಿಂದ ಅಲಂಕೃತವಾಗಿದ್ದವು. ಮಹಲಿನಲ್ಲಿ ಎಲ್ಲಿ ನೋಡಿದರೂ ಕಂದೀಲುಗಳು ತೂಗುತ್ತಿದ್ದವು. ಸಂಧ್ಯಾಕಾಲವಾಗು ತ್ತಲೇ ಆ ಮಂದಿರವು ದೀಪಮಾಲೆಗಳಿಂದ ಅಲಂಕೃತವಾಗಿ ಪ್ರಭಾಮಯ ವಾಗಿ ಬೆಳಗುತ್ತಿದ್ದಿತು.

ಕುಮಾರ ರಾಮಸಿಂಗನು ಪ್ರತಿಯೊಂದು ವಿಚಾರದಲ್ಲಿಯೂ ಹೆಚ್ಚು ಶ್ರದ್ಧೆ ವಹಿಸುತ್ತಿದ್ದನು. ಜಯಸಿಂಹ ಮಹಾರಾಜನು ಆ ಅರಮನೆಯಲ್ಲಿ ದ್ದಿದ್ದರೆ ಎಷ್ಟು ಶಿಸ್ತಿನಿಂದ ಕಾರ್ಯಕಲಾಪಗಳು ನಡೆಯುತ್ತಿದ್ದುವೋ ಅಷ್ಟೇ ಅಚ್ಚುಕಟ್ಟಾಗಿ ನಡೆಯುವಂತೆ ವ್ಯವಸ್ಥೆ ಮಾಡಿದ್ದನು.

ಶಿವಾಜಿಗೆ ಬಂಧನದಲ್ಲಿರುವ ಸಂಗತಿಯು ಸ್ಪಷ್ಟವಾಗಿ ತಿಳಿದಿತ್ತು ಮೊಕ್ತೇಸರ ಸಿದ್ದೀ ಫಲೂದನು ಶಿವಾಜಿಗೆ ಹೇಳಿದ್ದನು.

"ಶಿವಾಜೀ ಮಹಾರಾಜರೇ, ತಮ್ಮನ್ನು ಬಂಧನದಲ್ಲಿಡುವಂತೆ ಬಾದ ಷಹರೇ ಖುದ್ದಾಗಿ ಅಪ್ಪಣೆಮಾಡಿದ್ದಾರೆ. ತಮ್ಮನ್ನು ಅತ್ಯಂತ ಕಠೋರವಾದ ಕಾರಾಗಾರಕ್ಕೆ ಕಳುಹಿಸಬೇಕೆಂದು ಹುಕ್ಕುಂ ಆಗಿತ್ತು. ಏನೋ ದೈವಕೃಪೆ, ಉಳಿದುಕೊಂಡಿರಿ. ಅಲ್ಲಿಗೆ ಹೋದವರಾರೂ ಹಿಂತಿರುಗಿ ಬಂದಿದ್ದ ನಾನು

ಕೇಳಿಯೇ ಇಲ್ಲ. ತೋಬಾ ತೋಬಾ, ಆ ಮಾತು ಬೇಡ. ಕುಮಾರ ರಾಮಸಿಂಗರವರು ತಮ್ಮನ್ನು ಇಲ್ಲಿಯೇ ಇಡಬೇಕೆಂದೂ ಮರ್ಯಾದೆಯಿಂದ ನೋಡಿಕೊಳ್ಳಬೇಕೆಂದೂ ಬಾದಷಹರವರಲ್ಲಿ ಪ್ರಾರ್ಥನೆ ಮಾಡಿದರು. ಏನೋ ಆಶ್ಚರ್ಯ! ಬಾದಷಹರವರು ಮಾಡಿದ ಅಪ್ಪಣೆಯನ್ನು ಹಿಂದಕ್ಕೆ ತೆಗೆದು ಕೊಂಡುದೇ ಇಲ್ಲ. ಕುಮಾರ ರಾಮಸಿಂಗರ ಜಾಮೀನಿನ ಮೇಲೆ ಆ ಅಪ್ಪಣೆ ಯನ್ನು ರದ್ದುಗೊಳಿಸಿದರು. ನೋಡಿ, ಮಹಾರಾಜರೇ. ನಿಮಗೆ ಮಿರ್ಜಾ ರಾಜ ಜಯಸಿಂಹರವರ ಬಲವಿದೆ. ಏನೂ ಕೆಡುಕಾಗದು. ಏಕಾಏಕಿ ಬಾದಷಹರ ಅನುಗ್ರಹವೇ ತಮ್ಮ ಮೇಲೆ ಬರಬಹುದು. ಆಗ ತಮ್ಮ ಅಂತಸ್ತು ಮಿರ್ಜಾರಾಜರ ಸರಿಸಮಾನವಾಗಬಹುದು. ಹಾಗೆಯೇ ನಿಮಗೆ ಶತ್ರುಗಳೂ ಇದ್ದಾರೆ. ಅವರು ಮೋಸದಿಂದ ನಿಮ್ಮ ತಲೆ ಕತ್ತರಿಸಿ ಹಾಕಿದರೂ ಹಾಕ ಬಹುದು ಹಾಗೇನಾದರೂ ಆದರೆ ಬಾದಷಹರು ನನ್ನನ್ನು ಶೂಲಕ್ಕೇರಿಸುತ್ತಾರೆ ಅಂತಹ ಕಟ್ಟುನಿಟ್ಟಿನ ಆಜ್ಞೆ ನನಗಾಗಿದೆ. ಈ ಸೂಕ್ಷ್ಮತೆಯನ್ನು ನೀವು ಅರಿತುಕೊಳ್ಳಬೇಕು. ನಾನು ಸರ್ವದಾ ಎಡೆಬಿಡದೇ ನಿಮ್ಮ ಉಸ್ತುವಾರಿ ನೋಡಿಕೊಳ್ಳಬೇಕಾಗುತ್ತದೆ. ಅದರಿಂದ ತಾವು ನನ್ನ ಮೇಲೆ ಸಂದೇಹ ಪಡಬಾರದು. ಅಸಮಾಧಾನ ಮಾಡಿಕೊಳ್ಳಬಾರದು. ನಾನು ಈಗಲೇ ಹೇಳಿ ಬಿಟ್ಟಿದ್ದೇನೆ. ನಾನು ನಿರ್ದಾಕ್ಷಿಣ್ಯದ ಮನುಷ್ಯ. ಅದರಿಂದಲೇ ಬಾದಷಹರು ನನ್ನನ್ನು ನೇಮಿಸಿದ್ದಾರೆ" ಎಂದು ಹೇಳಿದನು.

ಶಿವಾಜಿಯು ತಿರಸ್ಕಾರವಾದ ನಗುವನ್ನು ನಕ್ಕು "ಸರ್ದಾರರೇ, ನಾನು ಈ ಅರಮನೆಯಲ್ಲಿರಲೀ, ಕಠೋರ ಕಾರಾಗೃಹದಲ್ಲಿಯೇ ಇರಲೀ ನಾನು ಬಂದಿ ಎಂಬುದನ್ನು ದೃಢವಾಗಿ ನಂಬಿದ್ದೇನೆ. ನಿಮ್ಮ ಬಾದಷಹರ ಅಪ್ಪಣೆಗೆ ಚಾಚೂ ತಪ್ಪದೇ ನಡೆಯಬಹುದು. ನಾನಾಗಲೀ ನಮ್ಮ ಪರಿವಾರದವರಾಗಲೀ ಎಳ್ಳಷ್ಟೂ ನಿಮ್ಮ ದಾಕ್ಷಿಣ್ಯವನ್ನು ಅಪೇಕ್ಷಿಸುವುದಿಲ್ಲ. ರಾಜಬಂಧನವೆಂದರ ಏನೆಂದು ಕೊಂಡಿದ್ದೀರಿ? ಬಾದಷಹರ ಕಟ್ಟಾ ವಿರೋಧಿಗಳು ಕೈಗೆ ಸಿಕ್ಕಿದಾಗ ರಾಜ ಬಂದಿಗಳಾಗುತ್ತಾರೆ. ವಿರೋಧವು ಎಲ್ಲಿ ಹೋಗುತ್ತದೆ? ಅದು ಒಳಗೊಳಗೇ ಉರಿಯುತ್ತಿರುತ್ತದೆ. ಒಂದೊಂದು ಬಾರಿ ಸೌಲತ್ತುಗಳನ್ನು ತೋರುತ್ತಾರೆ. ಅದಕ್ಕೆ ಕಾರಣವೇನು ಬಲ್ಲಿರಾ? ದಯಾದಾಕ್ಷಿಣ್ಯಗಳಲ್ಲ. ಯಾವುದೋ ಪ್ರಯೋಜನಾಪೇಕ್ಷೆ, ಆಕಾಂಕ್ಷೆಗಳಿಂದಲೇ ಆ ಸೌಲತ್ತುಗಳು. ನೀವು ನಿಮ್ಮ

ಬಾದಷಹರಿಗೆ ಹೇಳಿರಿ. ನಮ್ಮ ಪರಿವಾರದವರನ್ನೆಲ್ಲಾ ನಮ್ಮ ರಾಜ್ಯಕ್ಕೆ ಹಿಂದಕ್ಕೆ ಕಳುಹಿಸುವಂತೆ ನಾವು ಅನುಮತಿ ಬೇಡುತ್ತೇವೆಂದು ಹೇಳಿ. ಅವರೆಲ್ಲಾ ನಿಮ್ಮ ಬಾದಷಹರ ಅನ್ನವನ್ನು ತಿಂದುಕೊಂಡು ಇಲ್ಲೇಕೆ ಕುಳಿತಿರಬೇಕು? ಅವರು ನಿಮ್ಮ ಆಜ್ಞೆಯನ್ನು ಉಲ್ಲಂಘಿಸಬಹುದು. ನಿಮಗೂ ಅವರಿಗೂ ಘರ್ಷಣೆಯು ಪ್ರಾಪ್ತವಾಗಬಹುದು. ನಾನೊಬ್ಬನೇ ಇದ್ದರೆ ನಿಮಗೆ ಯಾವ ಆತಂಕವೂ ಇಲ್ಲದೇ ಕಲ್ಲಿನ ಗೊಂಬೆಯಂತೆ ಕುಳಿತಿರುತ್ತೇನೆ." ಎಂದು ಹೇಳಿದನು

ಸಿದ್ದೀ ಫಲೂದನು ಸಲಾಂ ಮಾಡಿ ಹೊರಟುಹೋದನು. ಸಿದ್ದೀ ಫಲೂದನು ತನ್ನ ಕಛೇರಿಗೆ ಹೋಗಿ ಕುಳಿತುಕೊಂಡನು. ಅಲ್ಲಿ ನಾನಾ ವಿಧವಾದ ಆಲೋಚನೆಗಳು ಬಂದು ಅವನ ಮನಸ್ಸನ್ನು ಮುತ್ತಿದವು. "ಈ ಶಿವಾಜಿಯು ಬಹಳ ಗಟ್ಟಿಗನಾಗಿದ್ದಾನೆ. ಅವನಿಗೆ ಬಾದಷಹರ ಮೇಲೆ ವಿಪರೀತ ದ್ವೇಷವಿದೆ. ಅದು ಎದ್ದು ಕಾಣುತ್ತದೆ. ಇಂತಹವನಿಗೆ ಎಲ್ಲಿಯಾದರೂ ಉಳಿಗಾಲವುಂಟೇ? ನಾನೇಕೆ ಇವನಿಗೆ ಇಷ್ಟು ಮಾತನಾಡಲು ಆಸ್ಪದ ಕೊಟ್ಟೆ! ನಾನು ಬಹಳ ಖರಾಚೂರಿ ಮನುಷ್ಯ. ಹಾಗೆಲ್ಲಾ ಮಾತನಾಡುವವನಲ್ಲ. ಶಿವಾಜೀ ಖೈದಿಯಾಗಿದ್ದಾನೆ. ನಾನು ಅವನ ಮೇಲೆ ಉಸ್ತುವಾರಿಯ ಅಧಿಕಾರಿ. ನನಗೂ ಅವನಿಗೂ ಮಾತೇನಿದೆ? ಆದರೆ ಬಾದಷಹರೇ ಖುದ್ದು ಅಪ್ಪಣೆಮಾಡಿದ್ದಾರೆ 'ಅವನೊಡನೆ ಆಗಾಗ ಮಾತನಾಡಬೇಕು. ಅವನ ಮನಸ್ಸಿನ ಲಗುಬಿಗಿಯನ್ನು ನೋಡಿ ಬಂದು ತಿಳಿಸಬೇಕು' ಎಂದು ಹುಜೂರ್ ಅಪ್ಪಣೆಯಾಗಿದೆ. ಅದಕ್ಕಾಗಿ ಮಾತನಾಡಿಸಿದೆ; ಅವನು ಏನೇನೋ ಮಾತನಾಡುತ್ತಾನೆ. ಇವನ್ನೆಲ್ಲಾ ಖಾವಂದರಿಗೆ ತಿಳಿಸಿದರೆ ಅವನ ತಲೆ ನೂರು ಚೂರಾದೀತು. ಸಾಯುವ ಮನುಷ್ಯ. ಅವನೂ ತಿಳಿದುಕೊಂಡು ಬಿಟ್ಟಿದ್ದಾನೆ. ಆದ್ದರಿಂದಲೇ ಹೀಗೆಲ್ಲಾ ಹರಟುತ್ತಾನೆ. ಇರಲಿ, ಇದೊಂದು ಬಾರಿಗೆ ನಾನೇ ತಾಳ್ಮೆ ತಂದುಕೊಳ್ಳುತ್ತೇನೆ. ಆದರೆ ಈ ಶಿವಾಜಿಗೂ ಒಂದು ಬಲವಿದೆ. ಜಯಸಿಂಹ ಮಹಾರಾಜರವರ ಅನುಗ್ರಹವು ಇವನ ಮೇಲಿದೆ. ಅದರಿಂದಲೇ ಇವನು ಇನ್ನೂ ಉಳಿದಿದ್ದಾನೆ. ನಾನೇನು ಬುದ್ಧಿವಂತನಲ್ಲವೇ? ಬಾದಷಹರು ಈ ಕುಮಾರ

ರಾಮಸಿಂಗನ ಮುದ್ದುಮುಖ ನೋಡಿ ಇವನಿಗೆ ಸೌಲತ್ತುಗಳನ್ನು ತೋರಿಸುತ್ತಿಲ್ಲ. ಜಯಸಿಂಹ ಮಹಾರಾಜರ ಸ್ಥಾನ ಗೌರವಗಳ ಮೇಲೆ ದೃಷ್ಟಿಯಿಟ್ಟು ಬಾದಷಹರು ಇವನನ್ನು ಇಲ್ಲಿಯವರೆಗೆ ಉಳಿಸಿದ್ದಾರೆ. ಹೇಗಾದರೇನು? ನನ್ನ ಕೆಲಸ ನನ್ನದು" ಎಂದು ಸಮಾಧಾನ ಮಾಡಿಕೊಂಡನು.

ಸಂಧ್ಯಾಕಾಲವಾಯಿತು. ಶಿವಾಜಿಯು ಆ ಅರಮನೆಯ ಮಹಡಿಯ ಮೇಲಕ್ಕೆ ಹತ್ತಿಹೋಗಿ ಬಿಸಿಲು ಮಹಡಿಯ ಮೇಲೆ ಕುಳಿತುಕೊಂಡನು. ಆ ಚಂದ್ರಶಾಲೆಯಲ್ಲಿ ಇದ್ದ ಥಳಥಳಿಸುವ ಅಮೃತಶಿಲೆಯ ಮಂಟಪದಲ್ಲಿ ಏಕಾಕಿಯಾಗಿ ಕುಳಿತಿದ್ದನು. ಪ್ರಕಾಶವಾದ ಬೆಳದಿಂಗಳು ಬಿದ್ದಿತ್ತು. ಹಾಲು ಚೆಲ್ಲಿದಂತಹ ಬೆಳದಿಂಗಳು. ಹಿಂದುಗಡೆ ಯಮುನಾ ನದಿಯು ನಿಸರ್ಗವಾಗಿ ಹರಿಯುತ್ತಿತ್ತು. ಆ ಮರಳು ರಾಶಿಗಳೂ, ಆ ಅಂದವಾದ ಪಾವಟಿಗೆಗಳೂ, ನದಿಯ ದಡದಲ್ಲಿ ಹುಟ್ಟಿದ್ದ ನೀಕಾಪೆಗಳೂ ಮನಸ್ಸನ್ನು ಆಕರ್ಷಿಸುತ್ತಿತ್ತು. ಮತ್ತೊಂದು ಕಡೆ ತಿರುಗಿ ನೋಡಿದನು. ತಾಜಮಹಲ್ ಮೇಲೆ ಅದೇ ಚಂದ್ರಿಕೆಯು ಬಿದ್ದು ರಮ್ಯವಾಗಿ ಕಾಣುತ್ತಿತ್ತು.

ಶಿವಾಜಿಯು "ನಿಜವಾಗಿಯೂ ಈ ಆಗ್ರಾನಗರವು ಸೌಭಾಗ್ಯದ ನೆಲೆವೀಡು! ಷಹಜಹಾನ್ ಬಾದಷಹನು ಎಂತಹ ರಸಿಕಾಗ್ರೇಸರ! ಎಷ್ಟು ಅಲಂಕಾರಪ್ರಿಯ! ಈ ತಾಜ್‌ಮಹಲು ಆ ಬಾದಷಹನ ಚಿತ್ತವನ್ನೇ ಪ್ರತಿಬಿಂಬಿಸುವಂತಿದೆ. ಈ ತಾಜ್‌ಮಹಲು ಎಷ್ಟು ಉನ್ನತವೋ ಎಷ್ಟು ಪ್ರಭಾಮಯವೋ ಷಹಜಹಾನನ ಚಿತ್ತವೃತ್ತಿಯು ಅಷ್ಟೇ ಉನ್ನತವೂ ಪ್ರಕಾಶಮಾನವೂ ಆಗಿದ್ದಿರಬೇಕು. ಈ ಮಂದಿರವು ಎಷ್ಟು ಸ್ವಚ್ಛವಾಗಿದೆಯೋ ಆ ಬಾದಷಹನ ಮನಸ್ಸೂ ಅಷ್ಟೇ ಸ್ವಚ್ಛವಾಗಿದ್ದಿರಬೇಕು' ಎಂದು ಭಾವಿಸುತ್ತಾ ತಲ್ಲೀನನಾಗಿ ಕುಳಿತಿದ್ದನು.

ಮಹಡಿಯ ಮೇಲೆ ಕಾಲು ಸಪ್ಪಳವು ಕೇಳಿ ಬಂದಿತು. ಶಿವಾಜಿಯು ತಲೆ ಎತ್ತಿ ನೋಡಿದನು. ಮುಂದೆ ಮುಂದೆ ಸಿದ್ದೀ ಫಲೂದನು ಬರುತ್ತಿದ್ದನು. ಅವನ ಹಿಂದೆ ಅವಕುಂಠನವತಿಯರಿಬ್ಬರು ಬರುತ್ತಿದ್ದರು.

ಶಿವಾಜಿಯು ಆ ಸ್ತ್ರೀ ವ್ಯಕ್ತಿಗಳನ್ನು ನೋಡಿ "ಇವರಾರೋ ಮುಸಲ್ಮಾನ್ ಸ್ತ್ರೀಯರು" ಎಂದುಕೊಂಡನು.

ಸಿದ್ದೀ ಫಲೂದನು ಶಿವಾಜಿಯ ಕಡೆಗೆ ಕೈತೋರಿಸಿ "ಇವರೇ ಶಿವಾಜಿ

ಮಹಾರಾಜರು" ಎಂದು ಹೇಳಿ, ಅದಬ್ಬಿನಿಂದ ನಿಂತು ಸಲಾಂ ಮಾಡಿ ಹೊರಟುಹೋದನು.

ರಮಣಿಯರಲ್ಲೊಬ್ಬಳು "ಶಿವರಾಜರೇ, ನಿಮಗೆ ಶುಭವಾಗಲಿ" ಎಂದು ಕೋಮಲ ಕಂಠದಿಂದ ನುಡಿದಳು.

ಶಿವಾಜೀ ಮಹಾರಾಜನು ಎದ್ದು ನಿಂತು ಕೈಜೋಡಿಸಿ ಇಬ್ಬರಿಗೂ ಅಭಿವಂದನ ಮಾಡಿದನು.

ಆ ರಮಣಿಯು "ಮಹಾರಾಜರೇ, ಏಳಬೇಡಿ. ಕುಳಿತುಕೊಳ್ಳಿರಿ. ನಾವು ನಿಮ್ಮೊಡನೆ ಮಾತನಾಡುವುದಕ್ಕೆ ಬಂದಿದ್ದೇವೆ. ನಮ್ಮನ್ನು ನಿಮ್ಮ ಹಿತಾಕಾಂಕ್ಷಿಗಳೆಂದು ಬಗೆಯಿರಿ" ಎಂದು ಹೇಳಿದಳು.

ಶಿವಾಜಿಯು ಮಂಟಪದಲ್ಲಿ ನಿಂತಿದ್ದವನು ಎರಡು ಮೆಟ್ಟಲುಗಳನ್ನು ಕೆಳಗಿಳಿದು ಬಂದು "ತಾವು ಕುಳಿತುಕೊಳ್ಳಬೇಕು. ತಮ್ಮನ್ನು ನೋಡಿದರೆ ಯಾರೋ ರಾಜಸ್ತ್ರೀಯರಿರಬೇಕೆಂದು ನಾನು ಊಹಿಸುತ್ತೇನೆ. ನಾನು ಬಾದಷಹರ ಬಂದಿ" ಎಂದು ಹೇಳಿ ಕೈಮುಗಿದನು.

"ಮಹಾರಾಜರೇ, ನಿಮ್ಮ ವಿನಯದಿಂದ ನಮ್ಮನ್ನು ನಾಚುವಂತೆ ಮಾಡುತ್ತಿದ್ದೀರಿ. ಬಾದಷಹರಿಗೆ ನೀವು ಬಂದಿಗಳಿರಬಹುದು. ನಮಗೆ ನೀವು ಗೌರವನೀಯ ಮಹಾಪುರುಷರು. ಪರಸ್ಪರ ಉಪಚಾರಗಳನ್ನು ಹೇಳುತ್ತಾ ಕಾಲಕಳೆಯುವುದೇಕೆ? ನೀವೂ ಕುಳಿತುಕೊಳ್ಳಿರಿ. ನಾವೂ ಕುಳಿತುಕೊಳ್ಳುತ್ತೇವೆ. ಕಣ್ಣಾರೆ ನಿಮ್ಮ ದರ್ಶನಮಾಡಿ ಬಾಯಿತುಂಬ ಎರಡು ಮಾತನಾಡಿ ಹೋಗುತ್ತೇವೆ."

ಶಿವಾಜಿಯು ಮರುಮಾತನಾಡದೇ ಕೈಮುಗಿದು ಕುಳಿತುಕೊಂಡನು. ಅನತಿದೂರದಲ್ಲಿ ಆ ಇಬ್ಬರು ರಮಣಿಯರೂ ಪತ್ತಲಗಳನ್ನು ಸರಿಪಡಿಸಿಕೊಂಡು ಚಂದ್ರಕಾಂತ ಶಿಲಾಫಲಕದ ಮೇಲೆ ಕುಳಿತುಕೊಂಡರು. ಅವರು ಅವಕುಂಠನಗಳನ್ನು ತೆಗೆದು ಮಾತನಾಡಲಾರಂಭಿಸಿದರು.

ಶಿವಾಜಿಯು "ಇವರಾರು? ಯಾರಿರಬಹುದು? ಯವನ ರಮಣಿಯರೆಂಬುದರಲ್ಲಿ ಸಂದೇಹವಿಲ್ಲ. ಹಣೆಯಲ್ಲಿ ಕುಂಕುಮವಿಲ್ಲ. ಈ ರಾತ್ರಿಯಲ್ಲಿ ಈ ಯವನ ರಮಣಿಯರು ಇಲ್ಲಿಗೇಕೆ ಬಂದರು? ನನ್ನ ದೋಣಿಯು ಅಗಾಧ ಸಮುದ್ರದಲ್ಲಿ ಒಡೆದು ತೇಲುವಂತಾಗಿದೆ. ನನ್ನ ಮನಸ್ಸು—ಇವರಾರೆಂದು

ಕೇಳಲೇ ? ನಾನೇಕೆ ಕೇಳಬೇಕು? ಅವರಾಗಿಯೇ ಹೇಳುತ್ತಾರೆ. "ಭವಾನೀ ! ಇಂದು ನನ್ನನ್ನು ಉದ್ಧಾರಮಾಡು ದೇವೀ ಪರೀಕ್ಷೆ ಮಾಡಬೇಡ" ಎಂದು ಕಣ್ಣುಮುಚ್ಚಿ ಭವಾನಿಯ ಧ್ಯಾನಮಾಡಿ ಅವರ ಕಡೆಗೆ ನೋಡಿದನು.

"ಎಂತಹ ರೂಪ ! ಎಷ್ಟು ಲಾವಣ್ಯ! ಇವರು ಅಕ್ಕತಂಗಿಯರಿರಬೇಕು. ಉಚ್ಚ ಕುಲದವರಿರಬೇಕು."

"ಶಿವಾಜಿ ಮಹಾರಾಜರೇ, ನಿಮ್ಮ ಪರಾಕ್ರಮದ ಕಥೆಗಳನ್ನು ಬಹಳ ವಾಗಿ ಕೇಳಿದ್ದೇವೆ. ಅಂದು ಬಾದಷಹರ ದರ್ಬಾರಿನಲ್ಲಿ ನಿಮ್ಮ ಪ್ರತ್ಯಕ್ಷ ದರ್ಶನವಾಯಿತು. ನಾವು ಇಲ್ಲಿಗೆ ಬರುತ್ತಲೇ ನೀವು 'ಬಾದಷಹರ ಬಂದಿ' ಎಂದು ಹೇಳಿಕೊಂಡಿರಿ. ನೀವೇಕೆ ಬಂದಿಗಳಾಗಿದ್ದೀರಿ ?"

'ಅದು ಬಾದಷಹರ ಚಿತ್ತ' ಎಂದು ಶಿವಾಜಿಯು ಹಸನ್ಮುಖದಿಂದ ನುಡಿದನು.

'ನೀವು ಬಾದಷಹರಲ್ಲಿ ಕ್ಷಮಾಪ್ರಾರ್ಥನೆ ಮಾಡಿದರೆ ಬಂಧಮುಕ್ತರಾಗು ವುದಿಲ್ಲವೇ ?'

ಶಿವಾಜಿಯು ನಕ್ಕು "ನಾನೇನು ತಪ್ಪುಮಾಡಿದ್ದೇನೆ? ಕ್ಷಮೆ ಬೇಡ ಲೇಕೆ ? ಬಾದಷಹರು ಉಗ್ರಸ್ವಭಾವದವರೆಂದು ಕೇಳಿದ್ದೇನೆ ಕ್ಷಮಾಪ್ರಾರ್ಥನೆ ಮಾಡಿದರೆ ತಾನೇ ಅವರೇಕೆ ನನ್ನನ್ನು ಬಿಡುತ್ತಾರೆ? ಏನೋ ಮಹತ್ಕಾರ್ಯ ಕ್ಕಾಗಿ ನನ್ನನ್ನಿಲ್ಲಿ ಬಂಧಿಸಿಟ್ಟಿರಬಹುದು" ಎಂದನು.

"ನಾನು ತಮ್ಮನ್ನು ಬಿಡುಗಡೆ ಮಾಡುತ್ತೇನೆ. ಹೊರಟು ಹೋಗುವಿರಾ ?"

"ಅದು ಅಸಂಭವ ತಾಯಿ. ನೀವು ನನ್ನನ್ನು ಪರೀಕ್ಷೆ ಮಾಡಲು ಬಂದಿರುವ ದೇವತೆ ಎಂದು ಭಾವಿಸುತ್ತೇನೆ ಇಲ್ಲಿ ಎಷ್ಟೊಂದು ಕಟ್ಟುಕಾವಲು ಇದೆ! ನೀವು ನನ್ನನ್ನು ಹೇಗೆ ಬಿಡುಗಡೆ ಮಾಡಿಸಬಲ್ಲಿರಿ? ಅದನ್ನು ನಾನು ಹೇಗೆ ನಿಜವೆಂದು ನಂಬಲಿ? ನನ್ನನ್ನು ಬಿಡುಗಡೆ ಮಾಡಿಸಲು ಕಾರಣವಾದರೂ ಏನಿದೆ ?"

ಆ ಸ್ತ್ರೀಯು ಉತ್ತೇಜಿತಳಾಗಿ ಆ ಮರಾಳಕಂಕಣವನ್ನು ಎತ್ತಿ ನುಡಿದಳು.

'ಮಹಾರಾಜಾ, ನಾನು ಇಲ್ಲಿಗೆ ಹೇಗೆ ಬಂದೆನೋ ಹಾಗೆಯೇ ನಿಮ್ಮ ಕೈಹಿಡಿದು ಕರೆದುಕೊಂಡು ಹೋಗಿ ಈ ಆಗ್ರಾನಗರದ ಉಪತ್ಯಕೆಯಲ್ಲಿ ಬಿಟ್ಟು ಬರುತ್ತೇನೆ. ನನ್ನನ್ನು ತಡೆಯಬಲ್ಲವರಾರು ?'

'ಯುವನರಮಣೀ, ನಿನಗೆ ವಂದನೆಗಳು. ನಾನು ನಿನ್ನ ಮಾತನ್ನು ನಂಬದಿರಲಾರೆ. ನೀನು ನನ್ನನ್ನು ಕರೆದುಕೊಂಡು ಹೋಗಿ ಬಿಟ್ಟುಬರಬಲ್ಲೆ. ಆದರೆ ನಾನು ಅದಕ್ಕೊಪ್ಪಲಾರೆ. ಬಾದಷಹರ ಅಪ್ಪಣೆ ಇಲ್ಲದೇ ನಾನು ಇಲ್ಲಿಂದ ಪದಚಲನ ಮಾಡುವುದಿಲ್ಲ."

ಮತ್ತೊಬ್ಬ ಯುವನೆಯು ಆಶ್ಚರ್ಯದಿಂದ ಕೇಳಿದಳು.

'ಮಹಾರಾಜ, ನಿಮಗೆ ಈ ಬಂಧನದಿಂದ ಹೊರಟುಹೋಗಲು ಇಷ್ಟ ವಿಲ್ಲವೇ ?'

'ಇಲ್ಲದೇ ಉಂಟೆ, ಸೋದರೀ. ನಾನು ನನ್ನ ರಾಜ್ಯಕ್ಕೆ ಹೊರಟು ಹೋಗಬೇಕೆಂದು ಪ್ರತಿಕ್ಷಣವೂ ಪರಿತಪಿಸುತ್ತಿದ್ದೇನೆ. ಆದರೆ ಕಳ್ಳನಂತೆ ಓಡಿಹೋಗಲು ಒಪ್ಪುವುದಿಲ್ಲ.'

"ಮಹಾರಾಜರೇ, ನೀವು ಓಡಿಹೋಗುವುದಿಲ್ಲ. ನಾವು ಬಿಡಿಸಿಕೊಂಡು ಹೋಗುತ್ತೇವೆ."

"ಇಲ್ಲ ತಂಗಿ. ನಾನು ಹೆಂಗಸರ ಆಶ್ರಯದಿಂದ ಅವರ ಮರೆಹೊಕ್ಕು ಬಂಧಮುಕ್ತನಾಗುವುದಿಲ್ಲ. ಅದರಿಂದ ನನ್ನ ಹೆಸರಿಗೆ ಶಾಶ್ವತವಾದ ಅಪಕೀರ್ತಿ ಬರುತ್ತದೆ.'

"ಹಾಗಾದರೆ ನೀವು ಬಂಧನದಿಂದ ಮುಕ್ತರಾಗುವ ಸಂಭವವೇ ಇಲ್ಲ."

"ಏಕಿಲ್ಲ ? ಬಾದಷಹರಿಗೆ ಆಗ್ರಹ ಬಂತು, ಬಂಧಿಸಿಟ್ಟರು. ಹಾಗೆಯೇ ಅನುಗ್ರಹ ಬಂದರೆ ಅವರಾಗಿಯೇ ದರ್ಬಾರಿಗೆ ಕರೆಸಿಕೊಳ್ಳಬಹುದು ! ಅದು ಅವರ ಚಿತ್ತ."

"ಮಹಾರಾಜರೇ, ಅವರ ಅನುಗ್ರಹ ಬರಬೇಕಾದರೆ ಏನು ಮಾಡ ಬೇಕೆಂಬುದನ್ನು ಬಲ್ಲಿರಾ ?"

"ಇಲ್ಲ ತಾಯಿ, ಇಲ್ಲ. ಖಂಡಿತವಾಗಿಯೂ ನಾನರಿಯೇ. ಅರಿತಿದ್ದರೆ ಅಂದೇ ಅದನ್ನು ಮಾಡಿಬಿಡುತ್ತಿದ್ದೆ.

ಆ ತರುಣಿಯು ಗಹಗಹಿಸಿ ನಕ್ಕಳು.

'ಮಹಾರಾಜ, ಈಗ ಸರಿಯಾದ ದಾರಿಗೆ ಬಂದಿರಿ. ಅದನ್ನು ಹೇಳು ವುದಕ್ಕೇ, ನಿಮ್ಮಿಂದ ಆ ಕಾರ್ಯವನ್ನು ಮಾಡಿಸುವುದಕ್ಕೆ ನಾವಿಲ್ಲಿಗೇ ಬಂದಿದ್ದೇವೆ.'

ಪುನಃ ಅವಳೇ ಹೇಳಿದಳು. "ಮಹಾರಾಜರೇ, ನೀವು ಇಸ್ಲಾಂ ಮತವನ್ನು ಅವಲಂಬಿಸಿಬಿಟ್ಟರೆ ಎಲ್ಲವೂ ಸುಸೂತ್ರವಾಗಿ ಹೋಗುತ್ತದೆ. ನಿಮಗೆ ರಾಜಪದವಿಯು ದೊರೆಯುತ್ತದೆ."

ಶಿವಾಜಿಯು ಆಸನದಿಂದ ಎದ್ದು ನಿಂತನು.

"ತಾಯಿ, ಆ ಮಾತು ನನಗೆ ಗೊತ್ತಿತ್ತು. ಅದನ್ನು ಖಾಜೀ ಸಾಹೇಬರೋ, ಸ್ವಯಂ ಬಾದಷಹರೋ ಒಂದು ದಿನ ಬಂದು ನನಗೆ ಹೇಳ ಬಹುದೆಂದು ನಾನು ಭಾವಿಸಿದ್ದೆ. ಅಥವಾ ಕ್ರೂರಿಗಳಾದ ರಾಜಭಟರು ನನ್ನನ್ನು ಕಳೆಗಳಿಂದ ಕಟ್ಟಿ ಮಸೀದಿಗೆ ಹೊತ್ತುಕೊಂಡು ಹೋಗಿ ನಿರ್ಬಂಧ ದಿಂದ ಮುಸಲ್ಮಾನ್ ದೀಕ್ಷೆಯನ್ನು ಕೊಡುತ್ತಾರೆಂದು ನಿರೀಕ್ಷಿಸಿದ್ದೆ.

"ತಾಯಿ, ಈ ದೇವತಾಸ್ವರೂಪಿಣಿಯರಾದ ಲೋಕೋತ್ತರ ಯುವನ ಸುಂದರಿಯರಿಬ್ಬರು ಬಂಧು ಮಧುರಕಂಠದಿಂದ ಮುಸ್ಲಿಂ ದೀಕ್ಷೆಯನ್ನು ನನಗೆ ಅನುಗ್ರಹಿಸುವ ಕೌತುಕವನ್ನು ನಾನು ಕನಸುಮನಸುಗಳಲ್ಲಿಯೂ ನೆನೆಸಿರ ಲಿಲ್ಲ, ತಾಯೀ. ನಿಮ್ಮಿಬ್ಬರಿಗೂ ವಂದನೆಗಳು. ತಮಗೇಕೆ ನನ್ನಲ್ಲಿ ಇಷ್ಟು ಆಸಕ್ತಿ, ಅನುಗ್ರಹ, ಅದನ್ನು ಹೇಳಬಲ್ಲಿರಾ?"

"ನಿನ್ನಂತಹ ಧೀರಪುರುಷನನ್ನು ಸ್ತ್ರೀಯರು ಒಲಿದು ಬಂದು ಅನು ಗ್ರಹಿಸುವರೆಂಬುದನ್ನು ನೀನು ನಂಬುವುದಿಲ್ಲವೇ, ಮಹಾರಾಜ?"

"ನಾನು ನಿಮ್ಮನ್ನು ಪೂರ್ಣವಾಗಿ ನಂಬುತ್ತೇನೆ. ನನ್ನನ್ನೇ ನಾನು ನಂಬುವುದಿಲ್ಲ" ಎಂದು ಕೈಮುಗಿದನು.

"ಮಹಾರಾಜ, ನೀನು ಮುಸಲ್ಮಾನನಾಗಿ ಈ ಕುವರಿಯನ್ನು ವರಿಸು. ಐಶ್ವರ್ಯ, ಸಂಪತ್ತು, ಸಕಲ ಸೌಭಾಗ್ಯಗಳನ್ನೂ ನಿನಗೆ ನೀಡುತ್ತೇನೆ. ಕಣ್ಣು ಮುಚ್ಚಿ ಕುರುಡನಾಗಿ ಮೂರ್ಖನಂತೆ ಎಲ್ಲವನ್ನೂ ಕಳೆದುಕೊಳ್ಳಬೇಡ."

ಶಿವಾಜಿಯು ಎರಡು ಕೈಗಳನ್ನೂ ಜೋಡಿಸಿ—ಹೇಳಿದ.

"ದೇವೀ, ನನ್ನನ್ನು ಕ್ಷಮಿಸು ನಾನು ನಿಮ್ಮಿಬ್ಬರನ್ನೂ ಮಾತೃ ಸ್ವರೂಪಿಣಿಯರಾಗಿ ಭಾವಿಸಿ ನಮಸ್ಕರಿಸುತ್ತೇನೆ. ನೀವು ನನ್ನನ್ನು ನಿಮ್ಮ ಸಹೋದರನಂತೆ ಭಾವಿಸಿರಿ. ನನ್ನನ್ನು ಪರೀಕ್ಷೆ ಮಾಡಬೇಡಿ, ತಾಯಿ. ನಾನು ಹಿಂದುವಾಗಿ ಹುಟ್ಟಿದ್ದೇನೆ. ಹಿಂದುವಾಗಿ ಸಾಯುತ್ತೇನೆ. ಹಿಂದುಗಳಿಗೆ

ಶ್ರೀರಾಮಚಂದ್ರನು ಪರಮದೈವ; ಆ ದೇವರಾಣೆಗೂ ಹೇಳುತ್ತೇನೆ. ನಾನು ಕಾಮಿನೀಕಾಂಚನಗಳಿಗೆ ಮರುಳಾಗುವವನಲ್ಲ. ನಿಮ್ಮ ಸೌಜನ್ಯಕ್ಕಾಗಿ ಅನಂತ ವಂದನೆಗಳು, ತಾಯಿ. ನಾನು ಮತ್ತೊಮ್ಮೆ ನೋಡಬಾರದೆ. ನೀವಾರು ಹೇಳುವಿರಾ?"

"ಮಹಾರಾಜ, ನಾವಾರೆಂದು ಹೇಳುತ್ತೇವೆ, ಕೇಳು. ನಾನು ರೋಷನಾರ. ಆ ಹೆಸರು ಕೇಳಿದ್ದೀಯಾ? ಇವಳು ಜಿನೀತ್ ಉನ್ನೀಸಾ, ಬಾದಷಹನ ಕುವರಿ"

ಶಿವಾಜಿಯು ಮತ್ತೊಮ್ಮೆ ಕೈಮುಗಿದು "ತಾಯಿ, ಕ್ಷಮಿಸು" ಎಂದನು.

ಅವರಿಬ್ಬರೂ ಶಿವಾಜಿಯನ್ನು ನೋಡುತ್ತಾ ನೋಡುತ್ತಾ ಹೊರಟು ಹೋದರು.

ಶಿವಾಜಿಯು ತಲೆಯೆತ್ತಿ ಆಕಾಶದ ಕಡೆಗೆ ನೋಡಿದನು. ಚಂದ್ರಮಂಡಲವು ತಲೆಯ ಮೇಲೆ ನಗುತ್ತಿತ್ತು. ಶಿವಾಜಿಯು ಅರ್ಧರಾತ್ರಿಯಾಯಿತು. ಎಂದು ಕೊಂಡನು. ಅವನು ತನ್ನ ಶಯನಗೃಹದಲ್ಲಿ ಹೋಗಿ ಮಲಗಿದನು. 'ನನ್ನ ಬಂಧನದ ದ್ವಿತೀಯ ಘಟ್ಟವು ಆರಂಭವಾಗಿದೆ" ಎಂದುಕೊಂಡನು.

'ದೇವೀ, ಭವಾನಿ, ರಕ್ಷಿಸು' ಎಂದು ಪ್ರಾರ್ಥನೆಮಾಡಿ ಮಲಗಿಕೊಂಡನು.

## ೧೪

ಮಹಾರಾಜಾ ಜಯಸಿಂಹರವರ ಮಹಲು ಜನಶೂನ್ಯವಾಗಿತ್ತು: ಸಾಲ್ಕೈದು ಮಂದಿ ಪರಿಜನರು ಮಾತ್ರ ಇದ್ದರು. ಶಿವಾಜಿಯ ದಾಯಾದಿಯೊಬ್ಬನು, ಶಿವಾಜಿಯ ಮಗ ಸಣ್ಣ ಹುಡುಗ ಸಾಂಬಾಜಿ, ಇವರಿಬ್ಬರು ಮಾತ್ರ ಇದ್ದರು.

ಬಾದಷಹನು ಸಿದ್ದೀ ಫಲೂದನನ್ನು ಕರೆಸಿ" ಬಂದಿಯ ಸಮಾಚಾರ ವೇನು ಎಂದು ವಿಚಾರಿಸಿದನು.

"ಜಹಾಪನಾ, ಆ ಶಿವಾಜಿಯು ಕಡೆಯವರೆಲ್ಲರೂ ಹುಜೂರ್ ಅಪ್ಪಣೆ ಯಾದ ಮೇಲೆ ಹೊರಟುಹೋಗಿದ್ದಾರೆ. ಆತನು ಯಾರೊಡನೆಯೂ ಮಾತನಾಡುವುದಿಲ್ಲ. ಸ್ನಾನ ಭೋಜನಾದಿಗಳನ್ನು ಕೂಡ ಸರಿಯಾಗಿ ಮಾಡು ವುದಿಲ್ಲ. ಯಾವಾಗಲೂ ಜೋಲುಮುಖ ಹಾಕಿಕೊಂಡು ಕುಳಿತಿರುತ್ತಾನೆ. ಒಂದೊಂದು ಬಾರಿ ಏನೇನೋ ಮಾತನಾಡುತ್ತಾನೆ. ಆ ಮಾತುಗಳನ್ನೆಲ್ಲಾ ಸನ್ನಿಧಾನದಲ್ಲಿ ಅರಿಕೆ ಮಾಡುವಂತಹುದೇನೂ ಇಲ್ಲ ಅವನನ್ನು ಕಳುಹಿಸಿ ಬಿಟ್ಟರೆ 'ಕಾಶಿಯಲ್ಲಿ ಸಂನ್ಯಾಸಿಯಾಗಿರುತ್ತೇನೆ ರಾಜ್ಯ, ಅಧಿಕಾರ ಯಾವುದೂ ಬೇಡ' ಎನ್ನುತ್ತಾನೆ."

"ಅದನ್ನೆಲ್ಲಾ ನಂಬಬೇಡ, ಫಲೂದ್. ಅವನು ಭಾರಿ ದಗಾಕೋರ. ಬಿಟ್ಟರೆ ಕೈಗೆ ಸಿಕ್ಕುವ ಮನುಷ್ಯನಲ್ಲ. ಅವನ ರಾಜ್ಯಕ್ಕೆ ಹೋಗಿ ಸೇರಿಕೊಂಡು ಕಂಟಿ ಕೊಡುತ್ತಾನೆ. ಅವನು ಮತ್ತೊಮ್ಮೆ ಏನಾದರೂ ಆ ಮಾತುಗಳ ನ್ನೆತ್ತಿದರೆ'ಮುಸಲ್ಮಾನನಾಗು. ಫಕೀರನಾಗಿ ಹೋಗು' ಎಂದು ಹೇಳು. ನೀನು ಜಾಗರೂಕನಾಗಿರು."

"ಹುಜೂರ್, ಮತ್ತೊಂದು ಮಾತು ಹೇಳುವುದಿದೆ. ಖಾವಂದರು ನನ್ನಲ್ಲಿ ಬಹಳ ಭರವಸೆ ಇಟ್ಟದ್ದೀರಿ. ತಿಳಿಸುವುದಕ್ಕೆ ಭಯವಾಗುತ್ತದೆ" ಎಂದು ಕೈಮುಗಿದು ನಿಂತುಕೊಂಡನು.

"ಹೇಳು. ಏನು ಹೇಳುವುದಿದ್ದರೂ ಹೇಳಿಬಿಡು" ಎಂದು ಬಾದಷಹನು ಗದ್ದರಿಸಿದನು.

ಫಲೂದನು ನಾಲಿಗೆಯಿಂದ ತುಟಿ ಸವರಿಕೊಳ್ಳುತ್ತಾ "ಜಹಾಪನಾ, ರೋಷನಾರಾ ಸಾಹೇಬರೂ, ಉನ್ನೀಸಾ ಸಾಹೇಬರೂ ಪದೇಪದೇ ಬಂದು ಆ ಬಂದಿಯನ್ನು ಮಾತನಾಡಿಸಿಕೊಂಡು ಹೋಗುತ್ತಾರೆ. ಇಬ್ಬರೂ ಒಟ್ಟಿಗೆ ಬರುತ್ತಾರೆ. ಒಬ್ಬೊಬ್ಬರಾಗಿಯೇ ಬಂದು ಹೋಗುವುದೂ ಉಂಟು. ಅವರೇನೋ ಮಸಲತ್ ಮಾಡುವಂತಿದೆ. ಅದೇನು ಮಸಲತ್ತೋ ನಾಸರಿಯೆ. ನಮ್ಮ ತಲೆ ತಿನ್ನುವ ಮಸಲತ್ತು. ರೋಷನಾರಾ ಸಾಹೇಬರು ಶಿವಾಜಿಯ

ನುಗ ಆ ಹುಡುಗನನ್ನು ಎತ್ತಿ ಮುದ್ದಾಡುತ್ತಾರೆ. ಅವನಿಗೆ ಮಿಠಾಯಿಗಳನ್ನು ತಂದು ಕೊಡುತ್ತಾರೆ" ಎಂದು ಹೇಳಿದನು.

"ಬೇಕೂಫ್, ಬಾಯಿ ಮುಚ್ಚು. ಅವರೇಕೆ ಅಲ್ಲಿಗೆ ಬರುತ್ತಾರೆ? ಅವರ ಮಾತು ನಿನಗೇಕೆ? ನೀನಾಗಲೀ, ನಿನ್ನ ಕಾವಲುಗಾರರಾಗಲೀ ಅವರ ಹೆಸರೆತ್ತಿದರೆ ನಾಲಿಗೆ ಸೀಳಿಸಬೇಕಾದೀತು. ಹೋಗು ಆಚೆಗೆ ಹೋಗು" ಎಂದು ಗದ್ದರಿಸಿ ಕಳುಹಿಸಿದನು.

ಅದೇದಿನ ಮಧ್ಯಾಹ್ನೋತ್ತರ ಬಾದಷಹನು ಜಿನೀತ್ ಉನ್ನಿಸ್ಸಳಅಂತಃ ಪುರಕ್ಕೆ ಹೋಗಿ ಭೇಟಿಯಿತ್ತನು. ಆ ರಾಜಕುವರಿಯಲ್ಲಿ ಅದೇ ಉಲ್ಲಾಸ, ಅದೇ ಲಾವಣ್ಯ ವೈಖರಿಗಳನ್ನು ಕಂಡನು.

"ಪ್ಯಾರೀ, ನೀನು, ಆ ಶಿವಾಜಿಯನ್ನು ನೋಡಿದ್ದಿಯೇನು? ಅವನು ಹೇಗಿದ್ದಾನೆ? ನೀನು, ನಿಮ್ಮತ್ತೆ ರೋಷನಾರಳು ಅವನನ್ನು ಮುಸಲ್ಮಾನ ನನ್ನಾಗಿ ಮಾಡುತ್ತೇವೆಂದು ಹೇಳಿದ್ದಿರಲಾ. ನಿಮ್ಮ ಮಾತು ಗೆದ್ದಿತೇನು?"

"ಬಾಪ್‌ಜೀ, ಅವನು ಮುಸಲ್ಮಾನನೋ ಹಿಂದುವೋ ಅದರಿಂದೇನೂ ವ್ಯತ್ಯಾಸವಾಗುವುದಿಲ್ಲ. ನಿಜವಾಗಿಯೂ ಅವನು ದೊಡ್ಡ ಮನುಷ್ಯ. ಸರಳ ಸ್ವಭಾವದವನು. ಯಾರೋ ಕೆಟ್ಟ ಜನರು ಅವನ ಮೇಲೆ ನಿಮ್ಮಲ್ಲಿ ದೂರು ಹೇಳಿ ನಿಮ್ಮ ಮನಸ್ಸನ್ನು ಕೆಡಿಸಿ ಹಾಳುಮಾಡಿದ್ದಾರೆ. ನೀವು ಅವನ ಮೇಲೆ ಕೋಪವನ್ನು ಬಿಟ್ಟರೆಅವನು ಮುಸಲ್ಮಾನನೇ ಆಗಿದ್ದಾನೆಂದು ನಾನು ಖಚಿತ ವಾಗಿ ಹೇಳಬಲ್ಲೆ. ಜಹಾಪನಾ, ನೀವೇ ನೋಡಿ ಅವನು ಎಷ್ಟೋ ಊರುಗಳ ಮೇಲೆ ಧಾಳಿ ನಡೆಸಿದ್ದಾನೆ. ಒಂದು ಮಸೀದಿಯ ಕಲ್ಲನ್ನಾದರೂ ಅಲ್ಲಾಡಿಸಲು ಆಸ್ಪದ ಕೊಟ್ಟಿದ್ದಾನೇನು? ಮುಸಲ್ಮಾನ್ ಸ್ತ್ರೀಯರನ್ನು ಅವನು ಎಷ್ಟೊಂದು ಗೌರವವಾಗಿ ಕಾಣುತ್ತಾನೆ ! ಖುದಾನಿನ ಮೇಲೆಯೂ ಅವನಿಗೆ ಅಷ್ಟೇ ಗೌರವವಿದೆ. ನೀವು ಪರೀಕ್ಷಿಸಿ ನೋಡಿ. ದೊಡ್ಡ ಖಾಜೀ ಸಾಹೇಬರು ಅವನಿಗೆ ಭೇಟಿ ಕೊಡಲಿ. ಅವರನ್ನು ಅವನೆಷ್ಟು ಗೌರವದಿಂದ ಕಾಣುತ್ತಾನೆ. ಅದಕ್ಕಿಂತಲೂ ಬೇರೆ ನಿದರ್ಶನವು ಬೇಕೆ? ಜಹಾಪನಾ, ನೀವು ಪೃಥ್ವೀಶ್ವರರಾಗಿದ್ದು ಆ ವೀರಪುರುಷನು ಕುರ್ನಿಸಾತ್ ಮಾಡಲಿಲ್ಲ ವೆಂದು ಅವನನ್ನು ಬಂಧನದಲ್ಲಿಡಬಹುದೇ? ಈ ದುರ್ಜನರ ದೂರುಗಳನ್ನು

ಕೇಳಿ ಅವನನ್ನು ಶೂಲಕ್ಕೇರಿಸಬಹುದೇ? ಈ ದರ್ಬಾರಿಗೆ ಕೆಂಪು ಮೂತಿಯ ಫರಂಗೀ ಜನರು ಬರುತ್ತಾರಲ್ಲಾ. ಅವರು ಕುರ್ನಿಸಾತ್ ಮಾಡುತ್ತಾರೆಯೇ? ಇವೆಲ್ಲ ಅವರವರ ಆಚಾರ ಪದ್ಧತಿಗಳು. ನಿಮ್ಮಂತಹ ಮಹಾಪುರುಷರು ಇದಕ್ಕಿಷ್ಟು ಬೆಲೆಕೊಡುವುದು ಆಶ್ಚರ್ಯದ ಮಾತು."

"ಪ್ಯಾರೀ, ನಿನ್ನ ವಾದವು ಆಕಾಶದವರೆಗೆ ಹಾರಿಹೋಗುತ್ತದೆ. ನೀನೂ, ನಿಮ್ಮತ್ತೆ ರೋಷನಾರಾಳೂ ಸೇರಿ ಅವನ ಬಂಧವಿಮೋಚನೆ ಮಾಡಿಬಿಡಿ ನಿಮಗೆ ಅಡ್ಡಿಯೇನಿದೆ?"

"ಬಾಪ್‌ಜೀ, ತಮ್ಮ ಅನುಗ್ರಹದಿಂದ ನಮಗೆ ಯಾವ ಅಡ್ಡಿ ಆತಂಕಗಳೂ ಇಲ್ಲ. ತಾವೆಷ್ಟು ಕಠಿಣವಾದ ಮನುಷ್ಯರೋ ಅವನು ಅಷ್ಟೇ ಮೂರ್ಖನಾಗಿದ್ದಾನೆ. ನಾವು ಬಿಡುಗಡೆ ಮಾಡುತ್ತೇವೆಂದು ಹೇಳಿದೆವು. ಅವನೊಪ್ಪುವುದಿಲ್ಲ. ಬಾದಷಹರೇ ಬಂದು ಮರ್ಯಾದೆಯಿಂದ ಅವನನ್ನು ಬಿಡುಗಡೆ ಮಾಡಿಸಬೇಕಂತೆ! ದರ್ಬಾರಿಗೆ ಕರೆಸಿ ಗೌರವಿಸಿ ಕಳುಹಿಸಬೇಕಂತೆ! ಇದೆಲ್ಲಿಯ ಹುಚ್ಚುತನ. ಸೂರ್ಯನು ಪಶ್ಚಿಮದಲ್ಲಿ ಹುಟ್ಟಬೇಕು—ಎಂದಂತೆ ಆಗಿದೆ ಅವನ ಮಾತು."

ಬಾದಷಹನು ತಲೆದೂಗಿ "ಅದೂ ಒಂದು ದಿನ ನಡೆಯುತ್ತದೋ ಏನೋ. ಆ ಜಯಸಿಂಹ ಮಹಾರಾಜರು ಪದೇ ಪದೇ ಅವನನ್ನು ದರ್ಬಾರಿಗೆ ಕರೆಸಿ ಗೌರವಿಸಬೇಕು. ದಖ್ಖನ್ನಿನ ಸರ್ವಾಧಿಕಾರವನ್ನು ಅವನಿಗೆ ಕೊಡಿಸಬೇಕು—ಎಂದು ಮೇಲಿಂದ ಮೇಲೆ ಬಿನ್ನಹ ಪತ್ರಗಳನ್ನು ಕಳುಹಿಸುತ್ತಲೇ ಇದ್ದಾರೆ.

"ಶಿವಾಜಿಯು 'ಬಾದಷಹರೇ ಬಂಧನದಿಂದ ಬಿಡಿಸಬೇಕು. ದರ್ಬಾರಿನಲ್ಲಿ ಗೌರವಿಸಬೇಕು' ಎಂದು ಹೇಳುತ್ತಾನೆಂದು ನೀನೇ ಹೇಳಿದೆ.

"ರೋಷನಾರಾ ಸಾಹೇಬಳು ಆ ಶಿವಾಜಿಯನ್ನು ಮುಸಲ್ಮಾನನನ್ನಾಗಿ ಮಾಡಬೇಕು. ಅವನಿಗೆ ಈ ಪ್ಯಾರೀಸಾಹೇಬಳನ್ನು ಕೊಟ್ಟು ಮದುವೆ ಮಾಡಬೇಕು." ಎಂದು ಹೇಳುತ್ತಾಳೆ.

"ಈ ಮೂರೂ ಕೂಡಿದರೇ ಅವನೇ ಗೆಲ್ಲುತ್ತಾನೋ ಏನೋ" ಎಂದು ಹೇಳಿ ಆ ಕುವರಿಯನ್ನು ಅಪ್ಪಿಕೊಂಡು ಕಪೋಲುಗಳೆರಡನ್ನೂ ಚುಂಬಿಸಿ ಅಂತಃಪುರದಿಂದ ಹೊರಟುಹೋದನು.

ಶಿವಾಜಿಯು ದೇಹಾಲಸ್ಯದಿಂದ ಹಾಸಿಗೆ ಹಿಡಿದು ಮಲಗಿದನು. ಹಕೀಮರೂ, ವೈದ್ಯರೂ ಬಂದು ವಿಶೇಷ ಆದರದಿಂದ ನೋಡಿ ಔಷಧಿಗಳನ್ನು ಕೊಟ್ಟು ಹೋಗುತ್ತಿದ್ದರು. ಈ ಸುದ್ದಿಯು ಬಾದಷಹನ ಕಿವಿಗೂ ಬಿದ್ದಿತು.

ಅವನು ರಾಮಸಿಂಗನನ್ನು ಕರೆಸಿ, "ಆ ಬಂದಿಗೆ ಏನು ಖಾಯಿಲೆಯಾಗಿದೆ? ಅಸ್ವಸ್ಥತೆಯು ನಿಜವೋ ಸುಳ್ಳೋ? ವೇಷ ಹಾಕಿದ್ದಾನೋ" ಎಂದು ಪ್ರಶ್ನಿಸಿದನು.

ರಾಮಸಿಂಗನು "ಹುಜೂರ್, ಆದರಲ್ಲಿ ಕೃತ್ರಿಮತೆ ಏನೂ ಕಾಣುವುದಿಲ್ಲ. ದೇಹಾಲಸ್ಯವೇನೋ ಪ್ರಬಲವಾಗಿಯೇ ಇದೆ. ಹಕೀಮರೂ ವೈದ್ಯರೂ ಬಂದುಬಂದು ನೋಡುತ್ತಾರೆ. ಏನು ಖಾಯಿಲೆ?' ಎಂದು ಕೇಳಿದರೆ ಹೇಳುವುದಿಲ್ಲ. ನನ್ನ ದೃಷ್ಟಿಯಲ್ಲಿ ಅವನು ವಿಶೇಷ ಮನೋವ್ಯಥೆಯಿಂದ ಪೀಡಿತನಾಗಿದ್ದಾನೆಂದು ಕಾಣುತ್ತದೆ. ಅವನ ರೀತಿಯು ವಿಚಿತ್ರವಾಗಿದೆ. ಪ್ರತಿದಿನವೂ ಪೇಟೆಯಿಂದ ಆಹಾರ ಸಾಮಗ್ರಿಗಳನ್ನು ತರಿಸಿ 'ಬಡ ಬಗ್ಗರಿಗೆ ಕೊಟ್ಟುಬಿಡಿ' ಎಂದು ಅಪ್ಪಣೆ ಮಾಡುತ್ತಾನೆ. ಬ್ರಾಹ್ಮಣರನ್ನು ಕರೆಸಿ ತನ್ನಲ್ಲಿರುವ ಪೀತಾಂಬರಗಳನ್ನೂ ವಸ್ತ್ರಾಭರಣಗಳನ್ನೂ ದಾನಮಾಡಿಬಿಟ್ಟಿದ್ದಾನೆ. ಈಗ ನನ್ನೊಡನೆಯೂ ಮಾತನಾಡುವುದಿಲ್ಲ. ಫಲೂದನ ಕಡೆಯೂ ತಲೆಯೆತ್ತಿ ನೋಡುವುದಿಲ್ಲ. ಆ ರಾಜಮಹಲು ಬಿರಿದುಹೋಗುವಂತೆ ದೇವರ ಭಜನೆ ಮಾಡುತ್ತಿದ್ದ. ಈಗ ಸದ್ದೇ ಇಲ್ಲ. ಅವನ ಮಗ ಸಾಬಾಂಜಿ ಏನನ್ನೂ ಅರಿಯದ ಹುಡುಗ. ಅವನನ್ನು ತೊಡೆಯ ಮೇಲೆ ಕೂಡಿಸಿಕೊಂಡು ತಲೆ ಸವರುತ್ತಾ ಕಣ್ಣೀರಿಡುತ್ತಿದ್ದರೆ ನಮ್ಮ ಮಹಲೆಲ್ಲಾ ಅಂಧಕಾರಮಯವಾದಂತೆ ಭಾಸವಾಗುತ್ತದೆ. ರೋಷನಾರಾ ಸಾಹೇಬರು ಎಲ್ಲ ಯಾಜಮಾನ್ಯವನ್ನೂ ವಹಿಸಿಕೊಂಡಿರುವಂತೆ ಕಾಣುತ್ತದೆ. ಆವರು ಮಹಲಿಗೆ ಬಂದರೆ ಮಹಲು ಬೆಳಕಾಗುತ್ತದೆ. ಶಿವಾಜಿಯು ಕ್ಷಣಹೊತ್ತು ಸಂತೋಷದಿಂದ ಮಾತನಾಡುತ್ತಾನೆ. ಮೊನ್ನೆ ಒಂದು ಕರುಣಾಜನಕ ದೃಶ್ಯವನ್ನು ನೋಡಿದೆ. ನನ್ನ ಕಣ್ಣುಗಳಲ್ಲಿಯೂ ನೀರು ಬಂದಿತು. ರೋಷನಾರಾ ಸಾಹೇಬರು ಬಂದಾಗ ಶಿವಾಜಿಯು ಅವನ ಮಗನನ್ನು ತೊಡೆಯ ಮೇಲೆ ಕೂಡಿಸಿಕೊಂಡು ಮುದ್ದಿಸುತ್ತಿದ್ದ. ರೋಷನಾರಾ ಸಾಹೇಬರು ಬಂದು ನಿಂತು ಆ ತಂದೆ ಮಕ್ಕಳ ಪ್ರೇಮವನ್ನು ನೋಡುತ್ತಿದ್ದರು.

"ಶಿವಾಜಿಯು ತಲೆಯೆತ್ತಿ ನೋಡಿ 'ರಾಣೀ ಸಾಹೇಬ್, ಈ ಮಗುವನ್ನು ನಿಮ್ಮ ಕೈಗೆ ಅರ್ಪಿಸಿ ಹೋಗುತ್ತೇನೆ. ಇವನನ್ನು ದೊಡ್ಡವನನ್ನಾಗಿ ಮಾಡಿ ಮುಂದಕ್ಕೆ ತರುವ ಭಾರ ನಿಮ್ಮದು' ಎಂದು ಹೇಳಿದ.

"ರೋಷನಾರಾ ಸಾಹೇಬರ ಕಣ್ಣುಗಳಲ್ಲಿ ಕಂಬನಿಯು ತೊಟ್ಟಿಕ್ಕುತ್ತಿತ್ತು. ಅವರು ನೀರವವಾಗಿ ನಿಂತುಬಿಟ್ಟರು.

"ಆ ಸಮಯಕ್ಕೆ ಸರಿಯಾಗಿ ಹಕೀಮರು ಬಂದು ಪರೀಕ್ಷಿಸಿ ನೋಡಿ ಔಷಧಿ ಕೊಟ್ಟರು.

"ಶಿವಾಜಿಯು 'ಹಕೀಮ್ ಸಾಹೇಬರೇ, ನಿಮ್ಮ ಔಷಧದಲ್ಲಿ ಒಳ್ಳೆಯ ಖರಾಮತ್ತಿದೆ. ನಿಮಗೆ ಏನಾದರೂ ಬಹುಮಾನ ಕೊಡಬೇಕು' ಎಂದು ಹೇಳಿ ತನ್ನ ಮುಂಗೈಯಲ್ಲಿದ್ದ ರತ್ನಖಚಿತವಾದ ಥೋಡಾವನ್ನೂ ಬೆರಳಿನಲ್ಲಿದ್ದ ಉಂಗುರಗಳನ್ನೂ ಕಳಚಿ ಹಕೀಮರ ಕೈಗೆ ಕೊಟ್ಟನು.

"ಹಕೀಮರು ಅದನ್ನು ಕೈಗೆ ತೆಗೆದುಕೊಂಡು 'ಮಹಾರಾಜ, ನೀವು ಅಧೀನರಾಗಿದ್ದೀರಿ. ನನ್ನ ಔಷಧಗಳಲ್ಲಿ ಪೂರ್ಣ ಭರವಸೆ ಇದೆ. ನಿಮ್ಮಿಂದ ಬಹುಮಾನ ತೆಗೆದುಕೊಳ್ಳುವ ಸಂತೋಷದ ದಿನವೂ ಬೇಗ ಬರುತ್ತದೆ! ಎಂದು ಹೇಳುತ್ತಾ ಆಭರಣಗಳನ್ನು ಶಿವಾಜಿಯ ಕೈಗೆ ತೊಡಿಸಿ ಆ ಎರಡು ಕೈಗಳನ್ನೂ ಚುಂಬಿಸಿ ಹೊರಟುಹೋದರು

"ಯಾರು ಏನು ಹೇಳಲಿ. ಆ ಶಿವಾಜಿಯು ಏನೋ ಖಾತ್ರಿ ಮಾಡಿಕೊಂಡಿರುವಂತಿದೆ. ಅವನು ಸಂತೋಷವಾಗಿಯೇ ಹೊರಟು ಹೋಗುತ್ತಿದ್ದಾನೆ. ಅವನಿಗೆ ಇಹಲೋಕದ ಆಸೆ ಇಲ್ಲ. ಮೊನ್ನೆ ರಾತ್ರಿ ದೊಡ್ಡ ಖಾಜೀ ಸಾಹೇಬರು ಬಂದಿದ್ದರು. ರೋಷನಾರಾ ಸಾಹೇಬರೇ ಕರೆತಂದಿರಬೇಕೆಂದು ಕಾಣುತ್ತದೆ. ಶಿವಾಜಿಯು ಆ ಖಾಜೀ ಸಾಹೇಬರಿರುವಷ್ಟು ಹೊತ್ತೂ ಆನಂದ ಭರಿತನಾಗಿದ್ದ. ಅವರೊಡನೆ ಬಹಳ ಮಾತುಕಥೆಗಳನ್ನಾಡಿದ. ಅವರಿಗೆ ತಲೆಬಾಗಿ ಅಭಿವಾದನ ಮಾಡಿ ಆಶೀರ್ವಾದವನ್ನು ಪಡೆದ. ಅವರು ಹೊರಟು ಹೋದ ಮೇಲೆ ಶಯ್ಯೆಯಲ್ಲಿ ಮಲಗಿದ. ಪೂರ್ಣ ಅಜ್ಞಾನಾವಸ್ಥೆ. ಸಿದ್ದೀ ಫಲೂದ್ ಸಾಹೇಬನು ಗಾಬರಿಯಿಂದ ಓಡಿಬಂದು ನನ್ನನ್ನು ಕರೆದುಕೊಂಡು

ಹೋದ. ನಾನು ಅಲುಗಿಸಿ ನೋಡಿದೆ. ಅದು ಸಿದ್ದಿಯಲ್ಲ. ಅಜ್ಞಾ ಸಾವಸ್ಥೆ. ಮೈಮುಟ್ಟಿ ನೋಡಿದೆ. ತೀವ್ರ ಜ್ವರವೇಗವಿತ್ತು. ಜಹಾಪನಾ, ಹೀಗಿದೆ ಆ ಶಿವಾಜಿಯ ಹಾಲತ್" ಎಂದು ಹೇಳಿದನು.

ಬಾದಷಹನು "ರಾಮಸಿಂಗ್, ನೀನು ಹೇಳುವುದೆಲ್ಲಾ ಯಥಾರ್ಥ ವಾಗಿದೆ. ಅವನು ವ್ಯಾಧಿಯ ವೇಷ ಹಾಕಿಲ್ಲ. ಏನೋ ವ್ಯಾಧಿ ಬಲವಾಗಿದೆ. ಅದಕ್ಕೆ ನಾವೇನೂ ಮಾಡಲಾದೀತು? ಮಹಾರಾಜ ಜಯಸಿಂಹರವರು ಪತ್ರಗಳನ್ನು ಬರೆಯುತ್ತಲೇ ಇದ್ದಾರೆ. ನೀನು ಅವರಿಗೊಂದು ಪತ್ರ ಬರಿ. 'ಶಿವಾಜಿಯು ತೀವ್ರರೋಗಗ್ರಸ್ತನಾಗಿದ್ದಾನೆ. ಗುಣ ಹೊಂದಿದ ಮೇಲೆ ತಮ್ಮ ಇಚ್ಛೆಯಂತೆ ಎಲ್ಲವನ್ನೂ ನಡೆಸಬಹುದು' ಎಂದು ಬರಿ" ಎಂದು ಹೇಳಿ ಕಳುಹಿಸಿದನು.

ಬಾದಷಹನು ತನ್ನ ಮನಸ್ಸಿನಲ್ಲಿಯೇ ಯೋಚನೆ ಮಾಡಿದನು. 'ಶಿವಾಜಿ ರೋಗಗ್ರಸ್ಥನಾಗಿದ್ದಾನೆ. ಮರಣವೂ ಹತ್ತಿರಹತ್ತಿರ ಬರುತ್ತಿರ ಬಹುದು. ಇವೆಲ್ಲ ದೇವರ ಇಚ್ಛೆ ! ಯಾರೇನು ಮಾಡಬಲ್ಲರು ? ಅವನು ನನ್ನ ಶಿಕ್ಷೆಯಿಂದ ಪಾರಾದಂತಿದೆ. ದೇವರು ಶಿಕ್ಷೆಕೊಡುತ್ತಿದ್ದಾನೆ. ಪಾಪಿ ಗಳನ್ನು ಆ ಖುದಾನು ಎಂದಿಗೂ ಕ್ಷಮಿಸುವುದಿಲ್ಲ. ಅವನ ಗೋರಿಯು ಈ ಆಗ್ರಾದಲ್ಲಿಯೇ ಆಗುವಂತೆ ವಿಧಿಯ ಇಚ್ಛೆ ಇರಬಹುದು ಆಗಲಿ' ಎಂದುಕೊಂಡನು.

ಶಿವಾಜಿಗೆ ಜ್ವರವೇಗವು ಹೆಚ್ಚುತ್ತಲೇ ಬಂದಿದ್ದಿತು. ಉನ್ನೀಸಳು ವಿಶೇಷಸಮಯವನ್ನು ಅಲ್ಲಿಯೇ ಕಳೆಯುತ್ತಿದ್ದಳು. ತನ್ನ ಕೈಯಿಂದಲೇ ಔಷಧೋಪಚಾರಗಳನ್ನು ಆದರದಿಂದ ನಡೆಸುತ್ತಿದ್ದಳು. ಎಷ್ಟೋ ದಿನ ಅವಳು ಅಂತಃಪುರಕ್ಕೆ ಹಿಂತಿರುಗುವ ಹೊತ್ತಿಗೆ ಅರ್ಧರಾತ್ರಿಯು ಮೀರಿಹೋಗಿರು ತ್ತಿತ್ತು.

ರಾತ್ರಿ. ಅರ್ಧರಾತ್ರಿ ಮೀರಿದ್ದಿತು. ಶಿವಾಜಿಯು ಕಣ್ಣುಬಿಟ್ಟು ನೋಡಿದನು. ಆಶ್ಚರ್ಯದಿಂದ "ಪ್ಯಾರೀ ಸಾಹೇಬ್, ನೀವು ಇನ್ನೂ ಅಂತಃಪುರಕ್ಕೆ ಹೋಗಿಲ್ಲವೇನು ?" ಈಗ ರಾತ್ರಿ ಎಷ್ಟು ಹೊತ್ತಾಗಿದೆ ? ಆ ಮಗು ಸಾಂಬಾಜಿಯು ಎಲ್ಲಿದ್ದಾನೆ?" ಎಂದು ಕೇಳಿದನು.

ಜಿನ್ನೀತುನ್ನೀಸಳು 'ಶಿವಾಜಿಗೆ ಸರಿಯಾಗಿ ಜ್ಞಾನ ಬಂದಿದೆ' ಎಂದು ಕೊಂಡಳು.

“ಮಹಾರಾಜ, ಎಲ್ಲವೂ ಸುಮುಖವಾಗಿಯೇ ನಡೆಯುತ್ತಿದೆ. ನೀವು ಎರಡು ಮೂರು ದಿವಸಗಳಿಂದಲೂ ಜ್ವರಪ್ರಕೋಪದಿಂದ ಕೂಗಿಕೊಳ್ಳು ತ್ತಿದ್ದಿರಿ. ಏನೇನೋ ಮಾತನಾಡುತ್ತಿದ್ದಿರಿ ಮಗುವು ಗಾಬರಿಗೊಳ್ಳುವ ನೆಂದು ರೋಷನಾರಾ ಸಾಹೇಬಳು ಅವನನ್ನು ಅಂತಃಪುರಕ್ಕೆ ಕರೆದುಕೊಂಡು ಹೋದಳು.

ಶಿವಾಜಿಯು ಸಣ್ಣ ನಗುವನ್ನು ನಕ್ಕು, “ಪ್ಯಾರೀ ಸಾಹೇಬ್, ದೊಡ್ಡ ಭಾರವು ಕಳೆದಂತಾಯಿತು. ನಾನು ಇಲ್ಲಿಗೆ ಬರುವಾಗಲೇ ದೇವರ ಪ್ರೇರಣೆ ಯಿಂದ ರಾಜ್ಯವನ್ನು ಮಾತೂಶ್ರೀಯವರ ಪಾದಗಳಲ್ಲಿ ಒಪ್ಪಿಸಿ ಬಂದಿದ್ದೇನೆ. ಇಲ್ಲಿ ನನ್ನ ಪ್ರಿಯಬಾಲಕನನ್ನು ಬಾದಷಹರ ಸೋದರಿಯ ಮಡಲಿನಲ್ಲಿ ಹಾಕಿದ್ದೇನೆ. ನಾನು ಸಂತೋಷದಿಂದ ಪ್ರಾಣ ಬಿಡಬಹುದು. ಅದು ನಿಮ್ಮ ಸಾನ್ನಿಧ್ಯದಲ್ಲಿ. ಪ್ಯಾರೀ ಸಾಹೇಬ್. ಆ ರೋಷನಾರಾ ಮತ್ತು ನೀವು ನನ್ನ ವಿಷಯದಲ್ಲಿ ತೋರಿಸಿರುವ ಅಪಾರ ಕೃಪೆಯಿಂದ ನಾನು ಋಣಿಯಾಗಿದ್ದೇನೆ. ಈ ಪ್ರಪಂಚದಲ್ಲಿ ಮತ್ತಾವ ಋಣವೂ ನನ್ನ ಮೇಲೆ ಇಷ್ಟಿಲ್ಲ. ಇನ್ನೊಂದು ಜನ್ಮದಲ್ಲಿ ನಿಮ್ಮ ಋಣವನ್ನು ತೀರಿಸುತ್ತೇನೆ” ಎಂದು ಹೇಳಿ ಕೈಮುಗಿದು ಕಣ್ಣುಗಳನ್ನು ಮುಚ್ಚಿದನು.

ಮಾರನೆಯ ದಿವಸದಿಂದ ಗುಣಮುಖವಾಗುತ್ತ ಬಂದಿತು. ದರ್ಬಾರಿ ಗಳಲ್ಲಿ ಅನೇಕರು ಬಂದು ಶಿವಾಜಿಯನ್ನು ನೋಡಿಕೊಂಡು ಮಾತನಾಡಿಸಿ ಹೋಗುತ್ತಿದ್ದರು. ಅನೇಕ ಹಿಂದೂ ಸರ್ದಾರರೂ ಬಂದು ಶಿವಾಜಿಯ ಭೇಟಿಯನ್ನು ತೆಗೆದುಕೊಳ್ಳುತ್ತಿದ್ದರು.

ಶಿವಾಜಿಯು ಫಸೂದ್ ಸಾಹೇಬನನ್ನು ಕರೆಸಿ ಹೇಳಿದನು. “ಮೊಕ್ತೇಸರ ಸಾಹೇಬರೇ. ದೇವರ ಕೃಪೆಯಿಂದ, ತಮ್ಮೆಲ್ಲರ ಆದರದಿಂದ ನನ್ನ ಶರೀರ ಸ್ಥಿತಿಯು ಗುಣಮುಖ ಹೊಂದುತ್ತಿದೆ. ಮೊದಲು ತಮ್ಮೆಲ್ಲರಿಗೂ ನಾನು ಕೃತಜ್ಞತೆಯ ವಂದನೆಗಳನ್ನು ಸಲ್ಲಿಸುತ್ತೇನೆ. ನನ್ನ ವಂದನೆಗಳನ್ನು ಬಾದಷಹ ರಲ್ಲಿ ಬಿನ್ನಹಮಾಡಿ ತಿಳಿಸಿರಿ. ನನಗೆ ಔಷಧಿ ಕೊಟ್ಟವರು ಬಹಳ ದೊಡ್ಡ ಮನುಷ್ಯರು. ಅವರಿಗೆ ನನ್ನ ಮೈಮೇಲಿರುವ ಎಲ್ಲ ಆಭರಣಗಳನ್ನೂ ಪುರಸ್ಕಾರವಾಗಿ ಕೊಡಬೇಕೆಂದಿದ್ದೇನೆ. ಅವರು ಪರಿಗ್ರಹಿಸಲೊಪ್ಪುವುದಿಲ್ಲ. ಇದಕ್ಕೆ ಬಾದಷಹರ ಅಪ್ಪಣೆ ಬೇಡುತ್ತೇನೆಂದು ತಿಳಿಸಿ. ನನ್ನಲ್ಲಿ ಕೊಂಚ

ಹಣವಿದೆ. ಅದನ್ನೆಲ್ಲಾ ಬ್ರಾಹ್ಮಣರಿಗೆ ದಕ್ಷಿಣೆ ಕೊಡುವುದಾಗಿ ಹರಕೆ ಹೊತ್ತಿದ್ದೇನೆ. ನನ್ನ ಮಗ ಸಾಂಬಾಜಿಯ ಆಭರಣಗಳನ್ನೆಲ್ಲಾ ವಿಕ್ರಯಿಸಿ ಬಡಬಗ್ಗರಿಗೆ ಅಕ್ಕಿ, ಹಣ್ಣುಗಳು, ಮಿಠಾಯಿಗಳನ್ನು ತರಿಸಿ ದಾನ ಮಾಡ ಬೇಕೆಂದಿದ್ದೇನೆ. ಇದಕ್ಕೆ ಬಾದಷಹರ ಅಪ್ಪಣೆಯನ್ನು ಬೇಡಿರಿ" ಎಂದು ಹೇಳಿ ಕಳುಹಿಸಿದನು.

ಮಾರನೆಯ ದಿನದಿಂದಲೇ ದಾನ ಧರ್ಮಗಳಿಗೆ ಆರಂಭವಾಯಿತು. ಕಾವಲುಗಾರರು ಒಳಗೆ ಬರುವವರನ್ನೂ ಹೊರಗೆ ಹೋಗುವವರನ್ನೂ ಶೋಧಿಸಿ ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದರು.

ಜಯಸಿಂಹರ ಅರಮನೆಯಿಂದ ಬಡಬಗ್ಗರಿಗೆ ದಾನಮಾಡಲು ಆಹಾರ ಸಾಮಗ್ರಿಗಳನ್ನೂ ಮಿಠಾಯಿ, ಹಣ್ಣುಗಳನ್ನು ತುಂಬಿದ ಬುಟ್ಟಿಗಳನ್ನೂ ಶಿವಾಜಿಯ ಸೇವಕರು ಹೊತ್ತುಕೊಂಡು ಹೋಗುತ್ತಿದ್ದರು. ಕಾವಲುಗಾರರು ಬಹಳ ಜಾಗರೂಕತೆಯಿಂದ ಎಲ್ಲ ಬುಟ್ಟಿಗಳನ್ನೂ ಪರಿಶೋಧಿಸಿ ನೋಡಿ ಹೊರಗೆ ಬಿಡುತ್ತಿದ್ದರು. ಆ ಸೇವಕರು ಮಸೀದಿಗಳ ಮುಂದೆ, ದೇವಾಲಯ ಗಳ ಮುಂದೆ ಬಡವರಿಗೆ, ಭಿಕಾರಿಗಳಿಗೆ ಅವುಗಳನ್ನು ಹಂಚುತ್ತಿದ್ದರು. ಬೀದಿ ಬೀದಿಗಳಲ್ಲಿ ಮಿಠಾಯಿ ಬತ್ತಾಸುಗಳನ್ನು ಹಂಚುತ್ತಿದ್ದರು. ಈ ದಾನಧರ್ಮ ಗಳು ನಲವತ್ತೆಂಟು ದಿನಗಳು, ಒಂದು ಮಂಡಲಕಾಲ ನಡೆಯುತ್ತವೆಂದು ಆಗ್ರಾ ನಗರದಲ್ಲೆಲ್ಲಾ ಪ್ರಸಿದ್ಧವಾಗಿದ್ದಿತು.

ಹೀಗೆ ಪ್ರತಿದಿನವೂ ಎರಡು ಹೊತ್ತೂ ದಾನಧರ್ಮದ ಪದಾರ್ಥಗಳನ್ನು ತುಂಬಿದ ಬುಟ್ಟಿಗಳು ಅರಮನೆಯಿಂದ ಹೋಗುತ್ತಿದ್ದವು. ಕಾವಲುಗಾರರು ಪರೀಕ್ಷೆ ಮಾಡಿಮಾಡಿ ದಿನದಿನಕ್ಕೆ ಔದಾಸೀನ್ಯತೆಯಿಂದ ಹಾಗೆಯೇ ಬಿಟ್ಟು ಬಿಡುತ್ತಿದ್ದರು. ಚಾಣಾಕ್ಷರಾದ ಶಿವಾಜಿಯ ಸೇವಕರು ಈ ಔದಾಸೀನ್ಯಕ್ಕೆ ತಕ್ಕಂತೆ ನಡೆದುಕೊಳ್ಳುತ್ತಿದ್ದರು. ಅವರಿಗೆ ಚೆನ್ನಾಗಿ ಮನದಟ್ಟಾಯಿತು.

ಒಂದು ದಿನ ಪ್ರಾತಃಕಾಲ ಹೊರಡುವ ಬುಟ್ಟಿಗಳಲ್ಲಿ ಒಂದು ಬುಟ್ಟಿ ಯಲ್ಲಿ ಶಿವಾಜೀ, ಮತ್ತೊಂದು ಬುಟ್ಟಿಯಲ್ಲಿ ಸಾಂಬಾಜೀ ಇವರಿಬ್ಬರು ಎರಡು ಬುಟ್ಟಿಗಳಲ್ಲಿ ಕುಳಿತುಕೊಂಡರು. ಮೇಲೆ ತರಕಾರಿಗಳನ್ನೂ ಹಣ್ಣುಗಳನ್ನೂ ತುಂಬಿದರು. ಆ ಬುಟ್ಟಿಗಳು ಪಹರೆಯ ಠಾಣೆಯ ಸಮೀಪಕ್ಕೆ ಬರುತ್ತಲೇ ಬುಟ್ಟಿಯನ್ನು ಹೊತ್ತಿದ್ದ ಮರಾಠರು ಕೂಗುಹಾಕಿದರು. ಪಹರೆಯ ಮೊಗಲ-

ಸಿಪಾಯಿಗಳಿಬ್ಬರು ಬಂದು ಆಧ್ಯತೆಯಿಂದ ನಿಂತು ಬಟ್ಟೆಗಳನ್ನು ಹೊರಗೆ ಬಿಟ್ಟರು. ಕ್ರಮಪ್ರಕಾರ ಎಂದಿನಂತೆ ಆರು ಬುಟ್ಟಿಗಳು ಹೊರಟುಹೋದವು. ನಾಲ್ಕು ಬುಟ್ಟಿಗಳನ್ನು ಪೇಟೆಯ ಕಡೆ, ಮಸೀದಿ ದೇವಾಲಯಗಳ ಕಡೆ ಹೊತ್ತುಕೊಂಡು ಹೋದರು. ಎರಡು ಬುಟ್ಟಿಗಳು ಊರಿಂದಾಚೆ ಹೊರಟು ಹೋದವು.

ಊರಿಗೆ ನಾಲ್ಕೈದು ಮೈಲಿಗಳ ದೂರದಲ್ಲಿದ್ದ ಫರ್‌ಚಾಂದ್ ಎಂಬ ಸಂಕೇತಸ್ಥಳಕ್ಕೆ ಲಗುಬಗೆಯಿಂದ ಹೋಗಿ ಕೆಳಗಿಳಿಸಿದರು. ಅಲ್ಲಿ ಶಿವಾಜಿಯ ಸಂಗಡಿಗರಾದ ನೀರಾಜೀರಾವ್, ದತ್ತ ತ್ರ್ಯಂಬಂಕ ಮತ್ತು ರಘುಮಿತ್ರ ಇವರ ಗಳು ವೇಷವನ್ನು ಮರೆಸಿಕೊಂಡು ಕಾದಿದ್ದರು. ಈ ಬುಟ್ಟಿಗಳಿಂದು ಶಿವಾಜಿ ಮತ್ತು ಸಾಂಬಾಜಿ ಇವರಿಬ್ಬರೂ ಮೇಲಕ್ಕೆದ್ದರು. ಅಲ್ಲಿ ಕುದುರೆ ಗಳನ್ನು ಸಿದ್ಧವಾಗಿ ಕಾದಿಟ್ಟದ್ದರು.ಆ ಗುಂಪೆಲ್ಲಾ ವೇಗವಾಗಿ ಅಶ್ವಗಳಮೇಲೆ ಧಾವಿಸುತ್ತಾ ಮಥುರಾನಗರಿಯ ಕಡೆಗೆ ಪಲಾಯನ ಮಾಡಿತು.

ಜಯಸಿಂಹನ ಆರಮನೆಯಲ್ಲಿ ಶಿವಾಜಿಯು ಮಲಗುವ ಹಾಸಿಗೆಯ ಮೇಲೆ ಹೀರಾಜಿಯು ಮುಸುಗುಹಾಕಿಕೊಂಡು ಮಲಗಿದ್ದನು. ಅವನ ಮುಂಗೈ ಹಾಸಿಗೆಯ ಮೇಲೆ ಹೊರಗೆ ಕಾಣುತ್ತಿತ್ತು.ಮುಂಗೈಯಲಿದ್ದತೋಡಾ ಮತ್ತು ಉಂಗುರಗಳು ಥಳಥಳನೆ ಹೊಳೆಯುತ್ತಿದ್ದವು. ಅವನು ಆಕಾರದಲ್ಲಿ, ಬಣ್ಣದಲ್ಲಿ, ಎಲ್ಲ ಚಹರೆಗಳಲ್ಲಿಯೂ ಶಿವಾಜಿಗೆ ಬಲುಮಟ್ಟಿಗೆ ಹೋಲಿಕೆ ಯಾಗಿದ್ದನು. ಮೊಕ್ತೇಸರ್ ಸಿದ್ದೀ ಫಲೂದ್‌ಖಾನನು ಮಾಮೂಲಿನಂತೆ ಬಂದು ನೋಡಿದನು. ಆ ಕೈ, ಆ ಉಂಗುರಗಳನ್ನು ನೋಡಿದನು. ಹಾಸಿ ಗೆಯ ಕಡೆ ಗಮನವಿಟ್ಟು ನೋಡಿದನು. ತನಿಖೆ ಮುಗಿಯಿತು. ಶಿವಾಜಿಯು ಮಲಗಿದ್ದಾನೆ. ರಾತ್ರಿ ಬಹು ಹೊತ್ತಿನವರೆಗೆ ಎದ್ದೇ ಇದ್ದಂತೆ ಇತ್ತು. 'ಖಾಯಿಲೆಯ ಮನುಷ್ಯ ಬೆಳಗಿನ ಝಾವದ ಮೇಲೆ ನಿದ್ರೆ ಹತ್ತಿದಂತಿದೆ, ಎಂದುಕೊಂಡು ಹೊರಟುಹೋದನು. ಬೆಳಕು ಹರಿಯಿತು. ಚೆನ್ನಾಗಿ ಬಿಸಿಲು ಬಂದಿತ್ತು. ಹೀರಾಜಿಯು ಎದ್ದು ಮುಖಮಾರ್ಜನೆ ಮಾಡಿ ಕೊಂಡು ತನ್ನ ಅಂಗರೇಕು ಪಗಡಿಗಳನ್ನು ಧರಿಸಿ, ಬೆತ್ತವನ್ನು ಹಿಡಿದು ಹೊರಟನು. ಪಹರೆಯ ಠಾಣೆಯ ಮುಂದೆ ನಿಂತು ಮೊಕ್ತೇಸರ್ ಫಲೂದ್ ಖಾನನಿಗೆ ಸಲಾಂಮಾಡಿ "ಹಜರತ್ ಸಾಹೇಬರೇ, ಸದಾಬರ್ತ್ ಹಂಚಿಸಿ

ಬರುತ್ತೇನೆ. ಮಹಾರಾಜರಿಗೆ ಸ್ವಲ್ಪ ನಿದ್ರೆ ಹತ್ತಿರುವಂತಿದೆ. ಯಾರೂ ಹೋಗಿ ಎಚ್ಚರಗೊಳಿಸದಂತೆ ನೋಡಿಕೊಳ್ಳಿ" ಎಂದು ಹೇಳಿ ಹೊರಟು ಹೋದನು.

ಬಹಳ ಹೊತ್ತಾಯಿತು. ಪರಿವಾರದವರಾರೂ ಹಿಂತಿರುಗಿ ಬರಲಿಲ್ಲ. ಅರಮನೆಯೊಳಗೆ ಹೋಗುವವರೂ ಇಲ್ಲ, ಬರುವವರೂ ಇಲ್ಲ. ಫಲೂದ್ ಖಾನನು ಸ್ವತಃ ಎದ್ದು ಹೋಗಿ ಶಿವಾಜಿಯನ್ನು ಹುಡುಕಿ ನೋಡಿದನು. ಶಯನಗೃಹದಲ್ಲಿಲ್ಲ. ಸ್ನಾನಗೃಹದಲ್ಲಿಲ್ಲ. ಪೂಜಾಗೃಹದಲ್ಲಿ, ಮಹಡಿಯ ಮೇಲೆ, ಎಲ್ಲೆಲ್ಲಿಯೂ ಹುಡುಕಿ ನೋಡಿದನು. ಎಲ್ಲಿಯೂ ಇಲ್ಲ. ಅರಮನೆಯು ಸರ್ವತ್ರ ಶೂನ್ಯ! ಅವನಿಗೆ ಎದೆ ಬಡಿದುಕೊಳ್ಳಲಾರಂಭವಾಯಿತು. ಓಡುತ್ತಾ ಓಡುತ್ತಾ, ಏದುತ್ತಾ ಅರಮನೆಗೆ ಹೋದನು. ಬಾದಷಹರು ಕುಳಿತಿದ್ದೆಡೆಗೆ ಹೋಗಿ ಎದೆ ಬಡಿದುಕೊಳ್ಳುತ್ತಾ ತಲೆ ಚೆಚ್ಚಿಕೊಳ್ಳುತ್ತಾ ಗಟ್ಟಿಯಾಗಿ ಪ್ರಲಾಪಮಾಡಿ ಬೊಬ್ಬೆ ಇಡಲಾರಂಭಿಸಿದನು. ಬಾದಷಹನಿಗೆ ಹೇಸಿಗೆಯಾಯಿತು. ಇದೆಂಥಾ ಅವಿನಯ! ಇವನಿಗೇನು ಪಿಶಾಚಿ ಹಿಡಿದಿದೆಯೋ?" ಏನಾಗಿದೆ ನಿನಗೆ, ಏಕೆ ಹುಚ್ಚನಂತೆ ಅರಚುತ್ತೀ?" ಎಂದು ಗದ್ದರಿಸಿದನು.

ಖಾನನು "ಜಹಾಪನಾ! ಶಿವಾಜಿ ಓಡಿಹೋಗಿದ್ದಾನೆ. ಎಲ್ಲಿಯೂ ಇಲ್ಲ. ಮಹಾರಾಜರ ಅರಮನೆಯನ್ನೆಲ್ಲಾ ನಾನೇ ಖುದ್ದಾಗಿ ಹುಡುಕಿದ್ದೇನೆ. ಪಹರೆಯವರು ಸರ್ಪಕಾವಲು ಕಾಯುತ್ತಿದ್ದಾರೆ. ಬೆಳಗ್ಗೆ ನಾನೇ ಖುದ್ದಾಗಿ ಹೋಗಿ ಶಿವಾಜಿಯನ್ನು ನೋಡಿಕೊಂಡು ಬಂದಿದ್ದೇನೆ. ಅವನು ಮಂತ್ರವಾದಿ, ಜಾದೂ ಮಾಡಿದ್ದಾನೆ. ಮಾಯವಾಗಿ ಹೋಗಿದ್ದಾನೆ. ಖುದಾನ ಆಣೆ. ತಮ್ಮ ಪಾದಸಾಕ್ಷಿಯಾಗಿ ನಿಜವನ್ನು ಹೇಳುತ್ತಿದ್ದೇನೆ. ಖಾವಂದರು ಕಾಪಾಡಬೇಕು" ಎಂದು ಅಳುತ್ತ ಬಾದಷಹನ ಪಾದಗಳ ಮೇಲೆ ಬಿದ್ದನು.

ಕ್ಷಣಹೊತ್ತು ಬಾದಷಹನು ಮೌನ ತಾಳಿದ್ದನು. "ಬದ್‌ಮಾಷ್! ಹೋಗು! ಆಚೆ ಹೋಗು. ನನ್ನೆದುರಿಗೆ ನಿಲ್ಲಬೇಡ. ಆ ನಿನ್ನ ಹಾಳು ಮೋರೆ ತೋರಬೇಡ" ಎಂದು ಗದ್ದರಿಸಿದನು.

ದರಬಾರಿನ ಗೃಹಕ್ಕೆ ಬಂದು ಸೇನಾಧಿಪತಿಗಳನ್ನೂ ಸರದಾರರುಗಳನ್ನೂ ಕುರಿತು, "ಎಲ್ಲ ಕಡೆಯೂ ಹುಡುಕಿರಿ. ಗುಡಿ ಗೋಪುರಗಳಲ್ಲಿ ಹುಡುಕಿರಿ

ಹಿಂದುಗಳ ಮನೆಗಳನ್ನು ಶೋಧಿಸಿ ನೋಡಿರಿ. ನಗರದ ನಾಲ್ಕೂಕಡೆ ಠಾಣ್ಯ ಗಳಲ್ಲಿ ವಿಚಾರಣೆ ಮಾಡಿರಿ. ಆ ಶಿವಾಜಿ ಕಳ್ಳ, ಮಾಯಾವಿ ಎಂಬುದು ನಿಜ. ಅವನು ಯಾವ ವೇಷದಲ್ಲಿರುತ್ತಾನೆಂಬುದನ್ನು ಗೊತ್ತು ಹಚ್ಚಲಾಗುವುದಿಲ್ಲ. ಬೈರಾಗಿಯಂತೆ, ಭಿಕ್ಷುಕನಂತೆ, ಭಿಕಾರಿಯಂತೆ ಸೋಗು ಹಾಕಿಕೊಂಡು ಇಲ್ಲಿಯೇ ತಿರುಗುತ್ತಿರಬಹುದು. ಮುಸಲ್ಮಾನ್ ಸರದಾರನಂತೆ ವೇಷಹಾಕಿ ಕೊಂಡಿರಬಹುದು. ಹುಡುಕಿ ತನ್ನಿರಿ" ಎಂದು ಕಟ್ಟಾಜ್ಞೆ ಇತ್ತನು.

ರಾಜದೂತರು ಎಲ್ಲ ಕಡೆಯೂ ಹುಡುಕಿದರು, ರಾಜಮಾರ್ಗಗಳಲ್ಲಿ, ದೇವ ಮಂದಿರಗಳಲ್ಲಿ, ಕೊಳ ಕಟ್ಟೆಗಳಲ್ಲಿ, ಉಪವನಗಳಲ್ಲಿ ಅಲೆದಾಡುತ್ತಿದ್ದ ಬೈರಾಗಿ ಭಿಕ್ಷುಕರನ್ನೂ, ಹಿಂದೂ ಪುರೋಹಿತ ಅರ್ಚಕರುಗಳನ್ನೂ ಕಶಾಪ್ರ ಹಾರ ಮಾಡಿ ಗುಂಪುಗುಂಪಾಗಿ ಹಿಡಿತಂದು ಅರಮನೆಯ ಬಾಗಿಲಿನಲ್ಲಿತಂದು ನಿಲ್ಲಿಸಿದರು. ಅವರೆಲ್ಲರೂ ಗೋಳೋ ಎಂದು ಆರ್ತನಾದ ಮಾಡುತ್ತಿದ್ದರು. "ಹೇಳಿ ! ಯಾರು ಬಲ್ಲಿರಿ ? ಶಿವಾಜಿಯನ್ನು ಯಾರು ಕಂಡಿದ್ದೀರಿ ? ಎಲ್ಲಿ ಅವಿತುಕೊಂಡಿದ್ದಾನೆ ?" ಎಂದು ಗರ್ಜಿಸುತ್ತಿದ್ದರು. ಹಿಂದುಗಳ ಮನೆ ಗಳೆಲ್ಲಾ ಶೋಧಿಸಲ್ಪಟ್ಟವು. "ಎಲ್ಲಿಯೂ ಇಲ್ಲ. ಶಿವಾಜಿಯಿಲ್ಲ ! ಶಿವಾಜಿ ಯಿಲ್ಲ !" ಎಂಬ ವಾರ್ತೆಗಳೇ ಬರುತ್ತಿದ್ದವು.

ಸಂಧ್ಯಾಕಾಲದವರೆಗೂ ರಾಜದೂತರು ಆಗ್ರಾ ನಗರವನ್ನೆಲ್ಲಾ ಜಾಲಾಡಿಬಿಟ್ಟರು. ಸರ್ವತ್ರ ನಿರಾಸೆ. ಎಲ್ಲವೂ ಬಾದಷಹನಿಗೆ ವರದಿ ಯಾಯಿತು.

ಬಾದಷಹನು ರಾಮುಸಿಂಗನಿಗೆ ಹೇಳಿ ಕಳಿಸಿದನು. ಈ ಸಮಾಚಾರ ಗಳೆಲ್ಲವೂ ರಾಮುಸಿಂಗನಿಗೂ ಚೆನ್ನಾಗಿ ಗೊತ್ತಿತ್ತು. ರಜಪೂತವೀರ, ಅವನು ಕಿಂಚಿತ್ತಾದರೂ ಧೈರ್ಯ ಕೆಟ್ಟಿರಲಿಲ್ಲ. 'ಶಿವಾಜಿಯು ವೀರನಂತೆ ಮಾಯ ವಾಗಿದ್ದಾನೆ. ಅವನು ಈ ಬಾದಷಹನಿಗೆ ತಕ್ಕ ಉತ್ತರವನ್ನೇ ಬಿಟ್ಟು ಹೋಗಿದ್ದಾನೆ. ಇವನು ಅವನಿಗೆ ಮರ್ಯಾದೆಗಳನ್ನು ಮಾಡಿಸುತ್ತೇನೆಂದೂ ಅಧಿಕಾರ ಕೊಡುತ್ತೇನೆಂದೂ ಆಶೆ ತೋರಿಸಿ ಶಿವಾಜಿಯನ್ನು ಇಲ್ಲಿಗೆ ಬರಮಾಡಿ ಕೊಂಡ. ಇಲ್ಲಿ ಮೋಸದಿಂದ ಬಂಧನದಲ್ಲಿಟ್ಟ. ನಮ್ಮ ತಂದೆ ಮಹಾರಾಜಾ ಜಯಸಿಂಹರು ಈ ಬಾದಷಹನಿಗೆ ಎಷ್ಟು ಪತ್ರಗಳನ್ನು ಬರೆದರು ! ಶಿವಾಜಿಗೆ ಕೊಟ್ಟ ವಾಗ್ದಾನವನ್ನು ಉಳಿಸಿಕೊಳ್ಳುವುದಕ್ಕಾಗಿ ಎಷ್ಟು ಪರಿತಪಿಸಿದರು !

ಕಲ್ಲುಬಂಡೆಯ ಮೇಲೆ ಮಳೆಗರೆದಂತಾಯಿತು. ಶಿವಾಜಿಯು ಮೊದಲಿನಿಂದಲೂ ಮಾಯಾ ವಿದ್ಯದಲ್ಲಿ ಗಟ್ಟಿಗ. ಮನೆಯ ಮೇಲಿಂದ ನೆಗೆದು ಹಾರಬಲ್ಲ. ಕೋಟೆಯ ಗೋಡೆಯನ್ನು ಸುಲಭವಾಗಿ ಹತ್ತಿ ಹಾರಬಲ್ಲ. ಒಂದು ಬಾರಿ ತಪ್ಪಿಸಿಕೊಂಡು ಹೊರಟು ಹೋಗಿದ್ದಾನೆ. ಇನ್ನು ಅವನನ್ನು ಯಾರೂ ಹಿಡಿಯಲಾರರು.' ಎಂದು ಮನಸ್ಸಿನಲ್ಲಿಯೇ ಸಂತೋಷಪಟ್ಟುಕೊಳ್ಳುತ್ತಾ ಬಾದಷಹನ ಸಮ್ಮುಖಕ್ಕೆ ಹೋಗಿ ನಿಂತ.

ಬಾದಷಹನು ಮುಖವನ್ನು ಗಂಟಿಕ್ಕಿಕೊಂಡು ಕುಳಿತಿದ್ದವನು ರಾಮಸಿಂಗನು ಎದುರಿಗೆ ಬಂದು ಮುಜರೆಮಾಡಿ ನಿಲ್ಲುತ್ತಲೇ ತಲೆಯೆತ್ತಿ ನೋಡಿದನು. ಕ್ರೂರವಾದ ತನ್ನ ದೃಷ್ಟಿಯು ರಾಮಸಿಂಗನ ಹೃದಯದಲ್ಲಿ ನಾಟುವಂತೆ ಕಣ್ಣು ಬಿಟ್ಟು ನೋಡಿದನು. "ರಾಮಸಿಂಗ್ ! ಆ ಕಳ್ಳ ಶಿವಾಜಿಯು ತಪ್ಪಿಸಿಕೊಂಡು ಹೊರಟು ಹೋಗಿದ್ದಾನೆ. ತಿಳಿಯಿತೋ ?" ಎಂದು ಘರ್ಜಿಸಿದನು.

ರಾಮಸಿಂಗನು ಕೈಮುಗಿದು "ಜಹಾಪನಾ, ಹೌದು ! ಈ ದಿನ ಪ್ರಾತಃಕಾಲದಿಂದ ಶಿವಾಜಿಯು ಮಾಯವಾಗಿದ್ದಾನೆಂದು ಫಲೂದ್‌ಖಾನರು ಹೇಳಿದರು" ಎಂದ.

"ಆ ಸಮಾಚಾರ ಕೇಳಿ ನೀನೇನು ಮಾಡಿದೆ ?"

ಮೌನ ! ನಿರುತ್ತರ !

"ಏಕೆ ಮಾತನಾಡುವುದಿಲ್ಲ ? ನೀನು ಜವಾಬ್ದಾರನಲ್ಲವೋ ? ಅಂದು ನಾವು ಶಿವಾಜಿಯನ್ನು ರಾದಾನ್‌ದಾಜ್ ಖಾನೆಗೆ ಕಳಿಸಬೇಕೆಂದು ಹುಕುಂ ಮಾಡಿದಾಗ ನೀನು ಬಂದು ಪ್ರಾರ್ಥನೆ ಮಾಡಿ ತಪ್ಪಿಸಲಿಲ್ಲವೋ ?"

"ಹೌದು, ಹುಜೂರ್ ! ಅಂದು ಖಾವಂದರಲ್ಲಿ ನಾನು ಪ್ರಾರ್ಥನೆ ಮಾಡಿದ್ದುಂಟು."

ಅವನನ್ನು ನಿಮ್ಮ ಅರಮನೆಯಲ್ಲಿಯೇ ಇಡುವಂತೆ ಮಾಡಿದ್ದು ನೀನೇ ಅಲ್ಲವೋ ?"

"ನಿಜ ಖಾವಂದ್, ನಿಜ !"

"ಈಗ ಅವನು ಪರಾರಿಯಾಗಿದ್ದಾನೆ. ನೀನು ಶಿಕ್ಷಾರ್ಹನಾಗುತ್ತೀ."

"ಜಹಾಪನಾ ! ನನ್ನ ಮೇಲೆ ಸಂದೇಹವೇ ?"

"ಏಕೆ ಸಂದೇಹಪಡಬಾರದು ? ನೀನೂ ಹಿಂದು. ಆ ಶಿವಾಜಿಯೂ ಹಿಂದು."

"ಹುಜೂರ್ ! ತಾವು ಬಾದಷಹರು. ಬೇಕಾದ ಶಿಕ್ಷೆಯನ್ನು ವಿಧಿಸುವ ಅಧಿಕಾರ ತಮಗಿದೆ. ಅಷ್ಟೇ ಅಲ್ಲ. ಈ ನನ್ನ ಶರೀರದ ಮೇಲೆ ತಮಗೆ ಪೂರ್ಣಾಧಿಕಾರವಿದೆ. ಇದು ತಮ್ಮ ಉಪ್ಪುಂಡ ಶರೀರ. ಆದರೆ ನನ್ನ ಮೇಲೆ ತಾವು ಸಂದೇಹಪಡುವುದು ಆಶ್ಚರ್ಯಕರವಾಗಿದ, ಖೇದಕರವಾಗಿದೆ. ಹಿಂದು ! ಅವನೆಂಥಾ ಹಿಂದು, ನಾನೆಂಥಾ ಹಿಂದು ! ನಾನು ಪ್ರಸಿದ್ಧ ಕುಲದಲ್ಲಿ ಹುಟ್ಟಿರುವ ರಜಪೂತನೆಂಬುದನ್ನು ತಾವು ಮರೆತಂತಿದೆ. ಶಿವಾಜಿಯು ಕುಲದಲ್ಲಿ ಎಂದಿಗೂ ನನಗೆ ಸಮಾನನಲ್ಲ. ಆ ಶಿವಾಜಿಯನ್ನು ತಾವು ರಾದಾಜ್‌ದಾಜ್ ಖಾನೆಗೆ ಕಳಿಸಿದರೇನು, ಕಬರ ಸ್ಥಾನದಲ್ಲಿ ತಲೆ ಕಡಿಸಿದರೆ ನನಗೇನು ? ತಮ್ಮ ತಂದೆ ಮಹಾರಾಜಾ ಜಯಸಿಂಹರವರು ಅವನನ್ನು ಗೌರವದಿಂದ ಆದರಿಸಿ ಕಳಿಸಿಕೊಡಬೇಕೆಂದು ನನಗೆ ಅನೇಕ ಪತ್ರಗಳನ್ನು ಬರೆದಿದ್ದರು. ತಮಗೂ ಅನೇಕವಾಗಿ ಬಿನ್ನಹ ಮಾಡಿಕೊಂಡಿದ್ದರು. ಅವರ ಆಜ್ಞೆಯನ್ನು ಪಾಲನ ಮಾಡುವುದು ನನ್ನ ಕರ್ತವ್ಯವಲ್ಲವೇ ? ಅವರ ಪ್ರಾರ್ಥನೆಯನ್ನು ಮನ್ನಿಸುವುದು ಖಾವಂದವರಿಗೂ ಉಚಿತವಲ್ಲವೇ ? ಅಷ್ಟೇ ನನ್ನ ಜವಾಬ್ದಾರಿ. ಅವನು ಪರಾರಿಯಾದದ್ದರಲ್ಲಿ ಲವಲೇಶವೂ ನನ್ನ ಜವಾಬ್ದಾರಿಯಿಲ್ಲ."

"ರಾಮಸಿಂಗ್ ! ನೀನು ಕಲಿತದ್ದನ್ನೆಲ್ಲಾ ನನ್ನ ಮುಂದೆ ಮಾತನಾಡ ಬೇಡ. ಮಹಾರಾಜಾ ಜಯಸಿಂಹರಿಗೆ ಅಸಮಾಧಾನವಾದರೂ ನಾನು ಲೆಕ್ಕಿಸುವವನಲ್ಲ. ನನಗೆ ಅವಮಾನವಾದಂತಾಗಿದೆ. ಈ ಡೆಲ್ಲಿಯ ದರ್ಬಾರಿಗೆ ಮಸಿ ಬಳಿದಂತಾಗಿದೆ. ನೀನೊಬ್ಬನು ಮಾತ್ರವಲ್ಲ. ಯಾರು ಯಾರು ಇದಕ್ಕೆ ಸಂಬಂಧಿಸಿದವರೋ, ಯಾರು ಯಾರು ಜಾಗರೂಕತೆ ತಪ್ಪಿ ನಡೆ ದವರೋ ಅವರೆಲ್ಲರಿಗೂ ಕಠಿಣವಾದ ಶಿಕ್ಷೆಯಾಗಲೇಬೇಕು. ನಿಮ್ಮ ತಂದೆ ಮಹಾರಾಜಾ ಜಯಸಿಂಹರ ಮೇಲೆಯೂ ತಪ್ಪು ಬರುತ್ತದೆ. ಅವರು ಅವನನ್ನು ಪತ್ತೆಹಚ್ಚಿ ಹಿಡಿದು ತರುವವರೆಗೆ ಈ ದರ್ಬಾರಿನಲ್ಲಿ ಅವರಿಗೆ ಗೌರವ ಸಿಕ್ಕಲಾರದು. ಮುಖ್ಯವಾಗಿ ನೀನು ಮತ್ತು ಫಲೂದ್‌ಖಾನ್ ಇಬ್ಬರೂ

ಪ್ರತ್ಯಕ್ಷ ಅಪರಾಧಿಗಳಾಗಿದ್ದೀರಿ. ನಿಮ್ಮಿಬ್ಬರನ್ನೂ ಆಮರಣಾಂತ ಕಾರಾಗೃಹ ದಲ್ಲಿಟ್ಟರಬೇಕು. ನೀನಿನ್ನೂ ತರುಣ. ಮಹಾರಾಜಾ ಜಯಸಿಂಹರವರ ಮಗ ಎಂಬ ದಾಕ್ಷಿಣ್ಯದಿಂದ ನಾವು ನಿನ್ನನ್ನು ಕಾರಾಗೃಹಕ್ಕೆ ಕಳಿಸುವುದಿಲ್ಲ. ಆದರೆ ಮೊಗಲ್ ದರ್ಬಾರಿನ ಸೇವೆಯಲ್ಲಿರಲು ನೀನು ಅನರ್ಹ. ನಿನ್ನ ಸರದಾರ ಹುದ್ದೆಯನ್ನು ವಜಾಮಾಡಲಾಗಿದೆ. ನಿನ್ನ ಜಹಗೀರಿಗಳನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ. ನೀನು ಈ ರಾಜಧಾನಿಯಲ್ಲಿ ಇನ್ನು ಮೇಲೆ ಒಂದು ದಿನವೂ ಇರಕೂಡದು. ನಮಗೆ ಮುಖ ತೋರಿಸಕೂಡದು. ಅದೇ ನಿನ್ನ ವಿಷಯದಲ್ಲಿ ನಾವು ತೋರಿರುವ ಕ್ಷಮಾಪಣೆ, ಪ್ರಾಣದಾನ! ಹೊರಟು ಹೋಗು" ಎಂದು ಅಪ್ಪಣೆ ಮಾಡಿದನು.

ರಾಜದೂತರನ್ನು ಕರೆಸಿ ಫಲೂದ್‌ಖಾನನನ್ನು ಕಾರಾಗಾರದಲ್ಲಿಡಿಸ ಬೇಕೆಂದು ಅಪ್ಪಣೆಮಾಡಿದನು. ಸೇನಾಧಿಪತಿಗಳನ್ನು ಕರೆಸಿ "ಆ ಶಿವಾಜಿಯು ಎಲ್ಲೇ ಇರಲಿ, ನೀವುಗಳು ಸಾಹಸದಿಂದ ಹಿಡಿದು ತರಬೇಕು" ಎಂದು ಅಪ್ಪಣೆ ಮಾಡಿ, ನಾಲ್ಕು ದಿಕ್ಕುಗಳಿಗೂ ಸೈನ್ಯಗಳನ್ನು ಅಟ್ಟಿದನು. ದರಬಾರೆಲ್ಲವೂ ಪ್ರಕ್ಷುಬ್ಧವಾಗಿತ್ತು. ಬಾದಷಹನ ಎದುರಿಗೆ ಬರುವ ಧೈರ್ಯವು ಯಾರಿಗೂ ಇರಲಿಲ್ಲ. ರೋಷನಾರಳ ಅಂತಃಪುರಕ್ಕೆ ಬಹುದಿನಗಳು ಬಾದಷಹನು ಹೋಗಲಿಲ್ಲ. ಅತ್ತ ಕಡೆ ತಿರುಗಿ ನೋಡಲಿಲ್ಲ.

## ೧೯

ಶಿವಾಜಿಯು ಮಥುರಾಕ್ಷೇತ್ರವನ್ನು ಹೋಗಿ ಸೇರಿದನು. ಆ ಕ್ಷೇತ್ರ ದಲ್ಲಿ ಹಿಂದೂಸ್ಥಾನದ ನಾನಾ ಪ್ರಾಂತ್ಯಗಳಿಂದ ನಾನಾ ಭಾಷೆಗಳ ನಾನಾ ಜಾತಿಗಳ ಜನರು ಯಾತ್ರಿಕರಾಗಿ ಬಂದು ಸೇರಿದ್ದರು ಶಿವಾಜಿಯ ಕಡೆ ಯವರೆಲ್ಲಾ ವೇಷಾಂತರಗಳಿಂದ ನಾನಾ ಕಡೆಗಳಲ್ಲಿ ಅಡಗಿಕೊಂಡು ಶಿವಾಜಿಯ ರಕ್ಷಣೆಯಲ್ಲಿ ಜಾಗರೂಕರಾಗಿದ್ದರು.

ಆ ಮಧುರಾಕ್ಷೇತ್ರದಲ್ಲಿ ಕೃಷ್ಣಾಜೀ ಕಾಶೀನಾಥ್ ಎಂಬ ಪುರೋಹಿತರು ನೆಲೆಸಿದ್ದರು. ಅವರ ಮನೆಯಲ್ಲಿ ಶಿವಾಜಿಗೆ ಗೋಪ್ಯವಾದ ಬಿಡಾರವು ಏರ್ಪಡಿಸಲ್ಪಟ್ಟಿದ್ದಿತು. ಶಿವಾಜಿಯು ಅಲ್ಲಿ ಇಳಿದುಕೊಂಡನು. ಸಾಂಬಾಜಿಯು ಬಹಳ ದಣಿದು ನಿತ್ರಾಣನಾಗಿದ್ದನು. ಮುಂದೆ ಅವನನ್ನು ಕರೆದುಕೊಂಡು ತರಾತುರಿ ಪ್ರಯಾಣ ಮಾಡುವುದು ಅಸಾಧ್ಯ. ಸಾವಿರಾರು ಮೈಲಿಗಳು ಪ್ರಯಾಣ ಮಾಡಬೇಕು. ಕುದುರೆಯ ಮೇಲೆ ಕಾಲುನಡಿಗೆಯಲ್ಲಿ, ಕಾಡು ಹಾದಿಗಳಲ್ಲಿ ಹೇಗೆಂದರೆ ಹಾಗೆ ಪ್ರಯಾಣ ಮಾಡಬೇಕು. ಅದಕ್ಕೆ ಸಾಂಬಾಜಿಯು ಅಸಮರ್ಥ ಸಾಂಬಾಜಿಯನ್ನು ಕಟ್ಟಿಕೊಂಡು ಹೋದರೆ ಶಿವಾಜಿಯು ಸಿಕ್ಕಿಬೀಳುವ ಸಂಭವವು ಹೆಚ್ಚಾಗಿದ್ದಿತು. ಶಿವಾಜಿಯು ಸಾಂಬಾಜಿಯನ್ನು ಆ ಬ್ರಾಹ್ಮಣನಿಗೆ ಒಪ್ಪಿಸಿದನು. ತಾನು ಮುಖವನ್ನೂ ತಲೆಯನ್ನೂ ಬೋಳಿಸಿಕೊಂಡು ವಿಭೂತಿಧಾರಣೆ ಮಾಡಿ ಕಾವಿಬಟ್ಟೆಗಳನ್ನುಟ್ಟು ಸನ್ಯಾಸಿಯ ವೇಷವನ್ನು ಧರಿಸಿ, ಆ ಮಧುರಾಕ್ಷೇತ್ರದಿಂದ ಮುಂದಕ್ಕೆ ಪ್ರಯಾಣ ಮಾಡಿದನು. ಅವನ ಸಂಗಡಿಗರಾದ ಮೂವರು ಸೇನಾಧಿಪತಿಗಳೂ ಬೈರಾಗಿ ವೇಷದಿಂದ ಶಿವಾಜಿಯನ್ನು ಹಿಂಬಾಲಿಸಿದರು.

ಆಗ್ರಾದಿಂದ ದಖ್ಖನ್ನಿಗೆ ಹೋಗುವ ಮಾರ್ಗಗಳಲೆಲ್ಲಾ ಮೊಗಲ್ ಸೈನಿಕರು ಶಿವಾಜಿಯನ್ನು ಅರಸುತ್ತಾ ಹೊರಟಿದ್ದರು. ಗುಜರಾತಿನ ಮಾರ್ಗವಾಗಿಯೂ ಮತ್ತೊಂದು ಸೈನಿಕರ ತಂಡವು ಶಿವಾಜಿಯನ್ನು ಅರಸುತ್ತಾ ಹೊರಟಿತ್ತು.

ಶಿವಾಜಿಯು ಹಿಡಿದ ಮಾರ್ಗವೇ ಬೇರೇ. ವಂಗದೇಶದ ಕಡೆಗೆ ಶಿವಾಜಿಯು ಹೊರಟುಹೋದನು. ಹಾಗೆಯೇ ವಿದರ್ಭ, ಕಳಿಂಗ ರಾಜ್ಯಗಳ ಕಡೆಯಿಂದ ಯಾತ್ರಿಕನಂತೆ ಹೊರಟಿದ್ದನು.

ಈ ಯಾತ್ರಿಕರು ಕಾಲುನಡಿಗೆಯಲ್ಲಿಯೇ ಹೋಗುತ್ತಿದ್ದರು. ಧೂಳಿ ಧೂಸರಿತವಾದ ಶರೀರ, ಬಿಸಿಲಿನ ತಾಪಕ್ಕೆ ಬೆಂದುಹೋದ ಮುಖ. ಅವರೆಲ್ಲರೂ ಕೃಶರಾಗಿ ಹೋಗಿದ್ದರು ಬಣ್ಣವೇ ಬದಲಾಯಿಸಿಹೋಗಿತ್ತು. ಅವರುಗಳನ್ನು ಕಂಡವರಾರೂ ರಾಜಪುರುಷರೆಂದು ಸಂದೇಹಿಸುವುದಕ್ಕೆ ಆಸ್ಪದವೇ ಇರಲಿಲ್ಲ. ಹುಟ್ಟಿದಂದಿನಿಂದ ಭಿಕಾರಿಗಳಾಗಿ ಹುಟ್ಟಿ, ಅನಾಥರಾಗಿ

ಬೆಳೆದು, ಬೈರಾಗಿಗಳಾಗಿ ಇದ್ದವರು ಹೇಗೆ ಕಾಣುತ್ತಾರೆಯೋ ಹಾಗೆ ಕಾಣುತ್ತಿದ್ದರು.

ಶಿವಾಜಿಯು ಪ್ರತಿದಿನವೂ ಬಹುದೂರ ನಡೆಯುತ್ತಿದ್ದನು. ಬಹು ಮಟ್ಟಿಗೆ ಕಾಡುದಾರಿಗಳನ್ನೇ ಹಿಡಿದು ಹೋಗುತ್ತಿದ್ದರು. ಹೀಗೆ ನೂರಾರು ಮೈಲಿಗಳನ್ನು ಅತಿಕ್ರಮಿಸಿ ಹೋಗಿದ್ದರು.

ಮೊಗಲಾಯಿ ರಾಜ್ಯದಲ್ಲಿ ಕೊನೆಯ ಠಾಣ್ಯದಲ್ಲಿ ಠಾಣೆಯ ಹವಾಲ್ದಾರ ನೊಬ್ಬನು ಏನೋ ಸಂದೇಹದಿಂದ ಶಿವಾಜಿಯನ್ನು ಹಿಡಿದು ಠಾಣೆಯಲ್ಲಿಟ್ಟನು. ಶಿವಾಜಿಯ ಸಂಗಡಿಗರು ಸಿಕ್ಕಿ ಬೀಳಲಿಲ್ಲ. ಅವರುಗಳನ್ನು ಶಿವಾಜಿಯನ್ನು ಹೇಗೆ ತಪ್ಪಿಸಬೇಕೆಂದು ಆಲೋಚನೆ ಮಾಡುತ್ತಿದ್ದರು. ಆ ಠಾಣೆಯ ಕೊತ್ವಾಲನು "ನೀನು ಶಿವಾಜಿ ಇರಬಹುದೆಂದು ಸಂದೇಹ ಬಂದಿದೆ. ಏನು ಹೇಳುವಿ?" ಎಂದು ಗದ್ದರಿಸಿದನು. ಆ ಸನ್ಯಾಸಿಯು "ಓಹೋ! ನೀವು ಶಿವಾಜೀ ಮಹಾರಾಜರನ್ನು ಹುಡುಕುತ್ತಿದ್ದೀರಾ? ನಾನು ಒಳ್ಳೆಯ ಪುಣ್ಯವಂತ ನನ್ನನ್ನು ನೋಡಿ ಶಿವಾಜಿ ಮಹಾರಾಜರಿರಬಹುದೆಂದು ಸಂದೇಹಿಸುವಷ್ಟು ಚಹರೆ ನನಗಿದ್ದರೆ, ಅದೂ ಒಂದು ಭಾಗ್ಯ. ನನಗೇನೂ ಭಯವಿಲ್ಲ. ನಾನು ಸಂನ್ಯಾಸಿ. ಎಲ್ಲಿಗೆ ಬೇಕಾದರೂ ನನ್ನನ್ನು ಕಳುಹಿಸಿ. ನಾನು ಹೋಗಲು ಸಿದ್ಧ. ಇದೂ ಒಂದು ತಮಾಸೆ. ನನ್ನ ಜೀವನದಲ್ಲಿ ಎಷ್ಟೋ ಪ್ರಸಂಗಗಳನ್ನು ನೋಡಿದ್ದೇನೆ. ಕಳ್ಳಕಾಕರನ್ನು ಹಿಡಿದುಹಾಕಿದ್ದು ನೋಡಿದ್ದೇನೆ. ಖೂನಿ ದರೋಡೆ ಮಾಡಿದ ಪಾತಕಿಗಳನ್ನು ಹಿಡಿದಿದ್ದು ಕಂಡಿದ್ದೇನೆ. ನೀವು ಮಹಾರಾಜನನ್ನು ಹಿಡಿಯುವ ಸೋಗಿನಿಂದ ಸನ್ಯಾಸಿಯನ್ನು ಹಿಡಿದುಕೊಂಡು ಹೋಗುವುದೂ ಒಂದು ಕೌತುಕವೇ !" ಎಂದು ಹೇಳಿ ಠಾಣೆಯಲ್ಲಿ ನೆಲದ ಮೇಲೆ ನಿರಾತಂಕವಾಗಿ ಮಲಗಿಕೊಂಡನು.

ಕೊತ್ವಾಲನಿಗೆ ಮತ್ತೆ ಸಂದೇಹ ಬಂದಿತು. 'ನಾನೆಲ್ಲಿಯೋ ತಪ್ಪು ಮಾಡಿದ್ದೇನೆ. ಶಿವಾಜಿಯು ಇತ್ತಕಡೆ ಏಕೆ ಬರುತ್ತಾನೆ? ಈ ಠಾಣ್ಯದ ಸಮೀಪಕ್ಕೆ ಬರಬೇಕಾದರೆ ಎಷ್ಟೋ ಭಾರಿಭಾರಿ ಮೊಗಲಾಯಿ ಠಾಣ್ಯಗಳನ್ನು ದಾಟಿ ಬರಬೇಕು. ಅವರೆಲ್ಲರೂ ತನಿಖೆ ಮಾಡದಿದ್ದುದನ್ನು ನಾನು ಮಾಡಿದ್ದೇನೆಂದರೆ ಯಾರು ನಂಬುತ್ತಾರೆ? ಈ ಬಡಕಲು ಸನ್ಯಾಸಿಯನ್ನು ಶಿವಾಜೀ ಮಹಾಜನೆಂದು ಹೇಳಿ ನಾನು ಫೌಜುದಾರರ ಮುಂದೆ ನಿಲ್ಲಿಸಿದರೆ,

ನನ್ನನ್ನು ಹುಚ್ಚನೆಂದು ಕರೆಯುತ್ತಾರೆ. ಮುಖಕ್ಕೆ ಮಸಿ ಬಳಿಸಿ ಕತ್ತೆಯ ಮೇಲೆ ಮೆರವಣಿಗೆ ಮಾಡಿಸುತ್ತಾರೆ. ಇದೆಲ್ಲಿಯ ಪೀಕಲಾಟ' ಎಂದು ಕೊಂಡನು.

ಬೆಳಗಿನ ಝಾವದಲ್ಲಿ ಮನೆಯಿಂದ ಎದ್ದು ಬಂದು ಠಾಣ್ಯದಲ್ಲಿ ಮಲಗಿದ್ದ ಸನ್ಯಾಸಿಯನ್ನು ನೋಡಿದನು. ಸಂನ್ಯಾಸಿಯು ಪ್ರಶಾಂತನಾಗಿ ಸುಖನಿದ್ರೆ ಯಲ್ಲಿದ್ದಾನೆ. ಕೊತ್ವಾಲನು ನೋಡಿದನು. ಇವನು ಎಂದೆಂದಿಗೂ ಶಿವಾಜಿ ಯಲ್ಲ ಶಿವಾಜಿಯಾಗಿದ್ದು ಹೀಗೆ ಠಾಣೆಯಲ್ಲಿ ಸಿಕ್ಕಿಬಿದ್ದಿದ್ದರೆ, ನಿಶ್ಚಿಂತ ನಾಗಿ ನಿರಾತಂಕನಾಗಿ ಹೀಗೆ ಮಲಗಿರುತ್ತಿದ್ದನೇ? ಮಲಗಿದ್ದರೆ ತಾನೇ ಹೀಗೆ ಗಾಢನಿದ್ರೆಯು ಬರುತ್ತಿತ್ತೇ?' ಎಂದುಕೊಂಡನು.

ಆ ಸಂನ್ಯಾಸಿಯ ಮೈ ಅಲುಗಿಸಿ ಎಚ್ಚರಗೊಳಿಸಿದನು. ಸಂನ್ಯಾಸಿಯು ಮೇಲೆದ್ದನು. ಕೊತ್ವಾಲನು "ಏಳು ಸಂನ್ಯಾಸಿ, ಮೇಲಕ್ಕೇಳು. ನನ್ನ ಹಿಂದೆ ಬಾ!" ಎಂದು ದರ್ಪದಿಂದ ಹೇಳಿದನು.

ಸನ್ಯಾಸಿಯು ಎದ್ದು "ಕೊತ್ವಾಲ್ ಸಾಹೇಬರೇ! ಈ ಅರ್ಧರಾತ್ರಿ ಯಲ್ಲಿ ಎಲ್ಲಿಗೆ ಬರಬೇಕು? ಬೆಳಗಾದ ಮೇಲೆ ಹೋಗಕೂಡದೇ?" ಎಂದನು.

"ಬಾಯಿಮುಚ್ಚು ! ನನ್ನ ಹಿಂದೆ ಬಾ ಎಂದರೆ ತೆಪ್ಪಗೆ ಬರಬೇಕು ಎಲ್ಲಿಗೆ? ಏನು ಅದೆಲ್ಲಾ ನಿನಗೇಕೆ ಅಧಿಕ ಪ್ರಸಂಗ?"

ಕೊತ್ವಾಲನು ಮುಂದೆಮುಂದೆ ನಡೆದನು. ಸನ್ಯಾಸಿಯು ಹಿಂದೆ ಹಿಂದೆ ಅನುಸರಿಸಿ ಹೋದನು. ಊರಿಂದಾಚೆ ಹೋದ ಮೇಲೆ ಕೊತ್ವಾಲನು "ಹೋಗು ! ಮತ್ತೆ ಈ ಊರಿನ ಕಡೆ ಬರಕೂಡದು. ಸನ್ಯಾಸಿಯೋ ಶಿವಾಜಿಯೋ, ಯಾರಾದರೂ ನಿನ್ನನ್ನು ಮಾಫ್ ಮಾಡಿದ್ದೇನೆ. ಈಗ ಹೇಳು. ನೀನು ಶಿವಾಜಿಯಲ್ಲವಷ್ಟೆ?"

"ಖಂಡಿತವಾಗಿಯೂ ಅಲ್ಲ, ಕೊತ್ವಾಲರೇ ! ನಾನು ಶಿವಾಜಿಯಲ್ಲ. ದಕ್ಷಿಣದೇಶದ ಸನ್ಯಾಸಿ ನಾನು. ಕಾಶೀ ಹರಿದ್ವಾರ ಯಾತ್ರೆ ಹೋಗಿದ್ದೆ. ಇತ್ತ ಕಡೆ ಹೊರಟುಬಂದೆ. ರಾಮೇಶ್ವರದವರೆಗೆ ಹೋಗಿ ಎಲ್ಲಿಯಾದರೂ ಒಂದು ಮಠ ಸೇರಿಕೊಳ್ಳುತ್ತೇನೆ."

"ಒಳ್ಳೆಯದು ಹೋಗು!" ಎಂದು ಕೊತ್ವಾಲನು ಹೇಳಿದನು. ಅಷ್ಟು ಹೊತ್ತಿಗೆ ಸ್ವಲ್ಪಸ್ವಲ್ಪ ಬೆಳಕು ಹರಿದಿತ್ತು. ಶಿವಾಜಿಯ ಸಂಗಡಿಗರು ದೂರದಲ್ಲಿ ಹದ್ದುಗಳಂತೆ ನೋಟಗಳನ್ನು ಬೀರುತ್ತ ನಿಂತಿದ್ದರು. ಶಿವಾಜಿಯು ತನ್ನ ಕೈಲಿದ್ದ ಬಿದಿರು ದೊಣ್ಣೆಯನ್ನು ನೆಲದ ಮೇಲೆ ಹೊಡೆದನು. "ಕೊತ್ವಾಲ ಸಾಹೇಬರೇ. ಇಲ್ಲಿ ಬನ್ನಿ, ನೋಡಿ. ಇಲ್ಲಿ ಚಿನ್ನದ ವರಹಗಳು ಬಿದ್ದಿವೆ. ಆರಿಸಿ ಕೊಂಡು ಹೋಗಿರಿ" ಎಂದು ಹೇಳಿ ನಕ್ಕನು. ಕೊತ್ವಾಲನು ಆತುರನಾಗಿ ವರಹಗಳನ್ನು ಆರಿಸಿ ತೆಗೆದುಕೊಂಡನು. "ಸನ್ಯಾಸಿ, ನಿನ್ನಲ್ಲಿ ಇಷ್ಟು ವರಹ ಗಳು ಎಲ್ಲಿ ಬಂದವು?" ಎಂದು ಆಶ್ಚರ್ಯದಿಂದ ಪ್ರಶ್ನೆ ಮಾಡಿದನು.

"ನನಗೆ ಚಿನ್ನ ಮಾಡುವುದಕ್ಕೆ ಬರುತ್ತದೆ"ಎಂದುಹೇಳಿ ಸನ್ಯಾಸಿಯು ಮಾಯವಾದನು. ಕೊತ್ವಾಲನು ಕೈತುಂಬಾ ವರಹಗಳನ್ನು ತೆಗೆದುಕೊಂಡು ಬೊಗಸೆಯಲ್ಲಿಟ್ಟುಕೊಂಡು ಪರೀಕ್ಷಿಸುತ್ತಾ 'ಇವು ಖೋಟಾ ನಾಣ್ಯಗಳೋ, ನಿಜವಾದ ನಾಣ್ಯಗಳೋ, ಅಥವಾ ಕಳ್ಳ ಮಾಲೋ? ಈ ಸನ್ಯಾಸಿಯು ಎಲ್ಲಿಂದಲೋ ಕದ್ದು ತಂದಿರಬಹುದೋ?' ಎಂದು ಆಲೋಚಿಸಿದನು. ಆ ಆಲೋಚನೆಯು ಕೊತ್ವಾಲ ಮಹಾಶಯನಿಗೆ ಪ್ರಿಯಕರವಾದುದಲ್ಲ. 'ಇವು ಸಾಚಾನಾಣ್ಯಗಳು. ಖಾತ್ರೀ ಮಾಲು. ಈಗ ಇದು ನನ್ನ ಹಣ" ಎಂದು ಸಂತೋಷಪಟ್ಟುಕೊಳ್ಳುತ್ತಾ ಮನೆಯ ಕಡೆ ಹೊರಟನು

ಶಿವಾಜಿಯ ಪ್ರಯಾಣವು ಮುಂದುವರಿಯಿತು.

ಶಿವಾಜಿಯು ಓಡ್ರದೇಶ ಆಂಧ್ರದೇಶಗಳಲ್ಲಿ ಸಂಚಾರಮಾಡುತ್ತಾ ಮಹಾರಾಷ್ಟ್ರಕ್ಕೆ ಬಂದನು. ಅವನ ಆನಂದಕ್ಕೆ ಪಾರವಿಲ್ಲ. "ಇದು ನನ್ನ ಜನ್ಮಭೂಮಿ. ಈ ಭೂಮಿಯ ಉದ್ಧಾರಕ್ಕಾಗಿ, ವಿಧರ್ಮೀಯರಿಂದ ಈ ಮಹಾರಾಷ್ಟ್ರವನ್ನು ಉಳಿಸುವುದಕ್ಕಾಗಿ ನನಗೆ ಬುದ್ಧಿ ಬಂದಂದಿನಿಂದ ಶ್ರಮಿಸಿದ್ದೇನೆ ದೈವವು ನನ್ನನ್ನು ಸೆಳೆದೊಯ್ದು ಆ ಬಾದಷಹನ ಪಂಜರದಲ್ಲಿ ಸಿಕ್ಕಿಹಾಕಿಸಿತ್ತು. ಗುರುರಾಮದಾಸರವರ ಅನುಗ್ರಹದಿಂದ ಆ ಕೋಟೆಯಿಂದ ತಪ್ಪಿಸಿಕೊಂಡು ಬಂದೆ. ಈ ಜನ್ಮಭೂಮಿಯನ್ನು ಪುನಃ ನೋಡುವೆನೆಂಬ ನಂಬಿಕೆಯು ಎಳ್ಳಷ್ಟಾದರೂ ಇರಲಿಲ್ಲ. ಆ ದೈವವೇ ನನ್ನನ್ನು ಸಂರಕ್ಷಣೆ ಮಾಡಿ ಈ ಜನ್ಮಭೂಮಿಯ ಸೇವೆಗಾಗಿ ಕರೆತಂದು ಬಿಟ್ಟಿದೆ ಈ ಪ್ರಿಯ ವಾದ ಜನ್ಮಭೂಮಿಯಲ್ಲಿ ಕಾಲಿಡುತ್ತಲೇ ನನ್ನ ಶ್ರಮವೆಲ್ಲ ಪರಿಹಾರವಾಗಿ

ನವಚೈತನ್ಯವು ಉದ್ಭವಿಸಿದಂತಾಗಿದೆ!" ಎಂದು ಹೇಳಿ ತನ್ನ ಸಂಗಡಿಗರೆಲ್ಲರನ್ನೂ ಆಲಂಗಿಸಿದನು.

"ನೀವು ನನ್ನ ಸ್ನೇಹಿತರು. ಸೇವಕರು ಎಂದು ನಾನು ಭಾವಿಸಿಲ್ಲ. ನೀವುಗಳು ನನ್ನ ಸಹೋದರರೆಂದೇ ಭಾವಿಸಿದ್ದೇನೆ. ನನಗಾಗಿ ನೀವುಗಳೆಷ್ಟು ಕಷ್ಟಗಳನ್ನನುಭವಿಸಿದಿರಿ ! ಎಂತಹ ಅಪಮಾನಗಳನ್ನು ಸಹಿಸಿದಿರಿ! ಇದಕ್ಕಾಗಿ ನನ್ನ ಸರ್ವಸ್ವವನ್ನೂ ನಿಮಗಿತ್ತರೂ ಈ ಋಣವು ತೀರುವುದಿಲ್ಲ" ಎಂದು ಆನಂದಬಾಷ್ಪಗಳನ್ನೂ ಸುರಿಸುತ್ತಾ ಹೇಳಿದನು.

ಈ ಸಂನ್ಯಾಸಿ ಬೈರಾಗಿಗಳ ಗುಂಪು ರಾಯಘಡಕ್ಕೆ ಹೋಗಿ ಸೇರಿತು. ಕೋಟೆಯ ಬಾಗಿಲಿನಲ್ಲಿ ಕಾವಲಿದ್ದ ಕಾವಲುಗಾರರು "ಯಾರೋ ಸಾಧು ಸಂತರ ಗುಂಪು ಬಂದಿದೆ" ಎಂದುಕೊಂಡು ಒಳಗೆ ಬಿಟ್ಟರು. ಶಿವಾಜಿ ಮಹಾರಾಜನನ್ನಾಗಲೀ ನೀರಾಜೀರಾವ್ ಮುಂತಾದ ಸೇನಾಧಿಪತಿಗಳನ್ನಾಗಲೀ ಯಾರೂ ಗುರುತಿಸಲಿಲ್ಲ. ಈ ಸಂತರ ಗುಂಪು ಅರಮನೆಯ ಬಾಗಿಲಿಗೆ ಹೋಗಿ ನಿಂತಿತು.

ದ್ವಾರಪಾಲಕರು ಮಾತೂಶ್ರೀ ಬೀಜಾಬಾಯಿಯವರ ಸನ್ನಿಧಾನಕ್ಕೆ ಹೋಗಿ "ಮಹಾರಾಣಿಯವರೇ, ಯಾರೋ ಸಾಧು ಸಂತರ ಗುಂಪು ಮಾತೂಶ್ರೀಯವರ ದರ್ಶನಕ್ಕಾಗಿ ಬಂದು ಕಾದಿದೆ" ಎಂದು ಅರಿಕೆ ಮಾಡಿದರು

ಜೀಜಾಬಾಯಿಯವರು ಆದರದಿಂದ ಆ ಸಂತರ ಗುಂಪನ್ನು ಬರಮಾಡಿಕೊಂಟರು. ಜೀಜಾಬಾಯಿಯವರು ಎದ್ದು ಸಂನ್ಯಾಸಿಗೆ ಅಭಿವಾದನ ಮಾಡಬೇಕು. ಅಷ್ಟರಲ್ಲಿ ಆ ಸಂನ್ಯಾಸಿಯು ಮಾತೂಶ್ರೀಯವರ ಪಾದಗಳ ಮೇಲೆ ತಲೆಯಿಟ್ಟು ದೀರ್ಘದಂಡ ಪ್ರಣಾಮ ಮಾಡಿದನು.

"ಹಾ ! ಹಾ ! ಎಂತಹ ವಿಪತ್ತು ಬಂದಿತು ! ಇದರಿಂದ ನಮಗೂ, ನಮ್ಮ ರಾಜ್ಯಕ್ಕೂ ಕೇಡುಂಟಾಗುತ್ತದೆ. ಸಂನ್ಯಾಸಿಗಳು ಹೀಗೆ ಮಾಡಬಹುದೆ?" ಎಂದು ಜೀಜಾಬಾಯಿಯು ಉದ್ಗಾರ ತೆಗೆದಳು.

ಸಂನ್ಯಾಸಿಯು ಎದ್ದು ನಿಂತನು. ತಾಯಿಗೆ ಸ್ವಲ್ಪಸ್ವಲ್ಪ ಸಂದೇಹ

ಉಂಟಾಯಿತು. ತಲೆಯ ಮೇಲಿದ್ದ ಕಾವಿಯನ್ನು ತೆಗೆದು ನಗುತ್ತ ನಿಂತು ಕೊಂಡನು.

ಜೀಜಾಬಾಯಿಯು "ಹಾ! ಶಿವಾಜಿ ! ನನ್ನ ಶಿವನೇ ! ನಿಜವಾಗಿಯೂ ನೀನು ಬದುಕಿ ಬಂದೆಯಾ!" ಎಂದು ಹೇಳುತ್ತಾ ಶಿವಾಜಿಯನ್ನು ಬಾಚಿ ತಬ್ಬಿಕೊಂಡು ಆನಂದಬಾಷ್ಪಗಳನ್ನು ಸುರಿಸಿದರು.

ಶಿವಾಜಿಯು ಆ ಸಂಗಡಿಗರನ್ನೆಲ್ಲಾ ತೋರಿಸಿ "ಇವನು ನೀರಾಜೀ ರಾವ್. ಇವನು ದತ್ತ ತ್ರ್ಯಂಬಕ. ಇವನು ರಘುಮಿತ್ರ. ಇವನು ದೇಶಪಾಂಡೆ. ಇವನು ಗೋರ್ಪಡೆ" ಎಂದು ಎಲ್ಲರ ಹೆಸರುಗಳನ್ನೂ ಹೇಳಿದನು.

ಜೀಜಾಬಾಯಿಯು ಅವರ ತಲೆಗಳ ಮೇಲೆ ಹಸ್ತಗಳನ್ನಿಟ್ಟು "ದೀರ್ಘಾಯುಷ್ಮಂತರಾಗಿರಿ" ಎಂದು ಹರಸಿದಳು.

"ಅಪ್ಪಾ, ನೀವುಗಳೆಲ್ಲಾ ಎಷ್ಟು ಶ್ರಮಪಟ್ಟಿದ್ದೀರಿ! ಒಬ್ಬರ ಗುರು ತಾದರೂ ಸಿಕ್ಕುವಂತಿಲ್ಲವಲ್ಲ! ನಮ್ಮ ರಾಜ್ಯದ ಭಾಗ್ಯ. ನೀವೆಲ್ಲರೂ ಬದುಕಿ ಬಂದಿರಿ. ನಿಮ್ಮಗಳನ್ನು ಹೆತ್ತ ತಾಯಿಯರ ಹೊಟ್ಟೆ ತಣ್ಣಗಿರಲಿ" ಎಂದು ಹರಿಸಿದಳು"

ರಾಜ್ಯದಲ್ಲೆಲ್ಲಾ ಊರು ಊರುಗಳಲ್ಲಿ ಕೇರಿ ಕೇರಿಗಳಲ್ಲಿ "ಶಿವಾಜೀ ಮಹಾರಾಜರು ಪುನಃ ರಾಯಘಡಕ್ಕೆ ಬಂದಿದ್ದಾರೆ" ಎಂದು ಡಂಗೂರ ಹೊಡೆಸಿದರು.

ಮನೆಮನೆಯಲ್ಲಿಯೂ ಆನಂದೋತ್ಸವಗಳಾದವು. ಆ ದೇಶದ ಜನರ ಆನಂದಕ್ಕೆ ಪಾರವಿಲ್ಲ.



ಶಿವಾಜಿಯು ತನ್ನ ರಾಜ್ಯಕ್ಕೆ ಹಿಂತಿರುಗಿ ಬಂದನೆಂಬ ಸಮಾಚಾರವು ಜಯಸಿಂಹ ಮಹಾರಾಜನಿಗೆ ತಿಳಿಯಿತು. ಮೊದಲು ಅವನಿಗೆ ಅತ್ಯಂತ ಹರ್ಷವಾಯಿತು. ಧರ್ಮಸಂಕಟವು ಪರಿಹಾರವಾದಂತಾಯಿತು.

“ಆ ಶಿವಾಜಿಯು ನಮ್ಮೊಡನೆ ಸ್ನೇಹಮಾಡಿಕೊಂಡಂದಿನಿಂದ ಒಂದು ಹೆಜ್ಜೆ ತಪ್ಪಿ ನಡೆದವನಲ್ಲ. ದೇವರೇ ಅವನನ್ನು ಕಾಪಾಡಿ ಕರೆತಂದಂತಾಯಿತು” ಎಂದು ಸಮಾಧಾನ ಮಾಡಿಕೊಂಡನು.

“ಪರಾಕ್ರಮಶಾಲಿ, ಸಾಹಸಿ. ಅವನನ್ನು ಎಲ್ಲರೂ ಮೆಚ್ಚಲೇಬೇಕು; ಗುಣವನ್ನು ಮೆಚ್ಚದಿದ್ದರೆ ನಾವು ಮತ್ಸರಿಗಳಾಗುತ್ತೇವೆ, ಅಷ್ಟೇ. ಅವನಿಗೇನೂ ಕೊರತೆಯಿಲ್ಲ. ಅವನ ವಿಷಯದಲ್ಲಿ ಬಾದಷಹನು ಬಹಳ ತಪ್ಪು ಮಾಡಿದ. ಮೋಸ ಮಾಡಿದ! ಆ ಮೋಸದಲ್ಲಿ ನಾನೂ ಸೇರಿದಂತೆಯೇ ಆಯಿತು. ಯಾರು ಏನೇ ಹೇಳಲಿ, ಶಿವಾಜಿಯು ನನ್ನನ್ನು ಮೋಸಗಾರನೆಂದುಕೊಳ್ಳಲಾರ” ಎಂದುಕೊಂಡನು.

“ಈ ಶಿವಾಜಿಯು ತನ್ನ ರಾಜ್ಯಕ್ಕೆ ಹಿಂತಿರುಗಿದನೆಂಬ ಸಮಾಚಾರವು ಬಾದಷಹನಿಗೆ ತಿಳಿಯುತ್ತದೆ. ಅವನು ಉದ್ರೇಕಗೊಂಡು ‘ಪುನಃ ಶಿವಾಜಿಯ ಮೇಲೆ ಯುದ್ಧ ಮಾಡಬೇಕು. ಅವನನ್ನು ಹಿಡಿದು ತರಬೇಕು’ ಎಂದು ನನಗೆ ಪತ್ರ ಬರೆಯುತ್ತಾನೆ. ಆಗ್ರಾ ಪಟ್ಟಣದಲ್ಲಿ ಶಿವಾಜಿಯು ನನ್ನ ಅರಮನೆಯಲ್ಲಿಯೇ ಇದ್ದ. ಅಲ್ಲೇ ಅವನ ಬಂಧನವಾಯಿತು. ಅಲ್ಲಿಂದಲೇ ಅವನು ತಪ್ಪಿಸಿಕೊಂಡು ಬಂದಿದ್ದಾನೆ. ಇದಕ್ಕಾಗಿ ಬಾದಷಹನು ಕುಮಾರ ರಾಮಸಿಂಗನ ಮೇಲೆ ಆಗ್ರಹತೋರಿ ಅವಮಾನ ಪಡಿಸಿದ್ದಾನೆ. ಇದರಿಂದ ಬಹುಮಂದಿ ರಜಪೂತರಿಗೆ ಅಸಮಾಧಾನವಾಗಿದೆ. ಅವರೆಲ್ಲರೂ ಬಾದಷಹರಿಗೆ ತಿರುಗಿ ಬೀಳಬಹುದು. ಆಗ ನಾನೇನು ಮಾಡಲಾದೀತು? ಬಾದಷಹನು ನನ್ನ ಮೇಲೆಯೂ ಆಗ್ರಹ ಮಾಡಬಹುದು. ನಾನೂ ಶಿವಾಜಿಗೆ ಶಿಫಾರಸು ಮಾಡಿ ಎಷ್ಟೋ ಪತ್ರಗಳನ್ನು ಬರೆದಿದ್ದೇನೆ. ಈಗ ಆ ಪತ್ರಗಳಿಗೆಲ್ಲಾ ಬಾದಷಹನು ವಿಪರೀತ ಅರ್ಥ ಮಾಡಿಕೊಂಡು ನನ್ನ ಮೇಲೆಯೂ ಆಗ್ರಹ ಮಾಡಬಹುದು. ಅದರಿಂದ ನನಗೇನೂ ಭಯವಿಲ್ಲ. ಆದರೆ ಬಹುಕಾಲದಿಂದಲೂ ಔರಂಗಜೇಬ್ ಬಾದಷಹನೂ ನಾನೂ ಮಿತ್ರರಂತಿದ್ದವರು. ವಿಧಿವಿಲಾಸದಿಂದ ಹೀಗೆ ವಿಮನಸ್ಕರಾಗಬೇಕಾಗುವುದಲ್ಲಾ ಎಂಬುದೊಂದೇ ಚಿಂತೆ. ನನ್ನ ಮಾತು ಹಾಗಿರಲಿ. ನನಗೆ ವಯಸ್ಸಾಯಿತು. ಇನ್ನೆಷ್ಟು ಕಾಲ ಬದುಕಿರಬೇಕು?” ಎಂದುಕೊಂಡನು.

'ಇನ್ನು ಮುಂದೇನಾಗುವುದು' ಎಂದು ಅವನಿಗೆ ಆಲೋಚನೆಯು ಉಂಟಿತು. ಇತ್ತ ಮಹಾರಾಷ್ಟ್ರರೂ, ಅತ್ತ ರಜಪೂತರೂ, ಮೊಗಲ್ ಸಾಮ್ರಾಜ್ಯದ ಪ್ರಬಲ ವಿರೋಧಿಗಳಾಗುತ್ತಾರೆ, ಆ ವಿರೋಧಾಗ್ನಿಯಲ್ಲಿ ಈ ಮೊಗಲ್ ಸಾಮ್ರಾಜ್ಯವು ಆಹುತಿಯಾಗಿ ಭಸ್ಮವಾಗಿ ಹೋಗುತ್ತದೆ. ಮೊಗಲ್ ಸಾಮ್ರಾಜ್ಯದ ಅಳಿಗಾಲವು ಇನ್ನು ಬಹು ದೂರವಿಲ್ಲ. ನಮ್ಮ ಕಣ್ಣು ಮುಂದೆಯೇ ಆಗಬಹುದು. ನಾವು ಅದನ್ನು ನಮ್ಮ ಕಣ್ಣುಗಳಿಂದಲೇ ನೋಡಬಹುದು' ಎಂದು ದೀರ್ಘವಾದ ನಿಟ್ಟುಸಿರುಬಿಟ್ಟನು.

ಮಥುರಾ ಕ್ಷೇತ್ರದಿಂದ ಕಾಶೀನಾಥನು ಸಾಂಬಾಜಿಯನ್ನು ಕರೆದುಕೊಂಡು ದಕ್ಷಿಣಕ್ಕೆ ಯಾತ್ರೆ ಹೊರಟನು. ಸಾಂಬಾಜಿಯನ್ನು ಬ್ರಾಹ್ಮಣ ವಟುವಿನಂತೆ ವೇಷಾಂತರಗೊಳಿಸಿ ಜೊತೆಯಲ್ಲಿ ಕರೆದೊಯ್ದನು. ಮಧ್ಯ ಮಾರ್ಗದಲ್ಲಿ ಪ್ರತಿಯೊಂದು ಮೊಗಲ್ ಠಾಣೆಯಲ್ಲಿಯೂ ತನಿಖೆ ನಡೆಯುತ್ತಿತ್ತು. ದೆಹಲಿಯಿಂದ ಶಿವಾಜಿಯ ಪುತ್ರ ಸಾಂಬಾಜಿಯನ್ನು ಪತ್ತೆಮಾಡಬೇಕೆಂದು ಕಟ್ಟುನಿಟ್ಟಾದ ಆಜ್ಞೆಯು ಬಂದಿದ್ದಿತು. ಪ್ರತಿಯೊಂದು ನಗರದಲ್ಲಿಯೂ, ಊರುಕೇರಿಗಳಲ್ಲಿಯೂ, ಮನೆಮಠಗಳಲ್ಲಿಯೂ ಫೌಜುದಾರರೂ ಕೊತ್ವಾಲರೂ, ಕಿಲ್ಲೆದಾರರುಗಳೂ ಹುಡುಗರನ್ನು ಅಜಮಾಯಿಷಿ ಮಾಡುತ್ತಿದ್ದರು. ಎಷ್ಟೋ ಮಂದಿ ಬಾಲಕರನ್ನು ಹಿಡಿದು ಬಲಾತ್ಕಾರವಾಗಿ ಠಾಣೆಗಳಿಗೆ ಒಯ್ಯುತ್ತಿದ್ದರು. ಅವರ ತಂದೆ ತಾಯಿಗಳನ್ನೂ ನೆರೆಹೊರೆಯವರ ಪಾಠಶಾಲೆಗಳ ಉಪಾಧ್ಯಾಯರ ತನಿಖೆಮಾಡಿ ಮನೆಗಳಿಗೆ ಕಳುಹಿಸುತ್ತಿದ್ದರು ಹಠವಾದಿಗಳಾದ ಕೆಲವರು ಅಧಿಕಾರಿಗಳು ವಿಶೇಷ ಬಹುಮಾನಗಳೂ ಖಿಲ್ಲತ್ತುಗಳೂ ದೊರೆಯುತ್ತವೆ ಎಂಬ ಆಸೆಯ ಮೇಲೆ ಹುಡುಗರನ್ನು ದೆಹಲಿಗೆ ಕಳುಹಿಸಿದ್ದೂ ಉಂಟು.

'ಹುಡುಗರನ್ನು ಹಿಡಿದು ದೆಹಲಿಗೆ ಸಾಗಿಸುತ್ತಾರೆ' ಅಲ್ಲಿ ಅವರನ್ನು ಇಸ್ಲಾಂ ಧರ್ಮಕ್ಕೆ ಸೇರಿಸುತ್ತಾರೆ' ಎಂಬ ಪ್ರವಾದವು ದೇಶದಲ್ಲೆಲ್ಲಾ ವ್ಯಾಪಕವಾಗಿ ಹರಡಿತು.

ಇಂತಹ ಸಮಯದಲ್ಲಿ ಕಾಶೀನಾಥನು ಅತ್ಯಂತ ಪ್ರಯಾಸದಿಂದ ಸಾಂಬಾಜಿಯನ್ನು ಕರೆದುಕೊಂಡು ಹೊರಟಿದ್ದನು. ಒಂದು ಮೊಗಲ್ ಠಾಣ್ಯದಲ್ಲಿ ಕಾಶೀನಾಥನು ಸಿಕ್ಕಿಬಿದ್ದನು. ಕೊತ್ವಾಲನು ಅವರನ್ನು ಅಲ್ಲಿಯೇ ತಡೆದು

ನಿಲ್ಲಿಸಿ ಎಷ್ಟೋ ವಿಧವಾಗಿ ಪರೀಕ್ಷೆಮಾಡಿದನು. ಎಲ್ಲ ಪರೀಕ್ಷೆಗಳಲ್ಲಿಯೂ ಕಾಶೀನಾಥನ ಮಾತು ಸತ್ಯಕ್ಕಿಂತಲೂ ಸತ್ಯವಾಗಿ ಕಾಣುತ್ತಿತ್ತು. ಕೊತ್ವಾಲನ ಸಂದೇಹವು ನಿವೃತ್ತಿಯಾಗಲಿ. ಅವನು ಕಡೆಗೊಂದು ಧರ್ಮಪರೀಕ್ಷೆ ಯೆನ್ನಿಟ್ಟನು.

"ಶಾಸ್ತ್ರಿಬಾವಾ. ದೆಹಲಿಯ ಹುಕ್ಕುಂ ಬಹಳ ಕಟ್ಟುನಿಟ್ಟಾಗಿದೆ. ನಿಮ್ಮ ಹಿಂದೂರಾಜ ಶಿವಾಜಿಯಿಂದ ನಮಗೆಲ್ಲಾ ಇಷ್ಟು ಕಷ್ಟಬಂದಿದೆ. ನೀನು ಆಚಾರವಂಥ ಬ್ರಾಹ್ಮಣ. ಈ ಬಾಲಕನ ಜೊತೆಯಲ್ಲಿ ಒಂದೇ ಎಲೆಯಲ್ಲಿ ಊಟ ಮಾಡುತ್ತಿದ ದರೆ ನಮ್ಮ ಸಂದೇಹವು ಪರಿಹಾರವಾದಂತಾಗುತ್ತದೆ. ನೀನು ಉಚ್ಚಕುಲದವ. ಶಿವಾಜಿಯು ನಿಮ್ಮ ಹಿಂದೂಗಳಲ್ಲಿ ಕೀಳು ಜಾತಿ ಯವನು. ಬ್ರಾಹ್ಮಣರು ಅವನು ಮುಟ್ಟಿದ ನೀರನ್ನು ಕೂಡಾ ಪಾನಮಾಡು ವುದಿಲ್ಲ. ನನ್ನ ಸಂದೇಹನಿವೃತ್ತಿಗೆ ಇದು ಕಡೆಯ ಪರೀಕ್ಷೆ" ಎಂದು ಹೇಳಿ ದನು.

ಕಾಶೀನಾಥನು ಮರುಮಾತಾಡಲಿಲ್ಲ. 'ಈ ಕೊತ್ವಾಲ ಸಾಹೇಬನು ನನ್ನನ್ನು ಪರೀಕ್ಷಿಸುತ್ತಿಲ್ಲ. ಕಲಿಮಹಾರಾಜನು ಪರೀಕ್ಷೆಮಾಡುತ್ತಿದ್ದಾನೆ. ಈ ಪರೀಕ್ಷೆಯಲ್ಲಿ ನಾನು ಹಿಂದೆಮುಂದೆ ನೋಡಿದರೆ ಈ ಬಾಲಕನನ್ನು ನನ್ನ ಕೈಯಾರ ಬಲಿಕೊಟ್ಟಂತಾಗುತ್ತದೆ. ಶಿವಾಜಿಯು ನನ್ನಲ್ಲಿಟ್ಟ ವಿಶ್ವಾಸಕ್ಕೆ ಧಕ್ಕೆ ಬರುತ್ತದೆ. ಬ್ರಾಹ್ಮಣರು ಆರ್ತರ, ಅನಾಥರ, ಶರಣಾಗತರ ರಕ್ಷಕರು ಎಂಬ ಬಿರುದಿಗೆ ಹಾನಿ ತಟ್ಟುತ್ತದೆ'—ಎಂದು ಆಲೋಚಿಸಿ ಮನಸ್ಸಿನಲ್ಲಿ ನಿರ್ಧಾರ ಮಾಡಿಕೊಂಡನು. ಆ ದಿನ ಸ್ವಯಂಪಾಕ ಮಾಡಿ ದೇವರಿಗೆನೈವೇದ್ಯ ಮಾಡಿ ಸಾಂಬಾಂಜಿಯನ್ನು ಕೂಡಿಸಿಕೊಂಡು ಏಕಪತ್ರದಲ್ಲಿ ಭೋಜನ ಮಾಡಿದನು. ಭೋಜನೋತ್ತರ ಕೊತ್ವಾಲನು ಕಾಶೀನಾಥನನ್ನು ಕರೆಸಿ ನೋಡಿದನು. ಬ್ರಾಹ್ಮಣನ ಮುಖದಲ್ಲಿ ಕಳೆಗುಂದಿರಲಿಲ್ಲ. ಮನಸ್ಸಿನಲ್ಲಿ ಖೇದವಿದ್ದಂತೆ ಬೋಧೆಯಾಗಲಿಲ್ಲ. ಬ್ರಾಹ್ಮಣನು ಪ್ರಸನ್ನನಾಗಿದ್ದನು.

ಕೊತ್ವಾಲನು "ಹೋಗು, ಬ್ರಾಹ್ಮಣೋತ್ತಮ. ಎಲ್ಲಿಗೆ ಬೇಕೋ ಅಲ್ಲಿಗೆ ಹೋಗು. ನಾನು ನಿನ್ನನ್ನು ಬಹಳವಾಗಿ ಪರೀಕ್ಷೆ ಮಾಡಿದೆ. ಅದಕ್ಕಾಗಿ ಕ್ಷಮಿಸು. ನಾವು ರಾಜಸೇವಕರು. ರಾಜಾಜ್ಞೆಯನ್ನು ನೆರವೇರಿಸಬೇಕು.

ನಿನ್ನ ವಿಷಯದಲ್ಲಿ ಕರುಣೆಯುಂಟಾಗಿದೆ. ಗೌರವವೂ ಉಂಟಾಗಿದೆ. ನೀನು ದಕ್ಷಿಣಕ್ಕೆ ಯಾತ್ರೆ ಹೋಗುತ್ತಿದ್ದೀಯೆ. ಮೊಗಲ್ ರಾಜ್ಯದಲ್ಲಿ ನಿನಗೆ ಎಲ್ಲೆಲ್ಲಿಯೂ ಈ ತಂಟೆ ಇಷ್ಟೇ ಇದೆ. ನಿನಗೆ ಎಲ್ಲಿ ಪುತ್ರನಾಶವಾಗುವುದೋ ಎಂಬ ಶಂಕೆ ತಪ್ಪಿದಿಲ್ಲ ನಾನೊಂದು ಸಹಾಯ ಮಾಡುತ್ತೇನೆ ನಿನಗೆ ರಹದಾರಿ ಬರೆದುಕೊಟ್ಟು ನಮ್ಮ ಠಾಣೆಯ ಮುದ್ರೆ ಹಾಕಿಸಿ ಕೊಡುತ್ತೇನೆ. ಅದನ್ನು ತೋರಿಸಿದರೆ ಮತ್ತಾವ ಠಾಣೆಯಲ್ಲಿಯೂ ನಿನಗೆ ತೊಂದರೆಯಾಗದು. ನಿನ್ನ ಸ್ವಂತ ಊರಿನಿಂದಲೇ ಈ ರಹದಾರಿಯನ್ನು ಮಾಡಿಸಿ ತಂದಿದ್ದರೆ ನನಗೂ ಖುಲಾಸಾಗಿತ್ತು. ನಿನಗೂ ಇಷ್ಟು ತೊಂದರೆಯಾಗುತ್ತಿರಲಿಲ್ಲ" ಎಂದು ಹೇಳಿ ರಹದಾರಿಯನ್ನು ಕೊಡಿಸಿದನು.

ಬ್ರಾಹ್ಮಣನು "ಕೊತ್ವಾಲ ಸಾಹೇಬ ನೀನು ನನಗೆ ತೊಂದರೆ ಕೊಟ್ಟೆ ಎಂದು ನನ್ನ ಮನಸ್ಸು ನೊಂದಿಲ್ಲ. ರಾಜಾಜ್ಞೆ, ಅದನ್ನು ನೀನು ಪಾಲಿಸಬೇಕು; ಅದಕ್ಕೆ ನಾನೂ ತಲೆಯೊಡ್ಡಬೇಕು ಆದರೆ ನೀನು ಪುಣ್ಯವಂತ. ದೇವರು ನಿನಗೆ ಮಂಗಳವನ್ನುಂಟುಮಾಡಲಿ ಎಂದು ಹರಸುತ್ತೇನೆ." ಹೀಗೆ ಆಶೀರ್ವದಿಸಿ ಸಾಂಬಾಜಿಯನ್ನು ಕರೆದುಕೊಂಡು ಅತಿಪ್ರಯಾಸದಿಂದ ಮಹಾರಾಷ್ಟ್ರ ರಾಜ್ಯವನ್ನು ತಲುಪಿದನು. ಆಮೇಲೆ ಕಾಶೀನಾಥನಿಗೆ ನಿರ್ಭಯವಾಯಿತು.

ರಾಯಘಡಕ್ಕೆ ಬಂದು ಸೇರಿ ಶಿವಾಜಿಯ ಭೇಟಿ ಮಾಡಿ ಸಾಂಬಾಜಿಯನ್ನು ಒಪ್ಪಿಸಿದನು ಶಿವಾಜಿಯು ಮಗನನ್ನು ಎತ್ತಿ ಮುದ್ದಾಡಿ ಅವನನ್ನು ಎತ್ತಿಕೊಂಡು ಹೋಗಿ ಜೀಜಾಬಾಯಿಯ ಪಾದಗಳ ಮೇಲೆ ಹಾಕಿದನು. ಜೀಜಾಬಾಯಿಯು ಸಾಂಬಾಜಿಯನ್ನು ಎತ್ತಿಕೊಂಡು ಸಾವಿರ ಹರಕೆಗಳನ್ನು ಹಾಕಿದಳು. ಎಲ್ಲ ದೇವಾಲಯಗಳಲ್ಲಿಯೂ ಪೂಜೆ ಪುನಸ್ಕಾರಗಳನ್ನೂ ಮಂಗಳಾರತಿಗಳನ್ನೂ ಮಾಡಿದನು. ಭವಾನಿಯ ಮುಂದೆ ತುಲಾಭಾರವನ್ನು ತೂಗಿಸಿ ಬ್ರಾಹ್ಮಣರಿಗೆ ಹೇರಳವಾದ ದಕ್ಷಿಣೆಗಳನ್ನು ಕೊಡಿಸಿದನು. ಭವಾನಿಯ ಎದುರಿನಲ್ಲಿ ಕಾಶೀನಾಥನಿಗೆ ಜಹಗೀರಿಯನ್ನು ದಾನ ಮಾಡಿಸಿದನು. ಆ ಊರಿಗೆ ವಿಶ್ವಾಸಘಡ ಎಂದು ಹೆಸರಿಡಿಸಿದನು. ಬ್ರಾಹ್ಮಣನು ಇಟ್ಟುಕೊಟ್ಟ ವಿಶ್ವಾಸವನ್ನು ಸರ್ವವಿಧಗಳಿಂದಲೂ ಸಾಧಿಸಿದ ಹೆಗ್ಗುರುತಾಗಿ

ಆ ಹೆಸರು ಆಚಂದ್ರಾರ್ಕವಾಗಿ ಉಳಿಯಲೆಂದು ಜೀಜಾಬಾಯಿಯು ಹರಸಿದರು.

ಶಿವಾಜಿಯೂ, ಅವನ ಮಗ ಸಾಂಬಾಜಿಯೂ ತಮ್ಮ ರಾಜ್ಯಕ್ಕೆ ಸುಖವಾಗಿ ಹೋಗಿ ಸೇರಿಕೊಂಡರೆಂಬ ಸಮಾಚಾರಗಳು ಖಾತ್ರಿಯಾಗಿ ವರದಿಯಾದವು. ಬಾದಷಹನು ಅಪಮಾನಿತನಂತಾಗಿ ಬೆಂಕಿಯಂತೆ ಉರಿಯತೊಡಗಿದನು ಅವನ ಬಾಯಿಯಲ್ಲಿ ಕಿಡಿಕಾರುವಂತೆ ಮಾತುಗಳು ಹೊರಡುತ್ತಿದ್ದವು.

ಯುವರಾಜ ಆಜಂಷಹರನ್ನು ಕರೆಸಿ "ಆಜಂಷಾ, ನೀನು ಇಂದೇ ದಕ್ಷಿಣಕ್ಕೆ ಹೊರಡಬೇಕು. ಸೇನಾಧಿಪತಿ ಷಯಿಸ್ತಾಖಾನರು ಅಪಮಾನಿತರಾಗಿ ಹಿಂದಕ್ಕೆ ಬಂದರು. ಮಿರ್ಜಾರಾಜ ಜಯಸಿಂಹರು ಗೆದ್ದರೂ ನಮ್ಮ ನಿರೀಕ್ಷೆಯೆಲ್ಲಾ ಭಗ್ನವಾಗಿ ಅವರ ಜಯವು ನಿಷ್ಫಲವಾಯಿತು. ಇದರಿಂದ ಮೊಗಲ್ ದರ್ಬಾರಿಗೇ ಅಪಮಾನ ತಟ್ಟಿದಂತಾಗಿದೆ. ಇದನ್ನು ನಾನು ಸಹಿಸಲಾರೆ. ನೀನು ದಖ್ಖನ್ನಿನ ಸರ್ವಾಧಿಕಾರಿಯಾಗಿ ಹೋಗು. ಶಿವಾಜಿಯು ಕಳ್ಳ, ಮಾಯಾವಿ. ಯಾವ ವಿಧದಿಂದಲೂ ಅವನ ಸ್ನೇಹ ಮಾಡಕೂಡದು. ಹೇಗಾದರೂ ಅವನನ್ನು ಹಿಡಿದು ತರಬೇಕು. ಅಥವಾ ಅವನ ಶಿರಸ್ಸನ್ನು ಕತ್ತರಿಸಿ ತಂದೊಪ್ಪಿಸಬೇಕು. ಇಲ್ಲದಿದ್ದರೆ ನೀನು ನನ್ನ ಮಗನೂ ಅಲ್ಲ, ನಾನು ನಿನ್ನ ತಂದೆಯೂ ಅಲ್ಲ. ಬೇಕಾದಷ್ಟು ಸೈನ್ಯ ತೆಗೆದುಕೊಂಡುಹೋಗು ಯಥೇಷ್ಟ ಹಣ ತೆಗೆದುಕೊಂಡು ಹೋಗು. ಸರ್ವದಾ ಒಂದು ಎಚ್ಚರಿಕೆ ಇರಲಿ. ಯಾವ ಹಿಂದುವನ್ನೂ ಹತ್ತಿರಸೇರಿಸಬೇಡ" ಎಂದು ಕಠೋರವಾದ ಆಜ್ಞೆ ಇತ್ತು ಕಳುಹಿಸಿದನು.

ರಾಮಸಿಂಗನ ಮನೆಮಾರುಗಳನ್ನೆಲ್ಲಾ ಮುಟ್ಟುಗೋಲು ಹಾಕಿ ಅವನನ್ನು ಗಡೀಪಾರು ಮಾಡಬೇಕೆಂದು ಅಜ್ಞೆ ಮಾಡಿದನು.

ಮಹಾರಾಜಾ ಜಯಸಿಂಹನಿಗೆ ಪತ್ರ ಬರೆದು ಕಳುಹಿಸಿದನು. "ನೀವು ಈ ಮೊಗಲ್ ಸಿಂಹಾಸನಕ್ಕೆ ಅವಿಚ್ಛಿನ್ನ ಸೇವೆ ಮಾಡಿದ್ದೀರಿ. ಆದರೆ ನಿಮ್ಮ ದಖ್ಖನ್ನಿನ ಯಾತ್ರೆಯು ನಿಷ್ಪ್ರಯೋಜನವಾಯಿತು. ಅದು ಖುದಾನ ಇಷ್ಟ. ನಿಮಗೂ ನಮಗೂ ಸಮಾನವಾಗಿ ಅಪಮಾನ ತಟ್ಟಿದಂತಾಗಿದೆ. ಅವನ್ನೆಂದಿಗೂ ಮರೆಯುವಂತಿಲ್ಲ. ಯುವರಾಜ ಆಜಂಷನನ್ನು ಮೊವಲಿನಂತೆ ದಖ್ಖನ್ನಿನ

ಸರ್ವಾಧಿಕಾರಿಯಾಗಿ ಕಳುಹಿಸಿಕೊಟ್ಟಿದೆ. ನೀವು ಸೈನ್ಯಸಮೇತರಾಗಿ ದೆಹಲಿಗೆ ಹಿಂತಿರುಗಿ ಬರಬೇಕು"

ಈ ಪರಿಯಾಗಿತ್ತು ಬಾದಷಹನ ಪತ್ರ. ದೂತರು ಈ ಪತ್ರವನ್ನು ತೆಗೆದುಕೊಂಡು ಬಂದು ಜಯಸಿಂಹ ಮಹಾರಾಜನಿಗೆ ಒಪ್ಪಿಸಿದರು. ಮಹಾರಾಜನ ಮನಸ್ಸು ಮೊದಲೇ ಹುಣ್ಣಾಗಿತ್ತು. ಈ ಪತ್ರವನ್ನು ನೋಡಿ ಹುಣ್ಣಿನ ಮೇಲೆ ಬರೆ ಎಳೆದಂತೆ ಅವನು ಭಾವಿಸಿದನು.

ಬಾದಷಹನು ಅಂದು ದೆಹಲಿಯಲ್ಲಿ ಭರದರ್ಬಾರಿನಲ್ಲಿ ತನಗೆ ಮಹೋನ್ನತ ಗೌರವವನ್ನೊಪ್ಪಿಸಿದ ಪ್ರಸಂಗವು ನೆನಪಿಗೆ ಬಂದಿತು. ಜಯಸಿಂಹನು "ಅಂದೇ ನನ್ನ ಮನಸ್ಸು ಹಿಂದೆಗೆಯಿತು. ಈ ಕಾರ್ಯವನ್ನು ಅಂದೇ ನಿರಾಕರಿಸುವ ಧೈರ್ಯವು ನನಗೆ ಇಲ್ಲದೇ ಹೋಯಿತು. ಇಂದು ನನ್ನ ಮನಸ್ಸಿಗೆ ಖುಶಿಯುಂಟಾಗಿಲ್ಲ. ಅಂದು ಆ ಮಹೋನ್ನತ ಗೌರವವನ್ನೂ ಬಾದಷಹನ ಆಸ್ಪಣೆಯನ್ನೂ ನಿರಾಕರಿಸುವ ಪೌರುಷವು ನನ್ನಲ್ಲಿಲ್ಲದೇ ಹೋಯಿತಲ್ಲ ಎಂಬ ದುಃಖವು ಆಮರಣಾಂತ ನನ್ನನ್ನು ಬಾಧಿಸುತ್ತದೆ" ಎಂದುಕೊಂಡನು.

ಅಂದಿನಿಂದ ಅನ್ನಾಹಾರಗಳನ್ನು ಸಂತೋಷವಾಗಿ ಸೇವಿಸುತ್ತಿರಲಿಲ್ಲ. ತನ್ನ ರಜಪೂತ ಸೇನಾನಾಯಕರನ್ನು ಕರೆಸಿ "ನಮ್ಮ ಸೈನ್ಯಗಳೆಲ್ಲವೂ ದೆಹಲಿಗೆ ಹಿಂತಿರುಗಲಿ" ಎಂದು ಅಜ್ಞಾಪಿಸಿದನು.

ಅನಂತರ ಜಯಸಿಂಹನು ಯಾರೊಡನೆಯೂ ಮಾತನಾಡಲಿಲ್ಲ. ಯುವರಾಜನ ಆಗಮನವನ್ನು ನಿರೀಕ್ಷಿಸುತ್ತಿದ್ದನು. ಹೀಗೆ ಒಂದು ತಿಂಗಳ ಕಾಲ ಕಳೆಯಿತು. ಈ ಮುವತ್ತು ದಿವಸಗಳು ತನ್ನ ಜನ್ಮದಲ್ಲಿಯೇ ಕತ್ತಲೆಯ ದಿನಗಳೆಂದು ಜಯಸಿಂಹನು ಭಾವಿಸುತ್ತಿದ್ದನು.

ಯುವರಾಜ ಅಜಂಷಹನು ಬಂದು ಮಹಾರಾಜರ ಭೇಟಿ ಮಾಡಿದನು. ಅದೇ ವಿನಯ, ಅದೇ ಗೌರವ ವಿಶ್ವಾಸಗಳು ಯುವರಾಜನಿಗೆ ತಂದೆಗಿಂತಲೂ ಜಯಸಿಂಹನಲ್ಲಿ ವಿಶೇಷ ಗೌರವವಿದ್ದಿತು. ಮೊಗಲ್ ಸಾಮ್ರಾಜ್ಯದ ಗೌರವವನ್ನು ಕಾಪಾಡುತ್ತಿರುವ ಮಹಾಪುರುಷನು ಜಯಸಿಂಹ ಮಹಾಜನೆಂದು ಯುವರಾಜನು ತ್ರಿಕರಣಪುರಸ್ಸರವಾಗಿ ನಂಬಿದ್ದನು. ಅವನು ಬಂದು

ಮಹಾರಾಜರ ಮುಂದೆ ಬಗ್ಗಿ ಅಭಿವಾದನ ಮಾಡಿದನು. ಖಿನ್ನವದನನಾಗಿ ನಿಂತುಕೊಂಡನು.

ಜಯಸಿಂಹನು "ಯುವರಾಜಾ, ನೀನು ಖಿನ್ನನಾಗಬೇಡ. ಬಾದಷಹನ ಆಜ್ಞೆಯು ನಿನಗೂ ನನಗೂ ಶಿರೋಧಾರ್ಯವಾದುದು. ನೀನು ಈ ಅಧಿಕಾರವನ್ನು ಒಪ್ಪಿಸಿಕೋ. ಜಾಗರೂಕನಾಗಿರು. ನಿನ್ನ ಗಾಂಭೀರ್ಯ ಸೌಜನ್ಯಗಳಲ್ಲಿ ನನಗೆ ಪೂರ್ಣ ನಂಬಿಕೆ ಇದೆ.ಆದರೆ ಬಾದಷಹರ ಚಿತ್ತವನ್ನು ಯಾವಾಗಲೂ ಸಂತೋಷಪಡಿಸ ವುದು ಯಾರಿಂದಲೂ ಸಾಧ್ಯವಿಲ್ಲ. ನಾನು ದೆಹಲಿಗೆ ಹಿಂತಿರುಗುತ್ತೇನೆ. ನನ್ನ ಸೈನ್ಯಗಳನ್ನು ಮೊದಲೇ ಕಳುಹಿಸಿ ಕೊಟ್ಟಿದ್ದೇನೆ" ಎಂದು ಹೇಳಿದನು.

ಯುವರಾಜನ ಕಂಠವು ಬಿಗಿದುಬಂದಿತ್ತು. ಕಣ್ಣುಗಳಿಂದ ಎರಡು ಹನಿಗಳು ನೆಲದ ಮೇಲೆ ಬಿದ್ದವು. ಕೈಮುಗಿದು "ಅಪ್ಪಣೆ" ಎಂದು ಹೇಳಿದನು.

ಮಾರನೆಯ ದಿನ ಜಯಸಿಂಹ ಮಹಾರಾಜನನ್ನು ಪಲ್ಲಕ್ಕಿಯ ಮೇಲೆ ಕುಳ್ಳಿರಿಸಿ ಸಕಲ ಮರ್ಯಾದೆಗಳೊಂದಿಗೆ ಯುವರಾಜನು ಸಾಗುಗೊಳಿಸಿದನು. ಔರಂಗಾಬಾದಿನ ಸಮಸ್ತ ಜನರೂ ಖೇದದಿಂದ ಹಿಂಬಾಲಿಸಿ ನಡೆದರು. ಯುವರಾಜನು ಕಾಲುನಡಿಗೆಯಲ್ಲಿಯೇ ಕೋಟೆಯ ಹೊರಬಾಗಿಲಿನವರೆಗೆ ನಡೆದು ಹೋದನು.

ಜಯಸಿಂಹನ ಅಪ್ಪಣೆಯಂತೆ ಪಲ್ಲಕ್ಕಿಯು ಕೆಳಗಿಳಿಸಲ್ಪಟ್ಟಿತು. ಜಯಸಿಂಹನು ಪಲ್ಲಕ್ಕಿಯನ್ನಿಳಿದು ಯುವರಾಜನನ್ನು ಆಲಂಗಿಸಿದನು. ಯುವರಾಜನು ಆ ಜನಮಧ್ಯದಲ್ಲಿ ಜಯಸಿಂಹನಿಗೆ ಅಭಿವಾದನ ಮಾಡಿದನು. ಜಯಸಿಂಹನು ಅಧಿಕಾರಿಗಳಿಗೂ ಪುರಜನರಿಗೂ ವಂದಿಸಿ ಕುದುರೆಯನ್ನೇರಿ ಮಿತಪರಿವಾರದೊಂದಿಗೆ ಮುಂದಕ್ಕೆ ಹೊರಟನು. ಆ ಪುರಜನರು ಆ ಮಹಾರಾಜನ ಬೀಳ್ಕೊಡುಗೆಯನ್ನೂ, ಯುವರಾಜನು ಬಾಲಕನಂತೆ ಕಣ್ಣೀರಿಡುತ್ತ ಬೀಳ್ಕೊಟ್ಟುದನ್ನೂ ಬಹುಕಾಲ ನೆನೆದುಕೊಳ್ಳುತ್ತಿದ್ದರು. ಸ್ತ್ರೀಯರು ಆ ಕರುಣಾಜನಕವಾದ ಕಥೆಗಳನ್ನು ಹಾಡುಗಳಾಗಿ ಕಟ್ಟಿ ಹಾಡುತ್ತಿದ್ದರು. ಆ ಹಾಡುಗಳು ಇನ್ನೂ ಆ ಪ್ರಾಂತದಲ್ಲಿ ಅಸ್ಪಷ್ಟವಾಗಿ ಕೇಳಿಬರುತ್ತವೆ.

# ೨೧

ಮಹಾರಾಜಾ ಜಯಸಿಂಹನು ರಾಜ್ಯವನ್ನು ಕಳೆದುಕೊಂಡ ರಾಜನಂತೆ, ಮಕ್ಕಳನ್ನು ಕಳೆದುಕೊಂಡ ತಾಯಿಯಂತೆ, ಖಿನ್ನಮನಸ್ಕನಾಗಿ ಮ್ಲಾನವದನನಾಗಿ ದೆಹಲಿಯ ಕಡೆಗೆ ಪ್ರಯಾಣ ಮಾಡುತ್ತಿದ್ದನು. ಅವನ ಮಗ ಕಿರಾತಸಿಂಗನು ಅವನ ಜೊತೆಯಲ್ಲಿಯೇ ಬರುತ್ತಿದ್ದನು ತಂದೆಯ ಪರಿಸ್ಥಿತಿಯನ್ನು ನೋಡಿ ಅಡಿಗಡಿಗೆ ಅವನ ಹೃದಯವಲ್ಲಿ ದಿಗಿಲುಂಟಾಗುತ್ತಿದ್ದಿತು.

ಮಧ್ಯಮಾರ್ಗದಲ್ಲಿ ಬರಹಾಂಪುರದಲ್ಲಿ ಮಹಾರಾಜಾ ಜಯಸಿಂಹನು ವಿಶಾಲವಾದ ಸೈನ್ಯ ಶಿಬಿರವು ಬೀಡುಬಿಟ್ಟಿದ್ದಿತು. ಇಪ್ಪತ್ತು ಸಹಸ್ರ ರಜಪೂತ ಸೈನ್ಯ ಡೆಲ್ಲಿಯಿಂದ ಬಾದಷಹನ ಅಪ್ಪಣೆಯಿಲ್ಲದಿದ್ದರೂ, ಜೋಧ್‌ಪುರದ ಮಹಾರಾಜಾ ಜಸವಂತಸಿಂಗನ ಜೊತೆಯಲ್ಲಿಯೇ ಪ್ರಯಾಣ ಮಾಡಿದ್ದಿತು. ದಕ್ಷಿಣದಲ್ಲಿ ಒಬ್ಬ ರಜಪೂತ ಸೈನಿಕನಾದರೂ ಉಳಿದಿರಲಿಲ್ಲ. ಮುಸಲ್ಮಾನ್ ಸೇನಾಧಿಪತಿಗಳು ತಮ್ಮತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಿದ್ದರು. "ಮಹಾರಾಜಾ ಜಯಸಿಂಹರವರು ಬಾದಷಹರಿಂದ ಅಪಮಾನಿತರಾಗಿದ್ದಾರೆ. ರಜಪೂತರೆಲ್ಲರೂ ಛಲದಿಂದ ಏಕೀಭವಿಸಿ ಮೊಗಲ್ ಬಾದಷಹನನ್ನು ಪರಿತ್ಯಾಗ ಮಾಡುವ ನಿರ್ಧಾರ ಮಾಡಿದ್ದಾರೆ. ಮೊಗಲ್ ಬಾದಷಹನಿಗೆ ರೆಕ್ಕೆಗಳು ಕಳಚಿ ಬಿದ್ದಂತಾಗಿದೆ" ಎಂದು ಮಾತನಾಡಿಕೊಳ್ಳುತ್ತಿದ್ದರು. ರಾಜಾ ಜಯಸಿಂಹನು ಬರಹಾಂಪುರದಿಂದ ಶಿಬಿರವನ್ನು ಎತ್ತಲು ಅಪ್ಪಣೆ ಕೊಡಲಿಲ್ಲ. ಎಲ್ಲ ಕಡೆಯೂ ಸ್ಥಂಭೀಭಾವವು ಬಂದಿದ್ದಿತು. ಎಲ್ಲರ ಮನಸ್ಸಿನಲ್ಲಿಯೂ ಗಾಢಾಂಧಕಾರವು ವ್ಯಾಪಿಸಿದಂತಾಗಿತ್ತು. ಜಯಸಿಂಹನ ಮನಸ್ಸಿನಲ್ಲಿ ಆಂಧೋಳನವಾಗುತ್ತಿದ್ದಿತು. ಅಗ್ನಿಪರ್ವತದಂತೆ ಒಳಗೇ ಕುದಿಹತ್ತಿದ್ದಿತು. ರಾಜಾಸ್ಥಾನಕ್ಕೆ ಹೋಗಬೇಕೇ, ದೆಹಲಿಗೆ ಹೋಗಬೇಕೆ—ಎಂದು ಜಯಸಿಂಹನ ಮನಸ್ಸು ಚಾಂಚಲ್ಯದಿಂದ ಕೂಡಿತ್ತು. ಛೆ, ಛೇ ! ಇನ್ನೆಷ್ಟು ದಿನ ಬದುಕಿರಬೇಕು ಆಮರಣಾಂತ ಔರಂಗಜೇಬನಿಗೆ ವಿರೋಧಿಯಾಗುವ ಮನಸ್ಸಿಲ್ಲ ನನಗೆ. ಅವನ ತಪ್ಪೇನಿದೆ ? ಅವನು ಮಾಡಿದ ಕಾರ್ಯವು,

ಅವನ ಸ್ವಭಾವಕ್ಕೆ ಅನುಗುಣವಾಗಿಯೇ ಇದೆ. ನನಗಾದರೂ ಈ ದಖ್ಖನ್ನಿನಲ್ಲಿ ಇನ್ನೇನು ಕೆಲಸವಿದೆ ? ದೆಹಲಿಗೆ ಹೋಗುವುದೇ ಸರಿ. ಆದರೆ ಔರಂಗಸೇಬನು ಎಷ್ಟೇ ದುರಾತ್ಮನಾಗಿರಲಿ, ಕಠಿಣಹೃದಯನಾಗಿರಲಿ, ನನ್ನನ್ನು ತಿರಸ್ಕರಿಸುವ ಧೈರ್ಯವು ಅವನಿಗಿಲ್ಲ. ಆದರೂ ಆ ದರ್ಬಾರಿಗೆ ಹೋಗಲು ನನ್ನ ಮನ ಒಪ್ಪುವುದಿಲ್ಲ. ನನ್ನ ಉಚ್ಛ್ರಾಯಕಾಲವು ಪೂರೈಸಿಹೋಯಿತು. ಇನ್ನು ನನ್ನ ಅಸ್ತಮಾನ ! ರಾತ್ರಿ ! ಅಂಧಕಾರ !—ಎಂದು ಪರಿತಪಿಸುತ್ತಿದ್ದನು.

ಜಯಸಿಂಹನು ಪ್ರಯಾಣದ ಆಯಾಸದಿಂದಲೂ ಮನಸ್ಸಿನ ಉದ್ವೇಗ ದಿಂದಲೂ ಹಠಾತ್ತಾನೆ ಜ್ವರಗ್ರಸ್ತನಾದನು. ಹಕೀಮರು ಬಂದು ಔಷಧೋಪ ಚಾರಗಳನ್ನು ಮಾಡಿದರು. ಪರಿಣಾಮವು ಸುಮುಖವಾಗಲಿಲ್ಲ. ಜ್ಞಾನ ಶೂನ್ಯಾವಸ್ಥೆಯು ಬಂದುಬಿಟ್ಟಿತು. ಶಿಬಿರವೆಲ್ಲೆಲ್ಲಾ ಗಾಬರಿಯಾಯಿತು. ಎಲ್ಲರೂ "ಮಹಾರಾಜರು ಬದುಕುವುದಿಲ್ಲ" ಎಂದು ನಿರಾಶರಾದರು. ಹತ್ತು ದಿನಗಳು ಕಳೆದುವು. ಕತ್ತಲಾಗಿತ್ತು. ರಾತ್ರಿ ಹತ್ತು ಗಂಟೆಯ ಸಮಯ. ಜಯಸಿಂಹನು ರುಗ್ಣಶಯ್ಯೆಯ ಮೇಲೆ ಎದ್ದು ಕುಳಿತನು. ಹಕೀಮರನ್ನು ಕರೆತರುವಂತೆ ಅಪ್ಪಣೆ ಮಾಡಿದನು. ಹಕೀಮರು ಬಂದು ನಾಡಿ ಹಿಡಿದು ನೋಡಿದರು.

"ಮಹಾರಾಜರೇ ಪೂರ್ಣವಾಗಿ ಜ್ವರ ಬಿಟ್ಟಿದೆ. ದೇವರ ಅನುಗ್ರಹ ವಾಯಿತು" ಎಂದು ಹೇಳಿದರು.

ಜಯಸಿಂಹನು ಹಕೀಮರನ್ನು ವಂದಿಸಿ, ಕಳುಹಿಸಿದನು.

ರಾಯಸದವರನ್ನು ಕರೆಸಿ ಮಸಿಕುಡಿಕೆ, ಲೆಕ್ಕಣಿಕೆ, ಕಾಗದಗಳನು ತರಿಸಿದನು. ಅವನು ಸ್ಥಿರವಾಗಿ ಕುಳಿತು ಪತ್ರ ಬರೆಯಲಾರಂಭಿಸಿದನು.

"ಷಹಾಷಹಾ ಬಾದಷಹರವರೇ, ಜಯಸಿಂಹನು ನಿಮಗೆ ಅಂತ್ಯ ವಂದನೆಗಳನ್ನು ಅರ್ಪಿಸುತ್ತಿದ್ದಾನೆ. ನನ್ನ ಮತ್ತು ಔರಂಗಸೇಬ್ ಬಾದ ಷಹನ ಸ್ನೇಹವಿಶ್ವಾಸಗಳು ಪರಿಶುದ್ಧವಾಗಿರಬಹುದು. ಅಥವಾ ಕಳಂಕ ದಿಂದ ಕಲುಷಿತವಾಗಿರಬಹುದು. ಆದರೂ ನಮ್ಮಿಬ್ಬರು ಭಗವಂತನ ಅಮೃತಹಸ್ತದಿಂದಲೇ ಬಂಧಿತವಾದುದು. ನಾನು ಮರಣೋನ್ಮು ಖನಾಗಿದ್ದೇನೆ. ಒಂದು ಮಾತನ್ನು ಮಾತ್ರ ಆತ್ಮಸಾಕ್ಷಿಯಾಗಿ ಪ್ರಮಾಣ

ವಾಗಿ ಹೇಳುತ್ತೇನೆ. ನಾನೆಂದೂ ಬಾದಷಹನಿಗೆ ವಿರೋಧವಾಗಿ ನಡೆದಿಲ್ಲ. ಬಾದಷಹನು ನನ್ನ ವಿಷಯದಲ್ಲಿ ಹೇಗೆ ನಡೆದುಕೊಂಡಿದ್ದಾನೆಂಬುದನ್ನು ಅವನ ಆತ್ಮಸಾಕ್ಷಿಯು ಅವನಿಗೆ ಹೇಳುತ್ತದೆ ಬಾದಷಹನು ಅನೇಕ ಪಾಪಕೃತ್ಯಗಳನ್ನು ನಿಸ್ಸಂಕೋಚವಾಗಿ ನಡೆಸಿದ್ದಾನೆ. ಭ್ರಾತೃವಧೆ, ಪಿತೃವಧೆ, ಸೋದರರಿಗೆ ದ್ರೋಹ—ಇವೆಲ್ಲವೂ ರಾಜ್ಯಲೋಭದಿಂದ ಮಾಡಿದ ಪಾತಕಗಳು ಸ್ವದೇಶಪ್ರೇಮಿಗಳೂ ಸ್ವಮತಾಭಿಮಾನಿಗಳೂ ಆದ ಎಷ್ಟೋ ರಾಜರನ್ನೂ ರಾಜಪುರುಷರನ್ನೂ ಕೊಲೆ ಮಾಡಿಸಿದ್ದಾನೆ. ಈ ಪಾತಕಗಳಿಗೆಲ್ಲಾ ನಾನು ಸಮಭಾಗಿಯೆಂದು ಭಗವಂತನ ಮುಂದೆ ಒಪ್ಪಿಕೊಂಡಿದ್ದೇನೆ. ಬಾದಷಹನಿಗೆ ಇರುವ ಹಿಂದೂಮತದ್ವೇಷ, ಅದರಿಂದ ಅವನು ಮಾಡಿರುವ ಹಿಂದೂ ತೀರ್ಥಕ್ಷೇತ್ರಗಳ ಮತ್ತು ದೇವಾಲಯಗಳ ನಾಶ—ಇವುಗಳು ಈ ಹಿಂದೂಸ್ಥಾನದಲ್ಲಿ ಮರೆಯಲ್ಪಡುವಂಥವುಗಳಲ್ಲ. ಕತ್ತಿಯಿಂದ ಮತೋದ್ಧಾರವಾಗುವುದೆಂಬ ಭ್ರಾಂತಿಯು ನಿನಗಿದ್ದರೆ ನೀನು ಹುಚ್ಚ. ಖುರಾಸಿನಲ್ಲಿ ಹಾಗಿರಲಾರದು. ಹಾಗಿದ್ದರೂ ಅದು ಭ್ರಾಂತಿವಾದವೇ ಸರಿ. ನಿನ್ನ ಮಹಾ ಪಾತಕಗಳು ಸೂರ್ಯಚಂದ್ರರಿರುವವರೆಗೆ ಕೋಟಿ ಮುಖಗಳಿಂದ ಕಳಕಳಿರುತ್ತಿರುತ್ತವೆ. ನನಗೆ ಮರಣಯಾತನೆಯು ಆರಂಭವಾಗಿದೆ. ನಿನಗೆ ಸಹಾಯಕನಾಗಿ ನಾನು ಆಚರಿಸಿದ ಪಾತಕಗಳಿಗೆ ಪ್ರಾಯಶ್ಚಿತ್ತವು ಆರಂಭವಾಗಿವೆ. ಅವನ್ನು ಸಂತೋಷದಿಂದ ಅನುಭವಿಸುತ್ತಿದ್ದೇನೆ. ಒಂದು ದಿನ ಭಗವಂತನು ನಿನಗೂ ಪ್ರಾಯಶ್ಚಿತ್ತ ಕೊಡುವನೆಂಬುದನ್ನು ನೆನಪಿನಲ್ಲಿಟ್ಟುಕೋ. ದೇವರೊಬ್ಬನಿರುವುದು ನಿಜವಾದರೆ, ಪವಿತ್ರ ಮತಗ್ರಂಥಗಳು ಸತ್ಯವಾಗಿದ್ದರೆ, ಪಾಪ ಮತ್ತು ಪುಣ್ಯ ಇವುಗಳು ಎಲ್ಲ ಮತಗಳಿಗೂ ಒಂದೇ ಆಗಿವೆ.

"ಔರಂಗಜೇಬ್, ನೀನು ನನ್ನನ್ನು ಮರೆತುಬಿಡು. ನಿನ್ನಲ್ಲಿ ನಾನು ಪ್ರಾರ್ಥನೆ ಮಾಡುವುದು ಏನೂ ಇಲ್ಲ.

ಇತಿ—

ಜಯಸಿಂಹ."

ಈ ಪತ್ರವನ್ನು ಜಯಸಿಂಹನು ಸ್ವದಸ್ತೂರು ಬರೆದು ಲಕ್ಕೋಟಿಯಲ್ಲಿಟ್ಟನು. ಮುತ್ಸದ್ಧಿಗಳು ಕಣ್ಣು ರೆಪ್ಪೆ ಹೊಡೆಯದೇ ನಿಂತಿದ್ದರು. ಆ ಲಕ್ಕೋಟಿಯನ್ನು ಅಂಟಿಸಿ ಮೊಹರು ಹಾಕುವಂತೆ ಅಪ್ಪಣೆ ಮಾಡಿದನು. ಲಕ್ಕೋಟಿಯ ಮೇಲೆ ಮುತ್ಸದ್ಧಿಗಳ ಕೈಲಿ ವಿಳಾಸ ಬರಸಿದನು. ಕಿರಾತ ಸಿಂಗನನ್ನು ಕರೆಸಿ, ಈ ಪತ್ರವನ್ನು ತೆಗೆದುಕೋ. ನನ್ನ ಮರಣಾನಂತರ ದೆಹಲಿಗೆ ತೆಗೆದುಕೊಂಡು ಹೋಗಿ ಬಾದಷಹನಿಗೆ ಖುದ್ದಾಗಿ ಈ ಪತ್ರವನ್ನು ಒಪ್ಪಿಸು. ನೀನು ಮತ್ತು ರಾಮಸಿಂಗನು ನನ್ನ ನಿಜವಾದ ಪುತ್ರರಂತೆ ನಡೆದುಕೊಳ್ಳಬೇಕು. ನೀವಿಬ್ಬರೂ ಇಂದಿನಿಂದ ಬಾದಷಹನ ಸೇವಕರಲ್ಲ. ಸ್ವತಂತ್ರರು" ಎಂದು ಹೇಳಿದನು.

ಉದ್ವೇಗದಿಂದ ಪುನಃ ಜ್ವರವೇಗವು ಮಿತಿಮೀರಿ ಹೋಗಿತ್ತು. ಮಹಾರಾಜಾ ಜಯಸಿಂಹನು ಮೂರ್ಛಿತನಾಗಿ ಹಾಸಿಗೆಯ ಮೇಲೆ ಉರುಳಿದನು. ಅವನಿಗೆ ಪುನಃ ಜ್ಞಾನಾವಸ್ಥೆಯು ಬರಲೇ ಇಲ್ಲ. ಬೆಳಕು ಹರಿಯುವುದರೊಳಗೆ ಮಹಾರಾಜಾ ಜಯಸಿಂಹನು ಶಾಂತನಾಗಿ ಪ್ರಾಣಬಿಟ್ಟಿದ್ದನು.

ಹಿಂದೂ ಧರ್ಮದಂತೆ ಮಹಾರಾಜನ ಅಂತ್ಯಕ್ರಿಯೆಗಳು ರಾಜಯೋಗ್ಯವಾದ ವೈಭವದಿಂದ ನೆರವೇರಿಸಲ್ಪಟ್ಟವು.

ಕಿರಾತಸಿಂಗನು ಸೈನ್ಯಸಮೇತ ದೆಹಲಿಗೆ ಪ್ರಯಾಣ ಮಾಡಿದನು. ಅವನು ದೆಹಲಿಗೆ ಬಂದ ಸಮಾಚಾರವನ್ನು ಕೇಳಿದೊಡನೆಯೇ ಬಾದಷಹನು ಕಿರಾತಸಿಂಗನನ್ನು ಕರೆಕಳುಹಿಸಿದನು. ರಾಮಸಿಂಗನು ಎಲ್ಲಿದ್ದರೂ ಹುಡುಕಿ ಕರೆತರಬೇಕೆಂದೂ, ಅವನ ಜಹಗೀರುಗಳನ್ನೂ ಸಂಪತ್ತನ್ನೂ ಅವನಿಗೆ ಪುನಃ ಕೊಡಬೇಕೆಂದೂ ಅಪ್ಪಣೆಮಾಡಿದನು. ಔರಂಗಜೇಬನು ಕಿರಾತಸಿಂಗನನ್ನು ಬರಮಾಡಿಕೊಂಡು ಅವನನ್ನು ಆಲಂಗಿಸಿ, ಕಣ್ಣೀರು ಸುರಿಸಿದನು. ಜಯಸಿಂಹನ ಮರಣವಾರ್ತೆಯನ್ನು ಖೇದದಿಂದ ವಿಚಾರಿಸಿದನು.

ಕಿರಾತಸಿಂಗನು ಜಯಸಿಂಹನ ಅಂತ್ಯಪತ್ರವನ್ನು ಬಾದಷಹನಿಗೆ ಒಪ್ಪಿಸಿದನು.

ಬಾದಷಹನು ಲಕ್ಕೋಟಿಯನ್ನು ಬಿಚ್ಚಿ ಓದಿಕೊಂಡನು. ಮತ್ತೆ ಓದಿದನು, "ಮಹಾರಾಜಾ ಜಯಸಿಂಹನು ಸತ್ಯವನ್ನು ಹೇಳಿದ್ದಾನೆ.

ಖುದಾನ ಆಜ್ಞೆಯೋ ಅವನ ಲೆಕ್ಕಣಿಕೆಯಿಂದ ಬರೆಯಲ್ಪಟ್ಟದೆ. ದೇವರೇ ! ಈ ಸತ್ಯಸ್ವರೂಪದ ಪ್ರತ್ಯಕ್ಷರೂಪವನ್ನು ನೋಡುವ ಧೈರ್ಯವನ್ನು ನನಗೆ ಕರುಣಿಸು. ಈ ಪತ್ರವನ್ನು ನಾನು ಭದ್ರವಾಗಿ ಇಟ್ಟುಕೊಂಡಿರುತ್ತೇನೆ ನನ್ನ ಮರಣ ಕಾಲವು ಸನ್ನಿಹಿತವಾದಾಗ ಈ ಪತ್ರವನ್ನು ಮತ್ತೊಮ್ಮೆ ಪಠಿಸಿ, ನನ್ನ ಆತ್ಮಸಾಕ್ಷಿಯನ್ನು ಇದರ ಪ್ರತಿಕೃತಿಯಂತೆ ಬರೆದಿಡುವ ಧೈರ್ಯವನ್ನು ಕರುಣಿಸು” ಎಂದು ಪ್ರಾರ್ಥನೆ ಮಾಡಿದನು.



# ಛತ್ರಪತಿ ಶಿವಾಜಿ

೧

ಮಹಾರಾಷ್ಟ್ರವು ಸಂತೋಷಭರಿತವಾಗಿದ್ದಿತು. ಕಳೆಗುಂದಿದ್ದ ರಾಯಘಡವು ಸಂಭ್ರಮದಿಂದ ಪುನಃ ಕಳಕಲಿಸುತ್ತಿತ್ತು. ಬಾದಷಹನ ಸೆರೆಯಲ್ಲಿ ಸಿಕ್ಕಿದ್ದ ಶಿವಾಜೀ ಮಹಾರಾಜ ಮತ್ತು ಅವನ ಮಗ ಬಾಲಕ ಸಾಂಬಾಜೀ ಇಬ್ಬರೂ ತಪ್ಪಿಸಿಕೊಂಡು ಪಾರಾಗಿ ಬಂದ ಸಂತೋಷದಿಂದ ರಾಜ್ಯವೆಲ್ಲವೂ ಉತ್ಸಾಹಭರಿತವಾಗಿದ್ದಿತು. ಪ್ರತಿಯೊಂದು ಊರಿನಿಂದಲೂ ಜನರು ಬಂದು ಶಿವಾಜಿಯನ್ನು ದರ್ಶನ ಮಾಡಿ ಹೋಗುತ್ತಿದ್ದರು. ಇದೇ ಒಂದು ಜಾತ್ರೆಯಂತೆ ಭಾಸವಾಗುತ್ತಿದ್ದಿತು.

ಜನ ಶಿವಾಜಿಯು ಮೊಗಲರ ಕೈಯಿಂದ ತಪ್ಪಿಸಿಕೊಂಡು ಬಂದ ವಾರ್ತೆಯನ್ನು ಕತೆಕತೆಯಾಗಿ ಮಾತನಾಡಿಕೊಳ್ಳುತ್ತಿದ್ದರು. ಕೆಲವರು ದೈವೀ ಶಕ್ತಿಯೆನ್ನುತ್ತಿದ್ದರು. ಮತ್ತೆ ಕೆಲವರು ಸದ್ಗುರುವಿನ ಕೃಪೆಯೆನ್ನುತ್ತಿದ್ದರು. ಅನೇಕ ಶಕ್ತಿಯುಕ್ತಿಗಳ ಕತೆಗಳು ಬೆಳೆದು ಹೋಗಿದ್ದುವು. ಮಹಾರಾಷ್ಟ್ರದಲ್ಲಿ ಮಾತ್ರವಲ್ಲ. ಇಡೀ ದಕ್ಷಿಣಾಪಥದಲ್ಲಿಯೇ ಇದೊಂದು ಮಹತ್ತರವಾದ ಸುದ್ದಿ ಎನಿಸಿತ್ತು. ಬಾದಷಹನನ್ನು ಹಿಯ್ಯಾಳಿಸಿ, ಶಿವಾಜಿಯನ್ನು ಪ್ರಶಂಸಿಸಿ, ಹಿಂದೂಜನ ಪ್ರತಿಷ್ಠೆ ಕೊಚ್ಚಿಕೊಳ್ಳುತ್ತಿದ್ದರು.

ಶಿವಾಜಿಯು ರಾಯಘಡಕ್ಕೆ ಬಂದಮೇಲೆ ರಾಜಕಾರ್ಯಗಳನ್ನು ಪರಿಶೀಲಿಸಿದನು. ಮಂತ್ರಿಗಳು, ಸೇನಾನಾಯಕರು, ಅಧಿಕಾರಿಗಳು ಎಲ್ಲರೂ ತಾನಿಲ್ಲದ ಸಮಯದಲ್ಲಿ ಬಲುಚೆನ್ನಾಗಿ ರಾಜ್ಯಭಾರ ನಡೆಸಿದ್ದಾರೆಂದು ಮೆಚ್ಚಿಕೊಂಡನು. ತನ್ನ ಸೈನ್ಯದ ಶಿಸ್ತು ಸಡಿಲವಾಗಿಲ್ಲವೆಂದು ಹೆಮ್ಮೆಪಟ್ಟುಕೊಂಡನು.

ಶಿವಾಜಿಗೆ ಚಿಂತೆಗಳು ಇರದೇ ಇರಲಿಲ್ಲ. ಮೊಗಲ್ ಸಾಮ್ರಾಟನಿಗೂ ತನಗೂ ಆಗಿದ್ದ ಸಂಧಿಯು ಒಡೆದುಹೋದಂತೆಯೇ. ಯಾವಾಗ ಬೇಕಾದರೂ

ಮೊಗಲರು ತನ್ನ ಮೇಲೆ ಬೀಳಬಹುದು. ಸಂಧಿಯು ಉಳಿದರೂ ಅಳಿದರೂ ಶಿವಾಜಿಗೆ ಒಂದೇ. ಅದಕ್ಕೆ ಅವನು ಎಳ್ಳಷ್ಟೂ ಖೇದಪಡಲಿಲ್ಲ. ಮಹಾರಾಜಾ ಜಯಸಿಂಹನ ಮರಣವು ಸರ್ವದಾ ಅವನ ಅಂತರಂಗವನ್ನು ದಹಿಸುತ್ತಿದ್ದಿತು. 'ಶಿವಶಿವಾ! ಆ ಜಯಸಿಂಹಮಹಾರಾಜನು ನನಗಾಗಿ ಕೊರಗಿ ಹಣ್ಣಾಗಿ ಹೋಗಿದ್ದನು. ನಾನು ಮೊಗಲರ ಸೆರೆಯಿಂದ ತಪ್ಪಿಸಿಕೊಂಡು ಬಂದುದಕ್ಕಾಗಿ ಡೆಲ್ಲಿಯ ದರ್ಬಾರಿನಲ್ಲಿ ಜಯಸಿಂಹನ ಗೌರವಕ್ಕೆ ಮಸಿಹಚ್ಚಿದಂತಾಯಿತು. ಇದು ವ್ರಣದ ಮೇಲೆ ಬೊಕ್ಕೆಯಿದ್ದಂತಾಗಿ ಮಹಾರಾಜನ ಪ್ರಾಣಗಳನ್ನೇ ಹಿಂಡಿ ಹೀರಿಬಿಟ್ಟಿತು. ಜಯಸಿಂಹ ಮಹಾರಾಜನು ಪರಾಕ್ರಮಿಗಳಲ್ಲಿ ಅಗ್ರಗಣ್ಯ. ಈ ಭಾರತ ವರ್ಷದಲ್ಲಿ ಅವನಿಗೆ ಸರಿಸಮನಾದ ವೀರಾಗ್ರೇಸರನು ಮತ್ತೊಬ್ಬನಿರಲಿಲ್ಲ. ಬಾದಷಹನು ಅಂತಹ ಹಿಂದೂ ಮಹಾಪುರುಷನನ್ನು ದರ್ಬಾರಿನಲ್ಲಿ ಇಟ್ಟುಕೊಂಡಿದ್ದುದು ಆ ಮೊಗಲ್ ಚಕ್ರವರ್ತಿಯ ಭಾಗ್ಯ ವಿಶೇಷವೆನ್ನಬೇಕು. ಇನ್ನುಮುಂದೆ ಸಣ್ಣವನಾಗಲೀ ದೊಡ್ಡವನಾಗಲೀ ಯಾವ ಹಿಂದೂ ರಾಜನೂ ಈ ಬಾದಷಹನನ್ನು ನಂಬುವುದಿಲ್ಲ. ಜಯಸಿಂಹನ ಮರಣದಿಂದ ಔರಂಗಸೇಬನ ರಕ್ಕೆಗಳು ಕಳಚಿಬಿದ್ದಂತಾದುವು. ನಮಗೆ ಸಂತೋಷವಾದುದೇ ಸರಿ. ಆದರೆ ಜಯಸಿಂಹನ ಮರಣವು ಅದರಲ್ಲಿಯೂ ಈ ಶೋಕ ಸಂತಪ್ತವಾದ ಮರಣವು ನೂರರಷ್ಟು ದುಃಖಪ್ರದವಾಗಿದೆ' ಎಂದು ಶಿವಾಜಿಯು ನಾನಾ ಪ್ರಕಾರವಾಗಿ ಯೋಚಿಸಿದನು. ಮಹಾರಾಜಾ ಜಯಸಿಂಹನ ಮಗನಾದ ಕುಮಾರ ರಾಮಸಿಂಗನಿಗೆ ಒಂದು ಪತ್ರಬರೆದು ದೂತರ ಮುಖೇನ ಕಳುಹಿಸಿಕೊಟ್ಟನು. ಕುಮಾರ ರಾಮಸಿಂಗನನ್ನು ಸಂತೈಸಿ, ಜಯಸಿಂಹ ಮಹಾರಾಜನ ಮರಣಕ್ಕಾಗಿ ಸಂತಾಪವನ್ನು ವ್ಯಕ್ತಪಡಿಸಿ ಪತ್ರ ಬರೆದಿದ್ದನು. ಆ ಪತ್ರದಲ್ಲಿ ಒಂದು ಮುಖ್ಯಾಂಶವಿತ್ತು. "ಕುಮಾರ ರಾಮಸಿಂಗ್, ಮಹಾರಾಜಾ ಜಯಸಿಂಹರ ಮತ್ತು ನನ್ನ ಉದಾಹರಣೆಗಳನ್ನು ಈ ಹಿಂದೂಸ್ಥಾನದ ವೀರಪುರುಷರೆಲ್ಲರೂ ಗಮನವಿಟ್ಟು ನೋಡಿಕೊಳ್ಳಬೇಕು. ಎಂಥಾ ಸಂದರ್ಭದಲ್ಲಿಯೂ ಬಾದಷಹನನ್ನು ನಂಬಬಾರದು. ಅವನ ಛತ್ರಛಾಯೆಯಲ್ಲಿ ಬದುಕಬಾರದು, ಎಂಬುದಕ್ಕೆ ನನ್ನ ಪರಾಭವ, ಮಹಾರಾಜಾ ಜಯಸಿಂಹರ ದುಃಖಕರವಾದ ಮರಣ, ಇವೆರಡು ಜ್ವಲಂತ ದೃಷ್ಟಾಂತಗಳಾಗಿವೆ" ಎಂದು ಉಲ್ಲೇಖಿಸಿದ್ದನು.

ಈ ಪತ್ರವನ್ನು ದೂತರು ತೆಗೆದುಕೊಂಡು ಹೋಗಿ ಆಗ್ರಾದಲ್ಲಿದ್ದ ರಾಮಸಿಂಗನಿಗೆ ಒಪ್ಪಿಸಿದರು.

ಶಿವಾಜಿಯ ಮನಸ್ಸನ್ನು ಕೊರೆಯುತ್ತಿದ್ದ ಮತ್ತೊಂದು ಅಂಶವೆಂದರೆ ನೇತಾಜಿಯ ಪತನ. ಶಿವಾಜಿಗೆ ಈ ಜಗತ್ತಿನಲ್ಲಿ ನೇತಾಜಿಗಿಂತಲೂ ಪ್ರಿಯ ವಸ್ತುವು ಬೇರಾವುದೂ ಇರಲಿಲ್ಲ. ರಾಜ್ಯಹೋಗಲಿ, ಸೈನ್ಯಗಳೆಲ್ಲವೂ ನಾಶವಾಗಲಿ, ಏನೇ ಆಗಲೀ ಶಿವಾಜಿಯು ದುಃಖಿಸುತ್ತಿರಲಿಲ್ಲ. ನೇತಾಜಿಯು ತಮ್ಮ ಸಮೂಹವನ್ನು ಬಿಟ್ಟು ಹೋದದ್ದು ಇಡೀ ಮಹಾರಾಷ್ಟ್ರಕ್ಕೆ ಅಗೌರವವೆಂದು ಪ್ರತಿಕ್ಷಣವೂ ಶಿವಾಜಿಯು ಪರಿತಪಿಸುತ್ತಿದ್ದನು. "ಅಂದು ರಾತ್ರಿ ಪನ್ಹಾಳ ಯುದ್ಧದಲ್ಲಿ ನನಗೆ ಪರಾಜಯವಾಯಿತು. ಅದೇ ರಣಕ್ಷೇತ್ರದಲ್ಲಿ ಆ ನೇತಾಜಿಯು ಸತ್ತುಹೋಗಿದ್ದರೆ ನಾನಷ್ಟು ದುಃಖ ಪಡುತ್ತಿರಲಿಲ್ಲ." ಎಂದು ಎಷ್ಟೋ ಬಾರಿ ಶಿವಾಜಿಯು ಹಂಬಲಿಸಿದ್ದುಂಟು. ತನ್ನ ಆಪ್ತ ಮಿತ್ರರೊಡನೆ ಹೇಳಿಕೊಂಡು ದೈನ್ಯದಿಂದ ಕಣ್ಣೀರಿಟ್ಟುದ್ದುಂಟು ನೇತಾಜಿಯು ಮೊಗಲರ ಅಧೀನನಾದದ್ದು ಶಿವಾಜಿಗೆ ಇಷ್ಟು ದುಃಖ ಕಾರಣವಾಗಿತ್ತು. ತನ್ನ ಮಂತ್ರಿ ರಘುನಾಥ ಬಲ್ಲಾಳನನ್ನು ನೇತಾಜಿಯಿದ್ದೆಡೆಗೆ ಕಳುಹಿಸಿಕೊಟ್ಟನು. ನೇತಾಜಿಯು ಆ ಸಮಯದಲ್ಲಿ ಅಹಮದ್‌ನಗರದಲ್ಲಿ ಇದ್ದನು. ಮೊಗಲರ ದೊಡ್ಡ ಸೇನಾನಾಯಕ. ಆ ಅಧಿಕಾರಕ್ಕೆ ತಕ್ಕ ಅರಮನೆ. ಆಳುಕಾಳುಗಳು ಎಲ್ಲವೂ ಇದ್ದುವು. ರಘುನಾಥ ಬಲ್ಲಾಳನು ಸಾಮಾನ್ಯನಂತೆ ನೇತಾಜಿಯಿದ್ದ ನಿವಾಸದ ಬಾಗಿಲಿಗೆ ಹೋಗಿ ಮನೆಯ ಮುತ್ಸದ್ದಿಯನ್ನು ಕಂಡು "ನಾನು ಸೇನಾಧಿಪತಿಗಳ ಹಳೆಯ ಸ್ನೇಹಿತ, ಬಡಬ್ರಾಹ್ಮಣ. ಸೇನಾಧಿಪತಿಗಳು ದೊಡ್ಡ ಅಂತಸ್ತಿನಲ್ಲಿದ್ದಾರೆಂದು ಕೇಳಿ ಆ ಬಾಲ್ಯ ಸ್ನೇಹದ ನೆನಪಿನಿಂದ ಅವರ ದರ್ಶನಕ್ಕಾಗಿ ಬಂದಿದ್ದೇನೆ. ದಯವಿಟ್ಟು ದರ್ಶನ ಮಾಡಿಸಿರಿ" ಎಂದು ಪ್ರಾರ್ಥನೆಮಾಡಿದನು. ಮುತ್ಸದ್ದಿಯು ದಿವಾಣಖಾನೆಯಲ್ಲಿದ್ದ ನೇತಾಜಿಗೆ ಹೋಗಿ ವಿನಯದಿಂದ ಅರಿಕೆಮಾಡಿದನು. "ಮಹಾಪ್ರಭು, ಯಾರೋ ಬಡಬ್ರಾಹ್ಮಣ ಬಂದು ಮಹಾದ್ವಾರದ ಚಾವಾಡಿಯಲ್ಲಿ ಕಾದಿದ್ದಾನೆ. ಪ್ರಭುಗಳ ಬಾಲ್ಯ ಸ್ನೇಹಿತನಂತೆ; ತೇಜಸ್ವಿಯಾಗಿದ್ದಾನೆ. ಏನಪ್ಪಣೆ" ಎಂದು ಬಿನ್ನಹ ಮಾಡಿದನು.

ನೇತಾಜಿಯು "ಒಳಗೆ ಕರೆದು ತಾ, ಬಾಲ್ಯಸ್ನೇಹಿತನೆಂದ ಮೇಲೆ

ಯಾರೋ ಆಪ್ತನಿರಬೇಕು" ಎಂದು ಹೇಳಿದನು.

ಮುತ್ಸದ್ದಿಯು ರಘುನಾಥ ಬಲ್ಲಾಳನನ್ನು ದಿವಾರ್‌ಖಾನೆಯೊಳಗೆ ಕರೆ ತಂದುಬಿಟ್ಟನು.

ನೇತಾಜಿಯು ಝಗ್ಗನೆದ್ದು ಆತುರದಿಂದ ಬಂದು ರಘುನಾಥನನ್ನು ಆಲಿಂಗಿಸಿದನು.

ಅವರಿಬ್ಬರ ಮಿಲನದ ಆನಂದೋತ್ಸಾಹವನ್ನು ನೋಡಿ, ದಿವಾನ್ ಖಾನೆಯಲ್ಲಿದ್ದವರೆಲ್ಲರೂ ಆಶ್ಚರ್ಯದಿಂದ ಬೆರಗಾದರು.

ನೇತಾಜಿಯು ರಘುನಾಥನನ್ನು ಮಹಡಿಯ ಮೇಲೆ ಕರೆದೊಯ್ದು ಕುಳ್ಳಿರಿಸಿಕೊಂಡನು.

ಬಲ್ಲಾಳರು ಬ್ರಾಹ್ಮಣರಾದುದು ಯಾವಾಗ? ಎಂದು ಪ್ರಶ್ನೆಮಾಡಿ ದನು.

ರಘುನಾಥನು, "ಯಾವಾಗ ನೇತಾಜಿಯವರು ಮ್ಲೇಂಛರ ಸೇವಕ ರಾದರೋ ಅಂದೇ" ಎಂದು ಉತ್ತರವಿತ್ತನು.

ನೇತಾಜಿಯು "ನನ್ನ ಕತೆ ಆಮೇಲೆ ಹೇಳುತ್ತೇನೆ. ನನಗೆ ಗೊತ್ತು ನೀನು ನನ್ನನ್ನು ತರಾಟೆಗೆ ತೆಗೆದುಕೊಳ್ಳಲಿಕ್ಕೆ ಬಂದಿರುವೆ. ನಾನು ಅಪ ರಾಧಿ. ಸ್ವಾಮಿದ್ರೋಹಿ, ಮಿತ್ರದ್ರೋಹಿ. ಆದರೂ ನನ್ನ ಶರೀರದಲ್ಲಿ ಶುದ್ಧ ಮಹಾರಾಷ್ಟ್ರನ ರಕ್ತವಿದೆ. ನಾನು ನನ್ನ ಅಪರಾಧಗಳಿಗೆ ದಂಡವನ್ನು ಸ್ವೀಕರಿಸಲು ಸಿದ್ಧನಾಗಿದ್ದೇನೆ."

"ನನ್ನ ಮಾತು ಹಾಗಿರಲಿ. ಶಿವಾಜಿ ಮಹಾರಾಜರ ವಿಚಾರವನ್ನು ಹೇಳು. ನಾನು ಅನೇಕರ ಬಾಯಿಂದ ಆ ಕಥೆಯನ್ನು ಕೇಳಿದ್ದೇನೆ. ನನಗೆ ದೊಡ್ಡವರಲ್ಲಿ ಶಿವಾಜಿಯವರ ಹೆಸರೆತ್ತಲು ನಾಚಿಕೆಯಾಗಿದೆ. ನಿಜಾಂಶವೇ ನೆಂದು ತಿಳಿದುಕೊಳ್ಳಲು ಕುತೂಹಲ ಉಂಟಾಗಿದೆ. ನಮ್ಮ ಮಹಾರಾಜರು ಆಗ್ರಾದಲ್ಲಿ ಬಾದಷಹನ ಸೆರೆ ಸಿಕ್ಕಿದರೆಂದು ಕೇಳಿದೆ. ಅದರಲ್ಲಿ ನನಗೇನೂ ಆಶ್ಚರ್ಯವಾಗಲಿಲ್ಲ. ದೆಹಲಿಯ ದರ್ಬಾರು ತಂತ್ರ, ಕುಟಿಲ ನೀತಿಗಳಿಂದ ತುಂಬಿದೆ. ಅವರು ಮಹಾರಾಜರನ್ನು ಉಪಾಯವಾಗಿ ಹಿಡಿದು ಹಾಕಿದರು. ಪಾಪ! ಜಯಸಿಂಹ ಮಹಾರಾಜನನ್ನು ಹಿಂದುಗಳೆಲ್ಲರೂ ದೂಷಿಸುತ್ತಾರೆ. ಅವರಲ್ಲಿ ಕೌಟಿಲ್ಯಕ್ಕೆ ಎಡೆಯೇ ಇರಲಿಲ್ಲ. ಪ್ರಬಲನಾದ ಬಾದಷಹನಿಗೂ

ಪ್ರತಾಪಶಾಲಿಯಾದ ನಮ್ಮ ಮಹಾರಾಜರಿಗೂ ಸ್ನೇಹ ಮಾಡಿಸಿದರೆ ದಕ್ಷಿಣಾ ಪಥವು ಶಾಂತವಾಗಿರುತ್ತದೆ. ಹಿಂದೂ ಮುಸ್ಲಿಂರು ಸೌಹಾರ್ದದಿಂದ ಇರ ಬಹುದು, ಎಂದು ಆ ಜಯಸಿಂಹ ಮಹಾರಾಜರು ಈ ಸಂಧಿಯನ್ನು ಏರ್ಪಡಿ ಸಿದರು. ಕುಟಿಲ ರೀತಿಯ ಬಾದಷಹನು ಅದೇ ಸಂಧಿಯನ್ನು ಸಾಧಿಸಿ, ಬಹುದಿನಗಳಿಂದ ತನಗಿದ್ದ ಇಷ್ಟಾರ್ಥವನ್ನು ಸಾಧಿಸಿಕೊಂಡನು. ಬಾದ ಷಹನು ಮಹಾರಾಜನನ್ನು ಕೊಲ್ಲಿಸದೇ ಬಿಟ್ಟದ್ದು ದೈವಾನುಗ್ರಹ. ಗುರುಗಳ ಆಶೀರ್ವಾದ ಬಲ. ಅಷ್ಟೊಂದು ಕಟ್ಟು ಕಾವಲಿನ ಕಣ್ಣಿಗೆ ಮಣ್ಣೆರಚಿ ಮಹಾರಾಜರು ಬಂಧನದಿಂದ ಮುಕ್ತರಾದ ಪರಿ ಹೇಗೆ? ಅದನ್ನು ಮೊದಲು ಹೇಳು. ನಮ್ಮ ಜೊತೆಗಾರರ ಆನಂದವನ್ನು ಬಣ್ಣಿಸಿ ಹೇಳು. ನೀನು ಕೃಪೆ ಮಾಡಿ ನನ್ನನ್ನು ಸಂಧಿಸಿದ ಉದ್ದೇಶ್ಯವೇನೆಂಬುದನ್ನು ಹೇಳು. ಆಮೇಲೆ ನನ್ನ ದೌರ್ಬಲ್ಯ, ಹೇಡಿತನ, ನಾನಾಗಿ ರಾತ್ರಿ ಕಂಡ ಬಾವಿಯಲ್ಲಿ ಹಗಲು ಧುಮುಕಿದ ಮೂರ್ಖತನಗಳನ್ನು ಹೇಳುತ್ತೇನೆ.

ರಘುನಾಥ ಬಲ್ಲಾಳನು ಉತ್ಸಾಹದಿಂದ ಹೇಳತೊಡಗಿದನು. "ಶಿವಾಜಿ ಮಹಾರಾಜರು ಬಾದಷಹನ ದರ್ಬಾರಿನಲ್ಲಿ ಏನೋ ಅಪಾಯವಿದೆ"ಯೆಂದು ಶಂಕೆ ಪಡುತ್ತಲೇ ಇದ್ದರು. ಬಾದಷಹನಿಗೂ ಜಯಸಿಂಹ ಮಹಾರಾಜರ ಮಾತಿನಲ್ಲಿ ವಿಶೇಷ ಗೌರವವಿತ್ತು. ಭಯವೂ ಇತ್ತು. ದರ್ಬಾರಿನ ದೊಡ್ಡ ಮುಸಲ್ಮಾನ ಸರದಾರರಿಗೆಲ್ಲಾ ನಮ್ಮ ಮಹಾರಾಜರ ಮೇಲೆ ದ್ವೇಷವಿತ್ತು. ಅದಕ್ಕೆ ಅನೇಕ ಕಾರಣಗಳೂ ಉಂಟು. ಷಾಹಿಸ್ತಾಖಾನನ ಪರಾಭವದಿಂದ ಅವರ ಮನದಲ್ಲೆಲ್ಲಾ ದ್ವೇಷಾಸೂಯೆಗಳು ತುಂಬಿದ್ದುವು. ಅದೊಂದು ಕಡೆ ಯಿಂದ ವಿಷವಾಹಿನಿಯು ಪ್ರವಹಿಸುತ್ತಲೇ ಇತ್ತು. ಮಹಾರಾಜರು ಮುಖ್ಯ ವಾದ ವರ್ಧಂತಿಯ ದರ್ಬಾರಿಗೆ ಬರಲಾಗದಂತೆ ಮಾರ್ಗದಲ್ಲಿಯೇ ತೊಡರು ಗಳನ್ನು ತಂದೊಡ್ಡಿ ಮಾಯಾಜಾಲವನ್ನು ಬೀಸಿದ್ದರು. ಮುಖ್ಯವಾದ ವರ್ಧಂತಿ ದರ್ಬಾರಿಗೆ ಮಹಾರಾಜರು ಬರಲಿಲ್ಲವಲ್ಲಾ ಎಂದು ಬಾದಷಹನಿಗೆ ಕ್ರೋಧವುಂಟಾಗಿತ್ತು.

"ಆಗ್ರಾ ನಗರವನ್ನು ಮಹಾರಾಜರು ಪ್ರವೇಶ ಮಾಡಿದಾಗ ದರ್ಬಾರಿನ ಒಬ್ಬ ಸರದಾರನಾಗಲೀ ಬಂದು ಎದುರುಗೊಳ್ಳಲಿಲ್ಲ. ಮಹಾರಾಜರು ಅಲ್ಲಿಂದಲೇ ಹಿಂತಿರುಗಿಬಿಟ್ಟಿದ್ದರೆ ಅವರು ಅಷ್ಟು ಕಷ್ಟಗಳನ್ನು ದುಃಖವನ್ನೂ

ಅನುಭವಿಸಬೇಕಾಗಿರಲಿಲ್ಲ. ಅಲ್ಲಿ ಅವರು ಮೋಸಬಿದ್ದರು. ಆ ಬಾದಷಹನ ದರ್ಬಾರನ್ನು ಒಮ್ಮೆ ನೋಡಬೇಕೆಂಬ ಕುತೂಹಲದಿಂದ ಆ ಮರ್ಯಾದೆಯನ್ನು ಗಮನಿಸದೆ ಪುರ ಪ್ರವೇಶ ಮಾಡಿದರು. ಎರಡನೆಯ ದರ್ಬಾರಿನಲ್ಲಿ ಅವರು ಬಾದಷಹರ ಭೇಟಿ ಮಾಡಬೇಕಾಯಿತು. ನಮ್ಮ ಮಹಾರಾಜರು ಆ ಮೊಗಲ್ ದರ್ಬಾರಿನ ಸಂಪ್ರದಾಯದಂತೆ ಕುರ್ನಿಸಾತ್ ಮಾಡಲಿಲ್ಲ. ಹಿಂದೂ ಧರ್ಮಾಭಿಮಾನಿಗೆ ಕುರ್ನಿಸಾತ್ ಮಾಡುವುದಕ್ಕಿಂತಲೂ ಅಪಮಾನ ಕಾರ್ಯವು ಬೇರೊಂದಿಲ್ಲ. ಆದರೆ ಮೊಗಲ್ ದರ್ಬಾರಿನಲ್ಲಿ ಅದುವರೆಗೆ ಕುರ್ನಿಸಾತ್ ಪದ್ಧತಿಯನ್ನು ಮೀರಿದ ನಿದರ್ಶನವು ಒಂದಾದರೂ ಇಲ್ಲ. ಬಾದಷಹನ ಕ್ರೋಧಾವೇಶಕ್ಕೆ ಇದಕ್ಕಿಂತಲೂ ಮಹಾಪರಾಧವು ಬೇರೊಂದಿರ ಲಿಲ್ಲ. ಆ ಕ್ಷಣವೇ ಮಹಾರಾಜರನ್ನು ದರ್ಬಾರಿಗಳು ಅಗೌರವದಿಂದ ಕಂಡರು. ಮಹಾರಾಜರು ಆ ದರ್ಬಾರನ್ನು ತುಚ್ಛವಾಗಿ ಎಣಿಸಿ, ಧಿಕ್ಕಾರ ಮಾಡಿ ಹೊರಗೆ ಹೊರಟು ಬಂದರು. ಆ ದರ್ಬಾರಿನಲ್ಲಿ ಎಷ್ಟೋ ಮಂದಿ ರಜಪೂತ ವೀರರು ಮನಸ್ಸಿನಲ್ಲಿಯೇ "ಧೀರ ಶಿವಾಜೀ ಮಹಾರಾಜ" ಎಂದು ಕೊಂಡರು. ಮುಸಲ್ಮಾನ್ ಸರದಾರರುಗಳು "ಹಾಹಾ, ಅಕ್ಷಮ್ಯ ಅಪರಾಧ" ಎಂದು ಉದ್ಗಾರ ತೆಗೆದರು.

ತಕ್ಷಣವೇ ಬಾದಷಹನ ಕ್ರೋಧವು ಕಾರ್ಯರೂಪವನ್ನು ತಾಳಿತು. ನಮ್ಮ ಮಹಾರಾಜರು ಇಳಿದಿದ್ದ ಬಿಡಾರವನ್ನು ಕ್ರೂರಿಗಳಾದ ಮೊಗಲ್ ಭಟರು ಸುತ್ತುಗಟ್ಟಿದರು. ಮೇಲ್ವಿಚಾರಣೆಗೆ ಅತ್ಯಂತ ಕ್ರೂರ ಸ್ವಭಾವದ ರದಾಂಹಾಜ್ ಖಾನ್‌ನನ್ನು ನೇಮಿಸಿದರು. ಅರ್ಥಾತ್ ನಮ್ಮ ಮಹಾರಾಜರು ಬಂಧನಕ್ಕೆ ಒಳಗಾದರು.

ನೇತಾಜಿಯು "ಶಹಬಾಸ್!" ರಾಜರೆಂದರೆ ಎಲ್ಲಿಯೂ ರಾಜರೇ! ರತ್ನವನ್ನು ನೆಲದಮೇಲೆ ಬಿಸುಟರೆ ಅದರ ಪ್ರಕಾಶಕ್ಕೆ ಕಲಂಕವುಂಟೇ? ನಮ್ಮ ಮಹಾರಾಜರು ಬಾದಷಹನಿಗೆ ಚೆನ್ನಾಗಿ ಕೈ ತೋರಿಸಿದರು. "ಈ ಇಡೀ ಹಿಂದೂಸ್ಥಾನದಲ್ಲಿ ಬಾದಷಹನ ಸಂಮುಖದಲ್ಲಿಯೇ ಸ್ವಾಭಿಮಾನ ವನ್ನು ತೋರಿದ ಪರಾಕ್ರಮಶಾಲಿಯಾವನಿರುವನು" ಎಂದು ಹೇಳುತ್ತಾ, "ಮುಂದೆ ಹೇಳು ಮಿತ್ರಾ, ಮುಂದೆ ಹೇಳು. ನಮ್ಮ ಮಹಾರಾಜನು ತಪ್ಪಿಸಿ ಕೊಂಡು ಬಂದುದು ಹೇಳು. ನಾನು ಏನೇನೋ ಕಥೆಗಳನ್ನು ಕೇಳಿದೆ.

ಅವೆಲ್ಲವೂ ನಮ್ಮ ಮಹಾರಾಜರಿಗೆ ಒಪ್ಪುವ ಕಥೆಗಳಲ್ಲ. ಸಿಂಹವು ಬೆಲ್ಲದ ಆಸೆಗೆ ನಾಲಿಗೆ ನೀಡೀತೆ ?"

ರಘುನಾಥ ಬಲ್ಲಾಳನು "ಆಶ್ಚರ್ಯದಿಂದ ಅದೇನು ಕಥೆ ? ನೀನು ಏನು ಕೇಳಿದ್ದೀ ? ಈ ಮೊಗಲರು ಏನು ಜಂಭಕೊಚ್ಚಿಕೊಳ್ಳುತ್ತಾರೆ. ಸ್ವಲ್ಪ ಹೇಳು ಕೇಳೋಣ" ಎಂದನು.

ನೇತಾಜಿಯು "ಅಂಥದೇನೂ ಇಲ್ಲ,ರಘುನಾಥ. ಉದ್ವಿಗ್ನನಾಗಬೇಡ. ಆ ಬಾದಷಹ ಇದ್ದಾನಲ್ಲ! ಅವನ ತಂಗಿ ರೋಷನಾರಾ ಮತ್ತು ಮಗಳು ಜಿನೀತ್ ಉನ್ನಿಸಾ, ಇವರು ನಮ್ಮ ಮಹಾರಾಜರು ಗಂಡುಗಲಿತನವನ್ನು ನೋಡಿ ಮೆಚ್ಚಿಕೊಂಡರಂತೆ. ಗೋಪ್ಯವಾಗಿ ಮಹಾರಾಜರನ್ನು ಬಂಧನದಲ್ಲಿ ಭೇಟಿಮಾಡಿ, ಹಾವಭಾವಗಳನ್ನು ತೋರಿ, ಮಹಾರಾಜರ ಕೊರಳಿಗೆ ಸ್ವಯಂವರ ಮಾಲಿಕೆಯನ್ನು ಹಾಕಿದರಂತೆ ! ಮಹಾರಾಜರು ತಮ್ಮನ್ನು ಬಂಧನದಿಂದ ಬಿಡಿಸಿದರೆ ಮಹಮದೀಯ ಮತವನ್ನು ಅವಲಂಬಿಸಿ, ಅವರನ್ನು ವಿವಾಹ ಮಾಡಿಕೊಳ್ಳುವುದಾಗಿ ವಚನವಿತ್ತರಂತೆ ! ಆ ದರ್ಬಾರಿನಲ್ಲಿ ಆ ಹೆಂಗಸರದೇ ಸರ್ವಾಧಿಕಾರ. ಅವರು ಕಾವಲಿನ ಯಜಮಾನ ಖಾನನನ್ನು ಬಾಯಿಗೆ ಬಟ್ಟೆ ತುರುಕಿ ಕೊಠಡಿಯಲ್ಲಿ ಕೂಡಿ, ರೋಷಾವೇಷದಿಂದ ಮಹಾರಾಜನನ್ನು ಬಿಡಿಸಿ, ರಾಜಧಾನಿಯ ಬಹಿರುದ್ಯಾನಕ್ಕೆ ಕರೆದೊಯ್ದರಂತೆ! ಆ ಸ್ತ್ರೀಯರಿಗೆ ಮೋಸಮಾಡಿ ನಮ್ಮ ಮಹಾರಾಜನು ತಪ್ಪಿಸಿಕೊಂಡುಬಂದ. ಹೆಂಗಳಿಂಥ ಬಂಧನದಿಂದ ಮುಕ್ತನಾಗಿ ಅವರನ್ನು ಮೋಸಗೊಳಿಸಿ ಬರುವವನು ಧೀರನೇ ? ಎಂದು ಮೊಗಲರು ಮಾತನಾಡಿಕೊಳ್ಳುತ್ತಾರೆ. ನನ್ನೊಡನೆ ಒಬ್ಬನೂ ಹೇಳಿಲ್ಲ. ನಾನು ಅದನ್ನು ನಂಬಲೂ ಇಲ್ಲ. ಪರನಾರೀ ಸಹೋದರರಾದ ನಮ್ಮ ಮಹಾರಾಜರು ಅದರಲ್ಲಿಯೂ ಮುಸಲ್ಮಾನ ತರುಣಿಯರನ್ನು ನೆಪ ಮಾತ್ರಕ್ಕಾದರೂ ವಿವಾಹ ಮಾಡಿಕೊಳ್ಳುತ್ತೇನೆಂದು ಹೇಳುವುದುಂಟೆ ? ಸೂರ್ಯನು ಹಿಮದ ಗಡ್ಡೆಯಂತೆ ತಣ್ಣಗಾಗಬಹುದು. ಸಪ್ತಸಮುದ್ರಗಳೂ ಒಣಗಿಹೋಗಬಹುದು. ನಮ್ಮ ಮಹಾರಾಜರ ಬ್ರಹ್ಮಚರ್ಯ, ಧರ್ಮನಿಷ್ಠೆಗಳಲ್ಲಿ ಎಳ್ಳಷ್ಟೂ ವ್ಯತ್ಯಾಸವಾಗದು. ಈ ಕಥೆಯನ್ನು ನಾನು ನಂಬಲಿಲ್ಲ. ಆದರೆ ಅಂತಹ ಕಠೋರ ಬಂಧನದಿಂದ ಮಹಾರಾಜರು ಮುಕ್ತರಾದುದು ಹೇಗೆ, ಅದನ್ನು ಹೇಳು."

ರಘುನಾಥನು "ಮಹಾರಾಜರು ತಪ್ಪಿಸಿಕೊಂಡು ಬರುವುದರಲ್ಲಿಯೂ ಧರ್ಮದ ದಾರಿಯನ್ನೇ ಅವಲಂಬಿಸಿದರು. ಅವರಿಗೆ ದೇಹಾಲಸ್ಯವಾಗಿತ್ತು. ಔಷಧಗಳಿಂದ ಗುಣವಾಗಲಿಲ್ಲ. ದೇವರುಗಳಿಗೆ ಹರಕೆ ಹೊತ್ತರು. ಪ್ರತಿ ದಿನವೂ ಉಭಯ ಸಂಧ್ಯೆಗಳಲ್ಲಿಯೂ ಅಕ್ಕಿ ಹಿಟ್ಟು, ತರಕಾರಿ, ಫಲಗಳು, ಮಿಠಾಯಿಗಳನ್ನು ತರಿಸಿ, ದೊಡ್ಡ ದೊಡ್ಡ ಬುಟ್ಟಿಗಳಲ್ಲಿ ತುಂಬಿ, ದೇವಾಲಯಗಳ ಮುಂದೆಯೂ, ಮಸೀದಿಗಳ ಮುಂದೆಯೂ ದಾನ ಮಾಡಿಸುತ್ತಿದ್ದರು. ಆ ದಾನದ ವೈಖರಿಯನ್ನು ಹಿಂದೂ-ಮುಸಲ್ಮಾನ್ ಜನರೆಲ್ಲರೂ ಪ್ರಶಂಸಿಸುತ್ತಿದ್ದರು. ಎಷ್ಟೋ ಮಂದಿ ಫಕೀರರು ಸದಾಬರ್ತ್ ತೆಗೆದುಕೊಂಡು ಮಹಾರಾಜರಿಗೆ ಹರಸುತ್ತಿದ್ದರು. ಈ ದಾನದ ಬುಟ್ಟಿಗಳು ಒಳಗೆ ಬರುವುದನ್ನೂ ಹೊರಗೆ ಹೋಗುವುದನ್ನೂ ಕಾವಲಿನ ಅಧಿಕಾರಿಗಳು ಜಾಗರೂಕತೆಯಿಂದ ಪರೀಕ್ಷಿಸುತ್ತಲೇ ಇದ್ದರು. ಅವರಿಗೆ ಗುಪ್ತ ಆಯುಧಗಳನ್ನು ಯಾರಾದರೂ ತಂದು ಮಹಾರಾಜರಿಗೆ ಕೊಟ್ಟಾರು. ಅವರು ಮುಸಲ್ಮಾನರ ಕೈಗೆ ಸಿಗಬಾರದೆಂದು ಆತ್ಮ ಹತ್ಯೆ ಮಾಡಿಕೊಂಡಾರು; ಎಂಬಷ್ಟೇ ಶಂಕೆಯಿತ್ತು. ದೊಡ್ಡ ದೊಡ್ಡ ಅಧಿಕಾರಿಗಳಿಗೆ ಆತ್ಮ ಹತ್ಯೆ ಮಾಡಿಕೊಂಡರೂ ಮಾಡಿಕೊಳ್ಳಲಿ. ಶಿವಾಜೀ ಮಹಾರಾಜನು ಹೇಗೋ ಸತ್ತರೆ ಸರಿ, ಎಂಬ ಧೋರಣೆಯಿತ್ತು. ಆ ಬುಟ್ಟಿಗಳನ್ನು ದಿನದಿನಕ್ಕೆ ಅಲಕ್ಷ್ಯಮಾಡುತ್ತಿದ್ದರು. ದಾನದ ಬುಟ್ಟಿಗಳು ಬಂದು ಹೋಗುತ್ತಿದ್ದುವು. ಸರಿಯಾದ ಸಮಯ ನೋಡಿ ಮಹಾರಾಜರು ಒಂದು ಬುಟ್ಟಿಯಲ್ಲಿಯೂ, ಸಾಂಬಾಜಿಯು ಒಂದು ಬುಟ್ಟಿಯಲ್ಲಿಯೂ ಕುಳಿತುಕೊಂಡರು. ಮೇಲೆಲ್ಲಾ ಹೂಗಳನ್ನು ಮುಚ್ಚಿದ್ದರು. ಬುಟ್ಟಿಗಳು ಕೋಟೆಯಿಂದ ಹೊರಗೆ ಸಾಗಿದವು. ಹೀಗೆ ಮಹಾರಾಜರು ಬಂಧಮುಕ್ತರಾಗಿ ಸನ್ಯಾಸಿ ವೇಷದಿಂದ ಅನೇಕ ರಾಜ್ಯಗಳನ್ನು ತಿರುಗಿಕೊಂಡು ರಾಯಘಡಕ್ಕೆ ಬಂದು ಸೇರಿದರು. ಜಯಸಿಂಹ ಮಹಾರಾಜರು ಬಾದಷಹನಿಂದ ಅಪಮಾನಿತರಾಗಿ ಖಿನ್ನರಾಗಿ ದೆಹಲಿಗೆ ಹಿಂತಿರುಗುತ್ತಾ ಮಾರ್ಗಮಧ್ಯದಲ್ಲಿ ಮರಣಹೊಂದಿದರೆಂಬ ಸಮಾಚಾರ ಕೇಳಿ, ಮಹಾರಾಜರು ಅತ್ಯಂತ ಖಿನ್ನರಾಗಿದ್ದಾರೆ. ನಿನ್ನ ವಿಷಯವಾಗಿ ಅವರು ಸದಾ ದುಃಖಿಸುತ್ತಾರೆ. ಒಡ ಹುಟ್ಟಿದವನಿಗಿಂತಲೂ ಹೆಚ್ಚಾಗಿದ್ದ ನೀನು ಇಂಥಾ ಅಧೋಗತಿಗಿಳಿದು. ಮೊಗಲರ ಸೇನಾಧಿಪತಿಯಾಗಿರು

ವುದು ಮಹಾರಾಜರಿಗೆ ತಲೆತಗ್ಗಿಸುವಂತಾಗಿದೆ. ಬಾದಷಹನು ಮಾಡಿದ ಅಪಮಾನಕ್ಕಿಂತಲೂ ನಿನ್ನ ಈ ನೀಚ ಸೇವಾ ವೃತ್ತಿಯಿಂದ ನಮ್ಮ ಮಹಾ ರಾಷ್ಟ್ರಕ್ಕಾಗಿರುವ ಅಪಮಾನವು ಮಹತ್ತರವಾದದ್ದೆಂದು ಮಹಾರಾಜರು ಭಾವಿಸುತ್ತಾರೆ. ನೇತಾಜೀ, ಈಗ ಹೇಳು. ನಿನಗೆ ನಮ್ಮಲ್ಲಿ ಯಾವ ಗೌರವ ವಿಲ್ಲ. ಯಾವ ಸಂಪತ್ತಿಲ್ಲ. ಯಾವ ಕೊರತೆಗಾಗಿ ಈ ಹಾಳು ಅಧಿಕಾರ ವನ್ನು ಸ್ವೀಕಾರ ಮಾಡಿದ್ದೀ ಹೇಳು. ಅಂದು ಆ ಪನ್ಹಾಳದ ಯುದ್ಧದಲ್ಲಿ ನೀನು ನಮ್ಮ ಸಂಘದಿಂದ ತಪ್ಪಿಹೋದೆ ಅಂದೇ ನೀನು ಅಲ್ಲಿ ಸತ್ತು ಬಿದ್ದಿದ್ದರೆ ನಿನ್ನನ್ನು ಹೊತ್ತುಕೊಂಡುಹೋಗಿ ಸಮಾಧಿಮಾಡಿ ಜೀವರಂತೆ ಪೂಜಿಸುತ್ತಿದ್ದೆವು. ಅದು ನಮಗೂ ನಮ್ಮ ರಾಷ್ಟ್ರಕ್ಕೂ ಭೂಷಣಪ್ರಾಯ ವಾಗಿತ್ತು. ನೀನೇಕೆ ಬಂದೆ ? ಹೇಳು."

ನೇತಾಜಿಯ ಕಣ್ಣುಗಳಲ್ಲಿ ನೀರು ಸುರಿಯಲಾರಂಭಿಸಿತು. "ಮಹರಾಯ, ನಾನು ನಿಜವನ್ನು ಹೇಳಿದರೂ ನೀನು ನಂಬುವುದೇ ಇಲ್ಲ. ನಿನ್ನೊಡನೆ ಆ ಮಾತನಾಡುವುದಕ್ಕಿಂತಲೂ ನನ್ನ ಕೈಯಿಂದಲೇ ನಾಲಿಗೆಯನ್ನು ಹಿರಿದು ಕೊಂಡು ಪ್ರಾಣಬಿಟ್ಟು ನನ್ನ ಶರೀರವನ್ನು ನಿನ್ನ ಪಾದಕ್ಕೊಪ್ಪಿಸುವುದು ಮೇಲು. ಅಂದು ಆ ನಿಶಿರಾತ್ರಿಯಲ್ಲಿ ಆ ಘಾತುಕರ ಕೈಗೆ ಸಿಕ್ಕಿಬಿದ್ದೆ. ಕತ್ತಿ ಗಳನ್ನೂ ಈಟಿಗಳನ್ನೂ ಎತ್ತಿ ಹೊಡೆದುಹಾಕಲು ಉಜ್ಜುಗಿಸಿದರು. ನಾನು ಪ್ರಾಣಭಿಕ್ಷೆಯನ್ನು ಬೇಡಿ ಅವರ ಬಂದಿಯಾದೆ. ಮಹಾರಾಜರು ಆ ದುರ್ಗ ವನ್ನು ಜಯಿಸದೇ ಹಿಮ್ಮೆಟ್ಟಿ ಹೊರಟುಹೋದರು. ಅವರು ದುರ್ಗವನ್ನು ಜಯಿಸುತ್ತಾರೆ. ನನಗೆ ಬಂಧನದಿಂದ ಮುಕ್ತಿಯಾಗುತ್ತದೆ ಎಂದು ನಂಬಿ ಜಪಿಸುತ್ತಿದ್ದೆ. ನಾನು ಬಂಧನದಲ್ಲಿರುವಾಗಲೇ ನಮ್ಮ ರಾಜ್ಯದಲ್ಲೆಲ್ಲಾ ನಾನು ಬಿಜಾಪುರದವರ ಕಡೆಗೆ ಸೇರಿಬಿಟ್ಟೆನೆಂಬ ಅಪಖ್ಯಾತಿಯೂ ಮನೆಮನೆ ಯಲ್ಲಿಯೂ ಹರಡಿದೆಯೆಂದು ಕೇಳಿದೆ. ಆ ಅಪಖ್ಯಾತಿಯು ನನ್ನ ಮೇಲೆ ಭೂತಾಕಾರವಾಗಿ ಎದ್ದಿರುವಾಗ ನಿಮ್ಮಲ್ಲಿಗೆ ಬರಲು ನನಗೆ ಧೈರ್ಯ ಬರಲಿಲ್ಲ. ಯಾವುದಕ್ಕೆ ಹೆದರದಿದ್ದರೂ ಅಪಖ್ಯಾತಿಗೆ ಹೆದರಬೇಡವೇನಯ್ಯ ?"

"ಸಂಭಾವಿತಸ್ಯ ಚಾಕೀರ್ತಿಃ ಮರಣಾದತಿರಿಚ್ಯತೇ."

"ಹೀಗಾಯಿತು ನನ್ನ ಅವಸ್ಥೆ. ಆಗ ಅವರ ಆಧೀನ್ಯವನ್ನು ಒಪ್ಪಿ ಕೊಂಡು ಮೊಗಲರ ಮೇಲೆ ಯುದ್ಧಕ್ಕೆ ಹೋದೆ. ಅಲ್ಲಿ ಬಿಜಾಪುರದವರು

ಕೈಕೊಟ್ಟರು. ಸೈನ್ಯವಿಲ್ಲ. ಹಣವಿಲ್ಲ. ಆಗ ವಿಧಿಯಿಲ್ಲದೆ ಮೊಗಲರ ಪಕ್ಷವನ್ನು ಸೇರಿದೆ. ಇದೆಲ್ಲಾ ಸರಿಯೆಂದಾಗಲಿ, ಸಹಜವೆಂದಾಗಲಿ ನಾನು ಹೇಳುವುದಿಲ್ಲ. ವಿವೇಕಭ್ರಷ್ಟವಾಗಿ ಹೋಯಿತಯ್ಯಾ. ವಿವೇಕಕ್ಕೆ ಭ್ರಾಂತಿ ಮುಚ್ಚಿಕೊಂಡಿತು. ಹಿರಿಯರು ಹೇಳುವುದಿಲ್ಲವೇ.

"ವಿವೇಕ ಭ್ರಷ್ಟಾನಾಂ ಭವತಿ ವಿನಿಪಾತಃ ಶತಮುಖಃ" ಎಂಬಂತೆ, ನನ್ನ ಅಧಃಪತನವು ನೂರು ಮುಖವಾಗಿ ಆಗಿಹೋಗಿದೆ. ನಾನು ಇಲ್ಲಿಂದ ಹೇಗಾದರೂ ತಪ್ಪಿಸಿಕೊಂಡು ಬಂದು ನಿಮ್ಮೆಲ್ಲರ ಸಮ್ಮುಖದಲ್ಲಿ ಅಡ್ಡಬಿದ್ದು ಕ್ಷಮಾಪ್ರಾರ್ಥನೆ ಮಾಡಬೇಕೆಂದು ಅನೇಕ ಬಾರಿ ಮನಸ್ಸಿಗೆ ಬಂದಿದೆ. ಧೈರ್ಯವಿಲ್ಲದೆ ಹೋಗಿದೆ. ನನ್ನಂಥಾ ಧರ್ಮಚ್ಯುತರಿಗೆ ಧೈರ್ಯವೆಲ್ಲಿ ಬರಬೇಕಯ್ಯಾ. ನೀವೆಂಥಾ ಪುಣ್ಯಾತ್ಮರು. ಎಷ್ಟು ಉದಾರಿಗಳು. ಈ ಧರ್ಮದ್ರೋಹಿಯನ್ನು, ಈ ಮಿತ್ರದ್ರೋಹಿಯನ್ನು ವಿಶ್ವಾಸದಿಂದ ನೋಡಲು ಬಂದಿರುವೆ. ಕಪಾಳಕ್ಕೆ ಹೊಡೆದು ಬುದ್ಧಿಹೇಳಿ ಹೋಗಲು ಬಂದಿರುವೆ. ನೀನು ಸ್ನೇಹಿತನು ಮಾತ್ರವಲ್ಲವಯ್ಯಾ, ನಿಜವಾಗಿಯೂ ನೀನು ನನ್ನ ಗುರು" ಎಂದು ರಘುನಾಥ ಬಲ್ಲಾಳನ ಪಾದಗಳ ಮೇಲೆ ಬಿದ್ದು ಕಣ್ಣೀರು ಸುರಿಸಿದನು.

ರಘುನಾಥನು ಅವನನ್ನು ಬಾಲಕನನ್ನು ಎತ್ತಿದಂತೆ ಮೇಲಕ್ಕೆತ್ತಿ ಸಂತೈಸಿದನು. "ನೇತಾ, ನಾನು ಹೇಳುವುದನ್ನು ಕೇಳು. ನೀನು ಎರಡನೆಯ ಶಿವಾಜಿಯೆಂದು ವಿಧರ್ಮಿಯರೇ ಹೊಗಳುತ್ತಾರೆ. ನಮ್ಮ ದೃಷ್ಟಿಯಿಂದ ನೀವಿಬ್ಬರೂ ರಾಮಲಕ್ಷ್ಮಣರಂತೆ. ನಿನ್ನನ್ನು ಕ್ಷಮಿಸುವುದು ಮಾತ್ರವಲ್ಲ. ನಾವೆಲ್ಲರೂ ಶಿವಾಜಿ ಮಹಾರಾಜರಿಗೆ ಸರಿಸಮವಾಗಿ ಆರಾಧಿಸುತ್ತೇವೆ. ನೀನು ಹೊರಟು ಬಾ, ಎಂದು ಹೇಳಿ ಆ ದಿನ ನೇತಾಜಿಯೊಡನೆ ಭೋಜನಮಾಡಿ ಮಾತುಕತೆಗಳನ್ನಾಡುತ್ತಾ ಕಾಲ ಕಳೆದನು.

ಸಂಧ್ಯಾಕಾಲದಲ್ಲಿ ಅವರಿಬ್ಬರೂ ಮಾತನಾಡುತ್ತಾ ಕುಳಿತಿರುವಾಗ ರಘುನಾಥ ಬಲ್ಲಾಳನು "ನೇತಾಜಿ, ನಮ್ಮ ಮಹಾರಾಜರು ಬಾದಷಹನ ಮೂಗಿಗೆ ಸುಣ್ಣಹಚ್ಚಿ ಹಿಂತಿರುಗಿ ಬಂದಿದ್ದಾರೆ. ಬಾದಷಹನು ಛಲದಿಂದ ದ್ವೇಷ ಸಾಧಿಸದೆ ಬಿಡುವವನಲ್ಲ. ನಮ್ಮ ಮೇಲೆ ಮತ್ತೊಂದು ಪ್ರಬಲವಾದ ಯುದ್ಧವನ್ನು ಹೂಡುತ್ತಾನೆ. ನಮಗೆ ಮತ್ತೊಂದು ಯುದ್ಧವು ಕಾದೇ

ಇದೆ. ಗೀತೆಯಲ್ಲಿ ಹೇಳಿಲ್ಲವೇ ? "ಕ್ಷತ್ರಿಯಾಃ ಸುಖಿನಃ ಪಾರ್ಥ ಲಭಂತೇ ಯುದ್ಧ ಮೀದೃಶಂ" ಎಂಬಂತೆ ನಾವೆಲ್ಲರೂ ಒಟ್ಟಿಗೆ ಸೇರಿ ಬಾದಷಹ ನೊಡನೆ ಖಡಾಖಡಿ ಯುದ್ಧ ಮಾಡೋಣ" ಎಂದು ಹೇಳಿದನು.

ನೇತಾಜಿಯು ಅವನ ಯುದ್ಧದ ಆಸೆಯನ್ನು ಪ್ರಶಂಸೆಮಾಡಿ "ನೀನು ಹೇಳಿದ್ದೆಲ್ಲಾ ಯುಕ್ತವಾಗಿಯೇ ಇದೆ. ಆದರೆ ಬಾದಷಹನು ಈ ದಖ್ಖನ್ನಿಗೆ ಪುನಃ ಬರುವಂತಿಲ್ಲ. ಅವನ ಅಸ್ತಮಾನ ಕಾಲವು ಸಮೀಪಿಸುತ್ತಿರುವಂತಿದೆ. ಭ್ರಾತೃದ್ರೋಹ, ಪಿತೃದ್ರೋಹಗಳು ಸದ್ಯಃ ಫಲಕೊಡದೇ ಹೋಗುವುದಿಲ್ಲ. ಪಂಜಾಬಿನಲ್ಲಿ ದೊಡ್ಡ ದಂಗೆಯೆದ್ದಿದೆ. ಆಫ್ಘನ್ನರು ಅವರ ಜೊತೆ ಸೇರಿ ಕೊಂಡಿದ್ದಾರೆ. ಆ ಗಡಿನಾಡಿನ ಆಫ್ರೀದಿಗಳು ವಿರೋಧಿಗಳಾಗಿ ಎದ್ದಿದ್ದಾರೆ. ಬಾದಷಹನು ಅತ್ತಕಡೆ ಸೈನ್ಯ ಸಮೇತನಾಗಿ ಹೊರಡುತ್ತಾನೆ. ಇಲ್ಲಿಯ ಮುಖ್ಯ ಸೇನಾಧಿಪತಿಗಳಿಗೆ ಕರೆಬಂದಿದೆ. ಮಹಾರಾಜಾ ಜಯಸಿಂಹನ ಮರಣದಿಂದ ರಜಪೂತ ಕುಲವೇ ಪ್ರಕ್ಷುಬ್ಧವಾಗಿದೆ. ರಜಪೂತರೆಲ್ಲರೂ ಕೈಬಿಟ್ಟಂತೆಯೇ. ಅಷ್ಟೇ ಅಲ್ಲ, ರಾಜಸ್ಥಾನವೆಲ್ಲವೂ ಉದ್ರೇಕಗೊಂಡು ಬಾದಷಹನಿಗೆ ವಿರೋಧವೆಸಗುವಂತೆ ಕಾಣುತ್ತಿದೆ. ಇಷ್ಟೊಂದು ಸಂಕಟಗಳು ಸುತ್ತಿಕೊಂಡಿರುವಾಗ ಬಾದಷಹನು ಇತ್ತಕಡೆ ತಿರುಗಿ ನೋಡುವುದಕ್ಕೂ ಆಸ್ಪದವಿಲ್ಲ. ಈ ಯುವರಾಜನ ವಿಚಾರವಂತೂ ನಿನಗೆ ಗೊತ್ತೇ ಇದೆ. ಮತ್ತಿಬ್ಬರು ಹೆಂಡಿರನ್ನು ಹುಡುಕುತ್ತಿದ್ದಾನೆ. ಆದರೆ ಸೌಜನ್ಯಶೀಲ. ಹಿಂದು ಗಳನ್ನು ಮರ್ಯಾದೆಯಿಂದ ಕಾಣುತ್ತಾನೆ. ಇವನು ಬಾದಷಹನಾದರೆ ಷಹಜಹಾನ್ ಅಕ್ಬರ್ ಚಕ್ರವರ್ತಿಗಳಿಗಿಂತಲೂ ಒಂದು ಕೈ ಉತ್ತಮನಾಗಿ ಹಿಂದುಗಳೊಡನೆ ನಡೆದುಕೊಳ್ಳುತ್ತಾನೆ" ಎಂದು ಹೇಳಿದನು.

ರಘುನಾಥನು "ನೇತಾ, ನೀನು ಹೇಳುವುದೆಲ್ಲಾ ಸರಿಯಾಗಿಯೇ ಇದೆ. ಏನೇ ಆಗಲಿ ಮುಸ್ಲಿಂಮರು ಮುಸ್ಲಿಂಮರೇ. ಹಿಂದೂಗಳು ಹಿಂದೂಗಳೇ. ಇದೆಲ್ಲಿ ತಪ್ಪುತ್ತದಯ್ಯಾ. ಮುಸ್ಲಿಮರ ದೇವರು ಅಲ್ಲಾ ಹಿಂದೂಗಳ ದೇವರು ಮಹಾವಿಷ್ಣು. ಇವರಿಬ್ಬರೂ ಕೈ ಕೈ ಹಿಡಿದುಕೊಂಡು ಬಂದು ನೀವು ಸಹೋದರರಂತೆ ಬಾಳಿರಿ, ಎಂದು ಪ್ರತ್ಯಕ್ಷವಾಗಿ ಉಪದೇಶ ಮಾಡಿದರೂ ನಮ್ಮ ದ್ವೇಷವು ಶಾಂತವಾಗುವುದೆಂದು ನನಗೆ ಅನಿಸುವುದಿಲ್ಲ. ಹಿಂದೂ ಜನಗಳ ಮೇಲೆ ನಡೆದಿರುವ ಅತ್ಯಾಚಾರಗಳು, ಹಿಂದೂ ಧರ್ಮದ ಮೇಲೆ

ಮುಸ್ಲಿಂಮರು ನಡೆಸಿದ ಅಘಾತ ಪ್ರಘಾತಗಳು ವಿಂಧ್ಯ ಹಿಮಾಚಲಗಳಿಗಿಂತಲೂ ಭೂತಾಕಾರವಾಗಿ ಕಣ್ಣೆದುರಿಗೆ ಕುಣಿಯುತ್ತಿವೆ. ಯುದ್ಧ. ಯುದ್ಧ! ಕಲತರಾಂತರಗಳವರೆಗೆ ನನ್ನ ಕಣ್ಣಿಗೆ ಆ ರಣದೇವತೆಯೊಂದೇ ಕಾಣುತ್ತಿದೆ.” ಎಂದು [illegible].

ನೇತಾಜಿಯು ತಲೆತಗ್ಗಿಸಿಕೊಂಡು ಮೌನವಾಗಿ ಕುಳಿತನು.

ಮೂರನೆಯ ದಿನ ರಘುನಾಥ ಬಲ್ಲಾಳನು ಅಪ್ಪಣೆ ಪಡೆದು ರಾಯಘಡಕ್ಕೆ ಪ್ರಯಾಣ ಮಾಡಿದನು. ಆ ವಾರವೆಲ್ಲಾ ನೇತಾಜಿಯ ಹೃದಯವು ತಲ್ಲಣಿಸುತ್ತಿದ್ದಿತು. ‘ಯಾವಾಗ ಇಲ್ಲಿಂದ ಹೊರಟು ಹೋದೇನು. ಯಾವಾಗ ‘ನನ್ನ ಸಂಗಡಿಗರೊಡನೆ ಸೇರಿಕೊಂಡೇನು’ ಎಂದು ತವಕ ಪಡುತ್ತಿದ್ದಿತು. ನನ್ನ ಸಂಗಡಿಗರೇ ಕ್ಷಮಾದಾನ ಮಾಡಿ ಎರಡು ಕೈಗಳನ್ನೂ ನೀಡಿ ಕರೆಯುತ್ತಿದ್ದಾರೆ. ಇನ್ನು ನನಗೆ ಶಂಕೆಯೇನಿದೆ’ ಎಂದು ಉತ್ಸಾಹಭರಿತನಾಗಿದ್ದನು.

ಆ ಸಮಯಕ್ಕೆ ಸರಿಯಾಗಿ ಯುವರಾಜ ಅಜಂಷಹನು ದರ್ಶನಾಕಾಂಕ್ಷಿಯಾಗಿ ನಿರೀಕ್ಷಿಸುತ್ತಿದ್ದಾನೆ, ಎಂಬುದಾಗಿ ರಾಜದೂತರು ಬಂದು ಅರಿಕೆ ಮಾಡಿದರು.

ನೇತಾಜಿಯು ‘ಒಳ್ಳೆಯದಾಯಿತು. ನನಗೇನು ಭಯ. ನಾನು ಶಿವಾಜಿ ಮಹಾರಾಜನ ದಾಸ. ಅವನೆಡೆಗೆ ಹೋಗಿ ಸೇರಿಕೊಳ್ಳುತ್ತೇನೆಂದು ಹೇಳುವ ಧೈರ್ಯವು ನನಗಿಲ್ಲವೆ? ಏನಾದರೂ ವರಪ್ರದಾನಗಳನ್ನು ಪ್ರಾರ್ಥಿಸುವಂತಿದ್ದರೆ ಹಿಂದೆ–ಮುಂದೆ ನೋಡಬೇಕು. ಅಧಿಕಾರ, ಸಂಪತ್ತು, ಸರ್ವಸ್ವವನ್ನೂ ತ್ಯಾಗ ಮಾಡಿ ಹೋಗುತ್ತಿರುವವನು ಯಾವ ಆಲೋಚನೆಯನ್ನು ಮಾಡತಕ್ಕದ್ದಿದೆ, ಎಂದುಕೊಂಡು ಧೈರ್ಯವಾಗಿ ಯುವರಾಜನ ಭೇಟಿ ಮಾಡಿದನು.

ಯುವರಾಜನು ನೇತಾಜಿಯನ್ನು ಆದರದಿಂದ ಬರಮಾಡಿಕೊಂಡು ಗೌರವಿಸಿ “ನೇತಾಜಿ ಮಹರಾಜ್, ಬಾದಷಹರು ನಿನ್ನ ಭೇಟಿಗೆ ಕಾತುರರಾಗಿದ್ದಾರೆ. ನಿನ್ನನ್ನು ದೆಹಲಿಗೆ ಕಳುಹಿಸಬೇಕೆಂದು ನನಗೆ ಆಜ್ಞಾಪತ್ರ ಬಂದಿದೆ” ಎಂದು ತಿಳಿಸಿದನು.

ನೇತಾಜಿಯು “ಯುವರಾಜ ನಾನು ದೆಹಲಿಗೆ ಹೋಗುವುದನ್ನು ನಿರಾಕರಿಸುತ್ತೇನೆ. ನೀನು ಉದಾರಪುರುಷ. ನನ್ನನ್ನು ಮೊಗಲರ ಕಡೆ ಸೇರಿಸಿಕೊಂಡ

ವರು ಮಹಾಪುರುಷರಾದ ಜಯಸಿಂಹ ಮಹಾರಾಜರು. ಅವರು ಬಾದಷಹ ನಿಂದ ಅಪಮಾನಿತರಾಗಿ ಆ ಖೇದದಿಂದಲೇ ಪರಲೋಕ ಯಾತ್ರೆ ಮಾಡಿದರು. ಶಿವಾಜಿ ಮಹಾರಾಜರಿಗೆ ಸಂಭವಿಸಿದ ಆಪತ್ಪರಂಪರೆಗಳನ್ನು ನೀನೇ ಬಲ್ಲೆ. ಯಾವ ಸ್ವಾಭಿಮಾನಿ ಹಿಂದೂವೀರನೂ ಇನ್ನು ಮೇಲೆ ಬಾದಷಹನ ನೆರಳಿಗೆ ಹೋಗಲು ಒಪ್ಪುವುದಿಲ್ಲ. ಆತ್ಮಸಾಕ್ಷಿಯಾಗಿ ಹೇಳು. ನೀನಾ ದರೂ ಮನಸಾರ ನನ್ನನ್ನು ಕಳುಹಿಸಿಕೊಡಲು ಒಪ್ಪುವಿಯಾ? ಮಿತ್ರ ದ್ರೋಹಿಯಾದೆನೆಂಬ ಭಯವು ನಿನ್ನನ್ನು ಕುಟುಕುತ್ತಿಲ್ಲವೆ?

"ಇಲ್ಲ, ನೇತಾಜಿ, ರಾಜಕಾರಣಗಳು ಇಂದು ವಿಷವಾದುದು ನಾಳೆ ಅಮೃತವಾಗುತ್ತದೆ. ಅಮೃತವಾಗಿದ್ದು ಉತ್ತರ ಕ್ಷಣವೇ ಘೋರ ವಿಷ ವಾಗುತ್ತದೆ. ಶಿವಾಜಿಯು ಪರಾಕ್ರಮಿ, ಧೀರಪುರುಷ. ಅವನ ವಿಷಯದಲ್ಲಿ ಬಾದಷಹರಿಗೆ ಅಂತರಂಗದಲ್ಲಿ ಮೆಚ್ಚುಗೆ ಬಂದಿತ್ತು. ದರಬಾರಿಗಳೆಲ್ಲರೂ ಶಿವಾಜಿಯನ್ನು ಪ್ರಶಂಸೆ ಮಾಡತೊಡಗಿದ್ದರು. ಎಲ್ಲರೂ ಬಂದು ಶಿವಾಜಿಯ ಭೇಟಿ ಮಾಡಿಕೊಂಡು ಹೋಗುತ್ತಿದ್ದರು. ಇದೆಲ್ಲಾ ಬಾದಷಹರ ಪುನಃ ಪರಿವರ್ತನೆಯ ಸೂಚನೆಗಳಲ್ಲವೇ? ಇನ್ನು ಒಂದೇ ಒಂದು ತಿಂಗಳ ಕಾಲ ಶಿವಾಜಿಯು ಅಲ್ಲಿದ್ದಿದ್ದರೆ ಅವನ ಅದೃಷ್ಟ ರೇಖೆಯೇ ಬದಲಾಗುತ್ತಿದ್ದಿತು. ಡೆಲ್ಲಿಯ ದರ್ಬಾರಿನಲ್ಲಿ ಬಾದಷಹರು ಶಿವಾಜಿ ಮಹಾರಾಜನಿಗೆ ಮಹೋ ನ್ನತ ಗೌರವ ಕೊಟ್ಟು ಮಹತ್ಪದವಿಯನ್ನು ಅನುಗ್ರಹಿಸುತ್ತಿದ್ದನು. ಈ ದಖ್ಖನ್ನಿನ ಸರ್ವಾಧಿಕಾರಿಯಾಗಿ ಶಿವಾಜಿಯನ್ನು ನೇಮಿಸುವ ನಿರ್ಧಾರ ಮಾಡಿದ್ದನು. ಅಷ್ಟರಲ್ಲಿ ದುರ್ದೈವ ಘಟನೆ ಶಿವಾಜಿಯನ್ನು ಆ ಸ್ಥಳದಿಂದ ಹಾರಿಸಿ ಬಿಟ್ಟಿತು. ನಿನ್ನನ್ನು ಎರಡನೆಯ ಶಿವಾಜಿಯೆಂದು ಬಾದಷಹರು ಎಷ್ಟೋ ಬಾರಿ ಪ್ರಶಂಸೆ ಮಾಡಿದ್ದಾರೆ. ನೀನು ಅದಕ್ಕೆ ಅರ್ಹನಾಗಿಯೂ ಇರುವೆ. ನೀನು ಬಾದಷಹರ ಗೌರವಕ್ಕೆ ಪಾತ್ರನಾದರೆ ಶಿವಾಜಿ ಮಹಾ ರಾಜನಿಗೆ ಕೂಡ ಕ್ಷೇಮ ಉಂಟಾಗುತ್ತದೆ. ನಿನ್ನ ಮೂಲಕ ಶಿವಾಜಿಗೂ ಬಾದಷಹರಿಗೂ ಸ್ನೇಹಬಾಂಧವ್ಯ ಉಂಟಾಗಬಹುದು. ಬಾದಷಹರ ಇಷ್ಟ ದಂತೆ ನೀನು ದೆಹಲಿಗೆ ಹೋದರೆ ಬಾದಷಹರೂ ಪ್ರಸನ್ನರಾಗುತ್ತಾರೆ. ಶಿವಾಜಿಯ ಸೇವೆಯನ್ನೂ ಮಾಡಿದಂತಾಗುತ್ತದೆ. ನನ್ನ ಮಾತನ್ನೂ ನಡೆಸಿಕೊಟ್ಟಂತಾಗುತ್ತದೆ. ಈ ಮೂವರ ಸ್ನೇಹ ಸೌಜನ್ಯಗಳಿಗೂ ನೀನು

ಮುಖ್ಯ ಆಧಾರಪಾತ್ರನಾಗುತ್ತೀ ಎಂದು ಹೇಳಿದನು.

ನೇತಾಜಿಯು ಬಹಳವಾಗಿ ಯೋಚನೆ ಮಾಡಿ, ಇಷ್ಟು ದಿನಗಳು ಇವರೊಡನೆ ಸೇರಿಕೊಂಡಿದ್ದೇನೆ. ಈಗ ಯುವರಾಜರು ಹೇಳುವಂತೆ ಡೆಲ್ಲಿಗೆ ಹೋಗುವುದರಿಂದ ಗುಣಾವ ಗುಣಗಳೆರಡೂ ಉಂಟು, ಇರಲಿ ಶಿವಾಜೀ ಮಹಾರಾಜನ ದೂತನೆಂಬ ಭಾವನೆಯಿಂದಲೇ ದೆಹಲಿಗೆ ಹೋಗುತ್ತೇನೆ ಭಗವಂತನ ಇಚ್ಛೆಯಿದ್ದಂತಾಗಲಿ. ಎಂದು ನಿಶ್ಚಯಿಸಿಕೊಂಡು, ಯುವರಾಜ ನಿನ್ನ ಮಾತನ್ನು ನಂಬಿ ದೆಹಲಿಗೆ ಹೋಗುತ್ತೇನೆ ಆದರೆ ನನ್ನ ಮಾನಾಪಮಾನಗಳು ನಿನ್ನವು ಅಲ್ಲಿ ನನಗೇನಾದರೂ ಅಪಹತಿ ಉಂಟಾದರೇ ನೀನೆ ಉತ್ತರವಾದಿ, ಎಂದು ಹೇಳಿ ಒಪ್ಪಿಕೊಂಡು ಹೊರಟನು.

———

೨

ಶಿವಾಜಿಯು ಬಾದಷಹನ ಬಂಧನದಿಂದ ತಪ್ಪಿಸಿಕೊಂಡು ಬಂದಮೇಲೆ ತನ್ನ ಸಂಗಡಿಗರೊಡನೆ ಮುಂದೇನು ಮಾಡಬೇಕು ಎಂದು ಆಲೋಚನೆ ಮಾಡತೊಡಗಿದನು. ಬಾದಷಹನು ಸುಮ್ಮನೆ ಕೂಡುವವನಲ್ಲ. ಶಿವಾಜಿಯ ಮೇಲೆ ಹಿಂದೆ ಇದ್ದುದಕ್ಕಿಂತಲೂ ಹೆಚ್ಚು ದ್ವೇಷವು ಈಗ ಬೆಳೆದಿರುತ್ತದೆ. ಅವನು ತನ್ನ ಮೇಲೆ ಸೈನ್ಯವನ್ನು ಕಳುಹಿಸುತ್ತಾನೆ. ಅದಕ್ಕೆ ಮರಾಠರು ಸಿದ್ಧರಾಗಿರಬೇಕು. ಮತ್ತೊಂದು ಕಡೆ ಮಹಾರಾಷ್ಟ್ರದ ಅನೇಕ ದುರ್ಗಗಳು ಮೊಗಲರಿಗೆ ಬಿಟ್ಟುಕೊಡಲ್ಪಟ್ಟಿವೆ. ಅವುಗಳನ್ನೆಲ್ಲಾ ಹೇಗಾದರೂ ಮಾಡಿ ಪುನಃ ಸ್ವಾಧೀನಪಡಿಸಿಕೊಳ್ಳಬೇಕು. ಈ ಚಿಂತೆಯು ಯಾವಾಗಲೂ ಶಿವಾಜಿಯ ಮನಸ್ಸನ್ನು ಆಕ್ರಮಿಸಿತ್ತು. ಬಿಜಾಪುರದವರು ತನ್ನ ಮೇಲೆ ಕತ್ತಿ ಕಟ್ಟುತ್ತಲೇ ಇದ್ದಾರೆಂದೂ ಅವರಿಗೆ ಸರಿಯಾದ ಶಾಸ್ತಿ ಮಾಡಬೇಕೆಂದೂ ಸಮಾಲೋಚನೆ ಮಾಡಿದನು. ಇವೆಲ್ಲ ಕಾರ್ಯಗಳ ಸಾಧನೆಗಾಗಿ ಎರಡು ಮಾರ್ಗಗಳಿಗೆ ವಿಶೇಷ ಗಮನಕೊಡುತ್ತಿದ್ದನು. ತನ್ನ ರಾಜ್ಯದಲ್ಲಿ ವರ

ಮಾನದ ವಸೂಲಿ ಕ್ರಮವನ್ನು ಸುವ್ಯವಸ್ಥೆಯಿಂದ ಮಾಡಲು ಅಣಿ ಮಾಡಿದನು. ಸೈನ್ಯಗಳನ್ನು ಸೇರಿಸುವುದಕ್ಕೆ ಬೇಕಾದ ವ್ಯವಸ್ಥೆ ಮಾಡುತ್ತಿದ್ದನು. ಮತ್ತೊಂದು ಕಡೆಯಿಂದ ಮೊಗಲರೊಡನೆ ಸ್ಥಿರವಾದ ಸಂಧಿಯನ್ನು ಏರ್ಪಡಿಸಬೇಕೆಂದು ಉಪಾಯ ಮಾಡಿ ಪತ್ರ ಬರೆದು ಯುವರಾಜ ಅಜಂಷಹನಲ್ಲಿಗೆ ಮುತ್ಸದ್ದಿಗಳನ್ನು ಕಳುಹಿಸಿಕೊಟ್ಟನು.

ಅಜಂಷಹನೂ, ಯಶವಂತಸಿಂಹನೂ ಶಿವಾಜಿಯನ್ನು ತಮ್ಮ ಸ್ನೇಹಿತನನ್ನಾಗಿ ಮಾಡಿಕೊಳ್ಳಬೇಕೆಂದು ಹವಣಿಸುತ್ತಿದ್ದರು. ಈಗ ತಾನಾಗಿ ಶಿವಾಜಿಯೇ ಸಂಧಿ ಪ್ರಸ್ತಾಪವನ್ನು ಮಾಡಿರುವಾಗ ಬಿಟ್ಟರಾದೀತೆ? ಆ ಪತ್ರವನ್ನು ಬಾದಷಹನಲ್ಲಿಗೆ ಕಳುಹಿಸಿ ಇದನ್ನು ಮಂಜೂರು ಮಾಡಬೇಕೆಂದು ಪ್ರಾರ್ಥನೆ ಮಾಡಿದನು. ಬಾದಷಹನು ತನ್ನ ಮಂತ್ರಿಗಳೊಡನೆ ಆಲೋಚನೆ ಮಾಡಿದನು. ನಮಗೆ ಈಗ ಪಂಜಾಬಿನ ಕಡೆ ಯುದ್ಧ ಪ್ರಸಂಗವು ಪ್ರಾಪ್ತವಾಗಿದೆ. ಈ ಶಿವಾಜಿಯನ್ನು ಹತೋಟಿಯಲ್ಲಿ ಇಟ್ಟಿದ್ದರೆ, ಸದ್ಯಕ್ಕೆ ದಕ್ಕನ್ನಿನ ವಿಚಾರ ಯೋಚಿಸಬೇಕಾದ್ದಿಲ್ಲ. ಶಿವಾಜಿಯಿಂದ ಜಯಸಿಂಹ ಮಹಾರಾಜರು ಅನೇಕ ದುರ್ಗಗಳನ್ನು ವಶಪಡಿಸಿಕೊಂಡಿದ್ದಾರೆ. ಶಿವಾಜಿಯೊಡನೆ ಸಂಧಿ ಮಾಡಿಕೊಳ್ಳದೆ ಬಿಟ್ಟು ಬಿಟ್ಟರೆ ಅವನು ಆ ದುರ್ಗಗಳನ್ನೆಲ್ಲಾ ಪುನರಾಕ್ರಮಣ ಮಾಡುತ್ತಾನೆ ಅಲ್ಲಿ ಯುದ್ಧವು ಪ್ರಾಪ್ತವಾಗುತ್ತದೆ. ಹೀಗೆಲ್ಲಾ ಮಂತ್ರಾಲೋಚನೆ ಮಾಡಿ, ಶಿವಾಜಿಯೇ ಪ್ರಾರ್ಥನೆ ಮಾಡಿರುವ ಈ ಸಂಧಿ ಪ್ರಸ್ತಾಪಕ್ಕೆ ದರಬಾರಿನಿಂದ ಸಮ್ಮತಿ ಸಿಕ್ಕಿತು. ಯುವರಾಜನು ತಕ್ಷಣ ಸಂಧಿಯನ್ನು ಒಪ್ಪಿಕೊಳ್ಳಲಾಗಿದೆ ಎಂದು ರಾಯಸ ಬರೆಸಿ ಕಳುಹಿಸಿದನು. ಶಿವಾಜಿಯ ಮಗ ಸಾಂಬಾಜಿಯು ಮೊಗಲ್ ರಾಜಧಾನಿಯಾದ ಔರಂಗಾಬಾದಿನಲ್ಲಿ ಐದು ಸಹಸ್ರ ಸೈನ್ಯಗಳ ಅಧಿಪತಿಯಾಗಿ ನೇಮಿಸಲ್ಪಟ್ಟನು. ಅವನಿಗೆ ಬಿರಾರಿನಲ್ಲಿ ಎರಡು ಜಹಗೀರಿಗಳು ಕೊಡಲ್ಪಟ್ಟವು. ಪ್ರತಾಪರಾವ್ ಮತ್ತು ನೀರಾಜೀರಾವ್ ಇವರಿಬ್ಬರೂ ಮರಾಠಾ ಸೇನಾಧಿಪತಿಗಳು. ಶಿವಾಜಿಯ ಕಡೆ ರಾಯಭಾರಿಗಳಾಗಿ ಔರಂಗಾಬಾದಿನಲ್ಲಿ ಇರತಕ್ಕದೆಂದು ನಿರ್ಧಾರವಾಯಿತು. ಹೀಗೆ ಯುವರಾಜ ಅಜಂಷಹನಿಗೂ ಶಿವಾಜಿಗೂ ಅಂತರಂಗ ಮೈತ್ರಿಯು ಬೆಳೆಯುತ್ತಿದ್ದಿತು.

ದಿಲೇರ್‌ಖಾನನು ಅಹಮುದ್ ನಗರದಲ್ಲಿದ್ದ ಮೊಗಲ್ ಸೇನಾಧಿಪತಿ·

ದಖ್ಖನ್ನಿನ ಎಲ್ಲಾ ಮೊಗಲ್ ಸೈನ್ಯಗಳೂ ಇವನ ಅಧಿಕಾರಕ್ಕೆ ಒಳಪಟ್ಟಿದ್ದುವು. ಇವನಿಗೆ ಯಾವಾಗಲೂ ಶಿವಾಜಿಯ ಮೇಲೆ ಕಣ್ಣು. ಬಿಜಾಪುರದ ಯುದ್ಧದಲ್ಲಿಯೇ ಯಾವುದಾದರೂ ತಂತ್ರಮಾಡಿ ಶಿವಾಜಿಯನ್ನು ಕೊಲ್ಲಿಸಿಬಿಡಬೇಕೆಂದು ಅವನು ತಂತ್ರಮಾಡಿದ್ದನು. ಮಹಾರಾಜಾ ಜಯಸಿಂಹನ ಜಾಣ್ಮೆಯಿಂದ ಆ ಘಟನೆಯು ತಪ್ಪಿಹೋಗಿತ್ತು. ಶಿವಾಜಿಯ ಮೇಲೆ ಬಾದಷಹನಿಗೆ ಆಗ್ರಹ ಉಂಟಾಗಿದೆಯೆಂದು ದಿಲೇರ್‌ಖಾನನಿಗೆ ಚೆನ್ನಾಗಿ ಮನದಟ್ಟಾಗಿತ್ತು. ಇದನ್ನು ಪ್ರಬಲಗೊಳಿಸಲು ದಿಲೇರ್‌ಖಾನನು ಡೆಲ್ಲಿಯಲ್ಲಿ ಅನೇಕ ಪಿತೂರಿಗಳನ್ನು ನಡೆಸುತ್ತಿದ್ದನು. ಒಂದು ಬಾರಿ ಯುವರಾಜನನ್ನೇ ಭೇಟಿಮಾಡಿ "ನಾನು ಶಿವಾಜಿಯನ್ನು ಪೂರ್ತಿಯಾಗಿ ಸೋಲಿಸಿದ್ದೆ. ಅವನು ಸೆರೆಸಿಕ್ಕಿದ್ದ. ಅಂದು ಭೂಗತಮಾಡಿಬಿಡುತ್ತಿದ್ದೆ. ಮಹಾರಾಜಾ ಜಯಸಿಂಹರು ಹಿಂದೂ ಎಂಬ ಅಭಿಮಾನದಿಂದ ಅವನನ್ನು ಬದುಕಿಸಿದರು. ಅವನಿಗೆ ದರಬಾರಿನಲ್ಲಿ ಗೌರವ ಕೊಡಿಸಬೇಕೆಂದು ಸಾಹಸಮಾಡಿದರು. ಅವನ ನಡತೆ ಯೋಗ್ಯತೆಗಳು ಬಾದಷಹರಿಗೆ ಪ್ರತ್ಯಕ್ಷವಾಯಿತು. ಅವನಿಂದ ಮಹಾರಾಜಾ ಜಯಸಿಂಹರ ಗೌರವಕ್ಕೂ ಚ್ಯುತಿಬಂದಿತು. ಅವನು ಎಂದೆಂದಿಗೂ ಮೊಗಲ್ ಸಾಮ್ರಾಜ್ಯದ ಪರಮಶತ್ರು. ನನಗೆ ಮತ್ತೊಮ್ಮೆ ಅವಕಾಶಕೊಡಿರಿ. ಶಿವಾಜಿಯನ್ನು ಹೊಡೆದು ಹಾಕಿಬಿಡುತ್ತೇನೆ" ಎಂದು ಅನೇಕ ವಿಧವಾಗಿ ಪ್ರಾರ್ಥನೆ ಮಾಡಿದನು.

ಯುವರಾಜನು "ಖಾನ್ ಸಾಹೇಬರೇ, ನೀವು ಮಹಾ ಪರಾಕ್ರಮಿಗಳೆಂದು ದೆಹಲಿಯ ದರ್ಬಾರಿನಲ್ಲೆಲ್ಲಾ ವಿಖ್ಯಾತವಾಗಿದೆ. ಈ ಶಿವಾಜಿಯ ವಿಷಯ ಮಾತ್ರ ತೊಡಕಾಗಿದೆ. ಬಾದಷಹರು ಅವನನ್ನು ಹೇಗಾದರೂ ಮತ್ತೆ ಸ್ನೇಹಮಾಡಬೇಕೆಂದು ಅಂತರಂಗವಾಗಿ ಹೇಳಿಕಳುಹಿಸುತ್ತಿದ್ದಾರೆ. ನೀವು ನಮಗೆ ಪರಮಾಪ್ತರಾದುದರಿಂದ ನಿಮ್ಮಲ್ಲಿ ಬಿಚ್ಚಿ ಹೇಳುತ್ತಿದ್ದೇನೆ. ಬಾದಷಹರಿಗೆ ಈ ಶಿವಾಜಿಯ ಮೇಲೆ ಇಷ್ಟೊಂದು ಅಭಿಮಾನಕ್ಕೆ ಕಾರಣವೇನೆಂಬುದು ನನಗೇ ಆಶ್ಚರ್ಯಕರವಾಗಿದೆ. ನಾವು ಮತ್ತೊಂದು ಸಮಯಕಾದು ಶಿವಾಜಿಯ ಮೇಲೆ ಯುದ್ಧವನ್ನು ಮಾಡೋಣ" ಎಂದು ಹೇಳಿದನು.

ದಿಲೇರ್‌ಖಾನನು "ಯುವರಾಜರೇ, ನಾನು ಹೇಳಿದ್ದೇನೆ ಕೇಳಿ. ನೆನಪಿಟ್ಟುಕೊಳ್ಳಿ. ಈ ಶಿವಾಜಿಗೂ ಮೊಗಲ್ ಸಾಮ್ರಾಟರಿಗೂ ಸ್ನೇಹವೆಂದರೇನು?

ಒಂದುಪಕ್ಷ ಹಾಗೆ ಸ್ನೇಹವಾದರೆ ಇಡೀ ಹಿಂದೂಸ್ಥಾನದಲ್ಲಿರುವ ಮುಸಲ್ಮಾನರೆಲ್ಲಾ ತಲೆ ತಗ್ಗಿಸುವಂತಾಗುತ್ತದೆ. ಅವನೊಡನೆ ಬಾದಷಹರು ಸ್ನೇಹಮಾಡಿಕೊಂಡರೆ ಈ ದಖ್ಖನ್ ರಾಜ್ಯದ ಆಸೆಯನ್ನೇ ನಾವು ಬಿಡಬೇಕಾಗುತ್ತದೆ. ಇಲ್ಲಿ ನೀವೇಕೆ ಸರ್ವಾಧಿಕಾರಿಗಳಾಗಿರಬೇಕು? ನಾನೇಕೆ ಸೇನಾಧಿಪತಿಯಾಗಿರಬೇಕು?" ಎಂದು ಖಡಾಖಡಿ ಹೇಳಿ ಹೊರಟುಹೋಗಿದ್ದನು.

ಆದರೇನು? ಶಿವಾಜಿಯೊಡನೆ ಸಂಧಿಯಾಗಿಯೇ ಆಯಿತು. ಆಗ ದಿಲೇರ್‌ಖಾನನು 'ಈ ಹಿಂದೂರಾಜ ಯಶವಂತಸಿಂಗ್ ಮತ್ತು ಯುವರಾಜ ಆಜಂಷಹ, ಇವರಿಬ್ಬರ ಮಸಲತ್ತಿನಿಂದ ಈ ಸಂಧಿಯಾಗಿದೆ. ಇದನ್ನು ಹೇಗಾದರೂ ಮುರಿದು ಹಾಕಬೇಕು' ಎಂದು ದಿಲೀರ್‌ಖಾನನು ದ್ವೇಷಸಾಧನೆ ಮಾಡುತ್ತಲೇ ಇದ್ದನು.

ದಖ್ಖನ್ನಿನ್ನಲ್ಲಿ ಬಿಕನೀರ್‌ನ ರಾಜ ರಾವ್‌ಕರ್ ರಾಠೋಡ್ ಎಂಬ ಸೇನಾಧಿಪತಿಯು ಮೊಗಲರ ಅಧೀನದಲ್ಲಿದ್ದನು. ಇವನು ರಾಜಾಸ್ಥಾನದವನು. ಸೈನ್ಯ ಸಮೇತನಾಗಿ ಅಲ್ಲಲ್ಲಿ ಮೊಗಲಾಯಿ ರಾಜ್ಯದಲ್ಲಿಯೇ ಹೋಗಿ ಕೊಳ್ಳೆಹೊಡೆದು ಹಣ ಸಂಪಾದಿಸುತ್ತಿದ್ದನು. ಸೇನಾಧಿಪತಿ ದಿಲೇರ್‌ಖಾನನಿಗೆ 'ಇದೆಂಥಾ ಕೆಲಸ! ನಮ್ಮ ಸೇನಾಧಿಪತಿಗಳು ನಮ್ಮ ರಾಜ್ಯವನ್ನೇ ಕೊಳ್ಳೆ ಹೊಡೆಯುವುದೆಂದರೆ! ಮೊಗಲ್ ಸಾಮ್ರಾಜ್ಯದ ಗೌರವ ಉಳಿದೀತೇ?' ಎಂದು ಯೋಚಿಸಿ, ಆ ರಾಠೋಡನನ್ನು ತನ್ನ ಮುಂದೆ ಹಾಜರಾಗಬೇಕೆಂದು ಅಪ್ಪಣೆ ಕಳಿಸಿದನು. ರಾಠೋಡನು ಮುಖ್ಯ ಸೇನಾಧಿಪತಿಯ ಆಜ್ಞೆಯನ್ನು ನಿರಾಕರಿಸಿದನು. ದಿಲೇರ್‌ಖಾನನು ರಾಠೋಡನನ್ನು ಹಿಡಿದು ತರಬೇಕೆಂದು ಸೈನ್ಯವನ್ನು ಕಳಿಸಿದನು. ಆ ಸೈನ್ಯಕ್ಕೂ ರಾಠೋಡನ ಸೈನ್ಯಕ್ಕೂ ಹೋರಾಟವಾಯಿತು. ರಾಠೊಡನು ಓಡಿಹೋಗಿ ಯುವರಾಜ ಆಜಂಷಹನಿಗೆ ಶರಣಾಗತನಾದನು. ಯುವರಾಜನು ಅವನನ್ನು ಮನ್ನಿಸಿ ರಕ್ಷಣೆಕೊಟ್ಟು ಗೌರವಿಸಿದನು.

ದಿಲೇರ್‌ಖಾನನು ಯುವರಾಜನು ತನಗೆ ಪದೇ ಪದೇ ಅಪಮಾನ ಮಾಡುತ್ತಾನೆಂದು ಖಿನ್ನನಾದನು. 'ಹೀಗೆ ಕೈಕಟ್ಟಿಕೊಂಡು ಕುಳಿತಿದ್ದು ಫಲವಿಲ್ಲ. ನನ್ನ ಕಾರ್ಯವನ್ನು ಸಾಧಿಸಲೇಬೇಕು' ಎಂದು ಹಟತೊಟ್ಟು

ಧೈರ್ಯಮಾಡಿ ಬಾದಷಹನಿಗೆ ಒಂದು ಪತ್ರವನ್ನು ಬರೆದು ಕಳುಹಿಸಿದನು.

ಷಹಾ೯ಷಹಾ ಬಾದಷಹರವರಿಗೆ,

ಜಹಪನಾ,

ತಮ್ಮ ಪಾದಸೇವಕನಾದ ದಿಲೇರ್‌ಖಾನನು ಬಿನ್ನಹ ಮಾಡಿಕೊಳ್ಳುತ್ತಿದ್ದಾನೆ. ಈ ದಖ್ಖನ್ನಿನಲ್ಲಿ ನಡೆಯುತ್ತಿರುವ ವ್ಯವಹಾರಗಳೊಂದೂ ಮೊಗಲ್ ಸಾಮ್ರಾಜ್ಯಕ್ಕೆ ಕೀರ್ತಿ ತರುವಂಥದಲ್ಲ. ಹಿಂದೂರಾಜ ಶಿವಾಜಿಯೂ ಜಶವಂತ ಸಿಂಹನೂ ಮೋಸದಿಂದ ಯುವರಾಜರನ್ನು ವಶಪಡಿಸಿಕೊಂಡಿದ್ದಾರೆ. ಯುವರಾಜರನ್ನು ಅನೇಕ ಪ್ರಲೋಭಗಳಿಂದ ಉಬ್ಬಿಸಿ, ಆ ಯವನ ವಿದ್ರೋಹಿಗಳು ಮೊಗಲ್ ದರ್ಬಾರಿನ ಮೇಲೆಯೇ ವಿರೋಧವಾಗಿ ಎತ್ತಿ ಕಟ್ಟಿದರೆ ಆಶ್ಚರ್ಯವೇನೂ ಇಲ್ಲ. ನಮ್ಮಂಥಹ ನಿಷ್ಠಾವಂತ ಮೊಗಲ್ ಸೇನಾಧಿಪತಿಗಳಿಗೆ ಇದು ತಕ್ಕ ಸ್ಥಳವಲ್ಲ. ಬಿಕನೀರಿನ ರಾಠೋಡ್‌ನ ಪ್ರಸಂಗವಂತೂ ನನಗೆ ಅತ್ಯಂತ ಅಪಮಾನಾಸ್ಪದವಾಗಿದೆ. ಆ ರಾಜದ್ರೋಹಿಯನ್ನು ಯುವರಾಜರು ಮಡಿಲಿನಲ್ಲಿ ಹಾಕಿಕೊಂಡಿದ್ದಾರೆ. ದೆಹಲಿಗೆ ಹಿಂತಿರುಗಿ ಬರಲು ನನಗೆ ಅಪ್ಪಣೆ ಕೊಡಿಸಬೇಕು. ಬೇರೆ ಸೇನಾಧಿಪತಿಗಳನ್ನು ಇಲ್ಲಿಗೆ ಕಳುಹಿಸೋಣವಾಗಲಿ.

ನಮ್ರ ಪಾದಸೇವಕ
ದಿಲೇರ್‌ಖಾನ್"

ಈ ಪತ್ರವು ಬಾದಷಹನ ಕೈ ಸೇರಿತು. ಮನಸ್ಸಿನಲ್ಲಿ ಯುವರಾಜನ ಮೇಲೆ ಸಂಶಯ ಬಂದಿತು. ಶಿವಾಜಿಯ ಮೇಲೆಯೂ ಜಶವಂತ ಸಿಂಹನ ಮೇಲೆಯೂ ಆಗ್ರಹವೇ ಬಂದಿತು. ಆಗ ಬಾದಷಹನು ಕೋಪಕ್ಕೆ ಎಡೆಗೊಡುವ ಸಮಯವಲ್ಲ. ಈ ದಖ್ಖನ್ ರಾಜ್ಯವು ಒಮ್ಮಿಂದೊಮ್ಮೆಲೇ ಪ್ರಕ್ಷುಬ್ಧವಾದರೆ ಈ ಯುವರಾಜ ಆಜಂಷಹನೂ ಅವರ ಜೊತೆಯಲ್ಲಿ ಸೇರಿಕೊಂಡರೆ ಬಹು ದೊಡ್ಡ ಅನಾಹುತಕ್ಕೆ ಎಡೆಗೊಟ್ಟಂತೆ ಆಗುತ್ತದೆ ಎಂದು ಆಲೋಚನೆ ಮಾಡಿದನು. ದೀಲೇರ್‌ಖಾನನಿಗೆ ಯಾವ ಉತ್ತರವನ್ನೂ ಕೊಡಲಿಲ್ಲ.

ಹೀಗೆ ಬಹು ದಿನಗಳು ಕಳೆಯಲಿಲ್ಲ. ದಿಲೇರ್‌ಖಾನನು ತನ್ನನ್ನು ಅಲಕ್ಷ್ಯ ಮಾಡುತ್ತಾನೆಂದೂ, ದುರುದ್ದೇಶ್ಯದಿಂದ ಸುಳ್ಳು ಸಮಾಚಾರಗಳನ್ನು

ಹರಡಿ ಅಪಮಾನಕ್ಕೆ ಗುರಿಪಡಿಸುತ್ತಿದ್ದಾನೆಂದೂ, ದಿಲೇರ್‌ಖಾನನ ವಿಚಾರಣೆ ನಡೆಸಲು ಅಪ್ಪಣೆಕೊಡಬೇಕೆಂದೂ ಅಜಂಷಹನು ಪತ್ರ ಬರೆದು ಕಳುಹಿಸಿದನು.

ಬಾದಷಹನಿಗೆ ಇಕ್ಕಟ್ಟಿಗೆ ಬಂದಿತು. ದಖ್ಖನ್ನಿನ ಸರ್ವಾಧಿಕಾರಿ, ಆದರಲ್ಲಿಯೂ ಯುವರಾಜ, ಅವನ ಪತ್ರವನ್ನು ಅಲಕ್ಷ್ಯ ಮಾಡುವುದು ದರ್ಬಾರಿನ ಗೌರವಕ್ಕೆ ತಕ್ಕುದಲ್ಲ. ದಿಲೇರ್‌ಖಾನನ್ನು ಬಿಟ್ಟುಕೊಟ್ಟರೆ ಯುವರಾಜನು ವಿಚಾರಣೆಯ ನಾಟಕ ಮಾಡಿ ಅವನನ್ನು ಕೊಲ್ಲಿಸುತ್ತಾನೆ. ಇದಕ್ಕೆಲ್ಲಾ ಶಿವಾಜಿಯ ಕಡೆಯುವರೇ ಕಾರಣ. ಈ ಜಶವಂತ ಸಿಂಹನು ಒಳಗೊಳಗೇ ಪಿತೂರಿ ಮಾಡುತ್ತಾನೆ ಎಂದು ಆಲೋಚನೆ ಮಾಡಿದನು. ಬಾದಷಹನು ಯುವರಾಜನಿಗೆ ಪತ್ರ ಬರೆಸಿ ಕಳುಹಿಸಿಕೊಟ್ಟನು.

‘ಯುವರಾಜ ಆಜಂಷಹನಿಗೆ,

ದಿಲೇರ್ ಖಾನರ ವಿಚಾರಣೆ ನಡೆಸಬಹುದು. ಆದರೆ ಮರ್ಯಾದೆಯಿಂದ ನಡೆಯಬೇಕು. ಮರಾಠಾ ರಾಯಭಾರಿಗಳಾಗಿ ಔರಂಗಾಬಾದಿನಲ್ಲಿರುವ ಪ್ರತಾಪರಾವ್–ನಿಲಾಜೀರಾವ್ ಈ ಇಬ್ಬರು ಸರದಾರರನ್ನು ಸೆರೆಹಿಡಿದು ದೆಹಲಿಗೆ ಕಳುಹಿಸಿಕೊಡಬೇಕು. ಜೋದ್‌ಪುರದ ಮಹರಾಜಾ ಜಶವಂತ ಸಿಂಹನು ಸೈನ್ಯಸಮೇತ ಬರಹಾಂಪುರಕ್ಕೆ ತಕ್ಷಣ ಹೊರಡಬೇಕು.”

ಈ ರೀತಿ ಬಾದಷಹರ ಪತ್ರ ಬಂದಿತು. ಬಾದಷಹನು ‘ಈ ದುರ್ಮಂತ್ರಿಗಳನ್ನು ದೂರವಿಟ್ಟರೆ ಯುವರಾಜನು ಸರಿಹೋಗುತ್ತಾನೆ’ ಎಂದು ಆಲೋಚನೆ ಮಾಡಿ, ಈ ಪತ್ರವನ್ನು ಬರೆಸಿ ಕಳುಹಿಸಿದನು.

ಬಿರಾರಿನಲ್ಲಿದ್ದ ಸಾಂಬಾಜಿಯ ಜಹಗೀರನ್ನು ಜಫ್ತ್ ಮಾಡಬೇಕೆಂದೂ, ಶಿವಾಜಿಗೆ ಡೆಲ್ಲಿಯ ಪ್ರಯಾಣಕ್ಕೆ ಕೊಟ್ಟಿದ್ದ ಒಂದುಲಕ್ಷ ರೂಪಾಯಿಗಳನ್ನು ವಸೂಲು ಮಾಡಬೇಕೆಂದೂ ಹುಕ್ಕುಂ ಆಯಿತು. ಈ ಸಮಾಚಾರಗಳೆಲ್ಲಾ ಶಿವಾಜಿಗೆ ಗುಪ್ತಚಾರರ ಮುಖೇನ ತಿಳಿಯಿತು. ಅವನು ದೂತರನ್ನು ಕಳುಹಿಸಿ ಕೊಟ್ಟನು. “ಸಾಂಬಾಜಿಯು ಮರಾಠಾ ಸೈನ್ಯದೊಡನೆ ಬಿರಾರಿನಿಂದ ತಕ್ಷಣ ಹೊರಟು ಬರಬೇಕು. ಔರಂಗಾಬಾದಿನಲ್ಲಿದ್ದ ಪ್ರತಾಪರಾವ್–ನೀಲಾಜೀರಾವ್ ಇವರು ತಕ್ಷಣ ರಾಯಘಡಕ್ಕೆ ಬರಬೇಕು” ಎಂದು ಶಿವಾಜಿಯ ದೂತರು ತಿಳಿಯಪಡಿಸಿದರು. ಸೈನ್ಯ ಸಮೇತನಾಗಿ ಸಾಂಬಾಜಿಯು ಏಕಾ ಏಕೀ ಮಹಾರಾಷ್ಟ್ರಕ್ಕೆ ಬಂದು ತಲುಪಿದನು. ಔರಂಗಾಬಾದಿ

ನಲ್ಲಿದ್ದ ರಾಯಭಾರಿಗಳು ಇದ್ದಕ್ಕಿದ್ದಂತೆ ಮಾಯವಾಗಿ ಹೋದರು. ಡೆಲ್ಲಿಯಿಂದ ಯುವರಾಜನಿಗೆ ಬಾದಷಹನ ಆಜ್ಞಾಪತ್ರವು ಬಂದಿತು. ಯುವರಾಜನು ಅದನ್ನು ಯಾರಮೇಲೆ ಜಾರಿ ಮಾಡಬೇಕು. ಹಕ್ಕಿಗಳೆಲ್ಲಾ ಬಲೆಯಿಂದ ಹಾರಿಹೋಗಿವೆ. ಯುವರಾಜನು ಈ ಪ್ರಸಂಗದಲ್ಲಿ ಒಳಗೊಳಗೇ ಸಂತೋಷಪಡುತ್ತಾ ಹೊರಗಡೆ ಬಾದಷಹರಿಗೆ ಅತ್ಯಂತ ವಿನಯದಿಂದ ವಿಷಾದವನ್ನು ವ್ಯಕ್ತಪಡಿಸಿ ಪ್ರತ್ಯುತ್ತರ ಬರೆದು ಕಳುಹಿಸಿದನು.

ಬಾದಷಹನು ಈ ಸಮಾಚಾರ ಕೇಳಿ ತುಟಿ ಕಚ್ಚಿಕೊಂಡನು. ಈ ಮರಾಠರು ಎಂತಹ ಕಳ್ಳರು. ಹೇಗೆಯೋ ನುಗ್ಗಿಬರುತ್ತಾರೆ: ಹೇಗೆಯೋ ತಪ್ಪಿಸಿಕೊಂಡು ಹಾರಿಹೋಗುತ್ತಾರೆ. ಈ ಶಿವಾಜಿಯನ್ನು ಹೇಗಾದರೂ ಬಂಧಿಸಲೇಬೇಕೆಂದು ಪಣತೊಟ್ಟನು. ದಾವೂದ್‌ಖಾನನೂ, ದಿಲೇರ್‌ಖಾನನೂ ಔರಂಗಾಬಾದಿಗೆ ಹೋಗಬೇಕೆಂದು ಅಪ್ಪಣೆ ಕಳುಹಿಸಿದನು.

ಮೊಹಬತ್‌ಖಾನ್ ಎಂಬ ಪ್ರಸಿದ್ಧ ಸೇನಾಧಿಪತಿಯನ್ನು ಬರಹಾಂಪುರಕ್ಕೆ ಕಳುಹಿಸಿಕೊಟ್ಟನು. ಆ ಸೇನಾಧಿಪತಿಯು ದಖ್ಖನ್ನಿಗೆ ಹೊರಡುವಾಗ ಬಾದಷಹನು ಅವನಿಗೆ ಖುದ್ದಾಗಿ ಭೇಟಿಯಿತ್ತು 'ಯುವರಾಜರಿಗೂ, ದಿಲೇರ್‌ಖಾನನಿಗೂ ಏನೋ ಸ್ವಲ್ಪ ವೈಮನಸ್ಯ ಉಂಟಾಗಿದೆ. ಅದನ್ನು ನೀನು ಸರಿಪಡಿಸಬೇಕು. ಅರ್ಥಾತ್, ಯಾರ ಕಡೆ ತಪ್ಪಿದೆಯೆಂಬುದನ್ನು ಗೋಪ್ಯವಾಗಿ ನಮಗೆ ತಿಳಿಸಬೇಕು' ಎಂದು ಅಪ್ಪಣೆ ಮಾಡಿ ಕಳುಹಿಸಿದನು.

ಮೊಹಬತ್‌ಖಾನನು ಬರಹಾಂಪುರಕ್ಕೆ ಬಂದು ಸೇರುವ ಮುಂಚೆಯೇ 'ಬಾದಷಹರ ಅಪ್ಪಣೆಯಾಗಿದೆ. ಔರಂಗಾಬಾದಿಗೆ ಬಂದು ಹಾಜರಾಗಬೇಕು ಎಂಬುದಾಗಿ ಆಜ್ಞಾಪತ್ರವನ್ನು ಬರೆಸಿ, ದಿಲೇರ್‌ಖಾನನಿಗೆ ಕಳುಹಿಸಿಕೊಟ್ಟನು' ದಿಲೇರ್‌ಖಾನನ ತಂತ್ರಗಳೆಲ್ಲಾ ವ್ಯರ್ಥವಾದ ಹಾಗಾಯಿತು. ಯುವರಾಜನ ಮೇಲೆ ತಪ್ಪು ಹೊರಿಸಲು ಅವನಲ್ಲಿ ಏನೂ ಆಧಾರಗಳಿಲ್ಲ. 'ಸರ್ವಾಧಿಕಾರಿ ಯುವರಾಜನ ಆಜ್ಞೆಯನ್ನು ಮೀರಲಾಗುವುದಿಲ್ಲ. ಅದರಲ್ಲಿಯೂ ಬಾದಷಹರ ಅಪ್ಪಣೆಯಾಗಿದೆಯೆಂದು ಬರೆಸಿದ್ದಾನೆ. ಆ ಅಪ್ಪಣೆಯು ಅನುಲಂಘ್ಯವಾದುದು. ನಾನು ಯುವರಾಜನ ಸಮ್ಮುಖಕ್ಕೆ ಹೋದರೆ ಅಪಮಾನವಾಗುತ್ತದೆ' ಅಥವಾ ಮೃತ್ಯುವೇ ಸನ್ನಿಹಿತವಾದರೂ ಆಶ್ಚರ್ಯವೇನೂ ಇಲ್ಲ. ಈ ಮೊಗಲ್ ಸಾಮ್ರಾಜ್ಯದಲ್ಲಿ ಎಷ್ಟು ಪ್ರತಾಪಶಾಲಿಯಾದರೇನು?

ಎಷ್ಟು ಸ್ವಾಮಿನಿಷ್ಠೆಯಿಂದ ಸೇವೆಮಾಡಿದರೇನು ? ಎಂದಾದರೊಂದು ದಿನ ಅಪಮಾನ–ಮರಣ. ಇದು ಯಾರಿಗೆ ತಪ್ಪಿದೆ ? ಜಯಸಿಂಹ ಮಹಾರಾಜರಿಗೆ ಬಂದ ಗತಿಯೇ ನನಗೂ ಬರಬಹುದು' ಎಂದು ಚಿಂತಿಸುತ್ತಾ ಮೆಲ್ಲಮೆಲ್ಲಗೆ ಮೊಕ್ಕಾಂಗಳನ್ನು ಮಾಡುತ್ತಾ ಔರಂಗಾಬಾದಿನ ಕಡೆಗೆ ಬರುತ್ತಿದ್ದನು.

ಔರಂಗಾಬಾದಿಗೆ ಮೂವತ್ತು ಮೈಲಿಗಳ ದೂರದಲ್ಲಿ ತನ್ನ ಸೈನ್ಯವನ್ನು ಬೀಡುಬಿಟ್ಟಿದ್ದನು. ಅವನ ಕಡೆ ಗುಪ್ತಚಾರನು ಔರಂಗಾಬಾದಿನಿಂದ ಸಮಾಚಾರಗಳನ್ನು ತಂದರು. "ಹುಜೂರ್, ಯುವರಾಜರ ಸಮ್ಮುಖಕ್ಕೆ ನೀವು ಹೋಗುವುದು ಸರ್ವಥಾ ಕ್ಷೇಮಕರವಾದುದಲ್ಲ. ನೀವು ಬಾದಷಹರಿಗೆ ಏನೇನೋ ಸುಳ್ಳು ಸಮಾಚಾರದ ಪತ್ರಗಳನ್ನು ಬರೆದಿದ್ದೀರೆಂದೂ, ಅದರ ಬಗ್ಗೆ ದರಬಾರಿನಲ್ಲಿ ಯುವರಾಜರೇ ವಿಚಾರಣೆ ನಡೆಸುತ್ತಾರೆಂದೂ ಔರಂಗಾಬಾದಿನಲ್ಲಿ ಎಲ್ಲರೂ ಮಾತನಾಡುತ್ತಾರೆ" ಎಂದು ದೂತರು ಅರಿಕೆ ಮಾಡಿದರು.

ದಿಲೇರ್‌ಖಾನನಿಗೆ ಬೇರೆ ಪ್ರಮಾಣಗಳು ಬೇಕಾಗಿರಲಿಲ್ಲ. ಮೊದಲೇ ಯುವರಾಜನು ತನ್ನ ಮೇಲೆ ಕೋಪಗೊಂಡಿದ್ದಾನೆ. 'ನಾನು ಬಾದಷಹರಿಗೆ ಬರೆದಿರುವ ಪತ್ರದ ಸಮಾಚಾರ ಊರಲ್ಲೆಲ್ಲಾ ಹರಡಿದೆ. ವಿಚಾರಣೆ ಮಾಡುವವನೂ ಯುವರಾಜನೇ, ಶಿಕ್ಷೆ ವಿಧಿಸುವವನೂ ಯುವರಾಜನೇ, ಎಂದು ಚಿಂತೆಗೊಳಗಾಗಿ ಆ ಸ್ಥಳದಲ್ಲಿಯೇ ಕಾಹಿಲೆಯ ನೆಪವನ್ನು ಹಾಕಿಕೊಂಡು ಕಾಲಹರಣ ಮಾಡತೊಡಗಿದನು.

ಬಾದಷಹರಿಗೆ ಮತ್ತೆ ಮತ್ತೆ ವಿಜ್ಞಾಪನಾ ಪತ್ರಿಕೆಗಳನ್ನು ಬರೆದು ಕಳುಹಿಸಿದನು. ಯಾವ ಪ್ರತ್ಯುತ್ತರವೂ ಬರಲಿಲ್ಲ. ಮೊದಲೇ ಬಾದಷಹರಿಂದ ಆಜ್ಞಪ್ತನಾಗಿದ್ದ ಮೊಹಬತ್‌ಖಾನನು ಬರಹಾಂಪುರದಿಂದ ಔರಂಗಾಬಾದಿಗೆ ಬಂದಿಳಿದನು.

ಯುವರಾಜನು ಸಹಜವಾಗಿಯೇ ಸೌಜನ್ಯಶೀಲ, ಉದಾರಿ. ಅವನು ಮೊಹಬತ್‌ಖಾನನಿಗೆ ಅತ್ಯಂತ ಗೌರವದಿಂದ ಆತಿಥ್ಯಗಳನ್ನು ಸಿದ್ಧಗೊಳಿಸಿದ್ದನು. ನಾಲ್ಕಾರು ದಿವಸಗಳು ಔತಣ, ಗಾನ, ಮೇಳಗಳ, ಸಮಾರಂಭದಿಂದ ಅರಮನೆಯೆಲ್ಲವೂ ಜಗಜಗಿಸುತ್ತಿದ್ದಿತು. ಮೊಹಬತ್‌ಖಾನನು ಆ ನರ್ತಕಿಯರ ನರ್ತನ, ಗಾಯಕಿಯರಗಾನ, ಇವೆಲ್ಲವನ್ನು ಕಂಡು

ಮೋಹಪರವಶನಾಗಿದ್ದನು. ಈ ಯುವರಾಜನು ಎಂತಹ ಸೌಭಾಗ್ಯಶಾಲಿ, ಎಂತಹ ರಸಿಕ. ಹುಲಿಯ ಕೋರೆಹಲ್ಲುಗಳಲ್ಲಿ ಸಿಕ್ಕಿರುವಂತೆ ಬಾದಷಹನ ಸಹವಾಸ. ಅವನ ಮಗ ಈ ಯುವರಾಜನೊಡನೆ ಸ್ನೇಹ ಮಾಡುವುದು 'ಸೊಗಸಾದ ಸರೋವರದಲ್ಲಿ ರಾಜಹಂಸಗಳೊಡನೆ ಆಟವಾಡಿದಂತೆ' ಎಂದು ಅವನು ಭಾವಿಸಿಕೊಂಡನು. ಮೊಹಬತ್‌ಖಾನನು ತನ್ನ ಬಿಡಾರಕ್ಕಾಗಿ ಸಿದ್ದಗೊಳಿಸಲ್ಪಟ್ಟಿದ್ದ ಅಚ್ಚುಗಟ್ಟಾದ ಅರಮನೆಯ ರಮಣೀಯತೆಯನ್ನು ನೋಡಿ ಅಚ್ಚರಿಗೊಂಡನು.

ಮೊಹಬತ್‌ಖಾನನು ಮಹಾಪರಾಕ್ರಮಿಯೇನೋ ಹೌದು. ಆದರೆ ಅದಕ್ಕಿಂತಲೂ ರಸಿಕಾಗ್ರೇಸರ, ವಿಲಾಸಪ್ರಿಯ. ಅವನಿಗೆ ಮೆಚ್ಚಿಗೆಯಾಗುವಂತೆ ಆ ಅರಮನೆಯಲ್ಲಿ ವಿಲಾಸಿನಿಯರ ಸೌಭಾಗ್ಯವು ಲಭ್ಯವಾಗಿತ್ತು. ಅವನ ಮನಸ್ಸು 'ನನಗೇ ಈ ಯುವರಾಜರ ಆಸ್ಥಾನದಲ್ಲಿಯೇ ಒಂದು ಅಧಿಕಾರ ಕೊಟ್ಟರೆ ನಾನು ನಂದನ ವನದಲ್ಲಿದ್ದಂತೆ ಇಲ್ಲಿರಬಹುದಲ್ಲಾ' ಎಂಬ ಆಸೆಯು ಮನಸ್ಸನ್ನು ಆಕರ್ಷಿಸಿತ್ತು. ನಾಲ್ಕಾರು ದಿನಗಳು ಕಳೆದರೂ ಯುವರಾಜನೊಂದಿಗೆ ಯಾವ ರಾಜಕೀಯವನ್ನೂ ಅವನು ಪ್ರಸ್ತಾಪ ಮಾಡಿರಲಿಲ್ಲ. ಆದರೆ ಬಾದಷಹನ ಅಪ್ಪಣೆಯಂತೆ ಮೊಹಬತ್‌ಖಾನನು ಅಲ್ಲಿಗೆ ಬಂದಿದ್ದಾನೆಂಬುದು ಸರ್ವರಿಗೂ ತಿಳಿದ ವಿಷಯವಾಗಿತ್ತು.

ಮೊಹಬತ್‌ಖಾನನು ಯುವರಾಜನ ಭೇಟಿಮಾಡಿ "ಯುವರಾಜ, ಬಾದಷಹರವರು ನನ್ನನ್ನು ನಂಬಿಕೆಯಿಂದ ನಿನ್ನಲ್ಲಿಗೆ ಕಳುಹಿಸಿಕೊಟ್ಟಿದ್ದಾರೆ ಪಂಜಾಬಿನಲ್ಲಿ ದೊಡ್ಡ ದೊಡ್ಡ ದಂಗೆಗಳೆದ್ದಿವೆ. ಈಗ ಮೊಗಲ್ ಸಾಮ್ರಾಜ್ಯದಲ್ಲಿ ಎಲ್ಲಿಯೂ ಅಂತಃಕಲಹಗಳು ಏಳುವುದು ಹಿತಕರವಲ್ಲ. ಇದನ್ನು ನಿನಗೆ ಆಪ್ತತೆಯಿಂದ ತಿಳಿಸಿ, ನಿನಗೂ ದಿಲೇರ್‌ಖಾನನಿಗೂ ಸಖ್ಯಮಾಡಿಸಿ ಬರಬೇಕೆಂದು ನನ್ನನ್ನು ಕಳಿಸಿದ್ದಾರೆ. ನಾನು ಬಾದಷಹರ ಅಭಿಪ್ರಾಯವನ್ನು ನಿನ್ನಲ್ಲಿ ಸ್ಪಷ್ಟವಾಗಿ ತಿಳಿಸಿದ್ದೇನೆ. ಮುಂದೆ ನಿನ್ನ ಇಷ್ಟದಂತೆ ನಡೆಯತಕ್ಕವನು" ಎಂದು ಹೇಳಿದನು.

ಈ ಮಾತುಗಳನ್ನು ಕೇಳುತ್ತಿರುವಾಗ ಯುವರಾಜನ ಮುಖದಲ್ಲಿ ಯಾವ ವ್ಯತ್ಯಾಸವೂ ಕಂಡುಬರಲಿಲ್ಲ. ಆಜಂಷಹನು ಗಾಂಭೀರ್ಯದಿಂದ "ಬಾದಷಹರ ಅಪ್ಪಣೆಯು ಶಿರೋಧಾರ್ಯವಾದದ್ದು. ಪಂಜಾಬಿನ ದಂಗೆಗಳು

ನಮಗೆಷ್ಟು ಕೊರತೆಯನ್ನು ಉಂಟುಮಾಡುತ್ತವೆಯೋ, ಈ ದಖ್ಖನ್ನಿನ ಪರಿಸ್ಥಿತಿಯೂ ಆದಕ್ಕೆ ನೂರರಷ್ಟು ಉಗ್ರವಾಗಿದೆ. ಬಾದಷಹರು ಏನೇ ಮಾಡಲಿ, ಅದನ್ನು ನಾವೆಲ್ಲರೂ ಸಹಿಸಿಕೊಳ್ಳಬೇಕು. ಆದರೆ ಈ ಹಿಂದೂ ಜನ ಏಕೆ ಸಹಿಸುತ್ತಾರೆ? ಇಲ್ಲಿ ಶಿವಾಜಿಯನ್ನು ಈ ದಿಲೇರ್‌ಖಾನನು ರೊಚ್ಚಿಗೆಬ್ಬಿಸಿದ್ದಾನೆ. ಬಿಕನೀರ್‌ನ ರಾಠೋಡನು ಎಷ್ಟಾದರೂ ನಮ್ಮ ಸೇನಾಧಿಪತಿ. ದಿಲೇರ್‌ಖಾನನು ಅವನನ್ನು ಕೊಲೆಮಾಡುತ್ತಿದ್ದ. ಆದು ಮೊಗಲ್ ಸಾಮ್ರಾಜ್ಯದ ಅಂತಃಕಲಹವಲ್ಲವೇ? ಜಯಸಿಂಹ ಮಹಾರಾಜರ ಅಪಮಾನ–ಮರಣಗಳಿಂದ ರಾಜಾಸ್ತಾನವು ಕತ್ತಿ ಮಸೆಯುತ್ತಿದೆ. ಇಂಥಾ ಸಮಯದಲ್ಲಿ ಈ ಸೇನಾಧಿಪತಿಯ ಮೇಲೆ ದಿಲೇರ್‌ಖಾನನು ನಮ್ಮ ಆಪ್ಪಣೆಯಿಲ್ಲದೆ ಕೈಮಾಡಬಹುದೇ? ಅವನನ್ನು ಇಲ್ಲಿ ರಕ್ಷಿಸಿ ಇಟ್ಟಿದ್ದೇನೆ. ನಾನು ಬಾದಷಹರ ಮಗ. ಅಧಿಕಾರದಲ್ಲಿ ಬಾದಷಹರ ಪ್ರತಿನಿಧಿ. ನನ್ನ ಮೇಲೆ ಈ ಖಾನನು ಡೆಲ್ಲಿಯ ದರ್ಬಾರಿಗೆ ಸುಳ್ಳು ಸುಳ್ಳು ದೂರುಗಳನ್ನು ಕೊಟ್ಟಿದ್ದಾನೆ. ನಮ್ಮ ಸೇವಕರಿಗೆಲ್ಲಾ ಇದು ತಿಳಿದು ಹೋಗಿದೆ ಇದಕ್ಕಿಂತಲೂ ಪರಿಹಾಸ್ಯಾಸ್ಪದವಾದ ಮಾತು ಬೇರೊಂದು ಉಂಟೇ? ನನ್ನ ಅಧಿಕಾರದ ರಾಜ್ಯದಲ್ಲಿ ಆ ದಿಲೇರ್ ಖಾನನು ಒಂದು ದಿನವೂ ಇರಕೂಡದು. ಅವನನ್ನು ನಾನು ಬಂದೀಖಾನೆಯಲ್ಲಿಡುತ್ತಿದ್ದೆ. ನಿಮ್ಮ ಮಾತಿಗೆ ಗೌರವಕೊಟ್ಟು ಅವನನ್ನು ನಿಮಗೆ ಒಪ್ಪಿಸುತ್ತೇನೆ. ನೀವು ಅವನನ್ನು ಬಾದಷಹರ ಸಮ್ಮುಖಕ್ಕೆ ಕರೆದುಕೊಂಡು ಹೋಗಬಹುದು. ಪಂಜಾಬಿನ ಯುದ್ಧಕ್ಕಾದರೂ ಕಳುಹಿಸಬಹುದು. ಈಗ ಶಿವಾಜಿಯೊಡನೆ ಮೈತ್ರಿಯಿಂದಿರುವುದೇ ರಾಜ್ಯಕ್ಕೆ ಕ್ಷೇಮ. ಬಾದಷಹರೇ ಒಪ್ಪಿ ಅವನೊಡನೆ ಸಂಧಿಮಾಡಿಕೊಂಡರು. ಆಗ್ರಾದಲ್ಲಿ ಅವನಿಗೆ ಸಂಭವಿಸಿದ ವಿಪತ್ತುಗಳನ್ನೆಲ್ಲಾ ನೀವು ಬಲ್ಲಿರಿ. ಪುನಃ ಅವನಿಗೂ ನಮಗೂ ಸಂಧಿಯಾಯಿತು. ಈ ದಿಲೇರ್‌ಖಾನನ ಪಿತೂರಿಯಿಂದ ಆ ಸಂಧಿಯನ್ನು ಒಡೆಯುವಂತೆ ಬಾದಷಹರು ಆಜ್ಞೆ ಮಾಡಿದರು. ಇದಕ್ಕಿಂತಲೂ ನನಗೆ ಅಪಮಾನವು ಬೇರೊಂದು ಉಂಟೇ? ಈ ದಿಲೇರ್‌ಖಾನನು ನನ್ನ ಎದುರಿಗೆ ಬಂದು ಜಂಭಕೊಚ್ಚುತ್ತಾನೆ. ಯುದ್ಧವನ್ನೇ ಅರಿಯದ ಹೆಣ್ಣುಗಳಿಗೆ ಹೇಳುವಂತೆ ಜಯಸಿಂಹ ಮಹಾರಾಜರ ಬ್ರಹ್ಮಾಂಡ ಸೈನ್ಯ ಏನುಮಾಡುತ್ತಿತ್ತು. ಆ ಮಹಾರಾಜರು ಪರಲೋಕವನ್ನು ಐದಿದ್ದರೂ ಅಂದು ಪ್ರಾಣಗಳ

ಮೇಲೆ ಹಂಗುತೊರೆದು ಯುದ್ಧ ಮಾಡಿದ ವೀರ ರಜಪೂತರು ಇನ್ನೂ ನಮ್ಮ ಸೈನ್ಯದಲ್ಲಿ ಇದ್ದಾರೆ. ಈ ದಿಲೇರ್‌ಖಾನನ ಮಾತುಗಳು ಅವರನ್ನು ರೊಚ್ಚಿಗೆಬ್ಬಿಸವೇ ? ಇವನೆಲ್ಲಿಯೋ ಕೀಳು ಜಾತಿಯ ಮನುಷ್ಯ. ಇಂಥವನನ್ನು ನಾವು ಗೌರವಿಸಲಾಗದು. ಇಲ್ಲಿ ನನ್ನ ಮಾತೇ ಅಖೈರು ಮಾತು. ನೀವು ದಿಲೇರ್‌ಖಾನನನ್ನು ನೋಡುವುದು ಕೂಡಾ ನನ್ನ ಮನಸ್ಸಿಗೆ ಒಪ್ಪಿತವಿಲ್ಲ. ಅವನನ್ನು ಇಲ್ಲಿಗೆ ಹಿಡಿತರಿಸುತ್ತೇನೆ. ಭರದರ್ಬಾರಿನಲ್ಲಿ ನೀವೇ ಕೇಳಿರಿ. ಏನು ಹೇಳುತ್ತಾನೋ ಹೇಳಲಿ. ನ್ಯಾಯಸಮ್ಮತವಾದ ಶಿಕ್ಷೆಯಿದ್ದೇ ಇದೆ" ಎಂದು ಹೇಳಿದನು.

ಮೊಹಬತ್‌ಖಾನನಿಗೆ ಧರ್ಮಸಂಕಟಕ್ಕೆ ಇಟ್ಟುಕೊಂಡಿತು. ಅವನು ಯುವರಾಜನ ಕೈಮೇಲೆ ಕೈ ತಟ್ಟಿ 'ಯುವರಾಜ, ನಿನ್ನ ಮಾತುಗಳು ಅಕ್ಷರಶಃ ಯಥಾರ್ಥವಾಗಿದೆ. ಉಚ್ಚ ರಾಜನೀತಿ ಗರ್ಭಿತವಾಗಿದೆ. ಆದರೆ ಬಾದಷಹರ ಆಜ್ಞೆಯನ್ನು ನೀನಾದರೂ ಉಲ್ಲಂಘಿಸಿ ಜಯಿಸಿಕೊಳ್ಳಬಲ್ಲೆ. ನನ್ನ ಪಾಡೇನು ? ನಾನು ದಿಲೇರ್‌ಖಾನನನ್ನು ಕಂಡು ಮಾತನಾಡಿ ಬುದ್ಧಿ ಹೇಳಿ ಬರುತ್ತೇನೆ. ಆಮೇಲೆ ಅವನ ಹಣೆಯ ಬರಹ' ಎಂದು ಹೇಳಿದನು.

ಮೊಹಬತ್‌ಖಾನನು ಪರಿವಾರ ಸಮೇತನಾಗಿ ದಿಲೇರ್‌ಖಾನನು ಶಿಬಿರ ಬಿಟ್ಟಿದ್ದ ಸ್ಥಳಕ್ಕೆ ಪ್ರಯಾಣ ಮಾಡಿದನು.

ಮೂವತ್ತು ಮೈಲಿಗಳ ದೂರದಲ್ಲಿ ದಿಲೇರ್‌ಖಾನನ ಶಿಬಿರವಿತ್ತು. ಸಂಧ್ಯಾಕಾಲದ ಸಮಯಕ್ಕೆ ಮೊಹಬತ್‌ಖಾನನು ಪಲ್ಲಕ್ಕಿಯ ಮೇಲೆ ಕುಳಿತು ಆ ಶಿಬಿರವನ್ನು ತಲುಪಿದನು.

ದಿಲೇರ್‌ಖಾನನು ಆ ಶಿಬಿರದ ಮಹಾದ್ವಾರದಲ್ಲಿಯೇ ಬಂದು ನಿಂತು ಮೊಹಬತ್‌ಖಾನನನ್ನು ಮರ್ಯಾದೆಯಿಂದ ಎದುರುಗೊಂಡು ಶಿಬಿರದೊಳಗೆ ಕರೆದುಕೊಂಡು ಹೋದನು.

ಮೊಹಬತ್ ಖಾನನಿಗಾಗಿ ಸಿದ್ಧಗೊಳಿಸಿದ್ದ ಭವ್ಯವಾದ ಗುಡಾರದಲ್ಲಿ ಅವನನ್ನು ಇಳಿಸಿ,"ಖಾ‌ನ್ ಸಾಹೇಬರೇ, ತಾವು ವಿಶ್ರಾಂತಿ ತೆಗೆದುಕೊಳ್ಳಿರಿ. ತಮ್ಮ ಆಗಮನವನ್ನೇ ನಿರೀಕ್ಷಿಸುತ್ತಿದ್ದೆ. ನನ್ನ ಶಕ್ತ್ಯಾನುಸಾರ ಆತಿಥ್ಯದ ಏರ್ಪಾಡುಗಳನ್ನು ಮಾಡಿದ್ದೇನೆ. ನಾನು ಇಂದು ಮೊಗಲ್ ಬಾದಷಹರ ಮುಂದೆ ಅಪರಾಧಿಯಂತಿದ್ದೇನೆ. ನಾನು ಬಾದಷಹರಲ್ಲಿ ಮಾಡಿರುವ ಪಾದ

ಸೇವೆಗೆ ನನ್ನ ನ್ಯಾಯವನ್ನು ಆಲೈಸಿ ತಮ್ಮಂಥ ದೊಡ್ಡವರು ಒಂದು ಮಾತು ಹೇಳಿದರೆ ಕೃತಾರ್ಥನೆಂದು ಭಾವಿಸುತ್ತೇನೆ. ನನಗೆ ಅಧಿಕಾರದ ಆಸೆಯಿಲ್ಲ ಸಂಪತ್ತಿನ ಆಸೆಯಿಲ್ಲ. ತರುಣ ವಯಸ್ಸಿನವನಾದರೂ ಜೀವನದಲ್ಲಿ ಆಸೆಯಿಲ್ಲ. ನನ್ನ ನ್ಯಾಯವನ್ನು ತಾವು ಸಾವಧಾನವಾಗಿ ಲಾಲಿಸಿ, ನಾಳೆ ತೀರ್ಪು ಕೊಡಬಹುದು" ಎಂದು ಹೇಳಿ ನೆಲಮುಟ್ಟ ಸಲಾಂ ಮಾಡಿ ಹೊರಟು ಹೋದನು.

ಮೊಹಬತ್‌ಖಾನನಿಗೆ ರಾತ್ರಿಯೆಲ್ಲಾ ನಿದ್ದೆ ಹತ್ತಲಿಲ್ಲ. "ಈ ಮೊಗಲ್ ಸಾಮ್ರಾಜ್ಯವು ಅಲ್ಲಾನ ಅನುಗ್ರಹದಿಂದ ಬೆಳೆಯುತ್ತಿದೆ ಈ ಹಿಂದೂಸ್ಥಾನ ದಲ್ಲಿ ಅಲ್ಲಲ್ಲಿ ಕಿರುಕುಳಗಳಿದ್ದರೂ ಔರಂಗ್‌ಜೇಬನನ್ನು ಎದುರಿಸಬಲ್ಲ ಧೀರ ಪುರುಷನು ಹುಟ್ಟಿಯೇ ಇಲ್ಲ. ಆದರೇನು ? ನ್ಯಾಯಾನ್ಯಾಯಗಳ ವಿಮರ್ಶೆಯೇ ಇಲ್ಲ. ಖುದಾನು ಈ ವಿಷಯದಲ್ಲಿ ಕಣ್ಣು ಮುಚ್ಚಿಕೊಂಡು ಕುಳಿತಿದ್ದಾನೆ. ಈ ದಿಲೇರ್‌ಖಾನನು ನಿಜವಾಗಿಯೂ ಶೂರ. ಅನೇಕ ಯುದ್ಧಗಳನ್ನು ಜಯಿಸಿದ್ದಾನೆ. ಸ್ವಾಮಿನಿಷ್ಠ ಸರದಾರ. ನಾನು ಪೂರ್ತಿಯಾಗಿ ಇವನ ಕಡೆ ಸೇರಿದರೂ ಇವನಿಗೆ ನ್ಯಾಯವು ದೊರಕುವುದೇ ಇಲ್ಲ. ಆದರೆ ಇವನ ಲ್ಲಿಯೂ ಒಂದು ತಪ್ಪಿದೆ. ಯುವರಾಜನಲ್ಲಿ ನಮ್ರತೆಯಿಂದ ಇರಬೇಕೆಂಬು ದನ್ನು ಇವನು ಕಲಿತೇ ಇಲ್ಲ. ಶಿವಾಜಿಯ ಮೇಲೆ ಇವನಿಗೆ ಆಗ್ರಹವಿದ್ದರೆ ಅದನ್ನು ತೀರಿಸಿಕೊಳ್ಳಲು ಸಮಯ ಕಾಯಬೇಕು. ಆ ಕ್ರೋಧದಿಂದ ಯುವ ರಾಜನಿಗೆ ಪ್ರತಿಕಕ್ಷಿಯಾಗಿ ನಿಂತರೆ ಇವನನ್ನು ಬುದ್ಧಿವಂತನೆನ್ನಲಾದೀತೆ? ಒಂದು ಪಕ್ಷ ಬಾದಷಹನೇ ಪ್ರಸನ್ನನಾಗಿ ಒಲಿದರೂ ಏನಾದೀತು ? ಪ್ರತ್ಯಕ್ಷ ವಾಗಿ ಶಿವಾಜಿಯೂ ಈ ಯುವರಾಜನೂ ಒಂದಾಗಿ ನಿಂತರೆ ಮೊಗಲ್ ಸಾಮ್ರಾಜ್ಯದಲ್ಲಿ ಅರ್ಧ ನಷ್ಟವಾದಂತೆಯೇ. ಈ ಮೊಗಲ್ ಸಾಮ್ರಾಟರ ಪರಂಪರೆಯ ಕತೆಯು ನಮ್ಮ ಕಣ್ಣು ಮುಂದೆ ಇದ್ದೇ ಇದೆ. ತಂದೆ ಮಕ್ಕಳ ವಿರೋಧವು ಮೊಗಲ್ ಬುಡಕಟ್ಟಿನಲ್ಲಿಯೇ ಇದೆ. ಇದನ್ನು ಅರಿತುಕೊಳ್ಳು ವಷ್ಟು ಚಾಣಾಕ್ಷನಲ್ಲವೆ ಈ ಬಾದಷಹನು ? ಏನೇ ಆಗಲಿ, ನಾನು ಈ ಸಾರಿ ಯಶಸ್ವಿಯಾಗಬೇಕಾದರೆ ಇವನನ್ನು ಸಮಾಧಾನಗೊಳಿಸಬೇಕು. ಸಾಧ್ಯ ವಾದರೆ ಯುವರಾಜನ ಪಾದಗಳಲ್ಲಿ ಕೆಡವಬೇಕು. ಇಲ್ಲದಿದ್ದರೆ ಸದ್ಯಕ್ಕೆ ಉಪಾಯಾಂತರದಿಂದ ಬಚಾಯಿಸಿ ಇವನನ್ನು ದೆಹಲಿಗಾದರೂ ಸಾಗಿಸ

ಬೇಕು" ಎಂದುಕೊಂಡನು. ಹೀಗೆ ಮನಸ್ಸಿನ ಮೇಲೆ ಆಲೋಚನೆಗಳ ಮೇಲೆ ಆಲೋಚನೆಗಳು ಧುಮುಕಿ ನಿದ್ರೆ ಹತ್ತದೆ ರಾತ್ರಿಯು ಕಳೆದು ಬೆಳಕು ಹರಿಯಿತು.

ಪ್ರಾತಃಕಾಲದಲ್ಲಿ ಮೊಹಬತ್‌ಖಾನನು ನಿತ್ಯ ವಿಧಿಗಳನ್ನು ತೀರಿಸಿಕೊಂಡು ದಿಲೇರ್‌ಖಾನನಿಗೆ ಹೇಳಿಕಳುಹಿಸಿದನು.

ದಿಲೇರ್‌ಖಾನನು ಬಂದು ಮುಜರೆ ಮಾಡಿ ಕುಳಿತುಕೊಂಡನು.

ಮೊಹಬತ್‌ಖಾನನು "ದಿಲೇರ್‌ಖಾನ್, ಬಾದಷಹರಿಗೆ ನಿನ್ನ ಮೇಲೆ ಅನುಗ್ರಹವಿದೆ. ಆದಕ್ಕಾಗಿಯೇ ನನ್ನನ್ನು ಖುದ್ದಾಗಿ ಕಳುಹಿಸಿಕೊಟ್ಟಿದ್ದಾರೆ. ವಿಷಯಗಳೆಲ್ಲಾ ನನಗೆ ವಿವರವಾಗಿ ಗೊತ್ತಿದೆ. ಬಾದಷಹರು ನಿನ್ನ ಪತ್ರಗಳನ್ನೆಲ್ಲಾ ನನಗೊಪ್ಪಿಸಿದ್ದಾರೆ. ಅವರ ಅನುಗ್ರಹ ಮಾತ್ರವಲ್ಲ, ನನ್ನ ವಿಶ್ವಾಸವೂ ನಿನ್ನ ಮೇಲಿದೆಯೆಂದು ದೃಢವಾಗಿ ನಂಬು. ನಿನ್ನ ಮನಸ್ಸಿನಲ್ಲಿರುವುದನ್ನು ಬಿಚ್ಚಿ ಹೇಳು. ನನಗೆ ತೋರಿದ ಹಿತವಚನಗಳನ್ನು ಹೇಳುತ್ತೇನೆ" ಎಂದು ಹೇಳಿದನು.

ದಿಲೇರ್‌ಖಾನನು "ಸರಿ. ಹೆಚ್ಚು ಮಾತುಗಳಿಂದ ಏನು ಫಲ. ನಾನು ಬಾದಷಹರಿಗೆ ಪತ್ರ ಬರೆಯುವಷ್ಟು ದೊಡ್ಡ ಮನುಷ್ಯನಲ್ಲ ಆದರೂ ನನ್ನ ಬುದ್ಧಿಗೆ ತೋಚಿದ್ದನ್ನು ಅಂತರಾತ್ಮ ಸಾಕ್ಷಿಯಾಗಿ ಬಾದಷಹರಲ್ಲಿ ಬಿನ್ನಹ ಮಾಡಿದ್ದೇನೆ. ಅದು ಸಾಹಸಕಾರ್ಯವಾದರೂ ನನ್ನಂಥ ಪ್ರಭುನಿಷ್ಠ ಸೇವಕನ ಕರ್ತವ್ಯವೆಂದು ಭಾವಿಸಿದ್ದೇನೆ. ತಾವು ಏನು ಹೇಳಿದರೂ ಶಿರಸಾ ವಹಿಸಲು ಸಿದ್ಧನಾಗಿದ್ದೇನೆ" ಎಂದನು.

ಮೊಹಬತ್‌ಖಾನನು ತಲೆದೂಗಿ ನಗುತ್ತಾ "ದಿಲೇರ್‌ಖಾನ್, ನೀನು ಧೀರ ಸೇನಾಧಿಪತಿಯೆಂಬುದಕ್ಕೆ ಬೇರೆ ಪ್ರಮಾಣಗಳು ಬೇಕಿಲ್ಲ. ಆದರೆ ದರ್ಬಾರಿನ ರಾಜಕೀಯವು ವಿಚಿತ್ರವಾಗಿದೆ. ನೀನು 'ಯುವರಾಜನು ಶಿವಾಜಿಯೊಂದಿಗೆ ಸ್ನೇಹ ಬೆಳೆಸಿದ್ದಾನೆ'ಂದು ಬರೆದಿದ್ದೀಯೆ. ಅದನ್ನು ನಂಬಿ ಬಾದಷಹರು ಸಾಂಬಾಜಿಯ ಮೇಲೆಯೂ ಯುವರಾಜನ ದರ್ಬಾರಿನಲ್ಲಿದ್ದ ರಾಯಭಾರಿಗಳ ಮೇಲೆಯೂ ಉಗ್ರಕ್ರಮ ಕೈಗೊಳ್ಳುವಂತೆ ಆಜ್ಞೆ ಮಾಡಿದರು. ಅದರ ಪರಿಣಾಮವು ವಿಷಮಗೊಂಡಿದೆ. ಯುವರಾಜನು ಡೆಲ್ಲಿಯ ದರ್ಬಾರಿನಲ್ಲಿ ವಿಚಾರಣೆ ಮಾಡಬೇಕೆಂದು ಹಠಹಿಡಿದಿದ್ದಾನೆ. ಹಾಗೆ ವಿಚಾರಣೆ

ಯಾದರೆ ನಿನ್ನ ಗತಿ ಏನಾಗುತ್ತದೆಂದು ಒಂದು ಬಾರಿಯಾದರೂ ಯೋಚನೆ ಮಾಡಿದ್ದೀಯಾ ? ಆ ದರ್ಬಾರಿನಲ್ಲಿ ರಾಜೀ ಸಾಹೇಬರೂ, ಮೌಲ್ವಿಗಳೂ ಹಿಂದೂ ನರಪತಿಗಳೂ ನಿನ್ನ ಕಡೆಗೆ ತೀರ್ಪುಕೊಡುವ ಸಂಭವವು ಎಳ್ಳಷ್ಟಾದರೂ ಉಂಟೇ ? ಆ ದರ್ಬಾರಿನಲ್ಲಿ ನೀನು ಬಂದು ನಿಂತು ನಿನ್ನ ಪತ್ರಗಳನ್ನು ಸಾಬೀತು ಮಾಡಿಕೊಡಬಲ್ಲೆಯಾ ? ಹೇಳು. ಆ ದರ್ಬಾರಿನ ಮಾತು ಹಾಗಿರಲಿ, ನಾನು ಅಂತರಂಗದಲ್ಲಿ ನಿನ್ನೊಡನೆ ಮಾತನಾಡುತ್ತಿದ್ದೇನೆ. ನಾನು ನಿನ್ನ ಕಡೆಯವನೆಂದೇ ಪ್ರಮಾಣ ಮಾಡಿ ಹೇಳುತ್ತೇನೆ. ಉತ್ತರ ಕೊಡು. ಹೇಗೆ ಸಾಬೀತು ಮಾಡಬಲ್ಲೆ ?"

ದಿಲೇರ್‌ಖಾನನು ಸ್ವಲ್ಪಹೊತ್ತು ಅವಾಕ್ಕಾಗಿದ್ದನು. ಮುಖ ಬಿಳಿಚಿಕೊಂಡಿತು. "ಹುಜೂರ್, ಖಾನ್‌ಸಾಹೇಬರೇ, ಇಂತಹ ಸ್ನೇಹಗಳನ್ನು ಸಾಬೀತು ಮಾಡಿಕೊಡುವುದು ಕೊಂಚ ಕಷ್ಟವೇ ಸರಿ. ಇದನ್ನೆಲ್ಲಾ ನಡೆನುಡಿಗಳಿಂದ ಊಹಿಸಿಕೊಳ್ಳಬೇಕು. ಒಂದೇ ಒಂದು ಉದಾಹರಣೆಯನ್ನು ಕೊಡಬಲ್ಲೆ ಈ ಶಿವಾಜಿಯು ಬಾದಷಹರಿಗೆ ಅಪಮಾನಮಾಡಿ ಬಂದಿದ್ದಾನೆ. ಇವನನ್ನು ನಾನು ಹಿಡಿದು ತರುತ್ತೇನೆ. ಅಪ್ಪಣೆಕೊಡಿ, ಎಂದು ಯುವರಾಜರಲ್ಲಿ ಅನೇಕ ಬಾರಿ ಬೇಡಿಕೊಂಡೆ. ಅವರು ಅವಕಾಶ ಕೊಡಲಿಲ್ಲ. ಮಹಾರಾಜಾ ಜಶವಂತಸಿಂಹರ ಕುತಂತ್ರಕ್ಕೆ ಒಳಗಾಗಿ ಪುನಃ ಬಾದಷಹರೊಡರೆ ಸಂಧಿಮಾಡಿಸಿಬಿಟ್ಟರು. ಆ ಹುಡುಗ ಸಾಂಬಾಜಿ ಯಾವ ಯುದ್ಧವನ್ನು ಗೆದ್ದಿದ್ದಾನೆ. ಅವನಿಗೆ ಅಲಂಕರಿಸಿದ ಪಟ್ಟದಾನೆ, ವಜ್ರದ ಹಿಡಿಯ ಕತ್ತಿಯನ್ನು ಮರ್ಯಾದೆ ಮಾಡಿಸಿ, ಐದುಸಾವಿರ ಫೌಜಿನ ಅಧಿಕಾರಿಯಾಗಿ ಮಾಡಿ, ಬಿರಾರಿನಲ್ಲಿ ಎರಡು ಜಹಗೀರಿಗಳನ್ನು ಕೊಡಿಸಿಬಿಟ್ಟರು. ಮರಾಠಾ ಸೇನಾಧಿಪತಿಗಳಿಬ್ಬರನ್ನು ದರ್ಬಾರಿನಲ್ಲಿ ರಾಯಭಾರಿಗಳಾಗಿ ಇಟ್ಟುಕೊಂಡರು. ಆ ಮರಾಠಾ ಸೇನಾಧಿಪತಿ ನೇತಾಜಿಯನ್ನು ಗೌರವಿಸಿ ಡೆಲ್ಲಿಯ ದರ್ಬಾರಿಗೆ ಕಳುಹಿಸಿಕೊಟ್ಟರು. ಇದೆಲ್ಲಾ ಸ್ನೇಹದ ನಿದರ್ಶನಗಳಲ್ಲವೆ ? ಇದಕ್ಕಿಂತಲೂ ಮತ್ತೇನು ಬೇಕು?" ಎಂದು ಕೇಳಿದನು.

ಮೊಹಬತ್‌ಖಾನನು ಮನಸ್ಸಿನಲ್ಲಿಯೇ 'ಭಲಾ, ಭಲಾ' ಎಂದುಕೊಂಡನು. ಇವನು ಹೇಳುತ್ತಿದ್ದರೆ ಇವೆಲ್ಲಾ ನಿಜವೆಂದೇ ಕಾಣುತ್ತದೆ ಎಂದು ಭಾವಿಸಿದನು. "ದಿಲೇರ್ ಖಾ, ಈ ಮಾತುಗಳನ್ನೆಲ್ಲಾ ನಾನು ನಂಬುತ್ತೇನೆ.

ನಾನೂ ನೀನೂ ಇಬ್ಬರೂ ಹೋಗಿ ಬಾದಷಹರ ದರ್ಬಾರಿನಲ್ಲಿ ಈ ಅಭಿಯೋಗ ವನ್ನು ಮಂಡಿಸಿದರೂ ನಮಗೆ ಜಯವಾಗುವುದಿಲ್ಲ. ಖಾನ್, ಆದರೆ ಈ ವಿವಾದಕ್ಕೆ ಮತ್ತೊಂದು ಪಕ್ಷವಿದೆ. ಶಿವಾಜಿಯು ಸಿಸ್ಸತ್ವನೆಂದು ನೀನು ಹೇಳುವುದಿಲ್ಲವಷ್ಟೆ. ಆ ಮಾತನ್ನು ಹೇಳಲು ಡೆಲ್ಲಿಯ ದರ್ಬಾರಿನಲ್ಲಿ ಯಾರಿಗೂ ಬಾಯಿಲ್ಲ. ಆದರಿಂದಲೇ ಬಾದಷಹರು ಎಲ್ಲ ಸಿಟ್ಟನ್ನೂ ನುಂಗಿ ಕೊಂಡು ಕುಳಿತಿದ್ದಾರೆ. ಈ ಸಮಯದಲ್ಲಿ ಈ ದಖ್ಖನ್ನಿನಲ್ಲಿರುವ ಎಲ್ಲ ಸೈನ್ಯಗಳನ್ನೂ ನಿನ್ನ ಜೊತೆಯಲ್ಲಿ ಕಳುಹಿಸಿದರೂ ನೀನು ಶಿವಾಜಿಯನ್ನು ಗೆಲ್ಲಲಾರೆಯೆಂದು ಬಾದಷಹರ ಖಚಿತಾಭಿಪ್ರಾಯ. ಅದನ್ನು ನನ್ನೊಡನೆ ಅವರು ಖುದ್ದಾಗಿ ಹೇಳಿದ್ದಾರೆ. ಶಿವಾಜಿಯ ಕಡೆ ಮತ್ತೊಂದು ನ್ಯಾಯವಿದೆ. ಜಯಸಿಂಹ ಮಹಾರಾಜರು ಶಿವಾಜಿಯೊಡನೆ ಒಂದು ಸಂಧಿಮಾಡಿಕೊಂಡರು. ಒಂಬತ್ತು ದುರ್ಗಗಳನ್ನು ಅವನಿಗೆ ಬಿಟ್ಟು ಇಪ್ಪತ್ತಾರು ದುರ್ಗಗಳನ್ನು ಮೊಗಲ್ ರಾಜ್ಯಕ್ಕೆ ಸೇರಿಸಿಕೊಂಡರು. ಅಷ್ಟಾದರೂ ಶಿವಾಜಿಯು ತನ್ನ ಒಂದು ದುರ್ಗದ ಪುನರಾಕ್ರಮಣಕ್ಕಾದರೂ ಕಣ್ಣುಹಾಕಿಲ್ಲ. ಅವನ ಅಪರಾಧವೆಲ್ಲಿ ಬಂತು? ಅಷ್ಟೇ ಅಲ್ಲ. ದಿಲೇರ್‌ಖಾನ್, ನಿನಗೆ ಬಾದಷಹರು ಯುದ್ಧಕ್ಕೆ ಅಪ್ಪಣೆಕೊಟ್ಟರೆ, ನೀನು ಗೆದ್ದರೆ, ಶಿವಾಜಿಯು ಓಡಿಹೋಗಿ ಎಲ್ಲಿಯೋ ಅವಿತುಕೊಳ್ಳುತ್ತಾನೆ. ಅವನು ಯಾರ ಕೈಗೂ ಸಿಗುವುದಿಲ್ಲ. ನಿನಗೆ ಸೋಲಾದರೆ ಮಾತ್ರ ಮೊಗಲ್ ಸಾಮ್ರಾಜ್ಯಕ್ಕೆ ಪೆಟ್ಟುಬಿದ್ದಂತಾಗು ತ್ತದೆ. ಶಿವಾಜಿಯು ಈ ದಖ್ಖನ್ ರಾಜ್ಯದಲ್ಲಿ ಎದುರಿಲ್ಲದ ಹಿಂದೂ ಬಾದ ಷಹನಾಗಿಬಿಡುತ್ತಾನೆ. ನಿನ್ನ ವಿರೋಧಿಗಾಗಿ ಬಾದಷಹರಾಗಲೀ, ಯುವ ರಾಜನಾಗಲೀ ಅಂತಹ ಸಂಧಿಗ್ಧ ಪರಿಸ್ಥಿತಿಯನ್ನು ತಲೆಯ ಮೇಲೆ ತಂದು ಕೊಳ್ಳಲು ಒಪ್ಪುವರೇ?"

ದಿಲೇರ್‌ಖಾನನು ಕ್ಷಣಹೊತ್ತು ತಲೆಬಾಗಿ ಎದ್ದುನಿಂತು ಸೊಂಟ ದಲ್ಲಿದ್ದ ಕತ್ತಿಯನ್ನು ಹಿರಿದು ಮೊಹಬತ್‌ಖಾನನ ಮುಂದಿಟ್ಟು "ಖಾನ್ ಸಾಹೇಬರೇ, ತಮ್ಮ ಹಿತವಚನಗಳನ್ನು ನಾನು ಒಪ್ಪಿಕೊಂಡಿದ್ದೇನೆ. ನಾನು ಈ ಅಧಿಕಾರದ ಕತ್ತಿಯನ್ನು ತಮ್ಮಲ್ಲಿ ಒಪ್ಪಿಸಿದ್ದೇನೆ. ನನ್ನನ್ನು ಬಿಟ್ಟುಬಿಡಿ. ನಾನು ಹೊರಟು ಹೋಗುತ್ತೇನೆ. ಇನ್ನು ಪುನಃ ಈ ಮೊಗಲ್ ಸಾಮ್ರಾಜ್ಯ ದಲ್ಲಿ ಮುಖ ತೋರಿಸುವುದಿಲ್ಲ." ಎಂದು ಹೇಳಿ ಸಲಾಂ ಮಾಡಿದನು.

ಮೊಹಬತ್ ಖಾನನು "ನೀನು ಇಲ್ಲೇ ಇರು. ಬಾದಷಹರು ನಿನ್ನನ್ನು ದೆಹಲಿಗೆ ಕರೆಸಿಕೊಳ್ಳುವಂತೆ ಮಾಡುತ್ತೇನೆ. ನೀನು ಯುವರಾಜರ ಸಮ್ಮುಖಕ್ಕೆ ಬರುವುದಾದರೆ ನನ್ನ ಜೊತೆಯಲ್ಲಿ ಬಾ. ನೀನು ಅವರಿಗೆ ಶರಣಾಗತನಾದವನಂತೆ ಇರಬೇಕು. ಹಾಗಿದ್ದರೆ ನಿಮ್ಮಿಬ್ಬರಿಗೂ ಸ್ನೇಹ ಮಾಡಿಸುತ್ತೇನೆ" ಎಂದು ಹೇಳಿದನು.

ದಿಲೇರ್‌ಖಾನನು "ಮನಸ್ಸಿಲ್ಲದ ಸ್ನೇಹ ಅದರಿಂದೇನೂ ಪ್ರಯೋಜನವಾಗುವುದಿಲ್ಲ. ತಮ್ಮ ಮನಸ್ಸಿಗೆ ನನ್ನದೇನೂ ತಪ್ಪಿಲ್ಲವೆಂದು ತೋರಿದರೆ ಸಾಕು" ಎಂದನು.

————

೩

ಮೊಹಬತ್‌ಖಾನನು ಪುನಃ ಔರಂಗಾಬಾದಿಗೆ ಬಂದನು. ಯುವರಾಜನೊಡನೆ ನಾಲ್ಕಾರು ದಿನಗಳು ಸುಖವಾಗಿ ಕಾಲ ಕಳೆದು ಹೊರಟು ಹೋಗುವಾಗ "ದಿಲೇರ್‌ಖಾನನು ದಾರಿಗೆ ಬರುವವನಲ್ಲ. ತನ್ನದೇನೂ ತಪ್ಪಿಲ್ಲವೆಂದು ವಾದಿಸುತ್ತಾನೆ. ಇದೆಲ್ಲವನ್ನೂ ಬಾದಷಹರಿಗೆ ಅರಿಕೆ ಮಾಡುತ್ತೇನೆ." ಎಂದು ಹೇಳಿದನು.

ಯುವರಾಜನು "ಖಾನ್ ಸಾಹೇಬರೇ. ಅವನು ಏನು ಹೇಳುತ್ತಾನೆಂಬುದು ನನಗೆ ಮುಖ್ಯವಾದುದಲ್ಲ. ನಾನೂ ಅವನೂ ಸರಿಸಮಾನಸ್ಥರಲ್ಲ ನನ್ನ ವಿಷಯವಾಗಿ ಈ ಸಂದರ್ಭದಲ್ಲಿ ತಾವು ಬಾದಷಹರಿಗೆ ಚಕಾರವನ್ನೂ ಹೇಳುವ ಅಗತ್ಯವಿಲ್ಲ" ಎಂದು ಹೇಳಿ ಮೊಹಬತ್‌ಖಾನನನ್ನು ಅತ್ಯಂತ ಗೌರವದಿಂದ ಕಳುಹಿಸಿಕೊಟ್ಟನು.

ಮೊಹಬತ್‌ಖಾನನು ಔರಂಗಾಬಾದಿನಲ್ಲಿರುವಾಗ ಮೆಲ್ಲ ಮೆಲ್ಲಗೆ ಜಶವಂತಸಿಂಹನ ಸ್ನೇಹ ಮಾಡಿದ್ದನು. ಖಾನನು ಒಳ್ಳೆಯ ಸ್ನೇಹಪರ, ರಸಿಕ. ಅವರಿಬ್ಬರ ಸ್ನೇಹವು ಬಹು ಬೇಗ ಹೊಂದಿಕೆಯಾಗಿತ್ತು. ಅವನನ್ನೂ ತನ್ನೊಡನೆ ಬರಹಾಂಪುರಕ್ಕೆ ಕರೆದುಕೊಂಡು ಹೋದನು.

ಮೊಹಬತ್‌ಖಾನನು ಹೊರಟು ಹೋದಮೇಲೆ ಯುವರಾಜನು "ಈ ಖಾನ್ ಸಾಹೇಬನೇನೋ ಒಳ್ಳೆಯ ಮನುಷ್ಯ. ಆದರೆ ಜಯಸಿಂಹ ಮಹಾರಾಜನಂಥ ಉದಾರಿಯೂ ಅಲ್ಲ, ದೊಡ್ಡ ಮನುಷ್ಯನೂ ಅಲ್ಲ. ಬಾದಷಹರು ಇವನನ್ನು ಕಳುಹಿಸುವುದರಲ್ಲಿ ಏನೋ ಕುತಂತ್ರವನ್ನು ಇಟ್ಟಿದ್ದಾರೆ. ಈ ಸಂದರ್ಭದಲ್ಲಿ ಬಾದಷಹರಿಗೆ ಕೋಪ ಬಂದರೂ ಚಿಂತೆಯಿಲ್ಲ. ನಾನು ಒಂದು ಕೂದಲಷ್ಟು ಜಗ್ಗುವವನಲ್ಲ. ಇಂಥಾ ಅವಿಧೇಯತೆಗಳಿಗೆ, ಕುತಂತ್ರಗಳಿಗೆ ಎಡೆಕೊಟ್ಟರೆ ನನ್ನ ಅಧಿಕಾರವು ಮಣ್ಣು ಪಾಲಾಗುವುದು ಖಂಡಿತ" ಎಂದು ನಿರ್ಧಾರ ಮಾಡಿಕೊಂಡನು.

ದಿಲೇರ್‌ಖಾನನ ಚಲನವಲನಗಳನ್ನು ಗುಪ್ತಾಚಾರರ ಮುಖೇನ ತಿಳಿಸಿಕೊಳ್ಳುತ್ತಿದ್ದನು. ದಿಲೇರ್‌ಖಾನನು ಏನೋ ಉಪಾಯಗಳನ್ನು ಹೂಡಿ ಮೊಹಬತ್‌ಖಾನನ ಸಹಾಯದಿಂದ ದೆಹಲಿಗೆ ಹೋಗಿ ಬಾದಷಹನಲ್ಲಿ ತನ್ನ ಮೇಲೆ ದೂರು ಹೇಳಿಕೊಳ್ಳಲು ಹವಣಿಸುತ್ತಿದ್ದಾನೆಂದು ಅವನಿಗೆ ಸಂದೇಹ ಬಂದಿತು. ಇದ್ದಕ್ಕಿದಂತೆ ತನ್ನ ಇಬ್ಬರು ಸೇನಾಧಿಪತಿಗಳನ್ನು ಕರೆಸಿ "ನೀವಿಬ್ಬರೂ ಸೈನ್ಯ ಸಮೇತವಾಗಿ ಹೋಗಿ ದಿಲೇರ್‌ಖಾನನನ್ನು ಹಿಡಿದುತರಬೇಕು" ಎಂದು ಅಪ್ಪಣೆ ಮಾಡಿದನು.

ಈ ಸೈನ್ಯಗಳು ಆ ಶಿಬಿರದ ಸಮೀಪವನ್ನು ಸೇರುವುದೊಳಗೆ ದಿಲೇರ್ ಖಾನನಿಗೆ ಈ ಸಮಾಚಾರವು ಮುಟ್ಟಿತು. ಅವನು ಸೈನ್ಯಸಮೇತವಾಗಿ ಪಲಾಯನ ಮಾಡಿದನು. ದಿಲೇರ್‌ಖಾನನನ್ನು ಹಿಡಿಯಲು ಹೋಗಿದ್ದ ಸೇನಾಧಿಪತಿಗಳು ನಿರಾಶರಾಗಿ ಹಿಂದಕ್ಕೆ ಬಂದರು. ಈ ಸಮಾಚಾರವನ್ನು ಕೇಳಿ ಆಜಂಷಹನು ಕ್ರೋಧೋದ್ದೀಪಿತನಾಗಿ ಸ್ವತಃ ಸೈನ್ಯ ಸಮೇತ ದಿಲೇರ್ ಖಾನನನ್ನು ಅಟ್ಟಿಕೊಂಡು ಹೊರಟನು. ದಿಲೇರ್ ಖಾನನ ಸೈನ್ಯಕ್ಕೆ ಹೊಟ್ಟೆಗೆ ಅನ್ನವಿಲ್ಲ, ಕೈಯಲ್ಲಿ ದುಡ್ಡಿಲ್ಲ. ಹೀಗಾದರೆ ಎಷ್ಟು ದಿನಗಳು ಆ ಸೈನ್ಯ ಅವನ ಕೈಯಲ್ಲಿ ನಿಲ್ಲಬಹುದು. ಆ ಸೈನ್ಯವನ್ನು ತೃಪ್ತಿಗೊಳಿಸುವುದಕ್ಕಾಗಿ ದಾರಿಯುದ್ದಕ್ಕೂ ಮೊಗಲ್ ರಾಜ್ಯದಲ್ಲಿಯೇ ಹಿಂದುಗಳನ್ನು ಕೊಳ್ಳೆ ಹೊಡೆಯುತ್ತಾ ಮುಂದೆ ಮುಂದೆ ಹೋಗುತ್ತಿದ್ದನು.

ಖಾನ್ ದೇಶದ ಅಧಿಪತಿಯಾಗಿದ್ದ ಮೊಹಬತ್‌ಖಾನನು ಈ ಸಮಾಚಾರಗಳನ್ನೆಲ್ಲಾ ಬಾದಷಹರಿಗೆ ಅನೇಕ ಪತ್ರಗಳಲ್ಲಿ ಬರೆದು ಕಳುಹಿಸುತ್ತಿದ್ದನು.




ದೆಹಲಿಯ ದರಬಾರಿನಲ್ಲಿ ದಿಲೇರ್‌ಖಾನನ ಕಡೆಯವರೂ ಬಹಳ ಮಂದಿ ಇದ್ದರು. ನಾನಾ ರೀತಿಗಳಲ್ಲಿ ದಖ್ಖನ್ನಿನ ಸಮಾಚಾರಗಳನ್ನು ಬಾದಷಹರ ಕಿವಿಗೆ ಹಾಕುತ್ತಿದ್ದರು. ಬಾದಷಹನು ಪ್ರತಿಯೊಂದು ವಿಷಯದಲ್ಲಿಯೂ ಸಂಶಯಗ್ರಸ್ತನಾಗಿದ್ದನು. ಯುವರಾಜನೇ ದಂಗೆ ಎದ್ದಿದ್ದಾನೆಂದೂ ದಿಲೇರ್‌ಖಾನ್ ಮತ್ತು ಯುವರಾಜನ ವೈಮನಸ್ಯವನ್ನೇ ಮುಂದುಮಾಡಿಕೊಂಡು ದಖ್ಖನ್ನಿನಲ್ಲಿ ಅಂತಃಕಲಹಗಳು ಎದ್ದಿವೆಯೆಂದು ಬಾದಷಹನು ನಿರ್ಧಾರ ಮಾಡಿಕೊಂಡನು. ಮಹಮುದ್‌ಪೀರ್ ಮತ್ತು ರಸೂಲ್‌ಖಾನ್ ಎಂಬಿಬ್ಬರು ಸೇನಾಪತಿಗಳನ್ನು ಯುವರಾಜನ ಸಮೀಪಕ್ಕೆ ಕಳುಹಿಸಿಕೊಟ್ಟನು. ಕಟ್ಟುನಿಟ್ಟಾದ ಪತ್ರವನ್ನು ಬರೆದು ಅವರ ಮುಖೇನ ಯುವರಾಜನಿಗೆ ಕಳುಹಿಸಿದನು. ಆ ಸೇನಾಧಿಪತಿಗಳು ಯುವರಾಜನ ಸನ್ನಿಧಾನಕ್ಕೆ ಬರುವ ಹೊತ್ತಿಗೆ ದಿಲೇರ್‌ಖಾನನು ಎಲ್ಲೆಲ್ಲಿಯೋ ಸುತ್ತಿಕೊಂಡು ಮಾಳ್ವ ದೇಶದ ಗಡಿಯನ್ನು ಸೇರಿದ್ದನು. ಯುವರಾಜನೂ ಆ ಗಡಿಯ ಸಮೀಪಕ್ಕೆ ಹೋಗಿದ್ದನು. ದೆಹಲಿಯಿಂದ ಬಂದಿದ್ದ ಸೇನಾಧಿಪತಿಗಳು ಯುವರಾಜನು ಇರುವಲ್ಲಿಗೆ ಹೋಗಿ ಬಾದಷಹರ ಪತ್ರವನ್ನು ಒಪ್ಪಿಸಿ ಬಾದಷಹರು ಹೇಳಿ ಕಳುಹಿಸಿರುವ ಮಾತುಗಳನ್ನು ತಿಳಿಸಿದರು. ಯುವರಾಜನು ಪತ್ರವನ್ನು ನೋಡಿಕೊಂಡು, "ಯುವರಾಜನು ಎಲ್ಲಿ ಈ ಪತ್ರವನ್ನು ಕಂಡರೆ ಅಲ್ಲಿಂದ ಔರಂಗಾಬಾದಿಗೆ ಹಿಂತಿರುಗಬೇಕು. ದಿಲೇರ್‌ಖಾನನು ಎಲ್ಲಿ ಬೇಕಾದರೂ ಹೋಗಲಿ" ಎಂದು ಆ ಪತ್ರದ ತಾಜಾಕಲಂ ಇತ್ತು. ಬಾದಷಹರಿಂದ ಇಂಥ ಪತ್ರಗಳು ಬಂದರೆ ಅವು ತಕ್ಷಣ ಜಾರಿಯಾಗತಕ್ಕವುಗಳು. ಎಂತಹವರೇ ಆಗಲಿ, ಅದನ್ನು ಮೀರಿದರೆ ದರಬಾರಿನ ಮಹಾಪರಾಧಿಗಳೆಂದು ಪರಿಗಣಿಸಲ್ಪಡುತ್ತಾರೆ. ಇಂಥ ಡೆಲ್ಲಿ ದರಬಾರಿನ ಸಂಕೇತವಿತ್ತು. ಯುವರಾಜನು ಆ ಕಟ್ಟಾಜ್ಞೆಯನ್ನು ನೋಡಿ ಕ್ಷಣ ಹೊತ್ತು ಚಿಂತಾಗ್ರಸ್ತನಾದನು. ಆ ಸೇನಾಧಿಪತಿಗಳ ಕಡೆಗೆ ತಿರುಗಿ "ನೀವಿಬ್ಬರೂ ದೆಹಲಿಯಿಂದ ಬಂದಿರುವ ಸೇನಾಧಿಪತಿಗಳು, ನೀವು ನನ್ನಲ್ಲಿ ಹೇಳಿದಷ್ಟೇ ಬಾದಷಹರ ಆಜ್ಞೆಯಾಗಿದೆಯೋ ಅಥವಾ ನನ್ನ ಮೇಲಿನ ಅಧಿಕಾರವೂ ನಿಮಗೆ ಕೊಡಲ್ಪಟ್ಟಿದೆಯೋ ?" ಎಂದು ಪ್ರಶ್ನೆ ಮಾಡಿದನು.

ಈ ಮರ್ಮಭೇದಕವಾದ ಮಾತನ್ನು ಕೇಳಿ ಆ ಸೇನಾಧಿಪತಿಗಳ

ಹೃದಯಗಳು ನಡುಗಿದವು. "ಜಹಪನಾ, ನಾವು ಚಿಕ್ಕಂದಿನಿಂದಲೂ ಯುವರಾಜರನ್ನು ನೋಡಿದ್ದೇವೆ. ತಮ್ಮ ಮೇಲೆ ಅಧಿಕಾರ ಚಲಾಯಿಸುವಷ್ಟು ಬಲವಿದೆಯೇ ನಮಗೆ? ಈ ಸಂದರ್ಭದಲ್ಲಿ ಯಾರೇ ಆಗಲಿ ತಮ್ಮ ಮೇಲೆ ಅಧಿಕಾರ ಚಲಾಯಿಸಿದರೆ ಈ ಮೊಗಲ್ ಸಾಮ್ರಾಜ್ಯವು ಇಬ್ಭಾಗವಾಗಿ ಹೋಗುತ್ತದೆಂದು ನಮಗೆ ಖಾತ್ರಿಯಿದೆ. ಒಂದು ಪಕ್ಷ ದುರ್ದೈವವಶಾತ್, ಅಂಥಾ ಪ್ರಸಂಗ ಬಂದರೆ ನಾವು ಯುವರಾಜರ ಪಕ್ಷದವರು. ಬಾದಷಹರು ಇದನ್ನು ಅರಿತಿಲ್ಲವೆಂದುಕೊಳ್ಳಬೇಡಿರಿ. ನಾವು ನಿಮ್ಮ ಪಕ್ಷದವರೆಂದರಿತೇ ಅವರು ನಮ್ಮನ್ನು ನಿಮ್ಮ ಸನ್ನಿಧಿಗೆ ಕಳುಹಿಸಿದ್ದಾರೆ. ಈ ಪತ್ರ ಕಟ್ಟಾಜ್ಞೆಯ ಪತ್ರವೆಂಬುದು ನಿಜ. ಅದಕ್ಕಾಗಿ ನೀವು ನಮ್ಮನ್ನು ಸಂದೇಹಿಸಬೇಡಿರಿ. ಬಾದಷಹರು ನಿಮಗೆ ಈ ಕಟ್ಟಾಜ್ಞೆಯ ಪತ್ರವನ್ನು ಬರೆದು ನಿಮ್ಮನ್ನು ಪರೀಕ್ಷಿಸುತ್ತಿದ್ದಾರೆ. ಅದು ನಿಮ್ಮ ತಂದೆ ಮಕ್ಕಳ ಮಾತು" ಎಂದು ಅರಿಕೆ ಮಾಡಿದರು.

ಯುವರಾಜನು "ಖಾನ್‌ಸಾಹೇಬರುಗಳೇ, ನಾನು ಒಂದು ಮಾತು ಹೇಳುತ್ತೇನೆ ಕೇಳಿ. ಬಾದಷಹರು ಅಷ್ಟು ಮುಂದಾಲೋಚನೆ ಮಾಡಲಿಲ್ಲ. ಅಥವಾ ಪ್ರಕೃತ ಸಂದರ್ಭದಲ್ಲಿ ಮುಂದಾಲೋಚನೆ ಮಾಡುವ ಇಷ್ಟವಿರಲಾರದು. ಈ ದಿಲೇರ್‌ಖಾನನ ಮೇಲೆ ನನಗೇನೂ ದ್ವೇಷವಿಲ್ಲ. ಅವಿಧೇಯತೆಯೊಂದು ಹೊರತು ಮತ್ತಾವ ತಪ್ಪನ್ನೂ ನಾನು ಅವನ ಮೇಲೆ ಹೊರಿಸಲಾರೆ. ಹೀಗೆ ಅವನನ್ನು ಬಿಟ್ಟುಬಿಟ್ಟರೆ ಮೊಗಲ್‌ಶಾಹಿಯ ಬಿಗಿ ಸಡಿಲವಾಗಿ ಹೋಗುತ್ತದೆ. ಆ ದಿಲೇರ್‌ಖಾನ್ ದೊಡ್ಡ ಮೂರ್ಖ. ಹಠದಿಂದ ಸುತ್ತಿಸುತ್ತಿ ಅಲೆದು ಹಣ್ಣಾಗಿ ಹೋಗಿದ್ದಾನೆ. ಎಲ್ಲಿಗೆ ಹೋಗಬಲ್ಲ? ನೀವು ಅವನಲ್ಲಿಗೆ ಹೋಗಿ ಬಾದಷಹರ ಅಪ್ಪಣೆಯಾಗಿದೆಯೆಂದು ಹೇಳಿ ಅವನನ್ನು ನನ್ನಲ್ಲಿಗೆ ಕರೆತನ್ನಿರಿ. ಅದರಿಂದ ನಾನು ಬಾದಷಹರ ಆಜ್ಞೆಯನ್ನು ಉಲ್ಲಂಘಿಸಿದಂತೆಯೂ ಆಗುವುದಿಲ್ಲ. ದಿಲೇರ್‌ಖಾನನೂ ದಾರಿಗೆ ಬಂದಂತಾಗುತ್ತದೆ. ನೀವು ಬಂದ ಕಾರ್ಯವನ್ನೂ ಜಯಪ್ರದವಾಗಿ ಸಾಧಿಸಿಕೊಂಡು ಬಾದಷಹರ ಸಮ್ಮುಖಕ್ಕೆ ಹಿಂತಿರುಗಿದಂತಾಗುತ್ತದೆ" ಎಂದು ಹೇಳಿದನು.

ಮುಹಮ್ಮದ್‌ಪೀರ್ ಮತ್ತು ರಸೂಲ್‌ಖಾನರಿಬ್ಬರೂ ದಿಲೇರ್‌ಖಾನನು ಇದ್ದೆಡೆಗೆ ಹೋಗಿ ಸೇರಿದರು. ದಿಲೇರ್‌ಖಾನನ ಸ್ಥಿತಿಯು ಚಿಂತಾಜನಕ

ವಾಗಿದ್ದಿತು. ಐವತ್ತು ಮಂದಿ ಸವಾರರು ಮಾತ್ರ ಉಳಿದಿದ್ದರು. ಎರಡು ದಿವಸಗಳಿಂದ ಅವರಾರೂ ಉಂಡಿರಲಿಲ್ಲ. ಸುಮಾರು ಹದಿನೈದು ದಿವಸಗಳಿಂದ ಹೊಟ್ಟೆತುಂಬಾ ಊಟ ಅವರಿಗೆ ಸಿಕ್ಕಿರಲಿಲ್ಲ. ಕುದುರೆಗಳೆಲ್ಲಾ ತಟ್ಟಾಡಿ ಹೋಗಿದ್ದವು. ದಿಲೇರ್‌ಖಾನನು ತೇಜೋಹೀನನಾಗಿ ಒಂದು ಸಣ್ಣಗುಡಾರದಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದನು. ಅವರೆಲ್ಲರಿಗೂ ಎಲ್ಲಿಯಾದರೂ ಖುರ ಪುಟಗಳನ್ನು ಕೇಳಿದರೆ, ಮೊಗಲ್ ಸೈನಿಕರನ್ನು ಕಂಡರೆ, ಹೃದಯದಲ್ಲಿ ನಡುಕ ಉಂಟಾಗುತ್ತಿದ್ದಿತು. ದಿಲೇರ್‌ಖಾನನಿಗೆ ಆಯಾಸದಿಂದ ಕಣ್ಣಿಗೆ ನಿದ್ರೆಹತ್ತಿತ್ತು. ಅವನಿಗೆ ಅದೇ ಸ್ವಪ್ನ. ಯಾರೋ ಯುವರಾಜನ ಕಡೆಯವರು ಬಂದು ತನ್ನನ್ನು ಹಗ್ಗದಿಂದ ಬಂಧಿಸಿದಂತೆ, ಕಸೆಗಳಿಂದ ಹೊಡೆಯುತ್ತಿರುವಂತೆ ಸ್ವಪ್ನಕಂಡು ಬೆಚ್ಚಿಬಿದ್ದು ಎದ್ದನು. ಆ ಸಮಯಕ್ಕೆ ಸರಿಯಾಗಿ ಅವನ ಆಪ್ತ ಭಟರು ಗುಡಾರದ ಬಾಗಿಲಿನಲ್ಲಿ ನಿಂತು "ಹುಜೂರ್, ಡೆಲ್ಲಿಯ ಬಾದಷಹರ ಕಡೆಯಿಂದ ಇಬ್ಬರು ಸೇನಾಧಿಪತಿಗಳು ಬಂದಿದ್ದಾರೆ" ಎಂದು ಅರಿಕೆ ಮಾಡಿದರು.

ದಿಲೇರ್‌ಖಾನನ ಮುಖ ಸಪ್ಪಗಾಯಿತು. "ಏನು ನನ್ನನ್ನು ಹಿಡಿದುಕೊಂಡು ಹೋಗಲು ಬಂದಿದ್ದಾರೆಯೇ" ಎಂದು ಗಾಬರಿಯಿಂದ ಪ್ರಶ್ನೆ ಮಾಡಿದನು.

"ಹಾಗಲ್ಲ, ಖಾವಿಂದ್. ಇಬ್ಬರೇ ಸೇನಾಧಿಪತಿಗಳು ಬಂದಿದ್ದಾರೆ. ಜೊತೆಯಲ್ಲಿ ಸಲ್ತನ್ ಇಲ್ಲ. ಗಾಬರಿಗೊಳ್ಳುವ ಅಗತ್ಯವಿಲ್ಲ. ನಾವು ಇನ್ನೂ ಬದುಕಿದ್ದೇವೆ. ನಮ್ಮ ಪ್ರಾಣಗಳಿರುವವರೆಗೆ ತಮ್ಮ ರಕ್ಷಣೆ ಮಾಡಬಲ್ಲೆವು" ಎಂದು ಹೇಳಿ ಸಲಾಂ ಮಾಡಿದರು.

ದಿಲೇರ್‌ಖಾನನು ಗುಡಾರದಿಂದ ಮೆಲ್ಲಮೆಲ್ಲಗೆ ಎದ್ದುಬಂದು ಕುದುರೆಯ ಮೇಲೆ ಕುಳಿತಿದ್ದ ಇಬ್ಬರು ಸೇನಾಧಿಪತಿಗಳನ್ನು ತಲೆ ಎತ್ತಿ ನೋಡಿದನು. ಮೈಮೇಲೆಲ್ಲಾ ಮಲಿನವಸ್ತ್ರ. ಕೃಶವಾಗಿ ಹೋಗಿರುವ ಅಂಗಾಂಗಗಳು. ಕಾಂತಿಯಿಲ್ಲದ ಕಣ್ಣುಗಳು. ಈ ಅವಸ್ಥೆಯಲ್ಲಿರುವ ದಿಲೇರ್‌ಖಾನನನ್ನು ನೋಡಿ ಆ ಸೇನಾಧಿಪತಿಗಳಿಗೆ ಕನಿಕರದಿಂದ ಕಣ್ಣುಗಳಲ್ಲಿ ಕಂಬನಿ ತುಂಬಿತ್ತು. ಸೇನಾಧಿಪತಿಗಳಿಬ್ಬರೂ ಕುದುರೆಗಳಿಂದ ಕೆಳಗೆ ಹಾರಿ ದಿಲೇರ್‌ಖಾನನನ್ನು

ಆಲಂಗಿಸಿದರು. ಅವನ ವಿಶಾಲವಾದ ಲಲಾಟದ ಮೇಲೆ ಚುಂಬಿಸಿದರು ಸಾಮಾನ್ಯ ಯೋಗಕ್ಷೇಮಗಳಾದ ಮೇಲೆ ದಿಲೇರ್‌ಖಾನನ ಸಣ್ಣ ಗುಡಾರದಲ್ಲಿಯೇ ಹೋಗಿ ಮೂವರೂ ಕುಳಿತರು. ಅವರಿಬ್ಬರೂ ಮೊಗಲ್ ದರಬಾರಿನಲ್ಲಿ ದಿಲೇರ್‌ಖಾನನಿಗೆ ಸರಿಸಮಾನಸ್ಥರಾದ ಸೇನಾಧಿಪತಿಗಳು. ಅವರು ದಿಲೇರ್‌ಖಾನನಿಗೆ ಹೇಳಿದರು "ನಿನ್ನ ಅದೃಷ್ಟ ಇನ್ನೂ ಮಣ್ಣು ಗೂಡಿ ಹೋಗಿಲ್ಲ. ಬಾದಷಹರ ಅನುಗ್ರಹವು ನಿನ್ನ ಮೇಲೆ ಇನ್ನೂ ಉಳಿದಿದೆ. ಅರ್ಥಾತ್, ನಿನ್ನ ರಕ್ಷಣೆಗಾಗಿಯೇ ಬಾದಷಹರು ನಮ್ಮನ್ನು ಕಳುಹಿಸಿದ್ದಾರೆಂದರೂ ಒಪ್ಪುತ್ತದೆ. ನೀನು ನಮ್ಮಲ್ಲಿ ನಂಬಿಕೆಯಿಟ್ಟು ನಮ್ಮೊಡನೆ ಯುವರಾಜನ ಶಿಬಿರಕ್ಕೆ ಬಾ. ಎಲ್ಲವೂ ಕ್ಷೇಮವಾಗುವುದು."

ದಿಲೇರ್‌ಖಾನನು ದುರದುರನೆ ಕಣ್ತೆರೆದು ನೋಡುತ್ತಾ "ಸ್ನೇಹಿತರೇ, ನೀವು ವಿವೇಕದಿಂದ ಮಾತನಾಡುತ್ತಿರುವಿರಾ? ನನ್ನ ಈ ದುರವಸ್ಥೆಯನ್ನು ನೀವು ಕಣ್ಣಾರ ನೋಡುತ್ತಿರುವಿರಿ. ಈ ಅವಸ್ಥೆಯಲ್ಲಿ ನಾನು ಯುವರಾಜನ ಸಮ್ಮುಖಕ್ಕೆ ಬಂದರೆ ಅವನೇನು ತಿಳಿದುಕೊಂಡಾನು! ಲೋಕವು ಏನೆಂದು ಕೊಂಡೀತು. ಊಹೂಂ. ನಾನು ಬರಲೊಪ್ಪುವುದಿಲ್ಲ." ಎಂದರು.

ಮಹಮುದ್‌ಪೀರ್‌ನು ದಿಲೇರ್‌ಖಾನನ ಕೈಯನ್ನು ತೆಗೆದು ತನ್ನ ಕೈಮೇಲಿಟ್ಟುಕೊಂಡು ಸವರುತ್ತಾ "ನಿನ್ನ ಈ ಅವಸ್ಥೆಯು ನಿನಗೆ ಅಪಮಾನಕರವೆಂದು ಯಾರೂ ಭಾವಿಸುವುದಿಲ್ಲ. ಮಹಾಸೇನಾಧಿಪತಿಯಾದ ನಿನ್ನ ವೀರ್ಯಪರಾಕ್ರಮಗಳನ್ನು ಯಾರೂ ಮರೆತಿಲ್ಲ ಮೊಗಲ್ ಬಾದಷಹ ಬಾಬರ್ ಚಕ್ರವರ್ತಿಯು ಒಂದು ದಿನ ನಿನ್ನಂತಾಗಿದ್ದನೆಂದು ನಾವು ಕಥೆ ಕೇಳಿದ್ದೇವೆ. ಇಷ್ಟಾದರೂ ನೀನು ಸ್ವಾಭಿಮಾನಿಯಾಗಿ ಇರುವುದನ್ನು ನೋಡಿ ನಮ್ಮ ಹೃದಯಗಳು ಹೆಮ್ಮೆಯಿಂದ ಉಬ್ಬುತ್ತಿವೆ. ಮಿತ್ರಾ, ನಡಿ. ಬಾದಷಹನ ಅನುಗ್ರಹವನ್ನು ನೆನೆದುಕೋ. ಅವರಿಗಿಂತಲೂ ಮಹಾಪುರುಷರು ಈ ಭೂಮಿಯ ಮೇಲೆ ಮತ್ತಾರಿದ್ದಾರೆ? ಅವರ ಮಗ ಯುವರಾಜರವರಿಗೂ ನಿನಗೂ ವೈಮನಸ್ಯವಿದ್ದರೂ ಅವರ ಸೌಜನ್ಯ ಗಾಂಭಿರ್ಯಗಳಿಗೆ ಎಳ್ಳಷ್ಟಾದರೂ ಕೊರತೆಯುಂಟೇ, ನೀನೇ ಹೇಳು?" ಎಂದನು.

ದಿಲೇರ್‌ಖಾನನು "ಖಾನ್‌ಸಾಹೇಬ್, ಯುವರಾಜನಲ್ಲಿ ತಪ್ಪಿದೆಯೆಂದು ನಾನು ಹೇಳುತ್ತಿಲ್ಲ, ಹೇಳುವುದೂ ಇಲ್ಲ. ಯುವರಾಜರ ಸೌಜನ್ಯದಿಂದ

ಈ ಮರಾಠರು ಸೊಕ್ಕಿಹೋಗಿದ್ದಾರೆ. ಯುವರಾಜರ ದರ್ಬಾರಿನಲ್ಲಿ ಮೊದಲನೆಯ ಮರ್ಯಾದೆ ಈ ಮರಾಠರಿಗೆ. ಅದನ್ನು ನೋಡಿ ನಾವೆಲ್ಲಾ ತಲೆತಗ್ಗಿಸುವಂತಾಗುತ್ತದೆ. ಆ ಜಶವಂತಸಿಂಹನು ಎಂಥ ರಜಪೂತನೋ! ಕುತಂತ್ರಗಳನ್ನು ಮಾಡುತ್ತಲೇ ಕಾಲಕಳೆಯುತ್ತಾನೆ. ಯುವರಾಜರ ದರ್ಬಾರು ಹಿಂದೂ ದರ್ಬಾರಾಗಿಬಿಟ್ಟಿದೆ. ಅದೇ ನನ್ನ ಅಪಮಾನಕ್ಕೆ ಕಾರಣ" ಎಂದು ಹೇಳಿದನು.

ಆ ಇಬ್ಬರು ಸೇನಾಧಿಪತಿಗಳೂ ಅವನಿಗೆ ಎಷ್ಟೋ ಸಮಾಧಾನ ಹೇಳಿದರು. ಕೊನೆಯಲ್ಲಿ "ನೋಡು, ದಿಲೇರ್‌ಖಾನ್, ನೀನು ಹೇಳುವುದೆಲ್ಲಾ ನಿಜವೆಂದುಕೋ. ಏನೇ ಆಗಲಿ, ಬಾದಷಹರು ಯುವರಾಜನನ್ನು ಬಿಟ್ಟುಕೊಡುವುದಿಲ್ಲ. ಸದ್ಯಕ್ಕೆ ಯುವರಾಜನಲ್ಲಿ ಸ್ನೇಹಮಾಡಿಕೋ. ಸಮಯ ಬರುತ್ತದೆ ಹಲ್ಲುಕಿತ್ತು ಬುಟ್ಟಿಯಲ್ಲಿ ಬಂಧಿಸಿದರೂ ಹಾವು ಬುಸುಗುಟ್ಟದಿರದು. ಆ ಶಿವಾಜಿಯು ಸುಮ್ಮನೆ ಕೂಡುವವನಲ್ಲ. ಎಲ್ಲಿಯೋ ಹೆಡೆ ಎತ್ತುತ್ತಾನೆ ಬಾದಷಹರೇ ಖುದ್ದಾಗಿ ಅವನ ಮೇಲೆ ನಿನ್ನನ್ನು ಯುದ್ಧಕ್ಕೆ ಕಳುಹಿಸುತ್ತಾರೆ. ಆಗ ನಿನ್ನ ಕೈತೋರುವೆಯಂತೆ. ನೀನು ಯುವರಾಜರಲ್ಲಿ ಸರಿಯಾಗಿ ನಡೆದುಕೋ. ಅವರೂ ನಿನ್ನಲ್ಲಿ ಗೌರವದಿಂದ ವರ್ತಿಸುತ್ತಾರೆ. ನೀನು ಮೊಗಲ್ ದರ್ಬಾರಿನಲ್ಲಿ ಪ್ರಖ್ಯಾತ ಸೇನಾಧಿಪತಿಯಲ್ಲವೆ? ಮುಂದೆ ನೋಡಿಕೊಳ್ಳೋಣ" ಎಂದು ಹೇಳಿದರು.

ದಿಲೇರ್‌ಖಾನನು ಅವರ ಹಿತವಚನಗಳಿಗೆ ಬಗ್ಗಿದನು. ಆ ಸೇನಾಧಿಪತಿಗಳು ಕೃತಕೃತ್ಯರಾದವರಂತೆ ಹರ್ಷಪಡುತ್ತಾ ದಿಲೇರ್‌ಖಾನ್‌ನನ್ನು ಜೊತೆಯಲ್ಲಿ ಕರೆದುಕೊಂಡು ಯುವರಾಜನ ಶಿಬಿರವಿದ್ದೆಡೆಗೆ ಪ್ರಯಾಣ ಮಾಡಿದರು. ದಿಲೇರ್‌ಖಾನನ ಹಿಂದಿದ್ದ ಆಪ್ತ ಸೈನಿಕರು ಅವರನ್ನು ಹಿಂಬಾಲಿಸಿ ಹೋದರು.

ಮರುದಿನ ಯುವರಾಜನು ದರ್ಬಾರಿನಲ್ಲಿದ್ದಾಗ ದಿಲೇರ್‌ಖಾನನು ಯುವರಾಜನ ಮುಂದೆ ನಿಂತು ಕುರ್ನಿಸಾತ್ ಮಾಡಿ ಶರಣಾಗತಿಯನ್ನು ಒಪ್ಪಿಕೊಂಡನು.

ಯುವರಾಜನು ಆಸನದಿಂದ ಎದ್ದು ದಿಲೇರ್‌ಖಾನನನ್ನು ಅಪ್ಪಿಕೊಂಡು "ಬಾ, ಸೇನಾಧಿಪತಿಯೇ. ನಿನ್ನ ಮೇಲೆ ನನಗೆ ಆಗ್ರಹವಿಲ್ಲ. ನಿನ್ನಂಥ

ಸೇನಾಧಿಪತಿಯನ್ನು ಕಳೆದುಕೊಳ್ಳಲು ನನಗೆ ಮನಸ್ಸಿಲ್ಲ. ನೀನಿಲ್ಲದಿರುವುದು ನನಗೆ ಬಲಭುಜವು ಮುರಿದಂತಾಗಿದೆ. ಈ ಸೇನಾಧಿಪತಿಗಳ ಮುಂದೆ ದೇವರ ಸಾಕ್ಷಿಯಾಗಿ ನಿನಗೆ ಹೇಳುತ್ತೇನೆ. ನೀನು ನನ್ನ ಸ್ನೇಹಿತ. ನಾನೆಂದಿಗೂ ನಿನ್ನನ್ನು ಬಿಟ್ಟುಕೊಡುವುದಿಲ್ಲ" ಎಂದು ಹೇಳಿ ದಿಲೇರ್‌ಖಾನನ ಎರಡು ತೋಳುಗಳನ್ನೂ ಹಿಡಿದು ಆಸನದ ಮೇಲೆ ಕುಳ್ಳಿರಿಸಿದನು. ಆ ದೆಹಲಿಯ ಸೇನಾಧಿಪತಿಗಳಿಬ್ಬರಿಗೂ ಆಸನಗಳನ್ನು ಕೊಟ್ಟನು. ಮೊದಲು ದಿಲೇರ್‌ ಖಾನನ ಕುಶಲಪ್ರಶ್ನೆಗಳನ್ನು ಮಾಡಿದನು. ಅನಂತರ ಅವನು ಅನುಭವಿಸಿದ ಕಷ್ಟಗಳಿಗಾಗಿ ಕರುಣೆಯಿಂದ ಕಣ್ಣೀರು ಸುರಿಸಿದನು. ಅನೇಕ ಉಪಚಾರೋಕ್ತಿಗಳಿಂದ ದಿಲೇರ್‌ಖಾನನನ್ನು ಸಂತೈಸಿದನು. ದಿಲೇರ್‌ಖಾನನಿಗಾಗಿ ಅವನ ಅಂತಸ್ತಿಗೆ ತಕ್ಕ ಗುಡಾರವು ಯುವರಾಜನ ಶಿಬಿರದಲ್ಲಿ ಸಿದ್ಧವಾಗಿದ್ದಿತು. ದಿಲೇರ್‌ಖಾನನನ್ನು ಮರ್ಯಾದೆಯಿಂದ ಆ ಗುಡಾರಕ್ಕೆ ಕಳುಹಿಸಿ ಕೊಟ್ಟನು. ಆ ಸೇನಾಧಿಪತಿಯ ಹಿಂಬಾಲಕರಾಗಿ ಬಂದಿದ್ದ ಸೈನಿಕರೆಲ್ಲರಿಗೂ ತಕ್ಕ ಉಪಚಾರಗಳನ್ನು ಮಾಡಬೇಕೆಂದು ಶಿಬಿರದ ದರೋಗರಿಗೆ ಅಪ್ಪಣೆ ಮಾಡಿದನು. ಅವರೆಲ್ಲರಿಗೂ ಹೇರಳವಾದ ಇನಾಂಗಳು ಕೊಡಲ್ಪಟ್ಟವು. ಮೆಲ್ಲಮೆಲ್ಲಗೆ ಮೊಕ್ಕಾಂಗಳನ್ನು ಮಾಡುತ್ತಾ ಯುವರಾಜನು ದಿಲೇರ್‌ಖಾನನೊಡನೆ ಔರಂಗಾಬಾದನ್ನು ಸೇರಿದನು. ದೆಹಲಿಯಿಂದು ಬಂದಿದ್ದ ಸೇನಾಧಿಪತಿಗಳಿಗೆ ಅಮೋಘವಾದ ಔತಣ ಸಮಾರಂಭವನ್ನು ನಡೆಸಿ, ಖಿಲ್ಲತ್ತುಗಳನ್ನು ಕೊಟ್ಟು ಬಾದಷಹನ ಸಮ್ಮುಖಕ್ಕೆ ಕಳುಹಿಸಿ ಕೊಟ್ಟನು.

ಬಾದಷಹನು ಆ ಸೇನಾದಿಪತಿಗಳ ಮುಖೇನ ನಡೆದ ವೃತ್ತಾಂತವೆಲ್ಲವನ್ನು ಕೇಳಿ 'ಯುವರಾಜನು ಎಂದಿಗೂ, ಎಂಥಾ ಸಮಯದಲ್ಲೂ ವಿಶ್ವಾಸಿ ನಡೆಯುವವನಲ್ಲ. ಆದರೆ ಅವನು ಕೊಂಚ ಹಿಂದೂ ಪಕ್ಷಪಾತಿ' ಎಂದುಕೊಂಡನು.

---

೪

ತಾನಾಜೀ, ರಘುನಾಥ ಬಲ್ಲಾಳ, ಮೋರೋಪಂತ್, ಇವರೇ ಮುಂತಾದ ಮರಾಠಾ ಸೇನಾಧಿಪತಿಗಳು ಮಂತ್ರಿ ರಾಮಚಂದ್ರನೊಡನೆ ಸೇರಿ ಪ್ರಸ್ತಾಪ ಮಾಡಿ ಮುಂದೇನು ಮಾಡಬೇಕೆಂಬುದನ್ನು ನಿಷ್ಕರ್ಷೆ ಮಾಡಿಕೊಂಡರು. ಅವರೆಲ್ಲರೂ ರಾಯಘಡಕ್ಕೆ ಬಂದು ಶಿವಾಜಿಯನ್ನು ಭೇಟಿ ಮಾಡಿದರು.

"ಮಹಾಪ್ರಭು, ನೀವು ಬಾದಷಹನ ದರ್ಬಾರಿನಿಂದ ಹಿಂತಿರುಗಿ ಬಂದುದು ನಮ್ಮ ಭಾಗ್ಯ. ದಿನಗಳು ಕಳೆದುಹೋಗುತ್ತಿವೆ. ನಾವು ಗೂಡುಗಳಲ್ಲಿ ಅವಿತುಕೊಂಡಿರುವ ಹಕ್ಕಿಗಳಂತೆ ಆಗಿದ್ದೇವೆ. ತಾವು ಮೌನದಿಂದ ಇರುವುದು ನಮಗೆ ಆಶ್ಚರ್ಯವನ್ನುಂಟುಮಾಡಿದೆ. ಹೀಗಿರಕೂಡದು. ನೀವು ನಮಗೆ ಮಾರ್ಗ ತೋರಬೇಕು. ನಾವಂತೂ ಕೈಕಟ್ಟಿಕೊಂಡು ಕೂಡಲು ಒಪ್ಪುವುದಿಲ್ಲ" ಎಂದು ಹೇಳಿದರು.

ಶಿವಾಜಿಯು "ಮಿತ್ರರೇ, ನಾವು ಅವಿತುಕೊಂಡು ಕುಳಿತಂತೆಯೇ ಆಗಿದೆ. ಆದರೆ ಒಂದು ವಿಧವಾಗಿ ಔರಂಗಜೇಬನೊಡನೆ ಸಂಧಿ ಮಾಡಿಕೊಡಿದ್ದೇವೆ. ಒಂದಲ್ಲ ಎರಡು ಬಾರಿ ಸಂಧಿಯಾಗಿದೆ. ಆ ಸಂಧಿಯನ್ನು ಈಗ ಮುರಿದರೆ ಸಾಕ್ಷಾತ್ತಾಗಿ ಔರಂಗಜೇಬನೊಡನೆ ಯುದ್ಧಕ್ಕೆ ನಿಲ್ಲಬೇಕಾಗುತ್ತದೆ. ಆ ಬಾದಷಹನು ನಮ್ಮ ಮೇಲೆ ಬೀಳಲು ಹೊಂಚುಹಾಕುತ್ತಿದ್ದಾನೆ. ಇದನ್ನೆಲ್ಲಾ ನೋಡಿದರೆ ನಾವು ಬಾದಷಹನೊಡನೆ ಖಡಾಖಡಿ ಯುದ್ಧಕ್ಕೆ ನಿಲ್ಲಬೇಕು. ಈಗ ನಮಗೆ ಅಷ್ಟು ಶಕ್ತಿಯಿದೆಯೇ? ಬಲಾಬಲಗಳನ್ನೂ, ಲಾಭಾಲಾಭಗಳನ್ನೂ ಯೋಚನೆ ಮಾಡದೆ ಯುದ್ಧಕ್ಕೆ ಹೊರಡುವುದು ವಿವೇಕವೆನಿಸೀತೇ?" ಎಂದನು.

ಪ್ರತಾಪರಾಯನು "ಮಹಾರಾಜರೇ, ತಮ್ಮ ತಾಳ್ಮೆ ದೀರ್ಘಾಲೋಚನೆಗಳನ್ನು ನೋಡಿ ನಮಗೆ ಆಶ್ಚರ್ಯವಾಗುತ್ತಿದೆ. ಮತ್ತೊಂದು ಕಡೆ ಆ ಮೊಗಲರು ನಮ್ಮ ಮೇಲೆ ಎಸಗಿರುವ ದೌರಾತ್ಮ್ಯವು ಭಗ ಭಗನೆ ಉರಿಯುತ್ತಿದೆ. ತಮ್ಮನ್ನು ಅನೇಕ ವಿಧವಾಗಿ ಪ್ರೇರೇಪಣೆ ಮಾಡಿ ಡೆಲ್ಲಿಗೆ ಕರೆಸಿಕೊಂಡರು. ಅಲ್ಲಿ ತಮ್ಮ ಮೇಲೆ ನಡೆದ ಕಾರಖುದ್ದುಗಳು ನಮ್ಮ ಹೃದಯಗಳನ್ನು ಸುಡುತ್ತಿವೆ. ಆಗಲೇ ಆ ಔರಂಗಜೇಬನೇ ಸ್ವತಃ ಸಂಧಿಯನ್ನು

ಮುರಿದಂತಾಯಿತು. ಆ ಮೇಲೆಯೂ ತಾವು ಸಂಧಿಗೆ ಪ್ರಯತ್ನ ಮಾಡಿದಿರಿ. ನಾವೆಲ್ಲರೂ ಬೇಡವೆಂದು ಅರಿಕೆ ಮಾಡಿಕೊಂಡೆವು. ಹೇಗೋ ಆಗಲೂ ಸಂಧಿಯಾಯಿತು. ಆ ಸಂಧಿಯು ಒಡೆದು ಚೂರು ಚೂರಾಯಿತು. ನಾವು ಇನ್ನೆರಡು ದಿನಗಳು ಅಲ್ಲಿದ್ದಿದ್ದರೆ ಸೆರೆಯಾಳುಗಳಾಗುತ್ತಿದ್ದೆವು. ಸಾಂಬಾಜಿಯವರು ಇನ್ನೊಂದು ದಿನ ಆಲಸ್ಯ ಮಾಡಿದ್ದರೆ ಅವರನ್ನು ಬಲಾತ್ಕಾರದಿಂದ ಮುಸ್ಲಿಂ ಮತಕ್ಕೆ ಸೇರಿಸುತ್ತಿದ್ದರು. ಇದಕ್ಕೆಲ್ಲಾ ಪ್ರತೀಕಾರ ಮಾಡದಿದ್ದರೆ ಆ ಮೊಗಲರು ಸೊಕ್ಕಿ ಹೋಗುತ್ತಾರೆ. ಹಿಂದುಗಳೆಂದರೆ ಕಸಕ್ಕಿಂತ ಕಡೆಯಾಗಿ ನೋಡುತ್ತಾರೆ. ಔರಂಗಜೇಬನೇ ಕುಟಿಲ ತಂತ್ರದಿಂದ ಎರಡು ಬಾರಿಯೂ ಸಂಧಿಯನ್ನು ಮುರಿದಿದ್ದಾನೆ. ಇದಕ್ಕೆ ನೀವೇ ಸಾಕ್ಷಿ. ಮತ್ತೊಂದು ಮಾತಿದೆ. ಬಾದಷಹನು ನಮ್ಮ ಮೇಲೆ ಯುದ್ಧಕ್ಕೆ ಬರಲು ಹೊಂಚು ಹಾಕುತ್ತಿದ್ದಾನೆ ಎಂದು ಅಪ್ಪಣೆ ಕೊಡಿಸುತ್ತಿದ್ದೀರಿ. ಆ ಮಾತು ಯಥಾರ್ಥವಾದ ಮಾತು. ಅವನು ಇನ್ನೂ ನಮ್ಮ ಮೇಲೆ ಏಕೆ ಬಿದ್ದಿಲ್ಲ ಎಂಬುದನ್ನು ನೀವು ಚೆನ್ನಾಗಿ ಯೋಚನೆ ಮಾಡಬೇಕು. ನಮ್ಮ ಮೇಲೆ ಬೀಳುವ ಸಾಮರ್ಥ್ಯವಿದ್ದಿದ್ದರೆ ಒಂದು ದಿನವೂ ಮೊಗಲರು ಸುಮ್ಮನೆ ಕುಳಿತುಕೊಳ್ಳುತ್ತಿರಲಿಲ್ಲ. ನಮ್ಮ ವಿಷಯದಲ್ಲಿ ಎಳ್ಳಷ್ಟೂ ದಯಾ ದಾಕ್ಷಿಣ್ಯಗಳನ್ನು ತೋರುವವರಲ್ಲ. ಔರಂಗಜೇಬನು ಇಕ್ಕಟ್ಟಿನಲ್ಲಿ ಸಿಕ್ಕಿದ್ದಾನೆ. ಪರ್ಷಿಯಾ ರಾಜನು ಪಂಜಾಬನ್ನು ಆಕ್ರಮಿಸುವನೆಂಬ ಭಯದಿಂದ ಬ್ರಹ್ಮಾಂಡ ಸೈನ್ಯಗಳು ಪಂಜಾಬಿಗೆ ಹೋಗಿವೆ. ಪಂಜಾಬಿನಲ್ಲಿ ಅನೇಕ ದಂಗೆಗಳು ಎದ್ದಿವೆ ಪಂಜಾಬ್ ಬಿದ್ದುಹೋದರೆ ದೆಹಲಿಯು ರಸಾತಲಕ್ಕೆ ಬಿದ್ದಂತೆಯೇ ಸರಿ. ಔರಂಗಜೇಬನ ದೃಷ್ಟಿಯೆಲ್ಲಾ ಅತ್ತಕಡೆಗಿದೆ. ಇತ್ತಕಡೆ ರಾಜಾಸ್ತಾನವು ಸುತ್ತೆ ಕಳಕಳಿಸುವ ಸೂಚನೆಗಳು ಕಾಣುತ್ತಿವೆ. ಈಗ ಮೊಗಲರು ನಮ್ಮ ಕಡೆ ಬರಲು ಧೈರ್ಯ ಅವರಿಗಿಲ್ಲ. ನಾವು ಪ್ರತ್ಯಕ್ಷವಾಗಿ ಮೊಗಲರ ಮೇಲೆ ಯುದ್ಧಕ್ಕೆ ಹೋಗಲು ಸಿದ್ಧ. ಸದ್ಯಕ್ಕೆ ಅದು ಬುದ್ಧಿವಂತಿಕೆಯಲ್ಲ ನಮ್ಮ ಕೋಟೆಗಳನ್ನೆಲ್ಲಾ ಅವರಿಗೆ ಬಿಟ್ಟುಕೊಟ್ಟದ್ದೇವೆ. ಅವು ನಮ್ಮ ಕೋಟೆಗಳು. ಅವುಗಳನ್ನು ಮೊಟ್ಟಮೊದಲು ನಾವು ಪುನರಾಕ್ರಮಣ ಮಾಡೋಣ. ಅಷ್ಟೇ ಸಾಲದು. ನಮ್ಮ ಭಂಡಾರದಲ್ಲಿ ಹಣವಿಲ್ಲ. ಮೊಗಲರು ರಾಜ್ಯಗಳನ್ನು ಕೊಳ್ಳೆ ಹೊಡೆದು ಈ ವರ್ಷ ಮಳೆಗಾಲದೊಳಗಾಗಿ

ಕೋಟಿ ರೂಪಾಯಿಗಳನ್ನು ಶೇಖರಿಸಬೇಕು " ಎಂದು ಹೇಳಿದನು.

ತಾನಾಜಿಯು "ಪ್ರತಾಪರಾಯನ ಮಾತು ನಮಗೆಲ್ಲಾ ಒಪ್ಪಿಗೆ ಇದೆ. ಮೊದಲು ಯುದ್ಧಕ್ಕೆ ಹೊರಡುವವನು ನಾನು. ನನಗೆ ಅಪ್ಪಣೆ ಕೊಡಿರಿ. ಒಂದೊಂದಾಗಿ ನಮ್ಮ ಕೋಟೆಗಳನ್ನು ಸ್ವಾಧೀನಪಡಿಸಿಕೊಳ್ಳುತ್ತೇನೆ. ಈ ರಾಜ್ಯದಲ್ಲಿ ಕಾಗೆಗಳು ಕೂಡಾ ಇತ್ತಿಂದಿತ್ತ ಹಾರುವಂತಿಲ್ಲ. ಇನ್ನು ಮೊಗಲರ ಪಾಡೇನು ? ಖಾನ್ ದೇಶದಲ್ಲಿ ಬೇಕಾದಷ್ಟು ದುಡ್ಡಿದೆ. ಸೂರತ್ ಇದ್ದೇ ಇದೆ. ಇವೆರಡು ರಾಜ್ಯಗಳ ಮೇಲೆ ಹಲ್ಲಾ ಮಾಡಿದರೆ ಐದು ಕೋಟಿ ಹೊನ್ನುಗಳು ದೊಡ್ಡ ಮಾತಲ್ಲ" ಎಂದು ಹೇಳಿದನು.

ಶಿವಾಜಿಯು ಕ್ಷಣಹೊತ್ತು ಯೋಚನೆಮಾಡಿ "ನೀವು ಹೇಳುವುದು ಸರಿಯಾಗಿಯೇ ಇದೆ. ಸಂಧಿಯನ್ನೇನೋ ಅವರೇ ಮುರಿದು ಬಿಟ್ಟಿದಾರೆ. ಸದ್ಯಕ್ಕೆ ನಮ್ಮ ಕೋಟೆಗಳನ್ನು ನಾವು ಸ್ವಾಧೀನಪಡಿಸಿಕೊಳ್ಳೋಣ. ಮಹಾರಾಷ್ಟ್ರರಾಜ್ಯವು ಮೊಗಲರ ಕೈಯಲ್ಲಿರಕೂಡದು" ಎಂದು ಹೇಳಿ ಯುದ್ಧಕ್ಕೆ ಅಪ್ಪಣೆಯಿತ್ತನು.

ಮರಾಠರ ಕಣ್ಣು ಕೊಂಡನದ ಕೋಟೆಯ ಮೇಲೆ ಇದ್ದಿತು. ಅಲ್ಲಿ ರಜಪೂತ ಫೌಜುದಾರನು ದರ್ಬಾರು ನಡೆಸುತ್ತಿದ್ದನು. ಅವನು ತಾನು ಸೂರ್ಯವಂಶದವನೆಂದು ಜಂಭಕೊಚ್ಚಿಕೊಳ್ಳುತ್ತಿದ್ದನು. ದೆಹಲಿಯಲ್ಲಿ ಉಮ್ರಾಖಾದಿರ್‌ಷಹರವರ ಪುತ್ರಿ ನಜೀರಾ ಎಂಬ ಯವನ ಕನ್ಯೆಯನ್ನು ವಿವಾಹ ಮಾಡಿಕೊಂಡಿದ್ದನು. ಇವನ ಪೂರ್ವಕಥೆ ಬಲು ದೊಡ್ಡದು. ಇವನು ಯಾವ ದೊಡ್ಡ ರಾಜಸ್ಥಾನದ ರಾಜಮನೆತನಕ್ಕೂ ಸೇರಿದವನಲ್ಲ. ರಜಪೂತ ಜಾತಿಯವನೇನೋ ನಿಜ. ಖಾದಿರ್‌ಷಹರ ಮಹಲಿನ ಪಹರೆಯವರ ಯಜಮಾನನಾಗಿ ನೇಮಿಸಲ್ಪಟ್ಟಿದ್ದನು ನಜೀರಾ ಗಾಂಧರ್ವ ವಿವಾಹದಿಂದ ಅವನನ್ನು ವರಿಸಿದ್ದಳು ಈ ಸಮಾಚಾರ ಬಾದಷಹನ ಕಿವಿಗೆ ಬಿತ್ತು. ಬಾದಷಹನು ಅವನನ್ನು ಚಿತ್ರವಧೆ ಮಾಡಬೇಕೆಂದು ಅಪ್ಪಣೆಯಿತ್ತನು. ಆದರೆ ಅವನದೇನೂ ತಪ್ಪಿರಲಿಲ್ಲ. ಅದು ಪ್ರೇಮ ವಿವಾಹ. ಜಯಸಿಂಹ ಮಹಾರಾಜರು "ಇಂತಹ ವಿವಾಗಹಳೆಷ್ಟೋ ನಡೆದಿವೆ. ಇದು ಪ್ರೇಮ ವಿವಾಹ. ಬಾದಷಹನು ಮನ್ನಿಸಬೇಕು" ಎಂದು ಅರಿಕೆ ಮಾಡಿಕೊಂಡರು.

ವೃದ್ಧನಾದ ಉಮ್ರಾಖಾದಿರ್‌ಷಹನು ಬಾದಷಹರಲ್ಲಿ ಬೇಡಿಕೊಂಡನು. "ಕೀಳು ನೌಕರನನ್ನು ನನ್ನ ಮಗಳು ವರಿಸಿದಳೆಂಬುದು ನನ್ನ ಗೌರವಕ್ಕೆ ಕುಂದುಂಟುಮಾಡಿದೆ. ಅವರ ಅನ್ಯೋನ್ಯ ಪರಸಾಮ್ಯವೇನೋ ಚೆನ್ನಾಗಿದೆ. ಖಾವಂದರವರು ಅವನನ್ನು ಮೇಲಕ್ಕೇರಿಸಿಬಿಟ್ಟರೆ ನಮ್ಮ ಗೌರವಕ್ಕೆ ಹಾನಿಯಿಲ್ಲ" ಎಂದು ಬೇಡಿಕೊಂಡನು.

ಬಾದಷಹನು ಖಾದಿರ್‌ಷಹನ ಮಾತನ್ನು ಮನ್ನಿಸಲೂ ಇಲ್ಲ, ಆ ಉಚ್ಚಕುಲದ ಯುವನ ಸ್ತ್ರೀಯ ವಿವಾಹಕ್ಕೆ ಸಮ್ಮತಿಸಲೂ ಇಲ್ಲ. ಜಯಸಿಂಹ ಮಹಾರಾಜರು ದಕ್ಷಿಣಕ್ಕೆ ಬರುವಾಗ ಅವನನ್ನು ಜೊತೆಯಲ್ಲಿ ಕರೆತಂದರು. ಅವನು ಅದೃಷ್ಟವಶಾತ್ ಯುದ್ಧದಲ್ಲಿ ಸ್ವಲ್ಪಪರಾಕ್ರಮವನ್ನು ತೋರಿದನು. ಪ್ರತಾಪಘಡದ ಕೋಟೆಯನ್ನು ತಾನೇ ಹಿಡಿದನೆಂದು ಹೇಳಿಕೊಳ್ಳುತ್ತಿದ್ದನು. ಇದೆಲ್ಲ ಕಾರಣಗಳಿಂದ ಜಯಸಿಂಹ ಮಹಾರಾಜರು ಅವನನ್ನು ಫೌಜುದಾರನ ಅಂತಸ್ತಿಗೆ ಏರಿಸಿದರು. ನಜೀರಾ ದೆಹಲಿಯಿಂದ ಬಂದು ಸೇರಿಕೊಂಡಳು

ಕೊಂಡನ ಕೋಟೆಯು ಮೊಗಲರ ವಶಕ್ಕೆ ಬಂದಮೇಲೆ ಜಯಸಿಂಹ ಮಹಾರಾಜರು ಅವನನ್ನು ಆ ದುರ್ಗಾಧಿಪತಿಯಾಗಿ ನೇಮಿಸಿದರು. ಅದಕ್ಕೆ ಒಂದು ಅಂತರಂಗ ಕಾರಣವೂ ಇತ್ತು ಅಲ್ಲಿ ಪುರಾತನ ದೇವಾಲಯಗಳಿದ್ದವು. ಮೊಗಲ್ ಸೇನಾಧಿಪತಿ ಯಾವನಾದರೂ ಅಲ್ಲಿ ಅಧಿಕಾರಕ್ಕೆ ನಿಂತರೆ ಆ ದೇವಾಲಯಗಳೆಲ್ಲಾ ನಾಶವಾಗುತ್ತವೆ ಎಂಬ ಶಂಕೆಯಿಂದ ಮಹಾರಾಜರು ಈ ಉದಯಭಾನುವನ್ನು ದುರ್ಗಾಧಿಪತಿಯಾಗಿ ಮಾಡಿದ್ದನು. ಉದಯಭಾನು 'ಮರಾಠರು ಕೀಳು ಜಾತಿಯ ಜನ. ರಜಪೂತರು ಸೂರ್ಯವಂಶದ ಶುದ್ಧ ಕ್ಷತ್ರಿಯರು' ಎಂದು ಪದೇಪದೇ ಹೇಳುತ್ತಿದ್ದನು. ಅಷ್ಟೇಅಲ್ಲ. ಎಷ್ಟೋ ಮಂದಿ ಹಿಂದೂ ಸ್ತ್ರೀಯರನ್ನು ಅಪಹರಣ ಮಾಡಿದ್ದರು. ತಾನಾಜಿಯ ಮೊಟ್ಟಮೊದಲು ಅವನ ಮೇಲೆ ಕತ್ತಿಎತ್ತುವುದಕ್ಕೆ ಇದೇ ಮುಖ್ಯ ಕಾರಣ. ಮರಾಠರು ಹುರಪಿನಿಂದ ಕೊಂಡನವನ್ನು ಮುತ್ತಿದರು. ಸುಲಭವಾಗಿಯೇ ಕೋಟೆಯೊಳಗೆ ಪ್ರವೇಶ ಮಾಡಿಬಿಟ್ಟರು. ಆ ಕೋಟೆಯ ಸಂದುಗಳು ಎಲ್ಲಿವೆಯೆಂಬುದು ಮರಾಠರಿಗೆ ಚೆನ್ನಾಗಿ ತಿಳಿದಿತ್ತು. ಆ ಕೋಟೆಯೊಳಗೆ ಮರಾಠರು ಇನ್ನೂ ಉಳಿದಿದ್ದರು. ಉದಯಭಾನು ಯುದ್ಧಕ್ಕೆ ಸೈನ್ಯವನ್ನು

ಕಳಿಸಿ ತಾನು ವಿಲಾಸಮಗ್ನನಾಗಿದ್ದನು. 'ಶಿವಾಜಿಯು ಯುದ್ಧಕ್ಕೆ ಬರಲಿ, ಆಗ ನನ್ನ ಪರಾಕ್ರಮ ತೋರಿಸುತ್ತೇನೆ. ಈ ಕಾಡು ಜನರ ಸೈನ್ಯವನ್ನು ಓಡಿಸುವುದು ಎಷ್ಟರ ಕೆಲಸ' ಎಂದು ಹೇಳಿ ಮೊಗಲ್ ದಳಪತಿಗಳನ್ನು ಯುದ್ಧಕ್ಕೆ ಕಳಿಸಿದ್ದನು. ಕೋಟೆಯ ಹೊರಗಡೆ ಮರಾಠ ಸೈನ್ಯಗಳೊಡನೆ ಮೊಗಲ್ ಸಿಪಾಯಿಗಳು ಹೋರಾಡುತ್ತಿದ್ದರು. ದಿಡ್ಡಿಯ ಬಾಗಿಲಿನಿಂದ ತಾನಾಜೀ, ಸೂರಾಜೀ ಇವರುಗಳು ಬಲಾಢ್ಯರಾದ ಮರಾಠಾ ಸೈನಿಕರೊಂದಿಗೆ ಪ್ರವೇಶಮಾಡಿ ಅರಮನೆಯನ್ನು ಮುತ್ತಿದರು. ಅಂತಃಪುರದಲ್ಲಿದ್ದ ಉದಯಭಾನು ಹೊರಗೆ ಬಂದು ಕೋಟೆಯ ರಕ್ಷಣೆಗಿದ್ದ ರಜಪೂತ ಸೈನಿಕರನ್ನು ಸೇರಿಸಿಕೊಂಡು ಯುದ್ಧಕ್ಕೆ ನಿಂತನು. ತಾನಾಜೀ ಮತ್ತು ಉದಯಭಾನುಗಳ ಯುದ್ಧವು ರಣಾರಣಿಯಾಗಿ ನಡೆಯಿತು. ಆ ಉದಯಭಾನುವಿನ ಪರಾಕ್ರಮವನ್ನೂ, ಕರಲಾಘವನ್ನು ನೋಡಿ' ಮೆಚ್ಚಿಗೆಯಿಂದ 'ಇವನು ರಜಪೂತನಹುದು ಎಂದು ತಾನಾಜಿಯೇ ಹೇಳಿದನು. ಆ ಇಬ್ಬರು ವೀರರ ಹೋರಾಟದಲ್ಲಿ ಇಬ್ಬರೂ ಏಕಕಾಲದಲ್ಲಿ ಸತ್ತುಬಿದ್ದರು. ಸೂರಾಜಿಯು ಇದನ್ನು ಕಂಡು ರೋಷದಿಂದ ಮರಾಠಾ ಸೈನಿಕರೊಡನೆ ನುಗ್ಗಿ ಉಳಿದಿದ್ದ ರಜಪೂತ ಸೈನ್ಯಗಳನ್ನೂ ಮೊಗಲ್ ಸೈನಿಕರನ್ನೂ ತುಂಡರಿಸಿ ಚೆಲ್ಲಿದನು.

ಕೋಟೆಯನ್ನೂ ಅರಮನೆಯನ್ನೂ ಸ್ವಾಧೀನಪಡಿಸಿಕೊಂಡನು. ಹೇರಳವಾದ ಧನಕನಕಗಳೂ ಶಸ್ತ್ರಾಸ್ತ್ರಗಳೂ ಸಿಕ್ಕಿದವು. ಶಿವಾಜಿಯು ಈ ವಾರ್ತೆಯನ್ನು ಕೇಳಿ ರಾಯಘಡದಿಂದ ಏಕಾಏಕಿ ಕೊಂಡನಕ್ಕೆ ಬಂದು ತಾನಾಜಿಯ ಮೃತದೇಹವನ್ನು ಅಪ್ಪಿಕೊಂಡು ಪ್ರಲಾಪಿಸಿದನು. ಅವನು ಇಷ್ಟೊಂದು ದುಃಖಮಗ್ನನಾದುದನ್ನು ಯಾರೂ ಕಂಡಿರಲಿಲ್ಲ. ತಾನೇ ನಿಂತು ತಾನಾಜಿಯ ಸಂಸ್ಕಾರಗಳನ್ನು ಮಾಡಿಸಿದನು. ಉದಯಭಾನುವಿನ ರಾಣೀವಾಸದವರನ್ನು ಶಿವಾಜಿಯು ದೆಹಲಿಗೆ ಮರ್ಯಾದೆಯಿಂದ ಕಳುಹಿಸಿ ಕೊಟ್ಟನು. ಆ ಕೊಂಡನ ದುರ್ಗಕ್ಕೆ ಸಿಂಹಘಡ ಎಂದು ಹೆಸರಿಟ್ಟನು. ಸಿಂಹದಂತೆ ಹೋರಾಡಿದ ತಾನಾಜಿಯ ಜ್ಞಾಪಕಾರ್ಥ ಆ ದುರ್ಗಕ್ಕೆ ಆ ಹೆಸರು ಬಂದಿತು.

ಪುರಂದರಘಡವು ಮಹಾರಾಷ್ಟ್ರಿಗೆ ಅತ್ಯಂತ ಹೆಮ್ಮೆಯ ಕೋಟೆ.

ಶಿವಾಜಿಯು ಮೊದಮೊದಲು ಸುಲ್ತಾನನ ಮಕ್ಕಳನ್ನು ಓಡಿಸಿ ವಶಪಡಿಸಿಕೊಂಡ ಕೋಟೆ. ಮಹಾರಾಷ್ಟ್ರ ರಾಜ್ಯದ ನಿರ್ಮಾಣವೇ ಆ ಕೋಟೆಯಿಂದ ಆರಂಭವಾಗಿತ್ತು. ಮಹಾರಾಜಾ ಜಯಸಿಂಹನಲ್ಲಿ ಶಿವಾಜಿಯು ಸೋಲನ್ನು ಒಪ್ಪಿಕೊಂಡುದೂ ಆ ಕೋಟೆಯು ಮೊಗಲರ ವಶವಾದಾಗಲೇ. ಆ ಕೋಟೆಯನ್ನು ದಿಲೇರ್‌ಖಾನನು ವಶಪಡಿಸಿಕೊಂಡ ದಿನ ಆ ಮಹಾರಾಷ್ಟ್ರ ವೀರರು ಧೈರ್ಯ ಸಾಹಸಗಳಿಂದ ಹೋರಾಡಿದುದನ್ನು ದಿಲೇರ್‌ಖಾನನು ಮರತೇ ಇರಲಿಲ್ಲ. ಅಂದು ಆ ದೃಶ್ಯವನ್ನು ನೋಡುತ್ತಾ ಹೃದಯವು ಕರಗಿ ಶಿವಾಜಿಯ ಕಣ್ಣಿನಿಂದ ಸಂಧಿಪತ್ರದ ಮೇಲೆ ಎರಡು ಕಂಬನಿಯ ಹನಿಗಳು ಬಿದ್ದುದು ಇನ್ನೂ ಅಳಿಸಿ ಹೋಗಿರಲಿಲ್ಲ. ಮರಾಠಾ ಸೇನಾಧಿಪತಿಗಳಾದ ನೀಲಾಜೀರಾವ್ ಪ್ರತಾಪರಾವ್ ಇವರಿಬ್ಬರೂ ಯುವರಾಜ ಆಜಂ ಷಹನ ಆಸ್ಥಾನವನ್ನು ಪರಿತ್ಯಜಿಸಿ ಹೊರಟು ಬರುವಾಗ "ಸಂಧಿಯು ಮುರಿಯಿತು. ಪುರಂದರಘಡವನ್ನು ಮೊದಲು ಸ್ವಾಧೀನಪಡಿಸಿಕೊಳ್ಳುತ್ತೇವೆ" ಎಂದು ಹಠ ತೊಟ್ಟು ಹೊರಟಿದ್ದರು. ಅವರಿಬ್ಬರೂ ಹಸಿದ ಹುಲಿಗಳಂತೆ ಹೋಗಿ ಆ ಕೋಟೆಯನ್ನು ಮುತ್ತಿದರು. ನೀಲಾಜಿಯು ನಮ್ಮ ಮಿತ್ರ ತಾನಾಜಿಯು ವೀರ ಸ್ವರ್ಗವನ್ನು ಸೇರಿ ನಮ್ಮ ಹೋರಾಟವನ್ನು ನೋಡುತ್ತಿದ್ದಾರೆ. ನಾವು ಈ ಕೋಟೆಯನ್ನು ಸ್ವಾಧೀನಪಡಿಸಿಕೊಳ್ಳುವುದರಲ್ಲಿ ಅವನಂತೆಯೇ ಮರಣ ಹೊಂದಿದರೂ ನಮ್ಮ ಸೌಭಾಗ್ಯವೆಂದೇ ಹೇಳಬೇಕು" ಎಂದು ಹೇಳಿ ಸೈನಿಕರನ್ನು ಹುರಿ ತುಂಬಿಸಿದನು. ಪುರಂದರದಲ್ಲಿ ರಜೀ ಉದ್ದೀನ್‌ಖಾನನೆಂಬ ಮೊಗಲ್ ಫೌಜುದಾರನಿದ್ದನು. ಮೊಗಲ್ ಬಾದಷಹನಿಗೆ ಪುರಂದರಘಡವೆಂದರೆ ಬಹಳ ಕಣ್ಣಿತ್ತು. ಏನೇ ಆಗಲಿ, ಈ ಪುರಂದರಘಡವು ನಮ್ಮ ಕೈಯಲ್ಲಿರಬೇಕು. ಪುರಂದರಘಡ ರಾಯಘಡ ಇವೆರಡು ಕೋಟೆಗಳು ನಮ್ಮ ವಶದಲ್ಲಿದ್ದರೆ, ಮಹಾರಾಷ್ಟ್ರರನ್ನು ಬಗ್ಗು ಬಡಿಯಬಹುದು ಎಂದು ಬಾದಷಹನು ಹೇಳುತ್ತಿದ್ದನು. ರಜೀ ಉದ್ದೀನನನ್ನು ಬಾದಷಹನೇ ಚುನಾಯಿಸಿ, ಅಲ್ಲಿಗೆ ಫೌಜುದಾರನನ್ನಾಗಿ ನೇಮಿಸಿದ್ದನು. ರಜೀ ಉದ್ದೀನನು ಅಲ್ಲಿಗೆ ಬಂದ ಮೇಲೆ ಎರಡು ಕೋಟೆಗಳನ್ನು ದುರಸ್ತು ಮಾಡಿಸಿ ಬಂದೋಬಸ್ತಾಗಿಟ್ಟಿದ್ದನು. ದುರ್ಗದ ಕೆಳಭಾಗದಲ್ಲಿ ಐದು ಸಹಸ್ರ ಮೊಗಲ್ ಸೈನ್ಯವಿದ್ದಿತು. ಕೋಟೆಯ ಬತೇರಿಗಳ ಮೇಲೆ ಎರಡೆರಡು

ತೋಪುಗಳಿದ್ದುವು. ರಜೀ ಉದ್ದೀನನು ಕನಸು ಮನಸುಗಳಲ್ಲಿಯೂ ಮಹಾರಾಷ್ಟ್ರರು ಇಷ್ಟು ಬೇಗ ಆ ದುರ್ಗದ ಮೇಲೆ ಯುದ್ಧಕ್ಕೆ ಬರುವರೆಂಬುದನ್ನು ನೆನಪಿರಲಿಲ್ಲ.

ಮರಾಠಾ ಸೈನ್ಯಗಳು ಯುದ್ಧಕ್ಕೆ ಬರುತ್ತಿವೆಯೆಂಬುದನ್ನು ಗುಪ್ತಚಾರರ ಮುಖೇನ ಕೇಳಿ ರಜೀ ಉದ್ದಿನನು ದುರ್ಗದ ಕೆಳಭಾಗಕ್ಕೆ ಬಂದು ತನ್ನ ಸೈನ್ಯವನ್ನು ಎಚ್ಚರಿಸಿ ಯುದ್ಧಕ್ಕೆ ಎಬ್ಬಿಸಿದನು.

ಆ ಪ್ರಾಂತದಲ್ಲಿ ಮರಾಠರ ಯುದ್ಧ ನೀತಿಯನ್ನು ರಜೀಉದ್ದೀನನು ಅರಿತಿರಲಿಲ್ಲ. ಅಷ್ಟೇ ಅಲ್ಲ, ಅವನೆಂದೂ ಮರಾಠರೊಡನೆ ಯುದ್ಧ ಮಾಡಿಯೂ ಇರಲಿಲ್ಲ. ಅವನಿಗೆ ಮರಾಠರೆಂದರೆ ಬಹಳ ತಾತ್ಸಾರವಿದ್ದಿತು. ಪುರಂದರ ಘಡದಲ್ಲಿ ಒಬ್ಬ ಹಿಂದುವೂ ಉಳಿಯದಂತೆ ಓಡಿಸಿಬಿಟ್ಟಿದ್ದನು. ಎಲ್ಲಿಯೂ ಹೋಗಲು ದಿಕ್ಕಿಲ್ಲದೆ ಉಳಿದು ಕೊಂಡವರನ್ನು ಬಲಾತ್ಕಾರದಿಂದ ಮಹಮದೀಯಮತಕ್ಕೆ ಸೇರಿಸಿಬಿಟ್ಟಿದ್ದನು.

ಪುರಂದರಘಡವೆಂದರೆ ಶುದ್ಧ ಮುಸಲ್ಮಾನರ ದುರ್ಗವೆಂದು ಅವನು ಹೇಳಿಕೊಳ್ಳುತ್ತಿದ್ದನು. ತನ್ನ ದರಬಾರಿನಲ್ಲಿ "ಪುರಂದರಘಡಕ್ಕೆ ಈ ಹೆಸರನ್ನೇ ಕಿತ್ತು ಹಾಕಿ ಬಿಡುತ್ತಿದ್ದೆ. ಈ ಹೆಸರನ್ನು ಏಕಿಟ್ಟಿದ್ದೇನೆ, ಬಲ್ಲಿರಾ? ಆ ಶಿವಾಜಿಯು ಈ ಹೆಸರನ್ನು ನೆನೆದು ನೆನೆದು ಅದರ ಮೇಲೆ ಮುಸಲ್ಮಾನರು ಮೆರೆಯುತ್ತಿರುವುದನ್ನು ನೋಡಿ ನೋಡಿ ಕೊರಗಿ ಸಾಯಲಿ, ಎಂದು ಈ ಹೆಸರನ್ನು ಉಳಿಸಿದ್ದೇನೆ" ಎಂದು ಹೇಳಿಕೊಳ್ಳುತ್ತಿದ್ದನು. ರಜೀಉದ್ದೀನನು ನೀಲಾಜಿರಾಯರಿಗೆ ಪತ್ರ ಬರೆದು ದೂತರ ಹಸ್ತಕೊಟ್ಟು ಕಳುಹಿಸಿದನು.

"ನೀಲಾಜೀ, ನೀನು ಔರಂಗಾಬಾದಿನಲ್ಲಿ ಯುವರಾಜರ ದರ್ಬಾರಿನಲ್ಲಿ ರಾಯಭಾರಿಯಾಗಿದ್ದವನು. ಅವನೇ ಅಲ್ಲವೆ ನೀನು? ಅಥವಾ ಬೇರೆ ನೀಲಾಜಿಯೋ? ಆ ನೀಲಾಜಿ ಒಬ್ಬ ಕಾರಕೂನ ಅಥವಾ ಮುತ್ಸದ್ದಿ, ಇಲ್ಲವೆ, ಹೊಗಳುಭಟ್ಟನೆಂದು ನಾನೆಂದುಕೊಂಡಿದ್ದೆ. ನೀನಿಂದು ಸೇನಾಧಿಪತಿಯಾಗಿ ಬಂದಿದ್ದೀಯೆ. ಅದೂ ನಮ್ಮ ಮುಂದೆ ಬಂದು ನಿಂತಿದ್ದೀಯೆ. ಹಿಂದಕ್ಕೆ ಹೊರಟು ಹೋಗು. ಅನ್ಯಾಯವಾಗಿ ಸಾವಿರಾರು ಜನಗಳನ್ನು ಬಲಿಗೊಡಬೇಡ. ಹೊಟ್ಟೆಗಿಲ್ಲದ ಈ ನಿನ್ನ ಸೈನಿಕರು ರಣಭೂಮಿಯಲ್ಲಿ ನಿಂತು ಯುದ್ಧ ಮಾಡಬಲ್ಲರೇ? ಕಾಡಿನಲ್ಲಿ ಕಟ್ಟಿಗೆ ಕಡಿಯುವ ಜನ ಇವರು. ದನ

ಕುರಿಗಳನ್ನು ಮೇಯಿಸುವ ಗೋವಳರಿನರು. ಇವರನ್ನು ಕಟ್ಟಿಕೊಂಡು ನಮ್ಮೊಡನೆ ಯುದ್ಧಕ್ಕೆ ಬರಬಹುದೆ? ನಿಮ್ಮ ಶಿವಾಜಿ ಅಂದು ಕಳೆದು ಕೊಂಡು ಮೊಗಲರಿಗೆ ಒಪ್ಪಿಸಿದ ಅನೇಕ ದುರ್ಗಗಳಿವೆ. ಅಲ್ಲಿಗೆ ಹೋಗು. ಪುರಂದರಘಡವೆಂದರೆ ಲಡ್ಡು ತಿಂದಂತೆ ಎಂದುಕೊಳ್ಳಬೇಡ. ನಮ್ಮ ಸೈನ್ಯವು ಅಜೇಯವಾದುದು. ನಮ್ಮ ವಶದಲ್ಲಿರುವ ದುರ್ಗವು ಅಭೇದ್ಯ ವಾದುದು. ಹೋಗು. ಹಿಂದಕ್ಕೆ ಹೋಗು" ಎಂದು ಬರೆದು ಕಳುಹಿಸಿದ್ದನು.

ನೀಲಾಜಿಯು ಆ ಪತ್ರವನ್ನು ಓದಿಕೊಂಡು ಆ ದೂತರನ್ನು ಸಮೀಪಕ್ಕೆ ಕರೆದು "ನಿಮ್ಮ ಫೌಜುದಾರರಿಗೆ ಬರೆಯುವುದಕ್ಕೆ ಬರುತ್ತದೇನು? ಯಾರೋ ಕಾರಕೂನರು ಹುಚ್ಚು ಹುಚ್ಚಾಗಿ ಬರೆದುಕೊಟ್ಟಿದ್ದಾರೆ. ಅವರು ನಿಮ್ಮ ಫೌಜುದಾರರನ್ನು ಮೋಸಮಾಡಿದ್ದಾರೆ. ಈ ಪತ್ರವನ್ನು ಬರೆದುಕೊಟ್ಟು ನಮ್ಮನ್ನು ರೇಗಿಸಿ ಫೌಜುದಾರನ ಕೊರಳು ಕತ್ತರಿಸುವ ಉಪಾಯ ಮಾಡಿ ದ್ದಾರೆ. ಯಾರೋ ಜಾತಿಕೆಟ್ಟ ಹಿಂದೂ ಕಾರಕೂನನು ನಿಮ್ಮ ಫೌಜು ದಾರನ ಹತ್ತಿರ ಸೇರಿಕೊಂಡಿರಬಹುದು. ಅವನು ಈ ಸಮಯದಲ್ಲಿ ಛಲತೀರಿಸಿಕೊಳ್ಳುತ್ತಿದ್ದಾನೆ. ಹೇಳು, ನಿಮ್ಮ ಫೌಜುದಾರನಿಗೆ. ಮರಾಠ ಸೈನ್ಯದಲ್ಲಿರುವ ಯಾವ ಭಟನಿಗೂ ನಿಮ್ಮ ಫೌಜುದಾರನು ಸರಿಸಮನಾಗ ಲಾರನೆಂದು ಹೇಳು. ಬರಿಯ ಮಾತಿನಲ್ಲಿ ಪರಾಕ್ರಮ ಮಾಡಿ ಫಲವೇನು? ನಾವು ಯುದ್ಧ ಮುಖದಲ್ಲಿಯೇ ನಿಂತಿದ್ದೇವೆ. ಪರಾಕ್ರಮವಿದ್ದರೆ ಫೌಜು ದಾರನು ನಮ್ಮೆದುರಿಗೆ ಬರಲಿ" ಎಂದು ಹೇಳಿ ಆ ದೂತರನ್ನು ಅಟ್ಟಿದನು.

ಯುದ್ಧವು ಖಡಾಖಡಿಯಾಗಿ ನಡೆಯುತ್ತಿತ್ತು. ಕತ್ತಲಾಯಿತು. ರಣ ಭೂಮಿಯಲ್ಲಿ ಉಭಯ ಪಕ್ಷಗಳೂ ಯುದ್ಧವನ್ನು ನಿಲ್ಲಿಸಿದ್ದರೂ ರಾತ್ರಿ ಅಲ್ಲಲ್ಲಿ ಕಾವಲುಗಾರರಲ್ಲಿ ಕಶಮಿಸಿಯಾಗುತ್ತಲೇ ಇತ್ತು. ನಾಲ್ಕಾರು ಹೆಣಗಳು ಉರುಳಿದ್ದುವು. ಬೆಳಕು ಹರಿಯುತ್ತಲೇ ನೀಲಾಜಿರಾಯನು ಕಹಳೆಯನ್ನು ಊದಿಸಿ, ರಣಭೇರಿಯನ್ನು ಹೊಡೆಸಿ, ಸೈನ್ಯವನ್ನು ಮುಂದಕ್ಕೆ ನಡೆಸಿದನು.

ಮೊಗಲ್ ಸೈನ್ಯಗಳು ಯುದ್ಧಕ್ಕೆ ಬಂದವು. ರಜೀಉದ್ದೀನನೇ ಮುಂದೆ ನಿಂತು ಪರಾಕ್ರಮದಿಂದ ಹೋರಾಡುತ್ತಿದ್ದನು. ಅಷ್ಟರಲ್ಲಿ ಉತ್ತರ ಭಾಗ ದಿಂದ ಪ್ರತಾಪರಾಯನು ದುರ್ಗದ ಮೇಲು ಭಾಗಕ್ಕೆ ಸೈನ್ಯಸಮೇತ ಬಂದು ಬಿಟ್ಟಿದ್ದಾನೆಂದೂ, ತೋಪುಗಳನ್ನು ಸ್ವಾಧೀನಪಡಿಸಿಕೊಂಡಿದ್ದಾನೆಂದೂ ರಜೀ

ಉದ್ದೀನನಿಗೆ ವರ್ತಮಾನವು ಬಂದಿತು. ಅವನು ಗಾಬರಿಯಿಂದ ಹಠಾತ್ತನೆ ಕೋಟೆಯ ಮೇಲುಭಾಗಕ್ಕೆ ಏರಿಬಂದನು. ರಜೀಉದ್ದೀನನು ಯುದ್ಧ ಮುಖದಿಂದ ಮಾಯವಾಗುತ್ತಲೇ ಮೊಗಲ್ ಸೈನ್ಯಗಳು ಹಿಮ್ಮೆಟ್ಟಲಾರಂಭಿಸಿದವು. ನೀಲಾಜಿರಾಯನು "ಆಕ್ರಮಣಮಾಡಿರಿ. ಆ ಸೈನ್ಯಗಳು ಓಡಿ ಹೋಗುವುದಕ್ಕೆ ಎಡೆಗೊಡಬೇಡಿರಿ. ಅವರು ಉಳಿಯಬಾರದು. ಉಳಿದರೆ ಮತ್ತೆ ಮುಗುಳಿ ಬರುವರು" ಎಂದು ಅಬ್ಬರಿಸಿದನು. ಹಿಂದುಗಡೆ ನಾಲ್ಕು ಮೈಲಿಗಳ ದುರ್ಗ ಓಡಿಹೋಗಲು ಆಸ್ಪದವೇ ಇಲ್ಲ. ಯುದ್ಧಮಾಡಲು ಉತ್ಸಾಹವಿಲ್ಲ. ಮೊಗಲ್ ಸೈನ್ಯಗಳು ಹತ್ತು ಹತ್ತಾಗಿ, ನೂರುನೂರಾಗಿ ಉರುಳಿಬಿದ್ದವು. ರಜೀಉದ್ದೀನನು ಮೊದಲನೆಯ ಕೋಟೆಯಲ್ಲಿ ಪ್ರತಾಪ ರಾಯನನ್ನು ಎದುರಿಸಿದನು.

ಕೋಟೆಯ ಮಹಾದ್ವಾರದಿಂದ ನೀಲಾಜಿಯ ಸೈನ್ಯಗಳು ಹತ್ತಿಬರುತ್ತಿದ್ದುವು. ರಜೀಉದ್ದೀನನ ಸೈನ್ಯ ಕೆಳಕೋಟೆಯಲ್ಲಿ ಐನೂರಕ್ಕಿಂತ ಹೆಚ್ಚಿರಲಿಲ್ಲ. ಪರಾಕ್ರಮದಿಂದ ಹೋರಾಡಿದರು. ಮರಾಠಾ ಸೈನಿಕರ ಹೊಡೆತಕ್ಕೆ ಮೊಗಲ ಸೈನಿಕರು ಸತ್ತು ಬೀಳುತ್ತಿದ್ದರು.

ರಜೀಉದ್ದೀನನು ಸೆರೆಸಿಕ್ಕಿದನು. ಪ್ರತಾಪರಾಯನು ಅವನನ್ನು ಸೆರೆಹಿಡಿದು ಕೋಟೆಯ ಪಹರೆಯ ಕೋಣೆಯಲ್ಲಿ ಬಂಧಿಸಿದನು.

ಪ್ರತಾಪರಾಯನು ಮೇಲಿನ ಕೋಟೆಯನ್ನು ಆಕ್ರಮಿಸಲು ಹೊರಟನು. ಅಷ್ಟರಲ್ಲಿ ನೀರಾಜಿರಾಯನ ಸೈನ್ಯಗಳು ಹೆಬ್ಬಾಗಿಲಿನಿಂದಲೇ ಕೆಳಗಿನ ದುರ್ಗವನ್ನು ಪ್ರವೇಶಮಾಡಿದವು. ಮೊಗಲ್ ಸೈನಿಕರ ದಿರಿಸನ್ನು ಧರಿಸಿದ್ದ ಪಹರೆಯವನೊಬ್ಬನು ಕೋಣೆಯಲ್ಲಿ ಬಂಧಿತನಾಗಿದ್ದ ರಜೀಉದ್ದೀನನನ್ನು ದರದರನೆ ಹೊರಗಿನ ಅಂಗಣಕ್ಕೆ ಎಳೆತಂದು ಕತ್ತಿಯನ್ನು ಎತ್ತಿಹೊಡೆದನು. ನೀಲಾಜಿಯು "ಅವನನ್ನು ಹಿಡಿಯಿರಿ" ಎಂದು ಕೂಗಿಕೊಂಡನು. ಅಷ್ಟರಲ್ಲಿ ರಜೀಉದ್ದೀನನ ತಲೆಯು ನೆಲದ ಮೇಲೆ ಉರುಳಿತ್ತು. ಆ ಖಡ್ಗಧಾರಿ ಸಿಪಾಯಿಯು ಆ ತಲೆಯನ್ನು ಕಾಲಿನಿಂದ ಒದ್ದು ಕತ್ತಿಯನ್ನು ಚುಚ್ಚಿ ಮೇಲಕ್ಕೆ ಎತ್ತಿದನು. ಮರಾಠಾ ಸೈನಿಕರು ಅವನನ್ನು ಬಲವಾಗಿ ಹಿಡಿದುಕೊಂಡರು. ಅವನು "ನನ್ನನ್ನು ಹೊಡೆಯಬೇಡಿರಿ. ಸೇನಾಧಿಪತಿಗಳ ಮುಂದೆ ನಾನೇ ಬರುತ್ತೇನೆ. ನನ್ನ ಕಡೆಯ ಮಾತೊಂದಿದೆ. ಅದನ್ನು

ಹೇಳಿ ಅವರ ಪಾದದೆಡೆಯಲ್ಲಿ ಪ್ರಾಣ ಬಿಡುತ್ತೇನೆ ನಾನೂ ಮಹಾರಾಜನೇ. ಆದರೆ ಜಾತಿಕೆಟ್ಟ ಮಹಾರಾಜ" ಎಂದು ಹೇಳಿದನು. ಅವನು ಆವೇಶ ಪೂರಿತನಾಗಿ ಆ ಕತ್ತಿಯ ಮೊನೆಯಲ್ಲಿ ಸಿಕ್ಕಿಸಿದ್ದ ಫೌಜುದಾರನ ತಲೆಯನ್ನು ತೆಗೆದುಕೊಂಡು ಹೋಗಿ ನೀಲಾಜಿರಾಯನ ಮುಂದಿಟ್ಟು ನಮಸ್ಕರಿಸಿದನು.

"ಮಹಾಪ್ರಭು, ಇನ್ನೂ ನನ್ನ ಪರಿಚಯವಾಗಲಿಲ್ಲವೆ? ನಾನು ಈ ದುರ್ಗದ ದರೋಗ, ಖಂಡೇರಾಯ. ಶಿವಾಜೀ ಪ್ರಭುಗಳ ದರ್ಶನಕ್ಕೆ ನಾನು ಅರ್ಹನಲ್ಲ. ನಾನು ಜಾತಿಕೆಟ್ಟ ಮಹಾರಾಜ. ಈಗ ನನ್ನ ಹೆಸರು ಅಬ್ದುಲ್ಲಾಖಾನ್. ನನ್ನ ಪತ್ನಿಯನ್ನು ಬಲಾತ್ಕಾರವಾಗಿ ಈ ಫೌಜದಾರನು ಅಂತಃಪುರದಲ್ಲಿ ಇಟ್ಟುಕೊಂಡಿದ್ದಾನೆ. ಅವಳನ್ನು ಇಲ್ಲಿಗೆ ಕರೆಸಿದರೆ ಈ ಪಾಪಿಯ ತಲೆಯನ್ನು ಅವಳ ಮುಂದಿಟ್ಟು ಇದೇ ಕತ್ತಿಯಿಂದಲೇ ನನ್ನ ತಲೆಯನ್ನು ಕಡಿದು ತಮ್ಮ ಪಾದಗಳಿಗೆ ಒಪ್ಪಿಸುತ್ತೇನೆ. ನನ್ನಂಥ ಜಾತಿಕೆಟ್ಟವನಿಗೆ ಇದೇ ತಕ್ಕ ಪ್ರಾಯಶ್ಚಿತ" ಎಂದನು.

ನೀಲಾಜೀರಾಯನು ಸಮಾಧಾನದಿಂದ ಅವನ ಮಾತುಗಳನ್ನು ಕೇಳಿ "ಖಂಡೇರಾವ್, ನೀನು ಶಾಂತನಾಗು. ಇನ್ನು ನಿನ್ನ ವಿಚಾರಣೆಯು ಉಳಿದಿದೆ" ಎಂದು ಹೇಳಿ ಅವನನ್ನು ಸೈನಿಕರಿಗೆ ಒಪ್ಪಿಸಿದನು.

ಮೇಲಿನ ದುರ್ಗವನ್ನು ಪ್ರತಾಪರಾಯನು ವಶಪಡಿಸಿಕೊಂಡನು. ಸ್ತ್ರೀಯರನ್ನು ಜೋಪಾನವಾಗಿ ದುರ್ಗದಿಂದ ಕೆಳಗಿಳಿಸಿ, ಅವರ ಇಷ್ಟ ಬಂದಲ್ಲಿಗೆ ಹೋಗಬಹುದೆಂದು ಅಪ್ಪಣೆಮಾಡಿದನು.

ರಜೀಉದ್ದೀನನ ಪತ್ನಿಯು ಪ್ರತಾಪರಾಯನನ್ನು ಭೇಟಿಮಾಡ ಬೇಕೆಂದು ಹೇಳಿಕಳುಹಿಸಿದಳು.

ಪ್ರತಾಪರಾಯನು ಸಂಕೋಚದಿಂದ ಅರಮನೆಗೆ ಹೋಗಿ ಭೇಟಿಯಿತ್ತನು. ಆ ಫೌಜುದಾರನ ಪತ್ನಿಯು "ನನ್ನ ಹೆಸರು ಖಾದಿರಾ. ನಾನು ದೆಹಲಿಯ ದರಬಾರಿನಲ್ಲಿ ನರ್ತಕಿಯಾಗಿದ್ದೆ. ಔರಂಗಜೇಬ್ ಬಾದಷಹರು ನರ್ತಕಿಯರನ್ನೆಲ್ಲಾ ವಜಾ ಮಾಡಿದರು. ನನ್ನ ಮೇಲೆ ಅನುಗ್ರಹವಿಟ್ಟು ಈ ರಜೀಉದ್ದೀನನಿಗೆ ನನ್ನನ್ನು ಕೊಟ್ಟರು. ಈ ಪುರಂದರಘಡಕ್ಕೆ ನಾನು ಬಂದಂದಿನಿಂದ ಈ ಸ್ಥಳ, ಇಲ್ಲಿರುವ ಉದ್ಯಾನ ಮಂಟಪ, ಇವುಗಳನ್ನೆಲ್ಲಾ ಅತ್ಯಂತ ಪ್ರೀತಿಸುತ್ತಾ ಇದ್ದೆ. ಈ ಸ್ಥಳವನ್ನು ಬಿಟ್ಟು ಹೋಗಲು ನಾನೊ

ಪ್ಪುವುದಿಲ್ಲ. ಇಲ್ಲಿಯೇ ಎಲ್ಲಿಯಾದರೊಂದು ಕಡೆ ಇರಲು ನನಗೆ ಅಪ್ಪಣೆ ಕೊಡಿಸಬೇಕು" ಎಂದು ಕೇಳಿಕೊಂಡಳು.

ಪ್ರತಾಪರಾಯನು ಅಂತಹ ಯುವನ ಸುಂದರಿಯನ್ನು ಎಂದೂ ನೋಡಿರಲಿಲ್ಲ. ಅವನ ಮನಸ್ಸಿನಲ್ಲಿ ಸ್ತ್ರೀ ಮೋಹವು ಅಂಕುರಿಸಿತು. ಅವನು "ಖಾದಿರಾ ಬೇಗಂ, ನೀನು ಏನು ಬೇಡಿದರೂ ಕೊಡಬೇಕೆನಿಸುತ್ತದೆ ನನ್ನ ಮನಸ್ಸಿಗೆ. ನನ್ನ ಅಧಿಕಾರ ಅತ್ಯಲ್ಪವಾದುದು, ಕ್ಷಣಿಕವಾದುದು. ಶಿವಾಜೀ ಮಹಾರಾಜರ ಅಧಿಕಾರವೇ ಸರ್ವತ್ರ ಅಪ್ರತಿಹತವಾದುದು. ಆದರೆ ಈ ದುರ್ಗದಲ್ಲಿ ಸ್ತ್ರೀಯಾಗಲಿ, ಪುರುಷನಾಗಲಿ, ಮುಸಲ್ಮಾನರಿರಕೂಡದು ಎಂದು ನಮ್ಮ ಮಹಾರಾಜರು ಆಜ್ಞೆಯಿತ್ತಿದ್ದಾರೆ. ನನಗಿರುವ ಅಧಿಕಾರವನ್ನು ನಿಮಗಾಗಿ ವಿನಿಯೋಗಿಸುತ್ತೇನೆ. ಶಿವಾಜಿ ಮಹಾರಾಜರು ಇಲ್ಲಿಗೆ ಬರುವವರೆಗೆ ನೀವು ಈ ಅರಮನೆಯಲ್ಲಿಯೇ ಇರಲು ನಾನು ಅವಕಾಶ ಕೊಡಿಸುತ್ತೇನೆ ನಿಮ್ಮ ಪ್ರಾರ್ಥನೆಯನ್ನು ಅವರಲ್ಲಿಯೇ ಮಾಡಿಕೊಳ್ಳಿರಿ. ಅವರು ಅದಕ್ಕೆ ಒಪ್ಪಿದರೆ ನನ್ನಷ್ಟು ಸಂತೋಷ ಪಡುವವರು ಮತ್ತಾರೂ ಇರರು. ಅವರು ಒಪ್ಪದಿದ್ದರೆ ಮರ್ಯಾದೆಯಿಂದ ನಿಮ್ಮನ್ನು ಔರಂಗಾಬಾದಿಗೆ ಕಳುಹಿಸಲು ನಾನು ಏರ್ಪಾಡು ಮಾಡುತ್ತೇನೆ. ನಿಮ್ಮ ಐಶ್ವರ್ಯವನ್ನೂ ತೆಗೆದುಕೊಂಡು ಹೋಗಲು ಪರವಾನಗಿ ಕೊಡಿಸುತ್ತೇನೆ. ಯುವರಾಜ ಅಜಂಷಹರು ಉದಾರಿಗಳು, ಕಲಾಪ್ರಿಯರು ಮತ್ತು ನನ್ನ ಸ್ನೇಹಿತರು. ಅವರು ನಿಮ್ಮನ್ನು ವಿಶ್ವಾಸದಿಂದ ಇರಿಸಿಕೊಳ್ಳುತ್ತಾರೆ. ಮತ್ತೊಮ್ಮೆ ಎಂದಾದರೂ ಆ ಯುವರಾಜರ ಸನ್ನಿಧಿಯಲ್ಲಿ ನಿಮ್ಮ ದರ್ಶನವಾದರೆ ನನಗೆ ಬಹಳ ಸಂತೋಷ. ನನ್ನಂಥ ಮಹಾರಾಷ್ಟ್ರ ಸರದಾರನು ಯಾವ ಹೆಂಗಸಿಗೂ ಇದಕ್ಕಿಂತ ಹೆಚ್ಚು ಔದಾರ್ಯವನ್ನು ತೋರಿಸುವುದು ಸಾಧ್ಯವಿಲ್ಲ" ಎಂದು ಹೇಳಿ ಮನಸ್ಸು ಸೆಳೆಯುತ್ತಿದ್ದರೂ ಮತ್ತೆ ಅವಳ ಕಡೆಗೆ ತಿರುಗಿ ನೋಡದೆಯೇ ಹೊರಟು ಹೋದನು.

ಪುರಂದರಘಡವು ಮಹಾರಾಷ್ಟ್ರರ ವಶವಾಯಿತೆಂದು ತಿಳಿದೊಡನೆ ಹರ್ಷಭರಿತನಾಗಿ ಶಿವಾಜಿಯು ಆ ಕೋಟೆಗೆ ಓಡಿ ಬಂದನು. ಪ್ರತಾಪರಾವ್ ಮತ್ತು ನೀಲಾಜಿರಾಯರನ್ನು ಆಲಂಗಿಸಿ ಪ್ರಶಂಸೆ ಮಾಡಿದನು. ಮರಾಠಾ ಸೈನಿಕರಿಗೆಲ್ಲಾ ಇನಾಂಗಳನ್ನು ಕೊಡಿಸಿದನು. ಕೆಳಗಿನ ಕೋಟೆಯಲ್ಲಿಯೇ

ಶಿವಾಜಿಯು ವಾಸವಾಡುತ್ತಿದ್ದ ಅರಮನೆ. ಆ ಅರಮನೆಯೊಳಗೆ ಪ್ರವೇಶ ಮಾಡುವಾಗ ಶಿವಾಜಿಗೆ ಹಿಂದೆಂದೂ ಆಗದಷ್ಟು ಹರ್ಷವು ಉಕ್ಕುತ್ತಿದ್ದಿತು. ತಾಯಿಯ ಬಳಿಗೆ ಮಗುವು ಹೋಗುವಂತೆ ಆ ನಿವಾಸವನ್ನು ಶಿವಾಜಿ ಮಹಾ ರಾಜನು ಪ್ರವೇಶಮಾಡಿದನು. ಹಜಾರದಲ್ಲಿ ನೆಲದ ಮೇಲೆಯೇ ಕುಳಿತು ಕೊಂಡು ಸೇನಾಧಿಪತಿಗಳನ್ನು ಕರೆಕಳುಹಿಸಿದನು. ನೀಲಾಜೀರಾವ್, ಪ್ರತಾ ಪರಾವ್ ಅವರುಗಳು ಬಂದು ಶಿವಾಜಿಯನ್ನು ನೋಡಿ ಆಶ್ಚರ್ಯಚಕಿತರಾ ದರು.

"ಮಹಾರಾಜನೇ, ಈ ಹಜಾರದಲ್ಲಿ ಇಷ್ಟೊಂದು ಅನರ್ಘ್ಯಾಸನಗಳಿವೆ. ನೀವು ನೆಲದ ಮೇಲೆ ಕುಳಿತಿರುವುದು ಸೋಜಿಗವಾಗಿದೆ" ಎಂದು ಹೇಳಿದರು.

ಶಿವಾಜಿಯು ನಸು ನಗುವನ್ನು ನಕ್ಕು "ಸಂಗಡಿಗರೇ, ಈ ಆಸನಗಳೂ ಈ ರತ್ನಗಂಬಳಿಗಳೂ, ಈ ತಿವಾಸಿಗಳೂ ಇವೆಲ್ಲವೂ ಮುಸಲ್ಮಾನ ರಿಂದ ಅನುಭೂತವಾದವುಗಳು. ಆಸೆಯಿಂದ ಅವುಗಳ ಮೇಲೆ ಕುಳಿತರೆ ನಾನು ಧರ್ಮಭ್ರಷ್ಟನಾದಂತೆ ಆಗುತ್ತದೆ." ಎಂದು ಹೇಳಿದನು.

ಅವರಿಬ್ಬರೂ ನಾಚಿಕೆಯಿಂದ ತಲೆ ತಗ್ಗಿಸಿದರು. ಮೊದಲು ಖಂಡೇ ರಾಯನನ್ನು ಸಮ್ಮುಖಕ್ಕೆ ಕರೆಸಿದರು. ಅವನ ಪತ್ನಿ ಮಧುರಾಬಾಯಿಯನ್ನು ಕರೆತಂದು ನಿಲ್ಲಿಸಿದರು.

ಅವಳು ಅವಕುಂಠನವತಿಯಾಗಿ ನಿಂತಿದ್ದಳು.

ಶಿವಾಜಿಯು "ಖಂಡೇರಾಯ, ನಿನ್ನ ವಿಚಾರವೆಲ್ಲಾ ಇವರುಗಳಿಂದ ಕೇಳಿ ಅರಿತಿದ್ದೇನೆ. ನೀನು ಫೌಜುದಾರನನ್ನು ಕೊಂದು ಈ ಕೋಟೆಯು ನಮ್ಮ ವಶವಾಗಲು ಪ್ರಯತ್ನ ಮಾಡಿದ್ದೀಯೆ. ಇದಕ್ಕಾಗಿ ನಿನಗೆ ಬಹು ಮಾನಗಳು ಕೊಡಲ್ಪಡುತ್ತವೆ, ಆದರೆ ನೀನು ಮುಸಲ್ಮಾನನಾಗಿದ್ದೀ. ಇಚ್ಛಾಪೂರ್ವಕ ಮುಹಮ್ಮದೀಯ ಮತವನ್ನು ಅವಲಂಬಿಸಿದ್ದೀ. ನಮ್ಮಲ್ಲಿ ನಿನ್ನನ್ನು ಇಟ್ಟುಕೊಳ್ಳುವಂತಿಲ್ಲ. ಈ ಮಧುರಾಬಾಯಿಯ ವಿಚಾರವೂ ನಮಗೆ ತಿಳಿದಿದೆ. ಇವಳದೇನೂ ದೋಷವಿಲ್ಲ. ನೀನು ಕ್ರೋಧದಿಂದ, ಅಪಮಾನದಿಂದ ಅವಳನ್ನು ಶಿಕ್ಷಿಸಬಾರದು. ನೀವಿಬ್ಬರೂ ಎಲ್ಲಿಯಾದರೂ ಹೋಗಿ ಬದುಕಿಕೊಳ್ಳಿ. ಮಹಾರಾಷ್ಟ್ರ ರಾಜ್ಯದಲ್ಲಿಯೇ ನೀವಿರಬಹುದು. ಆದರೆ ಈ ಕೋಟೆಯಲ್ಲಿ ಇರಲಾಗದು ಎಂದು ಅಪ್ಪಣೆ ಮಾಡಿ, ಅವರಿಬ್ಬ

ರನ್ನೂ ಕಳುಹಿಸಿದನು.

ಪ್ರತಾಪರಾಯನನ್ನು ಉದ್ದೇಶಿಸಿ "ನೀನು ಬಾಲ್ಯದಿಂದಲೂ ನನ್ನ ಸಂಗಡಿಗ. ಅನೇಕ ಯುದ್ಧಗಳನ್ನು ಮಾಡಿದ್ದೀ. ಈ ಫೌಜುದಾರನ ಪತ್ನಿಯನ್ನು ನೋಡಿ ಮೋಹಗೊಂಡಿದ್ದೀ. ನಿನಗಾಗಿ ಅವಳಿಗೆ ಬೇಕಾದ ಸವಲತ್ತುಗಳನ್ನು ಕೊಟ್ಟು ಕಳುಹಿಸಲು ನಾನು ಸಂತೋಷದಿಂದ ಒಪ್ಪುತ್ತೇನೆ. ನಮ್ಮ ಮರಾಠಾ ಸರದಾರರು ಹೆಣ್ಣುಗಳ ಮುಖ ನೋಡಿ ಮರುಳಾಗಬಾರದೆಂದು ಎಚ್ಚರಿಸುತ್ತೇನೆ. ಇಂಥಾ ಒಬ್ಬ ಸ್ತ್ರೀ--ಒಬ್ಬಳೇ ಒಬ್ಬ ಸ್ತ್ರೀಯಿಂದ ನಾವು ಕಟ್ಟಿರುವ ರಾಮರಾಜ್ಯವು ಹಾಳಾಗಿಹೋಗಬಹುದು. ಇದನ್ನು ಎಲ್ಲರೂ ಸರ್ವದಾ ನೆನಪಿನಲ್ಲಿಡಿರಿ" ಎಂದು ಹೇಳಿ ಆ ಪುರಂದರಘಡವನ್ನು ನೀಲಾಜಿರಾಯನಿಗೆ ಒಪ್ಪಿಸಿ ರಾಯಘಡಕ್ಕೆ ಹಿಂತಿರುಗಿದನು.

---

೫೮

ಮರಾಠರು ಮಾವಳಿ, ಪರ್ನೀರ್ ಮತ್ತು ಜುನ್ನಾರ್ ದುರ್ಗಗಳನ್ನು ಆಕ್ರಮಣ ಮಾಡಲು ಹೊರಟರು. ಮಾವಳಿ ದುರ್ಗವು ಸಣ್ಣದಾದರೂ ಕಡಿದಾದ ಆಯಕಟ್ಟಿನ ದುರ್ಗ. ಆ ದುರ್ಗದಲ್ಲಿ ಮನೋಹರದಾಸ್ ಎಂಬ ಕಿಲ್ಲೇದಾರನಿದ್ದನು. ಇವನು ರಜಪೂತರವನು. ಇವನ ಪತ್ನಿ ರಾಣೀ ರಾಧಾಮಣಿಯೆಂಬುವಳಿದ್ದಳು. ಈ ದುರ್ಗವು ಹಿಂದುಗಳಿಂದ ನಿಬಿಡವಾದ ದುರ್ಗ. ಆ ದುರ್ಗದ ಸೊಬಗನ್ನು ಎಷ್ಟು ಬಣ್ಣಿಸಿದರೂ ಸಾಲದು. ಮರಾಠರು ಯುದ್ಧಕ್ಕೆ ಬರುತ್ತಾರೆಂದು ತಿಳಿಯುವ ಮುನ್ನವೇ ಮನೋಹರದಾಸನು ಯುದ್ಧಕ್ಕೆ ಎಲ್ಲಾ ಸನ್ನಾಹಗಳನ್ನು ಮಾಡಿಕೊಂಡಿದ್ದನು. ಅವನಲ್ಲಿದ್ದುದು ಐದು ಸಹಸ್ರ ರಜಪೂತ ಸೈನ್ಯಗಳು ಮಾತ್ರ. ಅವನು ಯುದ್ಧಕ್ಕೆ ಹೊರಡುವ ಮುನ್ನ ರಾಧಾಮಣಿ ದೇವಿಯು ಅವನನ್ನು ತಡೆದು "ಪ್ರಭು ತಾವು ಪರಾಕ್ರಮಶಾಲಿಗಳೇನೋ ನಿಜ. ಆದರೆ ಸೈನ್ಯದ ಬಲಾಬಲಗಳನ್ನು

ನೋಡಿಕೊಳ್ಳದೆ ಯುದ್ಧಕ್ಕೆ ನುಗ್ಗುವುದು ಬುದ್ಧಿವಂತರ ಲಕ್ಷಣವಲ್ಲ. ಈ ದುರ್ಗವನ್ನು ಮೊಗಲರಾಗಲಿ, ರಜಪೂತರಾಗಲಿ ಯುದ್ಧದಲ್ಲಿ ಗೆದ್ದು ತೆಗೆದು ಕೊಳ್ಳಲಿಲ್ಲ. ಇದು ಮಹಾರಾಜಾ ಜಯಸಿಂಹರವರಿಗೆ ಶಿವಾಜಿಯು ತಾನಾಗಿ ಒಪ್ಪಿಸಿದ ಕೋಟೆ. ಈ ದುರ್ಗವು ಇರುವ ಸನ್ನಿವೇಶವೇನೋ ನಮಗೆ ಅನು ಕೂಲವಾಗಿದೆ. ಆದರೆ ಈ ದುರ್ಗವನ್ನು ನಿರ್ಮಾಣ ಮಾಡಿದವರು ಮಹಾ ರಾಷ್ಟ್ರರೇ. ಇದರಲ್ಲಿರುವ ಸಂದುಗಳನ್ನು ಅವರು ಚೆನ್ನಾಗಿ ಬಲ್ಲರು. ಸೇನಾ ಬಲವು ಅವರಿಗೇ ಹೆಚ್ಚಾಗಿದೆ" ಎಂದಳು.

ಮನೋಹರದಾಸನು "ದೇವಿ, ನಿನ್ನ ಮಾತುಗಳಲ್ಲಿ ಯುಕ್ತಿಯಿದೆ. ರಜಪೂತ ರಮಣಿಯರು ಯುದ್ಧಕ್ಕೆ ಹೊರಟಿರುವ ಪತಿಯನ್ನು ತಡೆಯಬಾರ ದೆಂಬ ಕುಲಧರ್ಮವನ್ನು ನೀನರಿಯೆಯಾ? ಬಲಾಬಲಗಳು ಹೇಗೇ ಇರಲಿ, ಸಮಯ ಸನ್ನಿವೇಶಗಳು ಯಾವ ರೀತಿಯಲ್ಲೇ ಇರಲಿ, ರಜಪೂತನು ಯುದ್ಧ ಬಂದರೆ ಎದೆಗೊಟ್ಟು ನಿಲ್ಲಲೇಬೇಕು. ನೀನೇನು ಹೇಳುವೆ ದೇವಿ"?

ರಾಧಾರಾಣಿಯು "ಸಂಧಿಯನ್ನು ಮಾಡಿಕೊಳ್ಳಬಹುದು."

ಸಂಧಿಯನ್ನು ಮಾಡಿಕೊಳ್ಳುವುದು, ಪಲಾಯನ ಮಾಡುವುದು, ಇಂಥ ಮಾರ್ಗಗಳೆಷ್ಟೋ ಇವೆ. ಅವೆಲ್ಲಾ ನಮಗೆ ತಕ್ಕವಲ್ಲ. ಸಂಧಿಮಾಡಿ ಕೊಳ್ಳುವ ಅಧಿಕಾರವು ನನಗೆಲ್ಲಿದೆ? ಅದು ಯುವರಾಜ ಅಜಂಷಹರವರಿಗೆ ಸೇರಿದ್ದು. ಬಾದಷಹರವರಿಗೆ ಸೇರಿದ್ದು. ಯುದ್ಧಮಾಡುವುದು ಮಾತ್ರ ನನ್ನ ಪಾಲಿಗೆ ಬಂದದ್ದು" ಎಂದು ಹೇಳಿ ಮನೋಹರದಾಸನು ಹೊರಟುಹೋದನು.

ರಾಧಾರಾಣಿಯು ದೇವಾಲಯಗಳಿಲ್ಲೆಲ್ಲಾ ಪೂಜೆಮಾಡಿಸಿದಳು. ಮುತ್ತೈದೆಯರನ್ನು ಕರೆಸಿ ಮಂಗಳ ದ್ರವ್ಯಗಳನ್ನು ಕೊಟ್ಟಳು. ಬ್ರಾಹ್ಮಣರಿಗೆ ದಕ್ಷಿಣೆಗಳನ್ನು ಇತ್ತಳು. ಬಡಬಗ್ಗರಿಗೆ ಅನ್ನದಾನಗಳನ್ನು ಮಾಡಿದಳು.

ಯುದ್ಧದಲ್ಲಿ ಮನೋಹರದಾಸನು ಪರಾಕ್ರಮದಿಂದ ಹೋರಾಡಿದನು. ಮರಾಠಾ ಸೇನಾಧಿಪತಿ ರಘುನಾಥ ಬಲ್ಲಾಳನು ಮನೋಹರದಾಸನಿಗೆ ದೂತರ ಮುಖೇನ ಹೇಳಿ ಕಳುಹಿಸಿದನು. "ನೀನು ರಜಪೂತ ಹಿಂದು. ನೀನೇಕೆ ನಮಗೆ ವಿರುದ್ಧವಾಗಿ ಹೋರಾಡುತ್ತಿ? ಈ ಯುದ್ಧದಲ್ಲಿ ಎಷ್ಟೇ ಪರಾಕ್ರಮ ತೋರಿದರೂ ಕೊಂಚ ಕಾಲಮಾತ್ರ. ನಮ್ಮ ಕೋಟೆಗಳನ್ನು ನಾವು ತೆಗೆದು ಕೊಂಡೇ ತೆಗೆದುಕೊಳ್ಳುತ್ತೇವೆ. ನಿಮ್ಮ ಸೈನ್ಯ ರಜಪೂತ ಸೈನ್ಯ. ಈ ಮುಸ

ಲ್ಮಾನರಿಗಾಗಿ ಅವರನ್ನೇಕೆ ಬಲಿಕೊಡುತ್ತೀರಿ" ಎಂದು ಹೇಳಿ ಕಳುಹಿಸಿದನು.

ಮನೋಹರದಾಸನು "ಉಪ್ಪುಂಡ ದೊರೆಯ ಋಣ ತೀರಿಸುವುದಕ್ಕಾಗಿ ನಾನು ಯುದ್ಧಕ್ಕೆ ಬಂದಿದ್ದೇನೆ. ಹಿಂದು–ಮುಸಲ್ಮಾನ್, ಈ ಜಿಜ್ಞಾಸೆಯನ್ನು ರಣಕ್ಷೇತ್ರಕ್ಕೆ ಬಂದಾಗ ಮಾಡತಕ್ಕದ್ದಲ್ಲ. ಎಂದು ಬಾದಷಹರ ಸೇವೆಗೆ ಸೇರಿದೆನೋ ಅಂದೇ ಅದು ನಿರ್ಧಾರವಾಗಿ ಹೋಗಿದೆ. ನಿಮ್ಮ ಸೇನಾಧಿಪತಿಗಳಿಗೆ ಹೇಳಿರಿ. ಈ ದುರ್ಗ ಮರಾಠರದಾಗಿದ್ದರೆ ಅವರು ಯುದ್ಧಮಾಡಿ ತೆಗೆದುಕೊಳ್ಳಬಹುದು. ಈ ವಸುಮತಿಯು ಯಾರ ಸ್ವತ್ತೂ ಅಲ್ಲ. ಆಳುವವರ ರಾಜ್ಯವದು" ಎಂದು ಹೇಳಿ ಕಳುಹಿಸಿದನು.

ಯುದ್ಧವು ಬಹುದಿನಗಳು ನಡೆಯಲಿಲ್ಲ. ದುರ್ಗದ ಸನ್ನಿವೇಶ ಬಲದಿಂದ ರಜಪೂತರಿಗೇ ಜಯವಾಯಿತು. ಮನೋಹರದಾಸನು ವಿಜಯೋತ್ಸಾಹದಿಂದ ತನ್ನ ಅರಮನೆಗೆ ಹೋದನು. ರಾಣಿಯು ಹರ್ಷಚಿತ್ತಳಾಗಿ ಅವನನ್ನು ವಂದಿಸಿ ಆರತಿಬೆಳಗಿ ಅರಮನೆಯೊಳಗೆ ಕರೆದೊಯ್ದಳು.

ಆದರೆ ಮರಾಠರು ಹಿಂಜರಿದು ಹೋದ ರೀತಿಯನ್ನು ನೋಡಿ ಯುದ್ಧಪ್ರವೀಣರಾದ ಆ ರಜಪೂತನು ಅರ್ಥಮಾಡಿಕೊಂಡನು. ಈ ಯುದ್ಧವು ಮುಕ್ತಾಯವಾಗಲಿಲ್ಲ. ಬೇರೊಂದು ಕಡೆ ಮರಾಠರು ಯುದ್ಧಕ್ಕೆ ಬಂದೇ ಬರುತ್ತಾರೆ, ಎಂದುಕೊಂಡು "ದೇವಿ, ಈ ವಿಜಯವು ಸಂಪೂರ್ಣ ವಿಜಯವಲ್ಲ. ಈ ರಣಕ್ಷೇತ್ರಗಳಲ್ಲಿ ಎಷ್ಟೋ ಯುದ್ಧಗಳಾಗುತ್ತವೆ. ಮರಾಠರು ಒಂದೆಡೆಯನ್ನೂ ಮೊಗಲರಿಗೆ ಬಿಟ್ಟುಕೊಡಕೂಡದೆಂದು ಹಠತೊಟ್ಟಿದಾರೆ. ಮೂವತ್ತಾರು ದುರ್ಗಗಳ ಮುಂದೆಯೂ ಮತ್ತೆ ಯುದ್ಧವು ಇದ್ದೇ ಇದೆ. ಈ ರಣಕ್ಷೇತ್ರಕ್ಕೆ ಬಾದಷಹರು ಸ್ವತಃ ಬಂದು ನಿಲ್ಲದೆ ಇತ್ಯರ್ಥವಾಗುವಂತಿಲ್ಲ" ಎಂದು ಹೇಳಿದನು.

ಒಂದುವಾರದ ಕಾಲ ಹೊರಳಲಿಲ್ಲ. ಶಿವಾಜಿಯು ಮೂವತ್ತು ಸಾವಿರ ಸೈನ್ಯದೊಡನೆ ಬಂದು ಮಾವಳಿ, ಪರ್ನೀರ್ ಮತ್ತು ಜುನ್ನಾರ್ ದುರ್ಗಗಳನ್ನು ಬಲವಾಗಿ ಮುತ್ತಿದನು. ಮಾವಳಿ ದುರ್ಗದ ಕಡೆ ತಾನೇ ಹೊರಟನು. ಮನೋಹರದಾಸನಿಗೆ ದೂತರ ಮುಖೇನ ಹೇಳಿ ಕಳುಹಿಸಿದನು. "ನೀನು ಚೆನ್ನಾಗಿ ಯುದ್ಧಮಾಡುತ್ತೀಯೆಂದು ಕೇಳಿದ್ದೇವೆ. ಅದು ರಜಪೂತರು ಲಕ್ಷಣ. ನೀನು ಫೌಜುದಾರನೂ ಅಲ್ಲ. ಮಹಾಸೇನಾಧಿಪತಿಯೂ ಅಲ್ಲ.

ಸಾಮಾನ್ಯ ಕಿಲ್ಲೇದಾರನೊಡನೆ ಯುದ್ಧಮಾಡುವುದು ನಮಗೆ ಭೂಷಣವಲ್ಲ. ನಿನ್ನ ಸೈನ್ಯತಾನೇ ಎಷ್ಟಿದೆ ? ನೀನು ದುರ್ಗವನ್ನು ಬಿಟ್ಟುಹೋಗು. ಅನ್ಯಾಯ ವಾಗಿ ಪ್ರಾಣ ಕಳೆದುಕೊಳ್ಳಬೇಡ" ಎಂದು ಹೇಳಿ ಕಳುಹಿಸಿದನು.

ಮನೋಹರದಾಸನು ಆ ದೂತರಿಗೆ ನಿಮ್ಮ ಶಿವಾಜಿ ಮಹಾರಾಜರು ಯುದ್ಧಕ್ಕೆ ಬಂದಿರುವುದು ಸಂತೋಷ. ರಣಕ್ಷೇತ್ರದಲ್ಲಿ ಅವರನ್ನು ಭೇಟಿ ಮಾಡುವುದಾಗಿ ಹೇಳಿರಿ" ಎಂದು ಉತ್ತರ ಹೇಳಿ ಕಳುಹಿಸಿದನು. ಕೋಟೆಯ ಬಾಗಿಲುಗಳನ್ನು ಮುಚ್ಚಿಸಿ, ಉಳಿದಿದ್ದ ಸೈನ್ಯವನ್ನು ಇಟ್ಟುಕೊಂಡು ದುರ್ಗದ ರಕ್ಷಣೆ ಮಾಡುತ್ತಿದ್ದನು.

ಶಿವಾಜಿಯ ಸೈನಿಕರು ನಾಲ್ಕೂ ಕಡೆಗಳಿಂದ ಕೋಟೆಯನ್ನು ಮುತ್ತಿ ದರು. ದಿಡ್ಡಿಯ ಬಾಗಿಲನ್ನು ಒಡೆದು ಒಳಗೆ ನುಗ್ಗಿದರು. ಮಹಾದ್ವಾರದ ಕಡೆಯಿಂದ ಶಿವಾಜಿಯು ಸೈನ್ಯ ಸಮೇತನಾಗಿ ನುಗ್ಗಿದನು. ಮನೋಹರ ದಾಸನು ಕಡೆಯವರೆಗೆ ಹೋರಾಡಿ ಕತ್ತಿಯ ಪೆಟ್ಟನಿಂದ ಮಡಿದುಬಿದ್ದನು. ಉಳಿದಿದ್ದ ಸ್ವಲ್ಪ ಮಂದಿ ರಜಪೂತರು ಹಾಹಾಕಾರಮಾಡುತ್ತಾ ಹಿಮ್ಮೆಟ್ಟಿದರು. ಶಿವಾಜಿಯು ತಕ್ಷಣವೇ ಯುದ್ಧ ನಿಲ್ಲಿಸಬೇಕೆಂದು ಸೈನಿಕರಿಗೆ ಅಪ್ಪಣೆ ಮಾಡಿ ದನು. ರಾಧಾರಾಣಿಯು ಅರಮನೆಯ ಹಿಂದೆ ಇದ್ದ ಉದ್ಯಾನದಲ್ಲಿ ಮಹಾ ಚಿತೆಯನ್ನು ನಿರ್ಮಾಣ ಮಾಡಿಸಿದಳು. ತಾನೇ ಸ್ವತಃ ದುರ್ಗದ ಮಹಾ ದ್ವಾರದ ಬಳಿಗೆ ಶಿವಾಜಿಯನ್ನು ಕಂಡು, ತನ್ನ ಪತಿಯ ಶರೀರವನ್ನು ಕೊಡಿಸ ಬೇಕೆಂದು ಪ್ರಾರ್ಥನೆ ಮಾಡಿದಳು.

ಶಿವಾಜಿಯು ಅಪ್ಪಣೆಯಿತ್ತನು.

ಮನೋಹರದಾಸನ ಶರೀರವನ್ನು ಪಲ್ಲಕಿಯಲ್ಲಿಟ್ಟು ಉತ್ಸವದಿಂದ ಕರೆದೊಯ್ದರು. ರಾಧಾರಾಣಿಯು ಜೊತೆಯಲ್ಲಿಯೇ ನಡೆದುಹೋದಳು. ಅರಮನೆಯಲ್ಲಿದ್ದ ಸಮಸ್ತವಸ್ತುಗಳನ್ನೂ ಆಭರಣಗಳನ್ನೂ ವಸ್ತ್ರಾಲಂಕಾರ ಗಳನ್ನೂ ದಾನಮಾಡಿ ಮಂಗಳ ದ್ರವ್ಯಗಳನ್ನು ದುರ್ಗದಲ್ಲೆಲ್ಲಾ ಹಂಚಿ ಪತಿಯ ಶರೀರವನ್ನು ಚಿತೆಯ ಮೇಲೇರಿಸಿದಳು.

ಶಿವಾಜಿಯು ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಬಂದು ಆ ರಾಣಿಗೆ ನಮಸ್ಕರಿಸಿ "ನೀನು ಪುಣ್ಯಾತ್ಮಳು. ಆಶೀರ್ವಾದ ಮಾಡು" ಎಂದು

ಪ್ರಾರ್ಥನೆ ಮಾಡಿದನು. ರಾಣಿಯು "ವಿಜಯೀಭವ" ಎಂದು ಆಶೀರ್ವದಿಸಿ, ನಗುನಗುತ್ತಾ ಉರಿಯುತ್ತಿದ್ದ ಚಿತೆಯನ್ನೇರಿ ಸಹಗಮನ ಮಾಡಿದಳು.

ಜುನ್ನಾರ್ ಮತ್ತು ಪರ್ನೀರ್ ದುರ್ಗಗಳು ಮಹಾರಾಷ್ಟ್ರರ ಕೈವಶವಾಗಿದ್ದುವು. ದಾವೂದ್‌ಖಾನನು ಬೃಹತ್ ಸೈನ್ಯಸಮೇತನಾಗಿ ಬಂದು ಅತಿ ಪ್ರಯಾಸದಿಂದ ಆ ಮೂರು ದುರ್ಗಗಳನ್ನೂ ಹಿಡಿದನು. ಶಿವಾಜಿಯು ಹಿಡಿದಿದ್ದ ದುರ್ಗಗಳನ್ನು ಬಿಟ್ಟುಹೋಗಬೇಕಾಯಿತು. ಆ ದುರ್ಗಗಳು ಅತ್ಯಂತ ಮುಖ್ಯವಾದ ದುರ್ಗಗಳು ಬಾದಷಹನು ದಾವೂದ್‌ಖಾನನನ್ನು ಪ್ರಶಂಸೆ ಮಾಡಿ ದರಬಾರಿನಿಂದ ದಾವೂದ್‌ಖಾನನಿಗೆ ಖಿಲ್ಲತ್ತುಗಳನ್ನು ಕಳುಹಿಸಿಕೊಟ್ಟನು.

ಮರಾಠರು ಪುರಂದರಘಡದಲ್ಲಿ ಮತ್ತೆ ಸೇರಿ ಸಮಾಲೋಚನೆ ಮಾಡಿದರು. ಪ್ರತಿಜ್ಞೆಗಳನ್ನು ತೆಗೆದುಕೊಂಡರು. "ನಮ್ಮ ಶರೀರಗಳಲ್ಲಿ ಪ್ರಾಣಗಳಿರುವವರೆಗೆ ಈ ಬಾರಿ ಹೋರಾಟವನ್ನು ನಿಲ್ಲಿಸಕೂಡದು. ಇದು ಸರಿಯಾದ ಸಮಯವಾಗಿದೆ. ಈಗ ವೈಮನಸ್ಯ ರೆತರೆ ಇಂಥಾ ಸಮಯವು ಮತ್ತೆ ದೊರಕದು" ಎಂದು ಮಾಡನಾಡಿಕೊಂಡು, ಮತ್ತೆ ಹೊಸ ಹುರುಪಿನಿಂದ ಆ ಮೂರು ದುರ್ಗಗಳನ್ನೂ ಮುತ್ತಿಗೆ ಹಾಕಿದನು. ಮಹಾರಾಷ್ಟ್ರರು ಅನಿರೀಕ್ಷಿತವಾಗಿ ಬಂದುದನ್ನು ಕಂಡು ದಾವೂದ್‌ಖಾನನು ಗಾಬರಿಯಿಂದ ಹಿಮ್ಮೆಟ್ಟಿ ಓಡಿಹೋದನು. ಆ ಮೂರು ದುರ್ಗಗಳನ್ನೂ ಮಹಾರಾಷ್ಟ್ರರು ಪೂರ್ತಿಯಾಗಿ ಪುನಃ ಕೈವಶಮಾಡಿಕೊಂಡರು. ಅಲ್ಲಿ ಒಬ್ಬ ಮೊಗಲ್ ಸೈನಿಕನೂ ಉಳಿಯಲಿಲ್ಲ.

———

೬

ಮಾವಳಿ, ಪರ್ನೀರ್ ಮತ್ತು ಜುನ್ನಾರ್ ಕೋಟೆಗಳು ಮರಾಠರ ಕೈವಶವಾದ ಮೇಲೆ ಸೂರತ್ತಿನವರೆಗೆ ಘಾಟಾಮಾರ್ಗವು ಮರಾಠರ ಸ್ವಾಧೀನವಾದಂತೆ ಆಯಿತು. ಈ ದುರ್ಗಗಳ ಆಕ್ರಮಣವಾದ ಮೇಲೆ ಶಿವಾಜಿಯು

ದಾವೂದ್‌ಖಾನನನ್ನು ಬೆನ್ನಟ್ಟಿ ಅಹಮುದ್ ನಗರದವರೆಗೆ ಓಡಿಸಿಕೊಂಡು ಹೋದನು. ಅಹಮುದ್‌ನಗರವು ಮೊಗಲ್ ಬಾದಷಹರ ದಖ್ಖನ್ನಿನ ರಾಜಧಾನಿ. ಶಿವಾಜಿಯು ಅಹಮುದ್‌ನಗರದ ಕೋಟೆಯ ಮೇಲೆ ಧಾಳಿ ಮಾಡಿದರೆ ಬಹುಕಾಲ ಹೆಣಗಬೇಕಾಗುವುದೆಂದು ಬಗೆದು ಸುತ್ತುಮುತ್ತಲೂ ಇರುವ ಮೊಗಲ್ ರಾಜಕ್ಕೆ ಸೇರಿದ ಅನೇಕ ಗ್ರಾಮಗಳನ್ನೂ ಊರುಗಳನ್ನೂ ಲೂಟಿ ಮಾಡಿಕೊಂಡು ಹಿಂತಿರುಗಿದನು.

ಶಿವಾಜಿಯು ಪುನಃ ದಂಡೆತ್ತಿ ಬರುತ್ತಾನೆಂದು ಸೂರತ್ತಿನಲ್ಲಿ ಗಲಭೆ ಎದ್ದಿತು. ಸೂರತ್ ನಗರವನ್ನು ರಕ್ಷಿಸುವುದು ಮೊಗಲರಿಗೆ ಅತಿಮುಖ್ಯವಾಗಿತ್ತು. ಸೂರತ್ ನಗರವು ಕೈಬಿಟ್ಟು ಹೋದರೆ ಪಶ್ಚಿಮ ತೀರದ ರೇವು ಪಟ್ಟಣಗಳೆಲ್ಲವೂ ಕೈಬಿಟ್ಟು ಹೋಗುತ್ತವೆ. ಅಷ್ಟೇ ಅಲ್ಲ. ವಿದೇಶೀ ವ್ಯಾಪಾರಗಳೆಲ್ಲವೂ ಮಹಾರಾಷ್ಟ್ರರ ವಶವಾಗುತ್ತದೆ. ವ್ಯಾಪಾರದ ಆಶೆಯಿಂದ ಇಂಗ್ಲಿಷರೂ, ಡಚ್ಚರೂ, ಫ್ರೆಂಚರೂ ಶಿವಾಜಿಯ ಕಡೆ ಸೇರಿಕೊಳ್ಳುತ್ತಾರೆ. ಹೇಗಾದರೂ ಮಾಡಿ ಇದನ್ನು ತಡೆಗಟ್ಟಬೇಕೆಂದು ದೆಹಲಿಯಿಂದ ಬಹದ್ದೂರ್ ಖಾನ್ ಎಂಬ ಸೇನಾಧಿಪತಿಯನ್ನು ಐದುಸಹಸ್ರ ದಂಡಿನೊಂದಿಗೆ ಬಾದಷಹನು ಸೂರತ್ತಿನ ರಕ್ಷಣೆಗಾಗಿ ಕಳುಹಿಸಿಕೊಟ್ಟನು. ಸೂರತ್ತಿನಲ್ಲಿ ಎದ್ದಿದ್ದ ವಾರ್ತೆಯು ನಿಜವಾಗಿಯೇ ಪರಿಣಮಿಸಿತು. ಶಿವಾಜಿಯು ಅಸಂಖ್ಯಾತ ಸೇನಾಬಲದೊಂದಿಗೆ ಸೂರತ್ತಿಗೆ ಮುವತ್ತು ಮೈಲಿಗಳ ದೂರದಲ್ಲಿ ಬೀಡುಬಿಟ್ಟಿದ್ದಾನೆಂಬ ಸಮಾಚಾರ ಬಂದಿತು. ಶಿವಾಜಿಯು ತನ್ನ ದೂತರ ಮುಖೇನ ವರ್ತಕರಿಗೆ ಹೇಳಿಕಳುಹಿಸಿದನು. "ಸೂರತ್ತಿನಲ್ಲಿರುವ ವರ್ತಕರೆಲ್ಲರೂ ಸೇರಿ ಹನ್ನೆರಡು ಲಕ್ಷ ರೂಪಾಯಿಗಳನ್ನು ತಂದೊಪ್ಪಿಸಿದರೆ ನಾವು ಸೂರತ್ತನ್ನು ರಕ್ಷಣೆ ಮಾಡುತ್ತೇವೆ. ಇಲ್ಲದಿದ್ದರೆ ಸೂರತ್ ನಾಶವಾಗಿ ಹೋಗುತ್ತದೆ. ನೀವು ಡೆಲ್ಲಿಯ ಬಾದಷಹನಿಗೆ ವರ್ಷೇ ವರ್ಷೇ ಹನ್ನೆರಡು ಲಕ್ಷ ತೆರಿಗೆ ಸುಂಕಗಳನ್ನು ತೆರುತ್ತಿದ್ದೀರಿ. ಅವರಿಂದ ನಿಮಗಾವ ರಕ್ಷಣೆಯೂ ದೊರೆಯುತ್ತಿಲ್ಲ. ಇದ್ದು ಮುಂದೆ ವರ್ಷಂಪ್ರತಿ ನಮಗೆ ಹನ್ನೆರಡು ಲಕ್ಷ ಹಣ ಕೊಡಬೇಕು" ಎಂದು ಹೇಳಿ ಕಳುಹಿಸಿದನು. ವರ್ತಕರೆಲ್ಲರೂ ಸಭೆ ಸೇರಿ ಮಾತನಾಡಿಕೊಂಡರು. ಈ ಸಭೆಯಲ್ಲಿ ವಿದೇಶೀ ವರ್ತಕರು ಸೇರಲಿಲ್ಲ. ವರ್ತಕರೆಲ್ಲರೂ ಪರಸ್ಪರ

ಮಾತನಾಡಿಕೊಂಡರು. 'ಶಿವಾಜಿಗೆ ಇಷ್ಟು ಹಣ ಕೊಡಲು ಸಾಧ್ಯವಿಲ್ಲ. ಇತ್ತ ಮೊಗಲರು, ಅತ್ತ ಮರಾಠರು ಇಬ್ಬರೂ ನಮ್ಮಲ್ಲಿ ಹಣ ಸುಲಿಯುತ್ತಾರೆ. ಈ ಸೂರತ್ತಿನ ವ್ಯಾಪಾರವೇ ಬೇಡ. ನಾವೆಲ್ಲಿಗಾದರೂ ಬೇರೆ ಸ್ಥಳಗಳಿಗೆ ಹೊರಟು ಹೋಗೋಣ. ವ್ಯಾಪಾರಸ್ಥರಿಗೆ ಯಾವ ದೇಶವಾದರೇನು?' ಎಂದುಕೊಂಡರು. ಶಿವಾಜಿಯ ಕಡೆಯವರು ತಮ್ಮ ರಾಯಭಾರವು ನಿರರ್ಥಕ ವಾಯಿತೆಂದು ಶಿವಾಜಿಗೆ ಅರಿಕೆ ಮಾಡಿದರು. ಶಿವಾಜಿಯು "ವ್ಯಾಪಾರಸ್ಥರ ಲಕ್ಷಣವೇ ಹಾಗೇ. ಕೊಟ್ಟವರಿಗೇ ಕೊಡುವುದಕ್ಕೆ ಅವರು ಮುಕ್ತಹಸ್ತರಾಗಿ ರುತ್ತಾರೆ. ಈಗ ಹೊಸಬರಿಗೆ ಕೊಡುವುದೆಂದರೆ ಬಿಗಿ ಮುಷ್ಟಿ. ಈ ವರ್ತಕರು ಬಡಪಟ್ಟಿಗೆ ಕೈಬಿಡುವುದಿಲ್ಲ. ಕಬ್ಬಿಣವನ್ನು ಬೆಂಕಿಯಲ್ಲಿ ಚೆನ್ನಾಗಿ ಕಾಸಿ ಬಡಿದಲ್ಲದೆ ಬಗ್ಗುವುದಿಲ್ಲ. ಇರಲಿ, ಅವರು ಪ್ರತ್ಯಕ್ಷವಾಗಿ ಅನುಭವಿ ಸುತ್ತಾರೆ." ಎಂದು ಹೇಳಿ ಸೈನ್ಯಗಳನ್ನು ಮುಂದಕ್ಕೆ ತೆಗೆದುಕೊಂಡು ಹೋಗು ವಂತೆ ಅಪ್ಪಣೆ ಮಾಡಿದನು.

ದೆಹಲಿಯಿಂದ ರಕ್ಷಣಾಧಿಕಾರಿಯಾಗಿ ಬಂದಿದ್ದ ಬಹದ್ದೂರ್‌ಖಾನನು ವರ್ತಕರನ್ನೆಲ್ಲಾ ಕರೆಯಿಸಿ "ಸೂರತ್ತಿನ ರಕ್ಷಣೆಯ ಏರ್ಪಾಡು ಮಾಡು ತ್ತೇನೆ. ಯಾರಿಗೂ ಕೂದಲು ಕೊಂಕುವುದಕ್ಕೆ ಬಿಡುವುದಿಲ್ಲ" ಎಂದು ಆಟಾಟೋಪದಿಂದ ಭರವಸೆಯಿತ್ತನು. ಐವತ್ತು ಸಹಸ್ರ ರೂಪಾಯಿಗಳನ್ನು ಅರಮನೆಗೆಯಲ್ಲಿ ತಂದೊಪ್ಪಿಸಿದರು. ಬಹದ್ದೂರ್‌ಖಾನನು ಆ ಹಣವನ್ನೆಲ್ಲಾ ಭದ್ರವಾಗಿ ಬಚ್ಚಿಟ್ಟು ಏನೂ ಅರಿಯದವನಂತೆ ಕುಳಿತನು.

ಮರಾಠಾ ಸೈನ್ಯಗಳು ಸೂರತ್ ಕೋಟೆಯನ್ನು ಮುತ್ತಿದವು. ವರ್ತಕ ರೆಲ್ಲರೂ ಬಹದ್ದೂರ್‌ಖಾನನ ಅರಮನೆಯ ಮುಂದೆ ಮೊರೆಯಿಟ್ಟರು. ಬಹದ್ದೂರ್‌ಖಾನನು ಅರಮನೆಯಿಂದ ಹೊರಗೆಬಂದು "ಎರಡುಲಕ್ಷ ರೂಪಾಯಿ ಗಳನ್ನು ತಂದುಕೊಡಬೇಕು. ಇಲ್ಲದಿದ್ದರೆ ಈಗ ಈ ಕೋಟೆಯನ್ನು ರಕ್ಷಣೆ ಮಾಡಲು ಸಾಧ್ಯವಾಗುವುದಿಲ್ಲ. ನಿಮ್ಮ ಮನೆ ಮಠಗಳೆಲ್ಲ ಲೂಟಿಯಾಗಿ ಹೋಗುತ್ತವೆ. ನಮ್ಮದೇನೂ ಜವಾಬ್ದಾರಿಯಿಲ್ಲ" ಎಂದು ವರ್ತಕರಿಗೆ ಹೇಳಿ ದನು. ವರ್ತಕರು ನಿರಾಕರಿಸಿದರು. ಬಹದ್ದೂರ್‌ಖಾನನನ್ನು ಧಿಕ್ಕಾರ ಮಾಡಿದರು. ವರ್ತಕರು ಗಂಟು ಮೂಟೆಗಳನ್ನು ಕಟ್ಟಿಕೊಂಡು ಊರು ಬಿಟ್ಟು ಹೊರಡಲನುವಾದರು. ಬಹದ್ದೂರ್‌ಖಾನನು ಕೋಪಾವೇಶದಿಂದ

ರಾಜಭಟರೊಡನೆ ಬಂದು ಕೋಟೆಯ ಬಾಗಿಲುಗಳನ್ನು ಮುಚ್ಚಿಸಿ ಆ ಜನರು ಹೊರಗೆ ಹೊರಡದಂತೆ ತಡೆಗಟ್ಟಿದನು. ವಿದೇಶೀ ವರ್ತಕರು ಹತ್ತು ಮೈಲಿಗಳ ದೂರದಲ್ಲಿದ್ದ ಸ್ವಾಲಿ ಎಂಬ ರೇವು ತೀರಕ್ಕೆ ತಮ್ಮ ಖಜಾನೆಗಳನ್ನೂ ಬೆಲೆ ಬಾಳುವ ವಸ್ತುಗಳನ್ನೂ ಸಾಗಿಸಿಕೊಂಡು ಹೋಗಿ ಹಡಗುಗಳ ಮೇಲೆ ಏರಿಸಿ, ಅಲ್ಲಿ ಭದ್ರವಾದ ಕಾವಲುಗಳನ್ನು ಏರ್ಪಾಡುಮಾಡಿದರು. ಖಾಜೀಬೇಗ್ ಎಂಬ ಧನಾಢ್ಯನಾದ ಮುಸಲ್ಮಾನ್ ವರ್ತಕನು ಇಂಗ್ಲೀಷರನ್ನು ಬೇಡಿ ಕೊಂಡು ಅವರ ಮರೆಯಲ್ಲಿ ಆಶ್ರಯಪಡೆದನು.

ಶಿವಾಜಿಯು ಸೈನ್ಯಸಮೇತನಾಗಿ ಸೂರತ್ತನ್ನು ಪ್ರವೇಶಮಾಡಿದನು. ಇದಕ್ಕಿಂತ ಮುಂಚಿತವಾಗಿಯೇ ಡಚ್ ಅಧಿಕಾರಿಗಳು ನಜರುಗಳನ್ನು ತೆಗೆದು ಕೊಂಡು ಹೋಗಿ ಶಿಬಿರದಲ್ಲಿಯೇ ಭೇಟಿಮಾಡಿದರು. ಶಿವಾಜಿಯು ಡಚ್ ಕೋಠಿಗೆ ಏನೂ ತೊಂದರೆಯಿಲ್ಲದಂತೆ ಭರವಸೆಯಿತ್ತನು.

ಮರಾಠಾ ಸೈನಿಕರು ಸೂರತ್ತಿನಲ್ಲಿ ಮನೆಮಾನೆಗಳನ್ನೂ ದೊಡ್ಡ ದೊಡ್ಡ ಅಂಗಡಿಗಳನ್ನೂ ಸ್ವೇಚ್ಛೆಯಾಗಿ ಲೂಟಿ ಮಾಡಿದರು ಬೆಲೆ ಬಾಳುವ ವಸ್ತ್ರ ಗಳು ಆಭರಣಗಳು ಚಿನ್ನ ಬೆಳ್ಳಿ ಮುಂತಾದ ವಸ್ತುಗಳು ಹಣ ಇವೆಲ್ಲವನ್ನೂ ಲೂಟಿಮಾಡಿ ತಮ್ಮ ಶಿಬಿರಕ್ಕೆ ಕೊಂಡುಹೋಗಿ ಶೇಖರಿಸಿದರು. ಆ ಪಟ್ಟಣ ದಲ್ಲಿ ಮರಾಠಾ ಸೈನಿಕರನ್ನು ಎದುರಿಸುವವರೇ ಇಲ್ಲ. ಮೊದಲನೆಯ ದಿನ ಇಂಗ್ಲೀಷ್ ಕೋಠಿಯ ಮುಂದೆ ಬಂದಾಗ ಐವತ್ತು ಮಂದಿ ಇಂಗ್ಲಿಷ್ ಹಡಗು ಪಡೆಯ ಸೈನಿಕರು ಗುಂಡುಗಳನ್ನು ಹಾರಿಸಿ ಧೈರ್ಯದಿಂದ ಹೋರಾಡಿದರು. ಕೆಲವರು ಮರಾಠಾ ಸೈನಿಕರು ಸತ್ತು ಬಿದ್ದರು. ಅಷ್ಟರಲ್ಲಿ ಶಿವಾಜಿಗೆಖಚಿತವಾದ ವರ್ತಮಾನವು ತಿಳಿಯಿತು. ಇಂಗ್ಲಿಷ್ ಕೋಠಿಯಲ್ಲಿ ಬೆಲೆ ಬಾಳುವ ವಸ್ತು ಗಳಾವುವೂ ಇಲ್ಲ. ಹಣಕಾಸುಗಳೇನೂ ಇಲ್ಲ. ಮುಖ್ಯ ಮುಖ್ಯರಾದ ಅಧಿಕಾರಿಗಳು ಕೂಡಾ ಯಾರೂ ಇರಲಿಲ್ಲ. ಶಿವಾಜಿಯು ಆ ಕೋಠಿಯ ಬಾಗಿಲಿಗೆ ಬಂದು ತನ್ನ ಸೈನಿಕರನ್ನು ಮುಂದಕ್ಕೆ ಹೋಗುವಂತೆ ಆಜ್ಞಾಪಿಸಿ ದನು. ಎರಡನೆಯದಿನ ಇಂಗ್ಲೀಷ್ಕೋಠಿಯ ಪ್ರೆಸಿಡೆಂಟನಾದ ಜಿರಾಲ್ಡ್ ಎಂಬುವನು ತನ್ನ ಸಹೋದ್ಯೋಗಿಯೊಂದಿಗೆ ಕೆಲವು ಪಾರಿತೋಷಕಗಳನ್ನು ತೆಗೆದುಕೊಂಡು ಹೋಗಿ ಶಿಬಿರದಲ್ಲಿ ಶಿವಾಜಿಯ ಭೇಟಿ ಮಾಡಿದನು.

ಶಿವಾಜಿಯು ಆ ಇಬ್ಬರು ಇಂಗ್ಲಿಷ್ ಅಧಿಕಾರಿಗಳನ್ನು ಮರ್ಯಾದೆಯಿಂದ ಕಂಡು ಕೈಕುಲುಕಿ ಆಸನಗಳ ಮೇಲೆ ಕೂಡಿಸಿ ಸಂಭಾಷಣೆ ಮಾಡಿದನು.

ಇಂಗ್ಲಿಷ್ ಅಧಿಕಾರಿಗಳು ತಮ್ಮ ವ್ಯಾಪಾರಕ್ಕೆ ಏನೂ ನಷ್ಟವುಂಟು ಮಾಡಬಾರದೆಂದು ಕೇಳಿಕೊಂಡರು. "ನಾವು ದಂಡಕೊಡುವುದು ನ್ಯಾಯ ವಿಲ್ಲ. ನಮ್ಮ ಜನ ಆ ಪದ್ಧತಿಯನ್ನು ಅಪಮಾನವೆಂದು ಭಾವಿಸುತ್ತಾರೆ. ಈ ರೇವು ಪಟ್ಟಣವು ಮೊಗಲ್ ಚಕ್ರವರ್ತಿಯ ರಾಜ್ಯದಲ್ಲಿದೆ. ಅದನ್ನು ನೀವು ಗೆದ್ದು ಆಡಳಿತವನ್ನು ಸ್ಥಾಪಿಸಿದರೆ ಸೂಕ್ತತೆರಿಗೆ ಕಂದಾಯಗಳನ್ನು ನಿಮಗೆ ಕೊಡುತ್ತೇವೆ" ಎಂದುಹೇಳಿದರು.

ಶಿವಾಜಿಯು "ಈ ಸೂರತ್ತನ್ನು ವಶಪಡಿಸಿಕೊಳ್ಳುವುದೇನೂ ದೊಡ್ಡ ದಲ್ಲ. ಆದರೆ ಈ ರಾಜ್ಯವೇ ಪ್ರತ್ಯೇಕವಾಗಿದೆ. ಈ ರಾಜ್ಯವನ್ನು ಪೂರ್ತಾ ನಾವು ಗೆಲ್ಲಬೇಕು. ನಮ್ಮ ರಾಜ್ಯವೇ ಪೂರ್ತಿಯಾಗಿ ನಮ್ಮ ಕೈಗೆ ಬಂದಿಲ್ಲ. ಈ ಸೂರತ್ತನ್ನು ಮಾತ್ರ ಗೆದ್ದರೇನು ಫಲ. ಆದರೆ ನಾವು ನಿಮ್ಮ ಜನರಿ ಗಾಗಲಿ, ನಿಮ್ಮ ಕೋಠಿಗಾಗಲಿ ಯಾವ ಆತಂಕವನ್ನೂ ಉಂಟುಮಾಡುವು ದಿಲ್ಲ. ಇಂಗ್ಲೀಷ್ ಜನ ಸಭ್ಯ ಜನ. ನಿಮ್ಮನ್ನು ನಾವು ಸ್ನೇಹಭಾವದಿಂದ ನೋಡುತ್ತೇವೆ" ಎಂದು ಹೇಳಿ ಕಳುಹಿಸಿಕೊಟ್ಟನು.

ಮಾರನೆಯ ದಿನ ಶಿವಾಜಿಯು ಕುದುರೆಯ ಮೇಲೆ ಕುಳಿತು ಸೂರತ್ ನಗರದೊಳಗೆ ಹೋದಾಗ ಇಂಗ್ಲಿಷರು, ಫ್ರೆಂಚರು, ಡಚ್ಚರು ತಮ್ಮ ತಮ್ಮ ಕೋಠಿಗಳ ಮುಂದೆ ಪುಷ್ಪಹಾರಗಳನ್ನೂ ಫಲಗಳನ್ನೂ ಶಿವಾಜಿಗೆ ಒಪ್ಪಿಸಿ ದರು. ಆ ದಿನ ಫ್ರೆಂಚರ ಕೋಠಿಯ ಎದುರಿದ್ದ ತಾರ್ತಾರ್‌ಸರಾಯ್ ಯನ್ನು ಮರಾಠರು ಮುತ್ತಿದರು. ಅದು ಹೊಸದಾಗಿ ನಿರ್ಮಾಣವಾಗಿದ್ದ ಬಹು ದೊಡ್ಡ ಛತ್ರ. ಆ ಛತ್ರದಲ್ಲಿ ಮಕ್ಕಾಯಾತ್ರೆ ಹೋಗುವ ಯಾತ್ರಿಕರು ಇಳಿದುಕೊಳ್ಳುತ್ತಿದ್ದರು. ಈ ಸಮಯದಲ್ಲಿ ಕಾಷ್‌ಘರ್ ಮಾಜಿ ರಾಜನಾದ ಅಬ್ದುಲ್‌ಖಾನನೆಂಬುವನು ಮಕ್ಕಾಯಾತ್ರೆ ಮುಗಿಸಿಕೊಂಡು ಆ ಕಟ್ಟಡದಲ್ಲಿ ಬಿಡಾರಮಾಡಿದ್ದನು. ಅವನಲ್ಲಿ ಅಪಾರವಾದ ಧನಕನಕಗಳಿದ್ದುವು. ಔರಂಗ ಜೇಬನು ಗೌರವಾರ್ಥವಾಗಿ ಕೊಟ್ಟದ್ದ ಚಿನ್ನದ ಪಲ್ಲಕ್ಕಿ ಇದ್ದಿತು. ಆ ಛತ್ರದ ಕಾವಲುಗಾರರಾದ ತಾರ್ತಾರರೂ, ತುರ್ಕರೂ ಶಿವಾಜಿಯ ಸೈನ್ಯದೊಂದಿಗೆ ಪೌರುಷದಿಂದ ಹೋರಾಡಿದರು. ಆ ಹೋರಾಟ ಬಹಳ ಹೊತ್ತು ಸಾಗಲಿಲ್ಲ.

ಮರಾಠರು ಆ ಜನರನ್ನೆಲ್ಲಾ ಹೊಡೆಬಡಿದು ಆ ಛತ್ರವನ್ನೆಲ್ಲಾ ಲೂಟಿ ಮಾಡಿದರು. ಅಲ್ಲಿ ಅಪಾರವಾದ ಐಶ್ವರ್ಯವು ಮರಾಠರಿಗೆ ಸಿಕ್ಕಿತು.

ಮರಾಠರು ಸೂರತ್ ಅರಮನೆಯನ್ನು ಹಿಡಿಯುತ್ತಾರೆಂದು ಮೊಗಲ್ ಅಧಿಕಾರಿಯಾದ ಬಹದ್ದೂರ್‌ಖಾನನು ಭಯದಿಂದ ಕೋಟೆಯಲ್ಲಿ ಅಡಗಿಕೊಂಡಿದ್ದನು. ಮರಾಠರು ಅರಮನೆಗೆ ಪ್ರವೇಶಮಾಡಲಿಲ್ಲ. ಎಳೆಂಟು ದಿನಗಳು ಶಿವಾಜಿಯು ಸಾವಕಾಶವಾಗಿ ಅಲ್ಲಿ ಶಿಬಿರ ಬಿಟ್ಟಿದ್ದನು. ಆ ಪ್ರಾಂತದಲ್ಲೆಲ್ಲಾ 'ಮರಾಠಾ ಸೈನಿಕರು ಇಲ್ಲಿ ಬರುತ್ತಾರೆ. ಅಲ್ಲಿ ಬರುತ್ತಾರೆ, ಎಂಬ ವಾರ್ತೆಗಳು ಹಬ್ಬಿ ವರ್ತಕರು ಭಯಪಡುತ್ತಿದ್ದರು. ರೇವು ಪಟ್ಟಣವಾದ ಸ್ವಾಲಿಗೆ ಬರುತ್ತಾರೆಂದು ಬಹಳ ಗಡಿಬಿಡಿಯಾಗಿತ್ತು. ಆದರೆ ಶಿವಾಜಿಯು ಸ್ವಾಲಿಗೆ ಬರುವುದಿಲ್ಲವೆಂದು ಇಂಗ್ಲಿಷ್ ಕಂಪನಿಯವರಿಗೆ ಮೊದಲೇ ಖಚಿತವಾಗಿ ತಿಳಿದಿತ್ತು, ಅವರು ಮಾತ್ರ ನಿರ್ಭಯವಾಗಿದ್ದರು. ಶಿವಾಜಿಯು ಸೂರತ್ ಬಿಟ್ಟು ಹೋಗುವಾಗ ದೊಡ್ಡ ದೊಡ್ಡ ವರ್ತಕರಿಗೂ ಅಧಿಕಾರಿಗಳಿಗೂ ಒಂದು ಆಜ್ಞಾಪತ್ರವನ್ನು ಬರೆಸಿ ಕಳುಹಿಸಿದನು. "ವರ್ಷೇ ವರ್ಷೇ ನಮಗೆ ಹನ್ನೆರಡು ಲಕ್ಷ ರೂಪಾಯಿಗಳ ಚೌತಾಯ್ ಸಲ್ಲಿಸಬೇಕು. ಇದಕ್ಕೆ ತಪ್ಪಿದರೆ ಮರುವರುಷ ಬಂದು ಪೂರಾ ಸೂರತ್ ಪಟ್ಟಣವನ್ನು ನೆಲಸಮ ಮಾಡುತ್ತೇವೆ ಎಂದು" ಬರೆಸಿದ್ದನು. ಶಿವಾಜಿಯು ಆ ಲೂಟಿಯಲ್ಲಿ ದೊರಕಿದ ಅರವತ್ತು ನಾಲ್ಕು ಲಕ್ಷ ರೂಪಾಯಿಗಳ ಧನಕನಕಗಳನ್ನೂ ಅಮೌಲ್ಯ ವಸ್ತ್ರಗಳನ್ನೂ ಸಾಗಿಸಿಕೊಂಡು ಹೋದನು. ಮರಾಠಾ ಸೇನಾಪತಿಯಾದ ಮೋರೋಪಂತನು ಸೈನ್ಯ ಸಮೇತನಾಗಿ ಸೂರತ್ತಿಗೆ ಸಮೀಪದಲ್ಲಿದ್ದ ರಾಮಪುರವೆಂಬ ಸಣ್ಣ ರಾಜ್ಯವನ್ನು ವಶಪಡಿಸಿಕೊಂಡು ಅಲ್ಲಿ ಠಿಕಾಣಿ ಹಾಕಿದನು. ಸಮಯಾ ಸಮಯಗಳಲ್ಲಿ ಸೂರತ್ತಿಗೆ ನುಗ್ಗಿ ಹಣವಸೂಲು ಮಾಡುವುದೇ ಇವನ ಕೆಲಸವಾಗಿತ್ತು.

ಶಿವಾಜಿಯು ಸೂರತ್ತಿನಿಂದ ಹಿಂತಿರುಗಿದ ಕೂಡಲೇ ಖಾಜೀಬೇಗ್‌ನು 'ಇನ್ನು ಈ ಸೂರತ್ತಿನಲ್ಲಿದ್ದು ವ್ಯಾಪಾರ ಮಾಡಲಾಗುವುದಿಲ್ಲ. ಇಲ್ಲಿ ರಕ್ಷಣೆಯಿಲ್ಲ' ಎಂದು ನಿರ್ಧಾರ ಮಾಡಿಕೊಂಡು ತನ್ನ ಬಂಧು ಬಳಗದವರನ್ನೆಲ್ಲಾ ಕೂಡಿಕೊಂಡು ಬೊಂಬಾಯಿಗೆ ಹೊರಟು ಹೋದನು.

ಹೀಗೆಯೇ ಅನೇಕ ವರ್ತಕರು ಸೂರತ್ತನ್ನು ಬಿಟ್ಟು ಹೊರಟು ಹೋದರು. ಸೂರತ್ತಿನ ಕಳೆ ಕೆಟ್ಟು ಹೋಯಿತು. ಬಾದಷಹನಿಗೆ ಈ ವರ್ತಮಾನಗಳೆಲ್ಲಾ ವರದಿಯಾದವು. ಹಿಂದಿನ ಸಲ ಶಿವಾಜಿಯು ಸೂರತ್ತನ್ನು ಲೂಟಿ ಮಾಡಿದಾಗ ಇಂಗ್ಲಿಷರು, ಡಚ್ಚರು, ಫ್ರೆಂಚರು ಇವರೆಲ್ಲಾ ಶಿವಾಜಿ ಯೊಡನೆ ಹೋರಾಡಿ ರಕ್ಷಣೆ ಮಾಡಿದರು. ಈ ಬಾರಿ ಅವರೆಲ್ಲರೂ ಶಿವಾಜಿ ಯೊಂದಿಗೆ ಸೇರಿಕೊಂಡು ಬಿಟ್ಟರು ಎಂದು ಆಗ್ರಹಗೊಂಡು ವ್ಯಾಪಾರದಲ್ಲಿ ಅವರಿಗೆ ಕೊಡಲ್ಪಟ್ಟಿದ್ದ ರಿಯಾಯಿತಿಗಳನ್ನೆಲ್ಲಾ ವಜಾ ಮಾಡುವಂತೆ ಅಪ್ಪಣೆ ಮಾಡಿದನು

ಈ ವಿಷಯದಲ್ಲಿ ಸ್ವಲ್ಪ ನಿಜಾಂಶವೂ ಇತ್ತು. ಶಿವಾಜಿಯು ಹೊರಟು ಹೋದ ಮೇಲೆ ಈ ವಿದೇಶೀ ಸೈನಿಕರು ದೊಡ್ಡ ದೊಡ್ಡ ದೇಶಿಯ ವರ್ತಕರ ಕೋಠೀಗಳಿಗೆ ನುಗ್ಗಿ ಕೈಗೆ ಸಿಕ್ಕಿದುದನ್ನು ಹೊತ್ತುಕೊಂಡು ಹೋಗಿದ್ದರು. ಆ ನಗರದಲ್ಲಿದ್ದ ಬಡವರಾದ ಕೂಲಿಯಾಳುಗಳೂ, ಗಾಡಿ ಹೊಡೆಯುವವರೂ ಇವರೆಲ್ಲರೂ ಐಶ್ವರ್ಯವಂತರ ಮನೆಗಳಿಗೆ ನುಗ್ಗಿ ತಮ್ಮ ಕೈಗೆ ಸಿಕ್ಕಿದುದನ್ನು ಅಪಹರಿಸಿಕೊಂಡು ಹೋಗಿದ್ದರು.

ಸೂರತ್ತಿನ ರಾಜಾದಾಯದ ವರಮಾನವನ್ನು ಸೋದರಿ ಜಹನಾರಾಳಿಗೆ ಕೊಡತಕ್ಕದೆಂದು ಬಾಪಷಹನು ಆಜ್ಞೆಮಾಡಿದ್ದನು. ಈಗ ಜಹನಾರಾಳಿಗೆ ಸೊನ್ನೆ ಬಿದ್ದಂತಾಯಿತು. ಅವಳು ಖತಿಗೊಂಡು ಶಿವಾಜಿಯ ಮೇಲೆ ಏನಾದರೂ ಸೇಡುತೀರಿಸಿಕೊಳ್ಳಬೇಕೆಂದು ದರಬಾರಿನಲ್ಲಿ ಪಿತೂರಿ ನಡೆಸು ತ್ತಿದ್ದಳು.

---

## ೭

ಜಹನಾರಾಳು ಯುವರಾಜ ಆಜಂಷಹನಿಗೆ ಗುಪ್ತಪತ್ರ ಬರೆದು ಕಳುಹಿಸಿ ದಳು. ಆ ಸೋದರಳಿಯನಿಗೂ ಆ ಸೋದರತ್ತೆಗೂ ಬಹಳ ವಿಶ್ವಾಸ. ತಂದೆ ಔರಂಗಜೇಬನೂ ಸೋದರತ್ತೆಯನ್ನು ಬಹಳ ಗೋಳಾಡಿಸಿದನೆಂದು ಆಜಂನಿಗೆ ಕನಿಕರ. ಜಹನಾರಾಳು ದೈನ್ಯದಿಂದ ಪತ್ರ ಬರೆದಿದ್ದಳು.

"ಯುವರಾಜ ಆಜಂಷಹ, ನಾನು ನಿನ್ನನ್ನು ನನ್ನ ಮಗನಂತೆ ಪ್ರೀತಿಯಿಂದ ಕಾಣುತ್ತೇನೆ. ಈ ಬಾದಷಹನ ದರ್ಬಾರಿನಲ್ಲಿ ಎಷ್ಟೋ ಮುಖಗಳಿವೆ. ಯಾರು ಯಾವಾಗ ಯಾರಿಗೆ ಮಿತ್ರರು, ಯಾರಿಗೆ ಶತ್ರುಗಳು ಎಂಬುದನ್ನು ನಿರ್ಧರಿಸುವುದು ಕಷ್ಟ. ಅದನ್ನು ದೇವರೇ ಬಲ್ಲ. ಇಲ್ಲಿ ನಿನಗೆ ವಿರುದ್ಧವಾದ ವಾರ್ತೆಗಳು ಬೇಕಾದಷ್ಟು ಹಬ್ಬಿವೆ. ಬಾದಷಹನು ನಿನ್ನ ಮೇಲೆ ಎಷ್ಟೋ ಬಾರಿ ಕೋಪಮಾಡುತ್ತಾನೆ. ಏನೂ ಮಾಡಲಾರದವನಾಗಿ ಶಾಂತನಾಗುತ್ತಾನೆ. ನಾನು ಮಾತ್ರ ಇಂತಹ ಮಾತುಗಳನ್ನೊಂದನ್ನೂ ನಂಬಿಲ್ಲ. ಆದರೆ ಅಂತಃಪುರದಲ್ಲಿ ಆ ಮಾತುಗಳು ಕಿವಿಗೆ ಬಿದ್ದಾಗ ಬಹಳ ನೋವಾಗುತ್ತದೆ. ನನ್ನ ಹೃದಯವು ಪರಿತಪಿಸುತ್ತದೆ. ನಾನು ಅಪ್ರಿಯಳಾದರೂ ಬಾದಷಹನಲ್ಲಿಗೆ ಹೋಗಿ "ಈ ಜನರೆಲ್ಲಾ ಸ್ವಾರ್ಥಪರರು. ದುರ್ಜನರು. ಯುವರಾಜನ ಮೇಲೆ ವೃಥಾ ಆರೋಪಣೆ ಮಾಡುತ್ತಾರೆ. ನೀನು ಅದನ್ನು ನಂಬಿ ಕ್ರೋಧಾವೇಶದಿಂದ ಉರಿದು ಏಳುತ್ತೀ. ಆಜಂಷಹನು ಅಂಥವನಲ್ಲ' ಎಂದು ಎಷ್ಟೋ ಬಾರಿ ಹೇಳಿದ್ದೇನೆ. ನಿನ್ನಲ್ಲಿ ನಮ್ಮ ತಂದೆ ಷಹಜಹಾನ್ ಚಕ್ರವರ್ತಿಯ ಸದ್ಗುಣಗಳೆಲ್ಲಾ ಮೂರ್ತಿಮತ್ತಾಗಿದೆ. ಇಲ್ಲಿ ನಿನ್ನ ಮೇಲೆ ಹುಟ್ಟಿರುವ ಅಪವಾದವೆಂದರೆ ನೀನು ಶಿವಾಜಿಯ ಜೊತೆ ಸೇರಿಕೊಂಡಿದ್ದೀಯೆಂದೂ, ಬಾದಷಹನಿಗೆ ವಿರುದ್ಧವಾಗಿ ನೀನು ದಂಗೆ ಏಳಬಹುದೆಂದು. ಇದನ್ನೆಲ್ಲಾ ನಾನೆಷ್ಟಕ್ಕೂ ನಂಬುವುದಿಲ್ಲ. ಆದರೆ ಶಿವಾಜಿಯ ಮೇಲೆ ನೀನು ಉದಾಸೀನ ಮಾಡಿದ್ದೀ. ಅವನು ಹಾವಳಿ ಮಾಡುವುದನ್ನು ನೋಡಿ ನೋಡಿ ಶಿಕ್ಷಿಸದೆ ಸುಮ್ಮನೆ ಕುಳಿತಿದ್ದೀ ಎಂಬುದಕ್ಕೆ ಬೇಕಾದಷ್ಟು ನಿದರ್ಶನಗಳಿವೆ. ನನಗೇ ತಾರ್ಕಾಣೆಗೆ ಬಂದಿದೆ. ಆ ಶಿವಾಜಿಯು ಸೂರತ್ ನಗರವನ್ನು ಎರಡು ಬಾರಿ ಹಾಳುಮಾಡಿದ್ದಾನೆ. ಅವನನ್ನು ತಡೆಯುವ ಶಕ್ತಿ ನಿನಗಿರಲಿಲ್ಲವೆಂದರೆ ನಾನು ನಂಬಲಾರೆ. ಹಾವಳಿ ಮಾಡಿ ಹಿಂತಿರುಗಿದ ಮೇಲಾದರೂ ಅವನನ್ನು ಶಿಕ್ಷಿಸುವ ಸಾಮರ್ಥ್ಯ ನಿನಗಿದೆ. ನೀನೇಕೆ ಮೌನದಿಂದ ಇರುವೆ? ಇದು ಆಶ್ಚರ್ಯವಾಗಿದೆ. ನಾನು ಜನ್ಮತ್ತ ಭಾಗ್ಯಹೀನಳೆಂಬುದು ಜಗತ್ತಿಗೇ ತಿಳಿದಿದೆ. ನೀನೇ ಎಷ್ಟೋ ಬಾರಿ ನನ್ನ ಮೇಲಿನ ಕರುಣೆಯಿಂದ ಕಣ್ಣೀರು ಸುರಿಸಿರುವೆ. ಬಾದಷಹನು ಮರುಕದಿಂದಲೋ, ಪಶ್ಚಾತ್ತಾಪದಿಂದಲೋ, ಲೋಕವಿಡಂಬನಾರ್ಥವಾಗಿಯೋ ಆ

ಸೂರತ್ತಿನ ಹನ್ನೆರಡು ಲಕ್ಷವಾರ್ಷಿಕ ವರವಮಾನವನ್ನು ನನಗೆ ಕೊಡುವಂತೆ ಅಪ್ಪಣೆ ಮಾಡಿದ್ದಾನೆ. ಅದನ್ನು ಆ ಶಿವಾಜಿಯು ಕಿತ್ತುಕೊಂಡು ಹೋಗುತ್ತಿದ್ದಾನೆ. ನಿನ್ನ ಕಣ್ಣು ಮುಂದೆಯೇ ಅವನು ಕಸುಕೊಳ್ಳುತ್ತಿದ್ದಾನೆ. ಇದನ್ನು ನೋಡಿ, ನೋಡಿ, ನೀನು ಹೇಗೆ ಸಹಿಸುತ್ತಿದ್ದೀ? ಆ ಶಿವಾಜಿಯನ್ನು ಹಿಡಿದು ನಮ್ಮ ಹಣವನ್ನು ವಸೂಲಿ ಮಾಡಿಕೊಡುವುದು ನಿನ್ನ ಭಾರವಾಗಿದೆ."

ಆ ಪತ್ರವು ಈ ಪರಿಯಾಗಿದ್ದಿತು. ಯುವರಾಜ ಅಜಂಷಹನು ಆ ಪತ್ರವನ್ನು ಓದಿಕೊಂಡು, ಜಹನಾರಾಳಿಗೆ ಸಮಾಧಾನ ಪತ್ರವನ್ನು ಬರೆದು ಕಳುಹಿಸಿದನು. "ಶಿವಾಜಿಯಿಂದ ವಸೂಲು ಮಾಡಿಸುತ್ತೇನೆ. ನಿಮಗೆ ಹನ್ನೆರಡು ಲಕ್ಷ ರೂಪಾಯಿಗಳನ್ನು ನಾನು ಸಲ್ಲಿಸುತ್ತೇನೆ" ಎಂದು ಭರವಸೆಯಿತ್ತನು

ಅಜಂಷಹನು ಶಿವಾಜಿಯ ವಿಷಯವಾಗಿ ಯೋಚನೆ ಮಾಡಿದನು. 'ಈ ಶಿವಾಜಿಯು ಎಲ್ಲ ಕಡೆಗಳಿಂದಲೂ ನಮಗೆ ತಂಟೆ ಕೊಡುತ್ತಾನೆ. ಇವನನ್ನು ಹೀಗೆ ಸ್ವೇಚ್ಛೆಯಾಗಿ ಬಿಡಲಾಗುವುದಿಲ್ಲ' ಎಂದು ನಿರ್ಧಾರ ಮಾಡಿಕೊಂಡು ಸೇನಾಧಿಪತಿ ದಾವೂದ್‌ಖಾನನನ್ನು ಕರೆಸಿ "ಸೇನಾಧಿಪತಿಗಳೇ, ಈ ಶಿವಾಜಿಯನ್ನು ಸುಮ್ಮನೆ ಬಿಡಲಾಗುವುದಿಲ್ಲ. ಅವನು ಸೂರತ್ತಿನಲ್ಲಿ ನಡೆಸಿದ ಕೃತ್ಯಗಳನ್ನೆಲ್ಲಾ ನೀವು ಕೇಳಿಯೇ ಇರಬಹುದು. ಅವನು ರಾಯಘಡಕ್ಕೆ ಹಿಂತಿರುಗುವುದರೊಳಗೆ ನೀವು ಇಲ್ಲಿರುವ ಮೊಗಲ್ ಸೈನ್ಯಗಳನ್ನೆಲ್ಲಾ ತೆಗೆದುಕೊಂಡುಹೋಗಿ ಅವನನ್ನು ದಾರಿಯಲ್ಲಿ ಅಡ್ಡ ಕಟ್ಟಿ ಹಿಡಿದು ತರಬೇಕು. ಅವನು ಸೂರತ್ತಿನಲ್ಲಿ ಲೂಟಿ ಮಾಡಿಕೊಂಡು ಬಂದಿರುವ ಧನಕನಕಗಳನ್ನೆಲ್ಲಾ ಒಂದು ಕಾಸೂ ಬಿಡದೆ ವಶಪಡಿಸಿಕೊಳ್ಳಬೇಕು. ಬಾದಷಹರು ಈ ಶಿವಾಜಿಗೆ ನೀವೇ ತಕ್ಕ ಸೇನಾಧಿಪತಿಗಳೆಂದು ಮೆಚ್ಚಿಕೊಂಡಿದ್ದಾರೆ. ಇದರಿಂದ ಅವರಿಗೂ ಅತ್ಯಂತ ಸಂತೋಷವಾಗುತ್ತದೆ" ಎಂದು ಹೇಳಿದನು.

ದಾವೂದ್‌ಖಾನನು ಸಂತೋಷದಿಂದ ಶಿವಾಜಿಯ ಮೇಲೆ ಯುದ್ಧಕ್ಕೆ ಹೊರಟನು.

ಅಹಮದ್ ನಗರದಲ್ಲಿದ್ದ ಸೇನಾಧಿಪತಿ ಇಕ್ಲಾಸ್‌ಖಾನ್ ಮಿಯಾನನ್ನು ಅಜಂಷಹನು ತುರುತಾಗಿ ಕರೆಸಿದನು.

ಔರಂಗಾಬಾದಿನಲ್ಲಿದ್ದ ಸೇನಾಧಿಪತಿ ಮಿರ್ ಅಬ್ದುಲ್ ಮಹಬೂಬ್‌ನನ್ನೂ ಅವನ ಮಗ ಸಂಗ್ರಾಮಖಾನ್ ಘೋರಿಯೆಂಬ ತರುಣ ಸೇನಾಧಿಪತಿಯನ್ನೂ ದಾವೂದ್‌ಖಾನನಿಗೆ ಸಹಾಯಕರಾಗಿ ಹೋಗಬೇಕೆಂದು ಅಪ್ಪಣೆಯಿತ್ತನು. ಈ ಸೇನಾಧಿಪತಿಗಳೆಲ್ಲರೂ ಉತ್ಸಾಹದಿಂದ ಯುದ್ಧಕ್ಕೆ ಹೊರಟರು. ಶಿವಾಜಿಯು ರಾಯಘಢಕ್ಕೆ ಬರುತ್ತಿದ್ದ ಮಾರ್ಗದಲ್ಲಿಯೇ ಅಡ್ಡಗಟ್ಟಿದರು. ಶಿವಾಜಿ ಸೈನ್ಯಗಳು ಬೇಕಾದಷ್ಟಿದ್ದುವು.

ಮರಾಠಾ ಸೇನಾಧಿಪತಿಗಳಾದ ಪ್ರತಾಪರಾವ್, ವೆಂಕೋಜೀದತ್ತೊ, ಮಿಕೋಜಿ, ಆನಂದರಾವ್ ಇವರುಗಳು ಶಿವಾಜಿಯ ಸಮೀಪದಲ್ಲಿದ್ದರು. ಅವರೆಲ್ಲರೂ ಮುಂದೆ ನುಗ್ಗಿ ಮೊಗಲ್ ಸೈನ್ಯದೊಂದಿಗೆ ರಣಾರಣಿ ಯುದ್ಧ ಮಾಡಿದರು. ದಾವೂದ್‌ಖಾನನು ಅತಿ ಸಾಹಸದಿಂದ ಯುದ್ಧ ಮಾಡಿದನು. 'ಈ ಬಾರಿ ಶಿವಾಜಿಯು ಕೈಗೆ ಸಿಕ್ಕಿದ್ದಾನೆ. ಯಾವಾಗಲೂ ತಪ್ಪಿಸಿಕೊಂಡು ಓಡಿಹೋಗುತ್ತಾನೆ. ಈ ಸಮಯದಲ್ಲಿ ಏನೇ ಆಗಲೀ ಅವನನ್ನು ಬಿಡುವುದಿಲ್ಲ, ಎಂದು ಹಠ ತೊಟ್ಟು ಶಿವಾಜಿಯು ರಣ ಕ್ಷೇತ್ರದಲ್ಲಿ ಎಲ್ಲಿದ್ದರೆ ಅಲ್ಲಿ ದಾವೂದ್‌ನು ಕಣ್ಣಿಟ್ಟು ಕಾದಾಡುತ್ತಿದ್ದನು. ಆ ಯುದ್ಧ ಕ್ಷೇತ್ರದಲ್ಲಿ ಒಂದು ಕಡೆ ಇಕ್ಲಾಸ್‌ಖಾನ ನಿಜಾನ್‌ನು ಗಾಯಗೊಂಡು ಬಿದ್ದನು. ಇಕ್ಲಾಸ್‌ಖಾನನು ನೆಲಕ್ಕೆ ಉರುಳಿದುದನ್ನು ಕಂಡು ದಾವೂದನು ಓಡಿ ಹೋಗಿ ಅವನನ್ನು ಎತ್ತಿಕೊಂಡು ಹೋಗುವಂತೆ ತನ್ನ ಸೈನಿಕರನ್ನು ಕಳುಹಿಸಿದನು. ಮತ್ತೊಂದು ಕಡೆ, ಮಿರ್‌ಮಹಬೂಬನ ಎರಡು ತೋಳುಗಳೂ ಕಡಿದು ರಣಭೂಮಿಯಲ್ಲಿ ಬಿದ್ದನು. ದಾವೂದ್‌ಖಾನನು ವೇಗದಿಂದ ಅತ್ತಕಡೆ ಹೋಗಿ ಅಂತ್ಯಾವಸ್ಥೆಯಲ್ಲಿದ್ದ ಮಹಬೂಬನನು ಶಿಬಿರಕ್ಕೆ ಸಾಗಿಸಿದನು. ಹಿರಿತಿರುಗುವಷ್ಟರಲ್ಲಿ ಮಹಬೂಬನ ಮಗಸಂಗ್ರಾಮಖಾನ ಘೋರಿಯು ಸತ್ತು ಬಿದ್ದಿದ್ದನು.

ಸಹಸ್ರಾರು ಮೊಗಲ್ ಸೈನಿಕರು ಹತಾಹತರಾಗಿ ರಣಭೂಮಿಯಲ್ಲಿ ಬಿದ್ದಿದ್ದರು. ದಾವೂದ್‌ಖಾನನು ಧೈರ್ಯಗುಂದಿ ರಣಕ್ಷೇತ್ರದಿಂದ ತಪ್ಪಿಸಿಕೊಂಡು ಉಳಿದ ಸೈನಿಕರೊಡನೆ ನಾಸಿಕಕ್ಕೆ ಹೋಗಿ ಸೇರಿದನು. ಅಲ್ಲಿ ಒಂದು ತಿಂಗಳ ಕಾಲ ಸುಧಾರಿಸಿಕೊಂಡನು.

ಶಿವಾಜಿಯು ತನ್ನ ಸೈನ್ಯಗಳೊಂದಿಗೆ ಬರಹಾಂಪುರದ ಕಡೆಗೆ ಹೊರಟನು. ಆ ಮಧ್ಯದಲ್ಲಿ ಅಹಿವಂತ್, ಮಾರ್ಕಂಡ ಚಾವ್ಲ ಮತ್ತು ಲಾವ್ಲ,

ಈ ಕೋಟೆಗಳನ್ನು ನಿರುಪಾಧಿಕವಾಗಿ ಲೂಟಿ ಮಾಡಿದನು. ಅಲ್ಲಿ ಯಥೇಚ್ಛವಾದ ಸಂಪತ್ತು ಕೈಗೆ ಸಿಕ್ಕಿತು. ಫೌಜುದಾರರುಗಳು ದಾವೂದ್‌ಖಾನನ ಪರಾಭವವನ್ನು ಕೇಳಿ ಭಯಗೊಂಡಿದ್ದರು. ಶಿವಾಜಿಗೆ ಆ ಕೋಟೆಗಳನ್ನು ಒಪ್ಪಿಸಿ ಪ್ರಾಣ ಉಳಿಸಿಕೊಂಡು ಔರಂಗಾಬಾದಿಗೆ ಓಡಿಹೋದರು.

ಶಿವಾಜಿಯು ದಾರಿಯುದ್ದಕ್ಕೂ ರಾಜ್ಯವನ್ನು ಕೊಳ್ಳೆ ಹೊಡೆಯುತ್ತಾ ಲೂಟಿಮಾಡುತ್ತಾ ಬಹದ್ದೂರ್‌ಪುರದವರೆಗೆ ಹೋಗಿ ಸೈನ್ಯದ ಬೀಡುಬಿಟ್ಟನು. ಆ ಸಮಯದಲ್ಲಿ ಬರಹಾಂಪುರದಲ್ಲಿ ಜೋಥ್‌ಪುರದ ಮಹಾರಾಜಾ ಜಶವಂತ ಸಿಂಹನು ಅಧಿಕಾರಿಯಾಗಿದ್ದನು. ಜಶವಂತಸಿಂಹನು ಆ ದಿನ ರಾತ್ರಿ ಗುಪ್ತ ವೇಷದಿಂದ ಶಿವಾಜಿಯ ಶಿಬಿರಕ್ಕೆ ಬಂದು ಭೇಟಿಮಾಡಿದನು. ಆ ಹಳೆಯ ಸ್ನೇಹಿತರಿಬ್ಬರೂ ಒಬ್ಬರನ್ನೊಬ್ಬರು ಆಲಂಗಿಸಿ, ಕುಶಲಪ್ರಶ್ನೆಗಳನ್ನು ಮಾಡಿ ಬಹಳಹೊತ್ತು ಗುಪ್ತ ಸಂಭಾಷಣೆ ನಡೆಸಿದರು. ಜಶವಂತಸಿಂಹನು "ಶಿವಾಜಿ ಮಹಾರಾಜ್, ನೀವು ಸ್ವತಂತ್ರರಿದ್ದೀರಿ. ಮೊಗಲ್ ಬಾದಷಹನು ನಿಮ್ಮ ಮೇಲೆ ಬಹಳ ಅನ್ಯಾಯವೆಸಗಿದ್ದಾನೆ. ಅವನ ಮೇಲಿನ ಛಲ ತೀರಿಸಿಕೊಳ್ಳುವುದಕ್ಕಾಗಿ ನೀವು ಮೊಗಲ್ ರಾಜ್ಯದಲ್ಲಿ ಎಲ್ಲಿಬೇಕಾದರೂ ಯುದ್ಧ ಮಾಡಬಹುದು. ಏನು ಬೇಕಾದರೂ ಮಾಡಬಹುದು. ಆದರೆ ನನ್ನ ಕಥೆ ಹಾಗಲ್ಲ. ಪರಿಸ್ಥಿತಿಯೂ ವಿಚಿತ್ರವಾಗಿದೆ. ಈ ದೇಶಕ್ಕೆ ಪ್ರಕೃತ ನಾನು ಮೊಗಲರ ಪರ ಸರ್ವಾಧಿಕಾರಿಯಾಗಿದ್ದೇನೆ. ಇಲ್ಲಿ ಹದಿಮೂರು ಸಹಸ್ರ ರಜಪೂತ ಸೈನ್ಯವಿದೆ. ಮೊಗಲ್ ಸೈನ್ಯಗಳೂ ಇವೆ. ನಾನು ಔರಂಗಾಬಾದಿನಲ್ಲಿ ಇದ್ದುದು ನಿಮಗೆ ತಿಳಿದೇ ಇದೆ. ಬಾದಷಹನು ಅಜಂಷಹನನ್ನೂ ನನ್ನನ್ನೂ ಬೇರ್ಪಡಿಸಬೇಕೆಂದು ಇಲ್ಲಿ ದೊಡ್ಡ ಅಧಿಕಾರಕೊಟ್ಟು ಇಟ್ಟಿದ್ದಾನೆ. ದೊಡ್ಡ ಸೈನ್ಯವೂ ಇಲ್ಲಿದೆ. ನಾನು ರಜಪೂತ, ಯುದ್ಧಕ್ಕೆ ಹಿಂತೆಗೆಯುವವನಲ್ಲ. ಆದರೆ ನಿಮ್ಮ ನಮ್ಮ ಮೈತ್ರಿ ಪ್ರಗಾಢವಾಗಿ ಬೆಳೆದಿದೆ. ಇದನ್ನು ಡೆಲ್ಲಿಯ ದರ್ಬಾರಿನವರೆಲ್ಲರೂ ಬಲ್ಲರು. ನಾವಿಬ್ಬರೂ ಪರಸ್ಪರ ಯುದ್ಧ ಮಾಡುವ ಸಂಧಿಯನ್ನು ದೇವರು ತಂದೊಡ್ಡಿದ್ದಾನೆ. ಮಿತ್ರರೊಡನೆ ಯುದ್ಧ ಮಾಡಲು ಮನಸ್ಸು ಒಪ್ಪದು. ಕೈಬಾರದು ಅದಕ್ಕಾಗಿ ತಮ್ಮಲ್ಲಿಯೇ ಪ್ರಾರ್ಥನೆ ಮಾಡಲು ಬಂದಿದ್ದೇನೆ" ಎಂದು ಹೇಳಿದನು.

ಶಿವಾಜಿಯು ಕೈಜೋಡಿಸಿ "ಮಹಾರಾಜರೇ, ನೀವು ಎಷ್ಟೋ ಸಮಯ

ಗಳಲ್ಲಿ ನನ್ನ ಮೇಲೆ ಅಭಿಮಾನ ತೋರಿದ್ದೀರಿ. ಆದರಿಂದ ಶಾಯಿಸ್ತಾಖಾನರು ಭರ ದರ್ಬಾರಿನಲ್ಲಿ ನಿಮ್ಮನ್ನು ಅಪಮಾನಗೊಳಿಸಿದರೂ ಸಹಿಸಿಕೊಂಡಿರಿ. ಎಷ್ಟೋ ಬಾರಿ ಬಾದಷಹನ ಆಗ್ರಹಕ್ಕೂ ಪಾತ್ರರಾಗಿದ್ದೀರಿ. ಇಂಥ ಸ್ನೇಹಿತರ ಮೇಲೆ ನಾನು ಯುದ್ಧಮಾಡಿದರೆ ದೇವರು ಒಪ್ಪುವುದೂ ಇಲ್ಲ. ನನಗೆ ಜಯವಾಗುವುದೂ ಇಲ್ಲ. ನಾನು ನಾಳೆಯೇ ಇಲ್ಲಿಂದ ದೂರ ಸರಿದು ಹೊರಟುಹೋಗುತ್ತೇನೆ. ಆದರೆ ತಮ್ಮ ದರ್ಶನವಾದುದು ನನ್ನ ಭಾಗ್ಯ. ಹೀಗೆ ನಮಗೆ ಎಲ್ಲಿ ಪರಸ್ಪರ ದರ್ಶನಲಾಭವು ದೊರೆಯಬೇಕು. ತಮ್ಮಲ್ಲಿ ನಾನೊಂದು ಮಾತು ಹೇಳುತ್ತೇನೆ. ತಾವು ಜೋಧ್‌ಪುರದ ಸ್ವತಂತ್ರ ಮಹಾರಾಜರು. ಈ ಬಾದಷಹನು ಪಾಪಿ, ನಿರ್ಘೃಣ. ಇವನೊಡನೆ ನೀವು ಸೇರಿರುವುದು ರಜಪೂತ ಕುಲಕ್ಕೆ ಭೂಷಣವಲ್ಲ. ಈ ಕಾಲದಲ್ಲಿ ಮಹಾರಾಜಾ ಜಯಸಿಂಹನಿಗಿಂತಲೂ ದೊಡ್ಡವರು ಮತ್ತಾರೂ ಇರಲಾರರು. ಅವರಿಗಾದ ಪರಾಭವವನ್ನು ನೀವು ಕಣ್ಣಾರ ಕಂಡಿದ್ದೀರಿ. ಇದನ್ನೆಲ್ಲಾ ಕಂಡು ಕಂಡು ಬಾದಷಹನ ಸೇವೆಯಲ್ಲಿರುವುದು ಆಧರ್ಮ. ನೀವು ಈ ಸೈನ್ಯ ಸೌಭಾಗ್ಯ ಗಳನ್ನೆಲ್ಲಾ ಇಲ್ಲಿಯೇ ಬಿಟ್ಟು ರಾಜಾಸ್ತಾನಕ್ಕೆ ಏಕಾಕಿಗಳಾಗಿ ಹಿಂತಿರುಗಿ ಹೋಗಿರಿ. ಅಲ್ಲಿ ಇಡೀ ರಜಪೂತಸ್ತಾನವು ನಿಮ್ಮನ್ನು ಗೌರವಿಸುತ್ತದೆ. ಆ ರಾಜ್ಯವನ್ನು ಒಮ್ಮೆ ಹಿಡಿದು ಆಡಿಸಿರಿ. ಈ ಮೊಗಲ್ ಸಾಮ್ರಾಜ್ಯ ದಿಂದ ತಾನಾಗಿ ಕಳಚಿಕೊಳ್ಳುತ್ತದೆ ಇತ್ತ ಮಹಾರಾಷ್ಟ್ರ, ಅತ್ತ ರಾಜಾಸ್ತಾನ ಗಳು ತಿರುಗಿಬಿದ್ದು ಹಿಂದೂ ಧ್ವಜವು ಹಾರಾಡತೊಡಗಿದರೆ ಮೊಗಲ್ ಸಾಮ್ರಾಜ್ಯವು ಮೊಗಚಿ ಬೀಳುತ್ತದೆ. ಇದನ್ನು ಒಂದು ಬಾರಿ ದೇವರ ಮುಂದೆ ಆಲೋಚನೆ ಮಾಡಿನೋಡಿರಿ. ಆ ಪರಮೇಶ್ವರನೇ ನಿಮಗೆ ಪ್ರಕಾಶ ಕೊಡುತ್ತಾನೆ. ಧೈರ್ಯಕೊಡುತ್ತಾನೆ. ನನ್ನನ್ನು ಕ್ಷಮಿಸಿರಿ" ಎಂದು ಹೇಳಿ ವಂದಿಸಿದನು.

ಜಶವಂತಸಿಂಹನು ಅರ್ಧರಾತ್ರಿ ಮುಗಿಯುವವರೆಗೆ ಆ ಶಿಬಿರದಲ್ಲಿಯೇ ಇದ್ದು ಗುಪ್ತವೇಷದಿಂದ ಬರಹಾಂಪುರದಲ್ಲಿದ್ದ ತನ್ನ ನಿವಾಸದ ಅರಮನೆಗೆ ಹೋಗಿ ಸೇರಿಕೊಂಡನು.

ಬೆಳಕು ಹರಿಯುವುದರೊಳಗೆ ಬಹದ್ದೂರ್‌ಪುರದಿಂದ ಮರಾಠಾ ಸೈನ್ಯ ಗಳು ಶಿಬಿರವನ್ನೆತ್ತಿ ಹೊರಟುಹೋಗಿದ್ದವು.

---

೮

ಶಿವಾಜಿಯು ತನ್ನ ಸೈನ್ಯವನ್ನು ಪೂರ್ವದಿಕ್ಕಿಗೆ ತಿರುಗಿಸಿದನು. ಅತ್ತ ಕಡೆ ಅಹಮದ್ ನಗರದ ಸುಬಾಕ್ಕೆ ಸೇರಿದ ಕೋಟೆಗಳಿದ್ದವು. ಪ್ರಪ್ರಥಮ ಶಿವಾಜಿಯು ಕಾರಂಜಾ ಎಂಬ ಕೋಟೆಗೆ ಮುತ್ತಿಗೆ ಹಾಕಿದನು. ಕಾರಂಜಾ ಕೋಟೆಯಲ್ಲಿ ಬಹಳ ಸಂಪತ್ತು ತುಂಬಿದ್ದಿತು. ಐವತ್ತು ವರ್ಷಗಳಿಂದ ಅತ್ತ ಕಡೆ ಯಾವ ಸೇನಾಧಿಪತಿಗಳೂ ಧಾಳಿ ನಡೆಸಿರಲಿಲ್ಲ. ಆ ಕೋಟೆಯಲ್ಲಿ ಹಿಂದೂಗಳೂ ಮುಹಮ್ಮದೀಯರೂ ಸೌಹಾರ್ದದಿಂದ ಇದ್ದರು. ಹಿಂದಿನ ಬಾದಷಹರುಗಳು ಆ ಕೋಟೆಯ ಮೇಲೆ ವಿಶೇಷ ಅಭಿಮಾನವಿಟ್ಟಿದ್ದರು. ಸುಪ್ರಸಿದ್ಧ ಗಾಯಕರು, ಕಲಾವಿದರು ಈ ಸ್ಥಳದಿಂದ ದೆಹಲಿಯ ದರ್ಬಾರಿಗೆ ಹೋಗಿ ವಿಶೇಷ ಗೌರವಗಳನ್ನು ಪಡೆದಿದ್ದರು. ಅವರಿಗೆ ಆ ಕಾಲದಲ್ಲಿ ಸಹಸ್ರ ಸಹಸ್ರ ಗಟ್ಟಲೆ ಅಷರಫಿಗಳು ಬಹುಮಾನವಾಗಿ ಸಿಕ್ಕುತ್ತಿದ್ದುವು. ಆ ಕೋಟೆಯಲ್ಲಿದ್ದ ಜನರಲ್ಲಿ ಒಂದು ಆಶ್ಚರ್ಯಕರವಾದ ಸಂಘಟನೆಯಿದ್ದಿತು. ಮುಸಲ್ಮಾನರೂ ಹಿಂದೂಜನರೂ ಪರಸ್ಪರ ವಿವಾಹಗಳನ್ನು ಕೂಡ ಮಾಡಿ ಕೊಳ್ಳುತ್ತಿದ್ದರು. ಆದರೂ ಹಿಂದೂಗಳನ್ನು ಯಾರೂ ಮುಸಲ್ಮಾನರಾಗ ಬೇಕೆಂದು ಬಲಾತ್ಕಾರ ಮಾಡುತ್ತಿರಲಿಲ್ಲ. ಹಿಂದುಗಳು ಹಿಂದುಗಳೇ, ಮುಸಲ್ಮಾನರು ಮುಸಲ್ಮಾನರೇ.

ಈ ಕಾರಣದಿಂದ ಮತ್ತು ಸುಪ್ರಸಿದ್ಧ ಸಂಗೀತ ವಿದ್ವಾಂಸರುಗಳು ಅಲ್ಲಿ ಹುಟ್ಟುತ್ತಿದ್ದುದರಿಂದ ಅಕ್ಬರ್ ಬಾದಷಹನ ಅನುಗ್ರಹವು ಆ ನಗರದ ಮೇಲೆ ವಿಶೇಷವಾಗಿರುತ್ತಿದ್ದಿತು. ಮೊಗಲ್ ಸಾಮ್ರಾಜ್ಯದ ಎಲ್ಲ ಊರುಗಳೂ, ನಗರಗಳೂ, ಎಲ್ಲ ಜನರೂ ಹಾಗೆಯೇ ಬದುಕಬೇಕೆಂದು ಅಕ್ಬರ್ ಬಾದಷಹನು ಹೇಳುತ್ತಿದ್ದನು.

ಶಿವಾಜಿಯು ಆ ಕೋಟೆಯನ್ನೂ, ಆ ನಗರವನ್ನೂ ಸುಲಭವಾಗಿ ವಶ ಪಡಿಸಿಕೊಂಡನು. ಅಲ್ಲಿ ಅರಮನೆ ರಾಜಭಂಡಾರ, ಮನೆಮನೆಗಳು ಲೂಟಿಯಾದವು. ಒಂದು ಕೋಟಿ ರೂಪಾಯಿಗಳಷ್ಟು ಲೂಟಿಯು ಅಲ್ಲಿ ಸಿಕ್ಕಿತು. ಶಿವಾಜಿಯು ನಾಲ್ಕು ಸಾವಿರ ಎತ್ತುಗಳ ಮೇಲೆಯೂ ಕತ್ತೆಗಳ

ಮೇಲೆಯೂ ಆ ಹೊರೆಯನ್ನು ಹೊರಿಸಿ ಬಲವಾದ ಸೈನ್ಯದೊಡನೆ ರಾಯ ಘಡಕ್ಕೆ ಸಾಗಿಸಿದನು. ಮರಾಠಾಸೈನ್ಯಗಳು ಅತ್ತಕಡೆಯೆ ಇದ್ದ ಸರ್‌ಹೀರ್ ಕೋಟೆಯನ್ನು ಮುತ್ತಿದವು. ಅಲ್ಲಿ ಫತುಲ್ಲಾಖಾನ್ ಎಂಬ ಕಿಲ್ಲೇದಾರನು ಶಿವಾಜಿಯೊಡನೆ ಯುದ್ಧ ಮಾಡಿದನು. ಈ ಸಮಾಚಾರಗಳು ನಾಸಿಕದಲ್ಲಿದ್ದ ದಾವೂದ್‌ಖಾನನಿಗೆ ಮುಟ್ಟಿತು. ಅವನು ವೇಗವಾಗಿ ಸೈನ್ಯಸಮೇತ ಆ ಕೋಟೆಯ ಸಮೀಪದಲ್ಲಿ ಬಂದು ಬೀಡುಬಿಟ್ಟನು. ಬೆಳಕು ಹರಿಯುವುದ ರೊಳಗೆ ಯುದ್ಧಕ್ಕೆ ಹೊರಡಬೇಕೆಂದು ತನ್ನ ಸೈನಿಕರಿಗೆ ಅಪ್ಪಣೆ ಮಾಡಿದನು. ಮಾರ್ಗಾಯಾಸದಿಂದ ಅನೇಕ ಸೈನಿಕರು ಬಳಲಿದ್ದರು. ಬಹು ಜನ ಸೈನಿಕರು ಆಹಾರ ನಿದ್ರೆಗಳಿಲ್ಲದೆ ಅಡಿಗೆಗೆ ಆರಂಭಮಾಡಿದ್ದರು. ಎಷ್ಟೇ ಒತ್ತಾಯ ಪಡಿಸಿದರೂ ಆ ಸೈನ್ಯಗಳು ಯುದ್ಧಕ್ಕೆ ಹೊರಡಲು ಸಿದ್ಧವಾಗಲೇ ಇಲ್ಲ. ದಾವೂದ್‌ಖಾನನು ಅವರ ಶ್ರಮವನ್ನು ಕಣ್ಣಾರ ಕಂಡಿದ್ದುದರಿಂದ ಹೆಚ್ಚು ಬಲಾತ್ಕಾರ ಮಾಡಲಿಲ್ಲ. ಎಷ್ಟು ಪ್ರೋತ್ಸಾಹಿಸಿದರೂ ಆ ಸೈನಿಕರು ಅಂದು ಯುದ್ಧಕ್ಕೆ ಹೊರಡಲೇ ಇಲ್ಲ. ಅಷ್ಟರಲ್ಲಿ ಕಿಲ್ಲೇದಾರ್ ಫತುಲ್ಲಾಖಾನನು ಯುದ್ಧದಲ್ಲಿ ಮಡಿದು ಬಿದ್ದನು. ಅವನ ಭಾವಮೈದುನನು ಶಿವಾಜಿಗೆ ಕೋಟೆಯನ್ನು ಒಪ್ಪಿಸಿದನು. ಮರಾಠರಿಗೆ ದಾವೂದ್‌ಖಾನನ ಸೈನ್ಯಗಳು ಸಮೀಪಗತವಾಗಿರುವ ಸುದ್ದಿ ಬಂದಿತ್ತು. ಅವರು ಆ ಕೋಟೆಯನ್ನು ಸ್ವೇಚ್ಛೆಯಾಗಿ ಲೂಟಿಮಾಡಿ ಮುಂದಕ್ಕೆ ಹೊರಟುಹೋದರು.

ಮಾರನೆಯ ದಿವಸ ದಾವೂದ್‌ಖಾನನು ಆ ಕೋಟೆಯನ್ನು ಸ್ವಾಧೀನ ಪಡಿಸಿಕೊಂಡನು. ಅಲ್ಲಿದ್ದ ಸಣ್ಣ ಪುಟ್ಟ ಮೊಗಲ್ ಅಧಿಕಾರಿಗಳನ್ನು ಸೆರೆ ಯಲ್ಲಿಡಿಸಿದನು. ದಾವೂದ್‌ಖಾನನು ಮತ್ತೆ ಅಗಾಧ ಚಿಂತೆಗೊಳಗಾದನು. ಸೂರತ್ತಿನಿಂದ ಬರುವ ದಾರಿಯಲ್ಲಿ ಸೋಲಾಗಿತ್ತು. ಇತ್ತಕಡೆ ತನ್ನ ಅಧಿ ಕಾರಕ್ಕೆ ಒಳಪಟ್ಟ ಎರಡು ಕೋಟೆಗಳು ಸೂರೆಯಾಗಿದ್ದುವು. ಮಹತ್ತರ ವಾದ ಸಂಪತ್ತು ಶತ್ರುಗಳ ವಶವಾಗಿ ಹೋಗಿತ್ತು. ಅವನು ಅತ್ಯಂತ ಖಿನ್ನ ನಾಗಿ ಮುಂದಿನ ಮಾರ್ಗ ತೋರದೆ ಅಲ್ಲಿಯೇ ಕುಳಿತುಬಿಟ್ಟನು.

ಮರಾಠಾ ಸೈನ್ಯಗಳು ವೇಗವಾಗಿ ಮುಂದಕ್ಕೆ ಹೊರಟವು. ಮುಲ್ ಹೀರ್, ಚೌರಾಫರ್ ಮತ್ತು ಹುಲ್‌ಫರ್ ಈ ಮೂರು ಕೋಟೆಗಳನ್ನು ಮರಾಠರು ಏಕಕಾಲದಲ್ಲಿ ಮುತ್ತಿದರು. ಈ ಕೋಟೆಗಳಲ್ಲಿದ್ದ ಕಿಲ್ಲೇದಾರರು

ಪ್ರಬಲವಾಗಿ ಪ್ರತಿಭಟಿಸಿದರೂ ಸಾರ್ಥಕವಿಲ್ಲದೆ ಹೋಯಿತು. ಅವರಲ್ಲಿದ್ದ ಸೈನ್ಯದ ಸಂಖ್ಯೆ ಅತ್ಯಲ್ಪ. ಅವೂ ಯುದ್ಧ ಮಾಡುವ ಸೈನ್ಯಗಳಲ್ಲ ಕಾವಲು ಕಾಯುವ ಪಹರೆಯ ಸೈನಿಕರು. ಮರಾಠರು ಆ ಕೋಟೆಗಳಮೇಲೆ ದಾಳಿಮಾಡಿ ಲೂಟಿಮಾಡುತ್ತಿರುವುದನ್ನು ನೋಡುತ್ತಲೇ ನಿಂತಿದ್ದರು. ಮರಾಠರು ಸ್ವೇಚ್ಛೆಯಾಗಿ ಲೂಟಿಮಾಡಿಕೊಂಡು ಬಿಟ್ಟು ಹೊರಟುಹೋದ ಮೇಲೆ ಭಯದಿಂದ ಕೋಟೆಯ ಬಾಗಿಲುಗಳನ್ನು ಮುಚ್ಚಿಕೊಂಡರು.

ಬುಂದೇಲ್ ಖಂಡದ ಪೂರ್ವದಿಕ್ಕಿನಲ್ಲಿ ಮಹೇವಾ ಎಂಬ ಸಣ್ಣ ರಾಜ್ಯವಿದ್ದಿತು. ಈ ರಾಜ್ಯಕ್ಕೆ ಚಂಪಕರಾಯ ಬಂದೇಲ್ ಎಂಬುವನು ಅಧಿಕಾರಿಯಾಗಿದ್ದನು. ಅವನ ಕಾಲ ಮುಗಿದುಹೋಗಿ ಅವನ ಮಗ ಛತ್ರಸಾಲ ಎಂಬುವನು ಅಧಿಕಾರಿಯಾಗಿದ್ದನು. ಶಿವಾಜಿಯು ಮಹೇವಾ ರಾಜ್ಯಕ್ಕೆ ಬಾರದಂತೆ ತಡೆಯಬೇಕೆಂದು ಛತ್ರಸಾಲನು ಉಪಾಯ ಹುಡುಕಿದನು.

ಶಿವಾಜಿಯೂ ಹಿಂದು, ತಾನೂ ಹಿಂದು. ತನ್ನ ಮಾತುಗಳನ್ನು ಶಿವಾಜಿಯು ನಂಬುತ್ತಾನೆಂದುಕೊಂಡು ಏಕಾಕಿಯಾಗಿ ಶಿವಾಜಿಯ ಶಿಬಿರಕ್ಕೆ ಹೋದನು. ಶಿವಾಜಿಯು ಅವನಿಗೆ ಭೇಟಿಕೊಟ್ಟು ಅವನ ಪೂರ್ವೋತ್ತರಗಳನ್ನು ವಿಚಾರಿಸಿದನು.

ಛತ್ರಸಾಲನು "ನಾನು ಹಿಂದೂ. ಬಾದಷಹನಿಂದ ನಾನೂ ನಮ್ಮ ತಂದೆಯೂ ವಂಚಿತರಾಗಿದ್ದೇವೆ ಬಾದಷಹನಿಗೆ ಬುಂದೇಲ್ ಖಂಡವನ್ನೆಲ್ಲಾ ವಶಮಾಡಿಕೊಟ್ಟೆವು. ನಮಗೆ ಸಿಕ್ಕಿದ ಬಹುಮಾನ ಈ ಸಣ್ಣ ಜಹಗೀರಿ ಮಹೇವಾ. ಬರ ಬಂದು ರಾಜ್ಯವೆಲ್ಲಾ ಬೆಂಗಾಡಾಗಿಹೋಗಿದೆ. ನನ್ನಲ್ಲಿ ಕೊಂಚ ಸೈನ್ಯವಿದೆ. ನಾನೂ ನಿಮ್ಮೊಡನೆ ಸೇರಿಕೊಳ್ಳುತ್ತೇನೆ. ಸಾಯುವ ವರೆಗೆ ನಿಮ್ಮ ಸೇವೆಯಲ್ಲಿರುತ್ತೇನೆ" ಎಂದು ಕೇಳಿಕೊಂಡನು. ಶಿವಾಜಿಯು ಹಿಂದುವೇನೋ ಹೌದು. ಹಿಂದೂ ಧರ್ಮಾಭಿಮಾನಿಯೂ ಹೌದು. ಆದರೆ ಅವನು ಮರಾಠರನ್ನು ಹೊರತು ಮತ್ತಾರನ್ನೂ ಅಂತರಂಗದಲ್ಲಿ ನಂಬುತ್ತಿರಲಿಲ್ಲ. ಮರಾಠರಲ್ಲಿಯೂ ಆರಿಸಿ ಬಂದವನ್ನೇ ಅಧಿಕಾರಕ್ಕೆ ತೆಗೆದುಕೊಳ್ಳುತ್ತಿದ್ದನು. ಪ್ರತಿಯೊಬ್ಬ ಮರಾಠ ಸೈನಿಕನನ್ನೂ ಸ್ವತಃ ಪರೀಕ್ಷಿಸಿಯೇ ಸೈನ್ಯಕ್ಕೆ ಸೇರಿಸಿಕೊಳ್ಳುತ್ತಿದ್ದನು. ಅಂತಹ ಶಿವಾಜಿಯು ಈ ಛತ್ರಸಾಲನನ್ನು ನೋಡಿದೊಡನೆಯೇ ಇವನು ಕಳ್ಳನೆಂದು ಕಂಡುಹಿಡಿದನು.

"ಛತ್ರಸಾಲ, ನೀನು ಬುಂದೇಲ್‌ಖಂಡದ ರಾಜ ಕುಲದವನು. ಬುಂದೇಲ್‌ಖಂಡದ ರಾಜರುಗಳನ್ನು ಭೂಪತಿಗಳೆನ್ನುತ್ತಾರೆ. ನೀನು ಛತ್ರ ಸಾಲ್ ಭೂಪತಿ. ಬುಂದೇಲ್ ಖಂಡಕ್ಕೆ ಹೊರಟುಹೋಗು. ಅಲ್ಲಿ ಸ್ವತಂತ್ರನಾಗಿ ರಾಜ್ಯವನ್ನು ಕಟ್ಟು. ನಿನಗೆ ಬೇಕಾದ ಸಹಾಯ ಮಾಡುತ್ತೇನೆ. ಈ ಮೊಗಲರ ಆಶ್ರಯವೇಕೆ? ಈ ಭಯವೇಕೆ? ಎಂದು ಹೇಳಿ ಕಳುಹಿಸಿದನು.

ಮರಾಠಾ ಸೈನ್ಯಗಳು ಮಹೇವಾ ರಾಜ್ಯವನ್ನು ಲೂಟಿ ಮಾಡಿದವು.

ದೆಹಲಿಯಲ್ಲಿ ಬಾದಷಹನಿಗೆ ದಕ್ಷಿಣದ ನಾನಾದಿಕ್ಕುಗಳಿಂದ ಶಿವಾಜಿಯ ಆಕ್ರಮಣಗಳ ವಿಷಯವಾಗಿ ದೂತರುಬಂದು ವರದಿಮಾಡಿದರು. ಬಾದಷಹನು ಎಂದೂ ಅಷ್ಟು ಚಿಂತೆಗೆ ಒಳಗಾಗಿರಲಿಲ್ಲ ಮುಂದಿನ ಆಲೋಚನೆಗಳನ್ನೆಲ್ಲಾ ಬಿಟ್ಟು ತಾನೇ ದಕ್ಷಿಣಕ್ಕೆ ಹೊರಡಬೇಕೆಂದೂ, ಶಿವಾಜಿಯನ್ನು ಮಣ್ಣುಗೂಡಿಸಿದಲ್ಲದೆ ಹಿಂತಿರುವುದಿಲ್ಲವೆಂದೂ ಶಪಥ ಮಾಡಿದನು ಆ ಸಮಯಕ್ಕೆ ಸರಿಯಾಗಿ ಜಹನಾರಾಳು ಬಂದು ಅಣ್ಣನ ಭೇಟಿಮಾಡಿದಳು. ಜಹನಾರಾಳ ವಿಷಯದಲ್ಲಿ ಔರಂಗಜೇಬನು ಎಷ್ಟೇ ಅಪ್ರಿಯ ನಾಗಿದ್ದರೂ, ಅವಳ ರೂಪಲಾವಣ್ಯಗಳು, ಚಕ್ರವರ್ತಿ ತನೂಜೆಗೆ ಅರ್ಹವಾದ ಔದಾರ್ಯ, ವಿದ್ಯಾ ಮತ್ತು ಕಲಾ ಪ್ರವೀಣ್ಯತೆ ಇವುಗಳನ್ನು ಬಹಳವಾಗಿ ಮೆಚ್ಚಿಕೊಂಡಿದ್ದನು. ಔರಂಗಜೇಬನು ಸೋದರಿಯನ್ನು ಕಾಣುತ್ತಲೇ ತನ್ನ ಮನಸ್ಸಿನ ಉದ್ವೇಗವನ್ನೆಲ್ಲಾ ಮರೆತು "ಬಾ, ಪ್ರಿಯಸೋದರಿ. ನಿನ್ನ ಆಗಮನದಲ್ಲಿ ಏನೋ ಕೌತುಕವಿರಬೇಕು" ಎಂದು ಹೇಳಿದನು.

ಜಹನಾರಳು "ಅಣ್ಣನವರೇ, ತಮ್ಮ ರಾಜಕೀಯದ ಮಹಾತ್ಕಾರ್ಯಗಳಲ್ಲಿ ನನ್ನದೇನೂ ದೊಡ್ಡದಲ್ಲ. ನೀವು ದಖ್ಖನ್ನಿಗೆ ಹೊರಡುತ್ತೀರೆಂದು ಕೇಳಿದೆ. ನನ್ನನ್ನೂ ನಿಮ್ಮ ಜೊತೆಯಲ್ಲಿ ಕರೆದುಕೊಂಡು ಹೋಗಬೇಕೆಂದು ಪ್ರಾರ್ಥಿಸಲು ಬಂದಿದ್ದೇನೆ."

"ಸೋದರಿ, ನಿನ್ನ ಪ್ರಾರ್ಥನೆಯನ್ನು ಸಲ್ಲಿಸಲು ಅಡ್ಡಿಯೇನಿದೆ? ನಾವು ಹೊರಟರೆ ನಮ್ಮ ಶಿಬಿರದಲ್ಲಿ ಬೇಗಂ ಸಾಹೇಬರಿಗೆ ಕೊರತೆಯೇನಿದೆ? ನಾನು ದಖ್ಖನ್ನಿಗೆ ಹೊರಡುವ ಸಮಾಚಾರವು ನಿನಗೆ ತಿಳಿದಂತೆಯೇ, ಕಾರಣವೂ ನಿನ್ನ ಕಿವಿಗೆ ಬಿದ್ದಿರಬಹುದು. ಅಲ್ಲಿ ಹರ್ಷದಾಯಕವಾದ ಒಂದು ಸ್ಥಳವೂ ಇಲ್ಲ

ಯುದ್ಧ-ಯುದ್ಧ! ಎಲ್ಲೆಲ್ಲಿಯೂ ಮಹತ್ತರವಾದ ಯುದ್ಧ! ಸಹಸ್ರಾರು ಜನರ ವಧೆ. ಇದಲ್ಲದೆ ಮತ್ತೇನೂ ಇಲ್ಲ."

"ಈ ದರಬಾರಿನಲ್ಲಿ ಇಷ್ಟೊಂದು ಜನ ಪ್ರಖ್ಯಾತ ಸೇನಾಧಿಪತಿಗಳಿದ್ದು, ಯುವರಾಜ ಅಜಂಷಹನೇ ಅಲ್ಲಿ ಸರ್ವಾಧಿಕಾರಿಯಾಗಿರುವಾಗ ನೀವೇಕೆ ಹೋಗಬೇಕು, ಅಣ್ಣಾ? ಅಂತಹ ದೊಡ್ಡ ಪ್ರಸಂಗವೇನಿದೆ?

"ನೋಡು, ಜಹನಾರಾ. "ಯುವರಾಜ ಅಜಂಷಹನು ವಿಲಾಸಪ್ರಿಯ, ವಿಷಯ ಲೋಲುಪನೆಂದು ನೀನು ಬಲ್ಲೆ. ಆದರೆ ಅವನು ದ್ರೋಹಿಯಾಗುವನೆಂದು ನಾನೆಂದೂ ಬಗೆದಿರಲಿಲ್ಲ. ಈಗವನು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಶಿವಾಜಿಯೊಡನೆ ಸೇರಿಕೊಂಡಿದ್ದಾನೆ. ಇಲ್ಲದಿದ್ದರೆ ಮೊಗಲ್ ಸೈನ್ಯಗಳಿಗೆ ಎಲ್ಲೆಲ್ಲಿಯೂ ಪರಾಭವವೆಂದರೇನು? ಸರ್ವರನ್ನೂ ಜಯಿಸುವ ಶಕ್ತಿಯು ಆ ಶಿವಾಜಿಗೆ ಇದ್ದರೆ ಈ ದೆಹಲಿಯ ಸಿಂಹಾಸನವು ತಾನೆ ಹೇಗೆ ಉಳಿದೀತು? ಅತ್ತ ನಿರ್ಭಯವಾಗಿ ಸೂರತ್ತಿಗೆ ಹೋಗಿ ಕೊಳ್ಳೆ ಹೊಡೆದಿದ್ದಾನೆ. ಬಂಗಾರದಂತಹ ಸೂರತ್ ಸ್ಮಶಾನಪ್ರಾಯವಾಗಿದೆ. ಇತ್ತ ನಮ್ಮ ಕಣ್ಣು ಮುಂದೆಯೇ ಖಾನ್‌ದೇಶವನ್ನು ಲೂಟಿ ಹೊಡೆದಿದ್ದಾನೆ. ನಮ್ಮ ರಾಜಧಾನಿಯಾದ ಅಹಮದ್‌ನಗರದವರೆಗೆ ಅವನ ದಾವಳಿಯು ಬೆಳೆದಿದೆ. ಬಿರಾರಿದಲ್ಲಿ ಒಂದು ಕೋಟೆಯನ್ನು ಬಿಡದೆ ಕೊಳ್ಳೆ ಹೊಡೆದಿದ್ದಾನೆ. ಇನ್ನು ನನ್ನ ಬಾದಶಾಹಿಯೆಂದರೆ ಅರ್ಥವೇನು? ರಾಜಧಾನಿಯಲ್ಲಿ ಅಪಾರ ಸೈನ್ಯವನ್ನು ಇಟ್ಟುಕೊಂಡು ಸೇನಾಧಿಪತಿಗಳೂ ಯುವರಾಜನೂ ಮೋಜುಮಾಡುತ್ತಿದ್ದಾರೆ. ಖೂಳನಾದ ಶಿವಾಜಿಯು ಕೊಳ್ಳೆಹೊಡೆದುಕೊಂಡು ಹೋಗುತ್ತಿದ್ದಾನೆ ಇದೆಂತಹ ಅಪಮಾನ! ನೀನೇ ಹೇಳು.

ಜಹನಾರಾಳು ಮುಗುಳು ನಗೆಯಿಂದ "ಅಣ್ಣಾಜಿಯವರೆ, ನಿಮಗೆ ಯುವರಾಜನ ಮೇಲೆ ಸಂದೇಹ ಬಂದಿದೆಯೇನು? ಅದು ದುರದೃಷ್ಟವೆಂದು ಹೇಳಬೇಕು. ಆ ಸೂರತ್ ನೀವು ನನಗೆ ಬಳುವಳಿಯಾಗಿ ಕೊಟ್ಟಿರುವ ಸುಂದರ ನಗರ. ಅದನ್ನು ಶಿವಾಜಿಯು ಹಾಳುಮಾಡಿದನೆಂದರೆ ನನ್ನ ಮನಸ್ಸು ಕುದಿಯುವುದಿಲ್ಲವೆ? ಆದರೆ ನಾನು ಯುವರಾಜನು ತಪ್ಪಿತಸ್ಥನೆಂದು ಹೇಳಲೊಪ್ಪುವದಿಲ್ಲ. ನೀವು ಯಾವಾಗಲೂ ಹೇಳುವಂತೆ ಶಿವಾಜಿಯು ಕಳ್ಳ. ಭಾರೀ ಕಳ್ಳ. ನಿಮ್ಮ ಸೆರೆಮನೆಯಿಂದ ನಿಮ್ಮ ಕಣ್ಣುಮುಂದೆಯೇ ಅವನು ಹೇಗೆ ಹಾರಿ

ಹೋದ, ನೋಡಿರಿ. ಆದರೆ ಕಳ್ಳನು ಎಂದಾದರೂ ಸಿಕ್ಕಿಬೀಳುತ್ತಾನೆ. ಇದಕ್ಕೆ ಸಾರ್ವಭೌಮರೇ ಸಾಕ್ಷಾತ್ತಾಗಿ ಹೋಗುವ ಕಾರಣವಿಲ್ಲ. ನಾನು ತಮ್ಮ ಅಪ್ಪಣೆ ಪಡೆದು ಯುವರಾಜನ ಸನ್ನಿಧಿಗೆ ಹೋಗಬೇಕೆಂದು ಇದ್ದೇನೆ.”

ಬಾದಷಹನು ನಕ್ಕು “ತಂಗೀ ನೀನು ಹೋಗಿ ಏನು ಮಾಡಬಲ್ಲೆ? ನೀನು ಅತ್ಯಂತ ಮೃದು ಸ್ವಭಾವದವಳು. ಅವನನ್ನು ಚಾವಟಿಯಿಂದ ಹೊಡೆದು ಹುರಿದುಂಬಿಸುವಂಥವರು ಹೋಗಬೇಕು.

“ಜಹಾಪನಾ, ಹೇಗೇ ಆಗಲಿ, ತಮಗೆ ನಂಬುಗೆಯಿದ್ದರೆ ನನ್ನನ್ನು ಕಳುಹಿಸಿಕೊಡಿ. ನನ್ನಲ್ಲಿ ಮತ್ತಾವ ಶಕ್ತಿಯೂ ಇಲ್ಲದಿದ್ದರೂ ತಮ್ಮಮುಂದೆ ಬಂದು ನಿಂತು ಯುವರಾಜನು ನಿರಪರಾಧಿಯೆಂದು ಸತ್ಯವಾಗಿ ಸಾಕ್ಷಿ ನುಡಿಯುವ ಕಾರ್ಯವಾದರೂ ನನ್ನಿಂದ ಆದೀತು” ಎಂದು ಹೇಳಿದಳು.

ಬಾದಷಹನು “ಸರಿ, ತಂಗೀ. ನಾನು ಹೋಗುವುದಿಲ್ಲ. ನೀನೇ ಹೋಗು. ನಿನ್ನ ಸೂರತ್ ನಗರವನ್ನು ಹೇಗೆ ರಕ್ಷಿಸುವೆಯೋ ನೋಡುತ್ತೇನೆ” ಎಂದು ಹೇಳಿದನು.

ಬಾದಷಹನು ರಾಯಸದವರನ್ನು ಕರೆಸಿ ಕಠಿಣವಾದ ರಾಜಾಜ್ಞೆಗಳನ್ನು ಬರೆಸಿದನು. ಗುಜರಾತಿನಲ್ಲಿದ್ದ ಬಹದ್ದೂರ್‌ಖಾನನು ತಕ್ಷಣ ದಖ್ಖನ್ನಿಗೆ ಹೋಗಿ ಮೊಗಲ್ ಬಾದಷಾಹೀ ಸೈನ್ಯಗಳ ಸರ್ವಸೇನಾಧಿಪತ್ಯವನ್ನು ವಹಿಸಿಕೊಳ್ಳತಕ್ಕದೆಂದು ಹುಕ್ಕುಂ ಆಯಿತು. ದಿಲೇರ್‌ಖಾನನು ಬಹದ್ದೂರ್ ಖಾನನ ಸಹಾಯಕ್ಕೆ ಹೋಗಬೇಕೆಂದು ಆಜ್ಞೆಯಾಯಿತು. ಮೊಹಬತ್ ಖಾನನು ಬರಹಾಂಪುರದಿಂದ ಜಶವಂತಸಿಂಹನನ್ನು ಜೊತೆಯಲ್ಲಿ ಕರೆದುಕೊಂಡು ಬಂದು ಯುವರಾಜನ ಭೇಟಿಮಾಡಿ “ಬಾದಷಹರ ಅಪ್ಪಣೆಯಾಗಿದೆ ನಾನು ಯುದ್ಧಕ್ಕೆ ಹೊರಡುತ್ತೇನೆ” ಎಂದು ಹೇಳಿ ಅಪ್ಪಣೆ ಪಡೆದನು. “ಚಾಂದೋರ್ ಪ್ರಾಂತದಲ್ಲಿ ಮರಾಠರ ಹಾವಳಿ ಹೆಚ್ಚಾಗಿದೆಯೆಂದು ವರದಿಗಳು ಬಂದಿವೆ. ನೀವು ಅತ್ತ ಕಡೆಯೇ ಹೋಗುವುದುತ್ತಮ.” ಎಂದು ಯುವರಾಜನು ಸೂಚಿಸಿದನು. ಮೊಹಬತ್‌ಖಾನನು ಚಾಂದೋರ್‌ನ ಕಡೆ ಸೈನ್ಯಸಮೇತನಾಗಿ ಹೊರಟನು. ದಾವೂದ್‌ಖಾನನಿಗೆ ಬಾದಷಹರಿಂದ ಆಜ್ಞೆ ಬಂದಿತ್ತು. ಅವನು ಮೊಹಬತ್‌ಖಾನರ ಉಪಸೇನಾಧಿಪತಿಯಾಗಿ ಅವರೊಡನೆ ಕೆಲಸ ಮಾಡಬೇಕೆಂದು ಆಜ್ಞೆಯಿತ್ತು. ದಾವೂದ್‌ಖಾನನು

ಅತ್ಯಂತ ಖಿನ್ನನಾಗಿ ಯುವರಾಜನ ಭೇಟಿಮಾಡಿ "ನಾನು ಸ್ವತಂತ್ರ ಸೇನಾಧಿಪತಿಯಾಗಿ ಎಷ್ಟೋ ಯುದ್ಧಗಳನ್ನು ಮಾಡಿದ್ದೇನೆ. ಮೊಹಬತ್ ಖಾನನು ವಯಸ್ಸಿನಲ್ಲಿ ನನಗಿಂತ ಚಿಕ್ಕವನು. ಅವನ ಅಧೀನದಲ್ಲಿ ನಾನು ಹೋಗಿ ಕೆಲಸಮಾಡಿದರೂ ಬಾದಷಹರ ಪರಾಂಬರಿಕೆಗೆ ಬರುವುದಿಲ್ಲ. ನನ್ನ ಮೆಹನತ್ತೆಲ್ಲಾ ವ್ಯರ್ಥವಾದಂತೆ ಆಗುತ್ತದೆ" ಎಂದು ಹೇಳಿಕೊಂಡನು.

ಯುವರಾಜನು "ಖಾನ್‌ಸಾಹೇಬರೇ, ಬಾದಷಹರ ವಿಷಯ ನಿಮಗೆ ಚೆನ್ನಾಗಿ ಗೊತ್ತಿದೆ. ಅವರು ಈಗ ಬಹಳ ಆಗ್ರಹಗೊಂಡಿದ್ದಾರೆ. ಈ ದಖ್ಖನ್ ರಾಜ್ಯವನ್ನೇ ಸುಟ್ಟು ಬಿಡುವಷ್ಟು ಸಿಟ್ಟಾಗಿದ್ದಾರೆ. ಅವರು ಆಜ್ಞೆ ಕಳುಹಿಸುವಾಗ ಏನು ಯೋಚನೆ ಮಾಡಿದ್ದಾರೋ ಏನೋ ಹೇಳಲಾಗುವುದಿಲ್ಲ. ನನ್ನ ಅಧಿಕಾರವೇ ಲುಪ್ತವಾಗಿ ಹೋಗಿದೆ. ಇಲ್ಲಿ ನನಗಿರುವ ಗೌರವವೆಂದರೆ ಬಾದಷಹರ ಮಗನೆಂಬ ಗೌರವಮಾತ್ರ. ನಾನು ಬಾದಷಹರಿಗೆ ಬರೆಸಿ ಉತ್ತರ ತರಿಸುತ್ತೇನೆ. ಅದುವರೆಗೆ ನೀವು ಮೊಹಬತ್‌ಖಾನನ ಜೊತೆಯಲ್ಲಿ ಸೌಜನ್ಯದಿಂದ ನಡೆದುಕೊಳ್ಳಿರಿ" ಎಂದು ಹೇಳಿ ಕಳುಹಿಸಿದನು.

ಅಷ್ಟರಲ್ಲಿ ದೆಹಲಿಯಿಂದ ಮತ್ತೊಂದು ಹುಕ್ಕುಂ ಬಂದಿತು. ಜಮುರಸಿಂಗ್, ಚಂದಾವತ್ ಈ ರಜಪೂತ ಸೇನಾಧಿಪತಿಗಳೂ ಇನ್ನೂ ಅನೇಕ ರಜಪೂತ ಸೇನಾ ನಾಯಕರೂ ದಖ್ಖನ್ನಿಗೆ ಬಂದು ಇಳಿದರು. ಬಂಗಲಾನ ಎಂಬುದು ದಖ್ಖನ್ನಿನ ಮೊಗಲ್ ಸೇನಾ ಶಿಬಿರವಾಗಿ ಏರ್ಪಟ್ಟಿದ್ದಿತು. ದೆಹಲಿಯಿಂದ ಬಂದ ಸೇನಾ ನಾಯಕರುಗಳೆಲ್ಲಾ ಆ ಶಿಬಿರದಲ್ಲಿ ಜಮಾಯಿಸುತ್ತಿದ್ದರು. ದೆಹಲಿಯಿಂದ ಮೇಲೆ ಮೇಲೆ ಸೈನ್ಯಗಳು ಬಂದು ಅಲ್ಲಿ ಸೇರುತ್ತಿದ್ದವು. ಬಾದಷಹನು ಆ ಶಿಬಿರಕ್ಕೆ ಧಾರಾಳವಾಗಿ ಹಣವನ್ನೂ ಸಾಮಾನು ಸರಂಜಾಮುಗಳನ್ನೂ ಕಳುಹಿಸಿಕೊಡುವ ವ್ಯವಸ್ಥೆ ಮಾಡಿದನು. ದಾವೂದ್‌ಖಾನನು ಶಿಬಿರದ ವ್ಯವಸ್ಥೆ ಮಾಡುವುದರಲ್ಲಿ ಬಹಳ ಗಟ್ಟಿಗ. ಯುವರಾಜನೂ ಬಂಗಲಾನಾದ ವ್ಯವಸ್ಥೆಗೋಸ್ಕರ ದಾವೂದ್‌ಖಾನನನ್ನು ಕಳುಹಿಸಿಕೊಟ್ಟಿದ್ದನು. ದಾವೂದ್‌ಖಾನನು ಆ ವಿಶಾಲವಾದ ಸ್ಥಳದಲ್ಲಿ ಪ್ರತ್ಯೇಕ ಪ್ರತ್ಯೇಕ ಶಿಬಿರಗಳ ವ್ಯವಸ್ಥೆ ಮಾಡಿಸಿದನು. ಬಾದಷಾಹೀ ಸೈನ್ಯಗಳ ಶಿಬಿರ, ದಖ್ಖನ್ ಸೈನ್ಯಗಳ ಶಿಬಿರ ರಜಪೂತ ಸೈನ್ಯಗಳ ಶಿಬಿರ, ಸೇನಾಧಿಪತಿಗಳ ನಿವಾಸದ ಗುಡಾರಗಳು, ಕುದುರೆಗಳನ್ನು ಕಟ್ಟುವ ಲಾಯಗಳು, ಸಾಮಾನುಗಳನ್ನು ಸರಪರಾಜು ಮಾಡುವ

ಕೋಠಿಗಳು, ಪ್ರತ್ಯೇಕ ಪ್ರತ್ಯೇಕವಾದ ಶಸ್ತ್ರಾಗಾರಗಳು, ಮದ್ದುಗುಂಡುಗಳ, ತೋಪುಗಾಡಿಗಳ ಪ್ರತ್ಯೇಕ ಶಿಬಿರ, ಖಜಾನೆಯ ಗುಡಾರ, ಅದರ ಕಾವಲಿನ ವ್ಯವಸ್ಥೆ, ಗುಪ್ತಾಚಾರ ಸಮಾಚಾರಗಳನ್ನು ಕೊಂಡುಹೋಗುವ ದೂತರ ಕಛೇರಿ, ಇವೆಲ್ಲವನ್ನೂ ಕಾವಲು ಕಾಯುವ ಕೊತ್ವಾಲ ಕಛೇರಿ, ಇವುಗಳೆಲ್ಲವನ್ನೂ ಸಿದ್ಧಪಡಿಸಿದನು.

ಮೊಹಬತ್‌ಖಾನನು ಚಾಂದೋರಿಗೆ ಬಂದು ದಾವೂದ್‌ಖಾನನನ್ನು ಜೊತೆಯಲ್ಲಿ ಕರೆದ ಕೊಂಡು ಮರಾಠರನ್ನು ಎದುರಿಸಲು ಹೊರಟನು.

ಮೊಹಬತ್‌ಖಾನನು ದಾವೂದ್‌ಖಾನನನ್ನು ಒಂದು ಕಡೆ ಕಳುಹಿಸಿ, ತಾನು ಮತ್ತೊಂದು ಕಡೆಗೆ ಹೊರಟನು. ಶಿವಾಜಿಯು ದೂದಾಪ್ ಕೋಟೆಗೆ ಮುತ್ತಿಗೆ ಹಾಕಿದ್ದಾನೆಂದು ಕೇಳಿ ಆ ಕೋಟೆಯ ಸಂರಕ್ಷಣೆಗಾಗಿ ದಾವೂದ್ ಖಾನನು ಅತ್ತ ಕಡೆಗೆ ಸೈನ್ಯ ಸಮೇತನಾಗಿ ಹೊರಟನು. ದೂದಾಪ್‌ನಲ್ಲಿದ್ದ ಕಿಲ್ಲೇದಾರ್ ಮಹಮದ್ ಜಮಾನ್‌ನು ಅತ್ಯಂತ ಪರಾಕ್ರಮದಿಂದ ಹೋರಾಡಿ ಶಿವಾಜಿಯನ್ನು ಹಿಮ್ಮೆಟ್ಟುವಂತೆ ಮಾಡಿದನು. ದಾವೊದ್ ಖಾನನು ಆ ಕೋಟೆಯ ಸಮೀಪಕ್ಕೆ ಬರುವಷ್ಟರಲ್ಲಿ ಶಿವಾಜಿಯ ಸೈನ್ಯಗಳು ಓಡಿಹೋಗಿದ್ದವು. ದಾವೂದ್‌ಖಾನನು ಕಂಚನ ಕಣಿವೆಯ ತಪ್ಪಲಿನಲ್ಲಿ ತನ್ನ ಸೈನ್ಯದ ಬೀಡುಬಿಟ್ಟನು. ಮರಾಠರು ಹೇಗಾದರೂ ಮಾಡಿ ದಾವೂದ್ ಖಾನನನ್ನು ಹಿಡಿಯಬೇಕೆಂದು ರಾತ್ರಿ ಸಮಯದಲ್ಲಿ ಆ ಶಿಬಿರವನ್ನು ಆಕ್ರಮಣ ಮಾಡಿದರು. ದಾವೂದ್‌ಖಾನನಿಗೆ ಮರಾಠರ ಕುಟಿಲೋಪಾಯಗಳೆಲ್ಲಾ ಚೆನ್ನಾಗಿ ತಿಳಿದಿತ್ತು. ಅವನು ರಾತ್ರಿಯ ವೇಳೆಗಳಲ್ಲಿ ಬಹಳ ಹುಷಾರಾಗಿರುತ್ತಿದ್ದನು. ಮರಾಠಾ ಸೈನಿಕರ ಚಲನವಲನಗಳ ಸುಳಿವು ಕಂಡ ಒಡನೆಯೇ ದಾವೂದ್‌ಖಾನನು ತನ್ನ ಸೈನ್ಯವನ್ನು ಎಚ್ಚರಗೊಳಿಸಿ ಮರಾಠರನ್ನು ಬೆರಸಿಕೊಂಡು ಹೊರಟನು. ಹಾಟ್ಸಾರ್ ಎಂಬ ಸ್ಥಳದಲ್ಲಿ ಎರಡು ಸೈನ್ಯಗಳಿಗೂ ಯುದ್ಧವಾಯಿತು. ದಾವೂದ್‌ನು ಅಲ್ಲಿ ಏಳುನೂರು ಮಂದಿ ಮರಾಠಾ ಸೈನಿಕರನ್ನು ಹೊಡೆದು ಹಾಕಿದನು. ಮರಾಠರೆಲ್ಲಾ ಓಡಿಹೋದರು.

ಅಹಿವಂತ ಎಂಬ ಕೋಟೆ ಶಿವಾಜಿಯ ವಶವಾಗಿತ್ತು. ಆ ಕೋಟೆಯನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ಮೊಹಬತ್‌ಖಾನನು ಮುತ್ತಿಗೆ ಹಾಕಿದನು. ದಾವೂದ್‌ಖಾನನನ್ನು ಸೈನ್ಯ ಸಮೇತ ಅಲ್ಲಿಗೆ ಬರಬೇಕೆಂದು

ಹೇಳಿ ಕಳುಹಿಸಿದನು. ದಾವೂದ್‌ಖಾನನೂ ಅಲ್ಲಿಗೆ ಬಂದು ಸೇರಿದನು. ಮರಾಠರು ಆ ಕೋಟೆಯನ್ನು ಬಲವಾಗಿ ರಕ್ಷಿಸಿಕೊಂಡಿದ್ದರು. ಒಂದು ತಿಂಗಳ ಕಾಲ ಕೋಟೆಯ ಹೊರಸುತ್ತಿನಲ್ಲಿ ಅಲ್ಲಲ್ಲಿ ಕಲಹಗಳಾದರೂ ಕೋಟೆಯು ಮೊಗಲರ ಸ್ವಾಧೀನವಾಗಲಿಲ್ಲ. ದಾವೂದ ಖಾನನು ಒಳಗೊಳಗೇ ಒಂದು ಗುಪ್ತ ಉಪಾಯವನ್ನು ಹುಡುಕಿದನು. ಸುರಂಗ ಮಾರ್ಗವಾಗಿ ತನ್ನ ಸೈನ್ಯಗಳನ್ನು ಕೋಟೆಯೊಳಗೆ ನುಗ್ಗಿಸಿ, ಏಕಾಏಕಿ ಕೋಟೆಯನ್ನು ಹಿಡಿದನು. ಮರಾಠರನ್ನು ಹೊಡೆದು ಓಡಿಸಿದನು. ಮೊಹಬತ್‌ಖಾನನಿಗೆ ಈ ಸೂಚನೆಯೇ ಇರಲಿಲ್ಲ. ಏಕಾಏಕಿ ದಾವೂದ್‌ಖಾನನು ಕೋಟೆಯನ್ನು ಹಿಡಿದಿದ್ದನ್ನು ಕಂಡು ಅವನಿಗೆ ಆಶ್ಚರ್ಯವಾಯಿತು. ಹಾಗೆಯೇ ಅಸೂಯೆಯೂ ಉಂಟಾಯಿತು. ಮೊಹಬತ್‌ಖಾನನು ಮೊದಲಿನಿಂದಲೂ ದಾವೂದ್‌ಖಾನನನ್ನು ಅಲಕ್ಷ್ಯವಾಗಿ ಕಾಣುತ್ತಿದ್ದನು. ಅವನು ದಾವೂದ್ ಖಾನನಿಗೆ ಆ ಕೋಟೆಯಲ್ಲಿಯೇ ಇರುವಂತೆ ಅಪ್ಪಣೆ ಮಾಡಿ, ತಾನು ಸೈನ್ಯ ಸಮೇತವಾಗಿ ನಾಸಿಕಕ್ಕೆ ಹೊರಟುಹೋದನು. ನಾಸಿಕದಲ್ಲಿ ಮೂರು ತಿಂಗಳಕಾಲ ಅವನು ಸಂತೋಷದಿಂದ ಕಾಲ ಕಳೆಯುತ್ತಿದ್ದನು. ಅನಂತರ ಪ್ರಕೃತಿ ಸೌಂದರ್ಯದಿಂದ ವಿರಾಜಿಸುತ್ತಿದ್ದ ಪರ್ನೆಲಾ ಎಂಬ ಸ್ಥಳದಲ್ಲಿ ಮಳೆ ಗಾಲವನ್ನು ಕಳೆಯ ಬೇಕೆಂದು ಅಲ್ಲಿಗೆ ಹೋಗಿ ಶಿಬಿರವನ್ನು ಸ್ಥಾಪನೆ ಮಾಡಿದನು.

ವಿಶಾಲವಾದ ಶಿಬಿರ. ನೂರಾರು ಸೇನಾಧಿಕಾರಿಗಳ ಗುಡಾರಗಳು; ಸಾವಿರಾರು ಸೈನಿಕರ ಗುಡಾರಗಳು. ಅದೊಂದು ಮಹಾದ್ವೀಪವೇ ಕಂಗೊಳಿಸು ವಂತಿತ್ತು. ಮೊಹಬತ್‌ಖಾನನು ಸ್ನೇಹಪರ, ರಸಿಕ, ವಿಲಾಸಪ್ರಿಯ. ಅಲ್ಲಿ ಪ್ರತಿ ದಿನವೂ ಶ್ರೀಮಂತರ ಮನೆಗಳಲ್ಲಿ ಅವನಿಗಾಗಿ ಔತಣ ಸಮಾರಂಭಗಳು ನಡೆ ಯುತ್ತಿದ್ದವು. ಔತಣಗಳಲ್ಲಿ ನಾನಾ ನರ್ತನಗಳ ರಸದೂಟ. ಮೊಹಬತ್ ಖಾನನ ಶಿಬಿರವನ್ನು ಎಷ್ಟು ವರ್ಣಿಸಿದರೂ ತೀರದು. ಆದರೆ ಯುದ್ಧದ ಕಾಲದಲ್ಲಿ ಇಂಥ ಶಿಬಿರಗಳಿರುವುದು ಆಶ್ಚರ್ಯಕರ. ನಂಬಲಾಗುವುದಿಲ್ಲ. ಪ್ರತ್ಯಕ್ಷ ಪ್ರಮಾಣಕ್ಕೆ ನಂಬಿದರೇನು? ಬಿಟ್ಟರೇನು? ಅಫ್ಘಾನಿಸ್ತಾನದಿಂದ, ಪಂಜಾಬಿನಿಂದ ನಾಲ್ಕುನೂರು ವೇಶ್ಯಾ ಸ್ತ್ರೀಯರು ಆ ಶಿಬಿರಕ್ಕೆ ಬಂದಿದ್ದರು. ಶಿಬಿರದ ದೊಡ್ಡ ದೊಡ್ಡ ಸರದಾರರುಗಳೆಲ್ಲಾ ಆ ರಮಣಿಯರ ಕೇಳೀ ವಿಲಾಸ

ಗಳಲ್ಲಿ ಮಗ್ನರಾಗಿರುತ್ತಿದ್ದರು. ಮೊಹಬತ್‌ಖಾನನು ಆ ಸುಂದರ ಸ್ತ್ರೀಯರ, ಕಲಾವತಿಯರ ಒಂದು ಸ್ವರ್ಗವನ್ನೇ ನಿರ್ಮಾಣ ಮಾಡಿಬಿಟ್ಟಿದ್ದನು. ಅವನಿಗೆ ಶಿವಾಜಿಯ ಹವ್ಯಾಸವೂ ಇಲ್ಲ. ಬಾದಷಹನ ನೆನಪೂ ಇಲ್ಲ. ಶಿಬಿರದಲ್ಲಿ ದೊಡ್ಡ ರೋಗವು ಬಂದು ಕುದುರೆಗಳು ಸಾಯುತ್ತಿದ್ದುವು. ಸೈನಿಕರು ರೋಗಗ್ರಸ್ತರಾಗಿ ಮಲಗಿದ್ದಲ್ಲಿಯೇ ಪ್ರಾಣ ಬಿಡುತ್ತಿದ್ದರು. ಇದನ್ನೆಲ್ಲಾ ಮೊಹಬತ್‌ಖಾನನು ತೃಣದಂತೆ ಭಾವಿಸುತ್ತಿದ್ದನು. ಪ್ರತಿದಿನವೂ ಆ ಹೆಣಗಳನ್ನು ಕಂದಕಗಳಲ್ಲಿ ಹಾಕಿ ಮುಚ್ಚುತ್ತಿದ್ದರು. ಶಿವಾಜಿಗೆ ಇದೆಲ್ಲಾ ಚೆನ್ನಾಗಿ ತಿಳಿದಿತ್ತು. ಮಳೆಗಾಲ ಬಂದರ ಶಿವಾಜಿಗೆ ಕೊಳ್ಳೆ ಹೊಡೆಯುವುದಕ್ಕೆ ಸುಗ್ಗಿಯ ಕಾಲ ಬಂದಂತೆ ಆಗುತ್ತಿದ್ದಿತು. ಮರಾಠರ ಕೋಲಾಹಲವು ಎಲ್ಲೆಲ್ಲಿಯೂ ಕೇಳಿಬರುತ್ತಿದ್ದಿತು. ಈ ಸಮಾಚಾರಗಳು ಬಾದಷಹನ ಕಿವಿಗೂ ಬಿದ್ದಿತು. ಅರಬ್ಬೀದೇಶದಲ್ಲಿ ಪುರಾಣ ಕಥೆಗಳು ಹೀಗಿರುತ್ತವೆಯೆಂದು ಅವನು ಕೇಳಿದ್ದ. ತನ್ನ ಸಾಮ್ರಾಜ್ಯದಲ್ಲಿಯೇ ಇಂಥದೊಂದು ಶಿಬಿರವಿದೆ ಎಂದು ಕೇಳಿ ಅವನು ತನ್ನನ್ನೇ ತಾನು ನಂಬಲಾರದಾದನು.

ಅವನು 'ಈ ಮೊಹಬತ್‌ಖಾನನೂ ಶಿವಾಜಿಯೂ ಒಳಗೊಳಗೇ ಸ್ನೇಹ ಮಾಡಿಕೊಂಡಿದ್ದಾರೆ. ಶಿವಾಜಿಯ ರಕ್ಷಣೆಯಲ್ಲಿಯೇ ಈ ಮೊಹಬತ್‌ಖಾನನು ಹೀಗೆ ವಿಲಾಸಮಗ್ನನಾಗಿದ್ದಾನೆ. ಇಲ್ಲದಿದ್ದರೆ ಶಿವಾಜಿಯು ಇವನನ್ನು ಸುಮ್ಮನೆ ಬಿಡುತ್ತಿದ್ದನೇ?' ಎಂದು ನಿರ್ಧಾರ ಮಾಡಿಕೊಂಡನು. ಮುಂದೇನು ಮಾಡಬೇಕು? ತಾನೇ ದಖ್ಖನ್ನಿಗೆ ಹೋಗಬೇಕೆಂದು ಪುನಃ ಆಲೋಚನೆ ತೋರಿತು. ಶಿವಾಜಿಯು ಎಲ್ಲಿದ್ದಾನೆಂಬ ಸಮಾಚಾರವೇ ಬಾದಷಹನಿಗೆ ಖಚಿತವಾಗಿ ತಿಳಿಯದಾಯಿತು. ಸೈನ್ಯ ಸಮೇತನಾಗಿ ಸೂರತ್ತಿಗೆ ಹೋಗಿ ಪುನಃ ಜುಲುಂ ನಡೆಸುತ್ತಿದ್ದಾನೆಂದು ಬಾದಷಹನಿಗೆ ಇಂದು ವರ್ತಮಾನ ಬಂದಿತು. ನಾಳೆ ತೆಲಂಗಾಣದ ಕಡೆಗೆ ಹೋಗಿ ಧಾಂಧಳೆ ಮಾಡುತ್ತಿದ್ದಾನೆಂದು ದೂತರು ಬಂದುಹೇಳಿದರು. ಯಾವುದು ನಿಜ, ಯಾವುದು ಸುಳ್ಳು. ಹಿಂದೆ ಕೇಳಿದ್ದಂತೆ ಶಿವಾಜಿಯು ಮಂತ್ರವಾದಿಯೇ ಇರಬಹುದೇ? ಅವನಿಗೆ ಮಾಯಾ ಶಕ್ತಿಗಳಿದೆಯೇ? ಎಂದು ಚಿಂತಿಸತೊಡಗಿದನು. ತೆಲಂಗಾಣದ ಕಡೆಗೆ ಶಿವಾಜಿ ಹೊರಟಿರುವುದು ನಿಜವೇ ಎಂದು ವಿಚಾರಿಸಲು ಮತ್ತೆ ದೂತರನ್ನು ಅಟ್ಟಿದನು.

ತೆಲಂಗಾಣವು ಬಿಜಾಪುರದವರಿಗೆ ಸೇರಿದ್ದು. ಶಿವಾಜಿಯು ಏಕಕಾಲದಲ್ಲಿ ಬಿಜಾಪುರದವರೊಡನೆ, ನಮ್ಮೊಡನೆ ಯುದ್ಧ ಮಾಡುವಷ್ಟು ಬಲಾಢ್ಯನಾಗಿದ್ದಾನೆಯೇ? ಎಂಬ ಶಂಕೆ ಬಂತು. ಹೇಗಾದರೂ ಆಗಲಿ, ರಾಜಕಾರ್ಯಗಳು ಕ್ರಮಬದ್ಧವಾಗಿ ನಡೆಯಲೇಬೇಕು. ಬಾದಷಹನು ಬಿಜಾಪುರದ ಸುಲ್ತಾನನಿಗೆ ಸ್ನೇಹ ಪತ್ರ ಬರೆದು ರಾಯಭಾರಿಗಳನ್ನು ಕಳುಹಿಸಿಕೊಟ್ಟನು. “ಶಿವಾಜಿಯು ಮುಸಲ್ಮಾನರ ಕಟ್ಟ ವಿರೋಧಿ. ಅವನನ್ನು ಹಿಡಿಯುವುದು ಬಿಜಾಪುರದವರಿಗೂ ದೆಹಲಿಯವರಿಗೂ ಮುಖ್ಯ ಕರ್ತವ್ಯ. ಇಬ್ಬರೂ ಸಾಹಸ ಮಾಡಬೇಕು. ಔರಂಗಾಬಾದಿನಲ್ಲಿರುವ ಯುವರಾಜರು ನಿಮಗೆ ಏನು ಸಹಾಯವನ್ನಾದರೂ ನೀಡುತ್ತಾರೆ” ಎಂದು ಬರೆಸಿ ಕಳುಹಿಸಿದನು.

ಬಾದಷಹನು ಬಹದ್ದೂರ್‌ಖಾನನನ್ನೂ ದಿಲೇರ್‌ಖಾನನನ್ನೂ ದಖ್ಖನ್ನಿನ ಮುಖ್ಯ ಶಿಬಿರವಾದ ಬಂಗ್ಲಾನಾಕ್ಕೆ ಹೋಗಬೇಕೆಂದೂ, ಮಳೆಗಾಲವೆಂದು ತಡಮಾಡದೆ ಶಿವಾಜಿಯ ಮೇಲೆ ಆಕ್ರಮಣ ಮಾಡಬೇಕೆಂದೂ ಆಜ್ಞೆ ಕಳುಹಿಸಿದನು.

---

೯

ಜಹನಾರಾಳು ಮತ್ತೆ ಮತ್ತೆ ಸೂರತ್ತಿನಮೇಲೆ ಧಾಳಿಯಾಗುತ್ತಿರುವುದನ್ನೂ, ಸೂರತ್ ನಾಶಹೊಂದುತ್ತಿರುವುದನ್ನೂ ಕೇಳಿ, ದುಃಖಿತಳಾಗಿ ಬಾದಷಹನ ಅಪ್ಪಣೆ ಪಡೆದು ಔರಂಗಾಬಾದಿಗೆ ಬಂದಳು. ಬಾದಷಹನು ತನ್ನ ಸಹೋದರಿಯು ಯುದ್ಧ ಭೂಮಿಯ ಮಧ್ಯದಲ್ಲಿ ಹಾದುಹೋಗುತ್ತಿರುವಳೆಂದು ಬಗೆದು ಬಲವಾದ ರಕ್ಷಣಾ ಸೈನ್ಯವನ್ನು ಕಳುಹಿಸಿಕೊಟ್ಟಿದ್ದನು. ದಿಲೀಪ್‌ಸಿಂಗ್ ಎಂಬುವನು ಜಹನಾರಾಳ ರಕ್ಷಣಾ ಸೈನ್ಯದ ದಳಪತಿಯಾಗಿ ಹೊರಟಿದ್ದನು. ಜಹನಾರಾಳು ಆ ದಿಲೀಪ್‌ಸಿಂಗನನ್ನು ಬಹಳವಾಗಿ ವಿಶ್ವಾಸ ಮಾಡುತ್ತಿದ್ದಳು. ಅವನು ಇನ್ನೂ ಇಪ್ಪತ್ತು ಇಪ್ಪತ್ತೈದು ವರುಷದ ತರುಣ. ಈಗಾಗಲೇ ಎರಡು ಯುದ್ಧಗಳಲ್ಲಿ ಹೆಸರುವಾಸಿಯಾಗಿದ್ದನು. ಜಹನಾರಾಳು ಅವನಿಗಿಂತಲೂ ಹದಿನೈದು ವರುಷ ದೊಡ್ಡವಳು, ಪ್ರೌಢೆ.

ಅವನನ್ನು ಎಷ್ಟೋ ಬಾರಿ ಬಾಲಕನಂತೆ ಕರೆದು ಆಜ್ಞೆ ಮಾಡುತ್ತಿದ್ದಳು. ಅವಳ ಒಪ್ಪಿಗೆಯಂತೆಯೇ ಅವನು ಬೇಗಂ ಸಾಹೇಬಳ ರಕ್ಷಣಾ ಬಲದ ದಳವಾಯಿಯಾಗಿ ಬಂದಿದ್ದನು. ಬೇಗಂ ಸಾಹೇಬಾಳ ಪ್ರಯಾಣಕ್ಕೆ ಅಲ್ಲಲ್ಲಿ ರಾಜಯೋಗ್ಯವಾದ ಬಿಡಾರಗಳು ಏರ್ಪಾಡಾಗಿದ್ದವು. ಬರಹಾಂಪುರದ ವರೆಗೆ ಯಾವ ಭೀತಿಯೂ ಇದ್ದಿಲ್ಲ. ಬರಹಾಂಪುರದಿಂದ ಔರಂಗಾಬಾದಿಗೆ ಬರುವ ಮಾರ್ಗವು ಶತ್ರುಗಳಿಂದ ಕಂಟಕಿತವಾಗಿದ್ದಿತು. ಬರಹಾಂಪುರದಿಂದ ಹೆಚ್ಚು ಸೈನ್ಯಗಳು ಬೆಂಗಾವಲಿಗಾಗಿ ಹೊರಟಿದ್ದವು. ಜಹನಾರಾಳು ಹಗಲು ಹೊತ್ತಿನಲ್ಲಿಯೇ ಪ್ರಯಾಣ ಮಾಡುತ್ತಿದ್ದಳು. ರಾತ್ರಿ ಹೊತ್ತು ಮೊಕ್ಕಾಂಗಳಲ್ಲಿ ತಂಗುತ್ತಿದ್ದಳು. ಒಂದೆರಡು ದಿನಗಳು ಅಲ್ಲಿಯೇ ನಿಂತು ಮುಂದಿನ ಮಾರ್ಗವು ಸುಗಮವಾಗಿದೆಯೇ ಎಂದು ವಿಚಾರಿಸಿಕೊಂಡು ಮುಂದಕ್ಕೆ ಪ್ರಯಾಣ ಮಾಡುತ್ತಿದ್ದಳು. ಇನ್ನು ಒಂದೆರಡು ಮಜಲುಗಳನ್ನು ದಾಟಿದರೆ ಔರಂಗಾಬಾದನ್ನು ತಲುಪಬಹುದಾಗಿದ್ದಿತು. ಮಧ್ಯೆ ಮಾರ್ಗದಲ್ಲಿ ಸುಪ್ರಾ ಎಂಬ ಸ್ಥಳದಲ್ಲಿ ಜಹನಾರಾಳ ಮೊಕ್ಕಾಂನ ಶಿಬಿರ ಸ್ಥಾಪನೆಯಾಗಿತ್ತು. ಆರಾತ್ರಿ ದಿಲೀಪ್ ಸಿಂಗನು ಬಲವಾದ ಕಾವಲನ್ನು ಏರ್ಪಾಡು ಮಾಡಿದ್ದನು. ಅವರು ನಿರೀಕ್ಷಿಸಿದ್ದಂತೆಯೇ ವನ ಪ್ರದೇಶಗಳಿಂದ ಎರಡು ಕಡೆಗಳಿಂದಲೂ ಮರಾಠಾ ಸೈನ್ಯಗಳು ಬಂದು ಮುತ್ತಿಗೆ ಹಾಕಿದವು. ಮೊಗಲ್ ಸೈನ್ಯಗಳು ಗಾಬರಿಯಿಂದ ಆ ಮರಾಠರನ್ನು ಎದುರಿಸಿದರು. ರಾತ್ರಿ ಬಹಳ ಹೊತ್ತು ಉಭಯ ಸೈನ್ಯಗಳಿಗೂ ಹೋರಾಟವಾಯಿತು. ದಿಲೀಪಸಿಂಗನು ಅತ್ಯಂತ ಪರಾಕ್ರಮದಿಂದ ಹೋರಾಡಿ ಆ ಮರಾಠಾ ಸೈನ್ಯವನ್ನು ಓಡಿಸಿದನು. ಆ ಸೇನೆಯ ದಳಪತಿಯು ರಘೋಬನೆಂಬ ಮಾವಳ ಸೇನಾ ನಾಯಕ ಅವನನ್ನು ದಿಲೀಪ್ ಸಿಂಗನು ಸೆರೆಹಿಡಿದು ಶಿಬಿರಕ್ಕೆ ಕರೆತಂದನು. ಜಹನಾರಾಳು ತನ್ನ ಗುಡಾರದಲ್ಲಿ ಯುದ್ಧದ ಪರಿಣಾಮವೇನಾಗುವುದೋ ಎಂದು ಚಿಂತಿಸುತ್ತಾ ಕುಳಿತಿದ್ದಳು. ದಿಲೀಪಸಿಂಗನು ಗುಡಾರದೊಳಗೆ ಬಂದು ಸಲಾಂಮಾಡಿದನು. ಅವನ ದಿರಸುಗಳೆಲ್ಲಾ ರಕ್ತಮಯವಾಗಿದ್ದವು. ಬೇಗಂ ಸಾಹೇಬಾಳು "ಏನಾಯಿತು ದಿಲೀಪ್‌ಸಿಂಗ್" ಎಂದು ಕೇಳಿದಳು. "ಬೇಗಂ ಸಾಹೇಬಾ, ಆ ಮರಾಠರು ನಾವಿಲ್ಲಿರುವುದನ್ನು ತಿಳಿದು ಬಂದವರಲ್ಲ. ಎಲ್ಲಿಯೊ ಪ್ರಯಾಣ ಮಾಡುತ್ತಾ ಇಲ್ಲೊಂದು ಮೊಗಲ್ ಶಿಬಿರವನ್ನು ಕಂಡು ಲೂಟಿ

ಮಾಡೋಣವೆಂದು ಇಲ್ಲಿಗೆ ನುಗ್ಗಿದರು. ಅವರನ್ನೆಲ್ಲಾ ಹೊಡೆದು ಹಾಕಿದ್ದೇವೆ. ಕೆಲವರು ಓಡಿಹೋಗಿದ್ದಾರೆ. ಆ ದಳಪತಿಯನ್ನು ಸೆರೆಹಿಡಿದು ತಂದಿದ್ದೇನೆ. ಆದರೆ ಈ ಕ್ಷಣವೇ ಈ ಶಿಬಿರವನ್ನು ಬಿಟ್ಟು ಹೋಡಬೇಕು. ಇಲ್ಲಿ ನಮಗೆ ಆಪಾಯವು ಹೆಚ್ಚಾಗಿದೆ. ಮತ್ತೆ ಮರಾಠಾ ಸೈನ್ಯಗಳು ಬರಬಹುದು. ಮುಂದೆ ಸಾಗಿಹೋದರೆ ನಮ್ಮ ಸೈನ್ಯಗಳ ಶಿಬಿರಗಳಿವೆ" ಎಂದು ಹೇಳಿದನು.

ಜಹನಾರಾಳು ಬಹಳ ಸಂತೋಷ. ಆ ದಳಪತಿಯನ್ನೇನು ಮಾಡಿದೆ?"

ಅವನನ್ನು ಬಲ್ಲಾಗನಾ ಮಹಾ ಶಿಬಿರಕ್ಕೆ ಕಳುಹಿಸಿ ಕೈದಿನಲ್ಲಿಡುವಂತೆ ಅಪ್ಪಣೆ ಮಾಡುತ್ತೇನೆ."

"ದಿಲೀಪ್‌ಸಿಂಗ್ ನಾನು ಹೇಳಿದಂತೆ ಕೇಳುವೆಯಾ?"

"ಹುಜೂರ್ ಅಪ್ಪಣೆಯನ್ನು ಕೇಳುವುದಕ್ಕೆ ನಾನಿಲ್ಲಿಗೆ ಬಂದಿದ್ದೇನೆ."

"ಅವನನ್ನು ನನ್ನೆದುರಿಗೆ ಕರೆತಂದು ನಿಲ್ಲಿಸು. ಮುಂದಿನ ಪ್ರಯಾಣಕ್ಕೆ ಸಿದ್ಧಗೊಳಿಸುವಂತೆ ಮುನೀಬರಿಗೆ ಅಪ್ಪಣೆ ಮಾಡು" ಎಂದು ಹೇಳಿದಳು.

ದಿಲೀಪ್‌ಸಿಂಗನು ದಳಪತಿ ರಘೋಬನನ್ನು ಬೇಗಂಸಾಹೇಬಳ ಮುಂದೆ ತಂದು ನಿಲ್ಲಿಸಿದನು.

ರಘೋಬನು ಬೇಗಂಸಾಹೇಬಳಿಗೆ ಸಲಾಂ ಮಾಡಿದನು.

"ನೀನು ಮರಾಠಾ ಸರದಾರನೋ?"

"ಹೌದು ನನ್ನ ಹೆಸರು ರಘೋಬಾ."

"ನೀನು ನಮ್ಮ ಬಂದಿಯಾಗಿರುವಿ."

"ಹೌದು, ನಾನು ನಿಮ್ಮ ಬಂದಿ."

"ನಿನ್ನನ್ನು ಏನು ಮಾಡುವರೆಂದು ಗೊತ್ತಿದೆಯೇ?"

"ಚೆನ್ನಾಗಿ ಗೊತ್ತಿದೆ. ನನ್ನನ್ನು ತಲೆಕಡಿದು ಹಾಕುತ್ತಾರೆ. ಇಷ್ಟು ಹೊತ್ತು ತಡಮಾಡಿದ್ದೇ ನನಗೆ ಆಶ್ಚರ್ಯ. ಈ ರಜಪೂತ ತರುಣ ಹಿಂದು. ಅದಕ್ಕಾಗಿ ತಡಮಾಡಿದ. ಮೊಗಲ್ ಸೇನಾಧಿಪತಿಯಾಗಿದ್ದರೆ ನನ್ನನ್ನು ಅಲ್ಲಿಯೇ ಹೊಡೆದುಹಾಕುತ್ತಿದ್ದ. ಆದರೆ ಯಾವ ಮರಾಠನೂ ಮರಣಕ್ಕೆ ಅಂಜುವುದಿಲ್ಲವೆಂದು ನೀವು ತಿಳಿದಿಲ್ಲವೇ, ಬೇಗಂಸಾಹೇಬಾ."

ಜಹನಾರಾಳು ತಲೆದೂಗಿ "ತಿಳಿದಿದ್ದೇನೆ, ತಿಳಿದಿದ್ದೇನೆ. ಆದರೆ ನಿನ್ನನ್ನು

ಈಗ ಬಿಡುಗಡೆ ಮಾಡಿಸುತ್ತೇನೆ. ನೀನು ಹೊರಟು ಹೋಗಿ ನಿಮ್ಮ ಶಿವಾಜಿಗೆಹೇಳು. ನಾನಾರೆಂದು ಬಲ್ಲೆಯಾ? ಬಾದಷಹನ ಸೋದರಿ ಜಹನಾರಾ ಹೇಳಿದಳೆಂದು ಅವನಿಗೆ ತಿಳಿಸು. ಔರಂಗಾಬಾದಿನಲ್ಲಿ ಒಂದು ಬಾರಿ ನನ್ನನ್ನು ಬಂದು ನೋಡುವಂತೆ ಹೇಳು. ಬಹುದಿನಗಳಿಂದ ಅವನನ್ನು ನೋಡುವ ಕುತೂಹಲವುಂಟು. ಈ ಯುದ್ಧ ಸಮಯದಲ್ಲಾದರೂ ಅವನು ಭಯಪಡುವ ಕಾರಣವಿಲ್ಲ. ನಾವು ಪ್ರಾಣರಕ್ಷಣೆ ಕೊಡುತ್ತೇವೆ. ಅವಮಾನಗೊಳಿಸು ವುದಿಲ್ಲ. ಅವನಿಗೆ ಧೈರ್ಯವಿದ್ದರೆ ನನ್ನ ಎದುರಿಗೆ ಬಂದು ಒಂದೇ ಒಂದು ಪ್ರಶ್ನೆಗೆ ಉತ್ತರಕೊಟ್ಟು ಹೋಗಲಿ. ಬಾದಷಹನು ಅವನನ್ನು ಕಳ್ಳನೆಂದು ಕರೆಯುತ್ತಾನೆ. ಶಿವಾಜಿಯು ಅನೇಕ ಕಡೆ ಕೊಳ್ಳೆಹೊಡೆದಿದ್ದಾನೆ. ಆದರೆ ಯಾವುದಾದರೊಂದು ರಣಕ್ಷೇತ್ರದಲ್ಲಿ ಎದುರಿಗೆ ನಿಂತು ಖಡಾಜಡಿ ಯುದ್ಧ ಮಾಡಿದ್ದಾನೆಯೇ? ಯುದ್ಧಮಾಡಿ ಗೆದ್ದಿದ್ದಾನೆಯೇ? ಅವನೇ ನನ್ನ ಎದುರಿಗೆ ಬಂದುಹೇಳಲಿ. ಅವನು ಕಳ್ಳನಲ್ಲ, ಮಹಾರಾಜಾ ಎಂಬುದನ್ನು ಸಾಬೀತು ಮಾಡಿಕೊಡಲಿ. ಇದು ನನ್ನ ಸವಾಲು. ಹೋಗು" ಎಂದು ಹೇಳಿ ಕಳುಹಿಸಿದಳು.

ಜಹನಾರಾಳು ಆ ಕ್ಷಣವೇ ಅಲ್ಲಿಂದ ಹೊರಟು ಮಧ್ಯೆ ಎಲ್ಲಿಯೂ ನಿಲ್ಲದೆ ವೇಗವಾಗಿ ಪ್ರಯಾಣಮಾಡಿ ಔರಂಗಾಬಾದಿಗೆ ಹೋಗಿ ಸೇರಿದಳು.

ಯುವರಾಜ ಆಜಂಷಹನು ಜಹನಾರಾಳನ್ನು ಪ್ರೀತಿ ಗೌರವಗಳಿಂದ ಎದುರುಗೊಂಡು ತನ್ನ ಅರಮನೆಯಲ್ಲಿ ಇಳಿಸಿಕೊಂಡನು. ಅವನಿಗೆ ಬಾದಷಹನ ಮನಸ್ಸಿನ ಸ್ಥಿತಿಯನ್ನು ಅರಿತುಕೊಳ್ಳುವ ಕುತೂಹಲವು ಹೆಚ್ಚಾಗಿದ್ದಿತು. ಜಹನಾರಾಳು ಬಾದಷಹನಿಗೆ "ದಖ್ಖನ್ನಿನ ವಿಷಯಗಳಲ್ಲಿ ಬಹಳ ಅತೃಪ್ತಿಯುಂಟಾಗಿದೆ. ಶಿವಾಜಿಯ ವಿಷಯವು ಒಂದು ಸಮಸ್ಯೆಯೇ ಆಗಿದೆ. ಬಾದಷಹನೇ ಸ್ವತಃ ದಖ್ಖನ್ನಿಗೆ ಬರಬೇಕೆಂದು ಹೊರಟೇ ಇದ್ದನು. ಏನೋ ಕಾರಣಗಳಿಂದ ನಿಂತುಬಿಟ್ಟನು" ಎಂದು ಹೇಳಿದಳು. ಯುವರಾಜನು "ಬೇಗಂಸಾಹೇಬಾ ಅವರೇ ಇಲ್ಲಿಗೆ ಬಂದು ಪ್ರತ್ಯಕ್ಷನೋಡಿ ಬಿಟ್ಟಿದ್ದರೆ ಎಷ್ಟೋ ಚೆನ್ನಾಗಿತ್ತು. ಈ ಗಡಿಸೀಮೆಯು ವಿಂಧ್ಯದ ತಪ್ಪಲಿನಲ್ಲಿದೆ. ನೂರಾರು ಕೋಟೆಗಳು. ಒಂದೊಂದು ಕೋಟೆಯನ್ನು ಜಯಿಸುತ್ತಾ ಹೋದರೆ ಹತ್ತು ವರುಷಗಳಾದರೂ ಯುದ್ಧವು ಮುಗಿಯುವುದೇ

ಇಲ್ಲ. ಈ ಕೋಟೆಗಳಲ್ಲಿ ಮಹಾರಾಜಾ ಜಯಸಿಂಹರು ಅನೇಕ ಕೋಟೆಗಳನ್ನು ತಮ್ಮ ವಶಕ್ಕೆ ಒಪ್ಪಿಸಿಕೊಂಡರು. ಖಾನ್‌ದೇಶ, ಬಿರಾರ್‌ಗಳ ಕಡೆ ಕೋಟೆಗಳು ಬಹುಕಾಲದಿಂದ ನಮ್ಮ ವಶವಲ್ಲಿಯೇ ಇವೆ. ದೆಹಲಿಯಿಂದ ಫೌಜುದಾರರನ್ನೂ ಕಿಲ್ಲೇದಾರರನ್ನೂ ಇಲ್ಲಿಗೆ ಕಳುಹಿಸುತ್ತಾರೆ. ಅವರೇಕೆ ಇಲ್ಲಿಗೆ ಬರುತ್ತಾರೆ? ಯುದ್ಧ ಮಾಡುವುದಕ್ಕಲ್ಲ. ಕೋಟೆಗಳನ್ನು ರಕ್ಷಿಸುವ ಸಾಮರ್ಥ್ಯವೂ ಅವರುಗಳಿಗಿಲ್ಲ. ಬಾದಷಹರ ಕಣ್ಮರೆಯಾಗಿದ್ದುಕೊಂಡು ಕುಷಭಾಷೀಮಾಡುವುದಕ್ಕೆ ಅವರಿಗೆ ಈ ಕೋಟೆಗಳು ವಿಹಾರ ಭೂಮಿಗಳಾಗಿವೆ. ಅಲ್ಲಿಲ್ಲಾ ಸೈನ್ಯಗಳೇ ಇಲ್ಲ. ಎಲ್ಲಿಂದ ಸೈನ್ಯ ತರಬೇಕು? ಅವರಿಗೆ ಎಲ್ಲಿಂದ ಸಂಬಳ ಸಾರಿಗೆಗಳನ್ನು ಕೊಡಬೇಕು? ಯಾರು ಕೊಡಬೇಕು? ಇದೆಲ್ಲಾ ಅಸಾಧ್ಯವಾದ ವಿಷಯಗಳು ಬಿರಾರಿನಿಂದ ಸೂರತ್ತಿನವರಿಗೆ ನಮ್ಮ ಸೈನ್ಯಗಳನ್ನು ಎಲ್ಲಿ ನಿಲ್ಲಿಸಬೇಕು? ಎಲ್ಲಿ ಯುದ್ಧ ಮಾಡಬೇಕು? ಶಿವಾಜಿಯು ಈ ಸ್ಥಳಗಳನ್ನೆಲ್ಲಾ ಚೆನ್ನಾಗಿ ಬಲ್ಲ. ಕಾಡು ಜನರು ಹಕ್ಕಿಗಳಂತೆ ಹಾರಿ ಬಂದು ಅವನಿಗೆ ಸಮಾಚಾರ ಕೊಡುತ್ತಾರೆ. ಇಂದು ಈ ಕೋಟೆಯನ್ನು ಹಿಡಿದ, ಅಲ್ಲಿ ಆ ಕೋಟೆಯನ್ನು ಕೊಳ್ಳೆ ಹೊಡೆದ, ಎಂದು ಸಮಾಚಾರಗಳು ಬರುತ್ತಾ ಆ ಫೌಜುದಾರರುಗಳೂ, ಕಿಲ್ಲೇದಾರರುಗಳೂ ಸತ್ತು ಬೀಳುತ್ತಾರೆ. ಇಲ್ಲವೆ ಕೋಟೆಬಿಟ್ಟು ಓಡಿಹೋಗುತ್ತಾರೆ. ಈ ನಮ್ಮ ರಾಜಧಾನಿಯ ತುಂಬಾ ಆ ಸತ್ತು ಕೆಟ್ಟವರ ಜನಾನಾಗಳೇ. ಇವರಿಗೆಲ್ಲಾ ನಾವು ಖರ್ಚಿಗೆ ಕೊಟ್ಟು ನಡೆಸಬೇಕು. ಸೇನಾಧಿಪತಿಗಳು ಅಲ್ಲಿಂದ ಬರುತ್ತಾರೆ. ಇಲ್ಲಿ ನಾನು ಹೆಚ್ಚು, ನೀನು ಹೆಚ್ಚು ಎಂದು ವೈಮನಸ್ಯಮಾಡಿಕೊಳ್ಳುತ್ತಾರೆ. ಅವರಿಗೆ ತೋರಿದಲ್ಲಿಗೆ ಹೋಗುತ್ತಾರೆ. ತೋರಿದ್ದು ಮಾಡುತ್ತಾರೆ. ದೆಹಲಿಯಿಂದ ಒಂದೊಂದು ದಿನ ಒಂದೊಂದು ಹುಕ್ಕುಂ ಬರುತ್ತದೆ. ಆ ಮೊಹಬತ್ ಖಾನನನ್ನು ನೋಡಿ, ಬೇಗಂಸಾಹೇಬಾ. ಬಾದಷಹರು ಶಿಖರದ ಮೇಲೆ ಎತ್ತಿ ಕೂಡಿಸಿದರು. ಅವನು ಸುಖವಾಗಿ ಪರ್ನೇಲ್‌ನಲ್ಲಿ ವಿಲಾಸ ಮಗ್ನನಾಗಿದ್ದಾನೆ. ಈಗ ಅವನನ್ನು ಗಲ್ಲಿಗೆ ಹಾಕಬೇಕೆನ್ನುತ್ತಾರೆ. ನೀವೇ ಇಲ್ಲಿಗೆ ಬಂದಿದ್ದೀರಲ್ಲಾ, ನೋಡಿ. ಈಗ ಬಹದ್ದೂರ್‌ಖಾನ್ ದಿಲೇರ್‌ಖಾನರನ್ನು ಕಳಿಸಿದ್ದಾರೆ. ಇಲ್ಲಿ ಅಧಿಕಾರ ಮಾಡುವವರಿಗೆ ಹುಚ್ಚು ಹಿಡಿಯುತ್ತದೆ. ಬಾದಷಹರೂ ಬಂದರೂ ಇಲ್ಲಿ ಅವರ ಗೋಳಯಾಗಬೇಕು.

ಇಲ್ಲವೆ, ಮಕ್ಕಾಕ್ಕೆ ಯಾತ್ರೆ ಹೋಗಬೇಕು" ಎಂದು ಹೇಳಿದನು.

ಜಹನಾರಾಳು "ಬೇಸರವೇಕೆ, ಯುವರಾಜಾ? ಆ ದೆಹಲಿಯ ಸಿಂಹಾಸನದ ಮೇಲೆ ನೀನೇ ಕುಳಿತಿದ್ದರೆ ಏನು ಮಾಡುತ್ತಿದ್ದೆ? ಈ ಶಿವಾಜಿಯ ದಾಂಧಳೆಯನ್ನು ಸಹಿಸಿಕೊಂಡು ಕುಳಿತಿರಬೇಕೇ? ಡೆಲ್ಲಿಯ ಬಾದಷಹರಿಂದ ಇವನನ್ನು ಅಣಗಿಸಲಾಗದಿದ್ದರೆ ಅದು ನಮ್ಮ ದರ್ಬಾರಿಗೆ ಗೌರವ ತರತಕ್ಕಂತಹುದೇ? ಏನಾದರೂ ಮಾಡಿ ಅವನನ್ನು ಹಿಡಿಯಬೇಕು, ಇಲ್ಲವೆ, ಕೊಲ್ಲಬೇಕು."

"ಬೇಗಂಸಾಹೇಬಾ, ಇವನೊಬ್ಬನೇ ದುಷ್ಟನೆಂದು ಭಾವಿಸಿದ್ದೀರಾ? ಈ ಮರಾಠರೆಲ್ಲಾ ಒಂದೇ. ಎಲ್ಲರೂ ದುಷ್ಟರೇ. ಮಹಾರಾಷ್ಟ್ರ, ಗುಜರಾತ್, ರಾಜಸ್ತಾನಗಳಲ್ಲಿ ಹಿಂದೂ-ಮುಸ್ಲಿಂ ದ್ವೇಷವು ಚೆನ್ನಾಗಿ ಬೇರೂರಿ ಹೋಗಿದೆ. ಮೊಗಲ್ ಸಿಂಹಾಸನವನ್ನು ಖುದಾನೇ ಕಾಪಾಡಬೇಕು" ಎಂದು ನಿಟ್ಟುಸಿರುಬಿಟ್ಟನು. ಬೇಗಂಸಾಹೇಬಾ ನನ್ನ ನೊಂದ ಮನಸ್ಸಿಗೆ ನಿಮ್ಮ ಸಾನ್ನಿಧ್ಯವು ಎಷ್ಟೋ ಆಪ್ಯಾಯಮಾನವಾಗಿದೆ. ನೀವು ಇಲ್ಲೇ ಇರಿ. ಈ ಮರಾಠರು ಸ್ತ್ರೀಯರ ಗೋಜಿಗೆ ಬರುವುದಿಲ್ಲ. ಕೈಮುಗಿದು ಹೊರಟು ಹೋಗುತ್ತಾರೆ" ಎಂದು ಹೇಳಿ ಬೇಗಂಸಾಹೇಬಳನ್ನು ಅಂತಃಪುರದಲ್ಲಿ ಬಿಟ್ಟು ದರ್ಬಾರಿಗೆ ಬಂದನು.

ಜಹನಾರಾಳು ಬಾದಷಹನ ಅಪ್ರಿಯ ಸೋದರಿಯೆಂದು ಎಲ್ಲರೂ ಅರಿತಿದ್ದರೂ ಡೆಲ್ಲಿಯ ಅಂತಃಪುರದಲ್ಲಿ ಅವಳ ಗೌರವವು ಅತ್ಯಧಿಕವೆಂದು ಎಲ್ಲ ದರ್ಬಾರಿಗಳಿಗೂ ತಿಳಿದಿತ್ತು. ಈ ಸಮಯದಲ್ಲಿ ಬಾದಷಹನೇ ಆ ಸೋದರಿಯನ್ನು ಯುವರಾಜನಲ್ಲಿಗೆ ಕಳುಹಿಸಿದ್ದಾನೆ. ದಖ್ಖನ್ನಿನ ಪರಿಸ್ಥಿತಿಯೇ ಬೇರೆಯಾಗುತ್ತದೆಂದು ಸರದಾರರ ಆಶಾಭಾವನೆಯಾಗಿತ್ತು. ಆ ಉತ್ಸಾಹದಿಂದ ಬಹದ್ದೂರ್ ಖಾನ್ ದಿಲೇರ್ ಖಾನರು ದಾವೂದ್ ಖಾನನನ್ನು ಜೊತೆಯಲ್ಲಿ ಕರೆದುಕೊಂಡು ಯುವರಾಜನ ಭೇಟಿಗೆ ಬಂದಿದ್ದರು. ದರಬಾರಿನಲ್ಲಿ ಆ ಮೂವರು ಸೇನಾಧಿಪತಿಗಳನ್ನೂ ಆದರದಿಂದ ಕುಳ್ಳಿರಿಸಿಕೊಂಡು ಯುವರಾಜನು ಮಾತು-ಕತೆಗಳನ್ನಾಡಿದನು. "ಬಾದಷಹನು ಅತ್ಯಂತ ವ್ಯಗ್ರನಾಗಿದ್ದಾನೆ. ಈ ದಖ್ಖನ್ನಿನಲ್ಲಿ ಇಷ್ಟು ಸೈನ್ಯವಿದ್ದೂ, ಮಹಾ ಮಹಾ ಸೇನಾಧಿಪತಿಗಳಿದ್ದೂ, ದೆಹಲಿಯ ದರ್ಬಾರಿಗೆ ಗೌರವ ಬರಲಿಲ್ಲವೆಂದು ಬೇಗಂಸಾಹೇಬಾ

ಕೊಡನೆ ಹೇಳಿ ಕಳುಹಿಸಿದ್ದಾರೆ. ಇದಕ್ಕೆ ನಾವೇನು ಮಾಡುವುದು? ನೀವು ಸಲಹೆ ಕೊಡಿರಿ" ಎಂದು ಯುವರಾಜನು ಹೇಳಿದನು.

ಬಹದ್ದೂರ್‌ಖಾನನು "ಜಹಾಪನಾ, ನಾವು ಮನಬಿಚ್ಚಿ ಖುಲ್ಲಾ ಮಾತ ನಾಡೋಣ. ಆಗ ಎಲ್ಲವೂ ಇತ್ಯರ್ಥವಾಗುತ್ತದೆ. ಈ ಸಮಸ್ಯೆಯು ಶಿವಾಜಿ ಮತ್ತು ಬಾದಷಹರ ಸಮಸ್ಯೆಯಲ್ಲ. ಬಾದಷಹರ ಮುಂದೆ ಈ ಚೋಡಿ ಶಿವಾಜಿ ಎಷ್ಟು ಮಾತ್ರದವನು. ಇದು ಹಿಂದೂ ಮುಸ್ಲಿಂ ಸಮಸ್ಯೆ. ಅದನ್ನು ನಾವು ಮೊದಲು ಗಟ್ಟಿ ಮಾಡಿಕೊಳ್ಳಬೇಕು. ಇಲ್ಲದಿದ್ದರೆ ನಮ್ಮ ಪ್ರಯಾಸ ವೆಲ್ಲವೂ ವ್ಯರ್ಥವಾಗುತ್ತದೆ. ಮೊದಲು ನಿಮ್ಮ ದರ್ಬಾರಿನಲ್ಲಿ ಒಬ್ಬ ಹಿಂದುವೂ ಇರಕೂಡದು. ಕಾರಕೂನರನ್ನು ಕೂಡ ಹೊರಗೆ ಓಡಿಸಿಬಿಡಬೇಕು. ರಾಜ ಧಾನಿಯಲ್ಲಿರುವ ವರ್ತಕರನ್ನು ಕೂಡಾ ಹೊರಗಟ್ಟಿಬಿಡಬೇಕು. ಇದು ಮೊದಲನೆಯ ಕಾರ್ಯ. ಯುವರಾಜರೇ, ನಮ್ಮ ದೃಷ್ಟಿಯಿಂದ ಬಾದಷಹರೂ ನೀವೂ ಒಂದೇ. ನಿಮ್ಮ ಉಪ್ಪುಂಡ ನಾವು ನಿಮಗೆ ಅವಿಧೇಯರಾಗಿ ಯಾಗಲಿ, ವ್ಯತಿರಿಕ್ತವಾಗಿಯಾಗಲಿ ನಡೆಯುತ್ತೇವೆಂಬ ಸಂದೇಹವನ್ನೇ ನೀವು ಇಟ್ಟುಕೊಳ್ಳಬಾರದು. ದಿಲೇರ್‌ಖಾನರು ಈ ದಖ್ಖನ್ನಿನಲ್ಲಿ ಎಷ್ಟು ಯುದ್ಧಗಳನ್ನು ಮಾಡಿದ್ದಾರೆ. ದಾವೂದ್‌ಖಾನರು ಎಷ್ಟು ಹೋರಾಟ ನಡೆಸಿದ್ದಾರೆ. ಈ ದಿಲೇರ್‌ಖಾನರ ಮೇಲೆ ತಮಗೆ ಕೋಪಬಂದಿದ್ದು ನಮ್ಮ ದುರದೃಷ್ಟ. ಅದನ್ನು ನೀವು ಬಿಟ್ಟುಬಿಡಬೇಕು. ಈ ಬಾರಿ ಎಲ್ಲ ಅಧಿಕಾರ ವನ್ನೂ ನಮಗೆ ಕೊಡಬೇಕು. ನಮ್ಮವರ ಮೇಲೆ ಸಂದೇಹ ಬಂದರೂ ಕತ್ತರಿಸಿ ಬಿಡುವ ಅಧಿಕಾರ ನಮ್ಮ ಕತ್ತಿಗಳಿಗಿರಬೇಕು. ನೋಡಿ, ನಾವು ಈ ಮರಾಠರನ್ನು ಸೊಪ್ಪು ಬಡೆದು ಈ ಶಿವಾಜಿಯನ್ನು ತಂದು ಪಾದಕ್ಕೆ ಒಪ್ಪಿಸುತ್ತೇವೆ" ಎಂದು ಹೇಳಿದನು.

ಯುವರಾಜನು "ಬಹದ್ದೂರ್‌ಖಾನರೇ, ನಿಮ್ಮ ಮಾತನ್ನು ನಾನು ಅಕ್ಷರಶಃ ಪಾಲಿಸುತ್ತೇನೆ" ಎಂದು ಹೇಳಿ ಎದ್ದು ದಿಲೇರ್‌ಖಾನನ ಕೈಕುಲುಕಿ ಆಲಿಂಗನ ಮಾಡಿ "ದಿಲೇರ್‌ಖಾನ್, ನೀನು ಮಹಾ ಪರಾಕ್ರಮಿಯೆಂದು ಯಾವಾಗಲೋ ಒಪ್ಪಿಕೊಂಡಿದ್ದೇನೆ. ಆದರೆ ದುರ್ದೈವವಶಾತ್ ನೀನೇ ನನ್ನಲ್ಲಿ ಸಂದೇಹಪಟ್ಟೆ. ಶಿವಾಜಿಗೂ ನನಗೂ ದುರ್ಮಾಸಲತ್ತಿದೆಯೆಂದು

ಅಪವಾದ ಹೊರಿಸಿದೆ. ನಿನಗೆ ಸಂದೇಹ ಬಂದಿದ್ದರೆ ನನ್ನ ಮೇಲಿನ ದೂರನ್ನು ನನ್ನಲ್ಲಿಯೇ ಹೇಳಿದ್ದರೆ ನಿನ್ನ ಸಂದೇಹವನ್ನು ಪರಿಹರಿಸಿ ಕೊಡುತ್ತಿದ್ದೆ. ನೀನು ಬಾದಷಹರಲ್ಲಿ ಗುಪ್ತವಾಗಿ ದೂರುಕೊಟ್ಟೆ. ಅದು ಎಂಥ ಅಪಾಯ ಕಾರ್ಯವೆಂಬುದನ್ನು ನೀನು ಯೋಚಿಸಲೇ ಇಲ್ಲ. ಬಾದಷಹರು ನನ್ನನ್ನು ದೆಹಲಿಗೆ ಕರೆಸಿ ಶಿರಚ್ಛೇದ ಮಾಡಿಸಿದ್ದರೆ ನೀವೆಲ್ಲಾ ಆಶ್ಚರ್ಯ ಪಡಬೇಕಾಗಿರಲಿಲ್ಲ. ಅದು ಬಾದಷಹರ ಸ್ವಭಾವ. ಹೇಗೋ ತಪ್ಪಿತು, ಬಿಡು. ನಿನ್ನನ್ನು ಪೂರ್ಣವಾಗಿ ಕ್ಷಮಿಸಿದ್ದೇನೆ ಮತ್ತು ನಂಬಿದ್ದೇನೆ" ಎಂದು ಹೇಳಿ ಮತ್ತೊಮ್ಮೆ ಅವನ ಕೈ ಮೇಲೆ ತನ್ನ ಕೈತಟ್ಟಿ ಪ್ರಮಾಣ ಮಾಡಿದನು.

ದಿಲೇರ್‌ಖಾನನ ಕಣ್ಣುಗಳಲ್ಲಿ ನೀರು ಸುರಿಯುತ್ತಿತ್ತು. ಅವನು ಯುವರಾಜನ ಪಾದಗಳಿಗೆರಗಿ "ಷಹಜಾದಾ, ನಿಮ್ಮಲ್ಲಿ ಷಹಜಹಾನ್ ಚಕ್ರವರ್ತಿಗಳ ಸದ್ಗುಣಗಳೆಲ್ಲವೂ ಇವೆಯೆಂದು ಜನರು ಹೇಳುತ್ತಾರೆ. ನಾನು ಪ್ರತ್ಯಕ್ಷವಾಗಿ ಅದನ್ನು ತಮ್ಮಲ್ಲಿ ಕಾಣುತ್ತಿದ್ದೇನೆ. ನಾನು ಅಪರಾಧಿ. ನನ್ನನ್ನು ಕ್ಷಮಿಸಿರಿ" ಎಂದು ಕೇಳಿಕೊಂಡನು.

ಯುವರಾಜನು ದಾವೂದ್‌ಖಾನನ ಕಡೆಗೆ ತಿರುಗಿ "ದಾವೂದ್‌ಖಾನರೇ, ನೀವು ಈ ಮಹಾರಾಷ್ಟ್ರದ ಖಾನ್‌ದೇಶದ ಪ್ರತಿಯೊಂದು ಆಯಕಟ್ಟು ಸಂದು ಕಟ್ಟುಗಳನ್ನೂ ಬಲ್ಲಿರಿ. ಅಹಮದ್‌ನಗರದಿಂದ ಸೂರತ್ತಿನವರೆಗೆ ಎಲ್ಲವೂ ನಿಮ್ಮ ಅಧಿಕಾರ. ನೀವು ಎಲ್ಲಿಗೆ ಬೇಕಾದರೂ ಹೋಗಿರಿ. ಶಿವಾಜಿಯನ್ನು ಎಲ್ಲಿಕಂಡರಲ್ಲಿ ಹೊಡೆದು ಹಾಕಿರಿ" ಎಂದು ಹೇಳಿದನು.

ಮೂವರು ಸೇನಾಧಿಪತಿಗಳೂ ಯುವರಾಜನ ಅಪ್ಪಣೆ ಪಡೆದು ಹೊರಟುಹೋದರು.

ಯುವರಾಜನು ಅಂತಃಪುರಕ್ಕೆ ಹೋಗಿ ಈ ಎಲ್ಲ ವಿದ್ಯಮಾನಗಳನ್ನು ಜಹನಾರಾಳಿಗೆ ತಿಳಿಸಿದನು.

ಈ ಸೇನಾಧಿಪತಿಗಳು ಒಟ್ಟಿಗೆ ಅಹಮದ್ ನಗರಕ್ಕೆ ಹೋದರು. ಮಾರ್ಗದಲ್ಲಿ ಸಾಲ್ಹೇರ್ ಕೋಟೆಯಲ್ಲಿ ಇಕ್ಲಾಸ್‌ಮಿಯಾನ್ ಮತ್ತು ಅಮರಸಿಂಹ ಚಾಂದಾವತ್‌ರನ್ನು ಬಿಟ್ಟುಹೋದರು.

ಅಹಮದ್‌ನಗರದಿಂದ ಬಹದ್ದೂರ್‌ಖಾನನೂ ದಿಲೇರ್‌ಖಾನನೂ ಪುಣೆಯ ಕಡೆ ಹೊರಟರು. ಬಹದ್ದೂರ್‌ಖಾನನು ಸುಪ್ರಾಗೆ ಹೋಗಿ ಮುತ್ತಿಗೆ ಹಾಕಿ

ದನು. ದಿಲೇರ್ ಖಾನನು ಆರಿಸಿದ ಕೆಲವು ಸೈನಿಕರನ್ನು ಜೊತೆಯಲ್ಲಿ ಕರೆದು ಕೊಂಡು ಮಿಂಚಿನ ವೇಗದಿಂದ ಪುಣೆಯ ಮೇಲೆ ಬಿದ್ದನು. ಮರಾಠರು ಇಂಥಾ ಆಕ್ರಮಣವನ್ನು ನಿರೀಕ್ಷಿಸಿಯೇ ಇರಲಿಲ್ಲ. ಪುಣೆಯು ಒಂದೇ ದಿನದಲ್ಲಿ ದಿಲೇರ್ ಖಾನನ ವಶವಾಯಿತು. ದಿಲೇರ್ ಖಾನನು ಪುಣೆಯ ಒಳಗೂ ಹೊರಗೂ ಸೈನ್ಯದ ಕಾವಲು ಹಾಕಿ ಯಾರೊಬ್ಬರೂ ಪುಣೆಯೊಳಗೆ ಬರಕೂಡದು, ಪುಣೆಯಿಂದ ಹೊರಗೆ ಹೋಗಕೂಡದು ಎಂದು ಕಟ್ಟಪ್ಪಣೆ ಮಾಡಿದನು. ಪುಣೆಯಲ್ಲಿದ್ದ ಮುಸಲ್ಮಾನರು ಕೂಡಾ ಭಯತ್ರಸ್ತರಾದರು. ಎಲ್ಲರಿಗೂ ಒಂದೇ; ಮುಸಲ್ಮಾನರೂ ಹೊರಗೆ ಹೋಗುವಂತೆ ಇಲ್ಲ, ಒಳಗೆ ಬರಲೂ ಅವಕಾಶವಿಲ್ಲ. ದಿಲೇರ್ ಖಾನನು ನಗರವನ್ನೆಲ್ಲಾ ಸಂಪೂರ್ಣಸ್ವಾಧೀನ ಪಡಿಸಿಕೊಂಡನು. ಅವನು ಮನಸ್ಸಿನಲ್ಲಿ ಷಾಯಿಸ್ತಾಖಾನನು ಮೋಸಹೋಗಿ ಅಪಮಾನ ಹೊಂದಿದ ಜ್ಞಾಪಕವು ಚೆನ್ನಾಗಿದ್ದಿತು. ಈ ಪುಣೆಯಲ್ಲಿ ಶಿವಾಜಿ ಯೇನೋ ಇಲ್ಲ. ಅವನಿಲ್ಲದಿದ್ದರೇನು? ಪುಣೆಯು ಅವನಿಗೆ ಪ್ರಾಣಕ್ಕಿಂತಲೂ ಅಧಿಕವಾದುದು. ಈ ಪುಣೆಯನ್ನು ನಾಶಗೊಳಿಸಿದರೆ ಶಿವಾಜಿಗೆ ಬುಡಕಳಚಿ ದಂತೆ ಆಗುತ್ತದೆ, ಎಂದುಕೊಂಡನು. ಕ್ರೂರಿಗಳಾದ ಸೈನಿಕ ಭಟರನ್ನು ಕಳಿಸಿ ಹಿಂದುಗಳನ್ನೆಲ್ಲಾ ಹಿಡಿತರಿಸಿದನು. ಒಂಬತ್ತು ವರುಷಗಳಿಗೆ ಮೇಲ್ಪಟ್ಟ ಹಿಂದುಗಳನ್ನೆಲ್ಲಾ ಸಾಲಾಗಿ ಕತ್ತರಿಸಿ ಹಾಕಿಸಿದನು. ಪುಣೆಯೆಲ್ಲಾ ರಕ್ತ ಮಯವಾಯಿತು. ಎಲ್ಲೆಲ್ಲಿಯೂ ಆರ್ತನಾದ ಕೇಳಬರುತ್ತಿದ್ದಿತು. ಮುಸ ಲ್ಮಾನರು ಕೂಡಾ ನೆರೆಹೊರೆಯವರ ಕೊಲೆಯನ್ನು ನೋಡಿ ಬಿಸುಸುಯ್ದರು. ಮುಸಲ್ಮಾನ್ ಸ್ತ್ರೀಯರು ಕಣ್ಣೀರಿಟ್ಟು ಅತ್ತರು. ಮೊಗಲ್ ಸಾಮ್ರಾಜ್ಯದಲ್ಲಿ ಅಂಥ ವಧಾಕಾಂಡವು ಎಲ್ಲಿಯೂ ನಡೆದಿರಲಿಲ್ಲ. ಬಹದ್ದೂರ್ ಖಾನನು ಸುಪ್ರಾ ವಶಪಡಿಸಿಕೊಂಡನು. ಈ ಇಬ್ಬರು ಸೇನಾಧಿಪತಿಗಳ ಪ್ರಥಮ ವಿಜಯವನ್ನು ಕೇಳಿ ದೆಹಲಿಯಲ್ಲಿ ಬಾದಷಹನು ಹರ್ಷಿತನಾದನು. 'ಆ ಮರಾಠರಿಗೆ ಪ್ರಾಯಶ್ಚಿತ್ತವು ಹಾಗೆ ಪ್ರಾರಂಭವಾಗಬೇಕು', ಎಂದು ಉಚ್ಚ ಕಂಠದಿಂದ ಹೇಳಿದನು.

---

೧೦.

ಜಹನಾರಾಳಿಗೆ ಗೋಲ್ಕಂಡದ ಬೇಗಂ ಸಾಹೇಬಾರಿಂದ ಆಹ್ವಾನ ಬಂದಿತು. ಯುವರಾಜನಿಗೂ ಒಂದು ವಿಧವಾದ ಅಭಿನಿವೇಶವಿತ್ತು. ಗೋಲ್ಕಂಡ ಬಿಜಾಪುರಗಳೆರಡು ರಾಜ್ಯಗಳೊಡನೆಯೂ ಈ ಸಮಯದಲ್ಲಿ ಸ್ನೇಹಮಾಡಿ ಕೊಳ್ಳುವುದು ಅಗತ್ಯವೆಂದು ಅವನು ಭಾವಿಸಿದ್ದನು. ಸಮಯವು ಸಿಕ್ಕಿತು. ಜಹನಾರಾಳು ಅಂತಹ ಕಾರ್ಯದಲ್ಲಿ ಅತ್ಯಂತ ಕೌಶಲ್ಯವುಳ್ಳವಳೆಂದು ಅವನಿಗೆ ನಂಬಿಕೆಯಿತ್ತು. ಜಹನಾರಾಳೂ ಗೋಲ್ಕಂಡಕ್ಕೆ ಹೋಗಿಬರುವ ಆಸೆಯನ್ನು ವ್ಯಕ್ತಪಡಿಸಿದಳು. ಯುವರಾಜನು ರಾಜಯೋಗ್ಯವಾದ ಸೌಲಭ್ಯಗಳನ್ನು ಏರ್ಪಡಿಸಿಕೊಟ್ಟು ಜಹನಾರಾಳನ್ನು ಗೋಲ್ಕಂಡಕ್ಕೆ ಕಳುಹಿಸಿದನು.

ಜಹನಾರಾಳು ಗೋಲ್ಕಂಡಕ್ಕೆ ಹೋಗಿ ತಲುಪಿದಳು. ದಿಲೀಪಸಿಂಗನು ತನ್ನ ರಕ್ಷಣಾಬಲ ಸಮೇತನಾಗಿ ಜಹನಾರಾಳೊಡನೆ ಹೊರಟನು. ಮಾರ್ಗ ದಲ್ಲಿ ಅನೇಕ ಮೊಕ್ಕಾಂಗಳನ್ನು ಮಾಡಿಕೊಂಡು ಹೋದರು. ಗೋಲ್ಕಂಡದ ಸುಲ್ತಾನನಿಂದ ರಹದಾರಿಗಳು ಹೋಗಿದ್ದುವು. ಪ್ರತಿಯೊಂದು ಎಡೆಯಲ್ಲಿಯೂ ಅಧಿಕಾರಿಗಳು ಡೆಲ್ಲಿಯ ಷಹಜಾದೆಯನ್ನು ಗೌರವದಿಂದ ಕಂಡು ಬೇಕಾದ ಸರಬರಾಜುಗಳನ್ನು ನಡೆಸುತ್ತಿದ್ದರು. ದಾರಿಯುದ್ದಕ್ಕೂ ಜಹನಾರಾಳು ದಿಲೀಪ್‌ಸಿಂಗನೊಡನೆ ಸದರವಾಗಿ ಮಾತನಾಡುತ್ತಾ ಹೋಗುತ್ತಿದ್ದಳು. ದಾರಿಯಲ್ಲಿ ಮೊಕ್ಕಾಂಮಾಡಿದ ಬಿಡಾರದಲ್ಲಿ ಷಹಜಾದೆಯೊಡನೆ ಮಾತನಾಡುವ ಅವಕಾಶವಿದ್ದುದು ದಿಲೀಪ್‌ಸಿಂಗನೊಬ್ಬನಿಗೇ. ಜಹನಾರಾಳು ದಿಲೀಪ್ ಸಿಂಗನೊಡನೆ "ನಾನು ಔರಂಗಬಾದಿಗೆ ಬರುತ್ತಲೇ ಯುದ್ಧದ ರೀತಿಯೇ ಬದಲಾಯಿಸಿಹೋಯಿತು. ದಿಲೇರ್‌ಖಾನ್ ಮತ್ತು ಬಹದ್ದೂರ್‌ಖಾನ್ ವಿಜಯವೇ ಅದಕ್ಕೆ ನಿದರ್ಶನ" ಎಂದು ಹೆಮ್ಮೆಯಿಂದ ಹೇಳಿದಳು.

ದಿಲೀಪ್‌ಸಿಂಗ್‌ನು ಕೈಮುಗಿದು "ಬೇಗಂ ಸಾಹೇಬಾ, ಮಾಫ್ ಮಾಡ ಬೇಕು. ನಾನು ರಜಪೂತರವನು. ಯುದ್ಧವೆಂದರೆ ಏನೆಂಬುದನ್ನು ಕೊಂಚ ಕೊಂಚ ಬಲ್ಲೆ. ಷಹಜಾದೇ, ದಿಲೇರ್‌ಖಾನನು ಮಾಡಿದ್ದು ದೊಡ್ಡ ಯುದ್ಧವೆಂದುಕೊಂಡಿದ್ದೀರಾ ? ಅದೊಂದು ಪರಾಕ್ರಮವೇ. ಆ ಪುಣೆಯಲ್ಲಿ ಶಿವಾಜಿಯು ಇದ್ದಿದ್ದು, ಅಥವಾ ಯಾವನಾದರೂ ಮಹಾರಾಷ್ಟ್ರ ಸೇನಾಧಿ

ಪತಿಯಿದ್ದಿದ್ದು ದಿಲೀರ್‌ಖಾನನು ಯುದ್ಧ ಮಾಡಿ ಗೆದ್ದಿದ್ದರೆ "ಶಹಬಾಸ್" 'ಧೀರನಹುದು' ಎನ್ನಬಹುದಿತ್ತು. ಹುಲಿಯಿಲ್ಲದ ಗುಹೆಗೆ ಟಗರು ಹೋಗಿ ಕೋಲಾಹಲ ಮಾಡಿದಂತಿದೆ. ಈ ದಿಲೀರ್‌ಖಾನನು ಪರಾಕ್ರಮಿ. ಹಿಂದು ಗಳನ್ನು ಸಾವಿರ ಸಾವಿರ ಸಂಖ್ಯೆಯಲ್ಲಿ ಕಡಿದು ಹಾಕಿದನಂತೆ. ಆದರಿಂದ ಹಿಂದುಗಳಿಗೆ ಭಯ ಪ್ರದರ್ಶನ ಮಾಡುತ್ತೇನೆಂದು ಮೂರ್ಖ ದಿಲೀರ್‌ಖಾನನು ಎಣಿಸಿರಬಹುದು. ಹೇಡಿಗಳಾದರೆ, ಅಂಜುಬುರುಕರಾದರೆ ಅಂತಹ ಕೊಲೆ ಗಳನ್ನು ಕೇಳಿ ಭಯಪಡುತ್ತಾರೆ. ಕೆಚ್ಚೆದೆಯ ಮರಾಠರು 'ದಿಲೀರ್ ಖಾನನು ಹೇಡಿ' ಎಂದು ಹಲ್ಲು ಕಡಿದು ಒಂದಕ್ಕೆ ಹತ್ತು ಪಾಲು ಪರಾಕ್ರಮ ದಿಂದ ಎದುರಿಸುತ್ತಾರೆ. ಇದೆಂತಹ ಕಾರ್ಯ, ಬೇಗಂಸಾಹೇಬಾ" ಎಂದು ಹೇಳಿದನು.

ಜಹನಾರಾಳ ಮುಖವು ಸಪ್ಪಗಾಯಿತು. ಅವಳು ಛಲದಿಂದ "ದಿಲೀಪ್ ಸಿಂಗ್, ಎಷ್ಟಾದರೂ ನೀನು ಹಿಂದು. ಕಾದು ನೋಡು, ಈ ದಿಲೀರ್‌ಖಾನ್, ಬಹದ್ದೂರ್‌ಖಾನರು ಮರಾಠರನ್ನು ಸದೆಬಡಿಯುತ್ತಾರೆ. ಶಿವಾಜಿಯು ಪುಣೆಯಲ್ಲಿಲ್ಲದಿದ್ದರೇನು? ಎಲ್ಲಾದರೂ ಸಿಕ್ಕಿ ಬಿದ್ದೇ ಬೀಳುತ್ತಾನೆ" ಎಂದು ಹೇಳಿದಳು.

ದಿಲೀಪಸಿಂಗನು ಮಾತನ್ನು ಮುಂದುವರಿಸಲಿಲ್ಲ. ದಾರಿಯುದ್ದಕ್ಕೂ ಹೀಗೆಯೇ ಆಗಾಗ ಮಾತುಕತೆಗಳು ನಡೆಯುತ್ತಿದ್ದುವು.

ಗೋಲ್ಕಂಡವು ಸಮೀಪಿಸುವುದಕ್ಕೆ ಹಿಂದಿನ ಮೊಕ್ಕಾಮಿನಲ್ಲಿ ತುಂಗ ಭದ್ರೆಯ ದಂಡೆಯಲ್ಲಿ ಶಿಬಿರದ ಏರ್ಪಾಡಾಗಿತ್ತು. ಅಲ್ಲಿ ಭಯವೇನೂ ಇರ ಲಿಲ್ಲ. ಜಹನಾರಾಳು ಆ ಪ್ರದೇಶದ ರಮ್ಯತೆಯನ್ನೂ, ಆ ನದಿಯ ಸೊಬ ಗನ್ನೂ, ಕಲಕಲ ನಿನಾದವನ್ನೂ ಅನುಭವಿಸುತ್ತಾ ನದಿಯ ದಂಡೆಯಲ್ಲಿಯೇ ಕಾಲಕಳೆಯುತ್ತಿದ್ದಳು.

ದಿಲೀಪ್‌ಸಿಂಗನು ಬೇಗಂಸಾಹೇಬಾಳೊಡನೆ ಮಾತನಾಡುತ್ತಿದ್ದನು.

ಜಹನಾರಾಳು ಆ ಮನೋಹರವಾದ ಸ್ಥಳದಲ್ಲಿ, ನದೀ ತೀರದಲ್ಲಿ, ಆ ಬೆಳದಿಂಗಳಿನಲ್ಲಿ ಉತ್ತೇಜಿತಳಾಗಿದ್ದಳು. "ದಿಲೀಪ್‌ಸಿಂಗ್, ನೀನೇಕೆ ನನ್ನನ್ನು ಹಿಂಬಾಲಿಸುತ್ತಿದ್ದೀ?"

ಆ ರಜಪೂತ ತರುಣನು ಗಾಬರಿಗೊಂಡನು. "ಬೇಗಂಸಾಹೇಬಾ,

ನೀವು ಏಕಾಕಿನಿಯಾಗಿ ಈ ಸ್ಥಳದಲ್ಲಿದ್ದೀರಿ. ನಿಮ್ಮ ಜೆಂಗಾವಲಿಗೆ ನಾನು ಬಂದಿದ್ದೇನೆ. ಎಂದೂ ತಾವು ನನ್ನನ್ನು ದೂರಮಾಡಿದವರಲ್ಲ. ಇಂದೇಕೆ ಹೀಗಾಗಿದ್ದೀರಿ?"

"ನೋಡು, ದಿಲೀಪ್‌ಸಿಂಗ್. ಇಲ್ಲಿ ನನಗೇನೂ ಭಯವಿಲ್ಲ. ಇಂದು ಏಕಾಕಿನಿಯಾಗಿಯೇ ಇಲ್ಲಿ ಕಳೆದರೆ ನನ್ನ ಮನಸ್ಸು ಶಾಂತಗೊಳ್ಳುತ್ತದೆ. ದೆಹಲಿಯ ಸಾರ್ವಭೌಮ ಸೌಧಕ್ಕಿಂತಲೂ ಈ ಸ್ಥಳವು ನನ್ನ ಮನಸ್ಸಿಗೆ ರಮ್ಯವಾಗಿದೆ."

ದಿಲೀಪ್‌ಸಿಂಗನು "ಬೇಗಂಸಾಹೇಬಾ, ಅಪ್ಪಣೆಯಾದರೆ ನಾನು ದೂರ ಹೊರಟು ಹೋಗುತ್ತೇನೆ. ತಮ್ಮ ಮನಸನ್ನು ತಣಿಸಿಕೊಳ್ಳಬಹುದು" ಎಂದನು.

"ಹೋಗಬೇಡ, ದಿಲೀಪ್‌ಸಿಂಗ್. ಇಲ್ಲಿ ಬಾ. ಈ ಶಿಲೆಯ ಮೇಲೆ ಸಮೀಪದಲ್ಲಿ ಕುಳಿತುಕೋ" ಎಂದು ಹೇಳಿದಳು.

ದಿಲೀಪನು ಹಿಂಜರಿಯುತ್ತಾ, ಹೆದರುತ್ತಾ ಬಂದು ಕುಳಿತನು.

ಜಹನಾರಾಳು ಅವನ ಸಮೀಪಕ್ಕೆ ಸರಿದು ಪಕ್ಕದಲ್ಲಿ ಕುಳಿತುಕೊಂಡಳು.

"ದಿಲೀಪ್, ನಿನ್ನೆ ಈ ದಖ್ಖನ್ನಿನ ಯುದ್ಧದ ವಿಚಾರ ಏನೋ ಹೇಳಿದೆಯಲ್ಲವೆ? ಅದೇನು? ಶಿವಾಜಿಗೆ ಜಯವಾಗುತ್ತದೆಂದು ಹೇಳಿದೆಯಲ್ಲವೆ?"

"ಅಲ್ಲ. ಬೇಗಂಸಾಹೇಬಾ ನಾನು ಹಾಗೆ ಹೇಳಲಿಲ್ಲ. ಈ ದಿಲೇರ್ ಖಾನನು ಆಟಾಟೋಪಮಾಡುತ್ತಾನೆ. ನಿರಪರಾಧಿ ಜನರನ್ನು ಸಾಲ್ಗೊಲೆ ಮಾಡುತ್ತಾನೆ. ಅದು ವೀರ ಸೇನಾಧಿಪತಿಯ ಲಕ್ಷಣವಲ್ಲವೆಂದು ಹೇಳಿದೆ, ಅಷ್ಟೆ."

"ನೀನು ಶಿವಾಜಿಯನ್ನು ನೋಡಿದ್ದೀಯಾ?"

"ಇಲ್ಲ, ಸಾಹೇಬಾ. ನಾನು ನೋಡಿಲ್ಲ. ಬಹಳವಾಗಿ ಕೇಳಿದ್ದೇನೆ."

"ಅವನು ಆಗ್ರಾದಲ್ಲಿದ್ದಾಗ ಎಷ್ಟೋಜನ ದರ್ಬಾರಿಗಳು ಅವನನ್ನು ನೋಡಿಕೊಂಡು ಬರುತ್ತಿದ್ದರು. ನೀನೇಕೆ ಹೋಗಲಿಲ್ಲ?"

ದೊಡ್ಡ ಮನುಷ್ಯರೂ, ಖಾನ್‌ದಾರರೂ ಹೋಗಿ ನೋಡಿ ಬರುತ್ತಿದ್ದರು. ನಾನು ಸಣ್ಣ ಸರದಾರ. ನನಗೆ ಆ ಮಹಾರಾಜನನ್ನು ಹೋಗಿ ನೋಡಲು ಅಂತಸ್ತು ಎಲ್ಲಿತ್ತು? ಅಷ್ಟೇ ಅಲ್ಲ. ಶಿವಾಜಿಯನ್ನು ನೋಡಲು ರಜಪೂತ

ರೆಲ್ಲ ಹಿಂತೆಗೆಯುತ್ತಿದ್ದರು. ಏಕೆಂದರೆ, ಅವನು ಏನೋ ಕುಟಿಲ ತಂತ್ರ ಮಾಡುತ್ತಾನೆ, ಅದು ಹಿಂದುಗಳ ತಲೆಗೆ ಬರುತ್ತದೆ,ಎಂದು ಹಿಂದುಗಳು ಹೆದರುತ್ತಿದ್ದರು ಅವನನ್ನು ನೋಡುವುದಕ್ಕೆ ಮುಸಲ್ಮಾನ್ ದರ್ಬಾರಿಗಳಿಗೆ ಹೆಚ್ಚು ಕುತೂಹಲವಿತ್ತು. ದೊಡ್ಡ ಕಾಜೀಸಾಹೇಬರು ಕೂಡ ಒಂದೆರಡು ಬಾರಿ ಶಿವಾಜಿಯನ್ನು ಹೋಗಿ ಭೇಟಿ ಮಾಡಿದ್ದರು. ಎಷ್ಟೋ ಜನ ಅವನು ಮಹಮ್ಮದೀಯನಾಗುತ್ತಾನೆಂದು ಆಸೆಯಿಟ್ಟುಕೊಂಡಿದ್ದರು. ಹೆಚ್ಚೇಕೆ ತಮ್ಮ ಸಹೋದರಿ ರೋಷನಾರಾ ಬೇಗಂರವರೂ, ಷಹಜಾದೇ ಜೀನಿತ್ ಉನ್ನೀಸಳೂ ಹೋಗಿ ಶಿವಾಜಿಯ ಭೇಟಿ ಮಾಡಿದ್ದರೆಂದು ಡೆಲ್ಲಿಯಲ್ಲೆಲ್ಲಾ ಬೇಕಾದಷ್ಟು ಕೂಗು ಹುಟ್ಟಿತ್ತು."

"ಜಹನಾರಾಳು ನಿಟ್ಟುಸಿರು ಬಿಟ್ಟು ನೀನೂ ನೋಡಿ ಬಂದಿದ್ದರೆ ಚೆನ್ನಾಗಿತ್ತು. ಖಾನ್‌ದಾರನಲ್ಲದಿದ್ದರೇನು ? ನೀನು ವೀರಪುರುಷ, ಪರಾಕ್ರಮಶಾಲಿ. ನೀನು ಅವನ ಮುಂದೆ ನಿಂತು ನಿಮ್ಮಿಬ್ಬರ ಪರಾಕ್ರಮಗಳನ್ನೂ ಅಳತೆಮಾಡಿ ಕೊಂಡಿದ್ದರೆ ಎಷ್ಟೋ ಚೆನ್ನಾಗಿತ್ತು."

"ಬೇಗಂಸಾಹೇಬಾ, ತಮ್ಮ ಅನುಗ್ರಹವಿದ್ದರೆ ಅದೇನು ದೊಡ್ಡ ಕಾರ್ಯ! ಈ ದಖ್ಖನ್ನಿನಲ್ಲಿ ಎಲ್ಲಾದರೊಂದು ಸ್ಥಳದಲ್ಲಿ ಅವನನ್ನು ಮುಖಾಮುಖಿ ಎದುರಿಸಿ ಯುದ್ಧಮಾಡಬೇಕೆಂಬ ಆಸೆಯಿದೆ. ದೇವರಚಿತ್ತ. ಆ ಯುದ್ಧ ದಲ್ಲಿ ನನ್ನ ಕತ್ತಿಗೆ ಅವನು ತುತ್ತಾಗಿಬಿಟ್ಟರೆ ಬಾದಷಹರು ನನ್ನ ಮೇಲೆ ಅನುಗ್ರಹದ ಮಳೆಗರೆಸುತ್ತಾರೆ" ಎಂದು ಹೇಳುತ್ತಾ ಆಕಾಶದ ಕಡೆಗೆ ನೋಡಿ ದನು.

ಜಹನಾರಾಳು ಉನ್ಮತ್ತಳಂತೆ "ಭೇಷ್! ವೀರಪುರುಷ" ಎಂದು ಪ್ರಶಂಸೆ ಮಾಡುತ್ತಾ ಅವನನ್ನು ಬಿಗಿದಪ್ಪಿ ಮುಖವನ್ನು ಚುಂಬಿಸಿದಳು.

ದಿಲೀಪನು ಭಯದಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಿದರೂ ಬಿಡದೆ ಅವನ ಮೇಲೆ ಚುಂಬನದ ಮಳೆಗರೆದಳು. "ಬಾದಷಹನೇಕೆ? ನಾನೇ ಅನುಗ್ರಹಿಸುತ್ತೇನೆ" ಎಂದು ಉನ್ಮತ್ತಳಂತೆ ನುಡಿಯುತ್ತಿದ್ದಳು.

ದಿಲೀಪನು ಪ್ರಯಾಸದಿಂದ ಷಹಜಾದೆಯ ತೋಳು ಬಂಧನದಿಂದ ಬಿಡಿಸಿಕೊಂಡು ಕೈಮುಗಿದು 'ಮಾಫ್ ಮಾಡಬೇಕು, ಷಹಜಾದೇ' ಎಂದು ಕೇಳಿಕೊಂಡನು.

ಜಹನಾರಾಳು "ನಡಿ, ದಿಲೀಪ್ ಶಿಬಿರಕ್ಕೆ ಹೋಗೋಣ ಎಂದು ಅವನ ಕೈಹಿಡಿದುಕೊಂಡು ಶಿಬಿರದ ಕಡೆ ಹೊರಟಳು. ಮಧ್ಯಮಾರ್ಗದಲ್ಲಿ ದಿಲೀಪನು ಬೇಗಂಸಾಹೇಬಳ ಕೈಬಿಡಿಸಿಕೊಳ್ಳಲು ಎರಡು ಮೂರು ಬಾರಿ ಪ್ರಯತ್ನ ಪಟ್ಟನು. ಜಹನಾರಾಳು ಅವನ ಕೈಬಿಡದೆ ಆ ಶಿಬಿರದೊಳಗೆ ಅವನನ್ನು ಸೆಳೆದೊಯ್ಯುತ್ತಿದ್ದಳು. ಆ ಬೇಗಂಸಾಹೇಬಳಿಗೆ ಸ್ಮೃತಿಯು ಇದ್ದಿತೋ ಇಲ್ಲವೊ, ದಿಲೀಪನಿಗೆ ಅರ್ಥವಾಗಲಿಲ್ಲ. ಅವನ ಮನಸ್ಸಿನಲ್ಲಿ ಭಯ ಸಂಕೋಚ ಗಳು ಹೋರಾಡುತ್ತಿದ್ದವು. ಆ ಶಿಬಿರದ ಜನರೇನೆಂದುಕೊಂಡಾರು ? ಇದೆಂಥ ಆಭಾಸ ಪ್ರಸಂಗ, ಎಂದು ಹೃದಯವು ನಡುಗುತ್ತಿದ್ದಿತು. 'ಬೇಗಂಸಾಹೇಬಾಳು ವಯಸ್ಸಿನಲ್ಲಿ ದೊಡ್ಡವಳು. ಏನೋ ತಮ್ಮನಂತೆ ನನ್ನ ಕೈಹಿಡಿದುಕೊಂಡು ಹೋಗುತ್ತಿದ್ದಾಳೆ, ಎಂದುಕೊಳ್ಳಲಿ ಈ ಶಿಬಿರದ ಜನ. ನಾನೇನು ಮಾಡಲಿ ? ನಾನು ನಿರಪರಾಧಿ' ಎಂದುಕೊಳ್ಳುತ್ತಿದ್ದನು.

ಜಹನಾರಾಳು ತನ್ನ ಗುಡಾರದೊಳಗೆ ಪ್ರವೇಶಮಾಡಿದಳು. ದಿಲೀಪನು "ಅಬ್ಬಾ ! ಬದುಕಿಕೊಂಡೆ. ಮರ್ಯಾದೆ ಉಳಿಯಿತು" ಎಂದುಕೊಂಡನು.

ಷಹಜಾದೆಯು ಆ ಭವ್ಯವಾದ ಪಟ ಮಂಟಪದಲ್ಲಿ ಹಂಸತೂಲಿಕಾ ತಲ್ಪದ ಮೇಲೆ ಬಿದ್ದಳು. ಪರಿಚಾರಿಕೆಯು ಸಡಗರದಿಂದ ಮದ್ಯಪಾತ್ರೆಯನ್ನು ತಂದು ಬೇಗಂಸಾಹೇಬಳ ಕೈಗೆ ಕೊಟ್ಟಳು. ಬೇಗಂಸಾಹೇಬಾಳು ಆ ಮದ್ಯ ವನ್ನು ಆಸ್ವಾದಿಸುತ್ತಾ ದಿಲೀಪನ ಕಡೆ ನೋಡಿ ಕಣ್ಣು ಸನ್ನೆ ಮಾಡಿದಳು. ಪರಿಚಾರಿಕೆಯು ಮದ್ಯ ಪಾತ್ರೆಯನ್ನು ದಿಲೀಪನಿಗೆ ತಂದು ಕೊಟ್ಟಳು. ದಿಲೀಪನಿಗೆ ಗಾಬರಿಯಾಗಿತ್ತು. ಈ ಸ್ಥಳದಿಂದ ಬಿಟ್ಟು ಹೋದರೆ ಸಾಕು ಎಂದು ತಡಬಡಿಸುತ್ತಿದ್ದನು. ಷಹಜಾದೆಯ ಬಾಯಿಯಲ್ಲಿ ಏನು ಮಾತು ಗಳು ಹೊರಡುತ್ತವೋ, ಈ ಪರಿಚಾರಿಕೆಯೊಬ್ಬಳು ಸಾಕ್ಷಿಯಾಗಿದ್ದಾಳೆ ಎಂದು ಕೊಂಡನು. ಪರಿಚಾರಿಕೆಯು ಇಂಥ ಎಷ್ಟೋ ಪ್ರಸಂಗಗಳಲ್ಲಿ ಸಾಕ್ಷೀಭೂತ ಳಾಗಿದ್ದಾಳೆ. ಅವಳಿಗೆ ಈ ಪ್ರಸಂಗವು ಅಷ್ಟೇನೂ ಆಶ್ಚರ್ಯವನ್ನುಂಟು ಮಾಡಿಲಿಲ್ಲ ಬೇಗಂಸಾಹೇಬಾಳು ಹಂಸತೂಲಿಕಾತಲ್ಪದ ಮೇಲೆ ಅಸ್ತ ವ್ಯಸ್ತವಾಗಿ ಕಾಲುನೀಡಿ ಕುಳಿತಿದ್ದಾಳೆ. ದಿಲೀಪನು ದೂರದಲ್ಲಿ ನಡುಗುತ್ತಾ ನಿಂತಿದ್ದಾನೆ. ಇದರಲ್ಲಿ ಸ್ವಾರಸ್ಯವೇನಿದೆ ! ಅವಳಿಗೇನೂ ಆಶ್ಚರ್ಯವಾಗಲಿಲ್ಲ ಪರಿಚಾರಿಕೆ ಹೊರಟುಹೋದಳು.

ಜಹನಾರಾಳು "ದಿಲೀಪ್‌ಸಿಂಗ್, ಇಲ್ಲಿ ಬಾ. ಈ ಮಧುಪಾತ್ರೆಯಲ್ಲಿ ನೋಡು. ಈ ಸುವಾಸನೆಯನ್ನು ಬೀರುತ್ತಿರುವ ಥಳಥಳಿಸುತ್ತಿರುವ ಮಧುವನ್ನು ನೋಡು. ಇದರಲ್ಲಿ ಈ ದೀಪ ಪ್ರಕಾಶರು ಪ್ರತಿಬಿಂಬಿಸುತ್ತಿರುವುದನ್ನು ನೋಡು. ಸ್ತ್ರೀಯಹೃದಯದ ಪ್ರೇಮರಸದಲ್ಲಿ ಪುರುಷನು ಹೀಗೆ ಪ್ರತಿಬಿಂಬಿಸುತ್ತಾನೆ. ನೀನು ಸಪ್ಪಗಿರುವಿ. ಈ ಪ್ರೇಮರಸ, ಪ್ರಕಾಶಗಳೆರಡೂ ಬೆರೆತಿರುವ ಈ ಮಧುವನ್ನು ಪಾನಮಾಡು. ಆಗ ನೀನು ತೇಜೋವಂತನಂತೆ ಪ್ರಕಾಶಿಸುವೆ" ಎಂದು ಹೇಳಿದಳು.

ದಿಲೀಪನು ಅರಿತೋ ಅರಿಯದೆಯೋ ಆ ಮದ್ಯಪಾತ್ರೆಯನ್ನು ಹೀರಿ ಪಾನಮಾಡಿದನು. ಅವನು ಆ ಮಧುಪಾತ್ರೆಯನ್ನು ಕಾಲುಮಣೆಯ ಮೇಲೆ ಇಡುವಷ್ಟರಲ್ಲಿ ಜಹನಾರಾಳ ಬಾಹು ಬಂಧನದಲ್ಲಿ ಸಿಕ್ಕಿಹೋಗಿದ್ದನು.

'ಬೆಳಕು ಹರಿದಿರಬಹುದು' ಎಂದು ಗಾಬರಿಯಿಂದ ದಿಲೀಪನು ಎಚ್ಚರಗೊಂಡನು. ಅವನು ಆ ತಲ್ಪದ ಮೇಲೆ ಮಲಗಿದ್ದ ಆ ಷಹಜಾದೆಯನ್ನು ಮತ್ತೊಮ್ಮೆ ಕಣ್ಣುತುಂಬಾ ನೋಡಿದನು. ಆ ದೀಪ ಪ್ರಭೆಯಲ್ಲಿ ಆ ಪ್ರಶಾಂತ ಹಸನ್ಮುಖವು ರಾಜಿಸುತ್ತಿದ್ದಿತು. ಶುಭ್ರ ಆಕಾಶದಲ್ಲಿ ಬೆಳಗುವ ಚಂದ್ರನನ್ನು ಆ ನದೀ ತೀರದಲ್ಲಿ ಅವನು ಆ ರಾತ್ರಿ ತಾನೆ ನೋಡಿದ್ದನು. ಷಹಜಾದೆಯ ಮುಖವು ಆ ಚಂದ್ರನನ್ನು ಧಿಕ್ಕರಿಸುವ ಪ್ರಶಾಂತ ಕಾಂತಿಮಯವಾಗಿದೆಯೆಂದು ಅವನಿಗೆ ಬೋಧೆಯಾಯಿತು. ಉನ್ಮತ್ತನಂತೆ ಪುನಃ ಪುನಃ ಷಹಜಾದೆಯ ಕಪೋಲಗಳನ್ನು ಚುಂಬಿಸಿ ಗುಡಾರದಿಂದ ಹೊರಗೆ ಹೊರಟನು. ಅಮೂಲ್ಯ ನಿಧಿಯನ್ನು ಅಪಹರಿಸಿಕೊಂಡು ಹೋಗುತ್ತಿರುವ ಕಳ್ಳನ ಮನಸ್ಸಿನಂತೆ ಆಗಿತ್ತು ಅವನ ಮನಸ್ಸು.

ರಾತ್ರಿ ಇನ್ನೂ ಉಳಿದಿತ್ತು. ಅವನು ಭಯಪಟ್ಟಂತೆ ಬೆಳಕು ಹರಿದಿರಲಿಲ್ಲ. ತನ್ನ ಗುಡಾರಕ್ಕೆ ಹೋಗಿ ಮತ್ತೊಮ್ಮೆ ಮದ್ಯವನ್ನು ಕುಡಿದು ಹಾಸಿಗೆ ಮೇಲೆ ಉರುಳಿದನು. ಆ ಅರ್ಧ ಜ್ಞಾನಾವಸ್ಥೆಯಲ್ಲಿ ಅವನ ಮನಸ್ಸಿನ ಮೇಲೆ ಆ ರಾತ್ರಿ ಆ ನದೀ ತೀರದ ಶಿಲಾಫಲಕ, ಆ ಬೆಳದಿಂಗಳು, ಆ ಜಗನ್ಮೋಹಿನಿ ಷಹಜಾದೆಯ ಪ್ರೇಮಪೂರ್ಣ ಕಟಾಕ್ಷ, ಆಲಿಂಗನ, ಮತ್ತೆ ಶಯ್ಯಾಗೃಹದಲ್ಲಿ ಅದೇ ಸೌಂದರ್ಯದ ಉನ್ಮತ್ತ ಸ್ವರೂಪ, ಆ ಪ್ರೇಮೋನ್ಮಾದ, ಆ ಆಲಿಂಗನಗಳು ಪ್ರತಿಫಲಿಸುತ್ತಿದ್ದುವು. ಬೆಳಕು ಹರಿಯುವ

ಸಮಯಕ್ಕೆ ಅಸ್ತವ್ಯಸ್ತನಾಗಿದ್ದರೂ ಪೂರ್ಣ ಜ್ಞಾನಾವಸ್ಥೆಯನ್ನು ಪಡೆದಿದ್ದನು. ಅವನ ಮನಸ್ಸಿನಲ್ಲಿ ಭಯದಿಂದ ಕಂಪನವು ಹುಟ್ಟಿತು. ದೆಹಲಿಯ ಅಂತಃಪುರದ ಈ ಸೌಭಾಗ್ಯ ಸುಂದರಿಯರ ಕಥೆಗಳನ್ನು ಎಷ್ಟೋ ಕೇಳಿದ್ದನು. ಆ ಪ್ರಕೃಷ್ಟ ಉಜ್ವಲ ಪ್ರಭೆಯಲ್ಲಿ ಎಷ್ಟೋ ಮಂದಿ ರಜಪೂತ ತರುಣರು ಬಿದ್ದು ಭಸ್ಮವಾಗಿ ಹೋಗಿದ್ದ ಕಥೆಗಳು ನೆನಪಿಗೆ ಬಂದವು. ಹೃದಯವು ನಡುಗಿತು. ಧೈರ್ಯವನ್ನು ತಂದುಕೊಂಡು ಆ ಶಿಬಿರದಿಂದ ಪಲಾಯನ ಮಾಡ ಬೇಕೆಂದು ತೋರಿತು. ಪುನಃ ಆ ಮೋಹಿನಿಯ ಸುಂದರ ವದನಾರವಿಂದ, ಆ ಪ್ರೇಮ ಕಟಾಕ್ಷ, ಆ ಮನಮೋಹಕ ಕೇಶರಾಶಿ, ಆ ಬಾಹುಲತೆಗಳು, ಆ ವಕ್ಷಪ್ರದೇಶ, ಇವೆಲ್ಲವೂ ಮೂರ್ತಿಮತ್ತಾಗಿ ಎದುರಿಗೆ ಬಂದು ನಿಂತಂತಾದವು. ದಿಲೀಪನು 'ಛೇ! ಛೇ! ನನ್ನ ಮನಸ್ಸು ವೃಥಾ ಶಂಕಿಸುತ್ತದೆ. ಈ ಪ್ರೇಮ ಪುತ್ಥಳಿ ಸಹಜಾದೆಯಲ್ಲಿ ವೃಥಾ ಶಂಕೆ ಪಡು ತ್ತದೆ. ಅವಳ ಪೂರ್ಣಾನುಗ್ರಹವು ನನ್ನ ಮೇಲಿದೆ' ಎಂದುಕೊಂಡನು. ಬೆಳ ಗಾಗುತ್ತಲೇ ಮುಂದಿನ ಪ್ರಯಾಣವು ಸಿದ್ಧವಾಯಿತು. ಅಂದೇ ಗೋಲ್ಕೊಂಡ ವನ್ನು ತಲುಪುವ ದಿನ ಜಹನಾರಳು ಗುಡಾರದಿಂದ ಬಂದು ಎದುರಿಗೆ ನಿಂತಿದ್ದ ದಿಲೀಪ್‌ಸಿಂಗ್‌ನನ್ನು ನೋಡಿ ಮುಗುಳುನಗುವನ್ನು ನಕ್ಕು ಮ್ಯಾನಾದಲ್ಲಿ ಕುಳಿತಳು. ದಿಲೀಪ್‌ಸಿಂಗ್‌ನು ಕುದುರೆಯನ್ನೇರಿ ಹಿಂಬಾಲಿಸಿ ಹೊರಟನು. ಗೋಲ್ಕೊಂಡದ ಕೋಟೆಯ ಮಹಾ ದ್ವಾರದಲ್ಲಿಯೇ ಸಾರ್ವಭೌಮರಿಗೆ ಯೋಗ್ಯವಾದ ಸ್ವಾಗತದ ಏರ್ಪಾಡಾಗಿದ್ದಿತು. ಅಧಿಕಾರಿಗಳು ಬಂದು ಎದುರುಗೊಂಡರು. ಪುಷ್ಪಹಾರಗಳನ್ನು ಅರ್ಪಿಸಿದರು. ಮ್ಯಾನಾ ನಗರದ ರಾಜಮಾರ್ಗದಲ್ಲಿ ಹೊರಟು ಅರಮನೆಯ ಮಹಾದ್ವಾರವನ್ನು ಹೊಕ್ಕು ಅಂತಃಪುರದೊಳಗೆ ಹೋಗಿ ಇಳಿಯಿತು. ಅಂತಃಪುರದ ಬೇಗಂ ಸಾಹೇಬರು ಗಳು ಬಂದು ಸಾರ್ವಭೌಮರ ಸೋದರಿಯನ್ನು ವಂದಿಸಿ, ಅಂತಃಪುರದೊಳಗೆ ಕರೆದೊಯ್ದರು. ದೆಹಲಿಯ ದರ್ಬಾರಿನ ಜೊತೆಗಾರರೆಲ್ಲ, ಅವರ ದಳಪತಿ ದಿಲೀಪ್‌ಸಿಂಗ್‌ನೂ ಅರಮನೆಯ ಮಹಾದ್ವಾರದಲ್ಲಿ ನಿಂತರು. ಭಕ್ಷಿಯವರು ಅವರನ್ನೆಲ್ಲಾ ಬಿಡಾರಕ್ಕೆ ಕರೆದುಕೊಂಡು ಹೋಗಿ ಇಳಿಸಿದನು. ಗೋಲ್ಕಂಡ ದಲ್ಲಿ ಜಹನಾರಳು ಮೂರು ದಿನಗಳಿದ್ದಳು. ಔತಣೋಪಚಾರಗಳು ವೈಭವ ದಿಂದ ನಡೆಯುತ್ತಿದ್ದವು. ಜಹನಾರಳನ್ನು ಸುಲ್ತಾನನು ಅಂತಃಪುರ

ದಲ್ಲಿಯೇ ಭೇಟಿ ಮಾಡಿದನು. ಬೇಗಂ ಸಾಹೇಬಾಳು ಸುಲ್ತಾನನೊಡನೆ ಅನೇಕ ವಿಷಯಗಳನ್ನು ಪ್ರಸ್ತಾಪಿಸಿ "ಹೇಗಾದರೂ ಶಿವಾಜಿಯನ್ನು ಹಿಡಿದು ಕೊಡಬೇಕು. ಇದೇ ಬಾದಷಹರ ಆಕಾಂಕ್ಷೆ. ಅವನನ್ನು ಹಿಡಿದರೆ ನಮ್ಮ ಮತ್ತು ನಿಮ್ಮ ರಾಜ್ಯಗಳು ಸುಭಿಕ್ಷವಾಗುತ್ತವೆ. ಬೇರೆ ರಾಯಭಾರಿಗಳ್ಯ ಬರುವುದಕ್ಕೆ ಬದಲು ನಾನೇ ಬಂದಿದ್ದೇನೆ. ಮೊಗಲ್ ಸಾಮ್ರಾಟರಿಂದ ನಿಮಗೆ ಏನು ಪ್ರತಿಫಲ ಬೇಕಾದರೂ ನೀಡಲು ಅವರು ಸಿದ್ಧರಾಗಿದ್ದಾರೆ" ಎಂದು ಹೇಳಿದನು.

ಸುಲ್ತಾನನು, "ಯಾವ ರಾಯಭಾರಿಗಳು ತಾನೆ ಬೆಂಗಸಾಹೇಬಾರ ಅಂತಸ್ತಿಗೆ ಸಮಾನರಾದರು? ನೀವು ನಮ್ಮ ಅರಮನೆಗೆ ಬಂದಿರುವುದು ನಮ್ಮ ಭಾಗ್ಯ. ಸ್ವಯಂ ಬಾದಷಹರೇ ನಮ್ಮಮೇಲೆ ಅನುಗ್ರಹವಿಟ್ಟು ಬಂದಿರುವಂತೆ ನಾವು ಭಾವಿಸುತ್ತೇವೆ. ಶಿವಾಜಿಯು ನಮಗೂ ಪರಮ ಶತ್ರುವೇ ಸರಿ. ಆದರೆ ಅವನನ್ನು ಅರಿಸಿ ಹಿಡಿಯುವುದು ದುಸ್ತರವಾದ ಕಾರ್ಯ. ನಾವು ಎಷ್ಟೋ ಪ್ರಯತ್ನಪಟ್ಟು ನಿರಾಶರಾಗಿದ್ದೇವೆ. ಯುವರಾಜರ ಸಹಾಯಕ್ಕಾಗಿ ಇಂದೇ ಹನ್ನೆರಡು ಸಹಸ್ರ ಅಶ್ವಸೇನೆಯನ್ನು ಕಳುಹಿಸಿಕೊಡುತ್ತೇವೆ. ಬೇಕಾದಷ್ಟು ಹಣ ಕೊಡುತ್ತೇವೆ. ಬಾದಷಹರ ಇಷ್ಟಾರ್ಥವು ಫಲಿಸಿದರೆ ನಮ್ಮ ರಾಜ್ಯವು ನಿಷ್ಕಂಟಕವಾಗುತ್ತದೆ. ನಾವು ಕೃತಾರ್ಥರೆಂದು ಭಾವಿಸುತ್ತೇವೆ" ಎಂದು ಹೇಳಿ ಬೇಗಂ ಸಾಹೇಬಾಳ ಅಪ್ಪಣೆ ಪಡೆದು ವಿನಯದಿಂದ ಸಲಾಂಮಾಡಿ ಹೊರಟುಹೋದನು.

ಬೇಗಂಸಾಹೇಬಳ ಹೃದಯವು ಕುಗ್ಗಿತು. ಮುಖವು ತೇಜೋಹೀನವಾಯಿತು. "ಇದೇನು ಆಶ್ಚರ್ಯ? ಈ ರಾಜ್ಯದಲ್ಲಿ ಆ ಶಿವಾಜಿಯನ್ನು ಹಿಡಿಯುವ ವೀರಪುರುಷನೊಬ್ಬನೂ ಇಲ್ಲವೆ?" ಎಂದು ವ್ಯಥೆಪಟ್ಟಳು.

ಮಾರನೆಯ ದಿನ ಬೇಗಂಸಾಹೇಬಳು ಔರಂಗಬಾದಿಗೆ ಹಿಂತಿರುಗುವ ಏರ್ಪಾಡಾಯಿತು.

ಸುಲ್ತಾನನು ದಿಲೀಪ್ ಸಿಂಗ್‌ನನ್ನು ಕರೆಸಿ, ಭೇಟಿಮಾಡಿ ಖಿಲ್ಲತ್ತುಗಳನ್ನು ಕೊಡಿಸಿದನು. "ಸರದಾರ ಸಾಹೇಬರೇ, ನೀವು ಹೋಗುವ ಮಾರ್ಗ ಅಷ್ಟು ಸುಖಮಯವೆಂದು ಕಾಣುವುದಿಲ್ಲ. ಇತ್ತ ಕಡೆ ಮರಾಠರು ಹೆಚ್ಚಾಗಿ ಬರುವ ಸಂಭವವೇನೂ ಇಲ್ಲ. ಆದರೂ ಜಾಗರೂಕವಾಗಿ ಹೋಗಬೇಕು. ಮಧ್ಯೆ

ಮಧ್ಯೆ ಬಿಜಾಪುರದವರ ಠಾಣ್ಯಗಳಿವೆ. ನಮ್ಮ ಠಾಣ್ಯಗಳೂ ಇವೆ. ಎಲ್ಲರಿಗೂ ರಹದಾರಿ ಕಳುಹಿಸುತ್ತೇನೆ. ನೀವು ಪನ್ಹಾಲಾ ಮಾರ್ಗವಾಗಿ ಹೋಗಿರಿ. ಅಲ್ಲಿ ಬಿಜಾಪುರದ ದೊಡ್ಡ ಸೈನ್ಯವಿದೆ. ಅದು ಬಹು ಸುಭದ್ರವಾದ ಕೋಟೆ. ಅಲ್ಲಿಯೂ ಎರಡು ದಿವಸ ತಂಗಿ ಮುಂದೆ ಮಾರ್ಗ ನೋಡಿಕೊಂಡು ಪ್ರಯಾಣ ಮಾಡಿ. ನಮ್ಮ ಕಡೆಯ ಜನರನ್ನು ಕಳುಹಿಸಿಕೊಡುತ್ತೇವೆ. ನಮ್ಮ ಕಡೆಯವರು ಘಾಟಾ ಮಾರ್ಗಗಳನ್ನೂ ಕಾಡು ಮಾರ್ಗಗಳನ್ನೂ ಚೆನ್ನಾಗಿ ಅರಿತಿದ್ದಾರೆ. ಸಮಯದಲ್ಲಿ ನಿಮಗೆ ಸಹಾಯವಾಗುತ್ತದೆ" ಎಂದು ಹೇಳಿ ಮರ್ಯಾದೆಯಿಂದ ಕಳುಹಿಸಿಕೊಟ್ಟನು.

ಬೇಗಂಸಾಹೇಬಾರ ಮ್ಯಾನಾ ಹೊರಟಿತು. ಜಹನಾರಾಳು ಗೋಲ್ಕಂಡದ ಕೋಟೆ, ಆ ಚಂದ್ರಶಾಲೆಗಳು, ಆ ಮನೋಹರ ದೃಶ್ಯಗಳು, ಆ ಅರಮನೆಯ ಐಶ್ವರ್ಯ ವೈಭವಗಳು, ಆ ಅಂತಃಪುರದ ರಮಣಿಯರ ರೂಪ ಸೌಂದರ್ಯಗಳು, ಇವನ್ನೇ ನೆನೆಯುತ್ತಿದ್ದಳು. ದಾರಿಸಾಗುತ್ತಿದ್ದಿತು. ಮೊದಲನೆಯ ಮಜಲಿನಲ್ಲಿ ಪರಿಚಾರಿಕೆಯನ್ನು ಕಳುಹಿಸಿ ದಿಲೀಪ್‌ಸಿಂಗ್‌ನನ್ನು ಕರೆಸಿದಳು.

ದಿಲೀಪ್‌ಸಿಂಗನು ಬೇಗಂಸಾಹೇಬಳ ಗುಡಾರಕ್ಕೆ ಹೋಗಿ ಸಲಾಂ ಮಾಡಿದನು.

ಬೇಗಂಸಾಹೇಬಳು ನಸುನಗುತ್ತಾ ಅವನ ಕೈಹಿಡಿದೆಳೆದು ಮಂಚದ ಮೇಲೆ ಕೂಡಿಸಿದಳು.

ಪರಿಚಾರಿಕೆಯು ತಲೆತಗ್ಗಿಸಿ ನಿಂತಿದ್ದಳು.

ಜಹನಾರಳು "ಮೋತಿ, ಪ್ರಯಾಣದ ಆಯಾಸವಾಗಿದೆ. ಸ್ವಲ್ಪ ಮದ್ಯ ಸೇವನೆ ಮಾಡಿದರೆ ಮೈ ಹಿತವಾದೀತು" ಎಂದಳು.

ಪರಿಚಾರಿಕೆಯು ಮದ್ಯಪಾತ್ರೆಯನ್ನು ತಂದು ಬಟ್ಟಲುಗಳಲ್ಲಿ ಬಗ್ಗಿಸಿ ಇಬ್ಬರಿಗೂ ಕೊಟ್ಟಳು.

ದಿಲೀಪನು ನಾಚುತ್ತಾ ಪರಿಚಾರಿಕೆಯ ಕೈಯಿಂದ ಮದ್ಯ ಪಾತ್ರೆಯನ್ನು ಸ್ವೀಕರಿಸಿದನು.

ಜಹನಾರಾಳು ದಿಲೀಪನ ಬೆನ್ನುತಟ್ಟಿ "ಕುಡಿ, ಸ್ವಲ್ಪ ಸೇವನೆಮಾಡು. ಗೋಲ್ಕಂಡದಲ್ಲಿ ನಿನ್ನನ್ನು ನಾನು ಮರೆತುಬಿಟ್ಟೆನೆಂದು ನೀನು ಪರಿತಪಿಸುತ್ತಿರಬಹುದು. ಆ ಅಂತಃಪುರಕ್ಕೆ ನಿನ್ನನ್ನು ಕರೆಸಿದರೆ ಆ ಹುಡುಗಿಯರು

ನಿನ್ನನ್ನು ಕದ್ದು ಬಚ್ಚಿಟ್ಟುಬಿಟ್ಟಾರೆಂದು ನಾನು ಕರೆಸಲಿಲ್ಲ" ಎಂದು ಹೇಳಿ ಅವನ ಮುಖವನ್ನು ತನ್ನ ಕಡೆಗೆ ತಿರುಗಿಸಿ ಚುಂಬಿಸಿದಳು.

ಪರಿಚಾರಿಕೆಯು ಹೊರಗೆ ಹೊರಟ.ಹೋದಳು.

ದಿಲೀಪನು "ಬೇಗಂಸಾಹೇಬಾ, ಎಷ್ಟಾದರೂ ನೀವು ದೊಡ್ಡವರು ನಾನು ನಿಮ್ಮ ಸೇವಕ. ನನಗೆ ಯಾವಾಗಲೂ ನಿಮ್ಮ ಭಯವಿದ್ದೇ ಇದೆ" ಎಂದು ಹೇಳಿದನು.

ಜಹನಾರಳು. "ದಿಲೀಪ್, ನಾನು ಸ್ವತಂತ್ರಳು. ನನ್ನ ಅನುಗ್ರಹ ಪಾತ್ರರು ಭಯಪಡಬೇಕಾಗಿಲ್ಲ" ಎಂದು ಹೇಳಿ ಅವನನ್ನು ಸಂತೈಸಿದಳು.

ದಿಲೀಪನು ಅಪ್ಪಣೆ ಪಡೆದು ಹೊರಟುಹೋದನು.

ಅವನು ತನಗೆ ಸ್ವರ್ಗವೇ ಸಿಕ್ಕಿದೆ. "ಬೇಗಂಸಾಹೇಬಳು ದೆಹಲಿಗೆ ಹಿಂತಿರುಗುತ್ತಲೇ ನನ್ನ ಅಂತಸ್ತು ಮೇಲಕ್ಕೇರುತ್ತದೆ" ಎಂದು ಸಂತೋಷ ಪಟ್ಟುಕೊಂಡನು.

ಮೂರು ನಾಲ್ಕು ಮೊಕ್ಕಾಂಗಳು ಸುಖವಾಗಿ ದಾಟಿದವು. ಮುಂದೆ ಮರಾಠಾ ಸೈನ್ಯಗಳ ಚಲನವಲನಗಳಿವೆಯೆಂದು ಗೋಲ್ಕಂಡದ ಬೇಹುಗಾರರು ಎಚ್ಚರಿಸಿದರು. ಮುಂಗಾಲಿನವರು ದಾರಿ ನೋಡಿಕೊಂಡು ಬಂದರು. ಬೇಹುಗಾರರು "ಇಲ್ಲಿರುವುದು ತರವಲ್ಲ, ಹುಜೂರ್. ಮುಂದೆ ಪಲ್ವಾನಾ ಕೋಟೆಯು ಸಿಕ್ಕುತ್ತದೆ. ಅಲ್ಲಿಗೆ ಬೇಗ ಹೋಗಿ ಸೇರಿಕೊಂಡರೆ ಆ ಮೇಲೆ ಯಾವ ಭಯವೂ ಇಲ್ಲ. ದೂರದಲ್ಲಿ ಮಹಾರಾಷ್ಟ್ರ ಸೈನ್ಯವೊಂದು ಬರುತ್ತಿದೆ. ಅದು ಎತ್ತ ಹೋಗುತ್ತದೆಯೋ ಅರಿವಾಗುವುದಿಲ್ಲ. ಅವರು ಸಾಗಿಹೋದ ಮೇಲೆ ಮುಂದೆ ಪ್ರಯಾಣ ಬೆಳೆಸಬಹುದು" ಎಂದು ಹೇಳಿದರು.

ಷಹಜಾದಿಯ ಮ್ಯಾನಾ ಮುಂದಕ್ಕೆ ಹೊರಟಿತು. ಬೆಂಗಾವಲಿನವರು ಜಾಗರೂಕತೆಯಿಂದ ಕಾದು ನಡೆಯುತ್ತಿದ್ದರು. ಹಿಂದೆ ದೂರದಲ್ಲಿ ಖುರ ಪುಟಗಳ ಸದ್ದು ಕೇಳಿಸಿತು. ಅಶ್ವಗಳ ಹೇಷಾರವವು ಕೇಳಿಸಿತು. ಸೈನ್ಯದ ಸದ್ದು ಸಮೀಪಿಸುತ್ತಿರುವಂತೆ ಬೋಧೆಯಾಯಿತು.

ದಿಲೀಪ್‌ಸಿಂಗ್‌ನು ಬೋಯಿಗಳಿಗೆ ವೇಗವಾಗಿ ನಡೆಯಬೇಕೆಂದು ಆಜ್ಞೆಯಿತ್ತನು. ಮರ-ಕ್ಷಣದಲ್ಲಿಯೇ ಏನೋ ಯೋಚನೆಮಾಡಿ ತಟಕ್ಕನೆ ಮ್ಯಾನಾವನ್ನು ನಿಲ್ಲಿಸಿ ಬಾಗಿಲುಗಳನ್ನು ತೆಗೆದು "ಬೇಗಂ ಸಾಹೇಬಾ, ಕೆಳ

ಗಳಿಯಬೇಕು ಈ ಮ್ಯಾನಾಬಿಟ್ಟು ತಾವು ಅಶ್ವವನ್ನೇರಬೇಕು. ಶತ್ರುಸೈನ್ಯವು ಬೆನ್ನುಮುಟ್ಟಿ ಬರುತ್ತಿದೆ" ಎಂದು ಹೇಳಿದನು.

ಜಹನಾರಾಳ ಮುಖದಲ್ಲಿ ಭಯಶಂಕೆಗಳ ಚಿಹ್ನೆಯೇ ಇರಲಿಲ್ಲ. ಅವಳು ಹಾರಿ ಕುದುರೆಯ ಮೇಲೇರಿ ಮುಂದಕ್ಕೆ ಚುರಾಯಿಸಿದಳು.

ದಿಲೀಪನು ಕುದುರೆಯನ್ನು ಮುಂದುವರಿಸುತ್ತಾ 'ಬೇಗಂಸಾಹೇಬಾಳು ಎಷ್ಟು ಧೀರಳು ! ಇಂಥ ಸಮಯದಲ್ಲಿ ಮತ್ತಾವ ಹೆಂಗಸರಾದರೂ ಕುಗ್ಗಿ ಕೊರಗಿ ಹೋಗುತ್ತಾಳೆ. ಹೆಂಗಸರ ಮಾತೇನು? ಎಂತಹ ಸೇನಾಧಿಪತಿಯಾದರೂ ಭಯದಿಂದ ತತ್ತರಿಸಬೇಕು. ಆ ಹಿಂದೆ ಬರುತ್ತಿರುವ ಅಸಂಖ್ಯ ಸೈನ್ಯ ಎಷ್ಟಿದೆ? ನಮ್ಮ ಬೆಂಗಾವಲಿನವರೆಷ್ಟು ಮಂದಿ ? ಭೇಷ್ ? ಆ ಒಹದ್ದೂರನ ಮಗಳಲ್ಲವೆ? ಆ ರಕ್ತದ ಪ್ರಭಾವವು ಎಲ್ಲಿ ಹೋದೀತು?' ಎಂದುಕೊಂಡನು.

ನಾಲ್ಕೇ ಮೈಲಿಗಳಲ್ಲಿ ಪನ್ಹಾಲಾ ಸಿಕ್ಕಿತು. ರಾಣಿಯವರು ಮಚ್ಚಣಿಕೆಯ ಮೇಲಿನಿಂದ ನೋಡುತ್ತಿದ್ದರು ಮರಾಠಾ ಸೈನ್ಯಗಳು ಬರುತ್ತಿರವ ಸಿಶಾನೆ ಅವರಿಗೆ ಮೊದಲೇ ಬಂದಿತ್ತು. ಆದರೆ ಮುಂದೆ ಬರುತ್ತಿರುವ ಸಣ್ಣದಳವು ಬಾದಷಾಹೀ ಖಾನ್ ಸೈನ್ಯಗಳ ದಿರಿಸಿನಿಂದ ಉಷ್ಣೀಷಗಳ ಮೇಲಿದ್ದ ಸರಪೇಶುಗಳಿಂದಲೇ ಗೋಚರವಾಗುತ್ತಿದ್ದಿತು. ಗೋಲ್ಕೊಂಡದಿಂದ ಲಹದಾರಿಯೂ ಬಂದಿತ್ತು. ಇದು ಬಾದಷಹನ ಸಹೋದರಿ ಬೇಗಂಸಾಹೇಬಳ ಸವಾರಿ ಇರಬೇಕು ಎಂದುಕೊಂಡು ದುರ್ಗದೊಳಗೆ ನಿಶಾನೆಕೊಟ್ಟರು. ಬಾಗಿಲು ತೆರೆಯಿತು ಜಹನಾರಾ, ದಿಲೀಪ್‌ಸಿಂಗರ ಕುದುರೆಗಳು ಮಹಾದ್ವಾರದೊಳಗೆ ಪ್ರವೇಶ ಮಾಡಿದವು. ಬಾಗಿಲುಗಳು ಮುಚ್ಚಲ್ಪಟ್ಟವು.

ದುರ್ಗದ ಅಧಿಪತಿಯಾಗಿದ್ದ ಪಹರಾನ್ ಖಾನನು ಅವರನ್ನು ಎದುರುಗೊಂಡು ಅರಮನೆಯೊಳಗೆ ಕರೆದೊಯ್ದನು. ಸ್ವಲ್ಪ ಹೊತ್ತಿನಂತೆಯೇ ಮಚ್ಚಣಿಕೆಯ ಮೇಲೆ ನಗಾರಿ ಬಾರಿಸಿದರು. "ಶತ್ರುಸೈನ್ಯಗಳು ಬರುತ್ತಿವೆ" ಎಂಬುದನ್ನು ಮರಾಠಾ ಬಾವುಟಗಳಿಂದ ಕಂಡುಹಿಡಿದು ನಿಶಾನೆಕೊಟ್ಟರು.

ಶಿವಾಜಿಯು ಪನ್ಹಾಲಾ ದುರ್ಗವನ್ನು ಹಿಡಿಯಬೇಕೆಂದು ಬಹುದಿನಗಳಿಂದ ಹೊಂಚ ಹಾಕುತ್ತಿದ್ದನು. ಅಲ್ಲಿಗೆ ಬಿಜಾಪುರದಿಂದ ಬೇರೆ ಸೈನ್ಯಗಳು ಬಾರದಂತೆ ತಡೆಗಟ್ಟಲು ಮರಾಠಾ ಸೇನಾಧಿಪತಿಗಳನ್ನು ಸೈನ್ಯ ಸಮೇತ ಕಳುಹಿಸಿದ್ದನು. ಈಗ ಪನ್ಹಾಲಾದಲ್ಲಿ ಹೆಚ್ಚು ಸೈನ್ಯಗಳಿಲ್ಲ. ಅಲ್ಲಿರುವ ಸೇನಾ

ಧಿಪತಿ ಷಹಾರಾನ್‌ಖಾನನಿಗೂ, ಬಿಜಾಪುರದ ಅಧಿಕಾರಿಗಳಿಗೂ ವೈಮನಸಿ ಒಂದಿದೆಯೆಂದು ಗುಪ್ತಚಾರರಿಂದ ತಿಳಿದುಕೊಂಡಿದ್ದನು ತನ್ನ ಕಡೆಯ ಗುಪ್ತಚಾರರ ಮುಖೇನ ಷಹರಾನ್ ಖಾನನಿಗೆ "ದುರ್ಗವನ್ನು ಬಿಟ್ಟುಕೊಟ್ಟರೆ ಅಪಾರ ಹಣ ಕೊಡುವುದಾಗಿ" ಹೇಳಿಕಳುಹಿಸಿದ್ದನು. ಇಷ್ಟೆಲ್ಲಾ ಸಿದ್ಧತೆ ಮಾಡಿಕೊಂಡು ಹತ್ತು ಸಹಸ್ರ ಸೈನ್ಯದೊಡನೆ ಪನ್ಹಾಲಾಕ್ಕೆ ಬಂದು ಮುತ್ತಿಗೆ ಹಾಕಿದನು.

ಷಹರಾತ್ ಖಾನನಿಗೆ ಶಿವಾಜಿಯೇ ಸ್ವತಃ ಬಂದು ಮುತ್ತಿಗೆ ಹಾಕಿದ್ದಾನೆಂದು ಖಚಿತವಾಗಿ ತಿಳಿಯಿತು. ಆ ಸಮಾಚಾರ ಬೇಗಂಸಾಹೇಬಾಳು ಕೇಳಿದಳು. ಅವಳು ದುರ್ಗದ ಅಧಿಪತಿಯಾದ ಷಹರಾನ್ ಖಾನ್‌ನನ್ನು ಕರೆಸಿ ಖುದ್ದಾಗಿ ಮಾತನಾಡಿಸಿದಳು. "ನೀವು ಬಿಜಾಪುರದ ಸೇನಾಧಿಪತಿಗಳು. ಶಿವಾಜಿಯು ಈ ದುರ್ಗಕ್ಕೆ ಮುತ್ತಿಗೆ ಹಾಕಿದ್ದಾನೆ. ನೀವು ಪರಾಕ್ರಮ ಶಾಲಿಗಳಾದ ಸೇನಾಧಿಪತಿಗಳೆಂದು ಇಲ್ಲಿ ಪಹರೆಯವರು ಹೇಳುತ್ತಾರೆ. ನಿಮ್ಮ ಸೈನ್ಯವೆಷ್ಟಿದೆ? ನೀವು ಯುದ್ಧ ಮಾಡಿ ಜಯಿಸಬಲ್ಲಿರಾ?" ಎಂದು ಕೇಳಿದಳು.

ಷಹರಾನ್ ಖಾನನು ವಿನಯದಿಂದ ಸಲಾಂ ಮಾಡಿ "ನಮ್ಮ ಸೈನ್ಯ ಎರಡು ಸಾವಿರದಷ್ಟಿದೆ. ಬೇಕಾದಷ್ಟು ಶಸ್ತ್ರಾಸ್ತ್ರಗಳು, ಮದ್ದುಗುಂಡುಗಳು ಇವೆ. ಎರಡು ದೊಡ್ಡ ತೋಪುಗಳಿವೆ. ಭಯವೇನೂ ಇಲ್ಲ. ತಾವು ಸುರಕ್ಷಿತರಾಗಿದ್ದೀರಿ. ಧೈರ್ಯದಿಂದ ಇರಬಹುದು" ಎಂದು ಹೇಳಿದನು.

ಬೇಗಂಸಾಹೇಬಾಳು ಗಟ್ಟಿಯಾಗಿ ನಕ್ಕಳು. "ನನ್ನ ಧೈರ್ಯಕ್ಕೆ ಏನು ತೊಂದರೆ ಬಂದಿದೆ. ನಾನೂ ಸುರಕ್ಷಿತಳಾಗಿದ್ದೇನೆ. ಇಲ್ಲಿಗೆ ಬರುವ ಮಾರ್ಗದಲ್ಲಿ ನಮಗೂ ಅವರಿಗೂ ಸ್ವಲ್ಪವೇ ಚಟ್ಟಿತ್ತು. ಆಗಲೇ ಅವರ ಕೈಗೆ ಸಿಕ್ಕಿದ್ದರೂ ನಾನು ಭಯಪಡುತ್ತಿರಲಿಲ್ಲ. ನಮ್ಮ ಮೊಗಲ್ ಸೈನ್ಯಗಳು ಅಷ್ಟು ನಿರ್ವೀರ್ಯವಾಗಿಲ್ಲ. ಈ ಕೋಟೆಯಲ್ಲಿ ಇರುವಾಗ ಭಯವೆಲ್ಲಿ ಬಂತು? ಈ ಕೋಟೆ ಬಹಳ ಭದ್ರವಾದ ಕೋಟೆಯೆಂದು ಕೇಳಿದ್ದೇನೆ. ನೀವು ಯುದ್ಧಮಾಡಿ ಶಿವಾಜಿಯೇ ಬಂದಿರುವುದನ್ನು ಕೇಳಿ ನನಗೆಷ್ಟೋ ಸಂತೋಷವಾಯಿತು. ನನ್ನ ಕಣ್ಣು ಮುಂದೆಯೇ ಅವನು ಸೋತು ಓಡಿಹೋದರೆ ನನ್ನ ಹೆಮ್ಮೆಗೆ ಪಾರವಿಲ್ಲ. ಮೊಗಲ್ ಬಾದಷಹರೂ ನಿಮಗೆ ಅತ್ಯುನ್ನತ ಸ್ಥಾನ ಗೌರವಗಳನ್ನು ಕೊಡುತ್ತಾರೆ. ನೀವು ಔರಂಗಾಬಾದಿಗೆ ತುರುತು ಸಮಾಚಾರ ಕಳುಹಿಸಿರಿ. ಯುವ

ರಾಜರು ಅಲ್ಲಿಂದ ಮೊಗಲ್ ಸೈನ್ಯವನ್ನು ನಿಮ್ಮ ಸಹಾಯಕ್ಕೆ ಕಳುಹಿಸುತ್ತಾರೆ" ಎಂದು ಹೇಳಿದಳು.

ಷಹರಾನ್‌ಖಾನನು ಸಲಾಂಮಾಡಿ ಹೊರಟುಹೋದನು. ಅವನ ಮನಸ್ಸಿನಲ್ಲಿ 'ಎಂತಹ ಧೀರ ರಮಣಿ ಇವಳು. ಈ ಕಷ್ಟಸಮಯದಲ್ಲೂ ಎಷ್ಟು ದಿಟ್ಟತನ! ಎಂತಹ ಧೈರ್ಯ! ಈ ಯುವನ ತರುಣಿಯು ಮುಂದೆ ಎಂತಹ ಪರಾಕ್ರಮಿಯಾದರೂ ತಲೆ ಬಾಗಿಸಲೇ ಬೇಕು' ಎಂದುಕೊಂಡನು.

ಶಿವಾಜಿಯ ತಂತ್ರಗಳೊಂದೂ ಸಾಗಲಿಲ್ಲ. ಷಹರಾನ್‌ಖಾನನು ಆ ಗೂಢತಂತ್ರಕ್ಕೆ ಒಳಗಾಗಲಿಲ್ಲ.

ಅವನ ಸೈನಿಕರು ಹುರುಪಿನಿಂದ ಹೋರಾಟ ನಡೆಸಿದರು.

ಶಿವಾಜಿಯ ಸೈನ್ಯಗಳು ಆ ಕೋಟೆಯನ್ನು ಎರಡು ಭಾಗಗಳಿಂದಲೂ ಮುತ್ತಿದವು. ಮಾವಳ ಸೈನಿಕರು ಕೋಟೆಯ ಗೋಡೆಗಳ ಮೇಲೆ ಏರುತ್ತಿದ್ದರು.

ಷಹರಾನ್‌ಖಾನನು ತೋಪುಗಳನ್ನು ಉಡಾಯಿಸುವಂತೆ ಆಜ್ಞೆ ಮಾಡಿದನು. ತೋಪುದಾರರು ತೋಪುಗಳಿಗೆ ಮದ್ದು ಗುಂಡುಗಳನ್ನು ತುಂಬಿ ಬತ್ತಿಯನ್ನು ಹಚ್ಚಿದಾಗ ತೋಪುಗಳು ಹಾರಲಿಲ್ಲ. ಗಾಬರಿಗೊಂಡು ಅತ್ತಿತ್ತ ನೋಡುತ್ತಿದ್ದರು. ಷಹರಾನ್‌ಖಾನನು ಅಲ್ಲಿಗೆ ಓಡಿಬಂದು ತಾನೇ ಸ್ವತಃ ತೋಪುಗಳನ್ನು ಹೊತ್ತಿಸಲು ಎರಡು ಮೂರು ಬಾರಿ ಪ್ರಯತ್ನಪಟ್ಟನು. ತೋಪು ಹಾರಲಿಲ್ಲ. ತೋಪಿನ ಕೀಲು ಕಳಚಿ ಹೋಗಿತ್ತು. ಗಾಬರಿಗೊಂಡು ಬತೇರಿಯಿಂದ ಕೆಳಗಿಳಿದು ಸೈನಿಕರನ್ನು ಹುರಿದುಂಬಿಸುತ್ತಿದ್ದನು. ಹಿಂಭಾಗದಲ್ಲಿ ಮರಾಠಾ ಸೈನಿಕರು ಕೋಟೆಯ ಗೋಡೆಗಳನ್ನು ಹತ್ತಿ ಬಂದು ದಿಡ್ಡಿಯ ಬಾಗಿಲುಗಳನ್ನು ತೆಗೆದರು. ಮರಾಠಾ ಸೈನ್ಯವು ವೇಗದಿಂದ ನುಗ್ಗಿತು. ಮುಸಲ್ಮಾನಾ ಸೈನಿಕರು ಬಹುಮಂದಿ ಸತ್ತುಹೋದರು. ಮುಂದಗಡೆಯಿಂದಲೂ ಸೈನ್ಯವು ಆಕ್ರಮಣಮಾಡಿತು. ಷಹರಾನ್‌ಖಾನನು "ಇನ್ನು ಕೋಟೆಯು ಉಳಿಯುವುದಿಲ್ಲ. ಕೈಮಿಂಚಿ ಹೋಯಿತು" ಎಂದುಕೊಂಡು ಹಿಂದುಗಡೆಯ ಕಳ್ಳಕಂಡಿಯಿಂದ ತಲೆ ತಪ್ಪಿಸಿಕೊಂಡು ಓಡಿಹೋದನು. ಎಂಟು ದಿನಗಳಿಂದ ತಡೆದಿದ್ದ ಕೋಟೆಯು ಮಹಾರಾಷ್ಟ್ರರ ವಶವಾಯಿತು. ಶಿವಾಜಿಯ ಸೈನ್ಯಗಳು ಅರಮನೆಯ ದ್ವಾರವನ್ನು ಪ್ರವೇಶಿಸಲು ನುಗ್ಗುತ್ತಿದ್ದುವು.

ದಿಲೀಪಸಿಂಗ್‌ನು ಅಂತಃಪುರದಲ್ಲಿದ್ದ ಬೇಗಂಸಾಹೇಬಾಳನ್ನು ಕಂಡು "ಕೋಟೆಯು ಮರಾಠರ ವಶವಾಯಿತು" ಎಂದು ದೈನ್ಯದಿಂದ ಹೇಳಿದನು.

ಬೇಗಂ ಸಾಹೇಬಾಳು "ದಿಲೀಪ್, ನೀನು ಭಯಪಡಬೇಡ. ನನ್ನ ರಕ್ಷಣೆಯನ್ನು ನಾನು ಮಾಡಿಕೊಳ್ಳಬಲ್ಲೆ. ನೀನು ನೋಡುತ್ತಿರು, ಏನಾಗುವುದೆಂಬುದನ್ನು" ಎಂದು ಹೇಳಿದಳು.

ದಿಲೀಪಸಿಂಗನು ಮರುಮಾತನಾಡದೆ ಬೇಗಂ ಸಾಹೇಬಾಳ ಸಮ್ಮುಖದಿಂದ ಹೊರಟುಹೋದನು.

ಬೇಗಂಸಾಹೇಬಾಳು ಜನಾನಾದ ಕಿಟಕಿಗಳಿಂದ ನೋಡಿದಳು. ಅತ್ತಾರೋಹಿಯಾದ ಮಹಾಪುರುಷನು ಹೆಬ್ಬಾಗಿಲಿನೊಳಗೆ ಪ್ರವೇಶಮಾಡುತ್ತಿದ್ದನು. ಅವನ ಸೈನ್ಯವು ಹಿಂದೆ ಬರುತ್ತಿದ್ದಿತು. ಸುಮಾರು ನೂರು ಮಂದಿ ಅವನನ್ನು ಅನುಸರಿಸಿ ಬಂದಿರಬಹುದು.

ಜಹನಾರಾಳು 'ಓಹೋ! ಇವನೇ ಶಿವಾಜಿ. ಅಜಾನುಬಾಹು, ಮಹಾಪುರುಷ. ವಿಶಾಲವಾದ ಹಣೆ, ಉದ್ದವಾದ ಮೂಗು, ಚೂಪುಗಡ್ಡ. ಇವನು ಮೊಗಲರಂತೆ, ರಜಪೂತರಂತೆಯೇ ಇದ್ದಾನೆ. ಇಂದು ನನಗೂ ಇವನಿಗೂ ಮುಖಾಮುಖಿ ಭೇಟಿಯಾಗುತ್ತದೆ. ಬಾದಷಹನು ನನ್ನ ಈ ದುರವಸ್ಥೆಯನ್ನು ಕೇಳಿ ಏನೆಂದುಕೊಂಡಾನು? ಅವನ ಕಣ್ಣುಗಳಲ್ಲಿ ನನಗಾಗಿ ಒಂದೆರಡು ಕಂಬನಿಗಳು ಉದುರಿದರೂ ನಾನು ಧನ್ಯಳೇ ಸರಿ' ಎಂದುಕೊಂಡಳು.

ಅಷ್ಟರಲ್ಲಿ ದಿಲೀಪಸಿಂಗ್‌ನು ತನ್ನ ಜೆಂಗಾನಲು ದಳದವರನ್ನು ಹುರಿದುಂಬಿಸಿ ಶಿವಾಜಿಯನ್ನು ಸಾಕ್ಷಾತ್ತಾಗಿ ಎದುರಿಸಿದನು. ಆ ಸೈನಿಕರೆಲ್ಲರೂ ರಜಪೂತರಾದರೂ ಬಾದಷಹನ ಖಾಸ್ ಸಿಪಾಯಿಗಳ ದಿರಸ್ಸನ್ನು ಧರಿಸಿದ್ದರು. ರಜಪೂತರು ದಿಟ್ಟತನದಿಂದ ಹೋರಾಡಿದರು.

ಜಹನಾರಾಳು "ಆಹಾ, ಪ್ರಮಾದವಾಯಿತು. ದಿಲೀಪಸಿಂಗ್‌ನು ಮರಾಠರ ಮಧ್ಯೆ ನುಗ್ಗಿಬಿಟ್ಟಿದ್ದಾನೆ. ಮರಾಠರ ಸೈನ್ಯಬಲವು ಅಸಂಖ್ಯಾತವಾಗಿದೆ. ಈ ದಿಲೀಪಸಿಂಗ್‌ನು ಇಂಥ ಹುಚ್ಚು ಸಾಹಸ ಮಾಡುತ್ತಾನೆಂದು ನಾನೆಣಿಸಿರಲಿಲ್ಲ" ಎಂದುಕೊಂಡಳು.

ಅಷ್ಟರಲ್ಲಿ ದಿಲೀಪಸಿಂಗ್‌ನು ಶಿವಾಜಿಯ ಪಕ್ಕದಿಂದ ದೀರ್ಘವಾದ ಕತ್ತಿ

ಯನ್ನು ಬೀಸಿದನು. ಆ ಸಮಯಕ್ಕೆ ಸರಿಯಾಗಿ ಶಿವಾಜಿಯು ಕುದುರೆಯು ಮೇಲಕ್ಕೆ ನೆಗೆಯಿತು. ಶಿವಾಜಿಯು ಅತ್ತ ಕಡೆಗೆ ತಿರುಗಿ ತನ್ನ ಕತ್ತಿಯಿಂದ ಬೀಸಿ ಹೊಡೆದನು. ದಿಲೀಪಸಿಂಗನ ಕತ್ತಿಯು ನೆಲಕ್ಕೆ ಬಿದ್ದಿತು. ಮರಾಠಾ ಸರದಾರನೊಬ್ಬನು ಹಿಂದುಗಡೆಯಿಂದ ಕತ್ತಿಯನ್ನಿರಿದು ದಿಲೀಪಸಿಂಗ್‌ನನ್ನು ಹೊಡೆಯುವುದಕ್ಕೆ ಹೋದನು. ಶಿವಾಜಿಯು "ಹಾ, ಹಾ! ಹೊಡೆಯಬೇಡಿ. ಸೆರೆ ಹಿಡಿಯಿರಿ" ಎಂದು ಕೂಗಿದನು. ಸಮೀಪದಲ್ಲಿದ್ದ ಮರಾಠಾ ಸೈನಿಕರು "ಹೊಡೆಯಬೇಡಿ, ಸೆರೆಹಿಡಿಯಿರಿ" ಎಂದು ಹತ್ತಾರು ಕಂಠದಿಂದ ಧ್ವನಿ ಮಾಡಿದರು. ಆದರೆ ಆ ಶಸ್ತ್ರಧಾರಿಯ ಕತ್ತಿಯು ಮಿಂಚಿಹೋಗಿತ್ತು. ಶಿವಾಜಿಯ ಕಂಠದಿಂದ ಧ್ವನಿಹೊರಟ ಕ್ಷಣವೇ ಅದು ದಿಲೀಪಸಿಂಗ್‌ನ ಕಂಠವನ್ನು ಛೇದಿಸಿ ಬಿಟ್ಟಿದ್ದಿತು. ದಿಲೀಪಸಿಂಗನ ಶರೀರವು ಕೆಳಗೆ ಬೀಳುವಷ್ಟರಲ್ಲಿ ಸೈನಿಕರು ಬಂದು ಅವನನ್ನು ಹಿಡಿದುಕೊಂಡರು. 'ಪ್ರಾಣವು ಹಾರಿಹೋಗಿದೆ' ಎಂದು ಗಟ್ಟಿಯಾಗಿ ಕೂಗಿದರು. ಶಿವಾಜಿಯು ಕುದುರೆಯ ಮೇಲಿನಿಂದ ಇಳಿದು ಬಗ್ಗಿ ನೋಡಿದನು. ಅವನ ಕಂಠದಲ್ಲಿ ಏನೋ ಧ್ವನಿ ಗೊರಗುಟ್ಟುತ್ತಿದ್ದಿತು. 'ಶಿವಾಜಿ ಶಿವಾಜಿ' ಎಂದು ಅಸ್ಪಷ್ಟವಾಗಿ ನುಡಿಯುತ್ತಿದ್ದಾನೆಂದು ಶಿವಾಜಿಯು ನಿಂತು ಕೇಳಿದನು. ಪ್ರಾಣಗಳು ಹಾರಿಹೋದವು.

ದಿಲೀಪಸಿಂಗನು ಸತ್ತ ವಾರ್ತೆಯು ಕಿವಿಗೆ ಬೀಳುತ್ತಲೇ ಬೇಗಂ ಸಾಹೇಬಾಳು ಮೂರ್ಛಿತಳಾಗಿ ಬಿದ್ದಳು. ಪರಿಚಾರಿಕೆಯರು ಗಾಬರಿಯಿಂದ ಬಂದು ಶೈತ್ಯೋಪಚಾರ ಮಾಡಿದರು. ಅಷ್ಟರಲ್ಲಿ ಶಿವಾಜಿಯು ಅಂತಃಪುರದ ಬಾಗಿಲಿಗೆ ಬಂದು ನಿಂತಿದ್ದಾನೆಂದು ದಾಸಿಯರು ಬಂದು ಹೇಳಿದರು. ಆ ಹೆಸರನ್ನು ಕೇಳುತ್ತಲೇ ಜಹನಾರಾಳು ಉತ್ತೇಜಿತಳಾದಳು. ಅವಳು ಅತ್ತಕಡೆಗೆ ತಿರುಗಿ "ಶಿವಾಜಿಯು ಬಂದಿದ್ದಾನೆಯೋ? ಅಂತಃಪುರದೊಳಗೆ ಲಜ್ಜೆಯಿಲ್ಲದೆ ಪ್ರವೇಶ ಮಾಡಿದ್ದಾನೆಯೇ?" ಎಂದು ಕೇಳಿದಳು.

"ಇಲ್ಲ, ಬೇಗಂಸಾಹೇಬಾ. ಬಾಗಿಲಲ್ಲಿ ನಿಂತು ತನ್ನ ಸೈನಿಕರಿಗೆ ಅಪ್ಪಣೆ ಮಾಡುತ್ತಿದ್ದಾನೆ."

"ಯಾರೂ ಅಂತಃಪುರದೊಳಗೆ ಹೋಗಕೂಡದು. ಸೈನಿಕರು ಅರಮನೆಯನ್ನು ಬಿಟ್ಟು ಹೊರಗೆ ಹೋಗಬೇಕು" ಎಂದು ಕೂಗುವ ಧ್ವನಿಯು ಕೇಳಿಸಿತು. ಆ ಧ್ವನಿಯಲ್ಲಿದ್ದ ಆಜ್ಞಾ ಶಕ್ತಿಯನ್ನು ಕೇಳಿ ಜಹನಾರಾಳು ಇದು

"ಬಲ್ಲೆ. ಬಹಳವಾಗಿ ಕೇಳಿದ್ದೇನೆ. ಈಗ ತಮ್ಮ ಮುಂದೆ ನಿಂತು ಪ್ರತ್ಯಕ್ಷವಾಗಿ ನೋಡುತ್ತಿದ್ದೇನೆ. ಪಾದಶಹಾ ಔರಂಗಜೇಬರ ನಿರ್ಭಾಗ್ಯ ಸಹೋದರಿ."

ಜಹನಾರಾಳು "ನನ್ನನ್ನು ಹಿಡಿಯುವುದಕ್ಕಾಗಿಯೇ ನೀವಿಷ್ಟು ಪ್ರಯಾಸಪಟ್ಟು ದಾರಿ ಅರಸುತ್ತಾ ಬಂದಿರೋ?"

"ಇಲ್ಲ, ಸೋದರಿ. ಈ ದುರ್ಗವು ನಮ್ಮದು. ಬಿಜಾಪುರದವರ ಕೈವಶವಾಗಿತ್ತು. ಈ ದುರ್ಗವನ್ನು ಹಿಡಿಯಲು ಬಂದಿದ್ದೆ. ಅಕಸ್ಮಾತ್ ತಾವು ಇಲ್ಲಿದ್ದಿರಿ."

"ನಾನು ಈಗ ನಿಮ್ಮ ಬಂಧಿ."

"ಇಲ್ಲ. ಬೇಗಂ ಸಾಹೇಬಾ. ತಾವು ಸರ್ವ ಸ್ವತಂತ್ರರಾದ ಬಾದಷಹನ ಸೋದರಿ. ನಾವು ನಿಮ್ಮನ್ನು ಸೆರೆಹಿಡಿದಿಲ್ಲ. ಮರ್ಯಾದೆಯಿಂದ ನಾನೇ ಯುವರಾಜರವರ ಅರಮನೆಗೆ ತಮ್ಮನ್ನು ಕಳುಹಿಸಿಕೊಡುತ್ತೇನೆ."

"ಓಹೋ, ಅದು ನಿಮ್ಮ ಔದಾರ್ಯ. ಯುವರಾಜರೂ ನೀವೂ ಅಷ್ಟು ಪರಮ ಮಿತ್ರರೋ?"

ದಕ್ಷಿಣದಲ್ಲಿ ಮೊಗಲರಿಗೂ ನಮಗೂ ಸಂತತಯುದ್ಧವಾಗುತ್ತಿದೆ. ಮೊಗಲ್ ಸಾಮ್ರಾಜ್ಯದ ಮಹಾ ಪ್ರತಿನಿಧಿಯು ಯುವರಾಜನಾಗಿದ್ದಾನೆ. ಅವನಿಗೂ ನಮಗೂ ಸ್ನೇಹವೆಂದರೆ ನಗೆಪಾಟಲಾದೀತು. ಮರಾಠರು ಸ್ತ್ರೀಯರನ್ನು ಮಾತೃದೃಷ್ಟಿಯಿಂದ ನೋಡುತ್ತಾರೆ. ಅದರಲ್ಲಿಯೂ ಸಾರ್ವಭೌಮನ ಸಹೋದರಿ ನೀವು. ನಿಮ್ಮನ್ನು ಗೌರವಿಸಿ ಕಳುಹಿಸಿಕೊಡುವ ಭಾಗ್ಯ ನನಗೆ ದೊರೆತಿದೆ ಎಂಬಷ್ಟೇ ಸಂತೋಷ."

ಜಹನಾರಾಳು ತಲೆಬಾಗಿಸಿ "ಹೌದು ಕೇಳಿದ್ದೇನೆ. ಆಪತ್ತಿನಲ್ಲಿರುವ ಸ್ತ್ರೀಯರನ್ನು ನೀವು ಬಹಳ ಮರ್ಯಾದೆಯಿಂದ ಕಾಣುತ್ತೀರೆಂದು ದೆಹಲಿಯ ಅಂತಃಪುರದಲ್ಲಿಯೂ ಹೇಳುತ್ತಾರೆ."

"ತಾವು ಹೊರಡಬಹುದು. ಮ್ಯಾನಾ ಸಿದ್ಧವಾಗಿದೆ. ಇನ್ನು ಬೇಗಂ ಸಾಹೇಬರಿಗೆ ಭಯವೆಂಬುದೇ ಇಲ್ಲ. ಬೆಂಗಾವಲಿನ ಜವಾಬ್ದಾರಿಯು ನಮ್ಮದು" ಎಂದು ಹೇಳಿ ಸಲಾಂ ಮಾಡಿದನು.

ಜಹನಾರಾಳು "ಮಹಾರಾಜರೇ, ನಾನು ಕೃತಜ್ಞಳಾಗಿರುತ್ತೇನೆ. ನನ್ನದೊಂದು ಸಂದೇಹವಿದೆ. ಕೇಳಲೇ ?"

"ಕೇಳಿ, ಬೇಗಂಸಾಹೇಬಾ. ನಿಮ್ಮ ಮಾತಿಗೆ ಮನ್ನಣೆ ಕೊಡಲು ಯಾವಾಗಲೂ ಸಿದ್ಧನಾಗಿದ್ದೇನೆ."

"ಶಿವಾಜಿ ಮಹರಾಜ್, ನೀವು ಸೂರತ್ತಿನ ಮೇಲೆ ಪದೇ ಪದೇ ಧಾಳಿ ನಡೆಸುತ್ತೀರಿ. ಆ ವರ್ತಕರ ಮೇಲೆ ನಿಮಗೇಕೆ ಅಷ್ಟು ಆಗ್ರಹ ?"

"ಬೇಗಂಸಾಹೇಬಾ, ನಾವು ವರ್ತಕರ ಮೇಲೆ ಆಗ್ರಹ ಮಾಡಬಹುದೇ? ಬಾದಶಹರ ರಾಜ್ಯವು ಎಷ್ಟು ಅರಾಜಕತೆಯಿಂದಿದೆ. ಎಷ್ಟು ಅರಕ್ಷಿತವಾಗಿದೆ ಎಂಬುದನ್ನು ಬಾದಶಹರಿಗೆ ತೋರಿಸಿ ಕೊಡುತ್ತಿದ್ದೇವೆ. ಸೂರತ್ತಿನ ಮುತ್ತಿಗೆಯ ರಹಸ್ಯವು ಇಷ್ಟೇ."

"ಮಹಾರಾಜರೇ. ನೀವು ಮೊಗಲ್ ಸೈನ್ಯದೊಡನೆ ಮುಖಾಮುಖಿ ನಿಂತು ಯುದ್ಧ ಮಾಡುವುದಿಲ್ಲವೇಕೆ ? ಒಂದಾದರೂ ಮಹಾಯುದ್ಧವೆಸಗದೆ ನೀವು ಮಹಾರಾಜರೆಂದು ಕರೆದುಕೊಳ್ಳುವುದು ಸರಿಯೇ ?"

ಶಿವಾಜಿಯು ನಕ್ಕು ಸಲಾಂ ಮಾಡಿದನು. 'ಶಹಜಾದೀ, ಈ ನಮ್ಮ ಜನರು ನನ್ನನ್ನು ಮಹಾರಾಜನೆಂದು ಕರೆಯುತ್ತಾರೆ. ನಾನಲ್ಲಿ ಮಹಾರಾಜನೆಂದುಕೊಂಡಿದ್ದೇನೆ. ಈ ಭವಾನೀ ರಾಜ್ಯದಲ್ಲಿ ನಾನೊಬ್ಬ ಮರಾಠಾ ಸರದಾರ. ತಾವು ಸ್ವಲ್ಪ ಯೋಚನೆ ಮಾಡಿ ನೋಡಿರಿ. ನಿಮ್ಮ ಬಾದಶಹರು ಜಗತ್ತಿನ ಕರ್ತಾರಕರ್ತರು ಎಂದು ಕೊಂಡಿದ್ದಾರೆ. ಅವರು ಸ್ವತಃ ಯಾವ ಯುದ್ಧ ಮಾಡಿ ಗೆದ್ದಿದ್ದಾರೆ ? ಶಹಜಾದೇ, ಆ ಬಾದಶಹರೇ ಒಂದು ಬಾರಿ ಎದುರಿಗೆ ಬಂದರೆ ಒಂದು ಕೈ ತೋರಿಸಬೇಕೆಂದು ನನ್ನ ಮನಸ್ಸಿನಲ್ಲಿದೆ. ನಿಮ್ಮ ಸೇನಾಧಿಪತಿಗಳು ದರಬಾರಿನಲ್ಲಿ ಮಹಾಪರಾಕ್ರಮಶಾಲಿಗಳೆಂದು ಜಂಭ ಕೊಚ್ಚಿಕೊಳ್ಳುತ್ತಾರೆ. ಎಲ್ಲಿಯೋ ಒಂದು ಕಡೆ ನಿರಪರಾಧಿ ಜನಗಳ ಮೇಲೆ ಅತ್ಯಾಚಾರ ನಡೆಸಿ, ಶಿವಾಜಿಯು ಓಡಿಹೋದ ಎಂದು ಬಾದಶಹರಲ್ಲಿ ಹೇಳಿಕೊಳ್ಳುತ್ತಾರೆ.

"ದಿಲೇರ್ ಖಾನನು ಪುಣೆಯಲ್ಲಿ ಸಹಸ್ರಾರು ಜನರ ಕಡುಗೊಲೆ ಮಾಡಿದ. 'ಮರಾಠಾ ಸೈನಿಕರನ್ನು ಸೆರೆಹಿಡಿದು ಕಡಿದುಹಾಕಿದೆ. ಶಿವಾಜಿಯು ಓಡಿ ಹೋದ' ಎಂದು ಕಟ್ಟು ಕಥೆ ಕಟ್ಟಿ ಹೇಳಿಕೊಳ್ಳುತ್ತಾನೆ.

ಬೇಗಂಸಾಹೇಬಾ, ನಿಮ್ಮ ಬಾದಶಹರಿಗೆ ಒಂದು ಮಾತು ಹೇಳಿರಿ. ಈ ದಖ್ಖನ್ನಿನಲ್ಲಿ ಯಾವ ಮೊಗಲ್ ಸೇನಾಧಿಪತಿಗೂ ಜಯವಾಗುವುದಿಲ್ಲ. ಅವರಿಗೆ ಇಷ್ಟೊ ಆಸೆ ಉಳಿದಿದ್ದರೆ, ಅವರೇ ಬಂದುಬಿಡಲಿ. ನಾನು ಎದುರು ನಿಂತು ಹೋರಾಡುತ್ತೇನೆಯೋ, ಓಡಿಹೋಗುತ್ತೇನೆಯೋ ನೋಡಲಿ. ನೀವು ಹೊರಡಬಹುದು, ಬೇಗಂಸಾಹೇಬಾ. ನಾವು ಈ ಕೋಟೆಯನ್ನು ಭದ್ರಪಡಿಸಬೇಕು." ಎಂದು ಹೇಳಿದನು.

ಬೇಗಂಸಾಹೇಬಾಳು "ಈ ಅರಮನೆಯ ಮುಂದೆ, ನಮ್ಮೆದುರಿನಲ್ಲಿ ಒಬ್ಬ ರಜಪೂತ ಸರದಾರನು ಪರಾಕ್ರಮದಿಂದ ಹೋರಾಡಿ ಸತ್ತು ಬಿದ್ದನಲ್ಲವೆ? ಅವನು ನನ್ನ ಅಂಗರಕ್ಷಕ ದಳದ ನಾಯಕ. ಅವನನ್ನು ಗೋರಿ ಮಾಡಿಸದಿದ್ದರೆ ನಾನು ಈ ಸ್ಥಳವನ್ನು ಬಿಟ್ಟು ಹೋಗುವಂತಿಲ್ಲ. ಅವನ ಶರೀರವನ್ನು ನಾಯಿ ನರಿಗಳು ಕಿತ್ತು ತಿಂದು ಹೋಗಲು ನಾನು ಬಿಡುವುದಿಲ್ಲ." ಎಂದು ಹೇಳಿದಳು. ಅವಳ ಕಣ್ಣುಗಳಿಂದ ಧಾರಾಕಾರವಾಗಿ ನೀರು ಸುರಿಯುತ್ತಿತ್ತು.

ಶಿವಾಜಿಯು "ಬೇಗಂಸಾಹೇಬಾ, ನಾನು ಅವನ ಶರೀರಕ್ಕೆ ಸಂಸ್ಕಾರ ಮಾಡಿಸುತ್ತೇನೆ. ಅವನು ಹಿಂದು ಅಲ್ಲವೆ?" ಎಂದು ಹೇಳಿದನು.

"ಹೌದು, ಶುದ್ಧ ಹಿಂದು-ಶುದ್ಧ ರಜಪೂತ."

ಶಿವಾಜಿಯು ಅಂತಃಪುರದಿಂದ ಕೆಳಗಿಳಿದು ಬಂದು ಆ ಕೋಟೆಯೊಳಗಡೆಯೇ ದಲೀಪಸಿಂಗನ ಅಂತ್ಯ ಸಂಸ್ಕಾರ ಮಾಡುವಂತೆ ಅಪ್ಪಣೆಯಿತ್ತನು. ಅವನ ಕಡೆಯವರಾಗಿ ಉಳಿದಿದ್ದ ರಜಪೂತರು ಅವನ ಶರೀರವನ್ನು ತೊಳೆದು ಗಂಧ ಪುಷ್ಪಗಳನ್ನು ಏರಿಸಿ ಮರಾಠಾ ಸೈನಿಕರು ಸಿದ್ಧಗೊಳಿಸಿದ್ದ ಚಿತೆಯ ಮೇಲಿಟ್ಟರು. ಯಜ್ಞೇಶ್ವರನು ಎದ್ದು ಆ ವೀರನ ಶರೀರವನ್ನು ಪಾವನಗೊಳಿಸಿದನು. ಜಹನಾರಾಳು ಅಂತಃಪುರದಿಂದಲೇ ಆ ಉರಿಯುತ್ತಿರುವ ಚಿತೆಯನ್ನು ನೋಡಿ ಕಣ್ಣೀರಿಟ್ಟಳು. ಶಿವಾಜಿಯು ತಕ್ಕ ಮರ್ಯಾದೆಗಳೊಂದಿಗೆ ಬಾದಶಹರ ಸೋದರಿಯನ್ನು ಔರಂಗಾಬಾದಿಗೆ ಕಳುಹಿಸಿಕೊಟ್ಟನು.

ಯುವರಾಜನು ಬೇಗಂಸಾಹೇಬಳನ್ನು ಕಂಡು ಎಲ್ಲ ಯೋಗಕ್ಷೇಮಗಳನ್ನು ವಿಚಾರಿಸಿದನು.

ಬೇಗಂಸಾಹೇಬಳು "ಯುವರಾಜ, ನಿಜಕ್ಕೆ ಆ ಶಿವಾಜಿಯು ಉದಾತ್ತ

ಪುರುಷ. ಸ್ತ್ರೀಯನ್ನು ಮಾತೃಸಮಾನವಾಗಿ ಕಾಣುತ್ತಾನೆ. ಆದರಿಂದಲೇ ಅವನಿಗೆ ಇಷ್ಟು ಬರಖತ್ತಾಗುತ್ತಿದೆ. ನಾನು ಬಾದಷಹನನ್ನು ಕಂಡು ಖಡಾಖಂಡಿತವಾಗಿ ಹೇಳುತ್ತೇನೆ. ಆ ಶಿವಾಜಿಯನ್ನು ಮಹಾರಾಷ್ಟ್ರದ ಮಹಾರಾಜನೆಂದು ಒಪ್ಪಿಕೊಂಡು ಸಮಾನಸ್ಕಂಧತೆಯಿಂದ ನೋಡಿರಿ. ಅದರಿಂದ ಮೊಗಲ್ ಸಾಮ್ರಾಜ್ಯಕ್ಕೆ ಶಾಶ್ವತವಾದ ಭದ್ರತೆಯಿರುವುದು" ಎಂದು ಹೇಳಿದಳು.

ಯುವರಾಜನು ನಗುತ್ತಾ "ಬೇಗಂಸಾಹೇಬಾ, ಬಾದಷಹರಲ್ಲಿ ಆ ಮಾತನ್ನು ಹೇಳುವುದರಲ್ಲಿ ನೀವೇ ಮೊದಲನೆಯವರಲ್ಲ. ಮಹಾರಾಜಾ ಜಯಸಿಂಹರವರು ಮೊದಲನೆಯವರು. ನಮ್ಮ ದೃಷ್ಟಿಯಿಂದ ಜಯಸಿಂಹ ಮಹಾರಾಜರು ಬಾದಷಹರ ಪ್ರಿಯ ಸೋದರರಂತೆ. ನೀವು ಎರಡನೆಯವರು. ಸಾಕ್ಷಾತ್ ಸಹೋದರಿ" ಎಂದು ಹೇಳಿದನು.

ಜಹನಾರಾಳು "ಯುವರಾಜ, ನಿನ್ನ ಮಾತಿನ ಅರ್ಥವು ನನಗಾಗಲಿಲ್ಲವೆಂದು ತಿಳಿಯಬೇಡ. ಜಯಸಿಂಹಮಹಾರಾಜರಿಗೆ ಆದ ಗತಿಯೇ ನನಗಾಗುತ್ತದೆ ಎಂದು ಹೇಳುತ್ತಿದ್ದೀ. ನಿನ್ನ ತಂದೆಯ ಜೊತೆಯಲ್ಲಿ ಹುಟ್ಟಿದಾಗಲೇ ನಾನು ನಿರ್ಭಾಗ್ಯಳು" ಎಂದು ಹೇಳಿದಳು.

---

## ೧೧

ಶಿವಾಜಿಯು ಮಹಾರಾಷ್ಟ್ರಕ್ಕೆ ಬಂದನು. ಪುಣೆಯ ಕೋಟೆಯು ಶತ್ರುಗಳ ವಶವಾಗಿರುವುದು ಅವನಿಗೆ ಅತ್ಯಂತ ಅಪಮಾನಕರವಾಗಿತ್ತು. ಪುಣೆಗೆ ಹೋಗಿ ಅದನ್ನು ಸರ್ವಸಾಹಸದಿಂದ ವಶಪಡಿಸಿಕೊಳ್ಳಬೇಕೆಂದು ಆತುರಪಡುತ್ತಿದ್ದನು. ಅಷ್ಟರಲ್ಲಿ ಮುಖ್ಯ ಸೇನಾಧಿಪತಿಗಳಾದ ಪ್ರತಾಪರಾವ್, ಆನಂದರಾವ್, ಮೋರೋಪಂತ್ ಮುಂತಾದವರು ಸಾಲ್ಹೇರ್ ಕೋಟೆಯ ಮೇಲೆ ಆಕ್ರಮಣ ಮಾಡಿದ್ದರು. ಆ ಕೋಟೆಯು ಸ್ವಾಧೀನವಾದರೆ ಯುದ್ಧದ ರಥವೇ ತಿರುಗಿಹೋಗುತ್ತದೆಂದು ಅವರುಗಳು ಹಠ ಹಿಡಿದಿದ್ದರು.

ಸಾಲ್ಹೇರ್ ಕೋಟೆಯಲ್ಲಿ ಮೊಗಲರ ಬಲವು ಕ್ಷೀಣಿಸುತ್ತಿತ್ತು. ಇಕ್ಲಾಸ್‌ಖಾನ್ ಮತ್ತು ಮುಹಕಂಸಿಂಗ್ ಈ ಇಬ್ಬರು ಸೇನಾಧಿಪತಿಗಳು ಕಡೆಯವರೆಗೂ ಹೋರಾಡಿ ಗಾಯಗೊಂಡು ಬಿದ್ದರು. ಮರಾಠರು ಅವರಿಬ್ಬರನ್ನೂ ಸೆರೆ ಹಿಡಿದರು. ಮೂವತ್ತು ಮಂದಿ ದೊಡ್ಡ ದೊಡ್ಡ ಮೊಗಲ್ ಅಧಿಕಾರಿಗಳನ್ನೂ ಸಹಸ್ರಾರು ಮಂದಿ ಸೈನಿಕರನ್ನೂ ಸೆರೆ ಹಿಡಿದರು. ಸಾಲ್ಹೇರ್ ಕೋಟೆಯು ಪೂರ್ಣವಾಗಿ ಮರಾಠರ ಕೈಗೆ ಸಿಕ್ಕಿತು. ಇದರಿಂದ ಮೊಗಲರ ಕೈ ಮುರಿದಂತಾಯಿತು. ಶಿವಾಜಿಯು ಸೈನ್ಯ ಸಮೇತನಾಗಿ ಬಂಗ್ಲಾನಾ ಶಿಬಿರದ ಮೇಲೆ ಸಾಗಿಹೋದನು. ಬಂಗ್ಲಾನಾ ಶಿಬಿರವು ಅಸ್ತವ್ಯಸ್ತವಾಗಿತ್ತು. ಸ್ವಲ್ಪ ಕಾಲದಲ್ಲಿಯೇ ಬಂಗ್ಲಾನಾ ಶಿಬಿರವು ಶಿವಾಜಿಯ ವಶವಾಯಿತು. ಅಲ್ಲಿ ಯಥೇಚ್ಛವಾದ ಶಸ್ತ್ರಾಸ್ತ್ರಗಳು, ತೋಪುಗಳು, ಮದ್ದುಗುಂಡುಗಳು, ಯಥೇಚ್ಛವಾದ ಹಣ, ಸಾವಿರಾರು ಕುದುರೆಗಳು ಶಿವಾಜಿಗೆ ಸಿಕ್ಕಿದವು. ಬಂಗ್ಲಾನಾ ಶಿಬಿರವು ಮರಾಠರ ಕೈವಶವಾಯಿತೆಂಬ ವಾರ್ತೆಯು ಎಲ್ಲ ಮೊಗಲ್ ಶಿಬಿರಗಳಲ್ಲಿಯೂ ವ್ಯಾಪಿಸಿತು. ಮೊಗಲರು ನಿರಾಶರಾಗಿ ಶಸ್ತ್ರಾಸ್ತ್ರಗಳನ್ನು ಕೆಳಗೆ ಬಿಸುಟರು.

ನಾಸಿಕದಲ್ಲಿದ್ದ ಮೊಹಬತ್‌ಖಾನನು ಪ್ರಾಣ ಉಳಿದರೆ ಸಾಕು ಎಂದು ಭೀತಿಯಿಂದ ಔರಂಗಾಬಾದಿಗೆ ಓಡಿಹೋಗಿ ಯುವರಾಜನ ಆಶ್ರಯದಲ್ಲಿ ಸೇರಿಕೊಂಡನು.

ಶಿವಾಜಿಯು ಬಂಗ್ಲಾನಾ ಶಿಬಿರವನ್ನೆಲ್ಲಾ ಲೂಟಿ ಮಾಡಿ ಎಲ್ಲವನ್ನೂ ಸಾಗಿಸಿದನು. ಅಂತಹ ವೈಭವೋಪೇತವಾಗಿದ್ದ ಶಿಬಿರವು ಸ್ಮಶಾನದಂತೆ ಬೀಳಾಗಿ ಕಾಣುತ್ತಿದ್ದಿತು. ಶಿವಾಜಿಯು ವೇಗವಾಗಿ ನಾಸಿಕಕ್ಕೆ ಹೋಗಿ ನಾಸಿಕವನ್ನು ಸ್ವಾಧೀನ ಪಡಿಸಿಕೊಂಡನು. ಅಲ್ಲಿದ್ದ ಮೊಗಲ್ ಸರದಾರರುಗಳು ಚಲ್ಲಾಪಿಲ್ಲಿಯಾಗಿ ಚದುರಿ ಹೋದರು. ಕೆಲವರು ಸೆರೆ ಸಿಕ್ಕಿದರು. ಶಿವಾಜಿಯು ನಾಸಿಕದಿಂದ ಬಲವಾದ ಸೈನ್ಯವನ್ನು ತೆಗೆದುಕೊಂಡು ಪುಣೆಯ ಕಡೆಗೆ ಬರುತ್ತಿದ್ದನು. ದಿಲೇರ್‌ಖಾನನಲ್ಲಿ ಅತ್ಯಲ್ಪ ಸೈನ್ಯಗಳಿದ್ದುವು. ಅವನು ಆ ಸ್ಥಳವನ್ನು ಏಕಾಏಕಿ ಬಿಟ್ಟು ವೇಗವಾಗಿ ಅಹಮದ್‌ನಗರಕ್ಕೆ ಹಿಂತಿರುಗಿದನು. ಶಿವಾಜಿಯು ಪುಣೆ ಮತ್ತು ಶಿವನೇರಿ ದುರ್ಗಗಳನ್ನು ಸ್ವಾಧೀನ ಪಡಿಸಿಕೊಂಡನು.

ಈ ದುರಂತ ವಾರ್ತೆಗಳು ಪುಂಖಾನುಪುಂಖವಾಗಿ ಬಾದಶಹನ ಕಿವಿಗೆ ಬಿದ್ದವು. ನಾಲ್ಕೂ ಕಡೆಗಳಿಂದ ದೂತರು ಬಂದು ಬಿನ್ನಹ ಮಾಡಿದರು. ಬಾದಷಹನು ಪರಿತಪಿಸತೊಡಗಿದನು 'ಮುಂದೇನು ಮಾಡಲಿದೆ?' ಎಂಬ ಸಮಸ್ಯೆಯು ಅವನೆದುರಿಗೆ ಭೂತಾಕಾರವಾಗಿ ನಿಂತಿದ್ದಿತು.

ಪಂಜಾಬಿನ ಕಡೆಯಿಂದ ಏನೇನೋ ಅಪ್ರಿಯ ಸಮಾಚಾರಗಳು ಬರುತ್ತಿದ್ದವು. ಪಂಜಾಬಿನ ದಂಗೆಯು ಬಾದಷಹನಿಗೆ ಶೂಲಪ್ರಾಯವಾಗಿತ್ತು. ಅಫ್ಘನರೂ ಪಂಜಾಬಿನ ದಂಗೆಕೋರರೊಂದಿಗೆ ಸೇರಿಕೊಂಡಿದ್ದರು. ಪಂಜಾಬು ಭದ್ರವಾಗಿಲ್ಲದಿದ್ದರೆ ದೆಹಲಿಯ ಸಿಂಹಾಸನವು ಅಲ್ಲಾಡಿದಂತೆಯೇ ಎಂದು ತಿಳಿದುಕೊಂಡಿದ್ದನು. ದಖ್ಖನ್ನಿನ ಕಡೆಗೆ ತಾನು ಹೊರಟುಹೋದರೆ ಪಂಜಾಬಿನ ಆಸೆಯನ್ನು ತೊರೆದಂತೆಯೇ ಆಗುತ್ತದೆಂದು ಅವನು ಭಾವಿಸಿದನು. ಶಿವಾಜಿಯು ತನ್ನ ಕೋಟೆಗಳನ್ನೂ, ಮಹಾರಾಷ್ಟ್ರ ರಾಜ್ಯವನ್ನೂ ಮಾತ್ರ ಸ್ವಾಧೀನ ಪಡಿಸಿಕೊಂಡಿದ್ದಾನೆ. ಅಹಮದ್‌ನಗರ, ಔರಂಗಾಬಾದ್ ಕಡೆಗೆ ಅವನು ಕಣ್ಣು ಹಾಕಿಲ್ಲ. ಇದರಿಂದ ದಖ್ಖನ್ನಿನಲ್ಲಿ ಮೊಗಲ್ ಷಾಹಿಯ ಅಸ್ತಿತ್ವಕ್ಕೆ ಲೋಪ ಬಂದಂತಾಗಲಿಲ್ಲ. ಪಂಜಾಬಿನ ದಂಗೆಕೋರರು ಗೆದ್ದುಬಿಟ್ಟರೆ ಬಾದಷಾಹಿಯು ಭಗ್ನವಾಗಿ ಹೋದಂತಾಗುತ್ತದೆ. ಇದನ್ನು ಯೋಚಿಸಿ, ಬಾದಷಹನು ಸದ್ಯಕ್ಕೆ ದಖ್ಖನ್ನಿನ ಕಡೆ ಉದಾಸೀನ ಮಾಡುವುದೇ ಒಳ್ಳೆಯದು ಎಂದು ನಿಶ್ಚಯ ಮಾಡಿದನು.

ಬಹದ್ದೂರ್‌ಖಾನನು ಅಹಮದ್‌ನಗರದಲ್ಲಿರಬೇಕೆಂದೂ ಅವನೇ ದಖ್ಖನ್ನಿನಲ್ಲಿರುವ ಮೊಗಲ್ ಸೈನ್ಯಗಳ ಮಹಾಸೇನಾಧಿಪತಿಯಾಗಿರಬೇಕೆಂದೂ ಆ ಪ್ರಾಂತದ ಸರ್ ಸುಬೇದಾರನಾಗಿರಬೇಕೆಂದೂ ಎರಡು ಅಧಿಕಾರಗಳನ್ನೂ ಅವನೇ ನೋಡಿಕೊಳ್ಳಬೇಕೆಂದೂ ಬಾದಶಹನಿಂದ ಹುಕುಮ್ ಬಂದಿತು. ಯುವರಾಜ ಆಜಮಷಹನೂ ಮೊಹಬತ್‌ಖಾನನೂ ದೆಹಲಿಗೆ ಬರಬೇಕೆಂದು ಆಜ್ಞೆಯಾಯಿತು. ಯುವರಾಜನು ದಾವೂದ್‌ಖಾನನನ್ನು ಕರೆಸಿ ಔರಂಗಾಬಾದಿನಲ್ಲಿ ಇರಿಸಿದನು. ಮೊಹಬತ್‌ಖಾನನೂ ಯುವರಾಜನೂ ಪರಿವಾರ ಸಮೇತರಾಗಿ ದೆಹಲಿಗೆ ಹೊರಟರು. ಷಹಜಾದೀ ಜಹನಾರಳೂ ಯುವರಾಜನ ಜನಾನಾದೊಂದಿಗೆ ದೆಹಲಿಗೆ ಹಿಂತಿರುಗಿದಳು.

ಮರಾಠಾ ಸೇನಾಧಿಪತಿಯಾದ ಮೋರೋಪಂತ ಪಿಂಗಳೆಯು ಇದನ್ನರಿದು

ಸಹಸ್ರ ದಂಡಿನೊಡನೆ ಕೋಲೀ ರಾಜ್ಯದ ಕಡೆಗೆ ಹೊರಟನು. ಮರಾಠರು ಸಮಗ್ರ ಮಹಾರಾಷ್ಟ್ರದಲ್ಲಿಯೂ ಸುತ್ತಮುತ್ತಲಿನ ಗಡಿನಾಡಿನ ಸಣ್ಣ ರಾಜ್ಯಗಳಲ್ಲಿಯೂ ತಮ್ಮ ಅಧಿಕಾರವನ್ನು ಸ್ಥಾಪಿಸಬೇಕೆಂದು ಸಂಕಲ್ಪ ಮಾಡಿದ್ದರು ಈ ಸಮಯವು ಸರಿಯಾಗಿದೆಯೆಂದು ಅವರು ತಿಳಿದುಕೊಂಡರು. ಇಂಗ್ಲಿಷ್ ರಾಜ್ಯದಲ್ಲಿ ಮೊಗಲ್ ಸಾಹಿಬಿ ಬಲಹೀನವಾಗಿದೆ. ಸದ್ಯಕ್ಕೆ ದೆಹಲಿಯವರು ದಕ್ಷಿಣಕ್ಕೆ ಬರುವ ಸಂಭವವೇ ಇಲ್ಲ. ಇದೇ ಸಮಯದಲ್ಲಿ ನಮ್ಮ ಸಂಕಲ್ಪವನ್ನು ಕೈಗೂಡಿಸಿಕೊಳ್ಳದಿದ್ದರೆ ಪುನಃ ಇಂಥ ಸುಸಮಯವು ಮತ್ತೆ ದೊರಕಲಾರದು, ಎಂದು ಮರಾಠ ಸರದಾರರೆಲ್ಲಾ ಚೆನ್ನಾಗಿ ತಿಳಿದುಕೊಂಡಿದ್ದರು.

ಕೋಲೀ ರಾಜ್ಯದಲ್ಲಿ ಮುಖ್ಯ ರಾಜನೆಂದರೆ ಕೋಲೀರಾಜ ವಿಕ್ರಮಶಾ ಎಂಬುವನಿದ್ದನು. ಅವನ ರಾಜಧಾನಿಯು ಜವಾರ್ ಎಂಬ ಪಟ್ಟಣ. ಆ ರಾಜನು ಹಿಂದುವೂ ಅಲ್ಲ, ಮುಸಲ್ಮಾನನೂ ಅಲ್ಲ. ಅವನು ಸುತ್ತಮುತ್ತಲೂ ಲೂಟಿ ಮಾಡಿ ತನ್ನ ಭಂಡಾರವನ್ನು ತುಂಬಿಕೊಳ್ಳುತ್ತಲಿದ್ದನು. ಅವನ ರಾಜಧಾನಿಯನ್ನು ಮೋರೋಪಂತನು ಮುತ್ತಿದಾಗ ಅವನು ಶರಣಾಗತನಾಗಿ ಬಂದು ಕೇಳಿಕೊಂಡನು. "ನಾನು ಯಾವಾಗಲೂ ನಿಮಗೆ ವಿರೋಧವಾಗಿ ಕತ್ತಿ ಎತ್ತುವುದಿಲ್ಲ. ನನ್ನ ರಾಜಧಾನಿ ಅರಮನೆಗಳ ಗೊಡವೆಗೆ ನೀವು ಬರಬೇಡಿ, ನಾನು ಯಾವಾಗಲೂ ನಿಮ್ಮ ಸ್ನೇಹಿತನಾಗಿರುತ್ತೇನೆ" ಎಂದು ಕೇಳಿಕೊಂಡನು. ಮೋರೋಪಂತನು "ನಿನ್ನ ರಾಜ್ಯದಿಂದ ನಮಗೇನೂ ಪ್ರಯೋಜನವಿಲ್ಲ. ಈ ಕೋಲೀ ರಾಜ್ಯವು ಮಹಾರಾಷ್ಟ್ರದ್ದೂ ಅಲ್ಲ. ಆದರೆ ಮಹಾರಾಷ್ಟ್ರದಿಂದ ಸೂರತ್ತಿಗೆ ಹೋಗುವ ಘಾಟಮಾರ್ಗದಲ್ಲಿ ನಿಮ್ಮ ಸಣ್ಣ ರಾಜ್ಯವಿದೆ. ನಾವು ಸೂರತ್ತನ್ನು ವಶಪಡಿಸಿಕೊಳ್ಳಬೇಕೆಂದಿದ್ದೇವೆ. ಅದು ಸರಾಗವಾಗಿ ಕೈಗೂಡಬೇಕಾದರೆ ಈ ಕೋಲೀ ರಾಜ್ಯದಲ್ಲಿ ರಾಜರಿರಕೂಡದು. ನಿಮ್ಮ ಜನವೂ ಕೂಡ ಶುದ್ಧ ಹಿಂದೂ ಜನರಲ್ಲ" ಎಂದು ಹೇಳಿದನು.

ಆ ರಾಜನು "ನಾವು ರಜಪೂತರು. ಈ ಕಾಡು ಸೀಮೆಯಲ್ಲಿ ಬಹುಕಾಲದಿಂದ ನಾವು ಬಂದಿದ್ದೇವೆ. ರಜಪೂತರು ನಮ್ಮ ಸಂಬಂಧವನ್ನು ತೊರೆದಿದ್ದರೆ ಇಷ್ಟೆ" ಎಂದು ಹೇಳಿದನು

ಮೋರೋಪಂತನು ಅವನ ಸಂಧಾನಕ್ಕೆ ಒಪ್ಪಲಿಲ್ಲ. ಅವನು "ಈ ಜಹಾರ್ ನಮ್ಮ ಸೈನ್ಯದ ಠಾಣೆಯಾಗಬೇಕು. ನೀನು ಇದನ್ನು ಬಿಟ್ಟು ಹೋಗಬೇಕು. ನಮ್ಮ ರಾಜ್ಯವು ಸಂಪೂರ್ಣ ಸ್ಥಾಪನೆಯಾದಮೇಲೆ ನಿನಗಿಲ್ಲಿ ರಾಜ್ಯವನ್ನು ಕೊಡಿಸುತ್ತೇನೆ" ಎಂದು ಹೇಳಿದನು.

ವಿಕ್ರಮಶಹನು ತನ್ನ ರಾಜಧಾನಿಗೆ ಹೋಗಿ ಮಂತ್ರಿಗಳನ್ನೆಲ್ಲಾ ಕರೆಸಿ ಸಮಾಲೋಚನೆ ಮಾಡಿದನು. ಅವರು "ನಾವು ರಜಪೂತರು, ಕ್ಷತ್ರಿಯ ಕುಲದವರು. ಈ ಮೋರೋಪಂತನು ನಮ್ಮನ್ನು ಕುಲಹೀನರೆಂದು ಭಾವಿಸಿದ್ದಾನೆ. ನಾವು ಯುದ್ಧ ಮಾಡಿ [illegible] ಪರಾಕ್ರಮವನ್ನು ತೋರಲೇಬೇಕು. ಇಂದಲ್ಲ ನಾಳೆ ಮೊಗಲರು ನಮ್ಮ ಮೇಲೆ ಅಭಿಯಾನ ಮಾಡುತ್ತಾರೆ. ಸೂರತ್ತಿನ ರಕ್ಷಣೆಗಾಗಿ ನಾವು ಯುದ್ಧ [illegible] [illegible] ಬಾಯಿರುತ್ತದೆ" ಎಂದು ಹೇಳಿದರು.

ರಾಜನಿಗೆ ತನ್ನ ಪರಾಭವವು ಚೆನ್ನಾಗಿ ತಿಳಿದಿತ್ತು. ಒಂದು ಕಡೆ, ತನ್ನ ಸೇನಾಧಿಪತಿಗಳ ಪ್ರೋತ್ಸಾಹ, ಮತ್ತೊಂದು ಕಡೆ ಬಾದಶಹನ ಅನುಗ್ರಹಕ್ಕೆ ಪಾತ್ರನಾದೇನೆಂಬ ಆಸೆ. ಇದರಿಂದ ಅವನು ಯುದ್ಧಕ್ಕೆ ಹೊರಟೇಬಿಟ್ಟನು.

ವಿಕ್ರಮಶಹನಿಗೂ ಮರಾಠರಿಗೂ ಯುದ್ಧವಾಯಿತು. ಮರಾಠರು ಒಂದು ಕಡೆ ರಣಕ್ಷೇತ್ರದಲ್ಲಿ ಯುದ್ಧ ಮಾಡುತ್ತಾ, ಮತ್ತೊಂದು ಕಡೆಯಿಂದ ಜಹಾರ್ ಕೋಟೆಯನ್ನೂ ಅರಮನೆಯನ್ನೂ ಸಂಪೂರ್ಣವಾಗಿ ಸ್ವಾಧೀನಪಡಿಸಿಕೊಂಡುಬಿಟ್ಟರು. ವಿಕ್ರಮಶಹನಿಗೆ ಯುದ್ಧಭೂಮಿಯಲ್ಲಿಯೇ ಈ ಸಮಾಚಾರ ತಿಳಿಯಿತು. ಅವನು ತನ್ನ ಉಳಿದ ಸೈನಿಕರೊಡನೆ ಗುಡ್ಡಗಾಡು ಪ್ರದೇಶಗಳಿಗೆ ಓಡಿಹೋದನು. ಅಲ್ಲಿಂದ ಆ ಪರ್ವತ ಶ್ರೇಣಿಗಳನ್ನು ಹತ್ತಿ ಇಳಿದು ನಾಸಿಕಪ್ರಾಂತದ ಒಂದು ಹಳ್ಳಿಯಲ್ಲಿ ಹೋಗಿ ಅಡಗಿಕೊಂಡನು.

ಮೋರೋಪಂತನು ಜಹಾರ್ ಕೋಟೆಯನ್ನು ಸ್ವಾಧೀನಪಡಿಸಿಕೊಂಡು ಅಲ್ಲಿ ಬಲವಾದ ಮರಾಠಾ ಸೈನ್ಯದ ಠಾಣೆಯನ್ನು ಸ್ಥಾಪನೆ ಮಾಡಿದನು. ಈ ಜಹಾರ್‌ನ್ನು ಹಿಡಿದುಕೊಂಡರೆ ಸೂರತ್‌ನ್ನು ಹಿಡಿದಂತೆಯೇ.

ಈ ಜಹಾರ್ ಕೋಟೆಯಲ್ಲಿ ಮೋರೋಪಂತನಿಗೆ ಹದಿನೇಳು ಲಕ್ಷ ರೂಪಾಯಿಗಳು ಸಿಕ್ಕಿದವು. ಸಮೀಪದಲ್ಲಿಯೇ ರಾಮನಗರವೆಂಬ ಸಣ್ಣ

ತಿಂಗೆ ಕಂದಾಯಗಳನ್ನು ವಸೂಲು ಮಾಡುತ್ತಾರೆ. ನಮ್ಮ ರಾಜ್ಯಕ್ಕೆ ಮೊಗಲ್ ಸೈನ್ಯಗಳು ಬಂದು ಕಾಟ ಕೊಡುತ್ತವೆ. ಅದನ್ನು ಪರಿಹರಿಸುವುದಕ್ಕಾಗಿ ನಾವು ಬಲವಾದ ಸೈನ್ಯಗಳನ್ನು ಇಡಬೇಕಾಗಿದೆ. ಆ ಖರ್ಚನ್ನು ಮೊಗಲಾಯಿ ರಾಜ್ಯದಿಂದಲೇ ನಾವು ವಸೂಲು ಮಾಡುತ್ತೇವೆ. ನೀವು ತಕ್ಷಣ ಚೌತಾಯಿ ಕಳುಹಿಸದಿದ್ದರೆ ನಾನೇ ಖುದ್ದಾಗಿ ಸೈನ್ಯ ಸಮೇತ ಬಂದು ಸೂರತ್ತಿನಲ್ಲಿ ಠಿಕಾಣಿ ಹಾಕಿ ವಸೂಲ್ ಮಾಡಿಕೊಂಡು ಬರುತ್ತೇನೆ. ನನ್ನನ್ನು ತಡೆಯುವ ಶಕ್ತಿ ಯಾರಿಗೂ ಇಲ್ಲ. ಇದು ಕಡೆಯ ಎಚ್ಚರಿಕೆ" ಎಂದು ಪತ್ರ ಬರೆದು ಕಳುಹಿಸಿದನು. ಯಾರೂ ಉತ್ತರಕೊಡಲಿಲ್ಲ. ಚೌತಾಯಿ ಕೊಡಲೊಪ್ಪಲಿಲ್ಲ. ನಗರ ಸುಬೇದಾರನು "ವರ್ತಕರು ಶಿವಾಜಿಗೆ ಹಣಕೊಟ್ಟು ತಮ್ಮ ಆಸ್ತಿ ಪಾಸ್ತಿಗಳನ್ನು ಉಳಿಸಿಕೊಂಡರೆ ಉಳಿಸಿಕೊಳ್ಳಲಿ. ಇಲ್ಲದಿದ್ದರೆ ಹಾಳಾಗಿ ಹೋಗಲಿ. ನಾನೇನು ಮಾಡಲಾದೀತು" ಎಂದುಕೊಂಡು ಸುಮ್ಮನೆ ಕುಳಿತ ಬಿಟ್ಟನು.

ಮೋರೋಪಂತನು ಸೂರತ್ತನ್ನು ಲೂಟಿ ಮಾಡಿದನು. ಹದಿನಾರು ಲಕ್ಷ ರೂಪಾಯಿಗಳು ಸಿಕ್ಕಿದವು. ಆವರೆ ಸೂರತ್ ನಾಶವಾಗಿ ಹೋಯಿತು. ಇನ್ನು ಮುಂದೆ ಅಲ್ಲಿ ವ್ಯಾಪಾರ ವ್ಯವಹಾರಗಳು ನಡೆಸುವುದು ಅಸಾಧ್ಯವೆಂದು ನಿರಾಶೆಯಿಂದ ವರ್ತಕರೆಲ್ಲರೂ ಬಿಟ್ಟುಹೋದರು.

ಕೋಲೀ ರಾಜ್ಯದಿಂದ ತಲೆ ತಪ್ಪಿಸಿಕೊಂಡು ಓಡಿ ಹೋಗಿ ನಾಸಿಕ ಜಿಲ್ಲೆಯಲ್ಲಿ ಸೇರಿಕೊಂಡಿದ್ದ ವಿಕ್ರಮಶಹನು ಆ ಪ್ರಾಂತ್ಯದ ಸುತ್ತಲೂ ಬಹು ದೂರದವರೆಗೆ ಹೋಗಿ ಕೊಳ್ಳೆ ಹೊಡೆಯುತ್ತಿದ್ದನು. ಅವನ ಮಗನಾದ ದಾರಾರಾಯ್ ಎಂಬುವನು ಅವನ ತಂದೆಯ ಜೊತೆಗೆ ಸೇರಿಕೊಂಡನು. ಈ ತಂದೆ ಮಕ್ಕಳ ಉಪಟಳವು ಆ ಪ್ರದೇಶದಲ್ಲಿ ಮಿತಿಮೀರಿ ಹೋಯಿತು. ಆ ಪ್ರದೇಶದ ಜನರು ಶಿವಾಜಿಯ ಬಳಿಗೆ ಓಡಿಬಂದು, "ಈ ತಂದೆ ಮಕ್ಕಳ ಹಾವಳಿಯು ಮುಸಲ್ಮಾನರ ಹಾವಳಿಗಿಂತಲೂ ಹೆಚ್ಚಾಗಿದೆ. ಮನೆ ಮನೆಗಳನ್ನು ಲೂಟಿ ಮಾಡುತ್ತಾರೆ. ಭೂಮಿಯಲ್ಲಿ ಬಚ್ಚಿಟ್ಟಿದ್ದೇವೆಯೆಂಬ ಶಂಕೆಯಿಂದ ಮನೆಗಳನ್ನೆಲ್ಲಾ ಅಗೆದು [illegible] ತ್ತಾರೆ [illegible] ಮನೆಯ [illegible] ಗಳನ್ನೆಲ್ಲಾ [illegible] ಸ್ತ್ರೀಯರನ್ನು ಹೊತ್ತುಕೊಂಡು ಹೋಗುತ್ತಾರೆ. [illegible] ಈ ಪ್ರದೇಶ

ಮಾತೊಶ್ರೀಯವರ ಮನಸ್ಸಿಗೆ ಖೇದವಾದೀತು" ಎಂದು ಬಗೆದು ಅವರಿಬ್ಬರನ್ನೂ ಮರ್ಯಾದೆಯಿಂದ ಬಿಟ್ಟುಬಿಡಬೇಕೆಂದು ಅಪ್ಪಣೆ ಮಾಡಿದನು.

ಬಂಧನದಿಂದ ಬಿಡುಗಡೆ ಹೊಂದಿದ ಆ ಇಬ್ಬರು ತಹಶೀಲ್‌ದಾರರೂ ಸರ್ ಸುಬೇದಾರ್ ಬಹದ್ದೂರ್ ಖಾನ್‌ರವರ ಸನ್ನಿಧಾನಕ್ಕೆ ಹೋಗಿ ನಡೆದ ವೃತ್ತಾಂತಗಳನ್ನೆಲ್ಲಾ ವಿವರವಾಗಿ ತಿಳಿಸಿದರು. ಬಹದ್ದೂರ್‌ಖಾನನು ಆ ಜಾಧವರಾಯನು ಶಿವಾಜಿಯ ಸಮೀಪ ಬಂಧುವೆಂದು ತಿಳಿದು, "ನೀನು ಶಿವಾಜಿಯ ಬಂಧು. ಮರಾಠರಿಗೆ ತಹಶೀಲ್‌ನ್ನು ಬಿಟ್ಟುಕೊಟ್ಟಿದ್ದೀ. ನಮ್ಮ ರಾಜಭಂಡಾರವನ್ನೆಲ್ಲಾ ಅವರ ಕೈವಶಮಾಡಿದ್ದೀ. ಅನ್ನವಿಟ್ಟ ಪ್ರಭುಗಳಿಗೆ ದ್ರೋಹ ಮಾಡಿದವನು ನೀನು, ಹೋಗು" ಎಂದು ತುಚ್ಛವಾಗಿ ನಿರಾಕರಿಸಿದನು. ಅವನ ಜೊತೆಯಲ್ಲಿಯೇ ಬಂದ ಸಿದ್ದಿಹಲಾಲ್ ನವೋತಿಯೂ ಸಂಶಯ ಪಟ್ಟು ಅವನನ್ನು ಅಪಮಾನಗೊಳಿಸಿ ಓಡಿಸಿದನು.

ಅವರಿಬ್ಬರೂ ಬಹದ್ದೂರ್‌ಖಾನನಿಂದ ಅಪಮಾನಿತರಾಗಿ ಶಿವಾಜಿಯಲ್ಲಿ ಹೋಗಿ ಶರಣಾಗತರಾದರು. ಶಿವಾಜಿಯು ಅವರನ್ನು ತನ್ನ ಅಧಿಕಾರಕ್ಕೆ ಸೇರಿಸಿಕೊಂಡನು. ಅವರು ತಮ್ಮ ನಾಲ್ಕು ಸಾವಿರ ಅಶ್ವಾರೋಹಿ ಸೈನ್ಯವನ್ನೂ, ನಾಲ್ಕುಸಾವಿರ ಕಾಲಾಳು ಸೈನ್ಯವನ್ನೂ ಜೊತೆಯಲ್ಲಿ ಕರೆದುಕೊಂಡು ಶಿವಾಜಿಯೊಡನೆ ಸೇರಿಬಿಟ್ಟರು.

ಶಿವಾಜಿಯು ಮೊಗಲ್ ರಾಜ್ಯಗಳಲ್ಲೆಲ್ಲಾ ಗಡಿಬಿಡಿಮಾಡಿ, ಬಹದ್ದೂರ್ ಖಾನನನ್ನು ಓಡಿಸಿಬಿಡಬೇಕೆಂದು ಯೋಚಿಸಿದನು. ತನ್ನ ಸೇನಾಧಿಪತಿಗಳಾದ ಪ್ರತಾಪರಾವ್ ಆನಂದರಾವ್ ಇವರನ್ನು ಕರೆಸಿ, "ಈ ಬಹದ್ದೂರ್ ಖಾನನನ್ನು ದೇಶವೆಲ್ಲಾ ಅಲೆಯುವಂತೆ ಮಾಡಬೇಕು. ಇವನು ಒಂದು ಕಡೆ ಕೂಡದಂತೆ ಮಾಡಿದರೆ ಮಹಾರಾಷ್ಟ್ರದ ಕಡೆಗೆ ಇವನು ಬಾರದಂತೆ ಮಾಡಬಹುದು. ಇಲ್ಲದಿದ್ದರೆ ಬಾದಷಹನನ್ನು ಮೆಚ್ಚಿಸುವುದಕ್ಕಾದರೂ ನಮ್ಮ ರಾಜ್ಯದ ಮೇಲೆ ಪದೇಪದೇ ಬೀಳುತ್ತಾನೆ. ಇವನನ್ನು ಅಂತರ್ ಪಿಶಾಚಿಯಂತೆ ತಿರುಗಿಸಿದರೆ ಹಣ್ಣಾಗುತ್ತಾನೆ. ಅದಕ್ಕೆ ತಕ್ಕ ಉಪಾಯವನ್ನು ಮಾಡಿರಿ" ಎಂದು ಹೇಳಿದನು.

ಆ ಸೇನಾಧಿಪತಿಗಳಿಬ್ಬರೂ ಸೈನ್ಯಗಳನ್ನು ತೆಗೆದುಕೊಂಡು ಬಿರಾರಿನ ಕಡೆಗೆ ಹೊರಟರು. ಬಿರಾರಿನ ಹಳ್ಳಿಗಳನ್ನು ಲೂಟಿಮಾಡಿಕೊಂಡು ತೆಲಂ

ಸೇರಿದ ರಾಜ್ಯದಲ್ಲಿ ಅನೇಕ ಕಡೆ ಲೂಟಿಮಾಡಿಕೊಂಡು ಬಹದ್ದೂರ್‌ಖಾನನನ್ನು ಬಂದು ಸೇರಿದನು. ಅವರು ಪತ್ರಿ ಎಂಬ ಸ್ಥಳದಲ್ಲಿ ಠಿಕಾಣಿ ಮಾಡಿದ್ದರು. ಆದರ ಸಮೀಪದಲ್ಲಿ ಬಾಬಾಜೀನಾಯಕ್ ನಿಂಬಾಲ್ಕರ್ ಎಂಬ ಭಾರಿ ಜಮೀನ್ದಾರನಿದ್ದನು. ಆ ನಿಂಬಾಲ್ಕರ್‌ನು ಶಿವಾಜಿಯ ಮಗನಿಗೆ ತನ್ನ ಮಗಳನ್ನು ಕೊಟ್ಟು ಬಂಧುತ್ವ ಬೆಳೆಸಿದ್ದನು. ಈ ಸೇನಾಧಿಪತಿಗಳಿಬ್ಬರೂ ಆ ಜಹಗೀರಿಯನ್ನು ಲೂಟಿ ಮಾಡಿ ವಶಪಡಿಸಿಕೊಂಡರು. ಮರಾಠರು ಖಾನ್ ದೇಶಕ್ಕೆ ಬರಬೇಕಾದರೆ ಬಾಲಾಘಾಟ್ ಕಣಿವೆಯ ಮಾರ್ಗವು ಮುಖ್ಯವಾದ ಮಾರ್ಗ. ಬಹದ್ದೂರ್‌ಖಾನನು ಆ ಕಣಿವೆಯ ಮೇಲುಗಡೆ ಕಮಾನುಗಳನ್ನು ಕಟ್ಟಿಸಿ ತೋಪುಗಳನ್ನು ಇಡಿಸಿದನು. ಆ ಸ್ಥಳದಲ್ಲಿ ಕಾವಲು ಸೈನ್ಯವನ್ನು ಇಟ್ಟನು. "ಮರಾಠರು ಇನ್ನು ಮುಂದೆ ಈ ಮಾರ್ಗವಾಗಿ ಖಾನ್‌ದೇಶಕ್ಕೆ ತಲೆಯಿಡುವಂತಿಲ್ಲ. ಸರಿಯಾದ ಬಂದೋಬಸ್ತು ಮಾಡಿದ್ದೇನೆ" ಎಂದು ಸಮಾಧಾನ ಮಾಡಿಕೊಂಡು ಔರಂಗಾಬಾದಿಗೆ ಹಿಂತಿರುಗಿದನು

———

## ೧೨

ಯುವರಾಜ ಆಜಂಷಹನೊಂದಿಗೆ ಜಹನಾರಾಳು ದೆಹಲಿಗೆ ಹೋದಳು. ಯುವರಾಜನು ತನ್ನ ಅರಮನೆಗೆ ಹೋಗಿ ಸೇರಿದನು. ಬಾದಷಹನು ಅವನನ್ನು ಸಮ್ಮುಖಕ್ಕೆ ಕರೆಯಿಸಲಿಲ್ಲ. ಬಾದಷಹನು ಕುಪಿತನಾಗಿದ್ದಾನೆಂದು ಯುವರಾಜನು ಅರ್ಥಮಾಡಿಕೊಂಡನು. ತಂದೆಯ ಸ್ವಭಾವ ಮಗನಿಗೆ ಚೆನ್ನಾಗಿ ತಿಳಿದಿತ್ತು. ಮೊಹಬತ್‌ಖಾನನು ಹೋಗಿ ತನ್ನ ನಿವಾಸದಲ್ಲಿ ಸೇರಿಕೊಂಡನು. ಆವನಿಗೆ ಮಾತ್ರ ಬಹಳ ದಿಗಿಲಾಗಿತ್ತು. "ಬಾದಷಹನ ಆಗ್ರಹವು ತನ್ನ ಮೇಲೆ ಬಂದಿರಬಹುದು. ಇದಕ್ಕೇನು ಮಾಡಬೇಕು?" ಎಂದು ಚಿಂತಾಗ್ರಸ್ತನಾದನು. ಮೊಹಬತ್‌ಖಾನನದೂ ಯುವರಾಜ ಆಜಂಷಹನದೂ ಸಮಾನ ಯೋಗಕ್ಷೇಮವಾಗಿತ್ತು. ಮೊಹಬತ್‌ಖಾನನು ಯುವರಾಜ

ನನ್ನು ಪದೇ ಪದೇ ಭೇಟಿ ಮಾಡುತ್ತಿದ್ದನು. ಸದ್ಯಕ್ಕೆ ಆ ದರಬಾರಿನಲ್ಲಿ ಅವನಿಗಿದ್ದುದು ಅದೊಂದೇ ನಿಜವಾದ ಆಶ್ರಯ. ಯುವರಾಜನು ಕ್ಷಮಾ ಶೀಲ. ಸ್ನೇಹಿತರನ್ನು ಯಾವಾಗಲೂ ಸೌಜನ್ಯದಿಂದ ಕಾಣುತ್ತಿದ್ದನು. ದರ್ಬಾರಿನಲ್ಲಿ ಯಾರೇ ಆಗಲಿ, ಯುವರಾಜನಿಂದ ಏನು ಕಾರ್ಯಸಾಧನೆ ಯಾಗದಿದ್ದರೂ ಅವನ ಸ್ನೇಹ ಸೌಜನ್ಯಗಳಲ್ಲಿ ಎಲ್ಲರೂ ಮೆಚ್ಚುಗೆ ಹೊಂದಿದ್ದರು.

ಮೊಹಬತ್‌ಖಾನನು ಯುವರಾಜನ ಭೇಟಿ ಮಾಡಿದನು. ಅತ್ಯಂತ ಖಿನ್ನನಾಗಿ ಯುವರಾಜನಲ್ಲಿ ಹೇಳಿಕೊಂಡನು. "ಷರ್ಹಾಷಹಬಾದಷಹರಿಗೆ ನನ್ನ ಮೇಲೆ ಆಗ್ರಹಬಂದಿದೆ. ಅವರ ಆಗ್ರಹವು ನಿರರ್ಥಕವಾಗುವುದೇ ಇಲ್ಲ. ಅಂತರಂಗವಾಗಿಯೋ ಬಹಿರಂಗವಾಗಿಯೋ ನನ್ನ ತಲೆ ಹಾರಿಹೋಗುತ್ತದೆ. ನಾನು ಇಲ್ಲಿ ಒಂದು ಕ್ಷಣವೂ ಇರುವುದಿಲ್ಲ. ಆಫ್ಘಾನಿಸ್ತಾನಕ್ಕೆ ಓಡಿಹೋಗ ಬೇಕೆಂದಿದ್ದೇನೆ" ಎಂದು ಹೇಳಿಕೊಂಡನು.

ಆಜಂಷಹನು ಮೊಹಬತ್‌ಖಾನನನ್ನು ಸಂತೈಸುತ್ತಾ ಹೇಳಿದನು.

"ನನ್ನ ಕಥೆಯೂ ಹಾಗೆಯೇ ಇದೆ. ನಮ್ಮಿಬ್ಬರ ಮೇಲೆಯೂ ಬಾದ ಷಹರಿಗೆ ಆಗ್ರಹಬಂದಿದೆ. ಏನಾಗುತ್ತೋ ಅದು ನಮ್ಮಿಬ್ಬರಿಗೂ ಆಗಲಿ, ನಾವು ಅನುಭವಿಸೋಣ."

"ಯುವರಾಜರೇ, ನಿಮ್ಮ ಮಾತು ಹಾಗಲ್ಲ. ನೀವು ನನ್ನಂತೆಯೇ ಬಾದಷಹರ ಆಗ್ರಹಪಾತ್ರರೆಂಬುದರಲ್ಲಿ ಸಂಶಯವೇನೂ ಇಲ್ಲ. ಆದರೆ ನಾನೂ ನೀವೂ ಸಮಾನಸ್ಕಂಧರಲ್ಲ. ಈ ದರ್ಬಾರಿನಲ್ಲಿ ಉಮ್ರಾಗಳು ನರಪತಿಗಳು ಮಂತ್ರಿಗಳು ಎಲ್ಲರೂ ನಿಮ್ಮನ್ನು ಪ್ರೀತಿಸುತ್ತಾರೆ. ಜನಾನಾದಲ್ಲಿಯೂ ನಿಮ್ಮ ಮೇಲೆ ಅಪಾರ ಅಭಿಮಾನವಿದೆ. ಆ ಷಹಜಾದಾ ಜಹನಾರ ಬೇಗಂ ಸಾಹೇಬರು ನಿಮ್ಮನ್ನು ಬಿಟ್ಟು ಕೊಡುವುದಿಲ್ಲ. ನನ್ನ ಮಾತು ಹಾಗಲ್ಲ. ಬಾದಷಹರ ಅನುಗ್ರಹ ತಪ್ಪಿದರೆ ಈ ದೆಹಲಿಯಲ್ಲಿ ನಾನು ಅನಾಥನಂತೆ. ಯಾರು ನನಗೆ ಸಹಾಯ ಮಾಡುತ್ತಾರೆ. ಬಾದಷಹ ಅನುಗ್ರಹದಿಂದ ಅಷ್ಟು ದೊಡ್ಡ ಪದವಿಯಲ್ಲಿದ್ದ ನಾನು ಇಂದು ಎಷ್ಟು ಕೀಳು ಅಂತಸ್ತಿಗೆ ಬಿದ್ದು ಹೋಗಿದ್ದೇನೆ. ಇದನ್ನು ಸಹಿಸುಕೊಂಡು ಇಲ್ಲಿ ಇರಲಾದೀತೆ?"

"ನೋಡು ಮೊಹಬತ್‌ಖಾನ್, ನಾವು ಆಪತ್ತಿಗೆ ಸಿಕ್ಕಿದ್ದೇವೆಂಬು

ದೇನೋ ನಿಜ. ಆದರೆ ನಿನ್ನ ತಲೆ ಕೆಟ್ಟುಹೋಗಿದೆ. ನೀನು ಆಫ್ಘಾನೀ ಸ್ಥಾನಕ್ಕೆ ಹೋದರೆ ಏನಾಗುತ್ತೆ? ಬಹು ಪ್ರಯಾಸದಿಂದ ಅಲ್ಲಿ ಒಬ್ಬ ಸಾಮಾನ್ಯ ಸೇನಾಧಿಪತಿಯಾಗಬಹುದು. ಆ ಸಮಯದಲ್ಲಿ ಆಫ್ಘಾನರಿಗೂ ಬಾದಷಹರಿಗೂ ಯುದ್ಧ ನಡೆಯುತ್ತಲೇ ಇದೆ. ನೀನು ಬಾದಷಹರಿಗೆ ವಿರುದ್ಧವಾಗಿ ನಿಂತು ಯುದ್ಧಮಾಡಬೇಕು. ಇಷ್ಟು ದಿನ ಅವರಿಂದ ಬದುಕಿ ಬಾಳಿ ಉನ್ನತ ಪದವಿಗೆ ಬಂದು ಅವರಿಗೆ ವಿರೋಧವಾಗಿ ಯುದ್ಧ ಮಾಡು ವುದು ನಿನ್ನ ಆತ್ಮಸಾಕ್ಷಿಗೆ ಹೇಗೆ ಒಪ್ಪಬೇಕು? ಬಾದಷಹರಿಗೆ ನಮ್ಮಿಬ್ಬರ ಮೇಲೆಯೂ ಆಗ್ರಹ ಬಂದಿದೆ ಏತಕ್ಕೆ? ಶಿವಾಜಿಯನ್ನು ಹಿಡಿಯಲಿಲ್ಲವೆಂದು. ನೀನೇ ಹೇಳು, ಈ ದರ್ಬಾರಿನಲ್ಲಿರುವ ಯಾವ ಸೇನಾಧಿಪತಿಯು ತಾನೇ ಆ ಶಿವಾಜಿಯನ್ನು ಹಿಡಿದುತರಬಲ್ಲ? ಅಲ್ಲಿಯ ವಿದ್ಯಮಾನಗಳನ್ನೆಲ್ಲಾ ಅರಿತ ವನು ನೀನು. ಬಾದಷಹರು ಪುನಃ ನಿನ್ನನ್ನೇ ದಖ್ಖನ್ನಿಗೆ ಕಳುಹಿಸುತ್ತಾರೆ ಆ ನನ್ನ ತಂದೆಯವರು ಅತ್ಯಂತ ಮುಂಗೋಪಿಗಳು. ಶಿಕ್ಷೆ ವಿಧಿಸುವುದಾಗಿ ದ್ದರೆ ಇಷ್ಟು ಹೊತ್ತಿಗೆ ನೀನು ಮಣ್ಣಾಗಿ ಹೋಗುತ್ತಿದ್ದೆ. ಯಾವುದೋ ಒಂದು ನಿರೀಕ್ಷಣೆಯಿಂದ ನಿನ್ನನ್ನು ಉಪೇಕ್ಷೆಮಾಡಿಬಿಟ್ಟದ್ದಾರೆ. ಆ ರಹಸ್ಯವು ಮತ್ತೇನೂ ಇಲ್ಲ. ಶಿವಾಜಿಯ ಮೇಲೆ ನಿನ್ನನ್ನು ಹುರಿದುಂಬಿಸಬೇಕೆಂದೇ ಕಾದಿಟ್ಟದ್ದಾರೆ. ಬಹದ್ದೂರ್‌ಖಾನನ ಆಟವು ಈ ಮಳೆಗಾಲದಲ್ಲಿ ಮುಗಿದು ಹೋಗುತ್ತದೆ. ದಿಲೇರ್‌ಖಾನನು ಬಿದ್ದೇ ಹೋಗಿದ್ದಾನೆ. ಮಳೆಗಾಲವು ಮುಗಿಯುತ್ತಲೇ ನಿನ್ನ ಅಭ್ಯುದಯವು ಮೇಲಕ್ಕೇರುತ್ತದೆ. ಆಕಾಶದಲ್ಲಿ ಉರಿಯುವ ಸೂರ್ಯನಿಗೂ ಪ್ರಭಾವಕಾಲವುಂಟು. ಅಸ್ತಮಾನವೂ ಉಂಟು. ಮೊಹಬತ್‌ಖಾನಾ, ನೀನು ಸುಮ್ಮನಿರು. ನೋಡು, ನನ್ನ ಮಾತು ನಿಜ ವಾಗುವುದೋ ಸುಳ್ಳಾಗುವುದೋ, ನೀನೇ ನೋಡು" ಎಂದು ಹೇಳಿದನು.

ಮೊಹಬತ್‌ಖಾನನು ಹರ್ಷದಿಂದ ಹಿಗ್ಗಿ ಹುಚ್ಚನಂತಾಗಿ ಎದ್ದು ಯುವ ರಾಜನನ್ನು ಬಿಗಿಯಾಗಿ ಆಲಿಂಗನಮಾಡಿದನು.

"ಷರ್ಹಾಷಹಾ ಯುವರಾಜನೇ, ನಿನ್ನ ಮಾತು ಸತ್ಯವಾಗಲೀ. ಇನ್ನೊಂದು ಬಾರಿ ಬಾದಷಹರು ನನ್ನನ್ನು ದಖ್ಖನ್ನಿಗೆ ಕಳುಹಿಸಿದರೆ ಆಗ ನನ್ನ ಪರಾಕ್ರಮವನ್ನು ನೋಡು. ಆ ಶಿವಾಜಿಯ ಕೋಟೆಗಳನ್ನು ಒಂದೇ ಏಟಿಗೆ ವಶಪಡಿಸಿಕೊಳ್ಳದಿದ್ದರೆ ನಾನು ಮುಸಲ್ಮಾನನಾಗಿ ಹುಟ್ಟಿದ್ದು ವ್ಯರ್ಥ.

ಆ ಶಿವಾಜಿಯನ್ನು ಹಿಡಿದು ತಂದು ಬಾದಷಹನ ಪಾದದಲ್ಲಿ ಕೆಡವದಿದ್ದರೆ ನನ್ನ ಹೆಸರು ಮೊಹಬತ್ ಖಾನನಲ್ಲ" ಎಂದು ಹೇಳಿದನು.

ಯುವರಾಜನ ಸನ್ನಿಧಿಗೆ ಭಯವಿಹ್ವಲನಾಗಿ ಬಂದ ಮೊಹಬತ್ ಖಾನನು ಉತ್ಸಾಹಪೂರಿತನಾಗಿ ಮನೆಗೆ ಹಿಂತಿರುಗಿದನು.

ಔರಂಗಜೇಬನು ತಾನಾಗಿಯೇ ಹೋಗಿ ಅಂತಃಪುರದಲ್ಲಿ ಜಹನಾರಾಳ ಭೇಟಿ ಮಾಡಿದನು.

ಜಹನಾರಾಳು ಆನಂದದಿಂದ ಸಹೋದರನನ್ನು ಆಲಂಗಿಸಿ, ಆಸನದ ಮೇಲೆ ಕುಳ್ಳಿರಿಸಿ, ಪ್ರೀತಿಯಿಂದ ಸುವಾಸಿತವಾದ ಷರಬತ್ತನ್ನು ತಂದು ಕೊಟ್ಟು ಉಪಚರಿಸಿದಳು.

ಔರಂಗಜೇಬನು ಜಹನಾರಾಳನ್ನು ಹತ್ತಿರ ಕೂಡಿಸಿಕೊಂಡು ಅವಳ ಕೈಸವರುತ್ತಾ "ಷಹಜಾದೆ, ನಿನ್ನ ದಖ್ಖನ್ ಯಾತ್ರೆ ಹೇಗೆ ಪೂರೈಸಿತು ?" ಎಂದು ಹಾಸ್ಯ ಮಾಡಿದನು.

ಜಹನಾರಳು "ಅಣ್ಣಾ, ಆ ಕಥೆಯನ್ನು ಮರೆತುಬಿಡು. ನಾನು ದಖ್ಖನ್ನಿಗೆ ಹೋದದ್ದು ವ್ಯರ್ಥವಾಯಿತು."

"ಇನ್ನು ಮುಂದೆ ದಖ್ಖನ್ನಿನಲ್ಲಿ ದೆಹಲಿಯ ಸಾಮ್ರಾಜ್ಯವೆಂಬುದು ಬೂಟಾಟಿಕೆಯ ಮಾತು."

"ದೊಡ್ಡ ದೊಡ್ಡ ಸೇನಾಧಿಪತಿಗಳು, ಸರ್ ಸುಬೇದಾರರುಗಳು, ಫೌಜುದಾರರು ಅಲ್ಲಿಗೆ ಹೋಗಿ ಮಾಡುತ್ತಿರುವುದೇನು ?"

"ನಿರ್ಭಯವಾಗಿ ವಿಲಾಸ ವಿಹಾರಗಳನ್ನು ಮಾಡಿಕೊಂಡು ಮೆರೆಯುತ್ತಾರೆ."

"ನಿಂತಲ್ಲಿ ಕುಂತಲ್ಲಿ ಜನರನ್ನು ವಂಚನೆ ಮಾಡಿ ಹೇರಳವಾದ ಚಿನ್ನ ಸಂಪಾದಿಸುತ್ತಾರೆ."

"ಸರ್ಕಾರದ ಭಂಡಾರಕ್ಕೆ ಮೋಸ ಮಾಡುತ್ತಾರೆ."

"ಅಣ್ಣಾ ಒಬ್ಬೊಬ್ಬ ಸರದಾರನಿಗೂ ಒಂದೊಂದು ಸ್ವರ್ಗ. ಎಷ್ಟು ಹೆಣ್ಣುಗಳು. ಯಾವ ಯಾವ ದೇಶದ ಹೆಣ್ಣುಗಳು ಹಿಂದುಗಳು, ಮುಸಲ್ಮಾನರು, ಆಫ್ಘಾನರು, ಎಲ್ಲ ಹೆಣ್ಣುಗಳನ್ನು ಆ ಶಿಬಿರಗಳಲ್ಲಿ ಕಾಣಬಹುದು."

"ನಮ್ಮ ಅಂತಃಪುರದಲ್ಲಿ ಜೋಡು ಹಿಡಿಯುವ ದಾಸಿಯೂ ಅಲ್ಲಿ ರಾಣಿಯಾಗಿರಬಹುದು."

"ಮೊಗಲ್ ಸಾಮ್ರಾಜ್ಯದ ಭಂಡಾರವೆಲ್ಲವೂ ಈ ರಾಣಿಯರ, ಬೇಗಂ ಸಾಹೇಬರುಗಳ ಅಲಂಕಾರ ಭೂಷಣಗಳಿಗೂ ಮಧುರವಾದ ಪಾನ ವಿಹಾರ ಗಳಿಗೂ ನೀರಿನಂತೆ ಕೊಚ್ಚಿಹೋಗುತ್ತಿದೆ"

"ಅಣ್ಣಾ, ಸೈನಿಕರ ಕತೆಯೇನು ಬಲ್ಲೆಯಾ? ಒಂದು ವರ್ಷದಿಂದ ಒಬ್ಬರಿಗಾದರೂ ಸಂಬಳ ಸಾರಿಕೆ ಕೊಟ್ಟಿಲ್ಲ."

"ಅಲ್ಲಲ್ಲಿ ಲೂಟಿಯಾದ ಚಿನ್ನವೆಲ್ಲವೂ ಫೌಜುದಾರರಿಗೆ, ಸೇನಾಧಿಪತಿ ಗಳಿಗೆ, ಸುಬೇದಾರರಿಗೆ, ಬಟ್ಟೆ ಬರೆ ಪಾತ್ರೆ ಪರಟೆಗಳನ್ನು ಸೈನಿಕರಿಗೆ ಹಂಚಿಕೊಡುತ್ತಾರೆ.

ಆ ಸೈನಿಕರು ಅದನ್ನು ಊರು ಊರಿಗೆ ಹೊತ್ತುಕೊಂಡು ಹೋಗಿ ಮಾರಿ ಹೊಟ್ಟೆ ಹೊರೆಯಬೇಕು-

"ಮೊಗಲ್ ಸೈನ್ಯದ ಕತ್ತಿಗಳನ್ನು ನೋಡಿದರೆ ಫಳಫಳ ಹೊಳೆಯು ತ್ತವೆ. ಕಣ್ಣುಮುಂದೆ ಚಕಚಕನೆ ಹೊಳೆಯುತ್ತವೆ. ಸೈನಿಕರು ಅದನ್ನು ಹಿಡಿ ದರೆ ಶಸ್ತ್ರಗಳು ಮಾಸಿ ಹೋದಾವೆಂದು ಮುಟ್ಟುವುದು ಕೂಡಾ ಇಲ್ಲವಣ್ಣಾ"

"ಆ ಯುದ್ಧದ ಆಟವನ್ನಾದರೂ, ಏನು ಕೇಳುತ್ತೀ?"

"ಮೊಗಲ್ ಶಿಬಿರದ ಹತ್ತು ಸಾವಿರ ದಂಡು ಯುದ್ಧಕ್ಕೆ ಹೊರಡುತ್ತದೆ- ಮರಾಠರ ಸಾವಿರ ಕುದುರೆಗಳು ಬಂದು ಈ ದೊಡ್ಡ ಸೈನ್ಯವನ್ನು ಹೊಡೆ ದೋಡಿಸಿಬಿಡುತ್ತವೆ. ಇದನ್ನು ಯಾರಾದರು ನಂಬಲಾದೀತೇ? ಆ ಸೈನಿಕ ರಿಗೆ ಉತ್ಸಾಹವಿಲ್ಲ. ಯುದ್ಧಕ್ಕೆ ನಿಲ್ಲುವುದೇ ಇಲ್ಲ. ಓಡಿಹೋಗುತ್ತಾರೆ."

"ಇದು ನಿಜವಾದ ದಖ್ಖನ್ನಿನ ಪರಿಸ್ಥಿತಿ. ನಿಮಗೆ ಕಣ್ಣಿದ್ದರೂ ಕಣ್ಣಿಲ್ಲ ದಂತಾಗಿದೆ."

ಔರಂಗಜೇಬನು ತಲೆಬಾಗಿಸಿ, ಕಣ್ಣುಗಳನ್ನು ಅರಳಿಸಿ, ಷಹಜಾದೆಯ ಮುಖವನ್ನೇ ದುರುಗುಟ್ಟಿ ನೋಡುತ್ತ ಕುಳಿತಿದ್ದನು.

ಒಂದೆರಡು ಕ್ಷಣಗಳು ಕಳೆದ ಮೇಲೆ ಔರಂಗಜೇಬನು "ಜಹನಾರಾ ಒಂದು ಕಡೆಯ ಚಿತ್ರವನ್ನು ಬರೆದು ತೋರಿಸಿದೆ. ಮತ್ತೊಂದು ಕಡೆಯ ಚಿತ್ರದ ಬಣ್ಣವೇನು? ಆ ಶಿವಾಜಿಯು ಹೇಗಿದ್ದಾನೆ?" ಎಂದ.

ಜಹನಾರಾಳು "ಜಹಪನಾ, ಅದನ್ನು ನನ್ನ ಬಾಯಿಯಿಂದ ಕೇಳಲು ಬಯಸಬೇಡಿರಿ. ಸ್ವಭಾವ ಕೋಪಿಗಳಾದ ನಿಮಗೆ ನನ್ನ ಮೇಲೆ ಕೋಪ ಬರುತ್ತದೆ. ಈ ಹೆಣ್ಣು ಜನ್ಮವಿದೆಯಲ್ಲಾ ಹಾಳು ಜನ್ಮ, ಆ ಪರಾಕ್ರಮ

ಶಾಲಿಯಾದ ಪುರುಷನನ್ನು ನೋಡಿ ಮೋಹಿಸಿ ನಾನು ಮನ ಸೋತಿದ್ದೇನೆಂದು ನಿಮ್ಮ ಹೃದಯದಲ್ಲಿ ಸಂದೇಹ ಪಿಶಾಚಿಯು ಉರಿ ಎಬ್ಬಿಸುತ್ತದೆ” ಎಂದು ಹೇಳುವಾಗ ಅವಳ ಕಣ್ಣುಗಳಿಂದ ಔರಂಗಜೇಬನ ಮುಂಗೈ ಮೇಲೆ ಎರಡು ಕಂಬನಿಗಳು ಉದುರಿದವು.

ಔರಂಗಜೇಬನು ತಲೆ ಸವರುತ್ತಾ “ಜಹನಾರಾ, ನಿನ್ನ ಹೆಣ್ಣು ಜನ್ಮ ದೇವರು ಕೊಟ್ಟಿದ್ದು. ಚಿನ್ನದಂತಹದು. ರತ್ನದಂತಹುದು. ನಿನ್ನ ವಿದ್ಯೆ ಕಲೆಗಳು ಅಮೃತದಂತಹುದು. ಅದನ್ನು ನಾನೇ ನನ್ನ ಕೈಯಿಂದಲೇ ಹಾಳು ಮಾಡಿದೆ. ಈ ಬಾದಷಾಹಿಯ ಕ್ಷೇಮಕ್ಕಾಗಿ ಹಾಗೆ ಮಾಡಿದೆನೆಂದುಕೊಳ್ಳುತ್ತೇನೆ. ಆದರೆ ಒಂದೊಂದು ಬಾರಿ ಅದನ್ನೂ ಮೀರಿ ನನ್ನ ಹೃದಯದಲ್ಲಿ ದುಃಖದ ಉದ್ವೇಗವೇಳುತ್ತದೆ. ಈಗ ನೀನು ಅದನ್ನು ಮತ್ತೆ ಮತ್ತೆ ಎಬ್ಬಿಸುತ್ತಿದ್ದೀ. ನೀನು ಶಿವಾಜಿಯ ಪರಾಕ್ರಮ ಪೌರುಷಗಳನ್ನು ಕಂಡು ಮನ ಸೋತಿದ್ದೀಯೆಂದು ಭಾವಿಸುವಷ್ಟು ನಾನು ಈಗ ಮೂರ್ಖನಾಗಿಲ್ಲ. ಅಂತಹ ಎಷ್ಟೋ ಪರ್ವತಗಳಿಂದ ನೀನು ಧುಮುಕಿದ್ದೀ. ಎಷ್ಟೋ ಸಮುದ್ರಗಳನ್ನು ಈಜಿ ದಾಟಿಬಿಟ್ಟಿದ್ದೀ. ನಿನ್ನ ಈ ಶರೀರವು ಸುಮಕೋಮಲ. ಲಾವಣ್ಯದ ಝರಿಯು ಹರಿಯುತ್ತಲೇ ಇದೆ. ಆದರೆ ಹೃದಯವು ಕಲ್ಲಾಗಿ ಹೋಗಿದೆ. ಮನಸ್ಸು ಕಷಾಯಿತವಾಗಿದೆ. ಶಿವಾಜಿಯಂಥವರು ನಿನ್ನನ್ನು ನೋಡಿ ಈಗಲೂ ಮೋಸಹೋದರೆ ಆಶ್ಚರ್ಯವೇನೂ ಇಲ್ಲ. ಅವರು ಅಗ್ನಿಜ್ವಾಲೆಯಲ್ಲಿ ಬಿದ್ದ ಪತಂಗಗಳಂತೆ ಉರಿದು ಹೋಗಬಹುದು. ಜಹನಾರಾ ನಾವು ಮರಾಠರೊಡನೆ ಯುದ್ಧಮಾಡುತ್ತಿದ್ದೇವೆ. ಕಡೆಯವರಿಗೂ ನಾನು ಬಿಡುವವನಲ್ಲ. ಶಿವಾಜಿಯಂಥವನು ಹೆಜ್ಜೆ ಹೆಜ್ಜೆಗೂ ಎದುರಿಸುತ್ತಿರುವಾಗ ಬಿಟ್ಟು ಬಿಟ್ಟರೆ ಈ ಬಾದಷಾಹಿಯು ಪತನವಾದಂತೆಯೇ. ನೀನು ಹೇಳು.” ಆ ಕಡೆಯ ಸುದ್ದಿಗಳನ್ನೂ ಹೇಳು ? ಬಲಾ ಬಲಗಳನ್ನು ಹೇಳು ?

ಜಹನಾರಾಳು “ಜಹಪನಾ, ಆ ಶಿವಾಜಿಯು ಮಹಾ ಪರಾಕ್ರಮಶಾಲಿಯೆಂಬುದನ್ನು ನೀವೆ ಬಲ್ಲಿರಿ. ಅವನ ಪ್ರತಿಯೊಬ್ಬ ಸೇನಾನಾಯಕನೂ ಅವನಂತೆಯೇ ವೀರಪುರುಷ. ಸೈನಿಕರಿಗೆ ಅಪಾರ ಸ್ವಾಮಿಭಕ್ತಿ. ಒಬ್ಬ ಸೈನಿಕನೂ ಕದ್ದು ಓಡುವವನಲ್ಲ. ಎದೆಗೊಟ್ಟು ನಿಂತು ತಲೆಕಳೆದುಕೊಳ್ಳಲು ತಯಾರಾಗಿದ್ದಾರೆ.

"ಶಿವಾಜಿಯು ಯಾರ ತಪ್ಪುಗಳನ್ನೂ ಕ್ಷಮಿಸುವುದಿಲ್ಲ. ಎಂತಹ ಸರದಾರನನ್ನಾದರೂ ನಿಂತಲ್ಲಿ ಶಿಕ್ಷೆ ವಿಧಿಸಿಬಿಡುತ್ತಾನೆ

"ತನ್ನ ಕೋಟೆಗಳನ್ನು ಸುಭದ್ರವಾಗಿಟ್ಟುಕೊಂಡಿದ್ದಾನೆ. ಅವನು ಯಾವಾಗ ಯಾವ ಕೋಟೆಗೆ ಹೋಗುತ್ತಾನೆಂಬುದು ಯಾರಿಗೂ ಅರಿವಿಲ್ಲ. ಮಿಂಚಿನಂತೆ ಏಕಾಕಿಯಾಗಿ ತನ್ನ ರಾಜ್ಯದಲ್ಲಿ ಸಂಚರಿಸುತ್ತಾನೆ.

"ಕೋಟೆಗಳಲ್ಲಿರುವ ಸೇನಾಧಿಪತಿಗಳನ್ನೂ ಸುಬೇದಾರರನ್ನೂ ಒಂದು ಕಡೆಯಿಂದ ಮತ್ತೊಂದು ಕಡೆಗೆ ಬದಲಾಯಿಸುತ್ತಾನೆ.

"ಹಣಕ್ಕಾಗಿ ತಮ್ಮ ರಾಜ್ಯಗಳಲ್ಲಿ ಕೊಳ್ಳೆಹೊಡೆಯುವುದಿಲ್ಲ. ಬಿಜಾಪುರ ಗೋಲ್ಕೊಂಡ ರಾಜ್ಯಗಳು ಅನಾಯಕವಾಗಿದೆ. ಅಲ್ಲಿ ಕೊಳ್ಳೆಹೊಡೆದು ತಂದು ಸೈನಿಕರಿಗೆ ಹಂಚುತ್ತಾನೆ.

"ನಮ್ಮ ರಾಜ್ಯದಲ್ಲೆಲ್ಲಾ ಗುಪ್ತ ಚಾರರನ್ನು ಇಟ್ಟಿದ್ದಾನೆ. ಎಲ್ಲಿ ಸಂದು ಸಿಕ್ಕುತ್ತದೋ ಅಲ್ಲಿ ಕೊಳ್ಳೆ ಹೊಡೆದುಕೊಂಡು ಹೋಗುತ್ತಾನೆ. ರಣರಂಗದಲ್ಲಿ ನಮ್ಮ ಸೈನಿಕರು ಗಾಯಗೊಂಡು ಬಿದ್ದಿದ್ದರೆ ಅವರನ್ನು ತನ್ನ ಕೋಟೆಗಳಿಗೆ ಎತ್ತಿಕೊಂಡು ಹೋಗಿ ಘಾಸಿಯನ್ನು ಗುಣಪಡಿಸಿ, ಇನಾಂಗಳನ್ನು ಕೊಟ್ಟು ಹಿಂದಕ್ಕೆ ಕಳುಹಿಸುತ್ತಾನೆ.

"ನಮ್ಮ ಸ್ತ್ರೀಯರು ಅವರ ಕೈಗೆ ಸಿಕ್ಕಿದರೆ ಶ್ರೀಮಂತರಾಗಲಿ, ಬಡವರಾಗಲಿ, ರೂಪವತಿಯರಾಗಲಿ, ಅಲ್ಲದಿರಲಿ, ಮರ್ಯಾದೆಯಿಂದ ಕಂಡು ಅವರನ್ನು ಅವರವರ ಸ್ಥಳಗಳಿಗೆ ಸುರಕ್ಷಿತವಾಗಿ ಕಳುಹಿಸುತ್ತಾನೆ. ಒಬ್ಬ ಮರಾಠ ಸರದಾರನಾದರೂ ಅವರನ್ನು ಕಣ್ಣೆತ್ತಿ ನೋಡಲು ಹೆದರುತ್ತಾರೆ."

"ಜಹಪನಾ, ಇಂಥ ಮೊಗಲ್ ಸೈನಿಕರೂ ಮಾನವರಲ್ಲವೆ? ಅವರ ಹೃದಯದಲ್ಲಿ ಕೃತಜ್ಞತೆಯಿರುವುದಿಲ್ಲವೆ? ಶಿವಾಜಿಯ ಹೆಸರು ಹೇಳಿದರೆ ಅವರು ರಣರಂಗದಿಂದ ಪಲಾಯನ ಮಾಡುತ್ತಾರೆ. ಹೆಚ್ಚೇಕೆ, ನೀವು ಆ ಶಿವಾಜಿಯನ್ನು ಕಳ್ಳನೆಂದು ಪದೇ ಪದೇ ಕರೆಯುತ್ತೀರಿ. ನಾನು ಹೇಳುತ್ತೇನೆ. ನಮ್ಮ ಸೇನಾಧಿಪತಿಗಳು, ಸುಬೇದಾರರುಗಳು, ಸರದಾರರೂ, ಇವರೆಲ್ಲರೂ ಕಳ್ಳರು, ದರೋಡೆಕಾರರು. ನಮ್ಮ ಭಂಡಾರವನ್ನೇ ಕದಿಯುವ ಕಳ್ಳರು. ನಮ್ಮ ಜನರನ್ನೆ ಕೊಳ್ಳೆಹೊಡೆಯುವ ದರೋಡೆಕೋರರು, ಇವರಿಂದ ನಮಗೆ ಎಂದಿಗೂ ಜಯವಾಗದು. ಕಳ್ಳನದಾರಿ ಕಳ್ಳನೇ ಬಲ್ಲನೆಂಬಂತೆ ಅವರ ದಾರಿಯನ್ನು ಶಿವಾಜಿ ಚೆನ್ನಾಗಿಬಲ್ಲ. ಆದಕ್ಕೆ ತಕ್ಕ ಶಾಸ್ತಿಮಾಡುತ್ತಾನೆ."

"ಬಾದಷಹರೇ ನಾನೂ ಒಂದು ಬಾರಿ ಶಿವಾಜಿಯ ಭೇಟಿಮಾಡಿದ್ದೇನೆ. ಅದನ್ನು ಹೇಳುತ್ತೇನೆ, ಕೇಳಿ."

"ಗೋಲ್ಕೊಂಡದಿಂದ ಔರಂಗಬಾದಿಗೆ ಹಿಂತಿರುಗಿಬರುತ್ತಿದ್ದೆ. ನಮ್ಮ ಬೆಂಗಾವಲಿನ ಸೈನ್ಯದವರು ಐವತ್ತು–ನೂರು ಮಂದಿ ಇದ್ದಿರಬಹುದು. ಮರಾಠರ ಮಹಾ ಸೈನ್ಯವೊಂದು ಆ ಮಾರ್ಗವಾಗಿ ಹೋಗುತ್ತಿದ್ದಿತು. ದಾರಿಯಲ್ಲಿ ಸಿಕಂದರ್‌ಪುರವೆಂಬ ಬಿಜಾಪುರದ ಸುಲ್ತಾನನ ಕೋಟೆಯಿದೆ. ಅಲ್ಲಿ ನಾವು ಅಡಗಿಕೊಂಡೆವು. ಆ ಮರಾಠರಿಗೆ ನಮ್ಮ ಬೆಂಗಾಲಿನವರ ದಿರುಸು ನೋಡಿ ದೆಹಲಿಯ ಜನಾನಾಕ್ಕೆ ಸೇರಿದ ಯಾರೋ ಬೇಗಾಂಸಾಹೇಬಾಳು ಅಲ್ಲಿದ್ದಾಳೆಂದು ತಿಳಿದುಹೋಯಿತು. ಏಕೆ, ನಾನೇ ಬಂದಿದ್ದೇನೆಂದು ಅವರಿಗೆ ಖಾತ್ರಿಯಾಗಿ ತಿಳಿಯಿತು. ಅವರು ಆ ಕೋಟೆಯನ್ನು ಮುತ್ತಿ ಅರ್ಧದಿವಸ ದಲ್ಲಿ ವಶಪಡಿಸಿಕೊಂಡರು. ಆ ಸೇನೆಯ ಅಧಿಪತಿಯು ಸ್ವಯಂ ಶಿವಾಜಿಯೇ ಆಗಿದ್ದನೆಂದು ನಮಗೆ ತಿಳಿಯಿತು. ಪಾಪ, ನನ್ನ ಬೆಂಗಾವಲು ಸೈನ್ಯದ ಸರದಾರ ದಿಲೀಪಸಿಂಗ್‌ನು ಶಿವಾಜಿಯನ್ನು ಎದುರಿಸಿ ಕ್ಷಣದಲ್ಲಿ ಸತ್ತುಬಿದ್ದ. ಹುಚ್ಚು ತರುಣ. ರಜಪೂತನೆಂಬ ಕೊಬ್ಬಿನಿಂದ ಆ ಮಹಾ ಪರಾಕ್ರಮಿ ಶಿವಾಜಿಯನ್ನು ಎದುರಿಸಿದ. ಸತ್ತುಹೋದ. ಹೋಗಲಿ."

"ಶಿವಾಜಿಯು ಅರಮನೆಯ ಮುಂದೆ ಬಂದು ನಿಂತ. ನಮ್ಮ ಪರಿವಾರ ದವರೆಲ್ಲರೂ ನಡುಗುತ್ತಾ ನಿಂತರು. ನಾನು ಆ ಶಿವಾಜಿಯನ್ನು ಅಂತಃಪುರಕ್ಕೆ ಬರಬೇಕೆಂದು ಹೇಳಿ ಕಳುಹಿಸಿದೆ. ಅವನು ನನ್ನೆದುರಿಗೆ ಬಂದು ನಿಂತು ನಮ್ರತೆ ಯಿಂದ ಸಲಾಂ ಮಾಡಿದ. ಮಹಾ ಮಹಾ ಮೊಗಲ್ ಸೇನಾಧಿಪತಿಗಳು ಅಂಥ ಸಂದರ್ಭದಲ್ಲಿ ಶಿವಾಜಿಯನ್ನು ನೋಡಿದ್ದರೆ ನಡುಗಿ ಕೆಳಗೆ ಬೀಳುತ್ತಿದ್ದರು. ಅಂಥ ಶಿವಾಜಿಯು ಇವನೇ ! ಇವನಲ್ಲಿ ಇಷ್ಟು ನಮ್ರತೆಯಿದೆಯೇ ? ಎಂದು ನನಗೆ ಆಶ್ಚರ್ಯವಾಯಿತು. ಅವನೇ ಹೇಳಿದನು 'ನಾನು ಶಿವಾಜಿ. ನೀವು ಬಾದಷಹರ ಸಹೋದರಿಯರು. ನಾನು ಕೇಳಿ ಬಲ್ಲೆ, ನಿಮ್ಮ ಹೆಸರನ್ನೂ ಕೇಳಿದ್ದೇನೆ. ಬಾದಷಹರ ನಿರ್ಭಾಗ್ಯ ಸೋದರಿ, ಜಹನಾರಾಸಾಹೇಬಾರು.

"'ತಾಯಿ ನೀವು ಭಯಪಡಬೇಡಿ. ನನಗೆ ನೀವು ಮಾತೃ ಸಮಾನರು ನಿಮ್ಮನ್ನು ಮರ್ಯಾದೆಯಿಂದ ಯುವರಾಜರ ಶಿಬಿರಕ್ಕೆ ಸುರಕ್ಷಿತವಾಗಿ ತಲುಪಿಸು ತ್ತೇನೆ' ಎಂದು ಹೇಳಿ ಸಲಾಂಮಾಡಿದನು.

"ಆಗ ಆ ಕ್ಷಣದಲ್ಲಿ ಆವನ ಮರ್ಯಾದೆ ಗಾಂಭೀರ್ಯ ಔದಾರ್ಯಗಳನ್ನು ನೋಡಿ ನಾನು ಮನಸೋತೆ ನಿಜ. ನನ್ನ ಮನಸ್ಸಿನಲ್ಲಿ ಒಂದು ಶಂಕೆಯಿದ್ದಿತು. ಸಾಕ್ಷಾತ್ತಾಗಿ ಶಿವಾಜಿಯನ್ನೇ ಕಂಡಾಗ ಆವನು ನನಗೆ ಅಭಯ ಪ್ರಧಾನ ಮಾಡಿರುವಾಗ ನಾನು ಕೇಳದಿದ್ದರೆ ಈ ಮೊಗಲ್ ಬಾದಷಹರ ಕುಲದಲ್ಲಿ ಹುಟ್ಟಿ ಸಾರ್ಥಕವೇನು?

"'ಶಿವಾಜೀ ಮಹರಾಜ್', ನಮ್ಮ ಯುವರಾಜನಿಗೂ ನಿಮಗೂ ಅಂತ ರಂಗ ಸ್ನೇಹವಿದೆಯೆಂದು ನಮ್ಮ ಶಿಬಿರದಲ್ಲಿಯೇ ಅನೇಕರು ಮಾತನಾಡಿ ಕೊಳ್ಳುತ್ತಾರೆ. ಇದು ನಿಜವೆ? ನಿಮ್ಮ ಮಾತೃ ದೇವತೆಯ ಆಣೆಗೂ ಹೇಳಿರಿ, ಎಂದು ಕೇಳಿದೆ. ಶಿವಾಜಿಯು ನಕ್ಕು ಹೇಳಿದನು. 'ಷಹಜಾದೆ. ಹಾಗೆ ಮಾತ ನಾಡುವವರು ಕಚ್ಚಾ ಮನುಷ್ಯರು. ಅವರೇ ನಿಜವಾದ ಕಾಫರರು. ದಖ್ಖನ್ನಿಗೆ ಬಂದಿರುವ ಸರದಾರರುಗಳಲ್ಲಿ ಯಾರು ತಾಜಾ ಮುಸಲ್ಮಾನರಿ ದ್ದಾರೆ, ಹೇಳಿರಿ ನಮಗೂ ಮೊಗಲರಿಗೂ ಹಣಾಹಣಿ ಯುದ್ಧವಾಗುತ್ತಿರು ವಾಗ ಮೊಗಲ್ ರಾಜಪ್ರತಿನಿಧಿ ಯುವರಾಜನಿಗೂ ನನಗೂ ಸ್ನೆಹವಾಗು ವುದು ಹೇಗೆ ? ಯುವರಾಜನು ಮಹಾ ಪುರುಷನೆಂದು ಕೇಳಿದ್ದೇನೆ. ಆವನ ಸ್ನೇಹಕ್ಕಾಗಿ ನನ್ನ ಮನವು ಹಾತೊರೆಯುತ್ತಿದೆ. ಯುದ್ಧವು ಮುಗಿದನಂತರ ನಾನಾಗಿ ಅವನಿಗೆ ಸ್ನೇಹ ಹಸ್ತವನ್ನು ಚಾಚಬೇಕೆಂದಿದ್ದೇನೆ' ಎಂದು ಹೇಳಿದನು.

"'ಮಹಾರಾಜರೇ ನನ್ನದು ಮತ್ತೊಂದು ಪ್ರಶ್ನೆಯಿದೆ. ಆದನ್ನು ಮೊಗಲ್ ರಾಜಕುವರಿಯ ಸವಾಲ್ ಎಂದು ಬೇಕಾದರೂ ತಿಳಿಯಿರಿ' ಎಂದು ಹೇಳಿದೆ. ಶಿವಾಜಿಯು 'ಕೇಳಿ ಷಹಜಾದೆ. ಕೇಳಬಿಡಿ. ಮತ್ತೊಮ್ಮೆ ನೀವು ನನ್ನನ್ನು ನೋಡಲಾರಿರಿ. ಇದೇ ಕೊನೆ. ನೀವು ಈಗ ನನ್ನ ಬಂಧಿ, ನಿಮ್ಮ ಘನತೆಗೆ ತಕ್ಕ ಪುರಸ್ಕಾರವನ್ನು ಒಪ್ಪಿಸಬೇಕೆಂದು ನನ್ನ ಮನೋದೇವತೆಯು ಹೇಳುತ್ತಿದೆ ಬಾದಷಹನ ಸಹೋದರಿಗೆ ಒಪ್ಪಿಸುವ ಘನಪುರಸ್ಕಾರವು ನನ್ನ ಲ್ಲೇನಿದೆ? ಸತ್ಯವಚನ ಅಷ್ಟನ್ನೇ ನಿಮಗೆ ಸಮರ್ಪಿಸಬಲ್ಲೆ" ಎಂದು ಹೇಳಿದನು.

"'ಶಿವಾಜೀ ಮಹಾರಾಜ್', ನನ್ನನ್ನು ಕ್ಷಮಿಸಿರಿ. ನೀವು ವೀರ ಪುರುಷ ರೆಂದು ನಿಮ್ಮ ಹಿಂದೂ ಜನ ಬಹಳವಾಗಿ ಹೊಗಳುತ್ತಾರೆ. ನಮ್ಮ ದರ್ಬಾರಿ

ನಲ್ಲಿ ಶಿವಾಜಿಯು ಯುದ್ಧದಲ್ಲಿ ಸಿಲ್ಲುವುದಿಲ್ಲ ಕದ್ದು ಹೋಗುತ್ತಾನೆ' ಎಂದು ಹೇಳುತ್ತಾರೆ. ನೀವು ಒಂದು ಯುದ್ಧದಲ್ಲಾದರೂ ಮೊಗಲ್ ಸೇನೆಯ ಮುಂದೆ ನಿಂತು ಯುದ್ಧಮಾಡುವುದಿಲ್ಲವೇಕೆ? ಇದು ಪರಾಕ್ರಮಿಗಳ ಲಕ್ಷಣವೇ' ಎಂದು ಕೇಳದೆ.

"ಶಿವಾಜಿಯು 'ಬೇಗಂಸಾಹೇಬಾ, ಸರಿಯಾದ ಪ್ರಶ್ನೆ. ಈ ಪ್ರಶ್ನೆಯನ್ನು ಮೊಗಲ್ ಸೇನಾಧಿಪತಿಗಳೇ ನನ್ನ ಮುಂದೆ ನಿಂತು ಕೇಳಿದ್ದರೆ ಅಂದೇ ಉತ್ತರಕೊಟ್ಟು ಬಿಡುತ್ತಿದ್ದೆ. ಅವರೊಬ್ಬರಿಗೂ ಆ ಧೈರ್ಯವಿಲ್ಲ. ನೀವು ಧೀರ ರಮಣಿ. ಆ ಔರಂಗಜೇಬನಿಗೆ ತಕ್ಕ ಒಡಹುಟ್ಟು. ಸವಾಲ್ ಎಂದು ಹೇಳಿದಿರಲ್ಲಾ ಅದೇ ಸರಿಯಾದ ಮಾತು. ಬಾದಷಹ ಜಗತ್ತಿನ ಕರ್ತಾ ಕರ್ತನೆಂದುಕೊಳ್ಳುವ ದೆಹಲಿಯ ಚಕ್ರವರ್ತಿ, ನಿಮ್ಮ ಸಹೋದರ, ಆ ಔರಂಗಜೇಬನೇ ನನ್ನೊಡನೆ ಯುದ್ಧಮಾಡಲು ಸಾಮರ್ಥ್ಯವುಳ್ಳವನು. ಅವನೇ ಈ ದಖ್ಖನ್ ರಣಕ್ಷೇತ್ರದಲ್ಲಿ ಬಂದು ನಿಂತರೆ ನಾನು ಸಾಕ್ಷಾತ್ತಾಗಿ ಎದುರು ನಿಂತು ನನ್ನ ಪರಾಕ್ರಮವೇನು ಎಂಬುದನ್ನು ತೋರಿಸುತ್ತೇನೆ. ಈ ಹಿಂದೂಸ್ತಾನದಲ್ಲಿ ಈ ಜಟಿಲ ಸಮಸ್ಯೆಯು ನಮ್ಮಿಬ್ಬರ ಕಾಳಗದಲ್ಲಿ ಬಗೆಹರಿದು ಹೋಗುತ್ತದೆ. ನಾನು ಆ ರಣರಂಗದಲ್ಲಿ ಸತ್ತು ಬಿದ್ದರೆ ಆ ಸೇತು ಹಿಮಾಚಲದವರೆಗೆ ಮೊಗಲ್ ಸಾಮ್ರಾಜ್ಯವು ಸರ್ವತಂತ್ರ ಸ್ವತಂತ್ರವಾಗುತ್ತದೆ. ಬಾದಷಹನು ಮಡಿದುಬಿದ್ದರೆ ಹಿಂದೂಪದ ಪಾದಶಾಹಿಯ ಸುವರ್ಣ ಧ್ವಜವು ಕೈಲಾಸದಿಂದ ಸಿಂಹಳದವರೆಗೆ ಪ್ರಕಾಶಮಾನವಾಗುತ್ತದೆ. ನಿಮ್ಮ ಸವಾಲಿಗೆ ಇದೇ ವಿನಯ ಪೂರ್ವಕವಾದ ಉತ್ತರ, ಷಹಜಾದೆ. ನೀವು ಬಾದಷಹನಲ್ಲಿಗೆ ಹೋಗಿ ಇದನ್ನು ಖಂಡಿತವಾಗಿ ಹೇಳಿರಿ' ಎಂದು ಹೇಳಿದನು.

"ಆ ವೀರನು ನನ್ನನ್ನು ಸಕಲ ಮರ್ಯಾದೆಗಳೊಡನೆ ಔರಂಗಾಬಾದಿಗೆ ಕಳುಹಿಸಿಕೊಟ್ಟನು. ಹಿಂದೂ ಸರದಾರರುಗಳೇ ನನ್ನನ್ನು ಯುವರಾಜನ ಸಮ್ಮುಖದಲ್ಲಿ ತಂದೊಪ್ಪಿಸಿ ಅಪ್ಪಣೆಪಡೆದು ಹೊರಟುಹೋದರು."

ಔರಂಗಾಜೇಬನು ಜಹನಾರಾಳನ್ನು ಬಿಗಿದಪ್ಪಿ "ಷಹಜಾದೆ ನೀನು ಧೀರ ರಮಣಿಯೇ ಹೌದು. ನನ್ನ ಮಾತನ್ನು ನೀನೇ ಸವಾಲುಹಾಕಿ ಉತ್ತರ ತಂದಿದ್ದೀ. ನಾನು ದಖ್ಖನ್ ರಣಕ್ಷೇತ್ರಕ್ಕೆ ಹೋಗಿ ಶಿವಾಜಿಗೆ ರಣ ವೀಳಯವನ್ನು ಕಳುಹಿಸುತ್ತೇನೆ. ಆಗ ನಿನ್ನನ್ನೇ ಜೊತೆಯಲ್ಲಿ ಕರೆದೊಯ್ದು

ನಿನ್ನ ಈ ಕೈಗಳಿಂದಲೇ ಆ ಶಿವಾಜಿಗೆ ರಣವೀಳಯವನ್ನು ಕೊಡಿಸುತ್ತೇನೆ ಅದುವರೆಗೆ ಅವನನ್ನು ಕಳ್ಳನೆಂದು ಕರೆಯುವುದಿಲ್ಲ" ಎಂದು ಹೇಳಿ ಆ ಜಹನಾರಾಳ ಎರಡು ಮೃದು ಹಸ್ತಗಳನ್ನೂ ತೆಗೆದು ಮುದ್ದಿಟ್ಟು ಕಣ್ಣು ಗಳಿಗೆ ಒತ್ತಿಕೊಂಡನು.

ಔರಂಗಜೇಬನು ಅಂತಃಪುರದಿಂದ ಹೊರಟನು. ಹೋಗುವಾಗ "ಶಿವಾ ಜಿಯು ಮಹಾಪುರುಷ" ಎಂದು ಅವನು ಬಾಯಿಯಲ್ಲಿ ನುಡಿಯುತ್ತಿದ್ದನು.

---

## ೧೩

ಬಿಜಾಪುರದಲ್ಲಿ ಎರಡನೇ ಆದಿಲ್‌ಷಹನು ಮೃತನಾದನು. ಅವನ ಮಗ ಸಿಕಂದರ್ ಎಂಬ ನಾಲ್ಕು ವರ್ಷಗಳ ಬಾಲಕನಿಗೆ ಪಟ್ಟಕಟ್ಟಿದರು. ಖವಾಸ್‌ಖಾನ್ ಎಂಬುವನು ರಾಜಪ್ರತಿನಿಧಿಯಾಗಿ ನೇಮಿಸಲ್ಪಟ್ಟನು. ಬಿಜಾಪುರದಲ್ಲಿ ದೊಡ್ಡ ದೊಡ್ಡ ಸರದಾರರುಗಳೆಲ್ಲರೂ ಪರಸ್ಪರ ದ್ವೇಷಾಸೂಯೆ ಗಳಿಂದ ಒಬ್ಬರ ಮೇಲೊಬ್ಬರು ಪಿತೂರಿಗಳನ್ನು ನಡೆಸುತ್ತಾ ಕಚ್ಚಾಡುತ್ತಿ ದ್ದರು. ರಾಜ ಮಹಲಿನಲ್ಲಿದ್ದ ಬೇಗಂ ಸಾಹೇಬಾಳು ಅತ್ಯಂತ ಚತುರೆ. ಅವಳು ಸಿಕಂದರ್‌ನ ಸಾಕ್ಷಾತ್ ತಾಯಿಯಲ್ಲದಿದ್ದರೂ ಆ ಚಿಕ್ಕ ಸುಲ್ತಾನ ನನ್ನು ವಿಶೇಷ ಪ್ರೇಮದಿಂದ ನೋಡಿಕೊಳ್ಳುತ್ತಿದ್ದಳು. ಅವಳ ಹೆಸರು ಸುರಮಾ ಬೇಗಂ. ಅವಳು ತುರ್ಕೀದೇಶದಿಂದಲೇ ಬಂದಿದ್ದ ರಾಣಿ. ಆದಿಲ್ ಷಹನನ್ನು ಒಲಿದು ಬಂದವಳಲ್ಲದಿದ್ದರೂ ಮಂತ್ರವಾದಿಯ ವರಪ್ರಸಾದ ದಿಂದ ರಾಣಿಯಾದವಳು. ಸುಲ್ತಾನನು ಅವಳನ್ನು ಅತ್ಯಂತ ಪ್ರೇಮದಿಂದ ಕಾಣುತ್ತಿದ್ದನು.

ಸುಲ್ತಾನನು ಸತ್ತು ಹೋಗುವಾಗ "ಮಗನಿಗೆ ಪಟ್ಟಕಟ್ಟಬೇಕು. ಆ ಬೇಗಂಸಾಹೇಬಾಳಿಗೇ ರಾಜ್ಯಾಧಿಕಾರ ವಹಿಸಬೇಕು." ಎಂದು ಹೇಳಿ ಕಾಲ ವಾಗಿದ್ದನು.

ದರ್ಬಾರಿನ ಪ್ರಮುಖ ವ್ಯಕ್ತಿಗಳೆಲ್ಲಾ ಅದನ್ನು ಸಮ್ಮತಿಸಲಿಲ್ಲ. ಅವಳು ವಿದೇಶೀಯಳೆಂಬ ಸಂಶಯ. ಇನ್ನೂ ಯುವತಿ. ಈ ಕಾರಣಗಳಿಂದ ದೊಡ್ಡ ರಾಜಬಂಧುಗಳೂ, ಮಂತ್ರಿಗಳೂ ವಿರೋಧಿಸಿದರು.




ಚಾಂದ್‌ಸಾಹೇಬಾಳು "ನನಗೆ ರಾಜ್ಯಭಾರದ ಆಸೆಯಿಲ್ಲ. ನೀವು ಬೇಕಾದ ಹಾಗೆ ಮಾಡಿಕೊಳ್ಳಿರಿ. ನಾನು ಈ ರಾಜ್ಯವನ್ನೇ ಬಿಟ್ಟು ಗೋಲ್ಕೊಂಡಕ್ಕೋ, ದೆಹಲಿಗೋ ಹೊರಟುಹೋಗುತ್ತೇನೆ" ಎಂದು ಹೇಳಿದಳು

ಅವಳನ್ನು ಹಾಗೆ ಕಳುಹಿಸುವುದೂ ಅಪಾಯವೇ. ಆದನ್ನು ಯೋಚಿಸಿ ಸುಲ್ತಾನನಿಗೆ ತಾಯಿಯಿಲ್ಲ. ನೀವು ಆ ಬಾಲಕನನ್ನು ನಿಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗನಂತೆಯೇ ನೋಡಿಕೊಳ್ಳುತ್ತೀರಿ ನೀವು ಇಲ್ಲಿಯೇ ಇರಬೇಕು. ಈ ಅರಮನೆಯ ಅಧಿಕಾರವೆಲ್ಲಾ ನಿಮ್ಮದೇ ಇರುತ್ತದೆ. ರಾಜ್ಯಭಾರವನ್ನು ನಾಲ್ಕುಜನ ಸಮರ್ಥರಾದ ಅಧಿಕಾರಿಗಳು ನಿರ್ವಹಿಸಲಿ" ಎಂದು ತೀರ್ಮಾನ ಮಾಡಿದರು.

ರಾಜ್ಯದ ಹಿರಿಯರೆಲ್ಲರೂ ಸೇರಿ ಖವಾಸ್‌ಖಾನ್, ಅಬ್ದುಲ್ ಮಹಮದ್, ಮುಜಾಫರ್‌ಖಾನ್ ಬೊಲಾಲ್‌ಖಾನ್ ಈ ನಾಲ್ವರನ್ನೂ ಸೇರಿಸಿ "ಈ ನಾಲ್ವರು ಸೇನಾಧಿಪತಿಗಳು ರಾಜ್ಯಭಾರ ನಡೆಸತಕ್ಕದ್ದು. ಖವಾಸ್ ಖಾನನು ರಾಜಧಾನಿಯಲ್ಲಿದ್ದುಕೊಂಡು ಸುಲ್ತಾನನ ಪ್ರತಿನಿಧಿಯಾಗಿ ದರ್ಬಾರಿನ ಕಾರ್ಯಭಾರಗಳನ್ನೆಲ್ಲಾ ನಿರ್ವಹಿಸತಕ್ಕದ್ದು" ಎಂದು ತೀರ್ಮಾನ ಮಾಡಿದರು.

ಬಿಜಾಪುರ ರಾಜ್ಯವು ವಿಸ್ತಾರವಾಗಿದ್ದಿತು. ಆದರೆ ರಾಜ್ಯಭಾರವೆಲ್ಲಾ ಸಡಿಲವಾಗಿ ಹೋಗಿದ್ದಿತು. ಈ ದೊಡ್ಡ ದೊಡ್ಡ ಸೇನಾಧಿಪತಿಗಳು ಆಯಾ ಸ್ಥಳದಲ್ಲಿಯೇ ಹೋಗಿ ನಿಂತರೆ ರಾಜ್ಯದಲ್ಲಿ ಸುಭದ್ರತೆಯುಂಟಾಗುವುದೆಂದು ಆ ನಾಲ್ವರೂ ಆಲೋಚನೆ ಮಾಡಿದರು.

ಅಬ್ದುಲ್ ಮಹಮದ್‌ಖಾನನು ಪೂರ್ವಪ್ರಾಂತಕ್ಕೂ, ಮುಜಾಫರ್ ಖಾನನು ಕರ್ನಾಟಕ ರಾಜ್ಯಕ್ಕೂ, ಬೋಲ್‌ಖಾನನು ಪಶ್ಚಿಮಕ್ಕೂ ಹೊರಟು ಹೋದರು.

ಖವಾಸ್‌ಖಾನನು ರಾಜಧಾನಿಯಲ್ಲಿಯೇ ಬೇರೂರಿ ನಿಂತನು.

ಆ ದೊಡ್ಡ ಸರದಾರರುಗಳು ಆಯಾ ಪ್ರಾಂತಗಳಿಗೆ ಹೋಗುತ್ತಲೇ ಆಯಾ ಪ್ರಾಂತಗಳಲ್ಲಿದ್ದ ಕಿಲ್ಲೇದಾರರು ಮತ್ತು ಫೌಜುದಾರರುಗಳಿಗೂ, ಅವರುಗಳಿಗೂ ತಿಕ್ಕಾಟಕ್ಕೆ ಆರಂಭವಾಯಿತು. ಖವಾಸ್‌ಖಾನನು ಆಯಾ ಪ್ರದೇಶಗಳಲ್ಲಿದ್ದ ಸುಲ್ತಾನರ ಕೋಟೆಗಳ ಮೇಲಿನ ಅಧಿಕಾರವನ್ನು ಅವರುಗಳಿಗೆ ಕೊಡಲಾಗುವುದಿಲ್ಲವೆಂದು ನಿರಾಕರಿಸಿದನು.

ಅವರೆಲ್ಲರೂ ಖವಾಸ್‌ಖಾನನ ವಿರುದ್ಧ ತಿರುಗಿಬಿದ್ದರು. ಏನೂ ಫಲವಾಗಲಿಲ್ಲ. ಆದರೆ ದರ್ಬಾರಿನಲ್ಲೆಲ್ಲಾ ಗೊಂದಲಕ್ಕೆ ಆರಂಭವಾಯಿತು. ಖವಾಸ್‌ಖಾನನ ಆಜ್ಞೆಯನ್ನು ಎಲ್ಲರೂ ತಿರಸ್ಕರಿಸಲಾರಂಭಿಸಿದರು. ಇಂಥ ಪ್ರಸಂಗದಲ್ಲಿ ರಾಜ್ಯದಲ್ಲೆಲ್ಲಾ ಒಂದು ವಿಧವಾಗಿ ಅರಾಜಕತೆಯೇ ಪ್ರಾಪ್ತವಾದಂತಾಯಿತು

ಬಿಜಾಪುರದ ಸುಲ್ತಾನನಿಗೂ ಶಿವಾಜಿಗೂ ಸಂಧಿಯಾಗಿತ್ತು. ಶಿವಾಜಿಯ ಕಡೆ ರಾಯಭಾರಿ ಬಾಜಾಜೀ ನಾಯಕ್ ಪಂಡ್ರೆಯೆಂಬುವನು ದರ್ಬಾರಿನ ವಿಚಾರಗಳನ್ನೆಲ್ಲಾ ಶಿವಾಜಿಗೆ ಗುಪ್ತವಾಗಿ ಬರೆದು ಕಳುಹಿಸಿದನು. ರಾಜ್ಯದ ಅರಾಜಕತ್ವ ಸ್ಥಿತಿಯನ್ನು ಬರೆದಿದ್ದನು.

ಖವಾಸ್‌ಖಾನನು ದುರ್ಬಲನೆಂದೂ, ಸುರನಾ ಬೇಗಂಸಾಹೇಬಾಳ ಆಧಿಪತ್ಯವೇ ನಡೆಯುತ್ತಿದೆಯೆಂದೂ ವಿವರಿಸಿದ್ದನು.

ಶಿವಾಜಿಯು ಈ ಸಮಾಚಾರ ಬರುತ್ತಲೇ ತನ್ನ ಸೇನಾಧಿಪತಿಗಳನ್ನು ಕಲೆತು ಆಲೋಚನೆ ಮಾಡಿದನು.

“ನಾವು ಈ ಸಮಯವನ್ನು ಬಿಡಬಾರದು ಬಿಜಾಪುರದವರ ಮೇಲೆ ಯುದ್ಧ ಮಾಡಬೇಕು. ಪಶ್ಚಿಮದ ಕಡೆ ಇರುವ ಕೋಟೆಗಳನ್ನು ವಶಪಡಿಸಿಕೊಳ್ಳಬೇಕು. ಬಿಜಾಪುರದ ರಾಜ್ಯದಲ್ಲಿಯೂ ಆದಷ್ಟು ದೂರ ಆಕ್ರಮಣ ಮಾಡಬೇಕು. ಬಿಜಾಪುರದ ದರ್ಬಾರು ದುರ್ಬಲವಾಗಿದೆ. ಅವರಲ್ಲಿ ಹೇರಳವಾಗಿ ಧನಸಂಪತ್ತಿದೆ. ಆದಷ್ಟು ವಸೂಲುಮಾಡಿ ಕೊಂಡು ಬರಬೇಕು” ಎಂದು ತೀರ್ಮಾನ ಮಾಡಿಕೊಂಡರು.

ಪ್ರತಾಪರಾಯನೂ ಆನಂದರಾಯನೂ ಸೈನ್ಯವನ್ನು ತೆಗೆದುಕೊಂಡು ಮೊಟ್ಟಮೊದಲು ರತ್ನಗಿರಿಗೆ ಮುತ್ತಿಗೆ ಹಾಕಿದರು. ರತ್ನಗಿರಿಯು ಮರಾಠರ ವಶವಾಯಿತು. ಮರಾಠರು ಅದೊಂದು ದೊಡ್ಡ ಲಾಭವೆಂದು ಭಾವಿಸಿದರು. ಏಕೆಂದರೆ ಪಶ್ಚಿಮ ತೀರವನ್ನೆಲ್ಲಾ ಆಕ್ರಮಣ ಮಾಡಲು ರತ್ನಗಿರಿಯು ಆಯಕಟ್ಟಿನ ಸ್ಥಳ. ಅದು ಶುದ್ಧ ಮರಾಠರ ಭೂಮಿ. ಮರಾಠರು ಅದನ್ನು ವಶಪಡಿಸಿಕೊಂಡರೂ ಆ ಪ್ರಾಂತದ ಬಿಜಾಪುರ ದರ್ಬಾರಿನ ಸರ್ ಸುಬೇದಾರನಾಗಿದ್ದ ಬೊಲಾಲ್‌ಖಾನನು ಉಪೇಕ್ಷೆಯಿಂದ ಸುಮ್ಮನಿದ್ದನು.

ಮರಾಠಾ ಸರದಾರರಿಗೆ ಪನ್ಹಾಲಾದ ಮೇಲೆ ಕಣ್ಣಿತ್ತು. ಪನ್ಹಾಲಾವನ್ನು ಹಿಡಿದುಬಿಟ್ಟರೆ ಬಿಜಾಪುರದ ರಾಜ್ಯದ ಕಡೆಯಿಂದ ಮಹಾರಾಷ್ಟ್ರಕ್ಕೆ

ಬರುವ ಹೆಬ್ಬಾಗಿಲು ಮಹಾರಾಷ್ಟ್ರರ ಅಧೀನವಾಗುತ್ತದೆ. ಶಿವಾಜಿಯು ಈ ಕೋಟೆಯನ್ನು ಸದ್ದಿಲ್ಲದೆ ಉಪಾಯದಿಂದ ವಶಪಡಿಸಿಕೊಳ್ಳಬೇಕೆಂದು ಸೇನಾಧಿಪತಿಗಳಿಗೆ ಸೂಚನೆಯಿತ್ತನು.

ಅಣ್ಣಾಜೀರಾಯನು ಸೈನ್ಯಸಮೇತನಾಗಿ ಪನ್ಹಾಲಾದ ದುರ್ಗವನ್ನು ಹಿಡಿಯಲು ಹೊರಟನು. ರತ್ನಗಿರಿಯ ಕಾಡುಗಳಲ್ಲಿ ಈ ಸೈನ್ಯಗಳು ಅಡಗಿಕೊಂಡಿದ್ದವು.

ಖಂಡೋಜೀ ಎಂಬ ದಳಪತಿಯು ಎಂಥ ಕೋಟೆಯನ್ನಾದರೂ ಕ್ಷಣದಲ್ಲಿ ಹತ್ತಿ ಹೋಗುವಂಥ ಸಾಹಸಿಯೆಂದು ಮಹಾರಾಷ್ಟ್ರ ಸೈನ್ಯದಲ್ಲೆಲ್ಲಾ ಪ್ರಸಿದ್ಧವಾಗಿತ್ತು. ಖಂಡೋಜಿಯು ಅರವತ್ತು ಜನ ತನ್ನ ಸಂಗಡಿಗರಾದ ಮಾಳವರನ್ನು ಕರೆದುಕೊಂಡು ಕತ್ತಲೆಯ ವೇಳೆಯಲ್ಲಿ ಪನ್ಹಾಲಾ ದುರ್ಗದ ಸಮೀಪಕ್ಕೆ ಹೋಗಿ ಸೇರಿದನು. ಹೊರಗಡೆ ಕಾವಲುಗಾರರಿಗೆ ಕೂಡಾ ಈ ಸುಳಿವು ಸಿಕ್ಕಲಿಲ್ಲ. ಖಂಡೋಜಿಯು ದುರ್ಗವನ್ನು ಹತ್ತುವ ನಿಚ್ಚಣಿಕೆಗಳನ್ನು ಕೋಟೆಗೆ ಕಟ್ಟಿ ತನ್ನ ಕಡೆಯವರನ್ನು ಒಬ್ಬೊಬ್ಬರನ್ನಾಗಿ ಮೇಲಕ್ಕೆ ಕರೆದುಕೊಂಡು ಶಸ್ತ್ರಗಳನ್ನು ಗುಟ್ಟಾಗಿಟ್ಟುಕೊಂಡು ಫೌಜುದಾರನ ಮನೆಯ ಹಿಂದುಗಡೆ ಹೋಗಿ ಸೇರಿದನು. ಖಂಡೋಜಿಯು ಫೌಜುದಾರನ ಶಯನ ಗೃಹವನ್ನು ಹೊಕ್ಕು ಅವನನ್ನು ನಿರಾತಂಕವಾಗಿ ಕೊಂದುಹಾಕಿ ಮಾಯವಾದನು. ಪಹರೆಯವರು ಸತ್ತುಬಿದ್ದಿದ್ದ ಫೌಜುದಾರನನ್ನು ನೋಡಿ ಗಾಬರಿಯಿಂದ ಕೂಗಿಕೊಂಡರು. ಅಷ್ಟರಲ್ಲಿ ಖಂಡೋಜಿಯು ಕೋಟೆಯ ಮೇಲಿನಿಂದ ಜಯಭೇರಿಯನ್ನು ಬಾರಿಸಿದನು. ಮುಸಲ್ಮಾನ್ ಸೈನಿಕರೆಲ್ಲರೂ ಗಾಬರಿಯಿಂದ ಅತ್ತಿಂದಿತ್ತ ಅಲೆದಾಡುತ್ತಿದ್ದರು. ಕೋಟೆಯ ಹೆಬ್ಬಾಗಿಲಿನಿಂದ ಅಣ್ಣಾಜಿಯ ಸೈನ್ಯಗಳು ತಂಡತಂಡವಾಗಿ ನುಗ್ಗಿಬಂದವು. ಮುಸಲ್ಮಾನ್ ಸೈನಿಕರನ್ನೆಲ್ಲಾ ಹೊಡೆದುಹಾಕಿದರು. ಕೋಟೆಯ ಸುಬೇದಾರ ನಾಗೋಜೀ ಪಂತನು ವೇಷಮರೆಸಿಕೊಂಡು ತಲೆತಪ್ಪಿಸಿಕೊಂಡು ಕೋಟೆಯಿಂದ ಓಡಿಹೋದನು. ಮರಾಠಾ ಸೈನಿಕರು ಆ ಕೋಟೆಯೊಳಗಿದ್ದ ಬಿಜಾಪುರೀ ಅಧಿಕಾರಿಗಳನ್ನೆಲ್ಲಾ ಸೆರೆಹಿಡಿದರು. ಅವರುಗಳನ್ನು ಕಶೆಗಳಿಂದ ಹೊಡೆದು 'ಹಣವನ್ನು ಎಲ್ಲಿ ಮುಚ್ಚಿಟ್ಟಿದ್ದೀರಿ ? ತೋರಿಸಿ ?' ಎಂದು ಹಿಂಸೆಪಡಿಸಿದರು. ಅವರ ಗುಪ್ತ ನಿಧಿಗಳೆಲ್ಲಾ ಬಯಲಾದುವು. ಮರಾಠರು

ಮನೆಗಳನ್ನು ಅಗೆದು ಆ ಗುಪ್ತನಿಧಿಗಳನ್ನು ವಶಪಡಿಸಿಕೊಂಡರು.

ಈ ವಾರ್ತೆಯನ್ನು ಕೇಳಿ ಶಿವಾಜಿಯು ಸಂತೋಷದಿಂದ ಅಲ್ಲಿಗೆ ಬಂದು ಸೇರಿದನು. ಆ ಕೋಟೆಯು ಸುಲಭವಾಗಿ ಸ್ವಾಧೀನವಾದುದನ್ನು ಕಂಡು ಅತ್ಯಾನಂದಭರಿತನಾದನು.

ಖಂಡೋಜಿಗೆ ಹೇರಳವಾದ ಬಹುಮಾನಗಳನ್ನು ಇತ್ತನು. ಅಲ್ಲಿ ಸೆರೆ ಸಿಕ್ಕಿದ್ದ ಬಿಜಾಪುರೀ ಅಧಿಕಾರಿಗಳನ್ನೆಲ್ಲಾ ಸಂಸಾರ ಸಮೇತ ಬಿಜಾಪುರ ರಾಜ್ಯಕ್ಕೆ ಹೊರಟುಹೋಗುವಂತೆ ಅಪ್ಪಣೆ ಇತ್ತನು. ಶಿವಾಜಿಯು ಒಂದು ತಿಂಗಳಕಾಲ ಅಲ್ಲಿ ಬಿಡಾರ ಮಾಡಿದನು. ತನ್ನ ಖಾಸ್ ವಾಸಕ್ಕಾಗಿ ಒಂದು ಚಿಕ್ಕ ಅರಮನೆಯನ್ನು ನಿರ್ಮಾಣ ಮಾಡಿಸಿದನು. ಕೋಟೆ ಕೊತ್ತಲುಗಳೆಲ್ಲಾ ದುರಸ್ತು ಮಾಡಲ್ಪಟ್ಟವು. ಕೋಟೆಯ ಮೇಲುಗಡೆ ನಾಲ್ಕು ದಿಶೆಗಳಲ್ಲಿ ಭಗವಾಧ್ವಜವು ಹಾರಾಡುತ್ತಿದ್ದಿತು.

ರತ್ನಗಿರಿ ಮತ್ತು ಪನ್ಹಾಲಾಗಳು ಮರಾಠರ ವಶವಾದ ವಾರ್ತೆ ಬಿಜಾಪುರಕ್ಕೆ ತಲುಪಿತು. ಖವಾಸ್ ಖಾನನು ಮಂತ್ರಿಗಳೊಡನೆ ಏನು ಮಾಡಬೇಕೆಂದು ಆಲೋಚನೆ ಮಾಡಿದನು. "ದೊಡ್ಡ ದೊಡ್ಡ ಸೇನಾಧಿಪತಿಗಳೆಲ್ಲಾ ವಿಮುಖರಾಗಿದ್ದಾರೆ. ಯುದ್ಧಮಾಡುವುದಂತೂ ಅಸಂಭಾವಿತ. ರಾಜೀ ಮಾಡಿಕೊಳ್ಳಬೇಕು" ಎಂದು ನಿರ್ಧಾರವಾಯಿತು.

ಖವಾಸ್‌ಖಾನನು ರಾಜಿಯನ್ನು ಪ್ರಾರ್ಥನೆಮಾಡಿ ಶಿವಾಜಿಯ ಸಮೀಪಕ್ಕೆ ರಾಯಭಾರಿಗಳನ್ನು ಕಳುಹಿಸಿಕೊಟ್ಟನು.

ಅಂತಃಪುರದಲ್ಲಿ ಸುರಮಾಬೇಗಂ ಇದನ್ನೆಲ್ಲಾ ಕೇಳಿದಳು. ಅರಮನೆಯ ಭಕ್ಷಿ ಫಿರೋಜ್‌ಖಾನನು ಸರ್ವಾಧಿಕಾರಿಯಾಗಿದ್ದನು. ಅವನು ತರುಣ, ಬುದ್ಧಿವಂತ, ಅತ್ಯಂತ ಸಮರ್ಥನೂ ಆಗಿದ್ದನು. ಬೇಗಂ ಸಾಹೇಬಾಳ ಪೂರ್ಣಾನುಗ್ರಹವು ಅವನ ಮೇಲಿತ್ತು. ಅವನು ಬೇಗಂ ಸಾಹೇಬಾಳಿಗೆ ಈ ಸಮಾಚಾರಗಳನ್ನೆಲ್ಲಾ ತಿಳಿಸಿದನು.

"ಏಕೆ, ಫಿರೋಜ್. ಖವಾಸ್‌ಖಾನನ ರಾಜೀ ಪ್ರಯತ್ನವನ್ನು ನೀನೊಪ್ಪಿದಂತೆ ಇಲ್ಲ. ಅದಕ್ಕೆ ಏನು ಪ್ರತೀಕಾರ ಮಾಡಬೇಕೆನ್ನುವೆ?" ಎಂದು ಕೇಳಿದಳು.

ಫಿರೋಜ್‌ನು "ಈ ಉಪಾಯಗಳೆಲ್ಲಾ ಆ ಶಿವಾಜಿಯೊಡನೆ ಫಲಿಸುವು

ದಿಲ್ಲ. ಯುದ್ಧ ಮಾಡಬೇಕು. ಯುದ್ಧ ಮಾಡಲು ನಮ್ಮಲ್ಲಿ ಬೇಕಾದಷ್ಟು ಸೈನ್ಯಗಳಿವೆ" ಎಂದನು.

ಬೇಗಂಸಾಹೇಬಾಳು "ಸೇನಾಧಿಪತಿಗಳೆಲ್ಲಾ ವಿಮುಖರಾಗಿದ್ದಾರೆಂದು ಕೇಳಿದ್ದೇನೆ" ಎಂದು ಅರ್ಥೋಕ್ತಿಯಲ್ಲಿ ನುಡಿದಳು.

ಫಿರೋಜ್‌ಖಾನನು "ಬೇಗಂಸಾಹೇಬಾ, ಸೇನಾಧಿಪತಿಗಳು ಸುಮುಖರಾಗಿರಲಿ, ವಿಮುಖರಾಗಿರಲಿ. ಈ ಆದಿಲ್‌ಷಾಹಿಯು ಮುಕ್ತಾಯವಾಗುವ ಕಾಲ ಬಂದಿದೆಯೆಂದು ಕಾಣುತ್ತದೆ. ನಮ್ಮಂಥವರು ಕಣ್ಣಾರೆ ನೋಡುತ್ತಾ ಸುಮ್ಮನಿರಲಾಗುತ್ತದೆಯೇ ? ನಾನು ಯುದ್ಧ ಮಾಡುತ್ತೇನೆ" ಎಂದು ಎದೆ ತಟ್ಟಿ ಹೇಳಿದನು.

ಬೇಗಂಸಾಹೇಬಾಳ ಇಷ್ಟದಂತೆ ಖವಾಸ್‌ಖಾನನು ಅಂತಃಪುರಕ್ಕೆ ಬಂದು ಭೇಟಿ ಮಾಡಿದನು. ಅರಮನೆಯ ಭಕ್ಷಿ ಫಿರೋಜ್‌ಖಾನನು ಜೊತೆಯಲ್ಲಿಯೇ ಇದ್ದನು.

"ಪನ್ಹಾಲ ಕೋಟೆಯು ನಮ್ಮ ಗಡಿ ಪ್ರದೇಶದಲ್ಲಿ ಅತಿ ಮುಖ್ಯವಾದ ಕೋಟೆ. ಆ ಕೋಟೆಯನ್ನು ಸದ್ಯಕ್ಕೆ ಶಿವಾಜಿಯು ಹಿಡಿದಿದ್ದಾನೆ. ದೊಡ್ಡ ಸುಲ್ತಾನರ ಕಾಲದಿಂದಲೂ ಆ ಕೋಟೆಯು ಮರಾಠರ ಕೈಗೊಮ್ಮೆ, ನಮ್ಮ ಕೈಗೊಮ್ಮೆ ಬಂದು ಹೋಗುತ್ತಲೇ ಇದೆ. ಈಗ ಶಿವಾಜಿಯ ಕೈಸೇರಿದೆ. ಮರಾಠಾ ಸೈನ್ಯಗಳು ಬಿಜಾಪುರದ ಕಡೆಗೆ ಬರುತ್ತಿವೆಯೆಂದು ದೂತರು ಸಮಾಚಾರ ತಂದಿದ್ದಾರೆ" ಎಂದು ಅರಿಕೆ ಮಾಡಿದನು.

ಬೇಗಂಸಾಹೇಬಾಳು "ಬೊಲಾಲ್‌ಖಾನರು ಆ ಪ್ರಾಂತ್ಯದಲ್ಲಿಯೇ ಇದ್ದಾರೆಂದು ಕೇಳಿದ್ದೇವೆ. ಅವರೇನು ಮಾಡುತ್ತಿದ್ದಾರೆ?"

"ಅವರು ಏನೂ ಮಾಡಿದಂತೆ ಕಾಣುವುದಿಲ್ಲ."

"ಅಂತಹ ವೀರ ಸೇನಾಧಿಪತಿಗಳಿದ್ದು ಅವರು ಹಾಗಿರುವುದು ಆಶ್ಚರ್ಯವಾಗಿದೆ."

"ಇಲ್ಲ, ಬೇಗಂಸಾಹೇಬಾ. ಅವರುನಮ್ಮ ದರ್ಬಾರಿನ ವಿಷಯದಲ್ಲಿ ವಿಮುಖರಾಗಿಯೇ ಇದ್ದಾರೆ."

"ಶಿವಾಜಿಯು ನಮ್ಮ ಮೇಲೆ ಯುದ್ಧಕ್ಕೆ ಬರುತ್ತಿದಾನೆ. ಅತ್ತಕಡೆ ಇರುವ ಸೇನಾಧಿಪತಿಯು ವಿಮುಖನಾಗಿದ್ದಾನೆ. ನೀವೇನು ಮಾಡಬೇಕೆಂದಿದ್ದೀರಿ?"

"ಶಿವಾಜಿಗೂ ನಮಗೂ ದೊಡ್ಡ ಸುಲ್ತಾನರ ಕಾಲದಲ್ಲಿಯೇ ಸಂಧಿಯಾಗಿದೆ. ಅದೇ ಸಂಧಿಯನ್ನು ಮುಂದಿಟ್ಟು ರಾಜಿಗೆ ಹೇಳಿ ಕಳುಹಿಸಿದ್ದೇನೆ."

"ರಾಜಿ ಮಾಡಿಕೊಂಡರೆ ಪನ್ಹಾಲಾ ಕೋಟೆಯನ್ನು ಶಿವಾಜಿಯು ನಮಗೆ ಬಿಟ್ಟು ಕೊಡುತ್ತಾನೆಯೋ?"

"ಇಲ್ಲ ಹುಜೂರ್, ಪನ್ಹಾಲಾ ಕೋಟೆಯು ಅವನಿಗೇ ಉಳಿಯುತ್ತದೆ."

ಬೇಗಂಸಾಹೇಬಳು ತಲೆಯನ್ನಲ್ಲಾಡಿಸಿ "ಅದು ಅಷ್ಟು ಸಮರ್ಪಕವಾಗುವುದಿಲ್ಲ. ಯುದ್ಧ ಮಾಡುವುದೇ ಒಳ್ಳೆಯದೆಂದು ಕಾಣುತ್ತದೆ" ಎಂದಳು.

"ಬೇಗಂಸಾಹೇಬಾ, ಸಾವಧಾನದಿಂದ ಕೇಳಬೇಕು. ಬೇಕಾದರೆ ಮಂತ್ರಿಗಳನ್ನೂ, ಉಮ್ರಾಗಳನ್ನೂ ಕರೆಯಿಸಿ ಕೇಳೋಣವಾಗಲಿ. ಈಗ ಸೇನಾಧಿಪತಿಗಳೆಲ್ಲರೂ ವಿಮುಖರಾಗಿದ್ದಾರೆ. ಬೋಲಾಲ್‌ಖಾನ್, ಅಬ್ದುಲ್ ಮಹಮ್ಮದ್ ಮತ್ತು ಮುಜಫರ್‌ಖಾನ್‌ಗಳು ಬಿಗಡಾಯಿಸಿದ್ದಾರೆ. ದೊಡ್ಡ ದೊಡ್ಡ ಸೇನಾಧಿಪತಿಗಳೇ ಇಲ್ಲದಿದ್ದ ಮೇಲೆ ಯುದ್ಧ ಮಾಡುವುದು ಮೂರ್ಖತನ."

"ನಿಮ್ಮ ರಾಜಿಯನ್ನು ಶಿವಾಜಿಯು ಒಪ್ಪದೆ ಬಿಜಾಪುರಕ್ಕೆ ಮುತ್ತಿಗೆ ಹಾಕಿದರೆ ಆಗ ನೀವೇನು ಮಾಡುತ್ತೀರಿ?"

"ಆಗ ಯುದ್ಧ ಮಾಡಲೇ ಬೇಕಾಗುತ್ತದೆ. ಮೊಗಲರ ಸಹಾಯವನ್ನು ಪಡೆಯುವುದಕ್ಕೆ ಏರ್ಪಾಡು ಮಾಡುತ್ತಿದ್ದೇನೆ. ಬಿಜಾಪುರದ ಕೋಟೆಯನ್ನು ಮುತ್ತುವಷ್ಟು ಧೈರ್ಯವು ಶಿವಾಜಿಗೂ ಇಲ್ಲ."

"ನಮಗೆ ಯುದ್ಧ ಮಾಡುವ ಸಾಮರ್ಥ್ಯವಿಲ್ಲವೆಂದು ತಿಳಿದರೆ ಇಲ್ಲದಿದ್ದರೆ ನಾಳೆಯಾದರೂ ಬಿಜಾಪುರದ ಕೋಟೆಯನ್ನು ಶಿವಾಜಿ [illegible] ಕೊಳ್ಳದೆ ಬಿಡನು. ಈಗಲೇ ಯುದ್ಧ ಮಾಡಬೇಕು. ಬೋಲಾಲ್‌ಖಾನನನ್ನು ಕರೆಸಿರಿ. ರಾಜಿಯನ್ನು ನಾನು ಒಪ್ಪುವುದಿಲ್ಲ. ಯುದ್ಧಕ್ಕೆ ನಾನೇ ಏರ್ಪಾಡು ಮಾಡುತ್ತೇನೆ."

೧೪

ನಾಲ್ಕು ದಿನಗಳೊಳಗಾಗಿ ಬೋಲಾಲ್‌ಖಾನನು ಬೇಗಂ ಸಾಹೇಬಾಳ ಭೇಟಿ ಮಾಡಿದನು. ಬೇಗಂ ಸಾಹೇಬಳು ಅವನನ್ನು ಸೌಜನ್ಯದಿಂದ "ಪಶ್ಚಿಮದ ಕಡೆ ಪನ್ಹಾಲಾ ಕೋಟೆಯು ಕೈಬಿಟ್ಟು ಹೋಗಿದೆಯಂತೆ" ಎಂದು ಮಾತೆತ್ತಿದಳು.

ಬೊಲಾಲ್ ಖಾನನು ಸಲಾಂ ಮಾಡಿ "ಬೇಗಂ ಸಾಹೇಬಾ, ಸುಲ್ತಾನರ ಕೋಟೆಗಳ ಮೇಲೆ ನಿಮಗೆ ಅಧಿಕಾರವಿಲ್ಲವೆಂದು ದರ್ಬಾರಿನಿಂದ ಖವಾಸ್ ಖಾನನು ಅಪ್ಪಣೆ ಕೊಡಿಸಿದ್ದಾರೆ. ಆದುದರಿಂದ ಕೋಟೆಯ ರಕ್ಷಣೆಯೂ ಅವರಿಗೇ ಸೇರಿದ್ದು. ನಾವೇನು ಮಾಡಲಾದೀತು?"

"ಬೊಲಾಲ್ ಖಾನರೇ ಸುಲ್ತಾನೀ ರಾಜ್ಯವು ಹಾಳಾಗಿ ಹೋಗುತ್ತಿರುವಾಗ ನಿಮ್ಮಂಥ ಮಹಾ ಸೇನಾಧಿಪತಿಗಳು ನೋಡುತ್ತಾ ಕುಳಿತಿದ್ದರೆ ನಾನೇನು ಮಾಡಲಾದೀತು? ನಿಮ್ಮ ಇಷ್ಟ ಬಂದಂತೆ ಮಾಡಿರಿ. ದೇವರು ನೋಡುತ್ತಾನೆ" ಎಂದು ಕಣ್ಣೀರಿಡುತ್ತಾ ಹೇಳಿದಳು.

"ಬೇಗಂ ಸಾಹೆಬಾ, ನಾವು ಯುದ್ಧ ಮಾಡುವುದಕ್ಕಾಗಿಯೇ ಹುಟ್ಟಿದ್ದೇವೆ. ತಮ್ಮ ಅಪ್ಪಣೆಯಂತೆ ಯುದ್ಧ ಮಾಡುತ್ತೇವೆ. ಈ ಖವಾಸ್ ಖಾನರು ಅಧಿಕಾರಕ್ಕೆ ಬಂದಂದಿನಿಂದ ಸುಳ್ಳು, ಮೋಸ, ವಂಚನೆಗಳಿಂದಲೇ ಕಾಲ ಕಳೆಯುತ್ತಿದ್ದಾರೆ. ಇಂತಹವರಿದ್ದರೆ ಈ ರಾಜ್ಯ ಉಳಿದೀತೇ, ಬೇಗಂ ಸಾಹೇಬಾ? ನಾನು ಯುದ್ಧ ಮಾಡುತ್ತೇನೆ. ಮರಾಠರು ಬಹುದೂರದಲ್ಲಿಲ್ಲ. ಇಲ್ಲಿಗೆ ನಲವತ್ತೇ ಮೈಲಿಗಳಲ್ಲಿ ಬರುತ್ತಿದ್ದಾರೆ. ನನಗೆ ಅಪ್ಪಣೆ ಕೊಡಿರಿ ನಾನು ಯುದ್ಧಕ್ಕೆ ಹೋಗುತ್ತೇನೆ" ಎಂದು ಹೇಳಿ ಅರಮನೆಯಿಂದ ಹೊರಟನು.

ಬೇಗಂ ಸಾಹೇಬಾಳು ಸೇನಾಧಿಪತಿಗಳಾದ ಅಬ್ದುಲ್ ಮಹಮ್ಮದ್, ಮುಜಾಫರ್ ಖಾನ್ ಮತ್ತು ಸರ್ಜಾಖಾನ್ ಇವರುಗಳನ್ನು ಸೈನ್ಯಸಮೇತ ಬಂದು ಬೊಲಾಲ್ ಖಾನನಿಗೆ ಸಹಾಯ ಮಾಡಬೇಕೆಂದು ಹೇಳಿ ಕಳುಹಿಸಿದಳು.

ಆ ಸೈನ್ಯಗಳು ಬೊಲಾಲ್ ಖಾನನೊಡನೆ ಬಂದು ಸೇರಿಕೊಳ್ಳುವಷ್ಟರಲ್ಲಿ ಬೊಲಾಲ್ ಖಾನನನ್ನು ಹೊಡೆದು ಓಡಿಸಬೇಕೆಂದು ಶಿವಾಜಿಯು ಪ್ರತಾಪ ರಾಯನನ್ನೂ, ಆನಂದರಾಯನನ್ನೂ ಹದಿನೈದು ಸಾವಿರ ಸೈನ್ಯದೊಡನೆ ಕಳುಹಿಸಿಕೊಟ್ಟನು. ಮರಾಠರ ಯುದ್ಧ ತಂತ್ರವೇ ಹಾಗೆ. ಚಾಪಲನೆಯ ಪಟ್ಟು ಭಯಂಕರವಾಗಿರುತ್ತಿತ್ತು. ಆ ಮರಾಠ ಸೇನಾಧಿಪತಿಗಳು ಇಬ್ಬರೂ ತರಾತುರಿಯಾಗಿ ಸೈನ್ಯವನ್ನು ನಡೆಸಿಕೊಂಡು ಬಂದು ಉಮ್ರಾಣಿಯಲ್ಲಿದ್ದ ಬೊಲಾಲ್ ಖಾನನ ಸೈನ್ಯದ ಮೇಲೆ ಏಕಾಏಕೀ ಆಕ್ರಮಣ ಮಾಡಿದರು. ಮರಾಠಾ ಸೈನ್ಯದ ಉಮ್ರಾಣಿಯ ಸುತ್ತಲೂ ಆಕ್ರಮಣ ಮಾಡಿ ಬೆಳಗಾಗುವುದರೊಳಗೆ ಬೊಲಾಲ್ ಖಾನನ ಸೈನ್ಯಕ್ಕೆ ನೀರು ದೊರೆಯುವಂತೆ ಜಲ ಮಾರ್ಗಗಳನ್ನೆಲ್ಲಾ ಕತ್ತರಿಸಿ ಹಾಕಿದರು.

ಬೆಳಕು ಹರಿಯುತ್ತಲೇ ಬೆಹಲೋಲ್‌ಖಾನನ ಸೈನ್ಯಕ್ಕೂ ಮರಾಠ ಸೈನ್ಯಕ್ಕೂ ಯುದ್ಧವು ಆರಂಭವಾಯಿತು. ಮಧ್ಯಾಹ್ನದ ಸಮಯಕ್ಕೆ ರಣರಂಗವು ಘೋರ ರೂಪವನ್ನು ತಳೆದಿತ್ತು. ಬಿಜಾಪುರೀ ಸೈನಿಕರು ಬಿಸಿಲಿನ ಬೇಗೆಗೆ ಸುಸ್ತಾಗಿ ಹಿಮ್ಮೆಟ್ಟಿದರು. ಬೆಹಲೋಲ್‌ಖಾನನ ಶಿಬಿರದಲ್ಲೆಲ್ಲ ಬಾಯಾರಿಕೆಯ ಹಾಹಾಕಾರವೆದ್ದಿತು. ಸೈನಿಕರು ಸುತ್ತಲೂ ನೀರಿಗಾಗಿ ಅಲೆದು ಬೇಸತ್ತು ಬಿದ್ದರು. ಅಫ್ಘನ್ ಸೈನಿಕರು ಎದೆಗುಂದದೆ ಮುಂದುವರೆದು ಯುದ್ಧ ಮಾಡಿದರು. ಎಷ್ಟು ಹೊತ್ತು ತಾನೇ ನಡೆದೀತು! ಮೇಲೆ ಪ್ರಖರವಾದ ಬಿಸಿಲಿನ ತಾಪ. ಒಳಗೆ ದಾಹ. ಇಂತಹ ಪರಿಸ್ಥಿತಿಯಲ್ಲಿ ಅಫ್ಘನ್ ಸೈನ್ಯಗಳು ಮೆತ್ತಗಾಗಿ ಹೋದವು. ಹಾಗೂ ಹೀಗೂ ರಾತ್ರಿಯಾಯಿತು.

ಬೆಹಲೋಲ್‌ಖಾನನು ತನ್ನ ಸರದಾರರನ್ನು ಪ್ರತಾಪರಾಯನ ಶಿಬಿರಕ್ಕೆ ಕಳುಹಿಸಿಕೊಟ್ಟನು. "ಬಿಜಾಪುರದ ದರ್ಬಾರೆಲ್ಲವೂ ಅವ್ಯವಸ್ಥೆಯಾಗಿದೆ. ನಮಗೂ ಯುದ್ಧ ಬೇಕಾಗಿಲ್ಲ. ಬೇಗಂ ಸಾಹೇಬರ ಕೋರಿಕೆಗಾಗಿ ನೆಪಮಾತ್ರಕ್ಕೆ ಯುದ್ಧಕ್ಕೆ ಬಂದಿದ್ದೇವೆ. ಈಗ ಬಿಟ್ಟುಬಿಡಿ. ನೀವೂ ನಾವೂ ಸ್ನೇಹಿತರಾಗಿರೋಣ. ನಾವು ಹೊರಟು ಹೋಗುತ್ತೇವೆ. ಮತ್ತೆ ನಿಮ್ಮೊಡನೆ ಯುದ್ಧಕ್ಕೆ ಬರುವುದಿಲ್ಲ. ಬಿಜಾಪುರದ ಮೇಲೆ ಲಕ್ಷ್ಯವಿಟ್ಟುಕೊಳ್ಳಿರಿ. ಖವಾಸ್‌ಖಾನನು ಅಂಟು-ನಂಟು" ಎಂದು ಆ ಸರದಾರರುಗಳು ಹೇಳಿದರು.

ಪ್ರತಾಪರಾಯನು ಈ ಮಾತನ್ನು ನಂಬಿ ಬೆಹಲೋಲ್‌ಖಾನನಿಗೆ ಓಡಿಹೋಗಲು ದಾರಿ ಬಿಟ್ಟುಕೊಟ್ಟನು. ಬೆಹಲೋಲ್‌ಖಾನನು ಉಳಿದಿದ್ದ ಸೈನ್ಯ ಸಮೇತ ತಿಕೋಟಾ ಕೋಟೆಗೆ ಹೋಗಿ ಅಲ್ಲಿ ತನ್ನ ಸೈನ್ಯದೊಡನೆ ಸೇರಿಕೊಂಡನು.

ಬೆಹಲೋಲ್‌ಖಾನನು ತನ್ನ ಸೈನ್ಯವನ್ನು ತೆಗೆದುಕೊಂಡು ಹೊರಗೆ ಕೊಲ್ಹಾಪುರದ ಕಡೆ ಹಾಕಿ ಸುತ್ತಮುತ್ತಲಿನ ಮರಾಠರನ್ನು ಓಡಿಸಲು ಆರಂಭಿಸಿದನು. ಪ್ರತಾಪರಾಯನು ಉತ್ತರ ಕನ್ನಡದ ಕಡೆಗೆ ನುಗ್ಗಿ ಲೂಟಿ ಮಾಡಲಾರಂಭಿಸಿದನು. ಅಲ್ಲಿ ಅವನಿಗೆ ಬಹಳ ಲೂಟಿ ಸಿಕ್ಕಿತು.

ಈ ಸಮಯದಲ್ಲಿ ಬೆಹಲೋಲ್‌ಖಾನನ ಹಾವಳಿಯು ಮರಾಠ ರಾಜ್ಯದಲ್ಲಿ ಹೆಚ್ಚಾಯಿತು. ಶಿವಾಜಿಯು ಕೋಪದಿಂದ ಪ್ರತಾಪರಾಯನಿಗೆ ಪತ್ರ ಬರೆದು ಕಳುಹಿಸಿದನು. ಅದರಲ್ಲಿ "ನೀನು ಉಮ್ರಾಣಿಯಲ್ಲಿ ಕೈಗೆ ಸಿಕ್ಕಿದ್ದ ಬೆಹಲೋಲ್‌ಖಾನನನ್ನು ಅವನ ಮಾತಿಗೆ ಮರುಳಾಗಿ ಬಿಟ್ಟುಬಿಟ್ಟೆ. ಈಗ

ಅವನ ಹಾವಳಿ ಹೆಚ್ಚಾಗಿದೆ. ನೀನೇ ಅವನ ಮೇಲೆ ಯುದ್ಧಮಾಡಿ ಅವನನ್ನು ನಾಶಮಾಡಿ ಬರಬೇಕು. ಇಲ್ಲದಿದ್ದರೆ ನನ್ನ ಮುಖಾವಲೋಕನ ಮಾಡಬೇಡ" ಎಂದು ಬರೆದಿತ್ತು.

ಈ ಪತ್ರವನ್ನು ನೋಡಿ ಪ್ರತಾಪರಾಯನು ಖತಿಗೊಂಡನು. ಅವನು ರೋಷಾವೇಶದಿಂದ ಸೈನ್ಯ ಸಮೇತನಾಗಿ ಬೊಲಾಲ್‌ಖಾನನನ್ನು ಅರಸಿಕೊಂಡು ಹೋದನು. ನೆಸಾರಿ ಸಮೀಪದಲ್ಲಿ ಬೊಲಾಲ್‌ಖಾನನ ಸೈನ್ಯ ಬೀಡು ಬಿಟ್ಟಿತ್ತು. ಪ್ರತಾಪರಾಯನು ಸೈನ್ಯಸಮೇತನಾಗಿ ನೆಸಾರಿಯ ಸಮೀಪಕ್ಕೆ ಹೋಗಿ ನಿಂತನು.

ಮಧ್ಯೆ ಒಂದು ದೊಡ್ಡ ಕಣಿವೆಯ ಮಾರ್ಗವಿತ್ತು. ಆ ಮಾರ್ಗದಲ್ಲಿ ಹೇಗೆ ಮುಂದುವರಿಯಬೇಕೆಂದು ಮರಾಠ ಸೈನ್ಯಗಳು ದಿಕ್ಕುಕಾಣದೆ ನಿಂತವು. ಪ್ರತಾಪರಾಯನು ಹಿಂದೆ ಮುಂದೆ ನೋಡದೆ ಏಕಾಕಿಯಾಗಿ ಆ ಕಣಿವೆಯನ್ನು ಪ್ರವೇಶಮಾಡಿದನು. ಆರು ಮಂದಿ ಸರ್ದಾರರು ಅವನ ಹಿಂದೆ ನುಗ್ಗಿದರು. ಈ ಏಳೇ ಮಂದಿ ಮುಂದೆ ಹೋದರು. ಮರಾಠ ಸೈನ್ಯಗಳು ಹಿಂದಕ್ಕುಳಿದವು. ಪ್ರತಾಪರಾಯನು ಬೊಲಾಲ್‌ಖಾನನ ಸೈನ್ಯದ ಮೇಲೆ ಬಿದ್ದನು. ಬೊಲಾಲ್‌ಖಾನನು ಸೈನ್ಯ ಮಧ್ಯದಲ್ಲಿ ಸಿಕ್ಕಿದ ಆ ಏಳು ಜನರನ್ನೂ ಕೊಂದುಹಾಕಿದನು. ಪ್ರತಾಪರಾಯನ ಮರಣದಿಂದ ಮರಾಠರು ಉದ್ರೇಕಗೊಂಡು ಬೊಲಾಲ್‌ಖಾನನ ಸೈನ್ಯದ ಮೇಲೆ ಬಿದ್ದು ಯುದ್ಧ ಮಾಡಿದರು. ರಕ್ತದ ಕೋಡಿಗಳು ಹರಿದವು. ಬೊಲಾಲ್‌ಖಾನನು ಓಡಿಹೋಗಿ ವಿಜಾಪುರವನ್ನು ಸೇರಿಕೊಂಡನು.

ಶಿವಾಜಿಗೆ ಪ್ರತಾಪರಾಯನ ಮರಣ ವಾರ್ತೆಯನ್ನು ಕೇಳಿ ಸಿಡಿಲು ಬಡಿದಂತಾಯಿತು. ಅವನು ಅತ್ಯಂತ ದುಃಖದಿಂದ ಪರಿತಪಿಸಿದನು ಪ್ರತಾಪರಾಯನ ಹೆಂಡತಿ ಮಕ್ಕಳನ್ನು ಸಂತೈಸಿ ಅವರಿಗೆ ಯಥೇಚ್ಛ ಧನಕನಕಗಳನ್ನು ಕೊಟ್ಟನು. ಪ್ರತಾಪರಾಯನ ಸೈನ್ಯಕ್ಕೆ ಆನಂದರಾಯನನ್ನೇ ಅಧಿಕಾರಿಯಾಗಿ ಮಾಡಿದನು. ಆನಂದರಾಯನು ಗೋವಾದಿಂದ ಕಾರವಾರದವರೆಗೆ ತೀರ ಪ್ರದೇಶವನ್ನು ಆಕ್ರಮಣಮಾಡುತ್ತಾ ಸುತ್ತ ಮುತ್ತಲೂ ಕೊಳ್ಳೆ ಹೊಡೆಯುತ್ತಿದ್ದನು.

ವಿಜಾಪುರದಲ್ಲಿ ಅಪಮಾನಿತನಾಗಿದ್ದ ಖವಾಸ್‌ಖಾನನಿಗೂ ಬೇಗಂ ಸಾಹೇಬಳಿಗೂ ವೈಮನಸ್ಯ ಹೆಚ್ಚುತ್ತ ಬಂದಿತು. ವಿಜಾಪುರದಲ್ಲಿ ಏನೋ ಒಂದು ದೊಡ್ಡ ಪಿತೂರಿಯು ನಡೆಯುತ್ತಿದೆ ಎಂದು ಬೇಗಂ ಸಾಹೇಬಳಿಗೆ

ಸಂದೇಹ ಹುಟ್ಟಿತು. ಖವಾಸ್‌ಖಾನನು ಔರಂಗಬಾದಿನಲ್ಲಿದ್ದ ಬಹದ್ದೂರ್ ಖಾನನೊಡನೆ ಏನೋ ಸಂಧಾನ ನಡೆಸುತ್ತಿದ್ದನು. ರಾಯಭಾರಿಗಳು ಬಿಜಾಪುರದಿಂದ ಔರಂಗಬಾದಿಗೆ ಗೋಪ್ಯವಾಗಿ ಹೋಗಿ ಬರುತ್ತಿದ್ದರು. ಬೇಗಂ ಸಾಹೇಬಾಳಿಗೆ ಕುಮಾರ ಸಿಕಂದರ್ ಮೇಲೆ ಬಹಳ ಪ್ರೇಮವಿದ್ದಿತು. ಅವಳು ಆ ಬಾಲಕನನ್ನು ಸರ್ವದಾ ಸಮೀಪದಲ್ಲಿಟ್ಟುಕೊಂಡು ಮುದ್ದಾಡುತ್ತಿದ್ದಳು, ಏನೋ ಒಂದು ಪಿತೂರಿಯು ನಡೆದು ಈ ಬಾಲಕನನ್ನು ಅಪಹರಿಸಿಸುತ್ತಾರೆ ಇಲ್ಲವೆ, ಕೊಂದುಹಾಕಿಬಿಡುತ್ತಾರೆ ಎಂಬ ಶಂಕೆಯು ಅವಳನ್ನು ಸರ್ವದಾ ಬಾಧಿಸುತ್ತಿತ್ತು. ಬೇಗಂ ಸಾಹೇಬಾಳಿಗೆ ಬಿಜಾಪುರದಲ್ಲಿ ಅತ್ಯಂತ ಆಪ್ತನೆಂದರೆ ಫಿರೋಜ್‌ಖಾನನೊಬ್ಬನೇ. ಅವನೆ ಬೇಗಂ ಸಾಹೇಬಾಳ ಮಂತ್ರಿ, ಆಪತ್ತಿನಲ್ಲಿ ಸಂರಕ್ಷಕ, ಪ್ರೇಮದಲ್ಲಿ ಆರಾಧಕ. ರಾಜಧಾನಿಯಲ್ಲಿದ್ದ ಮಂತ್ರಿಗಳೂ, ಉಮ್ರಾಗಳೂ ಇವರೆಲ್ಲರೂ ತನ್ನ ವಿರೋಧಿಗಳೇ ಎಂದು ಅವಳು ತಿಳಿದಿದ್ದಳು. ಫಿರೋಜ್‌ಖಾನನು ಬೇಗಂಸಾಹೇಬಾಳ ಮೇಲಿನ ಮೋಹದಿಂದ ಸಮಯಾಸಮಯಗಳಲ್ಲಿ ಅವಳ ಮನಸ್ಸಿನಲ್ಲಿ ಆ ಭಾವನೆಯೇ ಬೆಳೆಯುವಂತೆ ಮಾಡಿದ್ದನು. ಏಕಾಂತದಲ್ಲಿ ಬೇಗಂಸಾಹೇಬಾಳು ಫಿರೋಜ್‌ಖಾನನೊಡನೆ ತನ್ನ ಮನಸ್ಸಿನ ಸಂದೇಹಗಳನ್ನೆಲ್ಲಾ ಹೇಳಿಕೊಂಡಳು. "ಜೋಲಾಲ್‌ಖಾನನು ಎಲ್ಲಿಯೋ ಮಹಾರಾಷ್ಟ್ರ ದೇಶದಲ್ಲಿ ಅವರೊಡನೆ ಯುದ್ಧ ಮಾಡುತ್ತಿದ್ದು ಕೊಲ್ಹಾಪುರದಲ್ಲಿ ಕೋಟೆ ಮೀರಜ್‌ನಲ್ಲಿ ಹೋಗಿ ಸೇರಿಕೊಂಡಿದ್ದಾನೆ. ಇತ್ತೀಚೆಗೆ ಅವನ ಕಡೆಯಿಂದ ಸಮಾಚಾರಗಳೇ ಸರಿಯಾಗಿ ಬರುತ್ತಿಲ್ಲ. ಅಬ್ದುಲ್ಲಾ ಮಹಮ್ಮದ್ ಆಗಲಿ, ಮುಜಾಫರ್‌ಖಾನನಾಗಲಿ ಮರಾಠರ ಗೊಡವೆಗೇ ಹೋದಂತಿಲ್ಲ. ಈ ಖವಾಸ್‌ಖಾನನು ಮೊಗಲರೊಡನೆ ಏನೋ ಸಂಧಾನ ಮಾಡುತ್ತಿದ್ದಾನೆ. ಇದನ್ನೆಲ್ಲಾ ನೋಡಿದರೆ ನನಗೆ ಏನೋ ಭಯಂಕರವಾದ ಆಪತ್ತು ಸಂಭವಿಸುವಂತಿದೆ. ನನ್ನಷ್ಟಕ್ಕೆ ನನಗೇನೂ ಭೀತಿ ಇಲ್ಲ. ಈ ಬಾಲಕನಾದ ಸಿಕಂದರ್‌ಗಾಗಿ ನಾನು ಸರ್ವದಾ ಪರಿತಪಿಸುತ್ತೇನೆ. ದುರ್ದೈವವಶಾತ್ ಈ ಮುದ್ದು ಬಾಲಕನಿಗೆ ಏನಾದರೂ ಅಪಾಯ ತಟ್ಟಿದರೆ ನಾನು ಒಂದು ಕ್ಷಣವೂ ಪ್ರಾಣವನ್ನು ಇಟ್ಟುಕೊಂಡಿರುವುದಿಲ್ಲ" ಎಂದು ಕಣ್ಣೀರಿಡುತ್ತಾ ಹೇಳಿದಳು.

ಫಿರೋಜ್‌ಖಾನನು ಬೇಗಂಸಾಹೇಬಾಳನ್ನು ಸಂತೈಸುತ್ತಾ "ಸುಲ್ತಾನಾ ಫೀಫು ಕಣ್ಣೀರಿಡಬೇಡ. ನಾನು ಬದುಕಿರುವವರೆಗೆ ನಿನ್ನ ಕೂದಲು ಕೊಂಕಲ.

ಬಿಡುವುದಿಲ್ಲ" ಎಂದು ಧೈರ್ಯ ಹೇಳಿದನು.

ಸುರಮಾ ಫಿರೋಜ್‌ನನ್ನು ಆಲಿಂಗಿಸಿ ಮುತ್ತಿಟ್ಟು "ನೀನೊಬ್ಬನೇ ಆಪತ್ತಿನಲ್ಲಿ ನನ್ನ ಆಶಾದೀಪ. ಈ ಸಂಕಟ ಪರಿಸ್ಥಿತಿಯನ್ನು ಹೇಗಾದರೂ ದಾಟಿಕೊಂಡರೆ ಮುಂದೆ ನಾವು ಸುಖವಾಗಿರಬಹುದು" ಎಂದು ಹೇಳಿದಳು.

ಫಿರೋಜ್‌ಖಾನನು ತನ್ನ ಆಪ್ತ ಭಟರನ್ನು ಕರೆಸಿ "ಔರಂಗಬಾದಿನಿಂದ ಹಿಂತಿರುಗಿ ಬರುತ್ತಿರುವ ರಾಯಭಾರಿಗಳನ್ನು ದಾರಿಯಲ್ಲಿಯೇ ಹಿಡಿದು ಗೋಪ್ಯವಾಗಿ ಕರೆತರಬೇಕೆಂದು ಅಪ್ಪಣೆ ಮಾಡಿದನು.

ಆ ಆಪ್ತ ಭಟರು ದಾರಿಯನ್ನು ಕಾದು ರಾಯಭಾರಿಗಳಾದ ರಾಮರಾವ್ ಮತ್ತು ಮಹಮ್ಮದ್‌ಖಾನ್ ಎಂಬಿಬ್ಬರು ರಾಯಭಾರಿಗಳನ್ನು ಹಿಡಿದು ತಂದರು. ಅವರ ಜೊತೆಯಲ್ಲಿ ಬರುತ್ತಿದ್ದ ಅಂಗರಕ್ಷಕರನ್ನು ದಾರಿಯಲ್ಲಿಯೇ ಕಡಿದು ಹಾಕಿದರು.

ಫಿರೋಜನು ಆವರಿಬ್ಬರು ರಾಯಭಾರಿಗಳನ್ನೂ ಅರಮನೆಯ ನೆಲಮಾಳಿಗೆಯ ಕಾರಾಗಾರದಲ್ಲಿಡಿಸಿದನು. ಅರ್ಧರಾತ್ರಿಯಾದ ಮೇಲೆ ಫಿರೋಜನು ಆ ಕಾರಾಗಾರದ ಬಾಗಿಲು ತೆಗೆಸಿ ನಾಲ್ಕು ಮಂದಿ ಭಟರೊಡನೆ ಒಳಗೆ ಪ್ರವೇಶ ಮಾಡಿದನು. ಬಾಗಿಲಿನಲ್ಲಿಯೇ ಬೇಗಂ ಸಾಹೇಬಾಳು ಆಲೈಸುತ್ತಾ ನಿಂತಿದ್ದಳು.

ಫಿರೋಜ್‌ಖಾನನು ಆ ರಾಯಭಾರಿಗಳನ್ನು ಛಡಿಗಳಿಂದ ಹೊಡೆಸಿ "ನಿಜವನ್ನು ಹೇಳಿ. ನಿಮ್ಮ ರಾಯಭಾರದ ರಹಸ್ಯವನ್ನು ಮುಚ್ಚುಮರೆ ಇಲ್ಲದೆ ಹೇಳಿ. ನಿಮಗೆ ಪ್ರಾಣದಾನ ಮಾಡುತ್ತೇವೆ. ನಿಮ್ಮ ಕುಟುಂಬದವರ ಸಂರಕ್ಷಣೆ ಮಾಡಿಸುತ್ತೇನೆ. ಇಲ್ಲದಿದ್ದರೆ ನಿಮ್ಮ ಚಿತ್ರವಧೆಯಾಗುತ್ತದೆ" ಎಂದು ಬೆದರಿಸಿದನು.

ರಾಮರಾಯನು "ಖಾನ್‌ಸಾಹೇಬರೇ, ನಮ್ಮಲ್ಲಿ ಅಂತಹ ರಹಸ್ಯವೇನೂ ಇಲ್ಲ. ಸುಲ್ತಾನೀ ದರ್ಬಾರಿನ ಸರ್ವಾಧಿಕಾರಿಗಳಾದ ಖವಾಸ್ ಖಾನರು ಮೊಗಲ್ ಸರ್ದಾರ ಬೇದಾರರಾದ ಬಹದ್ದೂರ್‌ಖಾನರಲ್ಲಿಗೆ ಸಹಾಯ ಬೇಡಿ ಕಳುಹಿಸಿಕೊಟ್ಟಿದ್ದರು" ಎಂದು ಹೇಳಿದನು.

ಫಿರೋಜನು "ಅವರೇನು ಹೇಳಿದರು?"

"'ಶಿವಾಜಿಯು ನಮಗೂ ವಿರೋಧಿ. ಈ ಸಮಯದಲ್ಲಿ ನಾವು ಬಿಜಾಪುರಕ್ಕೆ ಸಹಾಯ ಮಾಡುತ್ತೇವೆ' ಎಂದು ವಚನ ಕೊಟ್ಟರು. ಖಾನ್‌ಸಾಹೇಬರೇ ಇದರಲ್ಲಿ ತಪ್ಪೇನಿದೆ?" ಎಂದು ರಾಮರಾಯನು ದಿಟ್ಟತನದಿಂದ ಕೇಳಿದನು.

ಖಾನನು ಕ್ರೋಧವನ್ನು ನುಂಗಿಕೊಂಡು "ದಖ್ಖನ್ನಿನ ಮೊಗಲ್ ಸರ್ವಾಧಿಕಾರಿಯು ನಿಮಗೆ ಸಹಾಯ ಮಾಡುವುದಕ್ಕೆ ಷರತ್ತುಗಳೇನು ?" ಎಂದು ಕೇಳಿದನು.

ರಾಮರಾಯನು ಕೈಮುಗಿದು "ಅವೆಲ್ಲಾ ನಮಗೇನೂ ಗೊತ್ತಿಲ್ಲ. ಅದು ದೊಡ್ಡ ರಾಜಕೀಯ. ನಮ್ಮಂತಹವರಿಗೆ ಅವೆಲ್ಲಾ ತಿಳಿಯುತ್ತದೆಯೇ?" ಎಂದನು.

ಫಿರೋಜ್ ಬೆತ್ತವನ್ನು ಹಿಡಿದು ಅವನನ್ನು ಬಲವಾಗಿ ತಾಳಿಸಿ "ನಿಜ ಹೇಳು. ನೀನು ಎಲ್ಲವನ್ನೂ ಬಲ್ಲೆ" ಎಂದು ಗದ್ದರಿಸಿದನು.

ರಾಮರಾಯನು "ಖಾನ್‌ಸಾಹೇಬರೇ, ನನ್ನನ್ನು ಹೊಡೆಯಬೇಡಿರಿ. ನಿಜವಾಗಿಯೂ ಅದನ್ನು ನಾನರಿಯೆ. ಈ ಮಹಮುದ್‌ಖಾನರಲ್ಲಿ ಬಹದ್ದೂರ್ ಖಾನರೇ ಖುದ್ದು ಬರೆದಿರುವ ಪತ್ರವಿದೆ. ನೀವೇ ನೋಡಿಕೊಳ್ಳಿರಿ" ಎಂದು ಹೇಳಿದನು.

ಫಿರೋಜ್‌ಖಾನನು ದುರದುರನೆ ಮುಹಮ್ಮದ್‌ಖಾನನನ್ನು ನೋಡುತ್ತಾ "ಬದ್ಮಾಷ್, ಮಾತನಾಡದೆ ಸುಮ್ಮನೆ ನಿಂತಿರುವೆಯಾ ? ನಿನ್ನನ್ನು ಸೀಳಿ ಬಿಸುಡುತ್ತೇನೆ. ನೋಡು" ಎಂದು ಕತ್ತಿಯನ್ನು ಹಿರಿದನು.

ಮುಹಮ್ಮದ್‌ಖಾನನು ನಡುಗುತ್ತಾ "ಖಾವಂದರೇ, ಕಾಪಾಡಿ, ಕಾಪಾಡಿ" ಎಂದು ಕೂಗಿಕೊಳ್ಳುತ್ತಾ ತನ್ನ ರುಮಾಲಿನಲ್ಲಿ ಮುಚ್ಚಿಟ್ಟಿದ್ದ ಲಕ್ಕೋಟೆಯನ್ನು ಅವನ ಕೈಗೆ ಕೊಟ್ಟು ಅವನ ಕಾಲಿಗೆ ಬಿದ್ದು ಪ್ರಾಣ ಭಿಕ್ಷೆಯನ್ನು ಕೇಳಿಕೊಂಡನು.

ಫಿರೋಜ್‌ಖಾನನು ದೀಪದ ಬೆಳಕಿನಲ್ಲಿ ಆ ಪತ್ರವನ್ನು ಆಮೂಲಾಗ್ರವಾಗಿ ಓದಿ ನೋಡಿದನು. ಪತ್ರವನ್ನು ಮಡಿಸಿ ಕಿಸೆಯಲ್ಲಿಟ್ಟುಕೊಂಡು ಆ ರಾಜಭಟರಿಗೆ "ಇವರನ್ನು ಬಂದೋಬಸ್ತಾಗಿ ನೋಡಿಕೊಳ್ಳಿರಿ" ಎಂದು ಹೇಳಿ ಕಾರಾಗೃಹದ ಬಾಗಿಲುಗಳನ್ನು ಭದ್ರಪಡಿಸಿ ಬೇಗಂಸಾಹೇಬಾಳೊಡನೆ ಅಂತಃಪುರಕ್ಕೆ ಹೋದನು.

ಬೇಗಂಸಾಹೇಬಾಳ ಶಯನ ಗೃಹದಲ್ಲಿ ಬಾಗಿಲು ಮುಚ್ಚಿಕೊಂಡು ಆ ಪತ್ರವನ್ನು ಓದಿ ಹೇಳಿದನು.

"ಬಿಜಾಪುರದ ಸುಲ್ತಾನರ ದರ್ಬಾರಿನ ಸರ್ವಾಧಿಕಾರಿಗಳಾದ ಖವಾಸ್ ಖಾನರಿಗೆ,

ನಿಮ್ಮ ರಾಯಭಾರಿಗಳಿಂದ ನೀವು ಹೇಳಿಕಳುಹಿಸಿದ ಸಮಾಚಾರಗಳೆ

ಲ್ಲವೂ ವಿಶದವಾಗಿ ತಿಳಿದುಬಂದಿದೆ. ಶಿವಾಜಿಯು ಮೊಗಲ್ ಸಾಮ್ರಾಟರ ಆಗ್ರಹಕ್ಕೆ ಪಾತ್ರನೆಂಬುದು ನಿಮಗೆ ತಿಳಿದೇ ಇದೆ. ಶಿವಾಜಿಯು ಒಂದು ಅವನಿಗೆ ಬಿಜಾಪುರದ ಮೇಲೆಯೂ, ಮೊಗಲರ ಮೇಲೆಯೂ ಮಹತ್ತರವಾದ ಶತ್ರುತ್ವವಿದೆ. ಶಿವಾಜಿಯನ್ನು ನಿಗ್ರಹಿಸುವುದರಲ್ಲಿ ನಾವು ಸಮಾನರು. ಈಗ ಶಿವಾಜಿಯು ನಿಮ್ಮ ರಾಜ್ಯದಲ್ಲಿ ಹಾವಳಿ ಮಾಡುತ್ತಿದ್ದಾನೆಂದೂ, ಶೀಘ್ರದಲ್ಲಿಯೇ ಬಿಜಾಪುರದ ಕೋಟೆಗೆ ಮುತ್ತಿಗೆ ಹಾಕುತ್ತಾನೆಂದೂ ನಿಮ್ಮ ರಾಯಭಾರಿಗಳಿಂದ ಕೇಳಿದೆವು. ನಿಮ್ಮ ಸೇನಾಧಿಪತಿಗಳೆಲ್ಲಾ ಮಣಿಸಿಕೊಂಡು ಕೈಬಿಟ್ಟಿದ್ದಾರೆಂದು ಕೇಳಿ ನಮಗೆ ಬಹಳ ವ್ಯಸನವಾಗುತ್ತಿದೆ. ನಿಮ್ಮ ಕೋರಿಕೆಯಂತೆ ಈಗ ನಿಮಗೆ ಸಹಾಯ ನೀಡುವುದು ನಮ್ಮ ಕರ್ತವ್ಯವೇ ಆಗಿದೆ. ಪ್ರಖ್ಯಾತನಾದ ಮೊಗಲ್ ಸೇನಾಧಿಪತಿ ದಿಲೇರ್ ಖಾನನನ್ನು ಪ್ರಚಂಡ ಸೈನ್ಯದೊಡನೆ ನಾವು ಬಿಜಾಪುರಕ್ಕೆ ಕಳುಹಿಸಿಕೊಡುತ್ತೇನೆ. ಅವನನ್ನು ಕಂಡರೆ ಶಿವಾಜಿಗೆ ಸಿಂಹ ಸ್ವಪ್ನ. ಆದರೆ ಬಿಜಾಪುರದ ಕೋಟೆಯನ್ನು ಪೂರ್ಣವಾಗಿ ನಮಗೆ ಒಪ್ಪಿಸಿಕೊಡಬೇಕು. ಕೋಟೆಯ ಹೊರಗಡೆ ನಮ್ಮ ದೊಡ್ಡದಾದ ಮೊಗಲ್ ಸೈನ್ಯ ಶಿಬಿರವನ್ನು ಸ್ಥಾಪನೆ ಮಾಡುತ್ತೇವೆ. ಸುಲ್ತಾನ ರಾಜ್ಯಭಾರಕ್ಕೆ ನಾವು ಎಳ್ಳಷ್ಟೂ ಪ್ರವೇಶಿಸುವುದಿಲ್ಲ. ನೀವು ನಿಮ್ಮ ರಾಜ್ಯದಲ್ಲಿ ಸರ್ವ ಸ್ವತಂತ್ರರು. ಆದರೆ ಮೊಗಲ್ ಬಾದಷಹರ ಅಂಕಿತರೆಂಬುದನ್ನು ಜ್ಞಾಪಕದಲ್ಲಿಡತಕ್ಕದ್ದು. ನಾಲ್ಕು ವರ್ಷಗಳ ಬಾಲಕ ಸುಲ್ತಾನ್ ಸಿಕಂದರನ ಹೆಸರಿನಲ್ಲಿ ನಡೆಯುವ ಬಿಜಾಪುರದ ದರ್ಬಾರು ಮಹಾಮಹಿಮನಾದ ಮೊಗಲ್ ಬಾದಷಹನ ಅಂಕಿತವನ್ನೊಪ್ಪಿಕೊಳ್ಳುವುದು ಸಮಯೋಚಿತವೂ, ವಿವೇಕಯುತವೂ, ಗೌರವಾನ್ವಿತವೂ ಆಗಿದೆ ಎಂದು ನೀವೂ ಭಾವಿಸುತ್ತೀರೆಂದು ನಂಬಿದ್ದೇವೆ.

ಇತಿ

ಬಹದ್ದೂರ್ ಖಾನ್"

ಈ ಪತ್ರವನ್ನು ಸುರಮಾಬೇಗಂಳೂ, ಫಿರೋಜನೂ ತಿರುಗಿಸಿ ತಿರುಗಿಸಿ ಓದಿದರು. ವಾಕ್ಯ ವಾಕ್ಯಗಳನ್ನು ಶಬ್ದ ಶಬ್ದಗಳನ್ನು ಅರ್ಥ ಮಾಡಿಕೊಂಡರು.

ಫಿರೋಜ್‌ನು "ಬೇಗಂಸಾಹೇಬರೇ, ಎಲ್ಲವೂ ಅರ್ಥವಾಯಿತಷ್ಟೆ?" ಎಂದನು.

ಸುರವಾ ಸಹ ಗುತ್ತಿರುವ ಅರ್ಥಗಳಿಂದ "ಅರ್ಥವಾಗದೆ ಏನ ? ಅದಿಲ್ ಷಹರ ಸುಹಸ್ತರವಾದ ಈ ಬಿಜಾಪುರ ಕೋಟೆಯನ್ನು ಮೊಗಲರಿಗೆ ಒಪ್ಪಿಸಿ ಬಿಡಬೇಕು ...ಲೇರ್‌ಖಾನನು ಒಂದು ಒಪ್ಪಿಸಿಕೊಳ್ಳುತ್ತಾನೆ. ಮೊಗಲರಿಗೆ ಈ ಸುಲ್ತಾನಿ ರಾಜ್ಯವು ಆಂಕಿತವಾಗಿರುತ್ತದೆ. ಮೊಗಲರ ಗುಲಾಮರಾಗಿ ಈ ಖವಾಸ್‌ಖಾನನ ಅಧಿಕಾರವನ್ನು ನಡೆಸುತ್ತಾನೆ. ಬಿಜಾಪುರದ ರಾಜ್ಯವು ಪಾತಾಳದಲ್ಲಿ ಅಡಗಿ ಹೋದಂತಾಯಿತು" ಎಂದು ಹೇಳಿ ದೀರ್ಘ ನಿಶ್ವಾಸವನ್ನು ಬಿಟ್ಟಳು

ಫಿರೋಜಖಾನನೂ ಬೇಗಂಸಾಹೇಬಾಳೂ ಮುಂದೇನು ಮಾಡಬೇಕೆಂಬುದನ್ನು ಬಹಳವಾಗಿ ಆಲೋಚನೆ ಮಾಡಿದರು ಕೊನೆಗೆ "ಮೊಗಲ್ ಬಾದಷಹರೊಡನೆ ನಮಗೆ ಸಂಧಿ ಬೇಡ. ಅವರಿಗೆ ನಾವು ಸರ್ವಸ್ವವನ್ನೂ ಅರ್ಪಣ ಮಾಡಿದಂತಾಗುತ್ತದೆ ಶಿವಾಜಿಯೊಡನೆ ಸಂಧಿ ಮಾಡಿಕೊಳ್ಳುವುದೇ ಒಳ್ಳೆಯದು ಅವನು ಹೆಚ್ಚಾಗಿ ಹಣ ಕೇಳುತ್ತಾನೆ. ಕೊಟ್ಟುಬಿಟ್ಟರೆ ಹೊರಟು ಹೋಗುತ್ತಾನೆ

"ಈ ಖವಾಸ್‌ಖಾನನನ್ನು ಅಧಿಕಾರದಿಂದ ತೆಗೆದುಬಿಡಬೇಕು ನಮ್ಮಲ್ಲಿ ವಿಮುಖರಾಗಿರುವ ಅಬ್ದುಲ್ ಮುಹಮ್ಮದ್, ಮುಜಾಫರ್‌ಖಾನ್ ಮತ್ತು ಬೆಹಲೋಲ್‌ಖಾನ್ ಇವರನ್ನು ಸಮಾಧಾನಗೊಳಿಸಿ ಮೊದಲಿನಂತೆಯೇ ಗೌರವದಿಂದ ಇಟ್ಟುಕೊಳ್ಳಬೇಕು." ಹೀಗೆಂದು ಅವರಿಬ್ಬರೂ ನಿರ್ಧಾರಮಾಡಿಕೊಂಡರು.

ಬೇಗಂಸಾಹೇಬಾಳು "ಖವಾಸ್‌ಖಾನನು ಸುಲಭವಾಗಿ ಒಪ್ಪದಿದ್ದರೆ ಏನುಮಾಡುವುದು" ಎಂದಳು.

ಫಿರೋಜನು "ಅದೇನೋ ಕಷ್ಟಕರವಾದುದೇ. ನಾನು ಅವನನ್ನು ಬಲಾತ್ಕಾರದಿಂದ ನಿಗ್ರಹಿಸಬಲ್ಲೆ ಆದರೆ ನಮ್ಮ ದರ್ಬಾರಿನ ಮಂತ್ರಿಗಳೂ, ಉಮ್ರಾಗಳೂ ಅವನ ಕಡೆಗಿದ್ದಾರೆ. ಈ ಸಂದರ್ಭದಲ್ಲಿ ರಾಜಧಾನಿಯಲ್ಲಿ ಗುಲ್ಲೆಬ್ಬಿಸಬಾರದು. ಉಪಾಯದಿಂದ ಸಾಧಿಸಬೇಕು. ನಾನು ಅದನ್ನು ಸಾಧಿಸುತ್ತೇನೆ. ನೀವು ನನ್ನ ಮಾತಿನಂತೆ ನಡೆದರೆ ಸಾಕು" ಎಂದು ಹೇಳಿದನು.

ಸುರವಾ ನಗುತ್ತಾ "ಫಿರೋಜ್, ನಿನ್ನ ಮಾತಿನಂತೆ ನಡೆಯದಿರುವ ಒಂದು ನಿದರ್ಶನವಾದರೂ ಇದೆಯೇ ?" ಎಂದಳು.

ಫಿರೋಜನು ಬೇಗಂಸಾಹೇಬಾಳನ್ನು ಗಟ್ಟಿಯಾಗಿ ಆಲಿಂಗಿಸಿ ಕಪೋಲ

ಗನನ್ನು ಚುಂಬಿಸುತ್ತಾ "ಪುರವರಾ, ನಮ್ಮಿಬ್ಬರ ಅಂತಃಕರಣಗಳಲ್ಲಿ ಭೇದವೇನೂ ಇಲ್ಲ. ಆದರೆ ಕಠಿಣವಾದ ರಾಜಕೀಯ ಪ್ರಸಂಗಗಳು ಬಂದೊದಗಿದಾಗ ನಿನ್ನಂತಹರು ಬಹಳ ಧೈರ್ಯವನ್ನು ತಾಳಬೇಕಾಗುತ್ತದೆ. ಆಗ ನೀನು ಹೆದರಿ ಕೈಬಿಟ್ಟರೆ ನನ್ನ ಅಧೋಗತಿಯೇ! ನಿನ್ನ ಅನುಗ್ರಹದಿಂದ ನಾನು" ಎಂದು ಹೇಳಿದನು.

ಮಾರನೆಯ ದಿನ ಬೆಳಕು ಹರಿಯುತ್ತಲೇ, ಖವಾಸ್ ಖಾನನು ಕರೆಸಿದಳಾಗ ಖವಾಸ್ ಖಾನನು ಬಂದು ಭೇಟಿಮಾಡುತ್ತಲೇ "ವಜೀರರೇ, ಈಗೇನು ಯೋಚನೆ ಮಾಡಿದ್ದೀರಿ? ಈ ಯುದ್ಧ ಪ್ರಸಂಗದಲ್ಲಿ ಸ್ತಂಭೀಭಾವವು ಕಾಣುತ್ತಿದೆಯಲ್ಲಾ."

"ಹೌದು, ಬೇಗಂಸಾಹೇಬಾ. ರಾಜಕೀಯ ಸ್ವಲ್ಪವೂ ಸುಮುಖವಾಗಿಲ್ಲ. ನಮಗೆ ಇಬ್ಬರು ವಿರೋಧಿಗಳಿದ್ದಾರೆ. ಎಷ್ಟಾದರೂ ಮೊಗಲರು ಪ್ರಬಲ ಶಾಲಿಗಳು ಮತ್ತು ನಮ್ಮ ಮಾತೃ ಬಾಂಧವರು ಅವರೊಡನೆ ಭದ್ರವಾದ ಸಂಧಿಮಾಡಿಕೊಂಡರೆ ಹಿಂದೂ ರಾಜ ಶಿವಾಜಿಯನ್ನು ಒತ್ತರಿಸಿಬಿಡಬಹುದು" ಎಂದನು.

ಬೇಗಂ ಸಾಹೇಬಾಳು "ಖಾನ್ ಸಾಹೇಬರೇ, ನಿಮ್ಮ ಆಲೋಚನೆಯು ಯುಕ್ತಿಯುಕ್ತವಾಗಿದೆ. ಇಬ್ಬರು ಶತ್ರುಗಳಲ್ಲಿ ಒಬ್ಬರೊಡನೆ ಸಂಧಿಮಾಡಿಕೊಳ್ಳುವುದು ಸಮಯೋಚಿತ ರಾಜಕೀಯ. ನೀವು ಮೊಗಲರೊಡನೆಯೇ ಸಂಧಿಮಾಡಿಕೊಳ್ಳಲು ವಿಶೇಷ ಆಸಕ್ತರಾಗಿರುವಂತಿದೆ. ಅವರು ಸಂಧಿಗೆ ಒಪ್ಪುವರೇ? ಅವರ ಷರತ್ತುಗಳೇನಿವೆ?" ಎಂದು ಕೇಳಿದಳು.

ಖವಾಸ್ ಖಾನನು "ಬೇಗಂ ಸಾಹೇಬಾ, ಅನುಭವಸ್ಥರಾದ ನಂಬಿಕೆಯ ರಾಯಭಾರಿಗಳನ್ನು ಔರಂಗಾಬಾದಿಗೆ ಕಳುಹಿಸಿದ್ದೇನೆ. ಅವರು ಇನ್ನೂ ಹಿಂತಿರುಗಿ ಬಂದಿಲ್ಲ. ಸಂಧಿಯ ಷರತ್ತುಗಳು ವ್ಯಕ್ತವಾಗಿಲ್ಲ"

"ಒಳ್ಳೆಯದು, ವಜೀರಸಾಹೇಬರೇ ಇದು ಬಲು ದೊಡ್ಡ ಪ್ರಸಂಗ. ಸುಲ್ತಾನನು ಸಣ್ಣ ಬಾಲಕ. ಮಂತ್ರಿಗಳನ್ನೂ ಉಮ್ರಾಗಳನ್ನೂ ಸಂಧಿಸಿ, ಚೆನ್ನಾಗಿ ಆಲೋಚನೆ ಮಾಡಿ ಕಾರ್ಯ ಮುಂದುವರಿಸಿದರೆ ಕ್ಷೇಮವಲ್ಲವೆ?"

"ಹೌದು. ತಮ್ಮ ಸಲಹೆ ಸರಿಯಾಗಿದೆ. ಆದರೆ ಬಹದ್ದೂರ್ ಖಾನರಿಂದ ಉತ್ತರ ಬಂದ ಮೇಲೆ ತಮ್ಮ ಸಮ್ಮುಖದಲ್ಲಿಯೇ ಆ ಮಂತ್ರಾಲೋಚನಾ ಸಭೆಯನ್ನು ಸೇರಿಸೋಣವೆಂದು ಯೋಚನೆಮಾಡಿದ್ದೇನೆ."

"ಖವಾಸ್ ಖಾನರೇ ನಾನು ಈ ದಿನವೇ ಆ ಮಂತ್ರಾಲೋಚನಾ ಸಭೆ

ಯನ್ನು ಕರೆಸಬೇಕೆಂದಿದ್ದೇನೆ. ನಿಮ್ಮ ಅಭಿಪ್ರಾಯವೇನು ?"

"ಬೇಗಂ ಸಾಹೇಬಾ, ಅದು ನನಗೂ ಸಮ್ಮತವೇ. ಇದರಲ್ಲಿ ಗೂಢ ರಹಸ್ಯವೇನೂ ಇಲ್ಲ. ಇಂದೇ ತಮ್ಮ ಸಮ್ಮುಖದಲ್ಲಿ ಮಂತ್ರಾಲೋಚನಾ ಸಭೆಯನ್ನು ಸೇರಿಸುತ್ತೇನೆ" ಎಂದು ಹೇಳಿ ಅಪ್ಪಣೆ ಪಡೆದು ತನ್ನ ಮನೆಗೆ ಹಿಂತಿರುಗಿದನು.

---

## ೧೫

ಬಿಜಾಪುರದ ಅರಮನೆಯ ಅಂತಃಪುರದಲ್ಲಿ ರಂಗಮಹಲಿನಲ್ಲಿ ಮಂತ್ರಾಲೋಚನ ಸಭೆಯು ಸೇರಿತು. ಮಂತ್ರಿಗಳು, ಉಮ್ರಾಗಳು, ದರಬಾರಿನ ವೃದ್ಧ ರಾಜಬಂಧುಗಳು, ಎಲ್ಲರೂ ಬಂದು ತಮ್ಮ ತಮ್ಮ ಆಸನಗಳನ್ನು ಅಲಂಕರಿಸಿದ್ದರು.

ಖವಾಸ್‌ಖಾನನು ಮೂರ್ಧನ್ಯನಾಗಿ ಆಸನವನ್ನು ಅಲಂಕರಿಸಿದನು.

ಬೇಗಂ ಸಾಹೇಬಾಳು ಅತ್ಯಂತ ಸಾಮಾನ್ಯ ಉಡುಪನ್ನು ಧರಿಸಿ ಆ ಸಭೆಗೆ ಬಂದು ತಲೆಬಾಗಿ ಎಲ್ಲರನ್ನೂ ವಂದಿಸಿ ವಿನಮ್ರಳಾಗಿ ಆಸನವನ್ನು ಅಲಂಕರಿಸಿದಳು.

ಭಕ್ಷಿ ಫಿರೋಜ್‌ಖಾನನು ಸವಿನಾಸದಲ್ಲಿ ಕೈ ಕಟ್ಟಿಕೊಂಡು ನಿಂತಿದ್ದನು

ವಜೀರ ಖವಾಸ್‌ಖಾನನು ಎದ್ದು ಬೇಗಂ ಸಾಹೇಬರನ್ನೂ, ಸಭಿಕರನ್ನೂ ವಂದಿಸಿ ಪ್ರಸ್ತಾಪವನ್ನು ವಿವರಿಸಿದನು "ನಮ್ಮ ಮೇಲೆ ಶಿವಾಜಿಯು ಯುದ್ಧಕ್ಕೆ ಬಂದಿದ್ದಾನೆ. ಪದೇ ಪದೇ ಈ ಕೋಟೆಯನ್ನು ಮುತ್ತಲು ಹವಣಿಸುತ್ತಿದ್ದಾನೆ. ಈಗ ಯುದ್ಧಕ್ಕೆ ಅನುಕೂಲವಾದ ವಾತಾವರಣವಿಲ್ಲ. ಮುಖ್ಯವಾಗಿ ನಮ್ಮ ವಿಖ್ಯಾತ ಸೇನಾಧಿಪತಿಗಳು ವಿಮುಖರಾಗಿದ್ದಾರೆ. ಮೊಗಲರೂ ಇದೇ ಸಮಯದಲ್ಲಿ ನಮ್ಮ ಮೇಲೆ ಬೀಳಲು ಹವಣಿಸುತ್ತಿದ್ದಾರೆ. ಇಂಥ ದುರ್ಘಟ ಪ್ರಸಂಗದಲ್ಲಿ ಇಬ್ಬರು ಶತ್ರುಗಳನ್ನು ಏಕಕಾಲದಲ್ಲಿ ಎದುರಿಸುವುದು ದುಸ್ಸಾಧ್ಯ ಅದು ಬುದ್ಧಿವಂತಿಕೆಯೂ ಅಲ್ಲ. ಇಬ್ಬರಲ್ಲಿ ಒಬ್ಬನೊಡನೆ ತಾತ್ಕಾಲಿಕವಾಗಿ ಸಂಧಿಮಾಡಿಕೊಳ್ಳುವುದೇ ಉತ್ತಮ ರಾಜಕೀಯ ನನಗೆ ಪ್ರಬಲರಾದ ಮೊಗಲ್ ಬಾದಷಹರೊಡನೆ ಸಂಧಿಮಾಡಿಕೊಳ್ಳುವುದೇ ಕ್ಷೇಮಕರವೆಂಬ ಅಭಿಪ್ರಾಯವಿದೆ. ಈ ದರ್ಬಾರಿನಲ್ಲಿ ನೀವೆಲ್ಲರೂ ದೊಡ್ಡವರು ಬಹು ಅನುಭವಸ್ಥರು. ನಿಮ್ಮ ಅಭಿಪ್ರಾಯದಂತೆ ಮಾಡೋಣ" ಎಂದು ಹೇಳಿ ಸಲಾಂ ಮಾಡಿದನು.

ಆ ಸಭಿಕರೆಲ್ಲರೂ ' ಈ ಸಮಯದಲ್ಲಿ ಖವಾಸ್ ಖಾನನ ಆಲೋಚನೆಯೇ ಯುಕ್ತವಾಗಿದೆಯೆಂದು ನಮಗೆ ತೋರುತ್ತದೆ" ಎಂದು ಹೇಳಿದರು.

ಬೇಗಂ ಸಾಹೇಬಾಳು ತಲೆಬಾಗಿ ಮೌನದಿಂದ ಕುಳಿತಿದ್ದಳು

ಖವಾಸ್‌ಖಾನನು ಬೇಗಂಸಾಹೇಬಾಳ ಕಡೆಗೆ ತಿರುಗಿ ಸಲಾಂ ಮಾಡಿ ಬೇಗಂಸಾಹೇಬಾ "ದೊಡ್ಡವರೂ, ಅನುಭವಸ್ಥರೂ ಆದ ಈ ದರ್ಬಾರಿಗಳ ಅಭಿಪ್ರಾಯವೆಲ್ಲವೂ ಏಕವಾಕ್ಯತೆಯಿಂದ ಕೂಡಿದೆ. ತಮ್ಮ ಅಭಿಮತವನ್ನು ಅಪ್ಪಣೆ ಕೊಡಿಸಬೇಕು" ಎಂದು ಕೇಳಿದನು.

ಬೇಗಂ ಸಾಹೇಬಾಳು ಮೆಲ್ಲನೆಯ ಧ್ವನಿಯಿಂದ 'ನನ್ನ ಅಭಿಪ್ರಾಯ ? ಅದರಿಂದ ಪ್ರಯೋಜನವೇನಿದೆ ?" ಎಂದಳು.

ವೃದ್ಧ ಮಂತ್ರಿಯು "ಬೇಗಂ ಸಾಹೇಬಾ, ನಿಜವಾಗಿಯೂ ನೀವೇ ಆದಿಲ್‌ಶಾಹಿಯ ಅಧಿಕಾರಿಣಿ. ನಿಮ್ಮ ಮಾತಿಲ್ಲದೆ ಇಂಥ ಮುಖ್ಯ ರಾಜಕೀಯವು ಬಗೆಹರಿಯುವುದಿಲ್ಲ. ನೀವು ಸ್ವಚ್ಛವಾಗಿ ಮನಬಿಚ್ಚಿ ಹೇಳಿಬಿಡಬೇಕು ಆ ಮೇಲೆ ಖುದಾನ ಇಷ್ಟದಂತೆ ಆಗುತ್ತದೆ" ಎಂದು ಹೇಳಿದನು.

ಎಲ್ಲರೂ "ಹೌದು. ಹೌದು. ಬೇಗಂ ಸಾಹೇಬಾರ ಮಾತೇ ಆಖೈರು ತೀರ್ಮಾನ" ಎಂದು ಹೇಳಿದರು.

"ಎಲ್ಲರ ದೃಷ್ಟಿಯು ಬೇಗಂ ಸಾಹೇಬಾರ ಮುಖದ ಕಡೆಗಿದ್ದಿತು.

ಬೇಗಂ ಸಾಹೇಬಾಳು "ವಜೀರ ಸಾಹೇಬರನ್ನು ನಾನೊಂದು ಪ್ರಶ್ನೆ ಕೇಳಬಹುದೇ ?" ಎಂದಳು.

ಖವಾಸ್‌ಖಾನನು ಹುಜೂರ್, ಸಿದ್ಧವಾಗಿದ್ದೇನೆ" ಎಂದು ಸಲಾಂ ಮಾಡಿದನು.

ಬೇಗಂಸಾಹೇಬಾಳು "ಬಿಜಾಪುರದ ಪ್ರಖ್ಯಾತ ಸೇನಾಧಿಪತಿಗಳಾದ ಬೊಲಾಲ್‌ಖಾನ್, ಅಬ್ದುಲ ಮಹಮದ್, ಮುಜಾಫರ್‌ಖಾನರೂ ರಾಜ್ಯಕ್ಕೆ ಆಪತ್ತು ಒದಗಿರುವ ಇಂತಹ ಸಮಯದಲ್ಲೂ ವಿಮುಖರಾಗಿರಲು ಕಾರಣವೇನು ? ದಯವಿಟ್ಟು ಬಿಚ್ಚಿ ಹೇಳುವಿರಾ ?"

ಖವಾಸ್‌ಖಾನನು "ಹೇಳುವುದಕ್ಕೆ ಅಡ್ಡಿಯೇನಿದೆ, ಹುಜೂರ್ ? ಅವರವರು ತಮ್ಮ ತಮ್ಮ ಪ್ರಾಂತಗಳಲ್ಲಿರುವ ಸುಲ್ತಾನರ ಕೋಟೆಗಳ ಮೇಲೆ ತಮಗೆ ಸರ್ವಾಧಿಕಾರವಿರಬೇಕೆಂದು ಹಠ ಹಿಡಿದರು. ಹಾಗೆ ಅಧಿಕಾರ ಕೊಟ್ಟರೆ ಅಲ್ಲಲ್ಲಿ ಅವರೇ ಸುಲ್ತಾನರಾಗಿ ಬಿಡುತ್ತಾರೆ. [illegible] ಒಬ್ಬರ

ಮೇಲೆ ಒಬ್ಬರು ಅಧಿಕಾರ ನಡೆಸುವುದಕ್ಕೆ ಅವಕಾಶವೇ ಇಲ್ಲ. ಒಂದು ಪಕ್ಷ ಅವರೇನಾದರೂ ಶತ್ರುಗಳೊಡನೆ ಶಾಮೀಲಾಗಿಬಿಟ್ಟರೆ ಈ ರಾಜ್ಯವೇ ಹೋದಂ ತಾಯಿತು."

ಬೇಗಂಸಾಹೇಬಾಳು "ಕೋಟೆಗಳ ಮೇಲೆ ಅಧಿಕಾರವಿಲ್ಲದೆ ಕೋಟೆ ಗಳನ್ನು ಸಕ್ಷಣೆಮಾಡಲಾಗುತ್ತದೆಯೇ? ಯುದ್ಧ ಶಾಸ್ತ್ರವನ್ನು ಚೆನ್ನಾಗಿ ಅರಿತ ನೀವುಗಳೇ ಯೋಚನೆಮಾಡಿರಿ ಆ ಸೇನಾಧಿಪತಿಗಳು ಶತ್ರುಗಳೊಡನೆ ಶಾಮೀಲಾಗಬಹುದು ಎಂಬ ಅನುಮಾನವನ್ನು ಎತ್ತಿದ್ದೀರಿ. ಶಿವಾಜಿಯು ನಮ್ಮ ಮೇಲೆ ಯುದ್ಧ ಬಂದು ಹೆಚ್ಚು ಕಡಿಮೆ ಆರು ತಿಂಗಳುಗಳ ಮೇಲಾ ದುವು. ಈ ಸೇನಾಧಿಪತಿಗಳು ಅವನೊಡನೆ ಮಸಲತ್ತು ಮಾಡಿದ ಸಮಾಚಾರ ವೇನಾದರೂ ದರ್ಬಾರಿಗೆ ಬಂದಿದೆಯೇ? ಹೋಗಲಿ. ಈಗ ಚರ್ಚೆಯಿಂದ ಫಲವಿಲ್ಲ. ಕೈಮೀರಿಹೋದ ಕಾರ್ಯ. ಮೊದಲೇ ಯೋಚನೆಮಾಡಿದ್ದರೆ ಬಹಳ ಚೆನ್ನಾಗಿತ್ತು. ಇಂಥಪ್ರಸಂಗವೇ ಒದಗುತ್ತಿರಲಿಲ್ಲ. ಪ್ರಸ್ತುತವನು ತಾಳ್ಮೆಯಿಂದ ಸಮಾಲೋಚನೆ ಮಾಡೋಣ. ಆ ಮೊಗಲರು ಪ್ರಬಲರು. ಅದನ್ನು ನಾವು ಒಪ್ಪಲೇಬೇಕು. ಔರಂಗಜೇಬ ಬಾದಷಹರೇ ಹಿಂದೆ ಈ ಕೋಟೆಯನ್ನು ಮುತ್ತಿ ದಂಗಾ ಕೂತಿದ್ದರೆಂದು ಕೇಳಿದ್ದೇನೆ. ಅವರು ಸುಲಭವಾಗಿ ಸಂಧಿಗೆ ಒಪ್ಪುವರೇ?" ಎಂದು ಕೇಳಿದಳು.

ಖವಾಸ್‌ಖಾನನು ಗಂಭೀರಭಾವದಿಂದ "ರಾಜಭಾರಿಗಳನ್ನು ಕಳುಹಿಸಿ ದ್ದೇನೆ ಅವರ ಉತ್ತರ ಬಂದಿಲ್ಲ. ಸಂಧಿಯ ಷರತ್ತುಗಳು ಇನ್ನೂ ತಿಳಿದು ಬಂದಿಲ್ಲ" ಎಂದು ಹೇಳಿದನು.

ಬೇಗಂಸಾಹೇಬಾಳು "ಸಂಧಿಯ ಷರತ್ತುಗಳು ಕಠಿಣವಾಗಿದ್ದರೆ, ನಮ್ಮ ದರ್ಬಾರಿಗೆ ಅಪಮಾನಕರವಾದ್ದರೆ?"

ಖವಾಸ್‌ಖಾನನು "ಕಠಿಣವಾಗಿದ್ದರೂ ಸದ್ಯಕ್ಕೆ ಒಪ್ಪಿಕೊಳ್ಳಬೇಕು. ಆ ಮೇಲೆ ಸಡಿಲಿಸಿಕೊಳ್ಳಬೇಕು. ಅದೇ ರಾಜನೀತಿ" ಎಂದನು.

ಬೇಗಂಸಾಹೇಬಾಳು "ಏನೇ ಇಗಲಿ. ಅಪಮಾನಕರವಾದ ಸಂಧಿಯನ್ನು ನಾನೊಪ್ಪುವುದೇ ಇಲ್ಲ. ಇಂದೇ ನಿಮ್ಮ ಎಲ್ಲರ ಎದುರಿನಲ್ಲಿ ನಾನು ನನ್ನ ಪ್ರಾಣವನ್ನು ನೀಗಿಸಿಕೊಳ್ಳುತ್ತೇನೆ. ಅಪ್ರಬುದ್ಧ ಬಾಲಕ ಸುಲ್ತಾನನನ್ನು ನೀವು ಕಾಪಾಡಿಕೊಳ್ಳಿರಿ" ಎಂದು ಕಣ್ಣೀರು ಸುರಿಸುತ್ತಾ ಗದ್ಗದ ಕಂಠದಿಂದ ನುಡಿದಳು

ಸಭಿಕರೆಲ್ಲರ ಹೃದಯಗಳೂ ನಡುಗಲಾರಂಭಿಸಿದವು. ಬೇಗಂ ಸಾಹೇ

ಬಾಳ ದೀನವಾಣಿಯನ್ನು ಕೇಳಿ ಅವರ ಕಣ್ಣುಗಳಲ್ಲಿಯೂ ಇಂಬನಿಯು ತೊಟ್ಟಿಕ್ಕಿತು

ಮಂತ್ರಿಗಳು "ಬೇಗಂಸಾಹೇಬಾ, ತಮ್ಮ ಇಚ್ಛೆಯಂತೆ ನಾವು ನಡೆದುಕೊಳ್ಳುತ್ತೇವೆ ಈಗ ಸಂಧಿ ಪ್ರಸ್ತಾಪವೇ ಬೇಡ. ಯುದ್ಧ ಮುಂದುವರಿಯಲಿ" ಎಂದು ಹೇಳಿದರು.

ಖವಾಸ್‌ಖಾನನ ಮುಖವು ಬಿಳಿಚಿಕೊಂಡಿತು. ಕೈಕಾಲುಗಳಲ್ಲಿ ನಡುಕ ಹುಟ್ಟಿತು. ಅವನ ಕೈಮುಗಿದು "ಮಂತ್ರಿಗಳೇ, ಬೇಗಂಸಾಹೇಬಾರೇ ನಾನು ನನ್ನ ಅಧಿಕಾರವನ್ನು ಪರಿತ್ಯಾಗ ಮಾಡುತ್ತೇನೆ. ಅಪ್ಪಣೆಕೊಡಿರಿ ನಾನು ನನ್ನ ಜಹಗೀರಿಗೆ ಹೋಗುತ್ತೇನೆ. ತಮ್ಮ ಸೇವೆಗೆ ಯಾವಾಗಲೂ ಸಿದ್ಧನಾಗಿರುತ್ತೇನೆ" ಎಂದು ಹೇಳಿ ಕುಳಿತುಕೊಂಡನು.

ಸಭೆಯಲ್ಲೆಲ್ಲಾ ಸ್ತಂಭೀಭಾವ !

ಬೇಗಂ ಸಾಹೇಬಾಳು ಸುತ್ತಲೂ ತಿರುಗಿ ಎಲ್ಲರ ಮುಖಗಳನ್ನು ನೋಡಿದಳು.

ಸಭಿಕರ ಅಂತರಂಗವು ತನ್ನ ಕಡೆಗಿದೆ ಎಂದು ಅರ್ಥಮಾಡಿಕೊಂಡಳು. ಮಡಿಲಿನಲ್ಲಿದ್ದ ಬಹದ್ದೂರ್‌ಖಾನನ ಲಕ್ಕೋಟೆಯನ್ನು ತೆಗೆದು ಖವಾಸ್ ಖಾನನ ಕಡೆಗೆ ಎಸೆದು "ಬಹದ್ದೂರ್‌ಖಾನರ ಸಂಧಿಪತ್ರ ಇಲ್ಲಿದೆ ನೋಡಿರಿ. ಸಭಿಕರೆಲ್ಲರೂ ಓದಿಸಿಕೇಳಿರಿ. ಈ ಸಂಧಿಯನ್ನು ತಲೆಬಾಗಿ ಒಪ್ಪಿಕೊಳ್ಳಬೇಕು. ರಾಜತಿಷ್ಯನಾದ ಈ ಖವಾಸ್‌ಖಾನನನ್ನು ಬಿಟ್ಟುಬಿಡಬೇಕು ನಿಮಗೆಲ್ಲರಿಗೂ ಯಾವುದು ಒಪ್ಪಿತವೋ ಅದನ್ನು ಮಾಡಿರಿ" ಎಂದಳು.

ಖವಾಸ್‌ಖಾನನಿಗೆ ತಲೆ ತಿರುಗಿತು. ದಿಗ್ಭ್ರಾಂತನಾದನು. ಆಸನದಲ್ಲಿ ಕುಸಿದು ಕುಳಿತುಬಿಟ್ಟನು.

ಸುಲ್ತಾನನ ಬಂಧುವಾದ ಜಹಾಂಗೀರ್‌ಖಾನನು ಆ ಪತ್ರವನ್ನು ಕೈಗೆ ತೆಗೆದುಕೊಂಡು ಗಟ್ಟಿಯಾಗಿ ಓದಿದನು. ವಾಕ್ಯವಾಕ್ಯಗಳನ್ನು ಬಿಡಿಸಿ ಓದಿದನು.

ಮಂತ್ರಿಗಳು, ಸರದಾರರುಗಳು, ಎಲ್ಲರ ಮುಖಗಳೂ ವಿವರ್ಣವಾದುವು ತೋಬಾ ! ತೋಬಾ! ಎಂತಹ ಸಂಧಿ ! ಇದು ಸರ್ವ ಶರಣಾಗತಿ, ಎಂದು ನಾಲ್ಕು ಕಡೆಗಳಿಂದ ಉದ್ಗಾರದ ಮಾತುಗಳು ಹೊರಟವು.

ಪತ್ರವನ್ನು ಜಹಾಂಗೀರ್‌ಖಾನನು ಪೂರ್ತಿಯಾಗಿ ಓದಿದನು.

ಸರದಾರರೆಲ್ಲರೂ ಎದ್ದು ಕತ್ತಿಗಳನ್ನು ಹಿರಿದು "ಆ ಪತ್ರವನ್ನು

ಸರದಾರರೆಲ್ಲರೂ ಎದ್ದು ಕತ್ತಿಗಳನ್ನು ಹಿರಿದು "ಆ ಪತ್ರವನ್ನು ಬಿಸಾ ಡಿರಿ. ನಾವು ಯುದ್ಧಮಾಡುತ್ತೇವೆ" ಎಂದು ಧೀರವಾಣಿಯಿಂದ ನುಡಿದರು

ಖವಾಸ್‌ಖಾನನು ಎದ್ದುನಿಂತು ತಲೆಬಾಗಿ ವಂದಿಸಿ ಆ ಸಭೆಯಿಂದ ಹೊರಟುಹೋದನು.

ಎಲ್ಲರೂ ಅವನನ್ನು ಧಿಕ್ಕರಿಸುತ್ತಾ ಮನೆಗಳಿಗೆ ತೆರಳಿದರು.

ಬೇಗಂ ಸಾಹೇಬಾಳು ನಮ್ರತೆಯಿಂದ ತಲೆಬಾಗಿ ಅಂತಃಪುರದೊಳಗೆ ಪ್ರವೇಶಮಾಡಿದಳು.

ಏಕಾಂತದಲ್ಲಿ ಫಿರೋಜನೂ ಸುರಮಾಳೂ ಏಕದೇಹನ್ಯಾಯವಾಗಿ ಆಲಿಂಗಿಸಿದರು. ಅವರ ಬುದ್ಧಿಶಕ್ತಿಯು ಫಲಿಸಿತು. ಪರಸ್ಪರ ಒಬ್ಬರ ನ್ನೊಬ್ಬರು ಹೊಗಳಿದರು.

ಆ ಆನಂದೋದ್ರೇಕವು ಶಾಂತವಾದ ಮೇಲೆ ಬೇಗಂ ಸಾಹೇಬಾಳು "ಫಿರೋಜ್, ನಿನ್ನ ಅದೃಷ್ಟವು ಖುಲಾಯಿಸಿದೆ. ಮುಂದೆ ರಾಜ್ಯದ ಸರ್ವಾ ಧಿಕಾರಿಯಾಗಬಲ್ಲವನು ಯಾರಿದ್ದಾನೆ? ನೀನೇ. ನಿನ್ನ ಬುದ್ಧಿಗೆ ತಕ್ಕ ಅಧಿ ಕಾರ ಪುರಸ್ಕಾರ" ಎಂದು ಹೇಳಿದಳು.

ಫಿರೋಜ್‌ನು ನಗುತ್ತಾ ಸುರಮಾಳ ಮುಂಗುರುಳುಗಳನ್ನು ಸರಿಪಡಿಸಿ, ತಲೆಸವರುತ್ತಾ "ಸುರಮಾ, ಇಲ್ಲಿ ನಿನ್ನ ಸ್ತ್ರೀ ಬುದ್ಧಿಯು ಎದ್ದು ಕಾಣುತ್ತದೆ. ನಾನೆಲ್ಲಿ? ಆ ಸರ್ವಾಧಿಕಾರ ಪಟ್ಟವೆಲ್ಲಿ? ಈ ಮಾತನ್ನು ಯಾರಾದರೂ ಕೇಳಿ ದರೆ ಮಂತ್ರಿಗಳು, ಉಮ್ರಾಳು, ಸರದಾರರು, ರಾಜ್ಯ ಪ್ರಮುಖರ, ರಾಜ ಧಾನಿಯ ಮುಖಂಡರು, ಎಲ್ಲರೂ ಛೀ, ಛೀ, ಎನ್ನುತ್ತಾರೆ.

"ಇಷ್ಟು ಮಾಡಿದ್ದು ವ್ಯರ್ಥವಾಗುತ್ತದೆ. ಖವಾಸ್‌ಖಾನನು ದಿಗ್ವಿ ಜಯಿಯಾಗುತ್ತಾನೆ. ಸರ್ವತಂತ್ರ ಸ್ವತಂತ್ರನಾಗಿ ಬಹದ್ದೂರ್‌ಖಾನನೊಡನೆ ಸಂಧಿ ಮಾಡಿಕೊಂಡು ನಮ್ಮಿಬ್ಬರನ್ನೂ ಬಹಿರಂಗವಾಗಿ ಶೂಲಕ್ಕೇರಿಸುತ್ತಾನೆ. ನೀನು ರಾಜಮಾತೆಯೆಂಬುದು ಭ್ರಾಂತಿ. ಸುಲ್ತಾನನ ಸಾಕು ತಾಯಿ. ನೀನು ಹುಚ್ಚು ಯೋಚನೆಗಳನ್ನು ಹಚ್ಚಿಕೊಳ್ಳಬೇಡ ನನಗೆ ಮುಕ್ತತ್ವಾಧಿ ಕಾರದ ಆಸೆಯಿಲ್ಲ. ನಿನ್ನ ಅನುಗ್ರಹವಿದ್ದರೆ ಸಾಕು. ನಿನ್ನ ಪ್ರೇಮವಿದ್ದರೆ ಸಾಕು" ಈಗ ವೃದ್ಧ ಮಂತ್ರಿಯಾದ ಅಬ್ದುಲ್ ಮುನ್‌ಖಾನ್‌ನನ್ನು ಸುಲ್ತಾನೀ ರಾಜ್ಯಾಧಿಕಾರಿಯಾಗಿ ಮಾಡಬೇಕು. ಅದನ್ನು ಎಲ್ಲರೂ ಒಪ್ಪುತ್ತಾರೆ. ಬಿಟ್ಟು ಹೋಗಿರುವ ಸೇನಾಧಿಪತಿಗಳು ಪುನಃ ಬಂದು ಸೇರುತ್ತಾರೆ. ಈ ಖವಾಸ್

ಖಾನನನ್ನು ಮರ್ಯಾದೆಯಿಂದ ಜಹಗೀರಿಗೆ ಕಳುಹಿಸಿಬಿಡಬೇಕು. ಸಮಯ ಬಂದಾಗ ಉಪಯೋಗಿಸಿಕೊಳ್ಳಬಹುದು" ಎಂದು ಹೇಳಿದನು.

ಬೇಗಂಸಾಹೇಬಳು "ಫಿರೋಜ್, ನೀನು ಬುದ್ಧಿವಂತ ಬಹದ್ದೂರ್. ಅದಕ್ಕಾಗಿಯೇ ನನ್ನ ಮನವು ನಿನ್ನನ್ನು ಇಷ್ಟು ಒಲಿದಿದೆ" ಎಂದು ಹೇಳಿ ಫಿರೋಜನನ್ನು ಆಲಿಂಗಿಸಿದಳು.

ಮಾರನೆಯ ದಿವಸವೇ ವೃದ್ಧ ಮಂತ್ರಿ ಕುತುಬುದ್ದೀನನಿಗೆ ಸರ್ವಾಧಿಕಾರ ಪಟ್ಟ ಕಟ್ಟಿದರು. ಈ ರಾಜಧಾನಿಯ ಅಘಟನಾ ಘಟನೆಗಳನ್ನು ಕೇಳಿ ಮೂರವರು ಮುಖ್ಯ ಸೇನಾಧಿಪತಿಗಳೂ ರಾಜಧಾನಿಗೆ ಬಂದು ಬೇಗಂ ಸಾಹೇಬಾಳ ಭೇಟಿ ಮಾಡಿ ತಮ್ಮ ವಂದನೆಗಳನ್ನು ಅರ್ಪಿಸಿ, ತಾವು ಸೇವೆಗೆ ಸಿದ್ಧವಾಗಿರುವುದಾಗಿ ಪ್ರಮಾಣಮಾಡಿದರು.

ವೃದ್ಧ ಕುತುಬ್ದೀನ್‌ಖಾನನು ಎಲ್ಲರೊಡನೆಯೂ ಆಲೋಚನೆ ಮಾಡಿ "ದೊಡ್ಡ ಸುಲ್ತಾನರ ಕಾಲದಲ್ಲಿಯೇ ನಮಗೂ ಶಿವಾಜಿಗೂ ಸಂಧಿಯಾಗಿದೆ. ಅದನ್ನು ಅವರ ತಂದೆ ಷಾಜಿಯವರೇ ನಿರ್ಧಾರಮಾಡಿದ್ದಾರೆ. ಅದನ್ನು ಮೀರಲು ಶಿವಾಜಿಗೂ ಧೈರ್ಯವಿಲ್ಲ. ನಮಗೂ ಅಧಿಕಾರವಿಲ್ಲ. ಪನ್ಹಾಲಾ ದುರ್ಗವು ಉಭಯತಃ ವಿವಾದಾಸ್ಪದವಾಗಿದೆ. ಅದನ್ನು ಶಿವಾಜಿಗೇ ಬಿಟ್ಟು ಕೊಟ್ಟಿದ್ದೇವೆ. ಶಿವಾಜಿಯು ಮಹಾರಾಷ್ಟ್ರದ ಮಹಾರಾಜನೆಂದು ಮೊದಲೇ ಒಪ್ಪಿಕೊಂಡಿದ್ದೇವೆ. ಈಗಲೂ ಒಪ್ಪುತ್ತೇವೆ. ಬಿಜಾಪುರ ರಾಜ್ಯ ಮಹಾರಾಷ್ಟ್ರ ರಾಜ್ಯ ಇವೆರಡೂ ಅನ್ಯೋನ್ಯವಾಗಿ ಶಾಶ್ವತವಾಗಿ ಬಾಳಬೇಕು. ಎಂದು ಪತ್ರವನ್ನು ಬರೆಸಿ ಶಿವಾಜಿಗೆ ಕಳುಹಿಸಿಕೊಟ್ಟರು.

ಶಿವಾಜಿಯು ಬಹಳವಾಗಿ ಯೋಚನೆ ಮಾಡಿ "ಸತ್ಯಕ್ಕೆ ಹಾಗಿರಲಿ. ದುರ್ಬಲರು, ಬಿಜಾಪುರದವರು ದುರ್ಬಲರಾಗಿದ್ದರೂ ದೊಡ್ಡ ರಾಜ್ಯ-ಸಂಘವೆಂಬ ಹೆಸರಿರಲಿ" ಎಂದು ತನ್ನ ಸಂಗಡಿಗರೊಡನೆ ಆಲೋಚನೆ ಮಾಡಿ ಆ ಪತ್ರಕ್ಕೆ ಸದುತ್ತರ ಕೊಡುತ್ತ ಕಳುಹಿಸಿದನು

---

ಬಹಲೋಲ್‌ಖಾನನಿಗೆ ಗುಪ್ತಚಾರರ ಮುಖೇನ ಈ ಸಮಾಚಾರವೆಲ್ಲಾ ಸಿತಾಸಿತವಾಗಿ ತಿಳಿದವು. ಆದರೆ "ಪ್ರತಾಪರಾಯನು ಮರಣ ಹೊಂದಿದ್ದಾನೆ.

ಶಂಭಾಜಿಯು ಸತ್ತು ಹೋಗಿದ್ದಾನೆ. ನೇತಾಜಿಯು ದೇಶವನ್ನೇ ಬಿಟ್ಟು ಹೋಗಿದ್ದಾನೆ. ಇನ್ನಿರುವ ಸರದಾರರು ಅಷ್ಟೇನೂ ಬಲಾಢ್ಯರಲ್ಲ. ಈ ಶಿವಾಜಿಯನ್ನು ಈಗಲೇ ಎದುರಿಸಬೇಕು" ಎಂದು ಯೋಚನೆಮಾಡಿ ದಿಲೇರ್ ಖಾನನನ್ನು ಕರೆಸಿದನು.

ಬಹದ್ದೂರ್ ಖಾನನು ದಿಲೇರ್ ಖಾನನಿಗೆ ಪ್ರಕೃತ ರಾಜಕೀಯವನ್ನೆಲ್ಲ ಬಿಚ್ಚಿ ಹೇಳಿದನು. "ನೋಡು ದಿಲೇರ್ ಖಾನ್, ಬಿಜಾಪುರದವರು ನಮಗೆ ಪೂರ್ಣ ಶರಣಾಗತರಾಗಿ ಬಂದಿದ್ದರು. ಬಿಜಾಪುರದ ಸೇನಾಧಿಪತಿಗಳಾದ ಬೋಲಾಲ್ ಖಾನ್ ಮುಂತಾದ ಮೂರು ಮಂದಿಯೂ ಅತ್ಯಂತ ಸಾಹಸಿಗಳಾದ ಸೇನಾಧಿಪತಿಗಳು. ಅವರು ಅತ್ತ ಕಡೆಯಿಂದ, ನಾವು ಇತ್ತ ಕಡೆಯಿಂದ ಆ ಶಿವಾಜಿಯನ್ನು ಎದುರಿಸಿದ್ದರೆ ಮಧ್ಯದಲ್ಲಿ ಸಿಕ್ಕಿ ಅವನು ಹಣ್ಣುಗುತ್ತಿದ್ದ. ಬಿಜಾಪುರದವರೊಡನೆ ಅಂಥ ಸಂಧಿಯನ್ನು ಏರ್ಪಡಿಸಿದ್ದೆ. ಅದನ್ನು ಏನೋ ಕುತಂತ್ರದಿಂದ ಆ ಶಿವಾಜಿಯು ಮುರಿದು ಬಿಟ್ಟಿದ್ದಾನೆ. ಅಷ್ಟೇ ಅಲ್ಲ. ಅವರೊಡನೆ ಆಗಲೇ ಒಂದು ಪ್ರಬಲವಾದ ಸಂಧಿ ಮಾಡಿಕೊಂಡಿದ್ದಾನೆಂದು ಸಮಾಚಾರ ಬಂದಿದೆ. ನಾವು ತಿರುಗಿ ನೋಡಿದ ಕಡೆ ಅವನು ಒಂದು ಹೆಜ್ಜೆ ಮುಂದೆ ನೆಗೆದು ಬಿಟ್ಟಿರುತ್ತಾನೆ. ನಮಗೆ ಮೇಲಿಂದ ಮೇಲೆ ದೆಹಲಿಯಿಂದ ಆದೇಶ ಪತ್ರಗಳು ಬರುತ್ತಿವೆ. ಪ್ರತಿಯೊಂದು ಪತ್ರದಲ್ಲಿಯೂ ಶಿವಾಜಿಯ ವಿಷಯವೇ ಉಲ್ಲೇಖಿಸಲ್ಪಟ್ಟಿದೆ. ಈಗ ಶಿವಾಜಿಯ ಮೇಲೆ ಯುದ್ಧಮಾಡದೆ ನಮಗೆ ಗತ್ಯಂತರವೇ ಇಲ್ಲ. ಸಮಯವೂ ಸರಿಯಾಗಿ ಕೂಡಿದೆ. ಶಿವಾಜಿಯು ಬರುವ ಮಾರ್ಗದಲ್ಲಿ ದೊಡ್ಡ ಸೈನ್ಯವನ್ನು ತೆಗೆದುಕೊಂಡು ಹೋಗಿ ಅವನನ್ನು ಅಡ್ಡ ಕಟ್ಟಿ ಕೊಡದು ಬಿಡಬೇಕು. ಮೋರೋಪಂತ್ ನೊಂದು ಕಡೆ ಅಣ್ಣಾಜೀ ರಾಯನೊಂದು ಕಡೆ, ಆನಂದರಾಯನು ಮತ್ತೊಂದು ಕಡೆ, ಹೀಗೆ ಶಿವಾಜಿಯ ಸೇನಾಧಿಪತಿಗಳೂ; ಸೈನ್ಯಗಳೂ ದೂರ ದೂರ ಚದುರಿಹೋಗಿವೆ. ಅವನೊಡನೆ ಎರಡು ಸಹಸ್ರ ಸೈನ್ಯಗಳು ಮಾತ್ರ ಇವೆಯೆಂದು ವರ್ತಮಾನ ಬಂದಿದೆ. ಈ ಸನ್ನಿವೇಶವು ಚನ್ನಾಗಿದೆ. ಎರಡು ಕಡೆಯೂ ಬೆಟ್ಟಗಳು ಮಧ್ಯದಲ್ಲಿಯೇ ಅವನು ಹಾದು ಬರಬೇಕು. ಈಗ ನಾವು ಹತ್ತು ಸಹಸ್ರ ಸೈನ್ಯವನ್ನು ತೆಗೆದುಕೊಂಡುಹೋಗಿ ಅವನ ಮೇಲೆ ಬಿದ್ದರೆ ಸೈನ್ಯ ಜರ್ಝರಿತ

ಹಾಗೆ ಅವನು ಮೊಲದಂತೆ ನಮ್ಮ ಬಲೆಗೆ ಬೀಳುತ್ತಾನೆ. ಈ ಸಮಯವನ್ನು ಬಿಟ್ಟರೆ ಇಂತಹ ಬೇರೊಂದು ಸಮಯವು ಸರ್ವಥಾ ಸಿಕ್ಕಲಿಕ್ಕಿಲ್ಲ" ಎಂದು ಹೇಳಿ ದಿಲೇರ್‌ಖಾನನನ್ನು ಹುರಿದುಂಬಿಸಿದನು.

ದಿಲೇರ್‌ಖಾನನು ಹತ್ತು ಸಹಸ್ರ ಮೊಗಲ್ ಅಶ್ವಸೈನ್ಯ ಸಮೇತನಾಗಿ ಶಿವಾಜಿಯನ್ನು ಎದುರಿಸಲು ಹೊರಟನು.

ಶಿವಾಜಿಯು ಪನ್ಹಾಳಾದ ಕೋಟೆಯಲ್ಲಿರುವಾಗಲೇ ದಿಲೇರ್‌ಖಾನನು ದೊಡ್ಡ ಸೈನ್ಯ ಸಮೇತವಾಗಿ ತನ್ನ ಮೇಲೆ ಯುದ್ಧಕ್ಕೆ ಬರುತ್ತಿದ್ದಾನೆಂದು ತಿಳಿದುಕೊಂಡು ಮುಂಚಿತವಾಗಿಯೇ ಸೈನ್ಯವನ್ನು ತೆಗೆದುಕೊಂಡು ಹೊರಟನು. ಅಣ್ಣಾಜೀರಾಯನಿಗೆ ಪನ್ಹಾಲಾ ಕೋಟೆಯ ರಕ್ಷಣೆಯನ್ನು ಒಪ್ಪಿಸಿದನು. ತನ್ನ ಸೈನ್ಯವನ್ನು ಜೊತೆಯಲ್ಲಿ ಕರೆದುಕೊಂಡು ಅರಣ್ಯಮಾರ್ಗವಾಗಿ ಹೊರಟನು. ತನ್ನ ಸೈನ್ಯದಲ್ಲಿ ಅರ್ಧ ಸೈನ್ಯವು ಕಣಿವೆಯ ಎದುರಿಗೆ ಬರುತ್ತಿರಬೇಕೆಂದೂ. ಮೊಗಲ್ ಸೈನ್ಯಗಳು ಬಂದರೆ ಓಡಿಹೋಗಿ ಕಾಡುಗಳಲ್ಲಿ ಸೇರಿಕೊಳ್ಳಬೇಕೆಂದೂ ಹೇಳಿ ಖಂಡೋಜಿಯನ್ನು ಅದರ ಸೇನಾಧಿಪತಿಯಾಗಿ ನೇಮಿಸಿ, ತಾನು ಅರಣ್ಯ ಮಾರ್ಗದಲ್ಲಿ ಮುಂದುವರಿದನು.

ದಿಲೇರ್‌ಖಾನನ ಗುಪ್ತಚಾರರು ಖಂಡೋಜಿಯ ಸೈನ್ಯಗಳನ್ನು ಕಂಡು "ಶಿವಾಜಿಯ ಸೈನ್ಯಗಳು ಬರುತ್ತಿವೆ, ಬಹಳ ಸೈನ್ಯಗಳಿವೆ" ಎಂದು ವರದಿ ಮಾಡಿದರು. ದಿಲೇರ್‌ಖಾನನು 'ಶಿವಾಜಿಯು ಕಣಿವೆಯ ಬಾಗಿಲನ್ನು ಹಿಡಿದು ಬಿಡುತ್ತಾನೆ. ಆಮೇಲೆ ಕಣಿವೆಯನ್ನು ದಾಟುವುದು ಅಸಾಧ್ಯವಾಗುತ್ತದೆ' ಎಂದು ಹೇಳಿ ತನ್ನ ಸೈನ್ಯಗಳಿಗೆ ಬೇಗ ದಾಟಬೇಕೆಂದು ಅಪ್ಪಣೆ ಕೊಟ್ಟನು, ಮೊಗಲ್ ಸೈನ್ಯಗಳು ಕಣಿವೆಯೊಳಗೆ ಪ್ರವೇಶಮಾಡಿದವು. ಕಣಿವೆಯ ಮಾರ್ಗ ಮೂರು ಮೈಲಿಗಳಿದ್ದವು. ಒಂದು ಕಣಿವೆಯಿಂದ ಇನ್ನೊಂದು ಕಣಿವೆ, ಅದರಿಂದ ಮತ್ತೊಂದು ಕಣಿವೆ, ಹೀಗೆ ದಾಟಿ ಹೋಗಬೇಕಾಗಿದ್ದಿತು. ಸೈನ್ಯಗಳು ಭರದಿಂದ ಕಣಿವೆಯನ್ನು ಹೊಕ್ಕು ಹೊರಗೆ ಬರಲಾರಂಭಿಸಿದವು. ಮೇಲಿನಿಂದ ತೋಪುಗಳು ಹಾರುವ ಶಬ್ದವು ಕೇಳಿಸಿತು. ಮೊಗಲ್ ಸೈನ್ಯಗಳು ದಶಶತ ಸಂಖ್ಯೆಗಳಲ್ಲಿ ಸತ್ತು ಬೀಳಲಾರಂಭಿಸಿದವು. ಮಧ್ಯೆ ಮಧ್ಯೆ ದೊಡ್ಡ ದೊಡ್ಡ ಕಲ್ಲುಗಳು ಮೇಲಿನಿಂದ ಉರುಳಿ ಸೈನ್ಯಗಳು ಹತಾಹತವಾದವು. ದೈವವಶಾತ್ ದಿಲೇರ್‌ಖಾನನು ಕಣಿವೆಯ ಹಿಂದುಳಿದ್ದನು, ಮರಾಠಾ ಸೈನಿಕರೊಂದಿಗೆ ಶಿವಾಜಿಯು ದಿಲೇರ್‌ಖಾನನ ಮೇಲೆ

ಬಿದ್ದನು. ದಿಲೇರ್‌ಖಾನನು ಎದುರಿಸಿ ಯುದ್ಧ ಮಾಡಿದನು. ನೂರಾರು ಜನ ಮರಾಠಾ ಸೈನಿಕರು ಸತ್ತು ಬಿದ್ದರು. ಅಷ್ಟರಲ್ಲಿ ದಿಲೇರ್‌ಖಾನನೊಡನೆ ಇದ್ದ ಸೈನ್ಯದಲ್ಲಿ ಕೆಲವರು ಸತ್ತರು. ಕೆಲವರು ಕಳಚಿಕೊಂಡು ಹೋದರು. ದಿಲೇರ್ ಖಾನನು ಜಯವಾಗುವುದಿಲ್ಲವೆಂದು ಖಚಿತಮಾಡಿಕೊಂಡು ಖಿನ್ನನಾಗಿ ಅಪಮಾನದಿಂದ ಔರಂಗಬಾದಿಗೆ ಹೋಗಿ ಬಹದ್ದೂರ್‌ಖಾನನಿಗೆ ಮುಖ ತೋರಿಸಿದನು.

ಶಿವಾಜಿಯು ವಿಜಯಿಯಾಗಿ ರಾಯಘಡಕ್ಕೆ ಹೋಗಿ ತಲುಪಿಸಿದನು.

ದಿಲೇರ್‌ಖಾನನು ಔರಂಗ್‌ಬಾದಿಗೆ ಹೋಗಿ ಬಹದ್ದೂರ್‌ಖಾನನ ಭೇಟಿ ಮಾಡಿದನು. "ಖಾನ್‌ಸಾಹೇಬರೇ, ಏನು ಹೇಳಲಿ ಮುಖ್ಯ ನಸೀಬ್ ಚೆನ್ನಾಗಿಲ್ಲ. ಈ ಯುದ್ಧದಲ್ಲಿ ನಾವು ಆ ಶಿವಾಜಿಯನ್ನು ಹಿಡಿಯಲಾಗಲಿಲ್ಲ ವೆಂದಮೇಲೆ ಇನ್ನು ಅವನು ನಮ್ಮ ಕಣ್ಣಿಗೆ ಸಿಕ್ಕುವುದೇ ಇಲ್ಲ.

"ಬಾದಷಹರವರಿಗೆ ಇಲ್ಲಿಯ ಸಂದರ್ಭಗಳೇ ಸರಿಯಾಗಿ ತಿಳಿಯು ವಂತಿಲ್ಲ. ಈ ಶಿವಾಜಿಯನ್ನು ಆಳುವುದಕ್ಕೂ ಆಗುವುದಿಲ್ಲ, ಅರಗಿಸಿ ಕೊಳ್ಳುವುದಕ್ಕೂ ಆಗುವುದಿಲ್ಲ. ಅಂತಹ ಸೈತಾನನಾಗಿದ್ದಾನೆ. ಆ ಶಿವಾಜಿ" ಎಂದು ಹೇಳಿಕೊಂಡನು.

"ನಾವು ಇನ್ನು ಮೇಲೆ ಯುದ್ಧ ಮಾಡುವುದಕ್ಕಿಂತ ನನಗೆ ಮತ್ತೊಂದು ಉಪಾಯವು ತೋರುತ್ತಿದೆ. ನಾಲ್ಕಾರು ಮಂದಿ ಗುಪ್ತಚಾರರನ್ನು ಸಾಧು ಸಂತರ ವೇಷಹಾಕಿ ಅವನಲ್ಲಿಗೆ ಕಳುಹಿಸಿ ಬಿಡಬೇಕು. ಸಾಧುಸಂತರೆಂದರೆ ಅವನು ಮರುಳಾಗುತ್ತಾನೆ. ಅವರ ಕಾಲಿಗೆ ಬೀಳುತ್ತಾನೆ. ಸಮಯ ಕಾದು ಅವರು ಅವನನ್ನು ಕೊಲೆಮಾಡಿಬಿಡುವಂತೆ ಮಾಡಬೇಕು. ಒಂದಲ್ಲ ಒಂದು ವಿಧದಲ್ಲಿ ಈ ಸಾಧುಸಂತರು, ಈ ಪೂಜಾರಿಗಳು, ಮಂತ್ರವಾದಿಗಳು, ಇವ ರಿಂದಲೇ ಅವನ ಮುಕ್ತಾಯವಾಗಬೇಕು. ವಿಷಕ್ಕೆ ವಿಷವೇ ಮದ್ದು" ಎಂದು ಹೇಳಿದನು.

ಬಹದ್ದೂರ್‌ಖಾನನು "ದಿಲೇರ್‌ಖಾನರೇ, ನಿಮ್ಮಂಥಾ ಸೇನಾಧಿಪತಿಗಳು ಯಾರಿದ್ದಾರೆ? ಮೊದಲಿನಿಂದಲೂ ನೀವು ಆ ಶಿವಾಜಿಯನ್ನು ಬಲವಾಗಿ ವಿರೋಧಿಸುತ್ತಿದ್ದೀರಿ. ನೀವಲ್ಲದೆ ಬೇರೊಬ್ಬರಿಂದ ಆ ಪುರಂಧರ ಕೋಟೆ ಯನ್ನು ಬಿಡಿಯಲು ಸಾಧ್ಯವಾಗುತ್ತಿತ್ತೆ? ಅಂದಿನಿಂದ ಇಂದಿನವರೆಗೆ ಅವ

ನೊಡನೆ ಎಷ್ಟೋ ಯುದ್ಧಗಳಲ್ಲಿ ಹೋರಾಡಿದ್ದೀರಿ. ನೀವೇ ಅವನನ್ನು ಹಿಡಿಯಲಾಗುವುದಿಲ್ಲವೆಂದು ಹೇಳಿದ ಮೇಲೆ ಮತ್ತಾರಿಂದ ಆ ಕೆಲಸ ಸಾಧ್ಯ? ನನಗೂ ಏನು ಮಾಡಬೇಕು, ಬಾದಷಹರಿಗೆ ಏನು ಬರೆಯಬೇಕು ಎಂಬುದೇ ತೋರದಾಗಿದೆ. ಇದೇನೋ ಕೆಟ್ಟ ಕಾಲ ಬಂದಂತೆ ಕಾಣುತ್ತದೆ. ಮಹಾರಾಜಾ ಜಯಸಿಂಹನು ಶಿವಾಜಿಯ ಸಂಪರ್ಕದಿಂದ ಅಪಮಾನವನ್ನು ಅನುಭವಿಸಿದರು. ಷಯಿಸ್ತಾಖಾನರು ಅಪಮಾನವನ್ನು ಹೊಂದಿದರು. ಯುವರಾಜರು ಆಗ್ರಹಕ್ಕೆ ಪಾತ್ರರಾದರು. ಮೊಹಬತ್‌ಖಾನರ ವಿಷಯ ನಿಮಗೆ ತಿಳಿದೇ ಇದೆ. ಎಂದೋ ನೀವು ಮತ್ತು ನಾನು ಬಾದಷಹರ ಆಗ್ರಹಕ್ಕೆ ಪಾತ್ರರಾಗಬೇಕಾಗುತ್ತದೆ. ವಿಧಿ ವಿಲಾಸ. ಯಾರೇನು ಮಾಡಬಲ್ಲರು ?" ಎಂದು ಹೇಳಿದನು.

ದೆಹಲಿಯಲ್ಲಿ ಪಂಜಾಬಿನ ಯುದ್ಧವಾರ್ತೆಗಳು ಬಹಳ ಗಲಿಬಿಲಿಯನ್ನು ಉಂಟು ಮಾಡಿದ್ದವು. ಶಿವಾಜಿಯ ವಿಷಯವೂ ಹಾಗೆಯೇ ಬಾದಷಹನ ಮನಸ್ಸನ್ನು ಕುಕ್ಕುತ್ತಿದ್ದಿತು. ಬೊಂಬಾಯಿಯಲ್ಲಿದ್ದ ಇಂಗ್ಲೀಷ್ ಕಂಪೆನಿಯ ಮುಖ್ಯಾಧಿಕಾರಿಯು ಬಾದಷಹರಿಗೆ ಖುದ್ದು ಪತ್ರ ಬರೆದಿದ್ದನು. "ಶಿವಾಜಿಯನ್ನು ಜಯಿಸುವಂಥ ಸಮರ್ಥರು ನಿಮ್ಮ ಸೇನಾಧಿಪತಿಗಳಲ್ಲಿ ಒಬ್ಬರೂ ಇಲ್ಲ. ನಾವು ಸೂರತ್ತಿನಲ್ಲಿ ವ್ಯಾಪಾರ ಮಾಡಲಾರದೆ ಓಡಿ ಬಂದಿದ್ದೇವೆ" ಎಂದು ಬರೆದಿದ್ದನು. ಪೋರ್ಚುಗೀಸ್ ಅಧಿಕಾರಿಗಳಿಂದಲೂ ಅಂಥದೇ ಒಂದು ಪತ್ರ ಬಂದಿತ್ತು. "ಬಾದಷಹರಿಂದ ನಾವು ಸಂಪೂರ್ಣ ರಕ್ಷಣೆ ಪಡೆದು ವ್ಯಾಪಾರ ಮಾಡುತ್ತಿದ್ದೆವು. ಶಿವಾಜಿಯ ಧಾಳಿಯಿಂದ ನಮ್ಮನ್ನು ರಕ್ಷಣೆ ಮಾಡುವವರಿಲ್ಲದೆ ಹೋಯಿತು. ಕೋಲೀ ರಾಜ್ಯ ಹಾಳಾಯಿತು. ನಾವು ಗೋವಾಕ್ಕೆ ಬಂದು ಸೇರಿಕೊಂಡಿದ್ದೇವೆ. ಇದು ಆದಿಲ್‌ಷಾಹಿಯವರ ರಕ್ಷಣೆಯಲ್ಲಿದೆಯೆಂದು ಮೊದಲು ಭಾವಿಸಿದೆವು. ಈಗ ಈ ಗೋವಾಬಂದರು ಕೂಡ ಶಿವಾಜಿಗೇ ಪೂರ್ಣ ಅಧೀನವಾಗಿದೆ. ನಾವು ಎಲ್ಲಿಗೆ ಹೋಗಬೇಕೋ ದಿಕ್ಕು ತೋಚುವುದಿಲ್ಲ" ಎಂದು ಬರೆದಿದ್ದರು.

ಬಾದಷಹನು ಇದನ್ನೆಲ್ಲಾ ನೋಡಿ ಕೋಪದಿಂದ ಉರಿಯಲಾರಂಭಿಸಿದನು. ಈ ಸಮಯಕ್ಕೆ ಸರಿಯಾಗಿ ಬಿಜಾಪುರದವರಿಗೂ ಶಿವಾಜಿಗೂ ರಾಜಿಯಾಯಿತು. ಶಿವಾಜಿಯು ಮಹಾರಾಜನೆಂದು ಆದಿಲ್‌ಷಾಹೀ

ದರ್ಬಾರಿನವರು ಒಪ್ಪಿಕೊಂಡರು.ಪೆನ್ನಾಲಾವನ್ನು ಶಿವಾಜಿಗೇ ಬಿಟ್ಟುಕೊಟ್ಟರು ಎಂಬ ಸಮಾಚಾರಗಳು ದೂತರ ಮುಖೇನ ತಿಳಿಯ ಬಂದವು.

ಈ ಸಮಯಕ್ಕೆ ಸರಿಯಾಗಿ "ಕೈಬರ್‌ಪಾಸ್ ಕಣಿವೆಯನ್ನು ನುಗ್ಗಿ ಅಫ್ಘನರು ಹಿಂದೂಸ್ತಾನಕ್ಕೆ ಬಂದುಬಿಟ್ಟಿದ್ದಾರೆ. ತಂಡ ತಂಡವಾಗಿ ಅಫ್ಘನರೂ, ಪಠಾಣರೂ ಪಂಜಾಬನ್ನು ಆಕ್ರಮಿಸುತ್ತಿದ್ದಾರೆ. ವಾಯುವ್ಯ ಪ್ರಾಂತವೆಲ್ಲವೂ ದಂಗೆಕಾರರ ವಶವಾಗಿದೆ. ಪಂಜಾಬು ಇನ್ನು ಹೆಚ್ಚು ದಿನಗಳು ನಮ್ಮ ಕೈಯಲ್ಲಿ ಉಳಿಯುವುದಿಲ್ಲ" ಎಂದು ಮೊಗಲ್ ಅಧಿಕಾರಿಗಳು ಪತ್ರ ಬರೆದು ಕಳುಹಿಸಿದರು. ಆ ಪತ್ರವನ್ನು ನೋಡಿ ಉರಿಯುವ ಬೆಂಕಿಗೆ ಆಜ್ಯವನ್ನು ಸುರಿದಂತಾಯಿತು.

ಬಾದಷಹ ಔರಂಗಜೇಬನು ಸೈನ್ಯಸಮೇತನಾಗಿ ಹಸನ್ ಅಬ್ ಬಾಲ್‌ಗೆ ವೇಗವಾಗಿ ಪ್ರಯಾಣಮಾಡಿ ಹೋಗಿ ಠಿಕಾಣಿ ಹಾಕಿದನು. ಅವನು ಅಲ್ಲಿಗೆ ಹೋಗುವ ಮುನ್ನ ದಿಲೇರ್‌ಖಾನನ್ನು ಜಾಗ್ರತೆಯಾಗಿ ಪಂಜಾಬಿನ ರಣಕ್ಷೇತ್ರಕ್ಕೆ ಕಳುಹಿಸಿಕೊಡಬೇಕೆಂದು ಬಹದ್ದೂರ್ ಖಾನರಿಗೆ ಜರೂರು ಪತ್ರ ಬರೆಸಿ ಕಳುಹಿಸಿದನು.

ಬಾದಷಹ ಔರಂಗಜೇಬನು ಹಸನ್‌ಅಬ್‌ದಾಲ್‌ನಲ್ಲಿ ನಿಂತು ಮೊಗಲ್ ಸೇನಾಧಿಕಾರಿಗಳನ್ನು ಕರೆಸಿಕೊಂಡು ಸೇನೆಯ ವ್ಯೂಹವನ್ನೇ ಬದಲಾಯಿಸು ವಂತೆ ಮಾಡಿ ಯುದ್ಧದ ವೇಗವನ್ನು ಹೆಚ್ಚುಮಾಡಿದನು. ಆ ಯುದ್ಧವು ಅವನು ನಿರೀಕ್ಷಿಸಿದಷ್ಟು ಬೇಗ ಹತೋಟಿಗೆ ಬರಲಿಲ್ಲ.ಆ ರೂಕ್ಷ ಜನರು ಮದ್ದು ಗುಂಡುಗಳಿಗೂ ತುಪಾಕಿಗಳಿಗೂ ಭಯಪಡುತ್ತಿರಲಿಲ್ಲ. ಆಳು ಬಲವನ್ನು ಲೆಕ್ಕಹಾಕಿದರೆ ಒಬ್ಬ ದಂಗೆಕೋರನು ಹತ್ತು ಇಪ್ಪತ್ತು ಮೊಗಲರನ್ನು ಸೀಳಿ ಬಿಸುಡುವಂತಿದ್ದರು. ಅಂಥ ಪ್ರಕರಣದಲ್ಲಿ ಬಾದಷಹರು ಬಂದು ಬಿಟ್ಟಿದ್ದಾರೆ; ಇವರಿಗೆಲ್ಲಿ ಅಪಾಯವು ತಟ್ಟುವುದೋ ಎಂದು ದೊಡ್ಡ ದೊಡ್ಡ ಸೇನಾಧಿ ಪತಿಗಳೆಲ್ಲರೂ ಭಯಪಡುತ್ತಿದ್ದರು.

ಈ ಯುದ್ಧ ಕ್ಷೇತ್ರದಲ್ಲಿ ಒಂದು ಆಶ್ಚರ್ಯಕರವಾದ ಪ್ರಕರಣವು ನಡೆಯಿತು. ದಿಲೇರಖಾನನು ಆ ರಣಕ್ಷೇತ್ರಕ್ಕೆ ಹೋಗಿ ತಲುಪಿದನು.

ಬಾದಷಹನು ಆವನನ್ನು ಸಮೀಪದಲ್ಲಿಯೇ ಇಟ್ಟುಕೊಂಡು ಎಲ್ಲ ರಣಕ್ಷೇತ್ರಗಳಲ್ಲಿಯೂ ಉಸ್ತುವಾರಿ ನೋಡಿಕೊಂಡು ಬರುವುದಕ್ಕೆ ಆವನನ್ನು ನೇಮಿಸಿಕೊಂಡಿದ್ದನು.

ಖೈಬರ್‌ಪಾಸ್ ಸಮೀಪದಲ್ಲಿ ಅಬುಲ್ಲಾಖಾನ್‌ನೆಂಬುವನು ಪ್ರತಿದಿನವೂ ವಿಜಯವನ್ನು ಗಳಿಸುತ್ತಿದ್ದನು. ಅವನು ಐದುಸಾವಿರ ಸೈನ್ಯಗಳ ದಳಪತಿ. ಅವನಲ್ಲಿದ್ದುದು ಎರಡೇ ಸಹಸ್ರ ಸೈನ್ಯ. ಆ ಸೈನ್ಯದಲ್ಲಿ ರಜಪೂತರು, ಮುಸಲ್ಮಾನರು, ಎಲ್ಲರೂ ಇದ್ದರು. ಆದರೆ ಆ ಸೈನ್ಯದ ಶಿಸ್ತು ಅತ್ಯಂತ ಪ್ರಶಂಸನೀಯವಾಗಿತ್ತು. ಅವರು ಪ್ರತಿದಿವಸವೂ ನೂರು ಜನ ದಂಗೆಕಾರರನ್ನಾದರೂ ಕೊಂದುಹಾಕಿ ಬರುತ್ತಿದ್ದರು. ಆ ರಣಕ್ಷೇತ್ರದಲ್ಲಿ ಆ ಸೇನಾಧಿಪತಿಯು ನಾಲ್ಕೈದು ತಿಂಗಳುಗಳಿಂದಲೂ ಹೋರಾಡುತ್ತಿದ್ದಾನೆ. ಅವನ ಸೈನ್ಯದಲ್ಲಿ ಮೂರು ಸಾವಿರ ಜನ ಸತ್ತಿದ್ದಾರೆ. ಉಳಿದವರು ಕೆಜ್ಜ ಹಿಂಜರಿಯದೇ ಹೋರಾಡುತ್ತಾರೆ. ಆ ದಂಗೆಕಾರರಲ್ಲಿಯೂ ಸಮಾಚಾರವು ಹಬ್ಬಿ ಹೋಗಿದೆ. "ಅಬ್ದುಲ್ಲಾಖಾನನ ಕಣ್ಣಿಗೆ ಬಿದ್ದರೆ ಸಾವು ಸಿದ್ಧ" ಎಂದು ದಂಗೆಕಾರರು ಮಾತನಾಡಿಕೊಳ್ಳುತ್ತಾರೆ.

ಈ ಸಮಾಚಾರವನ್ನು ದಿಲೇರ್‌ಖಾನನು ಪ್ರತಿದಿನವೂ ಔರಂಗಜೇಬನಿಗೆ ವರದಿ ಮಾಡುತ್ತಿದ್ದನು. ಔರಂಗಜೇಬನು ನಕ್ಕು ಸಂತೋಷವನ್ನು ವ್ಯಕ್ತಪಡಿಸುತ್ತಿದ್ದನು. ಎಂಥ ಪ್ರಸಂಗದಲ್ಲಿಯೂ ಔರಂಗಜೇಬನು ನಕ್ಕುವನ್ನು ಯಾರೂ ನೋಡಿರಲಿಲ್ಲ. ದಿಲೇರ್‌ಖಾನನಿಗೆ ಆಶ್ಚರ್ಯವಾಯಿತು. ಅವನು ಒಂದು ದಿವಸ ತನ್ನ ವರದಿಯನ್ನು ಪೂರೈಸಿದ ಮೇಲೆ "ಜಹಪನಾ, ಮಾಫ್ ಮಾಡಬೇಕು. ಆ ಅಬ್ದುಲ್ಲಾಖಾನನು ಷಹಾಂಷಹರ ವಿಶೇಷ ಅನುಗ್ರಹಕ್ಕೆ ಪಾತ್ರನೆಂದು ಕಾಣುತ್ತದೆ. ಆ ವಿಷಯದಲ್ಲಿ ನನ್ನ ಕುತೂಹಲವು ಅತ್ಯಧಿಕವಾಗಿದೆ" ಎಂದು ಹೇಳಿ ಸಲಾಂ ಮಾಡಿದನು.

ಔರಂಗಜೇಬನು ಗಹಗಹಿಸಿ ನಕ್ಕನು. "ದಿಲೇರ್‌ಖಾನ್, ಅವನನ್ನು ನೀನು ಮಾತನಾಡಿಸಲಿಲ್ಲವೇನು?"

"ಇಲ್ಲ ಹುಜೂರ್. ಒಂದೆರಡು ಬಾರಿ ಪ್ರಯತ್ನ ಪಟ್ಟೆ. ಅವನು ಕಠಿಣವಾದ ಹೋರಾಟದಲ್ಲಿದ್ದ. ಕೈಕೈಗೆ ಮಿಲಾಯಿಸಿದಾಗಲೂ ಆ ರಾಕ್ಷಸ

ರಂಥ ಕಾಡುಜನರನ್ನು ಹೊಡೆದು ಕೆಳಗೆ ಉರುಳಿಸಿದ. ನಾನೇ ಕಣ್ಣಾರ ನೋಡಿದೆ ಎಲ್ಲ ಸೇನಾಧಿಪತಿಗಳೂ ಹೀಗಿದ್ದಿದ್ದರೆ ಎಂದೋ ನಮಗೆ ಸಂಪೂರ್ಣ ಜಯವಾಗುತ್ತಿತ್ತು ಎಂದುಕೊಂಡೆ."

"ಭೇಷ್! ಪರಾಕ್ರಮಿಯು ಪರಾಕ್ರಮಿಯನ್ನು ಮೆಚ್ಚುತ್ತಾನೆ.ಅವನಿಗೆ ಅಂಥ ಜನರೊಡನೆ ಹೋರಾಡುವುದು ಹುಟ್ಟಿದಂದಿನಿಂದಲೂ ಅಭ್ಯಾಸ ವಾಗಿದೆ. ಅವನನ್ನು ನೀನು ಗುರುತು ಹಿಡಿಯಲಾಗದಿದ್ದುದು ಆಶ್ಚರ್ಯ. ಅವನು ಮರಾಠಾ ಸೇನಾಧಿಪತಿ, ನೇತಾಜೀ.

ದಿಲೇರ್‌ಖಾನನು ಹಾಹಾ ಎಂದನು.

ದಿಲೇರ್‌ಖಾನ್, ಅವನನ್ನು ಮಾತನಾಡಿಸಬೇಡ. ಅವನನ್ನು ಮರೆತು ಬಿಡು. ನೀನು ದಕ್ಷಿಣದಿಂದ ಬಂದಿದ್ದೀ. ಆ ಶಿವಾಜಿಯ ವಿಚಾರ ನಿನ್ನಲ್ಲಿ ಕೇಳುತ್ತಾನೆ. ನೀನು ಆ ಪ್ರಸ್ತಾಪವನ್ನು ಎತ್ತಿದರೆ ಶಿವಾಜಿಯ ಸ್ನೇಹವನ್ನು ಸ್ಮರಣೆಮಾಡಿ ದುಃಖಿಯಾಗಬಹುದು. ಅವನ ಪರಾಕ್ರಮವು ಕುಂಠಿತವಾಗ ಬಹುದು."

"ಜಹಪನಾ, ಇನ್ನು ಒಂದೇ ಒಂದು ಮಾತಿದೆ. ಮನಸ್ಸನ್ನು ತಡೆಯುವ ಶಕ್ತಿಯಿಲ್ಲ. ಕೇಳಲೇ?"

"ಕೇಳು."

"ಆ ನೇತಾಜಿಯು ಮುಸಲ್ಮಾನನಾದುದು ಹೇಗೆ? ಬಲಾತ್ಕಾರ ದಿಂದಲೇ?"

"ಛೀ ! ಛೀ ! ಅವನನ್ನು ಬಲಾತ್ಕಾರಿಸಲು ಯಾರಿಂದ ಸಾಧ್ಯ. ಸ್ವಯಂ ಪ್ರೇರಣೆಯಿಂದ ಅವನು ಮುಸಲ್ಮಾನನಾಗಿದ್ದಾನೆ. ಅದು ದೊಡ್ಡ ಕಥೆ ಹೋಗು" ಎಂದು ಗದ್ದರಿಸಿದನು.

ದಿಲೇರ್‌ಖಾನನು ಬಾದಷಹರ ಗುಡಾರದಿಂದ ಹೊರಟು ಹೋಗುತ್ತಾ "ಆ ನೇತಾಜಿಯನ್ನು ಮತ್ತೊಮ್ಮೆ ನೋಡುತ್ತೇನೆ" ಎಂದು ಹೇಳಿ ಹೊರಟು ಹೋದನು.

೧೭

ಶಿವಾಜಿಯು ರಾಯಘಡಕ್ಕೆ ಹಿಂತಿರುಗಿ ಬಂದು ಕೆಲವು ದಿವಸಗಳು ವಿಶ್ರಾಂತಿಯನ್ನು ಪಡೆದನು. ಅವನಿಗೆ ಸಮರ್ಥ ರಾಮದಾಸರ ದರ್ಶನಕ್ಕೆ ಹೋಗಬೇಕೆಂದು ಅಪೇಕ್ಷೆಯುಂಟಾಯಿತು ಪರಿವಾರ ಸಮೇತನಾಗಿ ರಾಮದಾಸ ಸ್ವಾಮಿಗಳ ದರ್ಶನಾರ್ಥವಾಗಿ ಛದ್ರಾಚಲಕ್ಕೆ ಪ್ರಯಾಣ ಮಾಡಿದನು.

ಶಿವಾಜಿಯು ಗುರುಗಳನ್ನು ಕಂಡು ಅತ್ಯಂತ ಹರ್ಷದಿಂದ ಅವರ ಪಾದಗಳಿಗೆರಗಿದನು. ರಾಮದಾಸರವರು ಪ್ರಿಯಶಿಷ್ಯನನ್ನು ಆಲಂಗಿಸಿ"ಶಿವಾ, ಎಷ್ಟು ದಿವಸಗಳ ಮೇಲೆ ನೀನಿಲ್ಲಿಗೆ ಬಂದೆ? ನಿನ್ನನ್ನು ನೋಡಿ ಬಹಳ ಸಂತೋಷವಾಯಿತು. ನಿನ್ನ ಸಮಾಚಾರವೇನು? ಹೇಳು" ಎಂದು ಪ್ರಶ್ನೆ ಮಾಡಿದರು.

"ಗುರುದೇವಾ, ನಾನು ಬಹುದಿನಗಳಿಂದಲೂ ಯುದ್ಧದಲ್ಲಿಯೇ ತೊಡಗಿದ್ದೇನೆ. ನನ್ನ ಕಷ್ಟಗಳೆಲ್ಲವೂ ತಮ್ಮ ಅನುಗ್ರಹದಿಂದಲೇ ಹಾರಿಹೋದವು. ತಮ್ಮ ಅನುಗ್ರಹದಿಂದ ಎಲ್ಲ ಕಡೆಯೂ ನಮಗೆ ಜಯವಾಗಿದೆ. ಆದಿಲ್ ಷಾಹಿಯವರು ನಿರ್ವೀರ್ಯರಾಗಿ ನಮ್ಮೊಡನೆ ಸಂಧಿ ಮಾಡಿದ್ದಾರೆ. ಇನ್ನು ಅವರು ತಲೆ ಎತ್ತುವಂತೆಯೂ ಇಲ್ಲ; ನಮ್ಮ ಗೋಜಿಗೆ ಬರುವಂತೆಯೂ ಇಲ್ಲ. ದೆಹಲಿಯ ಬಾದಷಹನು ಮಾತ್ರ ಕ್ರೋಧವಿಟ್ಟಿದ್ದಾನೆ. ಅವನ ಕಡೆ ದೊಡ್ಡ ದೊಡ್ಡ ಸೇನಾಧಿಪತಿಗಳು ಸೋತು ಹೋದರು. ಎಲ್ಲರೂ ಈ ದಕ್ಷಿಣಾವರ್ತವನ್ನೇ ಬಿಟ್ಟು ಹೋದರು. ಬಹದ್ದೂರ್ ಖಾನನೆಂಬ ಒಬ್ಬನೇ ಒಬ್ಬ ಸೇನಾಧಿಪತಿ ಔರಂಗಾಬಾದಿನಲ್ಲಿದ್ದಾನೆ. ತಮ್ಮ ಅನುಗ್ರಹದಿಂದ ಅವನೂ ಮಿತ್ರನಾಗಿದ್ದಾನೆ. ಇನ್ನು ನಮ್ಮ ಮೇಲೆ ಯುದ್ಧಕ್ಕೆ ಬರುವ ಧೈರ್ಯವು ಅವನಿಗಿಲ್ಲ.

"ಗುರುದೇವ, ಮಹಾರಾಷ್ಟ್ರವು ಪೂರ್ತಿಯಾಗಿ ನಮ್ಮ ವಶದಲ್ಲಿದೆ. ಅತ್ತ ಕೊಂಕಣ ಕರ್ನಾಟಕಗಳೆಲ್ಲ ನಮ್ಮ ರಾಜ್ಯಕ್ಕೆ ಸೇರಿ ಹೋಗಿದೆ. ಪಶ್ಚಿಮ

ತೀರವೆಲ್ಲವೂ ನಮ್ಮ ವಶವಾಗಿದೆ. ಖಾನ್ ದೇಶದ ಗಡಿಯವರೆಗೆ ನಮ್ಮ ರಾಜ್ಯ ವಿಸ್ತಾರವಾಗಿದೆ. ಗಡಿಯಲ್ಲಿರುವ ಸುಭದ್ರವಾದ ಕೋಟೆಗಳೆಲ್ಲವೂ ನಮ್ಮ ಕೈಯ್ಯಲ್ಲಿವೆ.

"ಇಷ್ಟಾದಗೂ ಮಹಾರಾಷ್ಟ್ರಕ್ಕಾಗಲಿ, ಹಿಂದುಗಳಿಗಾಗಲೀ ಪೂರ್ಣವಾಗಿ ನಿರ್ಭಯವಾಯಿತೆಂದೂ, ನಿಷ್ಕಂಟಕವಾಗಿದೆಯೆಂದೂ ಹೇಳುವಂತಿಲ್ಲ. ದೆಹಲಿಯ ಬಾದಷಹನು ರೊಚ್ಚಿನಿಂದ ತನ್ನ ಸರ್ವಸಾಮರ್ಥ್ಯವನ್ನೂ ಪ್ರಯೋಗಿಸಿ ಯುದ್ಧಕ್ಕೆ ಬರಬಹುದೆಂಬ ಶಂಕೆಯೊಂದು ಉಳಿದೇ ಇದೆ. ಈಗ ಪಂಜಾಬಿನಲ್ಲಿ ದೊಡ್ಡ ಯುದ್ಧವಾಗುತ್ತಿದೆ. ಬಾದಷಹನ ದೃಷ್ಟಿಯು ಅತ್ತಕಡೆಗೆ ಸೆಳೆದು ಬಹುದೂರ ಹೊರಟುಹೋಗಿದ್ದಾನೆ. ಅದರಿಂದ ದಕ್ಷಿಣಕ್ಕೆ ಬರಲು ಅಸ್ಪದವಿಲ್ಲ. ಅವನೇ ಒಂದು ಬಾರಿ ಸಾಕ್ಷಾತ್ತಾಗಿ ಯುದ್ಧಕ್ಕೆ ಬಂದು ಬಿಟ್ಟರೆ ಈ ತಮ್ಮ ಶಿಷ್ಯನು ಅವನೊಡನೆ ಯುದ್ಧಮಾಡಿ ಜಯವನ್ನು ಪಡೆದರೆ ಕೃತಾರ್ಥನಾಗುತ್ತಾನೆ" ಎಂದು ಹೇಳಿದನು.

ರಾಮದಾಸರು ನಗುತ್ತಾ, "ಶಿವಾ, ಶ್ರೀರಾಮಚಂದ್ರನ ಅನುಗ್ರಹದಿಂದ ಈ ನಿರ್ವೀರ್ಯವಾಗಿ ಹೋಗಿದ್ದ ಮಹಾರಾಷ್ಟ್ರವನ್ನು ನೀನು ಮೇಲಕ್ಕೆತ್ತಿದ್ದೀಯೆ ಹಿಂದೂಧರ್ಮ ಧ್ವಜವು ಈ ದಕ್ಷಿಣದಲ್ಲಿ ಎಲ್ಲೆಲ್ಲಿಯೂ ಮೆರೆಯುವಂತೆ ಮಾಡಿದ್ದೀಯೆ. ದೇವಾಲಯಗಳೂ, ತೀರ್ಥಕ್ಷೇತ್ರಗಳೂ ಪುನರುಜ್ಜೀವನಗೊಂಡಿವೆ ಬ್ರಾಹ್ಮಣರು ನಿರ್ಭಯರಾಗಿ ಕರ್ಮಾನುಷ್ಠಾನ, ಅಧ್ಯಯನಗಳನ್ನು ಮಾಡಿಕೊಂಡು ಸುಖವಾಗಿರುವಂತೆ ಮಾಡಿದ್ದೀಯೆ. ನಾನು ಕೋರಿದ ರಾಜ್ಯವೆಂಬುದು ಇದೇ. ರಾಜ್ಯವೆಂದಮೇಲೆ ಯುದ್ಧವಿಲ್ಲದೆ ಹೋಗದು. ರಾಜರು ಯುದ್ಧಮಾಡುತ್ತಾರೆ. ಜಯಾಪಜಯಗಳು ಆಯಾಕಾಲಗಳಲ್ಲಿ ಸಂಭವಿಸುತ್ತವೆ. ಆದರೆ ದೇಶಭಕ್ತಿ ರಾಷ್ಟ್ರಭಕ್ತಿಗಳಿಂದ ಮೇಲಕ್ಕೆದ್ದ ರಾಜ್ಯಕ್ಕೆ ಎಂದೆಂದಿಗೂ ನಾಶವಿಲ್ಲ."

"ಔರಂಗಜೇಬನು ಮತ್ತೆ ನಿನ್ನ ಮೇಲೆ ಯುದ್ಧಕ್ಕೆ ಬರುವನೆಂಬ ಶಂಕೆಯು ನಿನಗಿದೆ. ನಾನು ಜ್ಞಾನದೃಷ್ಟಿಯಿಂದ ಹೇಳುತ್ತಿದ್ದೇನೆ. ಔರಂಗಜೇಬನು ನಿನ್ನ ಮೇಲೆ ಯುದ್ಧಕ್ಕೆ ಬರುವುದೇ ಇಲ್ಲ. ನೀನು ಧರ್ಮರಕ್ಷಣೆ

ಮಾಡಿದ್ದೀ. ಧರ್ಮವು ನಿನ್ನನ್ನು ರಕ್ಷಿಸುತ್ತದೆ. ನೀನು ಸಂತೋಷ ಚಿತ್ತ ನಾಗಿರು" ಎಂದು ಹೇಳಿದನು.

ಶಿವಾಜಿಯು ಗುರು ಮಹಾರಾಜ್, ಈ ಯುದ್ಧ, ಯುದ್ಧದಲ್ಲಿ ಜಯ, ರಾಷ್ಟ್ರನಿರ್ಮಾಣ, ಇವು ತಮ್ಮ ಅನುಗ್ರಹದಿಂದ ಶುಭದಾಯಕವಾಗಿಯೇ ಇವೆ. ಇದರ ಫಲ ನನಗೆ ದೊರೆಯುವಂತೆ ಕಾಣುತ್ತದೆ. ನನ್ನ ಮನಸ್ಸಿನಲ್ಲಿ ಆಂತರಿಕವಾದ ವೇದನೆಗಳಿವೆ, ದುಃಖಗಳಿವೆ. ಅವಕ್ಕೆಲ್ಲಾ ಪರಿಹಾರವೇ ಇಲ್ಲ.

"ಮಹಾರಾಜ್, ಎಡ ಬಲ ಭುಜಗಳಂತಿದ್ದ ತಾನಾಜಿಯು ಯುದ್ಧ ದಲ್ಲಿ ಮಡಿದನು, ನೇತಾಜಿಯು ಭ್ರಷ್ಟನಾಗಿ ಮಾಯವಾದನು. ಈ ದುಃಖವು ಸರ್ವದಾ ಸುಡುತ್ತಿದೆ. ಪ್ರತಾಪರಾಯನ ಮರಣ ನನ್ನ ಹೃದಯದಲ್ಲಿ ಶೂಲ ದಂತೆ ಇರಿಯುತ್ತಿದೆ. ನಾನೇ ಅವನನ್ನು ಧಿಕ್ಕರಿಸಿ ಯಮನ ಬಾಯಿಗೆ ತಳ್ಳಿದೆನು. ಅಪಮಾನದಿಂದ ಖಿನ್ನನಾಗಿ ರೋಷಾವೇಶದಿಂದ ಶತ್ರುಸೈನ್ಯದ ಮಧ್ಯೆ ಏಕಾಕಿಯಾಗಿ ನುಗ್ಗಿ ಪ್ರಾಣ ಕಳೆದುಕೊಂಡನು. ಇನ್ನೂ ಬಹು ಮಂದಿ ಸರ್ದಾರರು ಯುದ್ಧದಲ್ಲಿ ಮರಣ ಹೊಂದಿದ್ದಾರೆ. ಅವರ ಹೆಂಡಿರು ಮಕ್ಕಳು, ತಂದೆ ತಾಯಿಗಳು. ಚಿರದುಃಖಿಗಳಾಗಿದ್ದಾರೆ. ಆ ದುಃಖವು ಸದಾ ನನ್ನ ಹೃದಯವನ್ನು ಸುಡುತ್ತಿದೆ. ಈ ಯುದ್ಧಗಳಲ್ಲಿ ಎಷ್ಟೋ ಮಂದಿ ನಿರಪರಾಧಿಗಳು ನಮ್ಮ ಕೈಯಿಂದಲೇ ಕೊಲೆಯಾಗಿದ್ದಾರೆ ಎಷ್ಟೋ ಹೆಂಗಸರು, ಮಕ್ಕಳು ಅನಾಥರಾಗಿದ್ದಾರೆ. ಕೋಟಿ ಕೋಟಿ ದ್ರವ್ಯವನ್ನು ನಮ್ಮ ಭಟರೂ, ಸೇನಾಪತಿಗಳೂ ಕೊಳ್ಳೆಹೊಡೆದು ತಂದಿದ್ದಾರೆ ನನಗಾಗಿ ಪ್ರಾಣತೆತ್ತ ಸಂಗಡಿಗರ ವಿರಹ, ಅವರ ಕುಟುಂಬಗಳ ದುಃಖ, ಇಷ್ಟೆ ಅಲ್ಲದೆ, ಲಕ್ಷಾಂತರ ಜನರ ಕೊಲೆ. ಈ ಪಾಪಗಳಿಗೆಲ್ಲಾ ಪ್ರಾಯಶ್ಚಿತ್ತವಿದೆಯೋ, ಗುರು? ಈ ದುಃಖವು ನನ್ನನ್ನು ಸರ್ವದಾ ಬಾಧಿಸುತ್ತಿದೆ. ಇನ್ನೂ ನನ್ನ ಕತ್ತಿಗೆ ವಿರಾಮವಿಲ್ಲ, ಗುರುದೇವ. ಮನಸ್ಸಿಗೆ ಶಾಂತಿ ಇಲ್ಲ. ಆದರಿಂದಲೇ ತಮ್ಮ ಸನ್ನಿಧಿಗೆ ಬಂದಿದ್ದೇನೆ" ಎಂದು ಹೇಳಿದನು.

ರಾಮದಾಸರು "ಶಿವಾ, ಸಾವು-ಜೀವನ, ಆ ವೇದಾಂತವು ಬಲು ದೊಡ್ಡದು. ಅದೆಲ್ಲವೂ ಭಗವಂತನಿಂದ ನಡೆಯುತ್ತದೆ. ನೀನು ನಿಮಿತ್ತ

ಮಾತ್ರ. ಪಾಪ-ಪುಣ್ಯಗಳು ನಿನ್ನ ಪಡಲಿಗೆ ಬೀಳುತ್ತವೆ. ಆದರೆ ಯುದ್ಧ ದಲ್ಲಿ ಮಾಡುವ ಕೊಲೆಯು ಪಾಪವಲ್ಲ. ರಾಜರು ಅದನ್ನು ಮಾಡಲೇ ಬೇಕಾಗುತ್ತದೆ. ಅದು ಕ್ಷಾತ್ರ ಧರ್ಮ ಅದು ನಿನಗೆ ಸಹಜವೇ ಆಗಿದೆ."

ಶಿವಾಜಿಯು ಕೈಮುಗಿದು "ಗುರುದೇವಾ, ಇದೇನು ಹೀಗೆ ನುಡಿಯು ವಿರಿ? ನಾನು ಶೂದ್ರನಲ್ಲವೇ? ಕ್ಷಾತ್ರಧರ್ಮವು ನನಗೆ ಪರಧರ್ಮವಲ್ಲವೆ? 'ಪರಧರ್ಮೋ ಭಯಾವಹಃ' ಈ ಭಗವದ್ವಾಕ್ಯವು ನನಗೇ ಅನ್ವಯಿಸುವು ದಿಲ್ಲವೇ?" ಎಂದು ಆರ್ತನಾಗಿ ಕೇಳಿದನು.

ರಾಮದಾಸರು "ಗುಣ ಕರ್ಮಗಳಿಂದ ವರ್ಣಗಳೂ, ವರ್ಣ ಧರ್ಮ ಗಳೂ ವ್ಯವಸ್ಥಿತವಾಗಿವೆ ನೀನು ಕ್ಷತ್ರಿಯನೇ ಆಗಿದ್ದಿ. ಇಲ್ಲದಿದ್ದರೆ ನಿನ್ನಿಂದ ಈ ರಾಜ್ಯ ನಿರ್ಮಾಣ ಕಾರ್ಯವನ್ನು ಶ್ರೀರಾಮ ಮಾಡಿಸುತ್ತಿರಲಿಲ್ಲ. ನಿನಗೆ ಸಾರ್ವಭೌಮ ಪಟ್ಟಾಭಿಷೇಕ ಮಾಡಿಸಬೇಕೆಂದು ಶ್ರೀರಾಮಚಂದ್ರನ ಪ್ರೇರಣೆಯಾಗಿದೆ. ಆ ಪಟ್ಟಾಭಿಷೇಕದಿಂದ ರಾಜ್ಯದ ಪಾಪಗಳೆಲ್ಲವೂ ಪರಿಹಾರ ವಾಗುತ್ತದೆ. ಆ ಸಮಯದಲ್ಲಿ ನಿನ್ನ ಪಾಪಗಳಿಗೂ ಪ್ರಾಯಶ್ಚಿತ್ತವು ಲಭಿಸುತ್ತದೆ. ನೀನು ಆ ಸಮಯದಲ್ಲಿ ಯಥೇಚ್ಛವಾಗಿ ಶ್ರೀರಾಮಚಂದ್ರನಿಗೆ ತೃಪ್ತಿಯಾಗುವಂತೆ ದಾನಧರ್ಮಗಳನ್ನು ಮಾಡು" ಎಂದು ಸಮಾಧಾನ ಹೇಳಿದನು.

ಶಿವಾಜಿಯು ಪುಳಕಿತನಾದನು. ಕೈಮುಗಿದು "ಗುರುದೇವ, ನೀವು ತ್ರಿಕಾಲ ಜ್ಞಾನಿಗಳು, ಇದೇ ಆಶ್ರಮದಲ್ಲಿ ತಾವು ಹೇಳಿದ್ದೀರಿ. ಈ ರಾಜ್ಯ ರಾಮನದು, ನಾನು ಸೇವಕನೆಂದು ಈ ತಮ್ಮ ಉಪದೇಶವು ಸರ್ವದಾ ನನ್ನ ಮನಸ್ಸಿನಲ್ಲಿದೆ. ನನಗೆ ಪಟ್ಟಾಭಿಷೇಕವಾಗುವುದೆಂದೂ, ನಾನು ಚಕ್ರವರ್ತಿ ಯಾಗಬೇಕೆಂದೂ ಈಗ ಅಪ್ಪಣೆ ಕೊಡಿಸುತ್ತಿದ್ದೀರಿ. ಮಹಾಪ್ರಭು, ಇದನ್ನು ನಾನು ಅರ್ಥಮಾಡಿಕೊಳ್ಳಲಾರದವನಾಗಿದ್ದೇನೆ."

"ಶಿವಾ, ಆ ಮಾತಿನಲ್ಲಿ ಬಹಳ ಅರ್ಥವಿದೆ ಅದಕ್ಕೂ ಕಾಲ ಬರಬೇಕು. ಈಗ ಆ ಸಮಯವು ಸನ್ನಿಹಿತವಾಗಿದೆ. ನೀನು ಉದಾರವಾಗಿ ದೇವರಿಗೂ, ಬ್ರಾಹ್ಮಣರಿಗೂ, ಯುದ್ಧ ಮಾಡಿದ ಸೇನಾಧಿಪತಿಗಳಿಗೂ, ಈ ಸಮಯ ದಲ್ಲಿ ದಾನಮಾಡುತ್ತೀರು. ಆ ದಾನವು ಶಾಶ್ವತವಾಗಿ ಉಳಿಯಬೇಕಾದರೆ ಅದನ್ನು ರಕ್ಷಿಸುವ ರಾಜ ಪರಂಪರೆ ಇರಬೇಕು. ರಾಜ್ಯವೆಂದ ಮೇಲೆ

ರಾಜ್ಯಭಾರದ ಏಕಸೂತ್ರವಿರಬೇಕು. ಇದೊಂದು ಆಜ್ಞೆ. ನಾಳೆ ಮತ್ತೊಂದು ಆಜ್ಞೆ. ಹೀಗಾದರೆ ರಾಜ್ಯ ಶಾಸನದ ಸೂತ್ರವು ಕಡಿದುಹೋಗಿ ರಾಜ್ಯವೆಲ್ಲಾ ಒಡೆದುಹೋಗುತ್ತದೆ ಇವೆಲ್ಲಕ್ಕಿಂತಲೂ ಮಹತ್ತರವಾದ ಧರ್ಮರಹಸ್ಯ ಬಂದಿದೆ. ಈ ರಾಷ್ಟ್ರ ನಿರ್ಮಾಣದಿಂದ ಧರ್ಮವು ಪುನರುಜ್ಜೀವನವಾದಂತಾಗಿದೆ. ಈ ಧರ್ಮವು ಶಾಶ್ವತವಾಗಿ ಬೆಳೆಯಬೇಕಾದರೆ ಅದಕ್ಕೆ ರಾಜ್ಯದ ಛತ್ರಚ್ಛಾಯೆ ಇರಬೇಕು. ಆ ಛತ್ರಪತಿಯಾಗುವ ಮಹಾಪುರುಷನು ನೀನು. ಹೋಗು, ಶಿವಾ, ರಾಮನ ಇಚ್ಛೆಯಂತೆ ಎಲ್ಲವೂ ನಡೆಯುತ್ತದೆ. ಮೊಗಲ್ ಬಾದಷಹನ ಯುದ್ಧದ ಭೀತಿ ನಿನಗಾಗಲಿ ನಿನ್ನ ರಾಜ್ಯಕ್ಕಾಗಲಿ ಸಂಭವಿಸದು. ಇದು ಪಟ್ಟಾಭಿಷೇಕಕ್ಕೆ ಸರಿಯಾದ ಸಮಯ. ನೀನು ಹಿಂದೂ ಬಾದಷಹನಾಗು" ಎಂದು ಆಶೀರ್ವಾದ ಮಾಡಿದರು.

ಶಿವಾಜಿಯು ರಾಯಘಡಕ್ಕೆ ಹಿಂತಿರುಗಿ ಬಂದು ಈ ರಾಜ್ಯದಲ್ಲಿರುವ ಮರಾಠ ಸೈನ್ಯಗಳೆಲ್ಲವೂ ಏಕತ್ರ ಸೇರಬೇಕೆಂದು ಆಜ್ಞೆ ಮಾಡಿದನು. ಚಿಪ್ಲಾನ್ ಎಂಬ ವಿಶಾಲವಾದ ಸ್ಥಳದಲ್ಲಿ ಮಹಾರಾಷ್ಟ್ರ ಸೈನ್ಯಗಳೆಲ್ಲವೂ ಬಂದು ಸೇರಿದವು. ಶಿವಾಜಿಯು ಅವರೆಲ್ಲವನ್ನು ಅಭಿನಂದಿಸಿ ಹೇರಳವಾದ ಧನವನ್ನೂ, ಉಡುಗೊರೆಗಳನ್ನೂ ಕೊಡಿಸಿದನು. ಆ ಸೈನ್ಯ ಮಧ್ಯದಲ್ಲಿ ಹಂಸಾಜೀಮೊಹಿತೆ ಎಂಬ ಮಹಾರಾಷ್ಟ್ರ ಸರ್ದಾರನಿಗೆ ಸರ್ವ ಸೇನಾಧಿಪತಿ ಪಟ್ಟವನ್ನು ಕಟ್ಟಿಸಿದನು. ಅವನಿಗೆ ಹಂಬೀರರಾವ್ ಎಂಬ ಬಿರುದುಕೊಟ್ಟು ಖಿಲ್ಲತ್ತುಗಳನ್ನು ಕೊಡಿಸಿದನು.

ಯುದ್ಧದಲ್ಲಿ ಮೃತಿಹೊಂದಿದವರ ಕುಟುಂಬಗಳಿಗೆಲ್ಲಾ ಮನೆ ಮಠಗಳನ್ನು ಕಟ್ಟಿಕೊಡಬೇಕೆಂದೂ, ಭೂಸ್ಥಿತಿಗಳನ್ನು ಏರ್ಪಡಿಸಬೇಕೆಂದೂ, ಮಾಸಾಸನ ವರ್ಷಾಶನಗಳನ್ನು ಕೊಡಬೇಕೆಂದೂ ಆಜ್ಞೆ ಮಾಡಿದನು.

೧೮

ರಾಮದಾಸಸ್ವಾಮಿಗಳು ಪ್ರತಾಪಘಡಕ್ಕೆ ಬಂದು ಭವಾನಿಯ ಸಾನ್ನಿಧ್ಯ ದಲ್ಲಿ ಕುಳಿತರು. ಮಹಾಪ್ರಧಾನಿ ರಾಮಚಂದ್ರನನ್ನೂ ಬಾಲಾಜಿ ಆವಜೀ ಎಂಬ ಕಾರಭಾರಿಯನ್ನೂ ಕರೆಸಿ "ಮಹಾರಾಷ್ಟ್ರ ರಾಜ್ಯದ ಎಲ್ಲ ಮುಖಂಡ ರನ್ನೂ ಕರೆಸಿರಿ. ಸಮಸ್ತ ದೇಶಗಳಿಂದಲೂ ಎಲ್ಲ ಸರ್ದಾರರೂ ಬಂದು ಈ ಭವಾನಿಯ ಸಾನ್ನಿಧ್ಯದಲ್ಲಿ ಸೇರಲಿ" ಎಂದು ಅಪ್ಪಣೆ ಮಾಡಿದರು. ಮಹಾ ರಾಷ್ಟ್ರ, ಕೊಂಕಣ, ಕರ್ನಾಟಕ ರಾಜ್ಯಗಳಿಗೆ ದೂತರು ಹೋಗಿ ರಾಮದಾಸ ಸ್ವಾಮಿಗಳವರ ಅಪ್ಪಣೆಯನ್ನೂ ಎಲ್ಲರಿಗೂ ತಿಳಿಸಿದರು.

ಸಮಸ್ತ ಕಡೆಗಳಿಂದಲೂ ಜನ ಮುಖಂಡರುಗಳೂ, ರಾಜ್ಯ ಪ್ರಮು ಖರೂ ಪ್ರತಾಪಗಡಕ್ಕೆ ಬಂದು ಸೇರಿದರು. ಪ್ರತಾಪಗಡದಲ್ಲಿ ಈ ಎಲ್ಲ ಲೌಕಿಕ ಮಹಾ ಜನರ ಮಹಾಸಭೆಯು ಸೇರಿತು. ಮಹಾರಾಷ್ಟ್ರ ರಾಜ್ಯದ ದೊಡ್ಡ ದೊಡ್ಡ ಅಧಿಕಾರಿಗಳೂ, ಸೇನಾಧಿಪತಿಗಳೂ ಆ ಸಭೆಯಲ್ಲಿ ಬಂದು ಸೇರಿದರು.

ರಾಮದಾಸ ಸ್ವಾಮಿಗಳವರು ಶಿವಾಜಿಯೊಡನೆ ಆ ಸಭೆಗೆ ಬಂದರು. ಸಭೆಯಲ್ಲಿದ್ದವರೆಲ್ಲಾ ಜಯಕಾರ ಮಾಡುತ್ತಾ ಅವರಿಬ್ಬರಿಗೂ ಅಭಿವಾದನ ಮಾಡಿದರು. ರಾಮದಾಸರು "ಮಹಾಜನರೇ, ಮುಖಂಡರೇ ಶ್ರೀರಾಮನ ಪ್ರೇರಣೆಯಿಂದ ನಿಮಗೆಲ್ಲರಿಗೂ ಒಂದು ಮಾತು ಹೇಳಲು ಬಂದಿದ್ದೇನೆ. ನೀವೆಲ್ಲರೂ ಅತ್ಯಂತ ಸಾಹಸದಿಂದ, ಸೇವೆ ಮತ್ತು ತ್ಯಾಗಗಳಿಂದ ಈ ಮಹಾ ರಾಷ್ಟ್ರವನ್ನು ನಿರ್ಮಾಣ ಮಾಡಿದ್ದೀರಿ. ಇನ್ನು ಮುಂದೆ ಈ ರಾಷ್ಟ್ರವು ಸ್ಥಿರ ವಾಗಿ ಶಾಶ್ವತವಾಗಿರುವಂತೆ ಶ್ರೀರಾಮನ ಅನುಗ್ರಹವಾಗಿದೆ. ರಾಜಧರ್ಮ

ಗಳೂ, ಪ್ರಜಾಧರ್ಮಗಳೂ, ನ್ಯಾಯನೀತಿಗಳೂ ಶಾಶ್ವತವಾಗಿಲ್ಲದಿದ್ದರೆ ರಾಜ್ಯವು ಸ್ಥಿರವಾಗಿರುವುದಿಲ್ಲ. ಇವೆಲ್ಲಕ್ಕೂ ಒಬ್ಬ ಅಧಿದೇವತೆ ಇರಬೇಕು. ನಿಮ್ಮಲ್ಲಿ ಯಾರೂ ಹಿರಿಯರೋ, ಸಮಗ್ರ ಪ್ರಜೆಗಳಿಗೂ ಅಧಿಕಾರಿಗಳಿಗೂ ಗೌರವ ಪಾತ್ರನೋ ಅಂತಹ ಶಿವಾಜಿಗೆ ರಾಜ್ಯಾಭಿಷೇಕ ಮಾಡಬೇಕು. ನೀವು ಮಹಾರಾಷ್ಟ್ರ ರಾಜ್ಯ, ಆ ರಾಜ್ಯದ ಮಹಾರಾಜ ಎಂದು ಕೊಂಡರೆ ಸಾಲದು. ಸಮಗ್ರ ಹಿಂದೂಸ್ಥಾನದಲ್ಲಿ ಹಿಂದೂ ಧರ್ಮಾಭಿಮಾನಿಗಳಿಗೆಲ್ಲರಿಗೂ ಆಶ್ರಯಭೂತವಾದ ಹಿಂದೂ ಸಾರ್ವಭೌಮ ಸಿಂಹಾಸನವು ಸ್ಥಾಪಿತವಾಗಬೇಕು. ಶಿವಾಜಿಯನ್ನು ಆ ಹಿಂದೂ ಸಾಮ್ರಾಜ್ಯದ ಚಕ್ರವರ್ತಿಯೆಂದು ಪಟ್ಟಾಭಿಷೇಕ ಮಾಡಬೇಕು. ಅದರಿಂದ ನಿಮ್ಮ ರಾಜ್ಯವೂ, ಹಿಂದೂ ಧರ್ಮವೂ ಶಾಶ್ವತವಾಗಿ ಉಳಿಯುತ್ತದೆ. ಪೂರ್ವ ಕಾಲದಲ್ಲಿ ಶಾತಕರ್ಣಿ ಶಾತವಾಹನನು ಹೂಣ. ಯವನ, ಮ್ಲೇಂಛರನ್ನು ನಾಶಮಾಡಿ ಹಿಂದೂ ಚಕ್ರಾಧಿಪತ್ಯವನ್ನು ಸ್ಥಾಪನೆ ಮಾಡಿದನು. ಈ ಧರ್ಮ ರಾಜ್ಯದ ನಿರ್ಮಾಣಕ್ಕೆ ದೇಶಭೇದ, ಭಾಷಾಭೇದ, ಜಾತಿಭೇದಗಳಿಲ್ಲ. ಭಗವಾನ್ ಕೃಷ್ಣನು ಹೀಗೆ ಹೇಳಿದ್ದಾನೆ:

ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥
ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಂ ।
ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥

"ಈ ವಚನವು ಆರ್ಯಾವರ್ತದಲ್ಲಿ ಪ್ರತ್ಯಕ್ಷವಾಗುತ್ತಿದೆ. ಪುರಾಣ ಕಾಲದಲ್ಲಿ ಮನು, ಮಾಂಧಾತ, ಶ್ರೀರಾಮಚಂದ್ರನೇ ಮುಂತಾದ ಮಹಾ ಪುರುಷರು ಹುಟ್ಟಿ ಧರ್ಮ ಸಂಸ್ಥಾಪನೆ ಮಾಡಿ ಚಕ್ರವರ್ತಿಗಳೆಂದು ಪುರಾಣ ಪ್ರಸಿದ್ಧರಾದರು. ಈಚೆಗೆ ಅಶೋಕ ಚಕ್ರವರ್ತಿಯು ಭಾರತ ಚಕ್ರವರ್ತಿಯಾದನು. ಶಾಲಿವಾಹನನು ಧರ್ಮ ಸ್ಥಾಪನೆಮಾಡಿ ಶಕ ಪುರುಷನೆನಿಸಿ

ಕೊಂಡಿದ್ದಾನೆ. ಹಾಗೆಯೇ ಶಾತವರ್ಣ ಧರ್ಮೋದ್ಧರ ಮಾಡಿ ಚಕ್ರಾಧಿಪತ್ಯವನ್ನು ಸ್ಥಾಪಿಸಿದನು. ಮಹಾತಪಸ್ವಿಗಳಾದ ವಿದ್ಯಾರಣ್ಯ ಮಹಾಮುನೀಶ್ವರರ ತಪೋಬಲದಿಂದ ಹರಿಹರ, ಬುಕ್ಕರಾಯರು. ವಿಜಯನಗರದ ಸಾಮ್ರಾಜ್ಯವನ್ನು ಸ್ಥಾಪಿಸಿ ಚಕ್ರವರ್ತಿಗಳೆನಿಸಿಕೊಂಡರು. ಈಗ ಶ್ರೀರಾಮಚಂದ್ರನ ಅನುಗ್ರಹದಿಂದ ಮಹಾರಾಷ್ಟ್ರ ರಾಜ್ಯವು ನಿರ್ಮಾಣವಾಗಿದೆ. ಇದಕ್ಕೆ ಶಿವಾಜಿಯೇ ಚಕ್ರವರ್ತಿಯಾಗಲು ಅರ್ಹನು. ಪುರಾಣೇತಿಹಾಸಗಳ ಮಾರ್ಗವೇ ನಮಗೆ ಶ್ರೇಯಃಪ್ರದವಾಗಿದೆ" ಎಂದು ಉಪದೇಶ ಮಾಡಿದರು.



ನಾನಾ ರಾಜ್ಯಗಳ ರಾಜ ಪುರುಷರೂ, ಅಧಿಕಾರಿಗಳೂ, ಪ್ರಮುಖರೂ ವಿದ್ವಜ್ಜನರೂ "ಹಿಂದೂ ಚಕ್ರಾಧಿಪತ್ಯವು ಸ್ಥಾಪನೆಯಾದಲ್ಲಿ ಶಿವಾಜಿ ಮಹಾರಾಜನು ಚಕ್ರವರ್ತಿಯಾಗಲಿ. ನಮ್ಮೆಲ್ಲರಿಗೂ ಅವನೇ ಪೂಜ್ಯನಾಗಿದ್ದಾನೆ. ಯವನ ವಿದ್ರಾವಣ, ರಾಷ್ಟ್ರ ನಿರ್ಮಾಣ ಕಾರ್ಯಗಳನ್ನು ಪ್ರತ್ಯಕ್ಷವಾಗಿ ಮಾಡಿ ನಮ್ಮೆಲ್ಲರ ಪ್ರೀತಿ ವಿಶ್ವಾಸಗಳನ್ನೂ, ಮಹಾಮಹಿಮರಾದ ರಾಮದಾಸ ಸ್ವಾಮಿಗಳವರ ಅನುಗ್ರಹವನ್ನೂ ಸಂಪಾದಿಸಿದ್ದಾನೆ. ಶಿವಾಜಿಗೆ ಹಿಂದೂ ಸಾರ್ವಭೌಮ ಪಟ್ಟವನ್ನು ಕಟ್ಟಬೇಕು" ಎಂದು ಘೋಷಿಸಿದರು.

ರಾಮದಾಸ ಸ್ವಾಮಿಗಳವರು ಆ ಸಭೆಯಲ್ಲಿದ್ದ ವೈದಿಕಲೌಕಿಕ ಮಹಾಜನರನ್ನೆಲ್ಲಾ ಆಶೀರ್ವದಿಸಿ ಕಳುಹಿಸಿದರು. ಭವಾನಿಯ ಸಾನ್ನಿಧ್ಯದಲ್ಲಿ ಕುಳಿತುಕೊಂಡು ರಾಮದಾಸರು ಮಂತ್ರಿ ರಾಮಚಂದ್ರನನ್ನು ಕರೆಸಿ, "ರಾಮಚಂದ್ರ, ನಾವು ಆರಂಭಿಸಿರುವುದು ಮಹತ್ತರವಾದ ಕಾರ್ಯ. ಈ ಲೌಕಿಕ ಜನರು ಒಪ್ಪಿದರೆ ಸಾಲದು. ಮಹಾರಾಷ್ಟ್ರ ರಾಜ್ಯ ನಿರ್ಮಾಣ, ಅದಕ್ಕೊಬ್ಬ ರಾಜನನ್ನು ಪಟ್ಟ ಕಟ್ಟುವುದು, ಇಷ್ಟೇ ಆಗದ್ದರೆ ಈ ಲೌಕಿಕ ಮಹಾಜನರ, ಯೋಧಾಗ್ರೇಸರರ ಸಮ್ಮತಿಯು ಸಾಕು. ಹಿಂದೂ ಚಕ್ರಾಧಿಪತ್ಯವನ್ನು ಸ್ಥಾಪಿಸಿ ಶಿವಾಜಿಯನ್ನು ಚಕ್ರವರ್ತಿಯನ್ನಾಗಿ ಮಾಡಬೇಕಾದರೆ ಇಡೀ

ಭಾರತ ವರ್ಷದ ವಿದ್ವಜ್ಜನರ ಸಮ್ಮತಿಯು ಬೇಕು. ವಾರಣಾಸಿ ಕ್ಷೇತ್ರ ಕ್ಕಿಂತಲೂ ಪುಣ್ಯಕ್ಷೇತ್ರವು ಬೇರೊಂದಿಲ್ಲ. ಅದು ವಿಮುಕ್ತಿ ಕ್ಷೇತ್ರವೆಂದು ಪುರಾಣ ಪ್ರಸಿದ್ಧವಾಗಿದೆ. ಅಲ್ಲಿ ವಿಶ್ವೇಶ್ವರ ಭಟ್ಟನೆಂಬ ಮಹಾ ವಿದ್ವಾಂಸ ನಿದ್ದಾನೆ. ಅವನು ಅಗ್ನಿಹೋತ್ರ, ಔಪಾಸನಾದಿ ಕರ್ಮಗಳನ್ನು ನೆರವೇರಿ ಸುತ್ತಾ, ವೇದಶಾಸ್ತ್ರ ಪುರಾಣೇತಿಹಾಸಗಳನ್ನು ನೂರಾರು ಶಿಷ್ಯರಿಗೆ ಪಾಠ ಹೇಳುತ್ತಾ ಬ್ರಹ್ಮನಿಷ್ಠನಾಗಿದ್ದಾನೆ ಅವನನ್ನು ಹಿಂದೂಸ್ಥಾನದ ವಿದ್ವಜ್ಜನ ರೆಲ್ಲರೂ ಬ್ರಹ್ಮದೇವ, ನವೀನ ವ್ಯಾಸ ಎಂದು ಕರೆಯುತ್ತಾರೆ. ಚತುರ್ವೇದ ಗಳು, ಷಡಂಗಗಳು, ಷಟ್ಶಾಸ್ತ್ರಗಳು, ಧರ್ಮಶಾಸ್ತ್ರ ಇವೆಲ್ಲವೂ ಅವನಿಗೆ ವಾಚೋ ವಿಧೇಯವಾಗಿದೆ. ಧರ್ಮಶಾಸ್ತ್ರವನ್ನು ರಚಿಸುವಂತಹ ಜ್ಞಾನವೂ ವಿದ್ಯೆಯೂ. ಅನುಷ್ಠಾನವೂ ಅವನಲ್ಲಿದೆ. ಸಮಸ್ತ ದೇಶಗಳಲ್ಲಿಯೂ ಅವ ನಲ್ಲಿ ಅಧ್ಯಯನ ಮಾಡಿದ ವಿದ್ವಾಂಸರುಗಳು ಪ್ರಖ್ಯಾತರಾಗಿದ್ದಾರೆ. ನೀನು ಅವನಲ್ಲಿಗೆ ಹೋಗಿ ಶಿವಾಜಿಗೆ ಪಟ್ಟ ಕಟ್ಟಲು ಸಮ್ಮತಿ ಪಡೆದು ಬರಬೇಕು. ನಿಮ್ಮ ದೇಶದಲ್ಲಿ ಜಾತಿಯ ವ್ಯವಸ್ಥೆಯೊಂದು ಉಂಟು. ಜನರು ಅದರ ತತ್ವವನ್ನರಿಯದೆ ಭಿನ್ನ ಸಂಪ್ರದಾಯಗಳನ್ನು ಹಿಡಿದುಕೊಂಡಿದ್ದಾರೆ. ವಿಜಯನಗರದಲ್ಲಿ ವಿದ್ಯಾರಣ್ಯ ಮಹಾ ಮುನೀಶ್ವರರಿಂದ ಸಾರ್ವಭೌಮ ಪಟ್ಟಾಭಿಷಕ್ತರಾದ ಹರಿಹರ, ಬುಕ್ಕರು ಕುರುಬ ಜಾತಿಯವರೆಂಬುದು ಜಗತ್ಪ್ರಸಿದ್ಧವಾಗಿಯೇ ಇದೆ. ವಿದ್ಯಾರಣ್ಯರು ಗುಣಕರ್ಮಗಳ ರಹಸ್ಯ ವನ್ನರಿತು ಕ್ಷತ್ರಿಯ ಸಂಸ್ಕಾರದಿಂದ ಹರಿಹರ ಬುಕ್ಕರಿಗೆ ಪಟ್ಟಾಭಿಷೇಕ ಮಾಡಿ ದರು. ಈಗಲೂ ಹಾಗೆಯೇ ನಾವು ವಿದ್ವಜ್ಜನ ಸಮ್ಮತಿಯಿಂದ ಈ ಕಾರ್ಯ ವನ್ನು ಸಾಧಿಸಬೇಕು. ಅದಕ್ಕೆ ಬ್ರಹ್ಮದೇವ ವಿಶ್ವೇಶ್ವರ ಭಟ್ಟನೇ ಅರ್ಹನು. ನೀನು ಕಾಶೀ ಕ್ಷೇತ್ರಕ್ಕೆ ಹೋಗಿ ಅವನ ಸಮ್ಮತಿಯನ್ನು ಪಡೆದು ಬರಬೇಕು. ಮತ್ತು ಆ ವಿಶ್ವೇಶ್ವರ ಭಟ್ಟನ ಬ್ರಹ್ಮತ್ವದಲ್ಲಿಯೇ ಶಾಸ್ತ್ರೋಕ್ತ ವಿಧಾನ ದಿಂದ ಮಂತ್ರಪೂರ್ವಕವಾಗಿ ಈ ಪಟ್ಟಾಭಿಷೇಕವು ನಡೆಯಬೇಕು" ಎಂದು ಹೇಳಿದರು.

ರಾಮಚಂದ್ರ, ಬಾಲಾಜೀ ಆವಜೀ ಇವರುಗಳು ಕಾಶೀ ಕ್ಷೇತ್ರಕ್ಕೆ ಹೋಗಿ ವಿಶ್ವೇಶ್ವರ ಭಟ್ಟನ ದರ್ಶನ ಮಾಡಿ ರಾಮದಾಸಸ್ವಾಮಿಗಳವರ

ಮನೋಭೀಷ್ಟವನ್ನು ಅರಿಕೆ ಮಾಡಿದರು. ಬ್ರಹ್ಮದೇವ ವಿಶ್ವೇಶ್ವರ ಭಟ್ಟನು ಕಾಶೀ ಕ್ಷೇತ್ರದ ವಿದ್ವಜ್ಜನರಿಗೆಲ್ಲಾ ಸಭೆ ಸೇರಬೇಕೆಂದು ಹೇಳಿ ಕಳುಹಿಸಿದನು. ವಿಶ್ವೇಶ್ವರ ಸನ್ನಿಧಾನದಲ್ಲಿ ವಿದ್ವತ್ಸಭೆಯು ನೆರೆಯಿತು. ವಿಶ್ವೇಶ್ವರ ಭಟ್ಟನು ವಿದ್ವಾಂಸರನ್ನೆಲ್ಲಾ ಉದ್ದೇಶಿಸಿ,

"ಕಾಶೀ ಕ್ಷೇತ್ರವು ಆರ್ಯಧರ್ಮದ ಮೂಲ ಕ್ಷೇತ್ರವಾಗಿದೆ. ನೀವೆಲ್ಲರೂ ಸಾಂಗ ವೇದಾಧ್ಯಯನ ಸಂಪನ್ನರೂ, ಕರ್ಮಠರೂ ಆಗಿದ್ದೀರಿ. ವಿಶ್ವೇಶ್ವರನ ಅನುಗ್ರಹದಿಂದಲೂ ವಿದ್ವಜ್ಜನರ ಸಮ್ಮತಿಯಿಂದಲೂ ಹಿಂದೂ ಚಕ್ರಾಧಿಪತ್ಯವನ್ನು ಸ್ಥಾಪಿಸುವ ಕಾಲವು ನಮ್ಮ ಮುಂದೆ ಬಂದಿದೆ. ಧರ್ಮೋದ್ಧಾರದ ಸುಸಂಧಿ ಎಂದು ನನಗೆ ವಿಶ್ವೇಶ್ವರನ ಪ್ರೇರಣೆಯಾಗಿದೆ. ದಕ್ಷಿಣದಲ್ಲಿ ಮಹಾವೀರನೂ ಯವನ ವಿದ್ರಾವಕನೂ ಆಗಿರುವ ಶಿವಾಜಿ ಮಹಾರಾಜನಿಗೆ ಸಾಮ್ರಾಜ್ಯ ಪಟ್ಟಕಟ್ಟಬೇಕೆಂದು ಭಕ್ತಾಗ್ರೇಸರ ಚಕ್ರವರ್ತಿಗಳಾದ ಸಮರ್ಥ ರಾಮದಾಸಸ್ವಾಮಿಗಳವರು ಇಷ್ಟಪಟ್ಟು ವಿದ್ವತ್ಸಮ್ಮತಿಯನ್ನು ಪಡೆಯಲು ವಿಶ್ವೇಶ್ವರ ಸನ್ನಿಧಾನದಲ್ಲಿ ಪ್ರಾರ್ಥನೆ ಕಳುಹಿಸಿದ್ದಾರೆ. ವೇದ ಶಾಸ್ತ್ರಗಳನ್ನು ಪ್ರಮಾಣವಾಗಿ ನಂಬಿರುವ, ಆ ವೇದಾಧ್ಯಯನದಿಂದ ವೀರ್ಯವನ್ನು ಸಂಪಾದನೆ ಮಾಡಿರುವ ನೀವುಗಳು ಈ ಪ್ರಾರ್ಥನೆಯನ್ನು ಸಲ್ಲಿಸಿಕೊಡಬೇಕು. ಶಿವಾಜಿಯು ಚಾತುರ್ವರ್ಣ್ಯದಲ್ಲಿ ಶೂದ್ರನೆಂಬ ಲೋಕರೂಢಿ ಇದೆ. ಅವನಿಗೆ ಕ್ಷತ್ರಿಯೋಚಿತ ಮಂತ್ರ ವಿಧಾನದಿಂದ ಪಟ್ಟಾಭಿಷೇಕ ಮಾಡಲು ಬ್ರಾಹ್ಮಣೋತ್ತಮರ ಸಮ್ಮತಿಯು ಬೇಕು" ಎಂದು ಹೇಳಿದನು.

ಮಹಾರಾಷ್ಟ್ರದ ಮಹಾಪ್ರಧಾನಿ ರಾಮಚಂದ್ರನು "ಮಹಾರಾಷ್ಟ್ರದಲ್ಲಿ ಶಿವಾಜಿಯು ಶೂದ್ರ ಕುಲದವನೆಂದು ಪ್ರತೀತಿ ಇದೆ. ಆದರೆ ನಾವು ವಂಶ ವೃಕ್ಷವನ್ನು ಬಹು ಪ್ರಯಾಸದಿಂದ ಹುಡುಕಿದ್ದೇವೆ. ಶಿವಾಜಿಯ ಪೂರ್ವಿಕರು ರಜಪುಸ್ತಾನದ ಸುಪ್ರಸಿದ್ಧವಾದ ಉದಯಪುರ ರಾಜವಂಶದ ಪರಂಪರೆಗೆ ಸೇರಿದವರು. ಶ್ರೀರಾಮಚಂದ್ರನು ಉದ್ಭವಿಸಿದ ಸೂರ್ಯವಂಶ ಪ್ರಣಾಳಿಕೆಯಲ್ಲಿಯೇ ಬಂದ ಪರಂಪರೆ. ಇದು ಸಂಸ್ಕಾರಗಳಿಲ್ಲದೆ ಭೂ ವ್ಯವಸಾಯ ಜೀವನದಲ್ಲಿ ತೊಡಗಿದ್ದರಿಂದ ಈ ವಂಶದವರು ಶೂದ್ರರಾದರು. ವಿದ್ವಜ್ಜನರು

ವೈದಿಕ ಸಂಸ್ಕಾರಗಳಿಂದ ಶಿವಾಜಿ ಮಹಾರಾಜನನ್ನು ಕ್ಷತ್ರಿಯನನ್ನಾಗಿ ಮಾಡಿ ಹಿಂದೂ ಸಾರ್ವಭೌಮ ಸಿಂಹಾಸನಕ್ಕೆ ಪಟ್ಟಕಟ್ಟಲು ಆಜ್ಞೆ ಕೊಡಬೇಕು" ಎಂದು ವಿಜ್ಞಾಪಿಸಿದನು.

ವಿದ್ವಾಂಸರೆಲ್ಲರೂ ವಾದ ವಿವಾದಗಳನ್ನು ಆರಂಭ ಮಾಡಿದರು. ನಾಲ್ಕಾರು ದಿನಗಳು ನಿತ್ಯವೂ ಈ ವಿದ್ವತ್ ಸಭೆ ಸೇರಿ ಮಥನ ಮಾಡು ತ್ತಿದ್ದಿತು. ಬ್ರಹ್ಮದೇವನು "ಈ ವಿಚಾರದ ಚರ್ಚೆಯನ್ನು ಉಪಸಂಹಾರ ಮಾಡೋಣ. ಇಂಥ ಸಂದರ್ಭ ಎಲ್ಲಿಯೋ ನಾಲ್ಕಾರು ಶತಮಾನಗಳಿಗೊಂದು ಬರುತ್ತದೆ. ವಿಶೇಷ ಕಾರಣಗಳಿಂದ ಒಬ್ಬೊಬ್ಬ ಮಹಾವ್ಯಕ್ತಿಗೆ ಇಂಥ ಸಂಸ್ಕಾರಗಳನ್ನು ಮಾಡುವುದುಂಟು. ಅದರಿಂದ ಸಮಾಜದ ಭದ್ರತೆಗೆ ಏನೂ ಕುಂದುಕವುಂಟಾಗುವುದಿಲ್ಲ.

"ಈ ರಾಜಪುರುಷರು ಉದಯಪುರದ ಸೂರ್ಯವಂಶದ ಪರಂಪರೆಯಲ್ಲಿ ಈ ಶಿವಾಜಿಯು ಬಂದವನೆಂದು ಹೇಳುತ್ತಾರೆ. 'ಆಪ್ತವಾಕ್ಯಂ ಪ್ರಮಾಣಂ' ಎಂಬಂತೆ ನಾವು ಇದನ್ನು ಪರಿಗ್ರಹಿಸೋಣ. 'ತೇಜಸ್ವಿನಾಂ ನ ದೋಷಾಯ ವನ್ಹೇಃ ಕಾಣ ಭುಜೋ ಯಥಾ' ಎಂಬ ನ್ಯಾಯದಂತೆ ಶಿವಾಜಿಯು ಮಹಾ ತೇಜಸ್ವಿಯೂ ಆಗಿದ್ದಾನೆ. ಗುಣಕರ್ಮ ವಿಭಾಗವನ್ನು ನೋಡಿದರೂ ಅವನು ಹುಟ್ಟಿದಂದಿನಿಂದಲೂ ಈ ಕ್ಷಾತ್ರ ಧರ್ಮವನ್ನು ಪ್ರತ್ಯಕ್ಷ ಮಾಡಿ ಕೊಡುತ್ತಾ ಬಂದಿದ್ದಾನೆ. ಈ ಎಲ್ಲ ಕಾರಣದಿಂದಲೂ ಅವನನ್ನು ಛತ್ರಿಯ ನೆಂದು ಕರೆಯೋಣ. ಆವನಿಗೆ ಧರ್ಮಶಾಸ್ತ್ರ ವಿಧಿಯಂತೆ ಕ್ಷತ್ರಿಯೋಚಿತ ಸಂಸ್ಕಾರಗಳು ನಡೆಯಲಿ. ನೀವೆಲ್ಲಾ ಶಾಸ್ತ್ರವೇತ್ತರೂ ವೈದಿಕ ಧರ್ಮಾನು ಷ್ಠಾನ ಪರಾಯಣರೂ ಆದ ಬ್ರಾಹ್ಮಣೋತ್ತಮರಾಗಿದ್ದೀರಿ. ನಿಮ್ಮ ಆಶೀ ರ್ವಾದದಿಂದ ದ್ವಿಜನಾಗಲಿ" ಎಂದು ತನ್ನ ಅಭಿಮತವನ್ನು ತಿಳಿಸಿದನು.

ವಿದ್ವತ್ ಜನರೆಲ್ಲರೂ 'ತಥಾಸ್ತು' ಎಂದು ಸಮ್ಮತಿಯಿತ್ತರು.

ವಿಶ್ವೇಶ್ವರನ ಸಾನ್ನಿಧ್ಯದಲ್ಲಿ ನಡೆದ ಆ ವಿದ್ವತ್ ಸಭೆಯ ತೀರ್ಮಾನ ವನ್ನು ವಿಶ್ವೇಶ್ವರನ ಆಜ್ಞೆಯೆಂದೇ ಪ್ರಸಿದ್ಧಪಡಿಸಿದರು.

ಮಹಾಪ್ರಧಾನ ರಾಮಚಂದ್ರ, ಬಾಲಾಜಿ ಆವಜೀ ಇವರಿಬ್ಬರೂ ಬ್ರಹ್ಮದೇವ ವಿಶ್ವೇಶ್ವರಭಟ್ಟನನ್ನೂ, ಆ ವಿದ್ವತ್‌ಗೋಷ್ಠಿಯನ್ನೂ ವಂದಿಸಿ

ಪಟ್ಟಾಭಿಷೇಕಕ್ಕೆ ಬರಬೇಕೆಂದು ಅವರೆಲ್ಲರಿಗೂ ಆಹ್ವಾನವಿತ್ತು ಹಿಂತಿರುಗಿದರು.

ರಾಮಚಂದ್ರನು ಆ ವಿದ್ವತ್ ಪರಿಷತ್ತಿನ ಆಜ್ಞಾಪತ್ರವನ್ನು ತೆಗೆದು ಕೊಂಡು ಬಂದು ಸಮರ್ಥ ರಾಮದಾಸ್ ಗುರುಗಳವರಲ್ಲಿ ಸಮರ್ಪಣೆ ಮಾಡಿದನು.

## ೧೯

ರಾಯಘಡದಲ್ಲಿ ಪಟ್ಟಾಭಿಷೇಕ ಮಹೋತ್ಸವಕ್ಕೆ ಬೇಕಾದ ಸಿದ್ಧತೆಗಳು ಆರಂಭವಾದವು.

ಪಟ್ಟಾಭಿಷೇಕ ಮಂಟಪವೂ ರತ್ನ ಖಚಿತವಾದ ಸಿಂಹಾಸನವೂ ಸಿದ್ಧ ವಾದವು.

ಋತ್ವಿಕರು, ಪುರೋಹಿತರು, ವಿದ್ವಾಂಸರುಗಳು' ಇವರುಗಳಿಗೆ ಸ್ನಾನ, ಭೋಜನ, ಜಪ ತಪಗಳಿಗೆ ಬೇಕಾದ ಸೌಕರ್ಯಗಳಿರುವಂಥ ಅತಿಥಿಶಾಲೆಗಳು ನಿರ್ಮಾಣವಾದುವು.

ರಾಜಪುರುಷರು, ರಾಜಪ್ರತಿನಿಧಿಗಳು, ಶ್ರೀಮಂತರುಗಳು ಬಂದಿಳಿ ಯಲು ರಾಜಯೋಗ್ಯವಾದ ಭವನಗಳು ಸಿದ್ಧವಾದವು.

ವಿಶಾಲವಾದ ಅನ್ನಛತ್ರಗಳು, ಅತಿಥಿ ಶಾಲೆಗಳು ನಿರ್ಮಾಣವಾದುವು.

ಹಿಂದೂಸ್ತಾನದಲ್ಲಿ ಎಲ್ಲ ರಾಜ್ಯಗಳಲ್ಲಿಯೂ ಇರುವಂಥ ವಿದ್ವಾಂಸರು ಗಳಿಗೆ ಆಹ್ವಾನ ಪತ್ರಗಳು ಕಳುಹಿಸಲ್ಪಟ್ಟವು.

ಕಾಶಿಯಿಂದ ಬ್ರಹ್ಮದೇವ ವಿಶ್ವೇಶ್ವರ ಭಟ್ಟನು ಶಿಷ್ಯವೃಂದ ಸಮೇತ ನಾಗಿಯೂ, ವಿದ್ವತ್ ಸಮೂಹ ಸಹಿತನಾಗಿಯೂ ಪ್ರಯಾಣ ಮಾಡಿ ಮಹಾ

ರಾಷ್ಟ್ರಕ್ಕೆ ಬಂದನು. ವಿಪುಲ ಸಮೂಹದಂತಹ ಆ ವಿದ್ವತ್ ಸಮೂಹವು ಸತಾರದ ಕಡೆಯಿಂದ ಬರುತ್ತದೆ ಎಂಬುದನ್ನು ತಿಳಿದು ಶಿವಾಜೀ ಮಹಾರಾಜನೂ, ಸೇನಾಧಿಪತಿಗಳೂ, ಮಂತ್ರಿಗಳೂ ಸತಾರದಿಂದ ಆಚೆ ಮಹಾರಾಷ್ಟ್ರದ ಗಡಿಯಲ್ಲಿ ರಾಜಮರ್ಯಾದೆಗಳೊಡನೆ ಎದುರುಗೊಂಡು ವೈಭವದಿಂದ ರಾಯಘಡಕ್ಕೆ ಕರೆತಂದರು.

ಹಿಂದೂಸ್ಥಾನದ ಬೇರೆ ಬೇರೆ ದೇಶಗಳಿಂದ ಹನ್ನೆರಡು ಸಹಸ್ರಮಂದಿ ವಿದ್ವಾಂಸರುಗಳು ಬಂದು ಸೇರಿದರು. ಅವರ ಕುಟುಂಬದವರೂ ಶಿಷ್ಯವರ್ಗದವರೂ, ಎಲ್ಲರೂ ಸೇರಿ ಐವತ್ತು ಸಹಸ್ರ ಬ್ರಾಹ್ಮಣರು ಬಂದು ಸೇರಿದರು.

ದೇಶದ ನಾನಾ ಕಡೆಗಳಿಂದ ರಾಜರುಗಳು, ರಾಜಪುರುಷರು, ಪಾಳೆಯಗಾರರು, ಸೇನಾಧಿಪತಿಗಳು, ಪ್ರಜಾಪಮುಖಂಡರುಗಳು, ದೊಡ್ಡ ದೊಡ್ಡ ವರ್ತಕರು, ವಿದೇಶೀ ವರ್ತಕರು; ಇಂಥ ವಿಶೇಷ ಅತಿಥಿಗಳು ಒಂದು ಲಕ್ಷದವರೆಗೆ ಬಂದು ಸೇರಿದರು. ಇವರ ಆತಿಥ್ಯವನ್ನೆಲ್ಲಾ ಶಿವಾಜೀ ಮಹಾರಾಜನೇ ಖುದ್ದಾಗಿ ಮೇಲ್ವಿಚಾರಣೆಯಿಂದ ಏರ್ಪಾಡುಮಾಡಿದನು.

ಶ್ರೀರಾಮದಾಸ ಸ್ವಾಮಿಗಳವರ ಆಜ್ಞೆಯಂತೆ ಶಿವಾಜಿಯು ಮಾತುಶ್ರೀ ಜೀಜಾಬಾಯಿಯೊಡನೆಯೂ, ತನ್ನ ಇಬ್ಬರು ಧರ್ಮಪತ್ನಿಗಳೊಡನೆಯೂ ಮಕ್ಕಳೊಡನೆಯೂ ಚಿಪ್ಳೂಸ್ ಎಂಬ ಪುಣ್ಯ ಕ್ಷೇತ್ರದಲ್ಲಿ ಪರಶುರಾಮ ದೇವಾಲಯಕ್ಕೆ ಹೋಗಿ ವಿಶೇಷ ಪೂಜಾದಿಗಳನ್ನು ನೆರವೇರಿಸಿ, ಪ್ರಸಾದವನ್ನು ಸ್ವೀಕರಿಸಿ, ಅನೇಕ ಧರ್ಮಗಳನ್ನು ಮಾಡಿ, ಬ್ರಾಹ್ಮಣರಿಗೆ ದಕ್ಷಿಣೆಗಳನ್ನಿತ್ತು, ಆಶೀರ್ವಾದ ಪಡೆದು ಪ್ರತಾಪಗಡಕ್ಕೆ ಬಂದನು.

ಪ್ರತಾಪಗಡದಲ್ಲಿ ಭವಾನೀದೇವಿಗೆ ಪೂಜಾದಿಗಳನ್ನು ನೆರವೇರಿಸಿದನು, ಚಿನ್ನದ ಛತ್ರವನ್ನು ಮಾಡಿಸಿ ಸಮರ್ಪಿಸಿದನು. ವಜ್ರವೈಡೂರ್ಯ ಖಚಿತವಾದ ಆಭರಣಗಳನ್ನು ಒಪ್ಪಿಸಿದನು. ಅಲ್ಲಿಯ ಪೂಜಾವಿಧಾನಗಳೆಲ್ಲವೂ ಪೂರೈಸಿದ ಮೇಲೆ ವಿಶೇಷ ದಾನ ಧರ್ಮಗಳನ್ನು ಮಾಡಿ, ಬ್ರಾಹ್ಮಣರನ್ನು ಸಂತೃಪ್ತಿಗೊಳಿಸಿ, ಆಶೀರ್ವಾದ ಪಡೆದು ರಾಯಘಡಕ್ಕೆ ಬಂದನು.

ರಾಯಘಡದಲ್ಲಿ ಶಾಸ್ತ್ರೋಕ್ತ ವಿಧಿಪ್ರಕಾರವಾಗಿ ಶಾಸ್ತ್ರೋಕ್ತ ಕರ್ಮಗಳು ಆರಂಭವಾದುವು. ವೈದಿಕ ಜನರಿಂದ ತುಂಬಿದ್ದ ಆ ಮಂಟಪದಲ್ಲಿ

ಶಿವಾಜಿಯು ಪಟ್ಟೆ ವಸ್ತ್ರಗಳನ್ನು ಉಟ್ಟು ಆ ಸಭೆಗೆ ಬಂದು ಮೊದಲು ರಾಮ ದಾಸ ಗುರುಗಳವರಿಗೂ, ಅನಂತರ ಮಾತುಶ್ರೀ ಜೀಜಾಬಾಯಿಯವರಿಗೂ ಸಾಷ್ಟಾಂಗ ಪ್ರಣಾಮ ಮಾಡಿ ಅನುಜ್ಞೆಯನ್ನು ಪಡೆದು ಪೀಠದ ಮೇಲೆ ಹೋಗಿ ಕುಳಿತನು.

ಋತ್ವಿರೂ, ಪುರೋಹಿತರೂ ಪುಣ್ಯಾಹದಿಂದ ವೈದಿಕ ಕರ್ಮವನ್ನು ಆರಂಭಮಾಡಿದರು.

ಬ್ರಹ್ಮದೇವ ವಿಶ್ವೇಶ್ವರ ಭಟ್ಟನು ಯಥಾವಿಧಿಯಾ ಹೋಮ ಹವನ ಗಳನ್ನು ಮಾಡಿ ಮಂತ್ರೋಕ್ತವಾಗಿ ಶಿವಾಜಿಗೆ ಯಜ್ಞೋಪವೀತಧಾರಣೆ ಮಾಡಿಸಿ ಮಂತ್ರೋಪದೇಶ ಮಾಡಿದನು. ಅನಂತರ ಕ್ಷತ್ರಿಯೋಚಿತ ವಿಧಾ ನಗಳಿಂದ ಪಟ್ಟಾಭಿಷೇಕ ಅಂಗವಾದ ಹೋಮಹವನಾದಿ ಕರ್ಮಗಳಿಗೆ ಆರಂಭ ವಾದವು.

ಜೀಜಾಬಾಯಿಯು "ಆ ಬ್ರಹ್ಮವೃಂದದಲ್ಲಿ ತೇಜೋವಿರಾಜಮಾನ ನಾಗಿ ಕುಳಿತಿರುವ ಮಗನನ್ನು ನೋಡಿ ಆನಂದಿಸಿದಳು. ಬಾಲ್ಯದಿಂದಲೂ ಎಷ್ಟೋ ಕಷ್ಟಗಳನ್ನು ಅನುಭವಿಸಿ ಆ ವೀರಪುತ್ರನನ್ನು ಬೆಳಸಿದ ಆ ಮಾತೆಯು 'ಈ ಮಗ ಲೋಕೋದ್ಧಾರಕ್ಕಾಗಿ ಜನ್ಮವೆತ್ತಿದ್ದಾನೆ. ಮ್ಲೇಂಛ ರನ್ನು ಜಯಿಸಿ, ಜಗದ್ವಿಜಯಿಯಾದ ಈ ಶಿವಾಜಿಯು ಧರ್ಮೋದ್ಧಾರಕನೆಂದು ಮಹಾಮಹಾ ವಿದ್ವಾಂಸರಿಂದಲೂ ವೀರಪುರುಷರಿಂದಲೂ, ಹೊಗಳಲ್ಪಡುತ್ತಿ ದ್ದಾನೆ ಈ ಮಹಾರಾಷ್ಟ್ರದಲ್ಲಿ ಅಭುಕ್ತ ಮೂಲೆಯುಲ್ಲಿ ಜನ್ಮವೆತ್ತಿ ಕಾಡು ಗುಡ್ಡಗಳಲ್ಲಿ ವನಚರರೊಂದಿಗೆ ಅಲೆದು ದೊಡ್ಡವನಾದ ಈ ಮಗನು ಇದೇ ಮಹಾರಾಷ್ಟ್ರ ರಾಜ್ಯವನ್ನು ನಿರ್ಮಾಣ ಮಾಡಿ ಹಿಂದೂ ಸಾರ್ವಭೌಮ, ಹಿಂದೂ ಧರ್ಮ ಸಂರಕ್ಷಕ ಎಂದು ಹೊಗಳಿಸಿಕೊಳ್ಳುತ್ತಾ, ಚಕ್ರವರ್ತಿ ಸಾರ್ವ ಭೌಮನಾಗಿ ಪಟ್ಟಾಭಿಷಿಕ್ತನಾಗುತ್ತಿದ್ದಾನೆ. ಇದನ್ನು ನೋಡುವ ಭಾಗ್ಯ ವನ್ನು ದೇವರು ನನಗೆ ಕರುಣಿಸಿದ್ದಾನೆ' ಎಂದು ಸಂತುಷ್ಟಾಂತರಂಗಳಾಗಿ ದೇವ ರನ್ನು ವಂದಿಸಿದಳು.

ಅನೇಕ ದಾನ ಧರ್ಮಗಳನ್ನು ಮಾಡಿದಳು.

ಆ ದಿವಸ ಸುಮುಹೂರ್ತದಲ್ಲಿ ಬ್ರಾಹ್ಮಣರೂ ರಾಜರುಗಳೂ ಶಿವಾಜೀ ಮಹಾರಾಜನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಪಟ್ಟಾಭಿಷೇಕವನ್ನು ನೆರ

ವೇರಿಸಿದರು.

ಕರ್ನಾಟಕ, ಆಂಧ್ರ, ಚೋಳ, ಕೇರಳ ರಾಜ್ಯಗಳ ರಾಜರುಗಳು ಕಪ್ಪಕಾಣಿಕೆಗಳನ್ನು ಸಮರ್ಪಿಸಿದರು.

ಶಿವಾಜಿಯು ಅವರೆಲ್ಲರಿಗೂ ಅನರ್ಘ್ಯವಾದ ಉಡುಗೊರೆಗಳನ್ನು ಕೊಡಿಸಿದನು. ಬ್ರಾಹ್ಮಣರಿಗೆ ಮುಕ್ತಹಸ್ತದಿಂದ ದಕ್ಷಿಣೆಗಳನ್ನು ಇತ್ತು ಆಶೀರ್ವಾದ ಪಡೆದನು.

ಅದೇ ದಿನ ಸಂಧ್ಯಾ ಕಾಲದಲ್ಲಿ ಶಿವಾಜಿಯನ್ನು ಚಿನ್ನದ ಪಲ್ಲಕ್ಕಿಯಲ್ಲಿ ಕೂಡಿಸಿ ಮೆರವಣಿಗೆ ಮಾಡಿದರು. ಆ ಮೆರವಣಿಗೆಯಲ್ಲಿ ಸಹಸಾರು ಕುದುರೆಗಳೂ, ಆನೆಗಳೂ ಪಂಕ್ತಿ ಪಂಕ್ತಿಯಾಗಿ ಮುಂದೆ ನಡೆದಿದ್ದವು. ನಾನಾ ವಿಧವಾದ ಮಂಗಳವಾದ್ಯ ಘೋಷಗಳು ಸೈನಿಕರ ವೀರನಾದಗಳು, ದಿಕ್ತಟಗಳನ್ನು ಮುಚ್ಚುತ್ತಿದ್ದವು. ದೀಪಮಾಲೆಗಳಿಂದ ನಗರವೂ ರಾಜ ಬೀದಿಗಳೂ ದೇದೀಪ್ಯಮಾನವಾಗಿ ಬೆಳಗುತ್ತಿದ್ದವು. ದಾರಿಯುದ್ದಕ್ಕೂ ಮನೆಮನೆಯ ಮುಂದೆಯೂ ಮುತ್ತೈದೆಯರು ಆರತಿ ಎತ್ತಿ ಮಂಗಳ ಹಾಡುತ್ತಿದ್ದರು. ಪಲ್ಲಕ್ಕಿಯ ಹಿಂದುಗಡೆ ರಾಜ ಪುರುಷರು ಆನೆಗಳ ಮೇಲೆ ಕುಳಿತು ಚಿನ್ನದ ಪುಷ್ಪಗಳನ್ನು ಎರಚುತ್ತಿದ್ದರು. ಹೀಗೆ ಸಂಭ್ರಮದಿಂದ ಉತ್ಸವವು ನಡೆಯಿತು.

ಬ್ರಾಹ್ಮಣರಿಗೆ ಭಕ್ಷ್ಯಭೋಜ್ಯ ಸಹಿತವಾದ ಮೃಷ್ಟಾನ್ನ ಭೋಜನ ಸಂತರ್ಪಣೆಯು ನಾಲ್ಕು ತಿಂಗಳು ಕಾಲ ಅವಿಚ್ಛಿನ್ನವಾಗಿ ನಡೆಯಿತು. ಪ್ರತಿ ದಿನವೂ ವೇದಘೋಷಗಳೂ, ವಿದ್ವತ್ ಸಭೆಗಳೂ, ಸಾಹಿತ್ಯ ಸಂಗೀತ ಗೋಷ್ಠಿಗಳೂ ನಡೆಯುತ್ತಿದ್ದುವು. ಶಿವಾಜಿಯು ಬಂದಿದ್ದ ಅತಿಥಿಗಳಿಗೆ ದಿವ್ಯೋಪಚಾರಗಳನ್ನೂ ಮಾಡಿಸಿ ರಾಜಯೋಗ್ಯವಾದ ಉಡುಗೊರೆಗಳನ್ನೂ ಕೊಡಿಸಿ ಮರ್ಯಾದೆಯಿಂದ ಕಳುಹಿಸಿಕೊಟ್ಟನು. ವಿದ್ವತ್ ಜನರಿಗೂ, ಸೈನಿಕರಿಗೂ ಯಥೇಚ್ಛವಾದ ಧನಕನಕಗಳನ್ನು ಕೊಟ್ಟು ಸಂತುಷ್ಟಿ ಪಡಿಸಿದನು.

ಬ್ರಹ್ಮದೇವ ವಿಶ್ವೇಶ್ವರಭಟ್ಟನು ಕಾಶೀಕ್ಷೇತ್ರಕ್ಕೆ ವಿದ್ವತ್ ಜನ ಸಮೇತನಾಗಿ ಹಿಂತಿರುಗುವ ಸಮಯದಲ್ಲಿ ಶಿವಾಜಿಯು ಚಿನ್ನದ ತುಲಾಭಾರವನ್ನು ತೂಗಿಸಿಕೊಂಡು ಆ ಬ್ರಹ್ಮದೇವನಿಗೂ ಆ ವಿದ್ವತ್ ಜನರಿಗೂ ಸ್ವರ್ಣದಾನ ಮಾಡಿದನು.

ರಾಮದಾಸಸ್ವಾಮಿಗಳು ಆ ಬ್ರಹ್ಮದೇವ ವಿಶ್ವೇಶ್ವರನನ್ನು ಪ್ರಶಂಸೆ ಮಾಡಿ "ಬ್ರಹ್ಮ ಋಷಿಗಳಾದ ನೀವು ಈ ವಿದ್ವತ್‌ಜನ ಸಮೇತರಾಗಿ ಈ ದಕ್ಷಿಣ ದೇಶಕ್ಕೆ ಬಂದು ಈ ಮಹಾರಾಷ್ಟ್ರ ಭೂಮಿಯನ್ನು ಪವಿತ್ರಗೊಳಿಸಿದಿರಿ. ಕೈಲಾಸದಿಂದ ದೇವಗಂಗೆಯು ಹರಿದು ಬಂದು ಈ ವೀರಭೂಮಿಯನ್ನು ಪವಿತ್ರಗೊಳಿಸಿದಂತೆ. ನಾವು ಭಾವಿಸುತ್ತೇವೆ. ಇಂದಿನಿಂದ ನಿಮಗೆ ಗಂಗಾಭಟ್ಟ'ರೆಂಬ ಬಿರಿದು ಶಾಶ್ವತವಾಗಿರಲಿ" ಎಂದು ಹರಸಿದರು.

ಬ್ರಹ್ಮದೇವ ಗಂಗಾಭಟ್ಟನು ಶಿವಾಜಿಯನ್ನು ಆಶೀರ್ವದಿಸಿ ಕಾಶೀ ಕ್ಷೇತ್ರಕ್ಕೆ ಹಿಂತಿರುಗಿದನು.

ಆ ಪಟ್ಟಾಭಿಷೇಕ ಮಹೋತ್ಸವಕ್ಕೆ ಬಂದಿದ್ದ ವಿದ್ವಾಂಸರೆಲ್ಲರೂ ತಮ್ಮ ತಮ್ಮ ರಾಜ್ಯಗಳಿಗೆ ಹಿಂತಿರುಗಿದರು.

ಛತ್ರಪತಿ ಶಿವಾಜಿಯ ಪಟ್ಟಾಭಿಷೇಕ ಮಹೋತ್ಸವವು ಪೂರೈಸಿದ ಹನ್ನೆರಡನೆಯ ದಿನವೇ ಮಾತುಶ್ರೀ ಜೀಜಾಬಾಯಿಯು ಇಹಲೋಕವನ್ನು ಪರಿತ್ಯಜಿಸಿದಳು. ಶಿವಾಜಿಯು ಶಾಸ್ತ್ರೋಕ್ತ ಪ್ರಕಾರವಾಗಿ ಮಾತೃದೇವತೆಯ ಸಂಸ್ಕಾರಗಳನ್ನು ಎಸಗಿದನು ಮಹಾರಾಷ್ಟ್ರದ ಜನರೆಲ್ಲರೂ ಜೀಜಾಬಾಯಿಯನ್ನು ದೇವತೆಯೆಂದೇ ಕೊಂಡಾಡಿದರು. ತಾಯಿಯ ಪುಣ್ಯಪ್ರಭಾವದಿಂದಲೇ ಮಗನ ಅದೃಷ್ಟವೂ ಇಷ್ಟೊಂದು ಮಹತ್ವದ್ದಾಗಿ ಬೆಳಗಿತೆಂದು ಜನರೆಲ್ಲರೂ ಕೊಂಡಾಡುತ್ತಿದ್ದರು. ಜೀಜಾಬಾಯಿಯಂಥ ತಾಯಿಯರು ಎಷ್ಟೋ ಶತಮಾನಗಳಿಗೆ ಒಮ್ಮೆ ಹುಟ್ಟುವರೆಂದೂ, ಇಂಥ ಚಕ್ರವರ್ತಿ ಮಗನನ್ನು ಪಡೆಯುವರೆಂದೂ ಕವಿಗಳು ಚರಮ ಶ್ಲೋಕಗಳನ್ನು ಹಾಡಿದರು.

ಮನೆ ಮನೆಗಳಲ್ಲಿಯೂ ಜೀಜಾಬಾಯಿಯ ಮೇಲೆಯೂ, ಅವಳ ಮಗ ಶಿವಾಜಿಯ ಮೇಲೆಯೂ ಹಾಡುಗಳನ್ನು ಕಟ್ಟಿ ಹಾಡುತ್ತಿದ್ದರು. ಇಂದಿಗೂ ಹಾಡುಗಳು ಮಹಾರಾಷ್ಟ್ರದ ಮನೆ ಮನೆಗಳಲ್ಲಿ ಕೇಳಿಬರುತ್ತವೆ.

## ೩೨

ಸುಖದಲ್ಲಿ ದುಃಖ. ದುಃಖದಲ್ಲಿ ಸುಖ, ಹೀಗೆ ಸುಖದುಃಖಮಯವಾದ ಸಂಸಾರಚಕ್ರವು ಪರಿವರ್ತಿತವಾಗಿದೆ. ಈ ಚಕ್ರದ ಹಲ್ಲುಗಳಲ್ಲಿ ಸಿಕ್ಕಿ ಚಕ್ರವರ್ತಿಗಳೂ, ಭಿಕಾರಿಗಳೂ ಸಮಾನರಾಗಿ ಅಲೆಯುತ್ತಾರೆ. ಇಷ್ಟೊಂದು ಮಹಾ ವೈಭವದಲ್ಲಿಯೂ ಶಿವಾಜಿಯು ಸಂಪೂರ್ಣ ಸುಖಿಯಾಗಿರಲಿಲ್ಲ. ವಿದ್ವಾಂಸರೂ, ಮೂಢಜನರೂ, ಐಶ್ವರ್ಯವಂತರೂ, ಬಡವರೂ, ವೀರರೂ, ದುರ್ಬಲರೂ ಎಲ್ಲರೂ ಆ ಜನಸ್ತೋಮದಲ್ಲಿ ಸೇರಿ ಆ ಆನಂದ ಸಾಗರದಲ್ಲಿ ಮುಳುಗಿ ಏಳುತ್ತಿದ್ದರೂ ಶಿವಾಜಿಯು ಮಾತ್ರ ಅನ್ಯಮನಸ್ಕನಾಗಿಯೇ ಇದ್ದನು. ಇದನ್ನು ಯಾರೂ ಕಂಡು ಹಿಡಿಯಲಾರದವರಾಗಿದ್ದರು. ಶಿವಾಜಿಯೂ ತನ್ನನ್ನು ತಾನೇ ಅರಿಯಲಾರದವನಾಗಿ ತೊಳಲುತ್ತಿದ್ದನು.

ಉತ್ಸವದಲ್ಲಿ ಎಷ್ಟೋ ವಿಧವಾದ ಜನರು ಅವರವರ ಆನಂದಕ್ಕೆ ಬಂದಿದ್ದಾರೆ. ಪಟ್ಟಾಭಿಷೇಕ ಮಹೋತ್ಸವವು ಎಲ್ಲರಿಗೂ ಆನಂದದಾಯಕವಾಗಿದೆ. ಸನ್ಯಾಸಿಗಳೂ, ಗೋಸಾಯಿಗಳೂ ದಾಸಪಂಥಿಗಳೂ ಗುಂಪುಗುಂಪಾಗಿ ಆ ಸಮೂಹದಲ್ಲಿ ನೆರೆದಿದ್ದಾರೆ. ಗೋಸಾಯಿಗಳ ಗುಂಪಿನಲ್ಲಿ ಒಬ್ಬನು ಪ್ರತಿಯೊಂದು ಉತ್ಸವಗಳನ್ನೂ ಆಸಕ್ತಿಯಿಂದ ನೋಡುತ್ತಾನೆ. ಅವನ ಕಣ್ಣುಗಳಲ್ಲಿ ಅರಿವಿಲ್ಲದೆಯೇ ಜಲಧಾರೆಗಳು ಹರಿಯುತ್ತವೆ. ಶಿವಾಜಿಯು ಆ ಗುಂಪಿನಲ್ಲಿ ಅವನನ್ನು ನೋಡುತ್ತಾನೆ. ಏನೋ ನೆನಪು ಬರುತ್ತದೆ. "ಅಲ್ಲ–ಅಲ್ಲ–ಅವನಲ್ಲ. ಒಬ್ಬರ ಚಹರೆಯಂತೆ ಮತ್ತೊಬ್ಬರ ಚಹರೆ ಇರುತ್ತದೆ" ಎಂದುಕೊಳ್ಳುತ್ತಾನೆ. ಬೈರಾಗಿಗಳ ಗುಂಪು ಒಂದಲ್ಲ–ಎರಡಲ್ಲ–ಹತ್ತಾರು ಗುಂಪುಗಳು ಬಂದಿವೆ. ಶೈವರು, ಕಾಪಾಲಿಕರು, ವೈಷ್ಣವರು, ಶಕ್ತರು, ವೇದಾಂತಿಗಳು, ಹೀಗೆ ನಾನಾ ಗುಂಪುಗಳು ಆ ಸಮೂಹದಲ್ಲಿವೆ. ಆ ಒಂದು ದೃಷ್ಟಿಯಲ್ಲಿ ಮಾತ್ರ ಯಾವೊಂದು ಬಗೆಯ ವಿಶಿಷ್ಟ–ಚಿಹ್ನೆಯೂ ಪೂರ್ಣವಾಗಿ ಕಾಣುವುದಿಲ್ಲ. ಶಿವಾಜಿಯು ಸಿಂಹಾಸನದ ಮೇಲೆ ಕುಳಿತಿರುವಾಗ ಬ್ರಾಹ್ಮಣರ ಮಧ್ಯೆ ಹೋಮಹವನಗಳಲ್ಲಿ ಪ್ರತ್ಯಕ್ಷನಾಗಿದ್ದ

ವಾಗ, ಭೂರಿ ದಕ್ಷಿಣೆಗಳನ್ನು ನೀಡುತ್ತಿರುವಾಗ, ಅನ್ನದಾನ ಮಾಡುತ್ತಿರುವಾಗ, ಅವನ ಕಣ್ಣುಗಳು ಯಾವುದೋ ಒಂದು ವ್ಯಕ್ತಿಯನ್ನು ಹುಡುಕುತ್ತಿವೆ. ಆ ನಾನಾ ಬೈರಾಗಿಗಳ ಗುಂಪಿನಲ್ಲಿ ಅವನೇ-ಇವನೇ ಎಂದು ಹುಡುಕುತ್ತಿದೆ. ಆಕಾಂಕ್ಷೆಯು ಶಮನವಾಗುವುದಿಲ್ಲ; ಮತ್ತೇ ಯಾವುದೋ ತೀವ್ರ ಆಕಾಂಕ್ಷೆ. "ಛೆ! ಛೆ! ಇದೆಂತಹ ಹುಚ್ಚು ನನಗೆ! ಸತ್ತವನು ಮತ್ತೆ ಬರುತ್ತಾನೆಯೇ? ಕಳೆದುಕೊಂಡ ವಸ್ತುವನ್ನು ಮತ್ತೆ ಮತ್ತೆ ನೆನೆಯುವುದರಿಂದ ಫಲವೇನು?" ಎಂದು ನಿರಾಶನಾಗುತ್ತಾನೆ. ಉತ್ಸವಗಳೆಲ್ಲಾ ಪೂರೈಸಿದವು. ಶಿವಾಜಿಯು ಈಗ ಮಹಾ ಚಕ್ರವರ್ತಿ. ಅವನ ಆಕಾಂಕ್ಷೆಯಂ ಮಾತ್ರ ಪೂರೈಸಲಿಲ್ಲ "ಪ್ರತಾಪಗಡಕ್ಕೆ ಹೋಗಿ ರಾಮದಾಸ ಗುರುಗಳ ದರ್ಶನಮಾಡಿ ನನ್ನ ಮನಸ್ಸನ್ನು ಒಂದು ಬಾರಿ ಗುರುಗಳ ಮುಂದೆ ಬಿಚ್ಚಿ ಹೇಳಿ ಪರಿಹಾರವು ದೊರೆಯುವುದೋ ನೋಡೋಣ" ಎಂಬ ಆಸೆಯು ಬಾಧಿಸುತ್ತಿತ್ತು.

ಶಿವಾಜಿಯು ಕುದುರೆಯನ್ನೇರಿ ಹೊರಟನು. ನಾಲ್ಕಾರು ಬೆಂಗಾವಲಿನ ಪರಿಜನರು ಅನುಸರಿಸಿ ಬಂದರು. ಶಿವಾಜಿಯು ಬಹು ಪ್ರಯಾಸದಿಂದ ಪ್ರತಾಪಗಡವನ್ನು ಸೇರಿದನು. ಸಂಜೆಯು ಮುಸುಗಿತ್ತು. ಕತ್ತಲು ಕವಿಯುತ್ತಿತ್ತು. ಆ ಪ್ರತಾಪಗಡದ ಅಡಿಯಲ್ಲಿ ಅನೇಕ ಮಂಟಪಗಳಿದ್ದವು, ಪುಷ್ಕರಣಿಗಳಿದ್ದವು. ಆ ಮಂಟಪಗಳಲ್ಲಿ ಗುಂಪು ಗುಂಪಾಗಿ ಬೈರಾಗಿಗಳು ಕುಳಿತಿದ್ದರು. ಮಧ್ಯೆ ಬೆಂಕಿ ಉರಿಯುತ್ತಿತ್ತು. ಧ್ಯಾನಾಸಕ್ತರಾದವರು, ಮೌನಧಾರಿಗಳು, ಭಜನೆ ಮಾಡುವವರು, ನಾನಾ ವಿಧವಾಗಿ ಬೈರಾಗಿಗಳು ಕುಳಿತಿದ್ದರು. ಅವರ ಜೀವನವೇ ಅಂಥದು. ಅದನ್ನು ನೋಡಿ ಶಿವಾಜಿಯು 'ಇವರೆಷ್ಟೋ ಸುಖಿಗಳು' ಎಂದುಕೊಂಡನು. ಏನೋ ನೆನೆದುಕೊಂಡವನಂತೆ ಕುದುರೆಯಿಂದ ಧುಮ್ಮಿಕ್ಕಿ ಕುದುರೆಯನ್ನು ಬೆಂಗಾಲಿನವರ ಬಳಿ ಬಿಟ್ಟು "ಇಲ್ಲಿಯೇ ಕಾದಿರಿ; ಬರುತ್ತೇನೆ" ಎಂದು ಹೇಳಿ ಹೊರಟು ಹೋದನು. ಅವನ ಕಣ್ಣುಗಳು ಬೇಗ ಬೇಗ ಆ ಬೆಂಕಿಯ ಬೆಳಕಿನಲ್ಲಿ ಆ ಮುಖಗಳನ್ನು ನೋಡಿ, ಎಲ್ಲ ಮಂಟಪಗಳನ್ನೂ ತಟಾಯಿಸಿ ಮುಂದಕ್ಕೆ

ಹೋದನು. ಯಾರೂ ಶಿವಾಜಿಯನ್ನು ಗುರುತಿಸಲಿಲ್ಲ ಯಾವನೋ ಸರದಾರನೆಂದು ಅಲಕ್ಷ್ಯದಿಂದ ಅವರವರ ಲಹರಿಯಲ್ಲಿ ಅವರವರು ಲಿಪ್ತರಾಗಿದ್ದಾರೆ. ಶಿವಾಜಿಯು ನಿರಾಶೆಯಿಂದ ಮೆಲ್ಲಮೆಲ್ಲಗೆ ಹೆಜ್ಜೆಗಳನ್ನಿಡುತ್ತಾ ಹಿಂತಿರುಗಿ ಬರುತ್ತಿದ್ದರು. ಈ ಬೈರಾಗಿಗಳ ಗುಂಪನ್ನೆಲ್ಲಾ ಬಿಟ್ಟು ಒಂದು ಮರದಡಿಯಲ್ಲಿ ಕುಳಿತಿದ್ದ ಬೈರಾಗಿಯೊಬ್ಬನು ಏಕಾಂಗಿಯಾಗಿ ಬರುತ್ತಿರುವ ಶಿವಾಜಿಯನ್ನು ಕಂಡನು. ಆ ನಡಿಗೆ, ಆ ದೀರ್ಘ ಬಾಹುಗಳು, ಆ ಎತ್ತಿದ ಕುತ್ತಿಗೆ, ಉಬ್ಬಿದ ಎದೆ! ಶಿವಾಜಿಯೇ, ಸಂದೇಹವಿಲ್ಲವೆಂದು ಆ ಮನುಷ್ಯನು ನಿರ್ಧಾರಮಾಡಿದನು. "ಈ ಕತ್ತಲೆಯಲ್ಲಿ-ವನಪ್ರದೇಶದಲ್ಲಿ-ಏಕಾಕಿಯಾಗಿ ಶಿವಾಜಿಯು ಬರುವುದುಂಟೆ? ಅಸಂಭವ" ಎಂದುಕೊಂಡನು. ಆದರೂ ನೋಡೋಣವೆಂದುಕೊಂಡು ಅನತಿದೂರದಲ್ಲಿಯೇ ಶಿವಾಜಿಯನ್ನು ಹಿಂಬಾಲಿಸಿಕೊಂಡು ಬಂದನು. "ಇವನು ಶಿವಾಜಿಯೇ" ಎಂದುಕೊಂಡು ಸರಸರನೆ ಮುಂದೆ ಬಂದು ಶಿವಾಜಿಯ ಕಾಲುಗಳ ಮೇಲೆ ಬಿದ್ದನು.

"ಮಹಾರಾಜ, ನನ್ನನ್ನು ಕ್ಷಮಿಸು-ಕ್ಷಮಿಸು" ಎಂದನು.

ಶಿವಾಜಿಯು ಆ ಧ್ವನಿಯಿಂದ ಗುರ್ತಿಸಿ "ನೇತಾಜೀ! ನೇತಾಜೀ! ನಿನ್ನನ್ನೇ ಅರಸುತ್ತ ಬಂದಿದ್ದ, ನಾನು" ಎಂದು ಹೇಳಿ ಅವನನ್ನು ಗಟ್ಟಿಯಾಗಿ ಆಲಿಂಗಿಸಿದನು.

ಅವರಿಬ್ಬರ ಕಣ್ಣುಗಳಲ್ಲಿಯೂ ಆನಂದಾಶ್ರುಗಳು ತೊಟ್ಟಿಕ್ಕುತ್ತಿದ್ದವು. ಸ್ವಲ್ಪ ಹೊತ್ತಾದ ಮೇಲೆ ನೇತಾಜಿಯು ಸಮಾಧಾನ ತಂದುಕೊಂಡು,

"ಪ್ರಭುವೇ, ನಾನು ದೆಹಲಿಯಿಂದ ತಪ್ಪಿಸಿಕೊಂಡು ಕಾಶಿಗೆ ಬಂದೆ. ಅಲ್ಲಿ ನಿನ್ನ ಸಾಮ್ರಾಜ್ಯ ಪಟ್ಟಾಭಿಷೇಕವಾಗುವುದೆಂದು ಕಿವಿಗೆ ಬಿತ್ತು. ವೇಷ ಮರೆಸಿಕೊಂಡು ಈ ಗೋಸಾಯಿಗಳ ಗುಂಪಿನೊಡನೆ ಸೇರಿ ಇಲ್ಲಿಗೆ ಬಂದೆ. ಉತ್ಸವಗಳನ್ನೆಲ್ಲಾ ಕಣ್ಣು ತುಂಬ ನೋಡಿದೆ. ನಿನ್ನೆದುರಿಗೆ ಬಂದು ಮುಖ ತೋರಿಸುವ ಧೈರ್ಯವಿಲ್ಲ. ಅಂತಹ ಶುಭ ಸಮಯದಲ್ಲಿ ನಾನು ಮುಖ ತೋರಿಸುವುದು ಅಪಶಕುನ. ಪುನಃ ಉತ್ತರಕ್ಕೇ ಹೊರಟಿದ್ದೇನೆ. ನಿನ್ನ ದಯೆಯು ಅಪಾರವಾದದು. ಪ್ರೇಮವು ದೈವೀ ಪ್ರೇಮ. ನೀನಾಗಿ

ಹುಡುಕಿಕೊಂಡು ಬಂದು ದರ್ಶನವಿತ್ತೆ. ನಾನು ಧನ್ಯನಾದೆ. ನನ್ನ ಅಪರಾಧಗಳು ಶತಸಹಸ್ರವಿವೆ. ಅವುಗಳಿಗೆ ಪ್ರಾಯಶ್ಚಿತ್ತವೇ ಇಲ್ಲ. ಆದರೆ ನಿನ್ನ ಬಾಯಿಂದ ಕ್ಷಮಾಧಾನ ಮಾಡಿದರೆ ಮನಸ್ಸಿಗೆಶಾಂತಿಯು ಲಭಿಸುತ್ತದೆ" ಎಂದು ಹೇಳಿದನು

"ನೇತಾಜೀ, ನೀನೆಷ್ಟು ಕೃಶನಾಗಿ ಹೋಗಿದ್ದೀ! ಈ ಬೈರಾಗಿಗಳಂತೆ ನಿನ್ನ ಶರೀರದಲ್ಲಿ ಮೂಳೆ ಚರ್ಮಗಳು ಮಾತ್ರ ಉಳಿದಿವೆ. ಆ ನಿನ್ನ ಕಣ್ಣುಗಳ ಕಾಂತಿಯು ಹಾಗೆಯೇ ಇದೆ. ಆ ಕಣ್ಣುಗಳನ್ನು ನೋಡಿಯೇ ನಾನು ಸಂದೇಹಪಟ್ಟೆ. ಎಲ್ಲೆಲ್ಲಿಯೂ ಅರಸಿದೆ ದೇವರ ಇಚ್ಛೆ ಇಲ್ಲಿ ನನ್ನ ಪುನರ್ಮಿಲನ! ನಾನು ಇನ್ನು ನಿನ್ನನ್ನು ಬಿಡುವುದಿಲ್ಲ. ನೀನೆಲ್ಲಿಗೆಹೋಗುವೆ? ಏಕೆ ಹೋಗುವೆ?"

ನೇತಾಜಿಯು ದೈನ್ಯದಿಂದ "ಮಹಾರಾಜ, ನಾನೆಲ್ಲಿಗೆ ಹೋಗುವೆನೋ ನಾನರಿಯೆ. ನಾನು ನಿನ್ನಲ್ಲಿರುವಂತಿಲ್ಲ. ನನ್ನ ವಿಚಾರ ತಿಳಿದರೆ ನೀನು ನನ್ನನ್ನು ಒಂದು ಕ್ಷಣವೂ ಇಟ್ಟುಕೊಳ್ಳುವುದು ಸಾಧ್ಯವಿಲ್ಲ. ನೀನು ಪರಮ ಪೂಜ್ಯನಾದ ಹಿಂದೂ ಚಕ್ರವರ್ತಿ; ನಾನು ಧರ್ಮಭ್ರಷ್ಟನಾಗಿ ಮುಸಲ್ಮಾನನಾಗಿರುವ ಪಾಪಿ!" ಎಂದು ಹೇಳಿದನು.

ಶಿವಾಜಿಯು "ನಾನು ಈ ಮಾತನ್ನು ಅರಿಯದೇ ಇಲ್ಲ. ನೀನು ಮುಸಲ್ಮಾನನಾದೆಯೆಂದು ಕೇಳಿದ್ದೇನೆ. ಬಾದಷಹನ ಸೇವಕನಾಗಿದ್ದೀ" ಎಂದೂ ಕೇಳಿದ್ದೇನೆ. ಗುರುಮಹಾರಾಜರು ಈ ರಾಜ್ಯ ಕಟ್ಟುವ ಮುನ್ನವೇ 'ಇದು ರಾಮರಾಜ್ಯ' ಎಂದು ಉಪದೇಶಕೊಟ್ಟಿದ್ದಾರೆ. ಆ ಶ್ರೀರಾಮಚಂದ್ರನ ರಾಜ್ಯದಲ್ಲಿ ಎಲ್ಲರಿಗೂ ಸ್ಥಾನವಿದೆ. ಸಂತ ತುಕಾರಾಮರೂ ಅದೇ ಉಪದೇಶ ಕೊಟ್ಟಿದ್ದಾರೆ. 'ರಾಮಮಂತ್ರವು ಮಹಾಪಾಪಿಗಳನ್ನೂ ಪುನೀತರನ್ನಾಗಿ ಮಾಡುತ್ತದೆ' ಎಂದು!

"ಈ ನಮ್ಮಿಬ್ಬರ ಪುನರ್ಮಿಲನವು ಶ್ರೀರಾಮಚಂದ್ರನ ಪ್ರೇರಣೆಯಿಂದಲೆ ಆಗಿದೆ. ಬಾ, ನನ್ನೊಡನೆ ಬಾ. ಈಗಲೇ ಪರೀಕ್ಷೆಯಾಗಿ ಬಿಡಲಿ" ಎಂದು ಹೇಳಿ ನೇತಾಜಿಯ ಕೈಹಿಡಿದು ಪ್ರತಾಪಗಡ ಕೋಟೆಯ ಮೇಲೆ ಕರೆದೊಯ್ದನು.

ಕೋಟೆಯ ಮಹಾದ್ವಾರದಲ್ಲಿದ್ದ ಕಾವಲು ಭಟರು ಆ ನಿಶೆಯಲ್ಲಿ ಶಿವಾಜಿ ಮಹಾರಾಜನ ಧ್ವನಿ ಕೇಳಿ ಬಾಗಿಲುಗಳನ್ನು ತೆರೆದರು. ಶಿವಾಜಿಯು

ನೇತಾಜಿಯನ್ನು ಕರೆದುಕೊಂಡು ಭವಾನಿ ದೇವಾಲಯದ ಮುಂದೆ ಹೋದನು ಬಾಗಿಲುಗಳು ಮುಚ್ಚಿದ್ದವು. ಕಂಡಿಯಿಂದ ಇಣಿಕಿ ನೋಡಿದರು. ರಾಮದಾಸಸ್ವಾಮಿಗಳು ಭವಾನಿಯ ಅಡಿದಾವರೆಗಳಲ್ಲಿ ಧ್ಯಾನಾಸಕ್ತರಾಗಿ ಕುಳಿತಿದ್ದರು. ಶಿವಾಜಿಯೂ ನೇತಾಜಿಯೂ ಬಾಗಿಲಿನಲ್ಲಿ ಕಾದಿದ್ದರು.

ಗರ್ಭಗುಡಿಯೊಳಗೆ ಧ್ಯಾನದಿಂದೆದ್ದು ದೇವಿಗೆ ನಮಸ್ಕರಿಸಿ, ಪ್ರಸಾದವನ್ನು ಸ್ವೀಕರಿಸಿ ರಾಮದಾಸರು ಬಾಗಿಲುಗಳನ್ನು ತೆಗೆದು ಹೊರಗೆಬಂದರು. ಶಿವಾಜಿಯೂ ನೇತಾಜಿಯೂ ನಮಸ್ಕರಿಸಿದರು.

"ಶಿವಾಜೀ, ಈ ಅರ್ಧರಾತ್ರಿಯಲ್ಲಿ ಇಲ್ಲಿಗೇಕೆ ಬಂದೆ ?"

ಶಿವಾಜಿಯು ಕೈಮುಗಿದು "ಮಹಾಸ್ವಾಮಿ, ತಾವು ಎಲ್ಲವನ್ನು ಬಲ್ಲಿರಿ. ಇಂತಹ ಪಟ್ಟಾಭಿಷೇಕದಿಂದಲೂ ಸಂತುಷ್ಟನಾಗದೆ ನಾನು ಖಿನ್ನ ಮನಸ್ಕನಾಗಿಯೇ ಇದ್ದೆ. ಶ್ರೀರಾಮಚಂದ್ರನು "ಗುರುದರ್ಶನಕ್ಕೆ ಹೋಗು, ಶಾಂತಿ ಲಭಿಸುತ್ತದೆ" ಎಂದು ಪ್ರೇರಣೆಮಾಡಿದನು. ಬರುವ ಮಾರ್ಗದಲ್ಲಿಯೇ ಅಲಭ್ಯಲಾಭ. ಈ ಮಿತ್ರನ ಸಮಾಗಮವು ಲಭಿಸಿತು. ಮನಸ್ಸಿಗೆ ಶಾಂತಿ ಸಮಾಧಾನಗಳು ದೊರೆತವು. ಇವನು ನಮ್ಮ ನೇತಾಜಿ ! ಇವನ ಮೇಲೆ ತಮ್ಮ ಅನುಗ್ರಹವಾಗಬೇಕು ಅದಕ್ಕಾಗಿ ಕರೆತಂದಿದ್ದೇನೆ" ಎಂದು ಹೇಳಿದನು.

ನೇತಾಜಿಯು ಮತ್ತೊಮ್ಮೆ ನಮಸ್ಕರಿಸಿದನು.

ರಾಮದಾಸರು "ನೇತಾಜಿ, ನೀನು ಮುಸಲ್ಮಾನನಾಗಿದ್ದೀ."

ಶಿವಾಜಿಯು "ಹೌದು, ಗುರುದೇವಾ, ಇವನಿಗೆ ಪ್ರಾಯಶ್ಚಿತ್ತವಿಲ್ಲವೇ?"

ರಾಮದಾಸನು ನಕ್ಕು "ಪ್ರಾಯಶ್ಚಿತ್ತವಿಲ್ಲದೆ ಉಂಟೆ ? ಇವನ ಶರೀರವನ್ನು ನೋಡಿದರೆ ನನಗೆ ಅರ್ಥವಾಗುತ್ತದೆ. ಪರಿತಾಪದಿಂದ ಕೃಶನಾಗಿದ್ದಾನೆ ಪಶ್ಚಾತ್ತಾಪವೇ ಪ್ರಥಮ ಪ್ರಾಯಶ್ಚಿತ್ತ."

"ಗುರುದೇವ, ಅವನನ್ನು ಮತ್ತೆ ಹಿಂದುವಾಗಿ ಮಾಡಲಾಗುವುದಿಲ್ಲವೇ ?"

ಆಗುತ್ತದೆ. ರಾಮಮಂತ್ರವು ತಾರಕಮಂತ್ರ ಆದರಿಂದ ಉದ್ಧಾರವಾಗುತ್ತದೆ."

"ಪತಿತ ಪಾವನಸೀತಾರಾಂ"

ಶಿವಾಜಿಯು "ಗುರುದೇವ, ಲೋಕನಿಂದೆಯು ತಪ್ಪುವುದೇ?"

ರಾಮದಾಸರು "ಲೋಕನಿಂದೆಯು ತಪ್ಪುತ್ತದೆ. ಆಚಾರದಿಂದ, ರಾಮ ಭಕ್ತಿಯಿಂದ ಈ ನೇತಾಜಿಯು ಲೋಕ ಪೂಜ್ಯನಾಗಬಹುದು. ವ್ಯಾಧನಾಗಿದ್ದ ವಾಲ್ಮೀಕಿಯು ರಾಮಮಂತ್ರದಿಂದ ಮಹರ್ಷಿಯಾಗಲಿಲ್ಲವೇ ?"

"ಭಗವಾನ್. ಈ ಕಲಿಗಾಲದಲ್ಲಿಯೂ ಅದು ಸಾಧ್ಯವೇ ?"

"ರಾಮ ಮಂತ್ರವು ಸರ್ವಕಾಲದಲ್ಲಿಯೂ ಅಮೃತ"

"ಗುರುದೇವಾ, ನಮಗೆ ಅಪ್ಪಣೆಯೇ ?"

"ಈ ನೇತಾಜಿಯು ಇಲ್ಲಿಯೇ ಇರಲಿ. ಅದು ಭವಾನಿಯ ಆಜ್ಞೆ".

ಅವರಿಬ್ಬರೂ ಗುರುವಿನ ಪಾದಗಳಿಗೆ ನಮಸ್ಕರಿಸಿದರು. ಶಿವಾಜಿಯು ಗುರು ಸಮ್ಮುಖದಲ್ಲಿ ನೇತಾಜಿಯನ್ನು ಆಲಿಂಗಿಸಿ "ನೇತಾಜೀ, ನೀನು ಗುರು ಕಟಾಕ್ಷದಿಂದಲೇ ಪವಿತ್ರನಾಗಿರುವೆ. ಗುರುಸಾನ್ನಿಧ್ಯವು ನಿನಗೆ ಲಭಿಸಿರುವುದು ಪುಣ್ಯ ವಿಶೇಷ. ಗುರುವಾಜ್ಞೆಯಂತೆ ನೀನು ಇಲ್ಲಿಯೇ - ಇರು. ನಾನು ಮತ್ತೊಮ್ಮೆ ಬಂದು ಗುರುಗಳನ್ನೂ ನಿನ್ನನ್ನೂ ದರ್ಶನಮಾಡುತ್ತೇನೆ" ಎಂದು ಹೇಳಿ ಭವಾನಿಯ ದರ್ಶನಮಾಡಿ ನಮಸ್ಕರಿಸಿ ಹೊರಟನು.

o—o

# ಶಿವಾಜಿಯ ಕೈವಲ್ಯ

## ೧

ಶಿವಾಜಿ ಮಹಾರಾಜನ ಸಾಮ್ರಾಜ್ಯ ಪಟ್ಟಾಭಿಷೇಕವಾದ ನಂತರ ಮಾತೂಶ್ರೀ ಜೀಜಾಬಾಯಿಯು ಪರಲೋಕವನ್ನೈದಿದಳು. ಆ ವೀರ ಮಾತೆಯು ಸಂತೋಷದಿಂದ ಸ್ವರ್ಗಕ್ಕೇರಿದಳು. ಅವಳು ವೀರಪತಿಯನ್ನು ಪಡೆದಿದ್ದರೂ, ಆ ಷಾಜಿಯು ರಾಜಾಧಿರಾಜರಿಗಿಂತಲೂ ಐಶ್ವರ್ಯದಲ್ಲಿ ಓಲಾಡುತ್ತಿದ್ದರೂ, ಅದೊಂದೂ ಜೀಜಾಬಾಯಿಯ ಪಾಲಿಗೆ ಇರಲಿಲ್ಲ. ಬಡತನದಲ್ಲಿಯೇ ಬಸವಳಿಯುತ್ತಾ ತನ್ನ ಮಗನನ್ನು ಬಲು ಕಷ್ಟದಿಂದ ಕಾಪಾಡುತ್ತಿದ್ದಳು. ಈ ಜಗತ್ತಿನಲ್ಲಿ ಆ ಮಾತೆಯ ಆಶಾಜ್ಯೋತಿ ಎಂದರೆ, ಆ ಮಗ ಶಿವಾಜಿ ಒಬ್ಬನೆ. ಅವನು ಹಳ್ಳಿಗಾಡಿನಲ್ಲಿ ಬಡ ರೈತರ ಮಧ್ಯದಲ್ಲಿ, ಹುಟ್ಟಿಬೆಳೆದವನು. ಹೆಜ್ಜೆ ಹೆಜ್ಜೆಗೂ ಅಪಾಯಗಳು—ಶತ್ರುಬಾಧೆ. ಅಂತಹ ಪರಿಸ್ಥಿತಿಯಲ್ಲಿ ಆ ತಾಯಿ ಅವನನ್ನು ಕಾಪಾಡಿದಳು ಕಾಡಿನಿಂದ ಕಾಡಿಗೆ ಅಲೆಯುತ್ತಾ, ಉಪವಾಸ, ವನವಾಸಗಳನ್ನು ಮಾಡಿ, ಮಗನನ್ನು ಸಾಕಿದ ತಾಯಿ ಅವಳು.

ಆ ಮಗನು ಅವಳ ಕಣ್ಣೆದುರಿನಲ್ಲಿಯೇ ಸೈನ್ಯವನ್ನು ಕಟ್ಟಿದನು. ರಾಜ್ಯವನ್ನು ನಿರ್ಮಾಣಮಾಡಿದನು. ಪ್ರಪಂಚದಲ್ಲಿಯೇ, ವಿಖ್ಯಾತ ಚಕ್ರವರ್ತಿ ಎನಿಸಿಕೊಂಡ ಔರಂಗಜೇಬನೊಡನೆ, ಹೆಜ್ಜೆ ಹೆಜ್ಜೆಗೂ ಹೋರಾಡಿ ಗೋಲ್ಕಂಡ ಬಿಜಾಪುರದ ಸುಲ್ತಾನರುಗಳನ್ನು ಒದಿಗೊತ್ತಿ, ಔರಂಗಜೇಬನನ್ನು ನಿರಾಕರಿಸಿ, ಮಹಾರಾಷ್ಟ್ರ ರಾಜ್ಯವನ್ನು ನಿರ್ಮಾಣಮಾಡಿದನು. ಕುರಿಗಳಂತೆ ಮುಸಲ್ಮಾನರಿಗೆ ತಲೆಬಾಗಿ ನಡೆಯುತ್ತಿದ್ದ ಆ ಜನರನ್ನು ಸಿಂಹಗಳಂತೆ ವೀರಾಗ್ರೇಸರರನ್ನಾಗಿ ಮಾಡಿದನು. ಇಂತಹ ಮಗನು ಇಡೀ ಹಿಂದೂಸ್ಥಾನದಲ್ಲಿ, ಹಿಂದೂ ಬಾದಶಹನೆಂದು ಪ್ರಖ್ಯಾತನಾಗಿ ಸಾರ್ವಭೌಮ ಸಿಂಹಾಸನದಲ್ಲಿ ಪಟ್ಟಾಭಿಷಿಕ

ನಾದುದನ್ನು ಆ ತಾಯಿಯು ಕಣ್ಣಾರ ನೋಡಿ ಆನಂದಿಸಿದಳು. ಒಬ್ಬ ಮಾತೆಗೆ ಇದಕ್ಕಿಂತಲೂ, ಪರಮಭಾಗ್ಯವು ಮತ್ತೇನಿದೆ. ಆ ತುಂಬಿದ ಆನಂದದಿಂದ ಅವಳು ಪ್ರಾಣಬಿಟ್ಟಳು.

ಶಿವಾಜಿ ಮಹಾರಾಜನು ತಾಯಿಯ ಮರಣವನ್ನು ಸರ್ವೇ ಸಾಧಾರಣ ವಾಗಿ ಭಾವಿಸಲಿಲ್ಲ. ತನ್ನ ಶಕ್ತಿ ಪ್ರಭಾವಗಳಿಗೆಲ್ಲಾ ಆ ಪೂಜ್ಯಳಾದ ಮಾತೆಯೇ ಕಾರಣಳೆಂದು ಅವನು ನಂಬಿದ್ದನು. ಮಾತೃವಿಯೋಗದಿಂದ ಶಿವಾಜಿ ಅನಾಥಬಾಲಕನಂತೆ ಖಿನ್ನನಾದನು.

ಪಟ್ಟಾಭಿಷೇಕದಿಂದಲೂ ಮಾತೆಯ ಕರ್ಮಗಳಿಂದಲೂ ಶಿವಾಜಿಯ ಭಂಡಾರದಿಂದ ಹೇರಳವಾಗಿ ಹಣ ಖರ್ಚಾಗಿಹೋಯಿತು. ಅಧಿಕಾರಿಗಳು ಸಮಯವರಿತು, ಶಿವಾಜಿ ಮಹಾರಾಜನೊಂದಿಗೆ "ಬೊಕ್ಕಸದಲ್ಲಿ ಹಣವಿಲ್ಲ. ಖರ್ಚಿಗೆ ತೊಂದರೆಯಾಗುತ್ತಿದೆ. ಸೈನ್ಯಗಳಿಗೆ ಸರಿಯಾಗಿ ಬಟವಾಡೆಯಾಗು ತ್ತಿಲ್ಲ" ಎಂದು ತಿಳಿಸಿದರು.

ಶಿವಾಜಿಯು ತನ್ನ ಸೇನಾಧಿಪತಿಗಳೊಡನೆ ಯೋಚನೆ ಮಾಡಿದನು.

"ಬಿಜಾಪುರ ಗೋಲ್ಕೊಂಡ ರಾಜ್ಯಗಳು ದುರ್ಬಲವಾಗಿವೆ. ಅಂತಃ ಕಲಹಗಳಿಂದ ತೊಳಲುತ್ತಿವೆ. ಅವರಲ್ಲಿ ಬೇಕಾದಷ್ಟು ಹಣವಿದೆ" ಎಂದು ಮಂತ್ರಿಗಳು ಸೂಚನೆ ಕೊಟ್ಟರು.

ಶಿವಾಜಿಯು ಮೊಗಲ್ ಅಧಿಕಾರಕ್ಕೆ ಸೇರಿದ ರಾಜ್ಯಗಳ ಮೇಲೆಯೇ ಮೊದಲು ದಾಳಿ ನಡೆಸಬೇಕು. ದಖ್ಖನ್ನಿನ ಮೊಗಲ್ ಸರ್ ಸುಬೇದಾರನಾದ ಬಹದ್ದೂರ್‌ಖಾನನಿಗೆ ಒಂದು ಪೆಟ್ಟು ಕೊಟ್ಟು ಅಣಗಿಸಿಡಬೇಕು. ಇಲ್ಲದಿದ್ದರೆ ಬಿಜಾಪುರದ ಸುಲ್ತಾನರೊಡನೆ ಅವನು ಒಂದಾಗಿ ಸೇರಿಬಿಡುತ್ತಾನೆ—ಎಂದ ಆಲೋಚನೆ ಮಾಡಿ ಬಹದ್ದೂರ್‌ಖಾನನ ಮೇಲೆಯೇ ಮರಾಠಾ ಸೇನಾಧಿಪತಿ ಗಳು ದಂಡೆತ್ತಿಹೋಗಬೇಕೆಂದು ಅಪ್ಪಣೆಯಿತ್ತನು.

ಮರಾಠಾ ಸೈನ್ಯಗಳಿಗೆ ಯುದ್ಧಕ್ಕೆ ಹೊರಡುವುದೆಂದರೆ ಬಲು ಸಂತೋಷ. ಸಂಬಳ ಸಾರಿಗೆಗಳು ಹೆಚ್ಚಾಗಿ ಸಿಕ್ಕುತ್ತವೆ. ಮತ್ತು ಅಲ್ಲಲ್ಲಿ ಲೂಟಿಮಾಡಿದ ಹಣವೂ ಕೈಗೆ ಸಿಕ್ಕುತ್ತದೆಂದು ಮರಾಠಾ ಸೈನಿಕರೂ ದಳಪತಿಗಳೂ ಮಾತನಾಡಿ ಕೊಳ್ಳಲಾರಂಭಿಸಿದರು. ಮಳೆಗಾಲವು ಆರಂಭವಾಗುವುದರಲ್ಲಿದೆ. ಈ ವರ್ಷಾ ಕಾಲ ಕಳೆದು ಶರದೃತುವು ಬರುತ್ತಲೇ ಮಹಾರಾಜರು ಖಾನ್‌ದೇಶದ ಮೇಲ

ಯುದ್ಧಕ್ಕೆ ಹೊರಡುತ್ತಾರೆಂದು ಮಾತನಾಡಿಕೊಳ್ಳುತ್ತಿದ್ದರು. ಈ ಸಮಾಚಾರ ಔರಂಗಾಬಾದಿಗೂ ಹರಡಿತು. ಸೇನಾಧಿಪತಿಯಾದ ದಿಲೀಪ್‌ಖಾನನು ದೆಹಲಿಗೆ ಹೊರಟುಹೋಗಿದ್ದುದರಿಂದ ದಕ್ಷಿಣ್ಣಿನ ಮೊಗಲ್ ಸೇನಾಧಿಪತ್ಯ ಬಹದ್ದೂರ್ ಖಾನನಿಗೆ ಸೇರಿದ್ದಿತು. ಅವನು ಮೊಗಲ್ ಸೈನ್ಯದಲ್ಲಿ ತಕ್ಕ ವ್ಯವಸ್ಥೆ ಮಾಡುವುದಕ್ಕೋಸ್ಕರ ಮೊಗಲ್ ದಂಡಿನ ಮುಖ್ಯಠಾಣವಾದ ಪೆಡಗಾಂಗೆ ಹೋಗಿ ಮೊಕ್ಕಾಂ ಮಾಡಿದನು. ಸೇನಾಧಿಪತಿಗಳಿಗೆಲ್ಲಾ ಎಚ್ಚರ ಕೊಟ್ಟು ಸೈನ್ಯಗಳನ್ನು ಕೂಡಿಹಾಕಲು ಪ್ರಯತ್ನಮಾಡುತ್ತಿದ್ದನು.

ಬಹದ್ದೂರ್‌ಖಾನನು ನಿರೀಕ್ಷಿಸಿದ್ದಂತೆ ವರ್ಷಾಕಾಲವು ಮುಗಿಯುವ ತನಕ ಮರಾಠಾ ಸೈನ್ಯಗಳು ಸ್ವಸ್ಥವಾಗಿ ಕೂಡಲಿಲ್ಲ. ಒಳ್ಳೆಯ ಮಳೆಗಾಲದಲ್ಲಿಯೇ ಖಾನದೇಶದ ಮೇಲೆ ಹೊರಟುಬಿಟ್ಟವು.

ಮರಾಠಾ ಸೈನ್ಯದ ಎರಡು ಸಾವಿರ ಕುದುರೆ ಸಿಪಾಯಿಗಳು ಖಾನದೇಶಕ್ಕೆ ಬಂದೇಬಿಟ್ಟದ್ದಾರೆಂದೂ ಅಲ್ಲಲ್ಲಿ ಊರುಗಳನ್ನು ಕೊಳ್ಳೆಹೊಡೆಯುತ್ತಿದ್ದಾರೆಂದೂ ಪೆಡಗಾಂನಲ್ಲಿದ್ದ ಬಹದ್ದೂರ್ ಖಾನನಿಗೆ ದೂತರು ಬಂದು ಸಮಾಚಾರ ತಿಳಿಸಿದರು. ಇದ್ದಕ್ಕಿದ್ದಂತೆ ಬಂದ ಈ ಸಮಾಚಾರವನ್ನು ಕೇಳಿ ಬಹದ್ದೂರ್ ಖಾನನು ಸೈನ್ಯಸಮೇತವಾಗಿ ಹೊರಟನು. ಮರಾಠಾ ಸೈನ್ಯಗಳು ಪೆಡಗಾಂಗೆ ಐವತ್ತು ಮೈಲಿಗಳ ದೂರದಲ್ಲಿದೆಯೆಂದೂ ಬ್ರಹ್ಮಾಂಡ ಸೈನ್ಯಗಳು ಮೇಲೆಮೇಲೆ ಬರುತ್ತಿವೆಯೆಂದೂ ಮತ್ತೆ ಗುಪ್ತಚಾರರು ಬಂದು ಹೇಳಿದರು.

ಬಹದ್ದೂರ್ ಖಾನನು ಪೆಡಗಾಂ ಠಾಣ್ಯದಿಂದ ಹೊರಡುತ್ತಲೇ ಬೇರೆ ಮಾರ್ಗದಿಂದ ಏಳುಸಾವಿರ ಮರಾಠಾ ಸೈನ್ಯಗಳು ಹಠಾತ್ತನೆ ಪೆಡಗಾಂ ಶಿಬಿರದ ಮೇಲೆ ಬಿದ್ದು ಕೊಳ್ಳೆ ಹೊಡೆದವು. ಆ ಶಿಬಿರದಲ್ಲಿ ಸುಮಾರು ಒಂದು ಕೋಟಿ ರೂಪಾಯಿಗಳಷ್ಟು ಬೆಲೆಬಾಳುವ ಸಾಮಗ್ರಿಗಳೂ ಹಣವೂ ಮರಾಠರಿಗೆ ಸಿಕ್ಕಿತು. ಮತ್ತು ಅತ್ಯುತ್ತಮವಾದ ಇನ್ನೂರು ಕುದುರೆಗಳು ಸಿಕ್ಕಿದವು. ಬಹದ್ದೂರ್‌ಖಾನನು ಬಾದಶಹರಿಗೆ ಕಳುಹಿಸುವುದಕ್ಕೋಸ್ಕರ ಆ ಕುದುರೆಗಳನ್ನು ಚುನಾಯಿಸಿಟ್ಟಿದ್ದನು. ಹೀಗೆ ಮರಾಠರು ಹೂಡಿದ ತಂತ್ರವು ತಕ್ಷಣವೇ ಫಲಕಾರಿಯಾಯಿತು. ಮರಾಠರ ಎರಡು ಸೈನ್ಯಗಳ ಮಧ್ಯೆ ಬಹದ್ದೂರ್ ಖಾನನ ಸೈನ್ಯವು ಸಿಕ್ಕಿ ನುಚ್ಚುನೂರಾಯಿತು.

ಔರಂಗಾಬಾದಿನ ಸಮೀಪದಲ್ಲಿ ಮರಾಠಾ ಸೈನ್ಯಗಳು ಒಂದು ಸುತ್ತು ಕಟ್ಟುತ್ತಿವೆಯೆಂದು ಬಹದ್ದೂರ್ ಖಾನನಿಗೆ ತಿಳಿಯಿತು. ಅವನು ಗಾಬರಿಯಿಂದ ರಾಜಧಾನಿಗೆ ಓಡಿಹೋದನು.

ಬಿಜಾಪುರದ ದರ್ಬಾರಿನವರಿಗೂ ಮರಾಠರಿಗೂ ಅಲ್ಲಲ್ಲಿ ಕಲಹಗಳು ನಡೆಯುತ್ತಿದ್ದವು. ಬಿಜಾಪುರದ ಸೇನಾಧಿಪತಿಯಾದ ರುಸ್ತುಂ ಈ–ಜಮಾನ್ ಎಂಬುವನು ಸೈನ್ಯವನ್ನು ತೆಗೆದುಕೊಂಡು ಬಂದು ರಾಜಾಪುರವನ್ನು ಸ್ವಾಧೀನ ಪಡಿಸಿಕೊಂಡನು. ಮರಾಠರು ಅತ್ತಕಡೆಗೆ ವಿಶೇಷ ಗಮನ ಕೊಡಲಿಲ್ಲ.

ಮೊಗಲ್ ರಾಜ್ಯಗಳ ಮೇಲೆಯೇ ಧಾಳಿ ನಡೆಸುತ್ತಿದ್ದರು. ಮರಾಠಾ ಸೈನ್ಯಗಳು ಧರನ್‌ಗಾಂವ್ ಎಂಬ ವ್ಯಾಪಾರದ ಪಟ್ಟಣವನ್ನು ಸ್ವಾಧೀನಪಡಿಸಿ ಕೊಂಡರು ಅಲ್ಲಿ ಇಂಗ್ಲಿಷರ ಸಂಪತ್‌ಭರಿತವಾದ ಕೋಠಿಗಳು ಇದ್ದವು. ಧರನ್‌ಗಾಂವ್‌ನ ಖಿಲ್ಲೇಧಾರ ಕುತುಬ್ದೀನನೆಂಬುವನು ಸ್ವಲ್ಪವೇ ಸೈನ್ಯವಿದ್ದರೂ ಮರಾಠರೊಡನೆ ಬಹುಪರಾಕ್ರಮದಿಂದ ಹೋರಾಡಿದನು. ಕೊನೆಗೆ ಪರಾಜಯ ವನ್ನು ಹೊಂದಿ ಔರಂಗಾಬಾದಿಗೆ ಓಡಿಹೋಗಿ ಅಲ್ಲಿ ಸೇರಿಕೊಂಡನು. ಅವನು ಬಹದ್ದೂರ್ ಖಾನನೊಡನೆ "ಮರಾಠಾ ಸೈನ್ಯಗಳು ಮನೆಗಳನ್ನೂ ಕೋಠಿ ಗಳನ್ನೂ ಹಾಳುಮಾಡಿವೆ. ಶ್ರೀಮಂತರನ್ನು ಕೊಳ್ಳೆಹೊಡೆದಿದ್ದಾರೆ. ಊರು ಗಳನ್ನು ಸುಟ್ಟುಹಾಕಿದ್ದಾರೆ" ಎಂದು ವಿವರವಾಗಿ ತಿಳಿಸಿದನು.

ಬಹದ್ದೂರ್ ಖಾನನು ಖತಿಗೊಂಡು ಮರಾಠರಿಗೆ ಎಲ್ಲಾದರೂ ಬಲವಾದ ಪೆಟ್ಟು ಕೊಡಬೇಕೆಂದು ಯೋಚನೆಮಾಡಿ ಬಲವಾದ ಸೈನ್ಯವನ್ನು ತೆಗೆದು ಕೊಂಡು ಹೋಗಿ ಕಲ್ಯಾಣ್‌ನನ್ನು ಹಿಡಿದುಕೊಂಡನು. ಕಲ್ಯಾಣದುರ್ಗವು ಕೈಬಿಟ್ಟು ಹೋಯಿತೆಂದು ಶಿವಾಜಿಗೆ ವರ್ತಮಾನ ಬಂದಿತು. ಶಿವಾಜಿಯು ಸೈನ್ಯಸಮೇತವಾಗಿ ಸ್ವತಃ ಕಲ್ಯಾಣಕ್ಕೆ ಹೋಗಿ ಯುದ್ಧಮಾಡಿ ಬಹದ್ದೂರ್ ನನ್ನು ಓಡಿಸಿ ಆ ದುರ್ಗವನ್ನು ಪುನಃ ಸ್ವಾಧೀನಪಡಿಸಿಕೊಂಡನು.

ಬಹದ್ದೂರ್ ಖಾನನು ಓಡಿಹೋಗಿ ತನ್ನ ರಾಜಧಾನಿಯಾದ ಔರಂಗಾ ಬಾದಿನಲ್ಲಿ ಸೇರಿಕೊಂಡನು.

ಶಿವಾಜಿಯು ಒಂದು ತಂತ್ರವನ್ನು ಹೂಡಿದನು. ಔರಂಗಾಬಾದಿಗೆ ಶಿವಾಜಿಯ ಕಡೆಯ ರಾಯಭಾರಿ ರಘುನಾಥರಾವ್ ಫಡಕೆ ಎಂಬುವನು ಹೋಗಿ ಬಹದ್ದೂರ್ ಖಾನನ್ನು ಭೇಟಿಮಾಡಿದನು.

"ಶಿವಾಜಿ ಮಹಾರಾಜರು ನನ್ನನ್ನು ನಿಮ್ಮಲ್ಲಿಗೆ ಕಳುಹಿಸಿಕೊಟ್ಟಿದ್ದಾರೆ. ಅವರಾಗಿ ಸಂಧಿಮಾಡಿಕೊಳ್ಳಲು ಅಪೇಕ್ಷಿಸುತ್ತಾರೆ. ಸಣ್ಣಸಣ್ಣ ಸ್ಥಳಾಧಿಕಾರಿಗಳಿಂದ ಪರಸ್ಪರ ಜಗಳವಾಗುತ್ತಿದೆಯೇ ಹೊರತು ಮರಾಠರಿಗೂ ಮೊಗಲರಿಗೂ ಯುದ್ಧಗಳಾಗುವಂಥಾ ದೊಡ್ಡ ಕಾರಣಗಳೇನೂ ಇಲ್ಲ. ಸಂಧಿಮಾಡಿಕೊಂಡರೆ ಉಭಯರಾಜ್ಯಗಳಿಗೂ ಒಳ್ಳೆಯದಾದೀತು" ಎಂದು ತಿಳಿಸಿದನು.

ಬಹದ್ದೂರ್ ಖಾನನು ಸಂಧಿಗೆ ತಯಾರಾಗಿದ್ದನು. ಅವನು ಈ ಯುದ್ಧಗಳಿಂದ ಬೇಸತ್ತುಹೋಗಿದ್ದನು. ಶಿವಾಜಿಯೊಡನೆ ವಿರೋಧ ಮಾಡಿಕೊಳ್ಳುವುದು ವ್ಯರ್ಥ. ಅವನನ್ನು ಗೆಲ್ಲಲು ಯಾರಿಂದಲೂ ಸಾಧ್ಯವಿಲ್ಲ. ಆದರೆ ವಿರೋಧದಿಂದ ನಮಗೇ ಹೆಚ್ಚು ಕೆಡಕಾಗುತ್ತದೆ. ಮರಾಠಾ ಸೈನ್ಯಗಳು ಪದೇ ಪದೇ ಬಂದು ನಮ್ಮ ರಾಜ್ಯದಲ್ಲಿ ದೊಂಬಿ ಮಾಡುತ್ತವೆ. ನಮ್ಮ ಕೈಮೇಲಾಗಿ ಅವರು ಸೋತರೆ ಓಡಿಹೋಗುತ್ತಾರೆ. ನಮಗೇನೂ ಲಾಭವಿಲ್ಲ. ಶಿವಾಜಿಗೂ ನಮಗೂ ಸಂಧಿಯಾದರೆ ಈ ಉಪದ್ರವ ಇಲ್ಲದಂತೆ ಆಗುತ್ತದೆ ಎಂದು ಯೋಚನೆಮಾಡಿ ಸಂಧಿಗೆ ಒಪ್ಪಿಕೊಳ್ಳಬೇಕೆಂದು ನಿರ್ಧರಿಸಿಕೊಂಡನು. ಮರಾಠಾ ರಾಯಭಾರಿಯೊಂದಿಗೆ ಬಹದ್ದೂರ್‌ಖಾನನು ಶಿವಾಜಿ ಮಹಾರಾಜರಿಗೂ ನನಗೂ ಸ್ವಂತವಾಗಿ ಯಾವ ದ್ವೇಷವೂ ಇಲ್ಲ. ಅವರ ವಿಷಯದಲ್ಲಿ ಮೊದಲಿನಿಂದಲೂ ನನಗೆ ಗೌರವವಿದ್ದೇ ಇದೆ. ಅದನ್ನು ಶಿವಾಜಿ ಮಹಾರಾಜರೂ ಬಲ್ಲರು. ನಮಗೂ ಅವರಿಗೂ ಸ್ಥಿರವಾದ ಸಂಧಿಯಾಗುವುದು ಒಳ್ಳೆಯದು. ಉಭಯ ರಾಜ್ಯಗಳಿಗೂ ಕ್ಷೇಮವಾಗುತ್ತದೆ. ಆದರೆ ಸಂಧಿಯ ಷರತ್ತುಗಳನ್ನು ಬಾದಶಹರು ಒಪ್ಪಬೇಕು—ಎಂದು ಹೇಳಿದನು.

ಬಹದ್ದೂರ್‌ಖಾನನೂ ರಘುನಾಥ ಪಡಕೆಯೂ ಸಂಧಿಯ ಷರತ್ತುಗಳನ್ನು ಚರ್ಚೆಮಾಡಿ ನಿರ್ಧರಿಸಿದರು. ಶಿವಾಜಿಯು ಹದಿನೇಳು ದುರ್ಗಗಳನ್ನು ಮೊಗಲರ ವಶಕ್ಕೆ ಪೂರ್ತಿಯಾಗಿ ಬಿಟ್ಟುಕೊಡಬೇಕು. ಭೀಮಾನದಿಯ ಆಚೆಗಿರುವ ದೇಶವನ್ನೆಲ್ಲಾ ಮೊಗಲರು ಶಿವಾಜಿಗೇ ಬಿಟ್ಟುಬಿಡಬೇಕು. ಈ ಸಂಧಿಪಾಲನೆಗೋಸ್ಕರ ಸಾಂಬಾಜಿಯು ಔರಂಗಾಬಾದಿನಲ್ಲಿ ಸರ್ ಸುಭೇದಾರರ ಕೈಕೆಳಗೆ ಅಧಿಕಾರಿಗಳಾಗಿರಬೇಕು. ಅವನನ್ನು ಬಾದಶಹರು ಆರು ಸಾವಿರ ಕುದುರೆಗಳ ಸೇನಾನಾಯಕನಾಗಿ ಮಾಡಬೇಕು. ಹೀಗೆ ಷರತ್ತುಗಳು ನಿರ್ಧಾರ



ಆದುದರಿಂದ ಈ ಷರತ್ತುಗಳಿಗೆ ಒಪ್ಪಿಗೆಕೊಡುವುದಕ್ಕೋಸ್ಕರ ಇಕ್ಬಲ್‌ಖಾನನನ್ನು ಬಹದ್ದೂರ್‌ಖಾನನು ಮರಾಠಾ ರಾಯಭಾರಿಯೊಂದಿಗೆ ಕಳುಹಿಸಿಕೊಟ್ಟನು.

ಇಕ್ಬಲ್‌ಖಾನನು ಕಲ್ಯಾಣದಲ್ಲಿದ್ದ ಶಿವಾಜಿ ಮಹಾರಾಜನನ್ನು ಭೇಟಿಮಾಡಿ ಸಂಧಿಯ ಷರತ್ತುಗಳನ್ನೆಲ್ಲಾ ಬಹದ್ದೂರ್‌ಖಾನರು ಒಪ್ಪಿಕೊಂಡಿದ್ದಾರೆ. ಇವನ್ನು ದೆಹಲಿಯ ದರ್ಬಾರಿಗೆ ಬರೆಸಿ ಕಳುಹಿಸುತ್ತಾರೆ. ಬಾದಶಹರಿಂದ ಈ ಬಗ್ಗೆ ಫರ್ಮಾನ್ ಬರುವವರೆಗೆ ನಿರೀಕ್ಷಣೆ ಮಾಡಬೇಕು. ಎರಡು ಪಕ್ಷಗಳವರೂ ತಾಟಸ್ಥ್ಯವನ್ನು ವಹಿಸಬೇಕು. ಯುವರಾಜ ಸಾಂಬಾಜಿಯವರನ್ನು ಔರಂಗಾಬಾದಿಗೆ ಕಳುಹಿಸಿಕೊಡಬೇಕೆಂದು ಬಹದ್ದೂರ್‌ಖಾನರು ಅಪೇಕ್ಷಿಸುತ್ತಾರೆ ಎಂದು ಇಕ್ಬಲ್‌ಖಾನನು ತಿಳಿಸಿದನು. ಶಿವಾಜಿಯು ಬಹದ್ದೂರ್‌ಖಾನರ ವಿಷಯದಲ್ಲಿ ನಮಗೆ ಗೌರವವಿದೆ. ಅವರನ್ನು ಎಷ್ಟುಬೇಕಾದರೂ ನಂಬಬಹುದು. ಬಾದಶಹರಿಗೆ ನಮ್ಮ ಮೇಲೆ ವಿಶೇಷ ಆಗ್ರಹವಿದೆ. ಆದ್ದರಿಂದ ಸಾಂಬಾಜಿಯನ್ನು ಈಗಲೇ ಕಳುಹಿಸಲು ನಾವು ಹಿಂತೆಗೆಯುತ್ತೇವೆ. ಒಂದು ಬಾರಿ ಬಾದಶಹರ ಆಗ್ರಹಕ್ಕೆ ಸಾಂಬಾಜಿಯು ಬಲಿಬೀಳುವ ಪ್ರಸಂಗ ಬಂದುಬಿಟ್ಟಿತು. ಬಾದಷಹರು ಸಂಧಿಗೆ ಒಪ್ಪಿದ ಮೇಲೆ ಸಾಂಬಾಜಿಯು ನಿಮ್ಮ ರಾಜಧಾನಿಯಲ್ಲಿಯೇ ಇರುತ್ತಾರೆ ಎಂದು ಹೇಳಿ ಇಕ್ಬಲ್‌ಖಾನನಿಗೆ ಬಹಳ ಗೌರವವನ್ನು ತೋರಿ ಕಳುಹಿಸಿಕೊಟ್ಟನು.

ಇಕ್ಬಲ್‌ಖಾನನು ಔರಂಗಾಬಾದಿಗೆ ಹೋಗಿ ಶಿವಾಜಿಯ ಸಂಧಾನಗಳು ನಿಜವಾದವುಗಳೆಂದೂ ಈ ಬಾರಿ ಸಂಧಿಯಾದರೆ ಅವನು ಎಂದೆಂದಿಗೂ ನಮ್ಮೊಡನೆ ಯುದ್ಧಕ್ಕೆ ಬರುವುದಿಲ್ಲವೆಂದೂ ತಿಳಿಸಿದನು. ಬಹದ್ದೂರ್‌ಖಾನನಿಗೆ ತಾನು ಮಹತ್ಕಾರ್ಯಸಾಧನೆ ಮಾಡಿದಂತಾಯಿತು. ಇದರಿಂದ ಬಾದಶಹನು ತನ್ನ ವಿಷಯದಲ್ಲಿ ಬಹಳ ಪ್ರೀತಿಯನ್ನು ತೋರಿಸುತ್ತಾನೆ ಎಂದು ಸಂತೋಷಪಟ್ಟುಕೊಂಡು ಬಾದಶಹನಿಗೆ ಎಲ್ಲ ವಿಚಾರಗಳನ್ನೂ ವಿಸ್ತಾರವಾಗಿ ಬರೆಸಿ ಕಳುಹಿಸಿ ಸಂಧಿಯ ಬಗ್ಗೆ ಅಪ್ಪಣೆಯನ್ನು ಬೇಡಿದನು.

ದೆಹಲಿಯಿಂದ ಉತ್ತರ ಬರುವವರೆಗೆ ಶಿವಾಜಿಯಿಂದ ಬಹದ್ದೂರ್‌ಖಾನನಿಗೂ ಬಹದ್ದೂರ್‌ಖಾನನಿಂದ ಶಿವಾಜಿಗೂ ರಾಯಭಾರಗಳು ನಡೆಯುತ್ತಲೇ ಇದ್ದುವು. ಶಿವಾಜಿಯು ಈ ಸಮಯದಲ್ಲಿ ತನ್ನ ಕೋಟೆಗಳನ್ನೆಲ್ಲಾ ಭದ್ರ

ಪಡಿಸುವಂತೆ ಅಧಿಕಾರಿಗಳಿಗೆ ಅಪ್ಪಣೆಯಿತ್ತನು. ಎಲ್ಲ ಕೋಟೆಗಳಲ್ಲಿಯೂ ಕೆಲಸಗಳು ಲಗುಬಗೆಯಿಂದ ಆರಂಭವಾದವು.

ಶಿವಾಜಿಯು ತನ್ನ ಕಡೆಯವರನ್ನು ಬಿಜಾಪುರಕ್ಕೆ ರಹಸ್ಯವಾಗಿ ಕಳುಹಿಸಿ ಕೊಟ್ಟನು. ಬಿಜಾಪುರದ ಅರಮನೆಯಲ್ಲಿ ಪ್ರತಿದಿನವೂ ಜಗಳಗಳು ನಡೆಯುತ್ತಿದ್ದವು. ಆ ಸಮಯವನ್ನು ಸಾಧಿಸಿ ಶಿವಾಜಿಯ ಕಡೆಯವರು ಅಲ್ಲಿ ಸಂಧಾನಕ್ಕೆ ಆರಂಭಮಾಡಿದರು. ಬಹದ್ದೂರ್‌ಖಾನನಿಗೂ ಶಿವಾಜಿಗೂ ಸಂಧಿಪ್ರಸ್ತಾಪಗಳು ನಡೆಯುತ್ತಿವೆ. ದೆಹಲಿಗೆ ರಾಯಭಾರಿಗಳು ಹೋಗಿಬರುತ್ತಿದ್ದಾರೆ. ಆ ಸಂಧಿಯು ಸಫಲವಾಗಿಬಿಟ್ಟರೆ ಶಿವಾಜಿಯೂ ಬಹದ್ದೂರ್‌ಖಾನನೂ ಒಂದಾಗಿ ಸೇರಿಕೊಂಡು ಬಿಜಾಪುರದ ಮೇಲೆ ಯುದ್ಧಕ್ಕೆ ಬರುತ್ತಾರೆಂಬ ವದಂತಿಯು ಬಿಜಾಪುರದಲ್ಲಿ ಪ್ರಬಲವಾಗಿ ಹಬ್ಬಿತು. ವಜೀರನು ಏನಾದರೂ ಪ್ರಯತ್ನ ಮಾಡಿ ಈ ಸಂಧಿಯನ್ನು ಒಡೆದುಹಾಕಿ ಶಿವಾಜಿಯನ್ನು ತನ್ನ ಕಡೆಗೆ ಸೇರುವಂತೆ ಮಾಡಬೇಕು ಎಂದು ಗುಟ್ಟಾಗಿ ರಾಯಭಾರಿಗಳನ್ನು ಕಳುಹಿಸಿದನು. ಈ ರಾಯಭಾರಗಳು ಬೇಗ ಬೇಗ ನಡೆದು ಬಿಜಾಪುರದವರು ಶಿವಾಜಿಗೆ ವರ್ಷಂಪ್ರತಿ, ಮೂರುಲಕ್ಷ ವರಹಗಳನ್ನು ಕೊಡತಕ್ಕದೆಂದೂ ಶಿವಾಜಿಯು ಬಿಜಾಪುರದವರ ಕಡೆಗೇ ಇರತಕ್ಕದೆಂದೂ ಮೊಗಲರೇನಾದರೂ ಬಿಜಾಪುರದವರ ಮೇಲೆ ಬಿದ್ದರೆ ಶಿವಾಜಿಯು ಸಹಾಯಕ್ಕೆ ಬರಬೇಕೆಂದೂ ಒಪ್ಪಂದವಾಯಿತು. ವಜೀರನು ಮೂರುಲಕ್ಷ ವರಹಗಳನ್ನು ಒಂಟೆಗಳ ಮೇಲೆ ಹೇರಿಸಿ ಬಂದೋಬಸ್ತಿನಿಂದ ಶಿವಾಜಿಗೆ ಕಳುಹಿಸಿಕೊಟ್ಟನು. ಈ ವಿಷಯಗಳೆಲ್ಲಾ ಬಹಾದ್ದೂರ್‌ಖಾನನಿಗೆ ಕೊಂಚವೂ ತಿಳಿಯದಂತೆ ಅತ್ಯಂತ ರಹಸ್ಯವಾಗಿ ನಡೆದವು.

ಹೀಗೆ ಮೂರುತಿಂಗಳು ಕಾಲ ಕಳೆದುಹೋಯಿತು. ದೆಹಲಿಯಲ್ಲಿ ಬಾದಶಹ ಔರಂಗಜೇಬನು ಬಹದ್ದೂರ್‌ಖಾನನ ಪತ್ರಗಳನ್ನೆಲ್ಲಾ ನೋಡಿಕೊಂಡು ಶಿವಾಜಿಯು ಈ ಬಾರಿ ಸರಿಯಾಗಿ ದಾರಿಗೆ ಬಂದಿದ್ದಾನೆ. ಅವನನ್ನು ಹತೋಟಿಯಲ್ಲಿಟ್ಟರೆ ಮುಂದೆ ದಕ್ಕನ್ನಿನ ವ್ಯವಹಾರಗಳೆಲ್ಲಾ ಸುಸೂತ್ರವಾಗುತ್ತವೆ. ಬಿಜಾಪುರ ಗೋಲ್ಕೊಂಡಗಳು ಸಂಪೂರ್ಣವಾಗಿ ನಮ್ಮ ಕೈವಶವಾದ ನಂತರ ಶಿವಾಜಿಯನ್ನು ವಿಚಾರಿಸಿಕೊಳ್ಳಬಹುದು ಎಂದು ಚಿಂತಿಸಿ ಬಹದ್ದೂರ್ ಖಾನನಿಗೆ ಸಂಧಿಯನ್ನು ಒಪ್ಪಿಕೊಂಡಿರುವಂತೆ ಫರ್ಮಾನ್ ಬರೆಸಿ ಕಳುಹಿಸಿದನು. ಅದರೊಡನೆ ಸಾಂಭಾಜಿಗೆ ಅಧಿಕಾರ ಕೊಟ್ಟಿರುವ ಪತ್ರವನ್ನೂ ಬರೆಸಿ ಕಳುಹಿ

ಸಿದನು. ಈ ಪತ್ರಗಳು ಔರಂಗಾಬಾದಿನಲ್ಲಿ ಬಹಾದ್ದೂರ್‌ಖಾನನ ಕೈಸೇರಿದವು. ಅವನು ಅತ್ಯಂತ ಹರ್ಷಿತನಾಗಿ ತನ್ನ ರಾಯಭಾರಿಗಳನ್ನು ಶಿವಾಜಿಯ ಆಸ್ಥಾನಕ್ಕೆ ಕಳುಹಿಸಿಕೊಟ್ಟನು. ಆ ರಾಯಭಾರಿಗಳು ಬಂದು ಶಿವಾಜಿಯ ಭೇಟಿಮಾಡಿ ಸಂಧಿಯ ಬಗ್ಗೆ ಬಾದಶಹರು ಒಪ್ಪಿಗೆಯಿತ್ತು ನಿಮಗೆ ಫರ್ಮಾನ್ ಕಳುಹಿಸಿಕೊಟ್ಟಿದ್ದಾರೆ, ಶಿವಾಜಿ ಮಹಾರಾಜರೆಂದು ನಿಮ್ಮನ್ನು ಮರ್ಯಾದೆ ಮಾಡಿ ಫರ್ಮಾನ್ ಬರೆಯಲ್ಪಟ್ಟಿದೆ. ನೀವು ಔರಂಗಾಬಾದಿಗೆ ಬಂದು ಸರ್ ಸುಬೇದಾರ್‌ರವರಿಂದ ಬಾದಶಹರ ಆಜ್ಞಾಪತ್ರವನ್ನು ಸ್ವೀಕರಿಸಬೇಕು. ಯುವರಾಜ ಸಾಂಬಾಜಿಯವರ ಬಗ್ಗೆಯೂ ಅಧಿಕಾರಪತ್ರ ಬಂದಿರುತ್ತದೆ. ಅವರನ್ನೂ ನಿಮ್ಮ ಜೊತೆಯಲ್ಲಿ ಕರೆತರಬೇಕೆಂದು ಬಹದ್ದೂರ್‌ಖಾನರು ಹೇಳಿ ಕಳುಹಿಸಿದ್ದಾರೆ ಎಂದು ಅರಿಕೆಮಾಡಿದರು.

ಶಿವಾಜಿಯು ಭರದರ್ಬಾರಿನಲ್ಲಿ ಆ ರಾಯಭಾರಿಗಳನ್ನು ಧಿಕ್ಕರಿಸಿ ಹೇಳಿದನು.

ಬಹಾದ್ದೂರ್‌ಖಾನನೊಂದಿಗೆ ನಾವು ಸಂಧಿಮಾಡಿಕೊಳ್ಳುವಂಥಾ ಮಹತ್ ಕಾರ್ಯವನ್ನು ಅವನೇನು ಮಾಡಿದ್ದಾನೆ. ನಮ್ಮನ್ನು ಔರಂಗಜೇಬನು ಮಹಾರಾಜನೆಂದು ಕರೆದರೆ ನಮಗೆ ಬಂದ ಭಾಗ್ಯವೇನು. ಈ ದಕ್ಷಿಣ್ ರಾಜ್ಯದಲ್ಲಿ ಮೊಗಲರು ಇರಕೂಡದು. ನೀವುಗಳು ಇಲ್ಲಿಂದ ಓಡಿಹೋಗಿರಿ, ಈ ವಿಷಯವನ್ನು ಬಹದ್ದೂರ್‌ಖಾನನಿಗೆ ತಿಳಿಸಿರಿ. ನಮ್ಮ ರಾಜ್ಯದಲ್ಲಿ ನೀವು ಇನ್ನು ಒಂದು ದಿನವಿದ್ದರೂ ಶಿಕ್ಷೆಗೆ ಗುರಿಯಾಗುವಿರಿ ಎಂದು ಅಪ್ಪಣೆಮಾಡಿದನು.

ರಾಯಭಾರಿಗಳು ಭಯದಿಂದ ಔರಂಗಾಬಾದಿಗೆ ಓಡಿಹೋಗಿ ಶಿವಾಜಿಯ ದರ್ಬಾರಿನಲ್ಲಿ ನಡೆದ ವಿದ್ಯಮಾನಗಳನ್ನೆಲ್ಲಾ ಬಹದ್ದೂರ್‌ಖಾನನಿಗೆ ತಿಳಿಸಿದರು.

ಬಹದ್ದೂರ್‌ಖಾನನು ಅತ್ಯಂತ ಖಿನ್ನನಾದನು. ಈ ಶಿವಾಜಿಯು ಎಂತಹ ವಂಚಕ. ಎಂಥಾ ಮೋಸಮಾಡಿದ. ತಾನಾಗಿ ಈ ಸಂಧಿಯ ಪ್ರಸ್ತಾಪವನ್ನೆತ್ತಿ ನಮ್ಮನ್ನು ಅಪಮಾನಕ್ಕೆ ಗುರಿಮಾಡಿದ್ದಾನೆ. ಬಾದಶಹರ ಮುಂದೆ ನನಗೆಷ್ಟು ಅಪಮಾನವಾದಂತಾಯಿತು. ಅವರು ನನ್ನ ಮೇಲೆ ಆಗ್ರಹಗೊಳ್ಳದಿರುವರೇ. ಈ ಶಿವಾಜಿಯು ವಂಚಕನೆಂದು ಬಾದಶಹರು ಚೆನ್ನಾಗಿ ಬಲ್ಲರು. ಆದರೂ ಅವನ ಮಾತುಗಳನ್ನು ನಂಬಿದ ನಾನೆಷ್ಟು ವಿವೇಕಹೀನನೆಂದು ಅವರು ಭಾವಿಸದಿರುವರೇ ಎಂದು ವ್ಯಸನಪಟ್ಟುಕೊಂಡನು.

ಈ ಶಿವಾಜಿಗೆ ತಕ್ಕ ಪ್ರತೀಕಾರಮಾಡಿ ಈ ಸೇಡು ತೀರಿಸಿಕೊಳ್ಳಬೇಕು ಎಂದು ಹಠಮಾಡಿಕೊಂಡನು.

ಈ ಸಂಧಾನದ ಸಂದರ್ಭದಲ್ಲಿಯೇ ಪೊಂಡಾದುರ್ಗವನ್ನು ಶಿವಾಜಿಯು ಸ್ವಾಧೀನಪಡಿಸಿಕೊಂಡನು. ಇದರಿಂದ ಬಹದ್ದೂರ್‌ಖಾನನಿಗೆ ಮತ್ತೊಂದು ಪೆಟ್ಟು ಬಿದ್ದಂತಾಯಿತು.

ಬಹಾದ್ದೂರ್‌ಖಾನನು ಬಿಜಾಪುರದ ವಜೀರನೊಡನೆ ಪ್ರಬಲವಾದ ಸಂಧಾನವನ್ನು ನಡೆಸಿದನು. ಔರಂಗಾಬಾದಿನಲ್ಲಿರುವ ಮೊಗಲ್ ಸೈನ್ಯಗಳು ಬಿಜಾಪುರದ ಸೈನ್ಯಗಳು ಸೇರಿಕೊಂಡು ಶಿವಾಜಿಯ ಮೇಲೆ ಯುದ್ಧಮಾಡ ಬೇಕೆಂದು ಮಾತುಕತೆಗಳು ನಡೆದವು. ವಜೀರನಾಗಿದ್ದ ಖವಾಸ್‌ಖಾನನು ಈ ಸಂಧಾನಕ್ಕೆ ಒಪ್ಪಿಕೊಂಡು ಸಹಿಹಾಕಿ ಕಳುಹಿಸಿದನು. ಈ ಸಂಧಿಗೋಸ್ಕರ ಬಾದಷಹನು ದೆಹಲಿಗೆ ಬಿಜಾಪುರದಿಂದ ಬರಬೇಕಾದ ಒಂದು ವರ್ಷದ ಪೊಗದಿ ಒಂದು ಲಕ್ಷ ಹೊನ್ನುಗಳನ್ನು ಮನ್ನಾಮಾಡಿರುವುದಾಗಿ ಆಜ್ಞಾಪತ್ರವನ್ನು ಕಳುಹಿಸಿಕೊಟ್ಟನು.

ಬಹದ್ದೂರ್‌ಖಾನನೂ ಬಿಜಾಪುರದ ವಜೀರನೂ ಸೇರಿಕೊಂಡು ಶಿವಾಜಿಯ ಮೇಲೆ ಯುದ್ಧಕ್ಕೆ ಹೊರಡುವಷ್ಟರಲ್ಲಿ ಬಿಜಾಪುರದ ದರ್ಬಾರಿನಲ್ಲಿ ಖವಾಸ್‌ಖಾನನ ವಿರೋಧಿಯಾದ ಬಹಲೂಲ್‌ಖಾನನು ವಜೀರಪದವಿಗೆ ಬಂದು ಬಿಟ್ಟನು. ಬಹದ್ದೂರ್‌ಖಾನನ ಒಪ್ಪಂದವೆಲ್ಲವೂ ಒಡೆದುಹೋಗಿ ಅವನ ಕೈ ಮುರಿದಂತಾಗಿ ಕುಳಿತುಕೊಂಡನು.

ಅಷ್ಟರೊಳಗಾಗಿ ಶಿವಾಜಿಯು ದಂಡೆತ್ತಿ ಬಂದು ಕೊಲ್ಲಾಪುರವನ್ನು ಸ್ವಾಧೀನಪಡಿಸಿಕೊಂಡನು. ಮರಾಠರ ಮತ್ತೊಂದು ದೊಡ್ಡ ಸೈನ್ಯವು ಗೋಲ್ಕೊಂಡ ಬಿಜಾಪುರ ರಾಜ್ಯಗಳ ಮೇಲೆ ಧಾಳಿ ಮಾಡಿ ಕೊಳ್ಳೆಹೊಡೆಯ ಲಾರಂಭಿಸಿತು.

ಮರಾಠಾ ಸೈನ್ಯಗಳು ಹೈದರಾಬಾದಿನ ಸಮೀಪದಲ್ಲಿದ್ದ ಯಾದವಗಿರಿ ಎಂಬ ಸಂಪದ್ಭರಿತವಾದ ಪಟ್ಟಣವನ್ನು ಲೂಟಿಮಾಡಿದವು. ಆ ಪಟ್ಟಣದಲ್ಲಿ ಬಹುಮಂದಿ ಶ್ರೀಮಂತರಿದ್ದರು. ಹಿಂದುಗಳು ಮುಸಲ್ಮಾನರು ಅಪಾರವಾದ ಹಣವನ್ನು ಶೇಖರಿಸಿಕೊಂಡು ಆ ಪಟ್ಟಣದಲ್ಲಿ ದೊಡ್ಡ ಮಹಲುಗಳನ್ನು ಕಟ್ಟಿಕೊಂಡು ವಾಸಮಾಡುತ್ತಿದ್ದರು. ಮರಾಠಾ ಸೈನ್ಯಗಳು ಆ ಪಟ್ಟಣವನ್ನು

ಲೂಟಿಮಾಡಿ ಅಪಾರವಾದ ಐಶ್ವರ್ಯವನ್ನು ದೋಚಿದವು. ಆ ಶ್ರೀಮಂತರ ಮನೆಗಳನ್ನೆಲ್ಲಾ ಅಗೆದು ಹೂತಿಟ್ಟಿದ್ದ ಐಶ್ವರ್ಯವೆಲ್ಲವನ್ನೂ ಮರಾಠರು ಕೈವಶ ಮಾಡಿಕೊಂಡರು. ಆ ಶ್ರೀಮಂತರುಗಳನ್ನು ರಕ್ಷಿಸಲು ಯಾರೂ ಸಮರ್ಥರಾಗಲಿಲ್ಲ. ಅವರುಗಳು ಮರಾಠರನ್ನು ಮರೆಹೊಕ್ಕು ಪ್ರಾಣಭಿಕ್ಷೆಯನ್ನು ಬೇಡಿ ಉಳಿದುಕೊಂಡರು.

ಈ ವಿಚಾರಗಳೆಲ್ಲಾ ಗುಪ್ತಚಾರರ ಮುಖೇನ ಬಾದಶಹನಿಗೆ ವರದಿಯಾಯಿತು. ಬಹದ್ದೂರ್‌ಖಾನನ ಮೇಲೆ ಬಾದಶಹನು ಕೋಪಾವಿಷ್ಟನಾಗಿ ಅವನೆಂಥಾ ಮುಠ್ಠಾಳ. ದಖ್ಖನ್ನಿನಲ್ಲಿ ಅಷ್ಟೊಂದು ಸೈನ್ಯವನ್ನು ಇಟ್ಟುಕೊಂಡು ಶಿವಾಜಿಯನ್ನು ತಡೆಗಟ್ಟಲಾರದೇ ಹೋಗಿದ್ದಾನೆ. ಶಿವಾಜಿಗೆ ಎದುರಿಲ್ಲದಂತಾಗಿದೆಯಲ್ಲಾ. ಬಹದ್ದೂರ್‌ಖಾನನೂ ಅಂತರಂಗದಲ್ಲಿ ಶಿವಾಜಿಯೊಡನೆಯೇ ಸೇರಿಕೊಂಡುಬಿಟ್ಟಿದ್ದಾನೆಯೋ ಏನೋ. ಅವನನ್ನು ಕರೆತರಿಸಿ ತಕ್ಕ ಶಿಕ್ಷೆ ಮಾಡಬೇಕು ಎಂದು ದರ್ಬಾರಿನಲ್ಲಿ ಹೇಳಿದನು.

ಈ ಮಾತುಗಳಿಂದ ಬಹದ್ದೂರ್‌ಖಾನನಿಗೆ ಬಹಳ ಅಪಮಾನವಾದಂತಾಯಿತು. ಶಿವಾಜಿಗೆ ಏನಾದರೊಂದು ವಿಧದಲ್ಲಿ ಪ್ರತೀಕಾರ ಮಾಡಬೇಕೆಂದು ಬಗೆದು ಔರಂಗಾಬಾದಿನಲ್ಲಿನ ದೊಡ್ಡ ಮೊಗಲ್ ಸೈನ್ಯವನ್ನು ತೆಗೆದುಕೊಂಡು ಹೋಗಿ ಕಲ್ಯಾಣವನ್ನು ಸ್ವಾಧೀನಪಡಿಸಿಕೊಂಡನು.

ಮರಾಠಾ ಸೈನ್ಯಗಳು ವೀರಾವೇಷದಿಂದ ಔರಂಗಾಬಾದಿಗೆ ಹೋಗಿ ರಾಜಧಾನಿಯನ್ನು ಮುತ್ತಿದವು. ಔರಂಗಾಬಾದ್ ಅರಕ್ಷಿತವಾಗಿದೆ. ಮರಾಠರ ಕೈಗೆ ಸೇರಿಹೋಗುತ್ತದೆ ಎಂದು ಖಾನ್ ದೇಶದಲ್ಲೆಲ್ಲಾ ಪುಕಾರು ಎದ್ದಿತು. ಇದರಿಂದ ಭಯಗ್ರಸ್ತನಾದ ಬಹದ್ದೂರ್‌ಖಾನನು ಕಲ್ಯಾಣವನ್ನು ಬಿಟ್ಟು ಓಡಿಹೋಗಿ ತನ್ನ ರಾಜಧಾನಿಯ ರಕ್ಷಣೆಗೆ ನಿಂತನು. ಅಷ್ಟರೊಳಗಾಗಿ ರಾಜಧಾನಿಯ ಸುತ್ತಲೂ ಮರಾಠಾ ಸೈನ್ಯಗಳು ಆವರಿಸಿಕೊಂಡಿದ್ದವು. ಬಹದ್ದೂರ್‌ಖಾನನು ಒಂದು ಕಡೆ ಮರಾಠರನ್ನು ಓಡಿಸಿದರೆ ಅವರು ಮತ್ತೊಂದು ಕಡೆ ರಾಜಧಾನಿಯೊಳಗೆ ನುಗ್ಗಿ ಕೊಳ್ಳೆಹೊಡೆಯುತ್ತಿದ್ದರು. ಬಹದ್ದೂರ್‌ಖಾನನು ಅತ್ಯಂತ ಪ್ರಯಾಸದಿಂದ ಈ ಮರಾಠರನ್ನೆಲ್ಲಾ ಹೊಡೆದೋಡಿಸಿ ಔರಂಗಾಬಾದನ್ನು ಸುರಕ್ಷಿತವಾಗಿ ಕಾಪಾಡಿದನು.

ಆಲಂಗೀರ್ ಬಾದಶಹನು ಹಿಂದುಗಳ ಮೇಲೆಲ್ಲಾ ಜೆಸಿಯಾ ತೆರಿಗೆಯನ್ನು

ಹೊರೆಸಿದನು. ಮೊಗಲ್ ಸಾಮ್ರಾಜ್ಯದಲ್ಲೆಲ್ಲಾ ಹಿಂದುಗಳು ಪರಿತಪಿಸ ತೊಡಗಿದರು. ಹಿಂದುಗಳಿಗೆ ತಿನ್ನುವುದಕ್ಕಿರಲಿ ಇಲ್ಲದಿರಲಿ ಈ ತಲೆಗಂದಾಯ ವನ್ನು ಕೊಟ್ಟೇತೀರಬೇಕಾಗಿತ್ತು. ಬಾದಷಹನ ಅಧಿಕಾರಿಗಳು ಇದು ಯುದ್ಧದ ಕಂದಾಯವೆಂದು ಹೇಳಿ ಹಿಂದುಗಳಿಂದ ವಸೂಲ್ಮಾಡುತ್ತಿದ್ದರು. ಶಿವಾಜಿಗೆ ಈ ಸಮಾಚಾರವು ನಾನಾರೀತಿಯಾಗಿ ತಿಳಿಯಿತು. ಅವನು ಔರಂಗಸೇಬನಿಗೆ ಒಂದು ಪತ್ರವನ್ನು ಬರೆದುಕಳುಹಿಸಿದನು, ಆ ಪತ್ರದ ವಿವರಣೆಯು ಈತೆರನಾಗಿತ್ತು.

ಆಲಂಗೀರ್ ಬಾದಷಹನಿಗೆ—

ಭಗವಂತನು ನಿಮಗೆ ಇತ್ತಿರುವ ಐಶ್ವರ್ಯ ಸೌಭಾಗ್ಯಗಳು ಶಾಶ್ವತ ವಾಗಿರಲೆಂದೂ ನಿಮಗೆ ಸರ್ವದಾ ಶುಭವನ್ನು ಕೋರುವ ಈ ಸೇವಕನಾದ ಶಿವಾಜಿಯು ಈ ಪತ್ರವನ್ನು ಬರೆಯುತ್ತಿದ್ದಾನೆ. ನಾನು ನಿಮ್ಮ ಅಮೋಘವಾದ ಸನ್ನಿಧಾನದಿಂದ ನನ್ನ ದುರದೃಷ್ಟವಶಾತ್ ನಿಮಗೆ ಹೇಳದೇ ಹೊರಟು ಬಂದಿದ್ದಾಗ್ಯೂ ನೀವು ನನ್ನ ವಿಷಯದಲ್ಲಿ ತೋರಿದ ಸೌಜನ್ಯಕ್ಕಾಗಿ ಕೃತಜ್ಞತೆ ಯಿಂದ ಈ ದೂರದಿಂದಲೇ ಯಾವಾಗಲೂ ನಿಮ್ಮ ಸೇವೆ ಮಾಡಲು ಸಂತೋಷ ದಿಂದ ಸಿದ್ಧನಾಗಿದ್ದೇನೆ. ನನ್ನೊಡನೆ ಬಾದಶಹರವರು ನಡೆಸಿದಂಥಾ ಅನೇಕ ಯುದ್ಧಗಳಿಗೋಸ್ಕರ ದೆಹಲಿಯ ಸಾರ್ವಭೌಮ ಭಂಡಾರವೆಲ್ಲಾ ಬರಿದಾಗಿ ಹೋಗಿದೆಯೆಂದೂ ಬಾದಶಹರು ಜೆಸಿಯಾ ಎಂಬ ತೆರಿಗೆಯನ್ನು ಹಿಂದುಗಳ ಮೇಲೆ ಹೊರಿಸಲು ಆಜ್ಞೆ ಮಾಡೋಣವಾಗಿದೆಯೆಂದು ದರಬಾರಿನ ಅಧಿಕಾರಿಗಳು ಹಿಂದುಗಳಿಂದ ಆ ಹಣವನ್ನು ವಸೂಲ್ಮಾಡಿ ಸಾಮ್ರಾಟರ ಖರ್ಚುವೆಚ್ಚಗಳಿಗೆ ವಿನಿಯೋಗಿಸುತ್ತಿದ್ದಾರೆಂದು ಕೇಳಿ ನನಗೆ ಬಹಳ ವ್ಯಸನವಾಯಿತು.

ದೆಹಲಿಯ ಸಾಮ್ರಾಜ್ಯದ ಆದಿಕರ್ತನೂ ನಿರ್ಮಾಪಕನೂ ಆದ ಜಲಾಲುದ್ದೀನ್ ಅಕ್ಬರ್ ಬಾದಷಹನು ಐವತ್ತೆರಡು ವರ್ಷಗಳು ಅಖಂಡವಾಗಿ ದೆಹಲಿಯ ಸಿಂಹಾಸನದ ಮೇಲೆ ಬೆಳಗಿದನು. ಆ ಮಹಾಪುರುಷನು ಹಿಂದುಗಳು ಮುಸಲ್ಮಾನರು ಕ್ರೈಸ್ತರು ಯಹೂದಿಗಳು ಇರಾನಿಗಳು ಪಾರಸಿಗಳು, ನಾಸ್ತಿಕರು ಬ್ರಾಹ್ಮಣರು ಜೈನ ಬೌದ್ಧ ಚಾರ್ವಾಕರುಗಳು ಇವರೆಲ್ಲರನ್ನೂ ಸಮಭಾವದಿಂದ ಪರಿಗಣಿಸುತ್ತಿದ್ದುದೇ ಅಕ್ಬರನ ರಾಜ್ಯಸೂತ್ರವಾಗಿತ್ತು. ಅದರಿಂದಲೇ ಆ ಸಾಮ್ರಾಜ್ಯವು ಅಷ್ಟು ಸುಭದ್ರವಾಗಿ ಸುರಕ್ಷಿತವಾಗಿತ್ತು. ಅದರಿಂದಲೇ ಅವನನ್ನು ಸಕಲ ಮತಗಳವರು ಜಗದ್ಗುರುವೆಂದು ಭಾವಿಸಿ ಗೌರವಿಸುತ್ತಿದ್ದರು.

ಅನಂತರ ಜಹಾಂಗೀರ್ ಬಾದಶಹನು ಇಪ್ಪತ್ತೆರಡು ವರ್ಷಗಳು ಅದೇ ಮೇಲು ಪಂಗ್ತಿಯನ್ನನುಸರಿಸಿ ರಾಜ್ಯಭಾರ ಮಾಡಿದನು. ಸಮಸ್ತ ಪ್ರಜೆಗಳೂ ಅವನಿಗೆ ತಮ್ಮ ಸರ್ವಸ್ವವನ್ನೂ ಸಮರ್ಪಿಸುತ್ತಿದ್ದರು. ಸ್ನೇಹಹಸ್ತವನ್ನು ಸಂತೋಷ ದಿಂದ ನೀಡಿದ್ದರು. ಸರ್ವಸಮಭಾವನೆಯು ಜಹಾಂಗೀರ್ ಬಾದಶಹನ ಹೆಮ್ಮೆ ಯಾಗಿದ್ದಿತು. ಷಹಜಹಾನನು ಮೂವತ್ತೆರಡು ವರ್ಷಗಳ ಕಾಲ ಸುಖವಾಗಿ ರಾಜ್ಯಭಾರ ನಡೆಸಿದನು. ಅದು ಆ ಮಹಾನುಭಾವನ ಸದ್ಗುಣಗಳ ಮತ್ತು ಪ್ರಜಾವಾತ್ಸಲ್ಯದ ಫಲದಂತಿದ್ದಿತು. ಯಾವನು ಸದ್ಗುಣಗಳ ಮತ್ತು ಕೀರ್ತಿ ಯನ್ನು ಗಳಿಸುತ್ತಾನೋ ಅವನ ಕೀರ್ತಿಯೇ ಶಾಶ್ವತವಾದದ್ದು. ಅವನ ಕಾಲಾನಂತರವೂ ಅವನ ಗುಣಗಾನವು ಶಾಶ್ವತವಾಗಿ ಕೇಳಿಬರುತ್ತದೆ.

ಈ ಪುಣ್ಯಪ್ರಭಾವದಿಂದಲೇ ಅಕ್ಬರ್ ಬಾದಶಹನು ಎತ್ತ ತಿರುಗಿ ನೋಡಿದರೆ ಅತ್ತ ವಿಜಯಲಕ್ಷ್ಮಿಯು ಜಯಮಾಲೆಯನ್ನು ಹಿಡಿದು ಸಿದ್ಧಳಾಗಿ ನಿಂತಿರುತ್ತಿದ್ದಳು. ಅಕ್ಬರ್ ಬಾದಶಹನು ಅನೇಕ ರಾಜ್ಯಗಳನ್ನೂ ಕೋಟೆ ಗಳನ್ನೂ ಜಯಿಸಿದ್ದನು. ಅವನ ಮಾರ್ಗವನ್ನು ಬಿಟ್ಟು ವಿರುದ್ಧ ಮಾರ್ಗವನ್ನು ಹಿಡಿದುದರಿಂದಲೇ ಆಲಂಗೀರ್ ಬಾದಶಹನ ಗತಿಯು ಹೀಗಾಗಿದೆ. ಆ ಜನರ ಮೇಲೆ ಬೇಕಾದ ತೆರಿಗೆಗಳನ್ನು ಹಾಕುವ ಅಧಿಕಾರವು ಆ ಚಕ್ರವರ್ತಿಗಳಿಗೂ ಇದ್ದಿತು. ಅವರು ದೇವರಿಂದ ಸೃಜಿಸಲ್ಪಟ್ಟ ಮಾನವರೆಲ್ಲರೂ ಸಮಾನರು. ಕೀಳು ಮೇಲೆಂಬುದಿಲ್ಲ ಮತದ್ವೇಷ ಮತಭಾವನೆಗಳಿಲ್ಲದೇ ನಡೆದುಕೊಂಡುದೇ ಅವರ ಸಾಮ್ರಾಜ್ಯದ ಗೌರವಕ್ಕೆ ಕಾರಣವಾಗಿತ್ತು. ಅವರ ಕಾರುಣ್ಯ ಮತ್ತು ಪರೋಪಕಾರಗಳು ಸರ್ವದಾ ಅವರ ಸ್ಮಾರಕಗಳಾಗಿವೆ. ಎಲ್ಲರ ಬಾಯಲ್ಲಿಯೂ ಈಗಲೂ ಆ ಮೂವರು ಚಕ್ರವರ್ತಿಗಳ ಗುಣಗಾನವೂ ಕೇಳಿಬರುತ್ತದೆ. ಇಂಥಾ ಪವಿತ್ರಾತ್ಮರ ಸ್ಮರಣೆಯನ್ನೂ ನಾಮೋಚ್ಚಾರಣೆಯನ್ನೂ ಪ್ರಜೆಗಳೂ ತಲೆತಲಾಂತರಗಳವರೆಗೆ ಮಾಡುತ್ತಾರೆ. ಅವರ ರಾಜ್ಯದ ಪ್ರಜೆಗಳು ಸುಖವಾಗಿ ಬಾಳಿ ಬದುಕಿದರು. ನಿಮ್ಮ ಆಡಳಿತದಲ್ಲಾದರೋ ಅನೇಕ ಕೋಟೆಗಳು ಪಟ್ಟಣಗಳು ಕೈಬಿಟ್ಟು ಹೋಗಿವೆ. ಉಳಿದಿರತಕ್ಕವುಗಳು ನನ್ನ ಔದಾಸೀನ್ಯದಿಂದ ನಿಮ್ಮಲ್ಲಿ ಉಳಿದುಕೊಂಡಿದೆ. ಅದನ್ನು ಅಲ್ಪಕಾಲದಲ್ಲಿಯೇ ಧಾಳಿ ಮಾಡುತ್ತೇನೆ. ಇನ್ನು ತಡಮಾಡುವುದಿಲ್ಲ. ನಿಮ್ಮ ರೈತರೆಲ್ಲರೂ ದಟ್ಟದರಿದ್ರ ರಾಗಿದ್ದಾರೆ. ಗ್ರಾಮಗಳೆಲ್ಲಾ ಹಾಳಾಗಿಹೋಗಿವೆ. ಲಕ್ಷ ಬರುವ ಜಾಗದಲ್ಲಿ

ಸಾವಿರ ಬರುತ್ತಿದೆ. ಸಾವಿರ ಬರುವ ಗ್ರಾಮದಲ್ಲಿ ಹತ್ತು ರೂಪಾಯಿಗಳು ಅತಿ ಪ್ರಯಾಸದಿಂದ ವಸೂಲಾಗುತ್ತಿದೆ. ದಾರಿದ್ರ್ಯ ಮತ್ತು ಭಿಕಾರಿತನಗಳು ರಾಜರ ಸಾರ್ವಭೌಮರ ಅರಮನೆಗಳಲ್ಲಿಯೇ ತಾಂಡವವಾಡುತ್ತಿರುವಾಗ ದೊಡ್ಡ ದೊಡ್ಡ ಅಧಿಕಾರಿಗಳ ಸ್ಥಿತಿಯು ಹೇಗಿರಬಹುದು ನೀವೆ ಯೋಚನೆ ಮಾಡಿರಿ. ಸೈನ್ಯಗಳು ಪರಿತಪಿಸುತ್ತಿವೆ. ವರ್ತಕರು ಮುಜಗರ ಪಡುತ್ತಾರೆ. ಮುಸಲ್ಮಾನರು ಅಳುತ್ತಾರೆ ಹಿಂದುಗಳು ನುಚ್ಚುನೂರಾಗಿದ್ದಾರೆ. ಬಹುಜನರಿಗೆ ಅರಹೊಟ್ಟೆಯ ಅನ್ನವೂ ಇಲ್ಲ. ಮೇಲೆ ಮೇಲೆ ಪೆಟ್ಟು ಬೀಳುತ್ತವೆ. ಇಂಥಾ ರಾಜ್ಯಭಾರದಲ್ಲಿ ಈ ಜೆಸಿಯಾ ಎಂಬ ಕ್ರೂರ ತೆರಿಗೆಯನ್ನು ನೀವು ಹಾಕಬಹುದೇ. ಈ ಅಪಕೀರ್ತಿಯು ಪೂರ್ವದಿಂದ ಪಶ್ಚಿಮದವರೆಗೆ ಅಖಂಡವಾಗಿ ಹರಡುತ್ತದೆ. ಚಕ್ರವರ್ತಿಯು ತಿರುಪದವರ ಭಿಕ್ಷಾಪಾತ್ರೆಯನ್ನು ಕಿತ್ತುಕೊಳ್ಳುತ್ತಾನೆ. ಬ್ರಾಹ್ಮಣರು ಜೈನರು ಸಂನ್ಯಾಸಿಗಳು ಯೋಗಿಗಳು ಮುನಿಗಳು ಬೈರಾಗಿಗಳು ಇವರುಗಳ ಮೇಲೆ ಜಿಸಿಯಾ ತೆರಿಗೆಯನ್ನು ಹಾಕಿ ಸುಲಿಗೆ ಮಾಡುತ್ತಾನೆ ಎಂಬ ವಾರ್ತೆಯು ಸರ್ವತ್ರ ಹರಡುತ್ತದೆ. ಪೂರ್ವದ ಬಾದಷಹರುಗಳ ಖ್ಯಾತಿಯನ್ನು ಔರಂಗಜೇಬನು ಮಣ್ಣುಪಾಲು ಮಾಡಿದನೆಂದು ಕಾಲಕಾಲಕ್ಕೂ ಜನರು ಆಡಿಕೊಳ್ಳುತ್ತಾರೆ.

ಇದು ಸಾರ್ವಭೌಮರಾದ ನಿಮಗೆ ಸಂತೋಷವನ್ನುಂಟುಮಾಡುವುದೇ. ನೀವು ಪವಿತ್ರ ಗ್ರಂಥವಾದ ಖುರಾನನ್ನು ನಂಬುವುದಾದರೆ ಆ ಖುರಾನಿನ ವಾಕ್ಯಗಳನ್ನು ಗೌರವಿಸುವುದಾದರೆ ಆ ಪವಿತ್ರ ಗ್ರಂಥದಲ್ಲಿ ದೇವರನ್ನು 'ರಾಬ್‌ಉಲ್ ಅಲಾಮಿನ್' ಎಂದು ಹೇಳಿದೆ. (ಎಲ್ಲ ಜನರ ಸೃಷ್ಟಿಕರ್ತನು ಆ ಒಬ್ಬ ದೇವರೇ ಎಂದು ಹೇಳಿದೆ.) ಆ ಗ್ರಂಥದಲ್ಲಿ 'ರಾಬ್ ಉಲಾ ಮುಸಲ್ಮೀನ್' ಎಂದು ಹೇಳಿಲ್ಲ. (ಆ ದೇವರು ಮುಸಲ್ಮಾನರ ಸೃಷ್ಟಿಕರ್ತ ಎಂದು ಹೇಳಲ್ಪಟ್ಟಿಲ್ಲ.) ಭಗವಂತನು ತಾನು ಸೃಷ್ಟಿಸಿದ ಮಾನವ ಜಗತ್ತನ್ನು ಚಿತ್ರವಿಚಿತ್ರವಾಗಿ ಪ್ರದರ್ಶಿಸುವುದಕೋಸ್ಕರ ನಾನಾ ನಾಮರೂಪಗಳನ್ನು ನಿರ್ಮಿಸಿದ್ದಾನೆ. ಅದನ್ನೇ ಹಿಂದೂ ಮುಸ್ಲಿಂ ಇತ್ಯಾದಿ ರೂಪಗಳಿಂದ ಕಾಣುತ್ತಿದ್ದೇವೆ. ನಿಮ್ಮ ಮಸೀದಿಗಳಲ್ಲಿ ಕೇಳಿಬರುವ ಪ್ರಾರ್ಥನೆಯೂ ದೇವಲಯಗಳಲ್ಲಿ ಕೇಳಿಸುವ ಘಂಟಾನಾದವೂ ಆ ಒಬ್ಬ ದೇವರನ್ನೇ ಸೇರುತ್ತವೆ. ಯಾವ ಮನುಷ್ಯನನ್ನಾದರೂ ದ್ವೇಷಿಸಿದರೆ ಆ ಪವಿತ್ರ ಗ್ರಂಥಕ್ಕೆ ಅಪಾರ್ಥ ಮಾಡಿದಂತೆ

ಆಗುತ್ತದೆ. ಈ ಭೇದಭಾವನೆಗಳನ್ನು ಮಾಡುವುದರಿಂದ ಆ ಸೃಷ್ಟಿಕರ್ತನ ದಿವ್ಯಸೃಷ್ಟಿಗೆ ಮಸಿ ಬಳಿದಂತಾಗುತ್ತದೆ.

ಶುದ್ಧ ನ್ಯಾಯದ ದೃಷ್ಟಿಯಿಂದ ಜೆಸಿಯಾ ತೆರಿಗೆಯು ಅತ್ಯಂತ ಅನ್ಯಾಯವಾದದು. ಒಬ್ಬ ಸುಂದರ ಸ್ತ್ರೀಯು ದಿವ್ಯಾಭರಣಭೂಷಿತಳಾಗಿ ಒಂದು ಪ್ರಾಂತ್ಯದಿಂದ ಮತ್ತೊಂದು ಪ್ರಾಂತ್ಯಕ್ಕೆ ನಿರ್ಭಯವಾಗಿ ಏಕಾಕಿನಿಯಾಗಿ ಹೋಗುವಂಥಾ ರಾಜ್ಯಭಾರವಿದ್ದಿದ್ದರೆ ಇಂಥಾ ತೆರಿಗೆಯನ್ನು ಆವಳಿಂದ ತೆಗೆದುಕೊಳ್ಳುವುದು ನ್ಯಾಯವಾದೀತು. ನಿಮ್ಮ ರಾಜ್ಯದಲ್ಲಾದರೋ ಪಟ್ಟಣಗಳೇ ಲೂಟಿಯಾಗುತ್ತವೆ. ಇನ್ನು ಆರಕ್ಷಿತ ಪ್ರದೇಶಗಳ ಗತಿಯೇನು. ಜೆಸಿಯಾದಂತಹ ಅಸಹ್ಯಕರವಾದ ತೆರಿಗೆಯು ಹಿಂದೂಸ್ಥಾನದಲ್ಲಿ ಮಾತ್ರ ಉದ್ಭವಿಸಿದೆ. ಪ್ರಪಂಚದ ಮತ್ತಾವ ರಾಜ್ಯದಲ್ಲಿಯೂ ಇದರ ಅರ್ಥವೇ ಆಗುವುದಿಲ್ಲ.

ನೀವು ಹಿಂದುಗಳನ್ನು ಭಯಪಡಿಸುವುದಕ್ಕಾಗಿ ಈ ಜೆಸಿಯಾ ತೆರಿಗೆಯನ್ನು ಹಾಕಿರುವುದಾಗಿದ್ದರೆ ಮೊದಲು ರಾಣಾ ರಾಜಸಿಂಹನಿಗೆ ಈ ತೆರಿಗೆಯನ್ನು ವಿಧಿಸಿ ವಸೂಲ್ಮಾಡಬೇಕು. ಎರಡನೆಯದಾಗಿ ನನಗೆ ವಿಧಿಸಬೇಕು. ಹಾಗೆ ಮಾಡಿದರೆ ಯಾವಾಗಲೂ ನಿಮ್ಮ ಸೇವಾತತ್ಪರನಾಗಿರುವ ನನ್ನಿಂದ ಆ ತೆರಿಗೆಯನ್ನು ವಸೂಲ್ಮಾಡುವುದು ಸಾಧ್ಯವಿಲ್ಲ. ಶೌರ್ಯ ಪರಾಕ್ರಮಗಳಿಲ್ಲದ ಅಲ್ಪ ಜನರ ಮೇಲೆ ನಿಮ್ಮ ಕ್ರೋಧವನ್ನು ತೋರುವುದು ತರವಲ್ಲ.

ಈ ಚಕ್ರಾಧಿಪತ್ಯದ ನಿಜಸ್ಥಿತಿಯನ್ನು ನಿಮ್ಮ ಅಧಿಕಾರಿಗಳು ನಿಮಗೆ ತಿಳಿಯಪಡಿಸವೇ ಇರುವುದು ನನಗೆ ಆಶ್ಚರ್ಯವನ್ನುಂಟುಮಾಡುತ್ತಿದೆ. ಅವರು ಮುಚ್ಚಿಡುತ್ತಿರುವುದು ಪ್ರಜ್ವಲಿಸುವ ಕಾಡುಕಿಚ್ಚನ್ನು ಒಣಹುಲ್ಲಿನಿಂದ ಮುಚ್ಚುವಂತಾಗಿದೆ. ನಿಮ್ಮ ರಾಜತ್ವವೆಂಬ ಸೂರ್ಯನು ದಿಗಂತವ್ಯಾಪಿಯಾಗಿ ಪ್ರಕಾಶಿಸಲಿ.

ಇತಿ ಶಿವಾಜಿ

೩

ಮಹಾರಾಷ್ಟ್ರ ರಾಜ್ಯವು ನಿರ್ಮಾಣವಾಗಿ ಪ್ರಚಂಡ ಸೇನಾನಾಯಕರು ರಾಜಕೀಯ ವಿದ್ಯಾಪ್ರವೀಣರಾದ ಮಂತ್ರಿಗಳು, ದೇಶಭಕ್ತರೂ ರಾಜಭಕ್ತರೂ

ಆದ ಜನಸಮುದಾಯ ಇವೆಲ್ಲ ಶಕ್ತಿಗಳೂ ಶಿವಾಜಿಯನ್ನು ಪ್ರಚೋದಿಸುತ್ತಿದ್ದವು. ಶಿವಾಜಿಗೆ ವಯಸ್ಸು ಅಷ್ಟೇನೂ ಮೀರಿರಲಿಲ್ಲ. ಸುಮಾರು ನಲವತ್ತೇಳು–ನಲವತ್ತೆಂಟು ವರ್ಷಗಳ ವೀರಪುರುಷನವನು. ಆದರೂ ಅವನು ಹಾಸಿಗೆ ಹಿಡಿದು ಮಲಗಿದನು. ಆ ಕಾಲದ ಪರಿಸ್ಥಿತಿಯಂತೆ ಮಂತ್ರಿಗಳು, ಸೇನಾಧಿಪತಿಗಳು, ಶಿವಾಜಿಯ ರೋಗವನ್ನು ಮುಚ್ಚಿಟ್ಟರು ವೈದ್ಯರುಗಳು ನಾನಾ ವಿಧವಾದ ಚಿಕಿತ್ಸೆಗಳನ್ನು ಮಾಡತೊಡಗಿದರು. ಮೂರು ತಿಂಗಳುಗಳ ನಂತರ ಶಿವಾಜಿಯ ದೇಹಾರೋಗ್ಯವು ಗುಣಮುಖವಾಯಿತು. ಅವನು ತನಗೆ ಪ್ರಾಪ್ತವಾಗಿದ್ದುದು. ದೇಹಾಲಸ್ಯವೆಂದು ಭಾವಿಸಲೂ ಇಲ್ಲ. ಚಿಕಿತ್ಸೆಗಳಿಂದ ಗುಣ ಹೊಂದಿದೆನೆಂದು ತಿಳಿದುಕೊಳ್ಳಲೂ ಇಲ್ಲ. ಪೂರ್ವಾರ್ಜಿತ ಕರ್ಮಫಲವಾಗಿ ವ್ಯಾಧಿಯು ಪ್ರಾಪ್ತವಾಯಿತೆಂದು ದೇವರ ಪ್ರಾರ್ಥನೆ ಅಂಬಾನುಗ್ರಹ, ಗುರುದೇವ ಸಮರ್ಥ ರಾಮದಾಸರ ಆಶೀರ್ವಾದಗಳಿಂದ, ನಿದ್ರೆಯಿಂದ ಎಚ್ಚೆತ್ತವನಂತೆ ಆರೋಗ್ಯವನ್ನು ಪಡೆದೆನೆಂದು ಭಾವಿಸಿಕೊಳ್ಳುತ್ತಿದ್ದನು.

ಆ ಶಿವಾಜಿಯು ಆರೋಗ್ಯವನ್ನು ಹೊಂದುತ್ತಲೇ ಅವನ ಮನಸ್ಸು ವಿರಕ್ತಿಪಥದ ಕಡೆಗೆ ಹರಿಯಲಾರಂಭವಾಯಿತು. ಸೇನಾಧಿಪತಿಗಳನ್ನೂ ಮಂತ್ರಿಗಳನ್ನೂ ಕರೆದು ಹೇಳಿದನು "ಈ ರಾಜ್ಯವನ್ನು ನಿರ್ಮಾಣ ಮಾಡಿದ್ದೇವೆ. ಇದು ನಿಮ್ಮ ರಾಜ್ಯ, ಧರ್ಮರಾಜ್ಯ, ನೀವು ಕಾಪಾಡಿಕೊಳ್ಳಿರಿ. ನನಗೆ ಇಬ್ಬರು ಮಕ್ಕಳಿದ್ದಾರೆ. ಸಾಂಬಾಜಿ ಮತ್ತು ರಾಜಾರಾಂ ಇವರುಗಳನ್ನು ರಾಜರಾಗಿ ತೆಗೆದುಕೊಳ್ಳಿರಿ. ನನ್ನನ್ನು ಬಿಟ್ಟುಬಿಡಿರಿ. ನಾನು ಭಗವಂತನನ್ನು ಧ್ಯಾನ ಮಾಡುತ್ತಾ, ಭಜನೆ ಮಾಡುತ್ತಾ ಸನ್ಯಾಸಿಯಾಗಿ ಕಾಲಕಳೆಯುತ್ತೇನೆ. ಈ ಯೋಧೃಜೀವನವು ಬೇಸರವನ್ನುಂಟುಮಾಡಿದೆ" ಎಂದು ಹೇಳಿದನು. ಆ ಸೇನಾಧಿಪತಿಗಳು, ಮಂತ್ರಿಗಳು ಯಾರೂ ಅದಕ್ಕೊಪ್ಪಲಿಲ್ಲ. ಶಿವಾಜಿಯು 'ರಾಜ್ಯವನ್ನು ಬಿಟ್ಟು ಹೋಗಲೇ ಇರಲೇ' ಎಂಬ ಚಿಂತೆಯಲ್ಲಿಯೇ ಕಾಲ ಕಳೆಯುತ್ತಿದ್ದನು. ಆ ಕಾಲದಲ್ಲಿ ಸರ್ವದಾ ಭಗವದ್ಧ್ಯಾನ, ಭಜನೆಗಳಲ್ಲಿ ನಿರತನಾಗಿ ಇರುತ್ತಿದ್ದನು. ಸೇನಾಧಿಪತಿಗಳು ಭಯಗ್ರಸ್ತರಾಗತೊಡಗಿದರು. ವೃದ್ಧರಾದ ಮಂತ್ರಿಗಳು ಹಿಂದೊಮ್ಮೆ ಶಿವಾಜಿಯು ಹೀಗೆಯೇ ತುಕಾರಾಮರ ಸಾಧುಪಂಥದಲ್ಲಿ ಹೋಗಿ ಸೇರಿಬಿಟ್ಟಿದ್ದನು. ಕಾವಿಯ ಬಟ್ಟೆಗಳನ್ನು ಪರಿಗ್ರಹಿಸಿದ್ದನು. ಅಂದು ಮಾತೃಶ್ರೀ ಜಿಜಾಬಾಯಿಯು ಅಲ್ಲಿಗೆ ಹೋಗಿ, ಸಾಧು

ತುಕಾರಾಮನಿಂದಲೇ ಅರ್ಪಣೆ ಮಾಡಿಸಿ, ತನ್ನ ಮಗನನ್ನು ಒಂದಕ್ಕೆ ಕರೆತಂದು ಕೊಟ್ಟಳು. ಆ ಮಾತೆಯ ಅನುಗ್ರಹ ಶಕ್ತಿಯಿಂದಲೇ ಈ ರಾಜ್ಯವು ಸಂಪೂರ್ಣ ವಾಯಿತು. 'ಇಂದು ಈ ಮಹಾಪುರುಷನನ್ನು ತಿರುಗಿಸಬಲ್ಲವರಾರು ? ಎಂದು ದಿಕ್ಕು ಕಾಣದೆ, ಚಿಂತಾಮಗ್ನರಾದರು.

ಒಂದು ದಿನ ಬೆಳಗಿನ ಜಾವದ ಸಮಯದಲ್ಲಿ ಶಿವಾಜಿಗೆ ಪ್ರಬೋಧ ವಾಯಿತು. ಅವನು ಭಜನೆ ಮಾಡುತ್ತಾ ಕುಳಿತಿದ್ದನು. ಅವನ ಮನಸ್ಸಿನಲ್ಲಿ ಶಕ್ತಿದೇವಿಯ ಪ್ರಚೋದನೆಯಾಯಿತು. "ವೀರಾಗ್ರೇಸರಾ, ನೀನು ವಿಂಧ್ಯದ ದಕ್ಷಿಣದಲ್ಲಿ ಮುಸಲ್ಮಾನರ ಹಾವಳಿಯನ್ನು ಅಡಗಿಸು. ಅನೀತಿಯನ್ನು ದಮನ ಮಾಡು" ಎಂದು ಎಚ್ಚರಿಸಿದಂತಾಯಿತು.

ಶಿವಾಜಿಯು ತನ್ನ ಮಂತ್ರಿಗಳನ್ನೂ ಸೇನಾನಾಯಕರನ್ನೂ ಕರೆಕಳುಹಿಸಿ, "ನಾನು ದಕ್ಷಿಣದ ಯಾತ್ರೆ ಹೊರಡುವೆನು. ದೇವಿಯ ಆಜ್ಞೆಯಾಗಿದೆ. ನೀವೆಲ್ಲರೂ ಸಿದ್ಧರಾಗಿರಿ. ತಕ್ಕ ವ್ಯವಸ್ಥೆಯು ನಡೆಯಲಿ. ಈ ರಾಜ್ಯವನ್ನು ಕಾಪಾಡಲು ರಕ್ಷಣಾಬಲಗಳನ್ನು ಏರ್ಪಡಿಸಿರಿ. ಸಧ್ಯ ಉತ್ತರದ ಕಡೆಯಿಂದ ಮೊಗಲರು ಇತ್ತಕಡೆಗೆ ದಂಡೆತ್ತಿ ಬರುವ ಸಂಭವವಿಲ್ಲ. ಔರಂಗಜೇಬನು ಪಂಜಾಬಿನ ಕೊನೆಯಲ್ಲಿ ಪಠಾಣರೊಡನೆ ಹೋರಾಡುತ್ತಿದ್ದಾನೆ. ದಖನ್ ನಲ್ಲಿರುವ ಮೊಗಲ್ ಅಧಿಕಾರಿಗಳು ವಿಲಾಸಮಗ್ನರಾಗಿದ್ದಾರೆ. ಧನಪಿಶಾಚಿ ಗಳಾಗಿ, ಜನರಿಂದ ಹಣವನ್ನೂ ಹೀರುತ್ತಿದ್ದಾರೆ. ಅವರಿಗೆ ನಮ್ಮ ಮೇಲೆ ಬರುವ ಧೈರ್ಯವೂ ಇಲ್ಲ, ಸಾಹಸವೂ ಇಲ್ಲ. ಆದರೂ ನಾವು ಪ್ರಮತ್ತರಾಗಿರ ಬಾರದು. ಸುಭದ್ರವಾದ ರಕ್ಷಣಾವ್ಯವಸ್ಥೆಯನ್ನು ಏರ್ಪಡಿಸಿರಿ. ದಕ್ಷಿಣ ದಂಡಯಾತ್ರೆಯನ್ನು ನಾಳೆಯೇ ಆರಂಭಿಸುತ್ತೇನೆ" ಎಂದು ಹೇಳಿದನು.

ಶಿವಾಜಿಯು ಸತಾರದಿಂದ ಪನ್ಹಾಲಾಕ್ಕೆ ಬಂದನು. ಅವನ ದೃಷ್ಟಿಯು ಬಿಜಾಪುರದ ಕಡೆಗೆ ಬಿದ್ದಿದ್ದಿತು. ಮರಾಠಾ ಸೈನ್ಯಗಳು ಅಥನಿಯ ಮೇಲೆ ಬಿದ್ದು ಸೂರೆಮಾಡಲಾರಂಭಿಸಿದವು. ಅಥನಿಯು ಬಿಜಾಪುರಕ್ಕೆ ಸಮೀಪ ದಲ್ಲಿದ್ದಿತು. ಮರಾಠಾ ಸೈನ್ಯಗಳು ಬಿಜಾಪುರಕ್ಕೆ ಬರುವವೆಂಬ ಸುದ್ದಿಯು ಬಿಜಾಪುರದಲ್ಲಿ ಹಬ್ಬಿ ಗದ್ದಲವುಂಟಾಯಿತು.

ಬಹದ್ದೂರ್‌ಖಾನನು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಬಿಜಾಪುರದ ಮೇಲೆ ಯುದ್ಧಕ್ಕೆ ಹೊರಟೇಬಿಟ್ಟಿದ್ದನು. ಬಿಜಾಪುರದ ದರ್ಬಾರಿನಲ್ಲಿ ಅಸಾಧ್ಯ

ವಾದ ಗದ್ದಲವೆದ್ದಿತು. ಒಂದುಕಡೆ ಬಹುದ್ದೂರ್‌ಖಾನನು ಮೊಗಲ್ ಸೈನ್ಯ ವನ್ನು ತೆಗೆದುಕೊಂಡು ಬಿಜಾಪುರದ ಮೇಲೆ ಬರುತ್ತಿದ್ದಾನೆ. ಮತ್ತೊಂದುಕಡೆ ಮರಾಠಾ ಸೈನ್ಯಗಳು ಸಮೀಪಕ್ಕೆ ಬಂದೇಬಿಟ್ಟವೆ. ಈ ಸಮಯದಲ್ಲಿ ಏನು ಮಾಡಬೇಕೆಂಬುದು ತೋರದೇ ಬಿಜಾಪುರದ ದರ್ಬಾರು ತಲ್ಲಣಿಸುತ್ತಿತ್ತು. ರಾಜಧಾನಿಯಲ್ಲಿದ್ದ ಸರದಾರರೆಲ್ಲರೂ ಪರಸ್ಪರ ದ್ವೇಷಾಸೂಯೆಗಳಿಂದ ಹೋರಾಡುತ್ತಿದ್ದರು. ಹಲವರು ಬಹದ್ದೂರ್‌ಖಾನನೊಡನೆ ಸಂಧಿಮಾಡಿ ಕೊಳ್ಳಬೇಕು. ಮೊಗಲ್ ಸೈನ್ಯವನ್ನು ಕರೆತಂದು ಮರಾಠರನ್ನು ಓಡಿಸಬೇಕು ಎಂದು ಅಭಿಪ್ರಾಯಪಟ್ಟರು. ಮತ್ತೆ ಕೆಲವರು ಮೊಗಲ್ ಸೈನ್ಯಗಳು ಬಿಜಾಪುರದ ಹತ್ತಿರ ಬರುವುದಕ್ಕೆ ಎಡೆಗೊಡಬಾರದು. ಅವರು ಬಿಜಾಪುರದ ರಾಜ್ಯವನ್ನೇ ನಿರ್ನಾಮ ಮಾಡಬೇಕೆಂದು ಇದ್ದಾರೆ. ಶಿವಾಜಿಯೊಡನೆ ಸ್ನೇಹ ಮಾಡಿಕೊಳ್ಳುವುದೇ ಒಳ್ಳೆಯದು ಎಂದು ಹೇಳಿದರು. ಹೀಗೆ ಪರಸ್ಪರ ಜಗಳವೇ ಆರಂಭವಾಯಿತು. ಒಬ್ಬರು ಹೇಳಿದ್ದು ಮತ್ತೊಬ್ಬರಿಗೆ ಸರಿಬೀಳುತ್ತಿರಲಿಲ್ಲ. ವಜೀರನೊಡನೆ ಸಮಾಲೋಚನೆ ಮಾಡುವವರು ಕೆಲವರು. ಬೇಗಂ ಸಾಹೇಬರನ್ನು ಎತ್ತಿಕಟ್ಟುವವರು ಕೆಲವರು. ಹೀಗಾಗಿ ಬಗೆಹರಿಯದಂತಾ ಯಿತು. ವಜೀರಬಹದೂರ್‌ಖಾನನು ಗೋಲ್ಕೊಂಡದ ಮಂತ್ರಿಯಾದ ಮುದ್ದಣ್ಣ ನೊಡನೆ ಅಂತರಂಗ ಸಮಾಲೋಚನೆ ನಡೆಸಿದನು.

ಮುದ್ದಣ್ಣನು 'ಶಿವಾಜಿಯೊಡನೆ ಸಂಧಿಮಾಡಿಕೊಳ್ಳುವುದೇ ಲೇಸು. ಮೊಗಲರು ನಮ್ಮ ಸಮಯಕ್ಕೆ ಒದಗುವುದೂ ಇಲ್ಲ. ಔರಂಗಜೇಬ ಬಾದಶಹನು ನಮ್ಮ ಸುಲ್ತಾನೀ ರಾಜ್ಯಗಳನ್ನು ಮೂಲೋತ್ಪಾಟನ ಮಾಡಬೇಕೆಂದು ಹಠ ತೊಟ್ಟಿದ್ದಾನೆ. ಶಿವಾಜಿಯನ್ನು ನಂಬಿ ಸಂಧಾನ ನಡೆಸುವುದೇ ಒಳ್ಳೆಯದು' ಎಂದು ಹೇಳಿ ಕಳುಹಿಸಿದನು.

ಶಿವಾಜಿಯೊಡನೆ ಸಂಧಾನ ಮಾಡುವ ಭಾರವನ್ನು ಮಂತ್ರಿ ಮುದ್ದಣ್ಣ ನಿಗೆ ಒಪ್ಪಿಸಿದರು. ಬಿಜಾಪುರಕ್ಕೂ ಶಿವಾಜಿಗೂ ಮುದ್ದಣ್ಣನು ಸಂಧಿಯನ್ನು ಕುದುರಿಸಿದನು. ಬಿಜಾಪುರದ ಸುಲ್ತಾನರು ಶಿವಾಜಿಗೆ ಮೂರು ಲಕ್ಷ ವರಹ ಗಳನ್ನು ಕೊಡಬೇಕು. ವರ್ಷಂಪ್ರತಿ ಒಂದು ಲಕ್ಷ ಹೊನ್ನುಗಳನ್ನು ಕೊಡಬೇಕು. ಯಾವಾಗ ಮೊಗಲರು ಬಿಜಾಪುರದ ಮೇಲೆ ಯುದ್ಧಕ್ಕೆ ಬಂದರೂ ಶಿವಾಜಿಯು

ಬಿಜಾಪುರದ ಸಹಾಯಕ್ಕೆ ಬರಬೇಕು. ಹೀಗೆ ಸಂಧಿಯಾಗತಕ್ಕದೆಂದು ಮುದ್ದಣ್ಣನು ಉಭಯಪಕ್ಷಗಳ ಒಪ್ಪಿಗೆಯನ್ನು ಕುದುರಿಸಿದನು.

ಈ ಸಮಾಚಾರವನ್ನು ಕೇಳಿ ಬಹದ್ದೂರ್‌ಖಾನನು ಹಿಂದಕ್ಕೆ ಸರಿಯಬೇಕಾಯಿತು.

ಮರಾಠಾ ಸೈನ್ಯಗಳು ಬಿಜಾಪುರದ ಸಮೀಪದಲ್ಲಿವೆ. ಸೇನಾಬಲವು ಬಹಳವಾಗಿದೆ. ಬಿಜಾಪುರದ ಕೋಟೆಯು ಅಭೇದ್ಯವಾದದ್ದು. ಗೋಲ್ಕೊಂಡ ಬಿಜಾಪುರಗಳೆರಡೂ ಮರಾಠಾ ರಾಜ್ಯದೊಂದಿಗೆ ಸೇರಿಕೊಂಡಂತಾಯಿತು. ಒಂದು ವರ್ಷ ಯುದ್ಧಮಾಡಿದರೂ ಸಮಗೆ ಜಯವಾಗುವುದಿಲ್ಲ ಎಂದು ನಿರ್ಧಾರಮಾಡಿಕೊಂಡು ಬಹದ್ದೂರ್‌ಖಾನನು ಹಿಂತಿರುಗಿದನು.

ಬಿಜಾಪುರದಲ್ಲಿ ಶಿವಾಜಿಯೊಡನೆ ಸಂಧಿಯಾದರೂ ಅದು ಫಲಕಾರಿಯಾಗಲಿಲ್ಲ. ವಜೀರ ಬಹಲೂಲ್‌ಖಾನನ ಅಧಿಕಾರವೇ ಅಲ್ಲಾಡುತ್ತಿದ್ದಿತು. ಶಿವಾಜಿಯೊಡನೆ ಸಂಧಿಯು ಬಹಲೂಲ್‌ಖಾನನ ಅಧಿಕಾರವನ್ನು ಕೊನೆ ಮುಟ್ಟಿಸಿತು. ಶಿವಾಜಿಗೆ ಬಹಲೂಲ್‌ಖಾನನು ಅಪಾರ ಹಣ ಕೊಟ್ಟುಬಿಟ್ಟನು. ಭಂಡಾರ ಬರಿದಾಗಿಹೋಯಿತು, ಗೋಲ್ಕೊಂಡದ ಮಂತ್ರಿ ಮುದ್ದಣ್ಣನೂ ಶಿವಾಜಿಯೂ ಒಂದಾಗಿಬಿಟ್ಟರು. ಈ ಇಬ್ಬರು ಹಿಂದುಗಳ ಮಾತಿಗೆ ಮೋಸಹೋಗಿ ಬಹಲೂಲ್‌ಖಾನನು ಬಿಜಾಪುರದ ಭಂಡಾರವನ್ನು ಸೂರೆಗೊಟ್ಟಂತಾಯಿತು ಎಂದು ಪುಕಾರೆಬ್ಬಿಸಿದರು. ಸುಲ್ತಾನನ ಮಾತೆ ಬೇಗಂ ಸಾಹೇಬಳಿಗೆ ಈ ಮಾತುಗಳು ನಿಜವಾಗಿ ಕಂಡವು. ಅಪಾರ ಹಣ ಅರಮನೆಯಿಂದ ಸಾಗಿಹೋಯಿತು. ಶಿವಾಜಿಯ ಮಾತಿನಲ್ಲಿ ಭರವಸೆಯೇನಿದೆ ? ಎಂದು ಸಂಶಯದಿಂದ ಬೇಗಂಸಾಹೇಬರು ಬಹಲೂಲ್‌ಖಾನನನ್ನು ದೂರಮಾಡಿದರು. ಬಹಲೂಲ್‌ಖಾನನು ಬೇಗಂಸಾಹೇಬರ ಭೇಟಿ ಮಾಡಿದನು. ಮಂತ್ರಿಗಳನ್ನೆಲ್ಲಾ ಅರಮನೆಯಲ್ಲಿ ಮಂತ್ರಾಲೋಚನೆ ಸಭೆ ಸೇರಿಸಿ ಬೇಗಂಸಾಹೇಬರ ಸಮಕ್ಷಮ ಖಂಡತುಂಡವಾಗಿ ಹೇಳಿಬಿಟ್ಟನು. ಬಿಜಾಪುರದ ಪ್ರಾಚೀನ ವೈಭವವನ್ನು ನಾವೆಲ್ಲರೂ ನೆನಪಿನಲ್ಲಿಡಬೇಕು. ಇಂದು ಸುಲ್ತಾನರು ಬಾಲ್ಯವಯಸ್ಸಿನಲ್ಲಿದ್ದಾರೆ. ನಾಳೆ ಪ್ರವೃದ್ಧಮಾನಕ್ಕೆ ಬರುತ್ತಾರೆ. ಅದುವರೆಗೆ ಈ ರಾಜ್ಯವನ್ನು ಕಾಪಾಡುವುದು ನಮ್ಮೆಲ್ಲರ ಭಾರ. ರಾಜ್ಯವೆಲ್ಲವೂ ಕೈಬಿಟ್ಟು ಹೋದರೂ ಬಿಜಾಪುರದ ಕೋಟೆಯೊಂದು ಸುಭದ್ರವಾಗಿ ಉಳಿದರೆ ಈ ರಾಜ್ಯವನ್ನು

ಉಳಿಸಿದಂತಾಗುತ್ತದೆ. ನಮ್ಮ ರಾಜ್ಯಕ್ಕೆ ಇಬ್ಬರು ಶತ್ರುಗಳಿದ್ದಾರೆ. ಮೊಗಲ್ ಬಾದಶಹರೊಬ್ಬರು. ಶಿವಾಜೀ ಮಹಾರಾಜನೊಬ್ಬ. ಇಬ್ಬರೂ ಪ್ರಬಲರಾದ ಶತ್ರುಗಳು. ಅವರಿಬ್ಬರಲ್ಲಿ ಒಬ್ಬರೊಡನೆ ಖಡಾಖಡಿ ಯುದ್ಧ ಮಾಡುವ ಸಾಮರ್ಥ್ಯವು ನಮಗಾರಿಗೂ ಇಲ್ಲ. ನಾವೆಲ್ಲರು ಕೂಡಿದರೂ ಜಯಹೊಂದುವುದು ಸಂದೇಹವೆ. ಜಯಹೊಂದಿದರೂ ಮತ್ತೊಬ್ಬರ ಪೆಟ್ಟು ನಮಗಿದ್ದೇ ಇದೆ. ನಾವು ಇಬ್ಬರೊಡನೆಯೂ ಸಮಯ ಬಂದಾಗ ಸಂಧಿಮಾಡಿಕೊಳ್ಳುವುದೊಂದೇ ಉಪಾಯ ಉಳಿದಿದೆ. ಈ ಸಂಧಿಯಲ್ಲಿ ಶಿವಾಜಿಯೊಡನೆ ಸಂಧಿಯು ಲೇಸು. ಅವನು ನಮ್ಮ ರಾಜ್ಯವನ್ನು ನಾಶಪಡಿಸಬೇಕೆಂದು ಇಷ್ಟಪಡುವುದಿಲ್ಲ. ಮೊಗಲ್ ಬಾದಶಹನು ನಮ್ಮ ರಾಜ್ಯದ ಹೆಸರೇ ಉಳಿಯಬಾರದು, ಸುಲ್ತಾನರು ಸಿಂಹಾಸನದ ಮೇಲೆ ಇರಬಾರದು ಎಂದು ಛಲತೊಟ್ಟಿದ್ದಾನೆ. ಇದನ್ನೆಲ್ಲಾ ಯೋಚನೆಮಾಡಿ ನಾನು ಶಿವಾಜಿಯೊಡನೆ ಸಂಧಿಮಾಡಿದ್ದೇನೆ. ನಿಮಗೆಲ್ಲರಿಗೂ ಒಪ್ಪಿತವಿಲ್ಲದಿದ್ದರೆ ಅದನ್ನು ಒಡೆದು ಹಾಕಿಬಿಡಿ. ಈಗಿನ ಬಿಜಾಪುರದ ಪರಿಸ್ಥಿತಿಯಲ್ಲಿ ಅಧಿಕಾರವನ್ನು ವಹಿಸಿಕೊಳ್ಳುವುದಕ್ಕಿಂತಲೂ ನಮ್ಮಂಥವರು ಅಧಿಕಾರ ಪರಿತ್ಯಾಗ ಮಾಡುವುದರಿಂದಲೇ ರಾಜ್ಯಕ್ಕೆ ಹೆಚ್ಚು ಕ್ಷೇಮವಾಗುವುದೆಂದು ನನ್ನ ಭರವಸೆಯಾಗಿದೆ. ನಾನು ಅಧಿಕಾರವನ್ನು ಪರಿತ್ಯಜಿಸಿದ್ದೇನೆ. ನಾನು ರಾಜಭಂಡಾರದ ಹಣವನ್ನು ಶಿವಾಜಿಗೆ ಕೊಟ್ಟುಬಿಟ್ಟೆನೆಂದು ನೀವೆಲ್ಲರೂ ದೂರಿಕೊಳ್ಳುತ್ತಿದ್ದೀರಿ. ಇದಕ್ಕೆ ಪ್ರತಿಯಾಗಿ ನನ್ನ ಜಹಗೀರಿಯನ್ನು ಒಪ್ಪಿಸುತ್ತೇನೆ. ಅದನ್ನು ರಾಜ್ಯಕ್ಕೆ ಸೇರಿಸಿಕೊಂಡು ನನ್ನ ತಪ್ಪನ್ನು ಎಲ್ಲರೂ ಮನ್ನಿಸಿರಿ ಎಂದು ಕೇಳಿಕೊಂಡನು.

ಬೇಗಂಸಾಹೇಬರು ಮಾತನಾಡಲಿಲ್ಲ. ಮಂತ್ರಿಗಳು ತಮ್ಮತಮ್ಮಲ್ಲಿಯೇ ಗುಸುಗುಟ್ಟಿಕೊಂಡರು. ಬಹಲೂಲ್‌ಖಾನನು ಯಾರ ಉತ್ತರವನ್ನೂ ನಿರೀಕ್ಷಣೆ ಮಾಡದೇ ಬೇಗಂಸಾಹೇಬರನ್ನು ವಂದಿಸಿ ಅಪ್ಪಣೆ ಪಡೆದು ಹೊರಟುಹೋದನು.

ಮಂತ್ರಿಗಳು ಬಹಲೂಲ್‌ಖಾನರು ಹೋದರೆ ಹೋಗಲಿ. ಆದಿಲ್‌ಷಾಹಿಯು ಇಂಥವರಿಂದ ಉಳಿಯುವುದೂ ಇಲ್ಲ, ಅಳಿಯುವುದೂ ಇಲ್ಲ. ಮಹಾಪ್ರಭುಗಳಾದ ಸುಲ್ತಾನರಿದ್ದಾರೆ, ಬೇಗಂಸಾಹೇಬರಿದ್ದಾರೆ. ಅವರ ಇಷ್ಟಕ್ಕೆ ಪ್ರತಿ ಇಲ್ಲ. ಅವರು ಯಾರನ್ನಾದರೂ ಅಧಿಕಾರಕ್ಕೆ ನೇಮಿಸಲಿ. ನಾವೆಲ್ಲರೂ

ತಲೆಬಾಗಿ ನಡೆಯುತ್ತೇವೆ ಎಂದು ಹೇಳಿದರು. ಈ ಮಂತ್ರಾಲೋಚನೆ ಸಭೆಯೊಂದಿಗೆ ಬಹಲೂಲ್‌ಖಾನನ ಅಧಿಕಾರವು ಮುರಿದುಬಿದ್ದಿತು.

ಈ ಸಮಾಚಾರವು ಎಲ್ಲ ಕಡೆಯೂ ಹರಡಿತು. ಶಿವಾಜಿಗೂ ತಿಳಿಯ ಬಂತು. ಇದರಿಂದ ಶಿವಾಜಿಗೆ ಸಂತೋಷವೇ ಆಯಿತು. ಅವನು ಬಿಜಾಪುರದ ದರ್ಬಾರಿಗೆ ಸ್ಪಷ್ಟವಾಗಿ ಬರೆಸಿ ಕಳುಹಿಸಿದನು. –

ಬಿಜಾಪುರದ ಸುಲ್ತಾನರವರಿಗೆ ವಜೀರ್ ಬಹಲೂಲ್‌ಖಾನರ ಅಧಿಕಾರವು ಕೊನೆಗೊಂಡಿತೆಂದು ಕೇಳಿದ್ದೇವೆ. ನಾವು ಯಾರೊಡನೆ ಸಂಧಿಮಾಡಿಕೊಳ್ಳಬೇಕೋ ಯಾರು ಸಂಧಿಯನ್ನು ಪಾಲಿಸತಕ್ಕವರೋ ಅದನ್ನು ಅರಿಯದವರಾಗಿದ್ದೇವೆ. ನಿಮ್ಮ ದರ್ಬಾರಿನಲ್ಲಿ ಸರದಾರರೆಲ್ಲರೂ ಪರಸ್ಪರ ಹೋರಾಡುತ್ತಾರೆ. ಕಪ್ಪೆಗಳಂತೆ ವಟಗುಟ್ಟುತ್ತಾರೆ. ಇವೆಲ್ಲಾ ರಾಜಮಾರ್ಗವಲ್ಲ. ನಿಮ್ಮ ದಾರಿ ನಿಮಗೆ, ನಮ್ಮ ದಾರಿ ನಮಗೆ. ಸದ್ಯಕ್ಕೆ ನಾವು ಮಾತುಕೊಟ್ಟಂತೆ ಬಿಜಾಪುರದ ಕೋಟೆಯ ತಂಟೆಗೆ ಬರುವುದಿಲ್ಲ.

ಈ ರೀತಿ ಪತ್ರಬರೆದು ದರ್ಬಾರಿಗೆ ಕಳುಹಿಸಿಕೊಟ್ಟನು.

ಬಿಜಾಪುರದಿಂದ ಯಾವ ಉತ್ತರವೂ ಬರಲಿಲ್ಲ. ಶಿವಾಜಿಯ ಪತ್ರವನ್ನು ಯಾರೂ ಲಕ್ಷ್ಯಮಾಡಲಿಲ್ಲ.

ಶಿವಾಜಿಯು ಬಿಜಾಪುರಕ್ಕೆ ಸೇರಿದ ಕರ್ಣಾಟಕ ರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ಸೈನ್ಯಗಳನ್ನು ಮುಂದುವರಿಸಿದನು. ಸೇನಾಧಿಪತಿಗಳು ಸೈನ್ಯಸಮೇತರಾಗಿ ಕರ್ಣಾಟಕದ ಕಡೆ ಹೊರಟರು.

ಶಿವಾಜಿಯು ಕಾರವಾರ್, ಉತ್ತರ ಕನ್ನಡ ಮತ್ತು ಸಮುದ್ರತೀರ ಪ್ರದೇಶಗಳನ್ನೆಲ್ಲಾ ಧಾಳಿಮಾಡಿ ವಶಪಡಿಸಿಕೊಂಡನು. ಆ ಕಾಲದಲ್ಲಿ ಅವುಗಳೆಲ್ಲಾ ದೊಡ್ಡ ದೊಡ್ಡ ಹಡಗು ವ್ಯಾಪಾರದ ರೇವುಪಟ್ಟಣಗಳಾಗಿದ್ದವು. ಯೂರೋಪಿನ ಎಲ್ಲ ರಾಜ್ಯಗಳಿಗೂ ಮೆಣಸು, ಏಲಕ್ಕಿ ಮುಂತಾದ ಪದಾರ್ಥಗಳು ಇಲ್ಲಿಂದ ಸಾಗಿ ಹೋಗುತ್ತಿದ್ದುವು. ಶಿವಾಜಿಯು ತನ್ನ ಕಡೆಯ ಅಧಿಕಾರಿಗಳನ್ನು ನೇಮಿಸಿ ಈ ಸ್ಥಳಗಳಲ್ಲೆಲ್ಲಾ ಸುಂಕ ಸಾರಿಕೆಗಳನ್ನು ವಸೂಲ್ಮಾಡುವಂತೆ ವ್ಯವಸ್ಥೆ ಮಾಡಿದನು. ಬಿಜಾಪುರದಲ್ಲಿ ವಿಶೇಷ ಅಂತಃಕಲಹಗಳಿದ್ದುದರಿಂದ ಸುಲ್ತಾನರ ಕಡೆಯ ಸೇನಾಧಿಪತಿಗಳಾರೂ ಶಿವಾಜಿಯನ್ನು ಎದುರಿಸಲು ಬರಲಿಲ್ಲ. ಅಲ್ಲಲ್ಲಿ ಕೆಲವು ಪಾಳೆಯಗಾರರು ರಾಜರುಗಳೂ ಶಿವಾಜಿಯನ್ನು

ಎದುರಿಸಲು ಅಲ್ಪಸ್ವಲ್ಪ ಪ್ರಯತ್ನ ಮಾಡಿದರು. ಅವುಗಳೆಲ್ಲಾ ನಿಷ್ಫಲವಾಗಿ ಬಿಜಾಪುರದ ಅಧೀನದಲ್ಲಿದ್ದ ಉತ್ತರ ಕರ್ನಾಟಕ ಪ್ರಾಂತವೆಲ್ಲವೂ ಶಿವಾಜಿಯ ಅಧೀನಕ್ಕೆ ಸೇರಿಹೋದವು.

ಶಿವಾಜಿಯು ಅಲ್ಲಿಂದ ಕೊಂಕಣಕ್ಕೆ ಹೋಗಿ ಅಲ್ಲಿ ಅನೇಕ ಪ್ರದೇಶಗಳನ್ನೆಲ್ಲಾ ತನ್ನ ಕೈವಶ ಮಾಡಿಕೊಂಡನು. ಬರುತ್ತಾ ದಾರಿಯಲ್ಲಿ ರಾಜಾಪುರಿಯಲ್ಲಿ ಕೆಲವು ದಿವಸಗಳು ಶಿವಾಜಿಯು ಮೊಕ್ಕಾಂ ಮಾಡಿದ್ದನು. ಈ ಸಮಯಕ್ಕೆ ರಾಜಾಪುರಿಯು ಮರಾಠರ ಕೈವಶವಾಗಿಯೇ ಇದ್ದಿತು. ಶಿವಾಜಿಗೆ ಪಶ್ಚಿಮ ತೀರದ ರೇವುಪಟ್ಟಣಗಳ ಮೇಲೆ ಬಹುದಿನಗಳಿಂದ ಕಣ್ಣಿತ್ತು. ಹಡಗು ವ್ಯಾಪಾರ ಮತ್ತು ನೌಕಾಸೈನ್ಯಗಳನ್ನು ಬೆಳೆಸುವುದರಿಂದ ವಿಶೇಷ ಐಶ್ವರ್ಯವು ಲಭಿಸುವುದೆಂಬ ಮರ್ಮವನ್ನು ಶಿವಾಜಿಯು ಅರಿತಿದ್ದನು. ಉತ್ತರ ಕರ್ನಾಟಕ ಮತ್ತು ಕೊಂಕಣ ಪ್ರದೇಶಗಳನ್ನು ಪಶ್ಚಿಮ ತೀರದ ರೇವುಗಳನ್ನು ಸ್ವಾಧೀನಪಡಿಸಿಕೊಂಡು ತನ್ನ ಕಡೆಯ ಸೇನಾಧಿಪತಿಗಳನ್ನು ಅಲ್ಲಲ್ಲಾ ನೇಮಿಸಿದನು.

ಶಿವಾಜಿಯು ಮುಸಲ್ಮಾನರನ್ನು ಅಣಗಿಸುವುದಕ್ಕೋಸ್ಕರ ರಾಮೇಶ್ವರದವರೆಗೆ ಯಾತ್ರೆ ಮಾಡಬೇಕೆಂದು ಸಂಕಲ್ಪ ಮಾಡಿ ಪ್ರಚಂಡ ಸೈನ್ಯಸಮೇತನಾಗಿ ಹೊರಟನು.

ಮರಾಠರ ಬಲಿಷ್ಠವಾದ ಎಪ್ಪತ್ತು ಸಹಸ್ರ ಸೈನ್ಯಗಳು ಹೊರಟವು. ಮೂವತ್ತು ಸಹಸ್ರ ಕುದುರೆಯ ಸೈನ್ಯ, ಫಿರಂಗಿಗಳು ಎಲ್ಲವೂ ಹೊರಟವು.

೩

ಶಿವಾಜಿಯ ಪ್ರಚಂಡ ಸೈನ್ಯಗಳು ಮಹಾರಾಷ್ಟ್ರ ಎಲ್ಲೆಯನ್ನು ದಾಟಿ ಹೋಗುತ್ತಲೇ ಬಿಜಾಪುರದ ರಾಜ್ಯ. ಬಿಜಾಪುರದ ಸುಲ್ತಾನಿ ಆಡಳಿತವು ಅಂತಃಕಲಹಗಳಿಂದ ಭಿನ್ನಭಿನ್ನವಾಗಿಹೋಗಿದ್ದಿತು. ಅತುಲೈಶ್ವರ್ಯ ಸಮೃದ್ಧಿಯಿಂದ ಬಿಜಾಪುರದ ರಾಜಧಾನಿಯು ಕಳಕಳಿಸುತ್ತಿತ್ತು. ಶ್ರೀಮಂತರೂ ಸುಲ್ತಾನನ ಬಂಧುವರ್ಗಗಳವರೂ ಸುಖಭೋಗಗಳಲ್ಲಿ ಲೋಲುಪರಾಗಿದ್ದರು. ಅಂದಿನ ಕಾಲದಲ್ಲಿ ಬಿಜಾಪುರದ ಕೋಟೆಯೊಳಗೆ, ಸುಲ್ತಾನರ ಅರಮನೆಯಲ್ಲಿ, ಶ್ರೀಮಂತರ ಗೃಹಗಳಲ್ಲಿ, ಅಧಿಕಾರಿಗಳ ಸೌಧಗಳಲ್ಲಿ ಅವಲೋಕಿಸಿದರೆ ಡೆಲ್ಲಿಯ

ಸಾಮ್ರಾಟನ ವೈಭವಕ್ಕಿಂತಲೂ, ಬಿಜಾಪುರವು ಒಂದು ಕೈ ಮಿಗಿಲಾಗಿದೆ ಎಂದು ಅಚ್ಚರಿಗೊಳ್ಳುವಂತಿದ್ದವು.

ವಿಸ್ತಾರವಾದ ರಾಜ್ಯ. ಅನೇಕ ಕೋಟೆಗಳು. ಎಲ್ಲೆಲ್ಲಿಯೂ ಫೌಜುದಾರರು, ಕಿಲೇದಾರರು, ರಾಜಬಂಧುಗಳೂ ರಾಜ್ಯದಲ್ಲೆಲ್ಲಾ ತುಂಬಿದ್ದರು. ಸಾಮಂತ ರಾಜರು ಅಲ್ಲಲ್ಲಿ ಇರುತ್ತಿದ್ದರು. ಇವರಲ್ಲಿ ಬಹುಮಂದಿ ಹಿಂದೂ ರಾಜರು ಇರುತ್ತಿದ್ದರು.

ಆದರೇನು ಫೌಜುದಾರರು, ಕಿಲೇದಾರರು, ಸುಭೇದಾರರು, ಸಾಮಂತರು, ಶ್ರೀಮಂತರು ಇವರೆಲ್ಲರೂ ಸ್ವತಂತ್ರರಂತೆ ನಡೆದುಕೊಳ್ಳುತ್ತಿದ್ದರು. ಸುಲ್ತಾನರ ಅಧಿಕಾರವು ಎಷ್ಟು ಮಾತ್ರವೂ ಇವರುಗಳ ಮೇಲೆ ಇರಲೇ ಇಲ್ಲ.

ಶಿವಾಜಿಯ ಸೈನ್ಯಗಳು ತಮ್ಮ ರಾಜ್ಯದ ಮೇಲೆ ಬರುತ್ತಿರುವಾಗ ಕೆಲವರು ಪರಾಕ್ರಮದಿಂದ ಎದುರಿಸಿದರು. ಪ್ರತಿರೋಧವು ನಿರರ್ಥಕವಾದುವು. ಅವರು ರಣಭೂಮಿಯಲ್ಲಿ ಸತ್ತುಬೀಳುತ್ತಿದ್ದರು, ಇಲ್ಲವೇ ಓಡಿಹೋಗುತ್ತಿದ್ದರು. ಮಹಾರಾಷ್ಟ್ರ ಸೈನಿಕರು ಲೂಟಿ ಮಾಡಿಕೊಂಡು ಹೋಗುತ್ತಿದ್ದರು.

ಮತ್ತೆ ಕೆಲವರು ಸಾಮಂತ ರಾಜರು ಶಿವಾಜಿ ಮಹಾರಾಜನು ನಮ್ಮ ರಾಜ್ಯವನ್ನು ಆಕ್ರಮಿಸಿಕೊಳ್ಳಲು ಬರುತ್ತಿಲ್ಲ. ಅವನು ಎತ್ತಕಡೆಗೆ ಹೋಗುತ್ತಿರುವನೋ, ಯಾವ ರಾಜ್ಯವನ್ನು ಆಕ್ರಮಿಸಿಕೊಳ್ಳುವನೋ, ಅರಿವಿಲ್ಲ. ಬಿಜಾಪುರದ ಸುಲ್ತಾನರು ಶಿವಾಜಿ ಮಹಾರಾಜನನ್ನು ಎದುರಿಸಲು ಸೈನ್ಯಗಳನ್ನು ಕಳುಹಿಸಿಲ್ಲ. ಈ ಹವ್ಯಾಸ ನಮಗೇಕೆ. ದೊಡ್ಡ ದೊಡ್ಡ ಸುಲ್ತಾನರುಗಳು ಬೇಕಾದಂತೆ ಮಾಡಿಕೊಳ್ಳಲಿ, ಎಂದುಕೊಂಡು ಶಿವಾಜಿ ಮಹಾರಾಜನಿಗೆ ಕಪ್ಪ ಕಾಣಿಕೆಗಳನ್ನು ತಂದೊಪ್ಪಿಸಿ, ತಮ್ಮ ತಲೆಗಳನ್ನು ಉಳಿಸಿಕೊಳ್ಳುತ್ತಿದ್ದವರೂ ಉಂಟು. ಮುಸಲ್ಮಾನ ಸಾಮಂತರುಗಳೂ ಕೂಡಾ, ಎಷ್ಟೋ ಮಂದಿ ಇದೇ ಮಾರ್ಗವನ್ನು ಅವಲಂಬಿಸಿದ್ದರು. ಅವರವರ ರಾಜ್ಯದಲ್ಲಿ ಮನೆ, ಮಠಗಳಿಗೆ ಅಪಾಯ ತಟ್ಟುತ್ತಿರಲಿಲ್ಲ. ಸ್ತ್ರೀಯರಿಗೆ ಭಯವೇ ಇಲ್ಲ. ಸೈನಿಕರು ಅವಿನಯ ಅನೀತಿಗಳನ್ನು ಅವಲಂಬಿಸಿದ ನಿದರ್ಶನಗಳೇ ಇಲ್ಲ. ಮಹಾರಾಷ್ಟ್ರ ಸೇನಾಧಿಕಾರಿಗಳು ಸರಬರಾಜುಗಳಿಗೆ ಬೇಕಾದಷ್ಟು ಹಣಕೊಟ್ಟು ಕೊಳ್ಳುತ್ತಿದ್ದರು. ಇದರಲ್ಲಿ ಹಿಂದೂ, ಮುಸ್ಲಿಂ ಭೇದವೇ ಇರಲಿಲ್ಲ. ಸಣ್ಣ ರಾಜರಿಗೆ, ಇವಕ್ಕಿಂತಲೂ ಭದ್ರತೆ ಎಲ್ಲುಂಟು. ಅವರೆಲ್ಲರೂ ದಾರಿಯುದ್ದಕ್ಕೂ ಹಿಂದೂ

ಸಾರ್ವಭೌಮನನ್ನು ಕೊಂಡಾಡುತ್ತಿದ್ದರು. ಶಿವಾಜಿ ಮಹಾರಾಜನು ದಾರಿಯುದ್ದಕ್ಕೂ, ಬ್ರಾಹ್ಮಣರಿಗೆ, ವಿದ್ವತ್ ಜನರಿಗೆ, ದೇವಮಂದಿರಗಳಿಗೆ, ಹೇರಳವಾದ ದಾನ, ಧರ್ಮಗಳನ್ನು ಮಾಡುತ್ತಾ ಹೋಗುತ್ತಿದ್ದನು.

ಜನರೆಲ್ಲರೂ ಹಿಂದೂ ಸಾರ್ವಭೌಮನು ಸೇತುಯಾತ್ರೆಗೆ ಹೊರಟಿದ್ದಾನೆ. ದುಷ್ಟರ ಶಿಕ್ಷಣ, ಶಿಷ್ಟರ ಪರಿಪಾಲನೆಗಾಗಿಯೇ ಹೊರಟಿದ್ದಾನೆ ಎಂದು ಪ್ರಶಂಸೆ ಮಾಡುತ್ತಿದ್ದರು.

ಶಿವಾಜಿಯ ಸೈನ್ಯಗಳು ಹತ್ತುಮೈಲಿಗಳಿಗೊಂದು, ಮೊಕ್ಕಾಂ ಮಾಡುತ್ತಾ ಗೋದಾವರಿಯನ್ನು ದಾಟಿ, ಗೋಲ್ಕಂಡ ರಾಜ್ಯದ ಕಡೆಗೆ ಬರುತ್ತಾ ಗೋಲ್ಕಂಡದ ಗಡಿಯನ್ನು ಸೇರಿದವು. ಗೋಲ್ಕಂಡವು, ಅತ್ಯಂತ ಐಶ್ವರ್ಯ ಪೂರ್ಣವಾದ ರಾಜಧಾನಿ ಎಂದು ಶಿವಾಜಿಯು ಕೇಳಿದ್ದನು. ಅಬುಲ್ ಹುಸೇನ್ ಎಂಬ ಸುಲ್ತಾನನ ರಾಜ್ಯಭಾರವು ನಡೆಯುತ್ತಿದ್ದಿತು. ಅಬುಲ್ ಹುಸೇನನು ಕಲಾಪ್ರವೀಣ. ಎಲ್ಲ ಕಲೆಗಳಿಗೂ ಪ್ರೋತ್ಸಾಹ ಕೊಡುತ್ತಿದ್ದನು. ಪ್ರಜೆಗಳನ್ನು ಪೀಡಿಸಿ, ಧನ ಸಂಗ್ರಹ ಮಾಡುತ್ತಿರಲಿಲ್ಲ. ಅವನು ತಾಜಾ ಪರ್ಷಿಯನ್ ಕುಲಕ್ಕೆ ಸೇರಿದ್ದವನು. ಬಹುಮಂದಿ ಪತ್ನಿಯರಿದ್ದರು. ಅವರಲ್ಲಿ ಎಷ್ಟೋ ಮಂದಿ ಹಿಂದೂ ಸ್ತ್ರೀಯರೂ ಇರುತ್ತಿದ್ದರು. ಅವನ ಐಶ್ವರ್ಯವು ದೈವದತ್ತವಾದುದು. ದೇಶದಲ್ಲಿ ವಜ್ರದ ಗಣಿಗಳಿದ್ದವು. ಆ ಗಣಿಗಳಿಂದ ಆ ಕಾಲದಲ್ಲಿ ಅನರ್ಘ್ಯರತ್ನಗಳು ದೊರೆಯುತ್ತಿದ್ದವು. ಅವನು ರತ್ನಪರೀಕ್ಷೆಯಲ್ಲಿ ನಿಪುಣ. ಹೊರದೇಶಗಳ ದೊಡ್ಡದೊಡ್ಡ ವರ್ತಕರು ಬಂದು ವಜ್ರಗಳನ್ನು ಕೊಂಡು-ಕೊಂಡು ಹೋಗುತ್ತಿದ್ದರು. ಪುರವೀಧಿಗಳು ಐಶ್ವರ್ಯದಿಂದ ತುಂಬಿತುಳುಕುತ್ತಿದ್ದವು. ಎಲ್ಲೆಲ್ಲಿಯೂ ನವರತ್ನಗಳು ಚಿನ್ನದ ವ್ಯಾಪಾರ. ಗೋಲ್ಕಂಡವೆಂದರೆ, ಸ್ವರ್ಣಭೂಮಿ, ರತ್ನಗಳ ನಿಧಿ. ಆ ರಾಜಧಾನಿಯಲ್ಲಿ ಪ್ರತಿಯೊಂದು ಮನೆಯೂ ಅರಮನೆಗಳಂತೆ ಕಂಗೊಳಿಸುತ್ತಿದ್ದವು. ನಾನಾ ದೇಶದ ಸುಂದರ ಸ್ತ್ರೀಯರು ಗಣಿಕೆಯರಾಗಿ, ಗಾಯಕಿಯರಾಗಿ, ನರ್ತಕಿಯರಾಗಿ ತುಂಬಿದ್ದರು. ಪಾನಮಂದಿರಗಳಂತೂ ಲೆಕ್ಕವಿಲ್ಲದಷ್ಟು ಇರುತ್ತಿದ್ದವು. ಈ ಪಾನಮಂದಿಗಳ ಅಧಿಕಾರಿಣಿಯರು ಈ ದಿವ್ಯಗಣಿಕೆಯರೇ. ಅವರೆಲ್ಲರಿಗೂ ಸರ್ಕಾರದ ಪರವಾನಿಗೆಗಳಿದ್ದವು. ಅರಮನೆಯಲ್ಲಿ ಎಷ್ಟೋ ನಾಟ್ಯಶಾಲೆಗಳು ! ಆ

ಸುಂದರ ಸ್ತ್ರೀಯರು ಹಗಲಿರುಳೂ ಅರಮನೆಯ ನಾಟ್ಯಶಾಲೆಗಳಲ್ಲಿ ಕುಣಿಯುತ್ತಿರಬೇಕು, ಗಾನ ಮಾಡುತ್ತಿರಬೇಕು, ಇದು ಸುಲ್ತಾನನ ಆಜ್ಞೆ.

ಉಮ್ರಾಗಳೂ, ಶ್ರೀಮಂತರುಗಳೂ, ಇದೇ ಐಶ್ವರ್ಯವನ್ನು ಅನುಸರಿಸುತ್ತಿದ್ದರು. ಅವರ ಮನೆಗಳಲ್ಲೆಲ್ಲಾ ಸುಶೋಭಿತವಾದ ನಾಟ್ಯಶಾಲೆಗಳು, ಗಾನಮಂದಿರಗಳು, ಒಬ್ಬರನ್ನೊಬ್ಬರು ಮೀರಿಸುವ ಮೇಲಾಟ. ಎಲ್ಲೆಲ್ಲಿಯೂ ಔತಣ ಸಮಾರಂಭಗಳು. ದೇಶವಿದೇಶಗಳಿಂದ ಈ ಸ್ವರ್ಗವನ್ನು ನೋಡುವುದಕ್ಕೆ—ಈ ಸ್ವರ್ಗಸುಖವನ್ನು ಯತ್ಕಿಂಚಿತ್ತಾದರೂ ಅನುಭವಿಸುವುದಕ್ಕೆ ಆಸೆಯಿಂದ ಗೋಲ್ಕಂಡಕ್ಕೆ ಬರುತ್ತಿದ್ದರು. ಈ ಸುಂದರ ಚಿತ್ರಗಳನ್ನು ಎಷ್ಟೋ ಮಂದಿ ಕವಿಗಳು ಬರೆದಿಟ್ಟಿದ್ದಾರೆ. ಸುಲ್ತಾನರ ಹೆಣ್ಣುಮಕ್ಕಳನ್ನು ಒಲಿಸಿಕೊಳ್ಳಲು ವರಿಸಲು ತರುಣ ಶ್ರೀಮಂತರು ಹಾತೊರೆಯುತ್ತಿದ್ದರು ಆ ಚಿನ್ನದ ಹಕ್ಕಿಗಳು ಮೊಗಲ್ ಬಾದಶಹನ ಕುಮಾರರನ್ನು ಕೂಡ ಆಕರ್ಷಿಸಿದ್ದವು.

ಅಬುಲ್‌ಹುಸೇನನು ಮೃಗಯಾ ವಿಹಾರದಲ್ಲಿ ವಿಶೇಷ ಆಸಕ್ತನಾಗಿದ್ದನು. ಅಲ್ಲಲ್ಲಿ ಕಂಡ ಆ ವನ್ಯಸ್ತ್ರೀಯರನ್ನು ಮೋಹಿಸಿ, ಆ ವನಮಧ್ಯದಲ್ಲಿಯೇ ಅಂತಃಪುರಗಳನ್ನು ನಿರ್ಮಿಸಿದ್ದನು. ಪುಷ್ಪಗಳನ್ನು ಬೆಳೆಸುವುದರಲ್ಲಿ ಆ ಸುಲ್ತಾನನಿಗೆ ಬಲು ಪ್ರೀತಿ. ಎಲ್ಲಾ ಅಂತಃಪುರಗಳಲ್ಲಿಯೂ, ಹೊಸ ಹೊಸ ಪುಷ್ಪಗಳು ಚೆಲ್ಲಿರಬೇಕು, ಜಲವು ಹರಿಯುತ್ತಿರಬೇಕು, ಕಾರಂಜಿಗಳು ಹಾರುತ್ತಿರಬೇಕು, ಪರದೇಶದ ಸುಗಂಧದ್ರವ್ಯಗಳು, ಅತ್ತರುಗಳೂ ತುಂಬಿರಬೇಕು. ಗಾನ, ನರ್ತನ ವಾದ್ಯಗಳು ಕಳಕಳಿಸುತ್ತಿರಬೇಕು. ಇದೇ ಅಬುಲ್ ಹುಸೇನನ ಕಲ್ಪನಾ ಕೌಶಲ.

ಸೈನ್ಯಗಳಿಲ್ಲ, ಸೇನಾಧಿಪತಿಗಳಿಗೆ ಮನ್ನಣೆಯಿಲ್ಲ. ಮೊಗಲ್ ಸಾಮ್ರಾಟನಿಗೆ ಯಥೇಚ್ಛ ಪೊಗದಿಗಳು ಹೋಗುತ್ತಿದ್ದವು. ಅಮೂಲ್ಯರತ್ನಗಳ ಕಾಣಿಕೆ ಸಮರ್ಪಿಸಲ್ಪಡುತ್ತಿತ್ತು. ಸ್ತ್ರೀರತ್ನಗಳು ದೆಹಲಿಗೆ ಕಳುಹಿಸಲ್ಪಡುತ್ತಿದ್ದವು. ಅಬುಲ್ ಹುಸೇನನಿಗೆ ಇನ್ನಾವ ಭಯ ? ಈ ಜಗತ್ತಿನಲ್ಲಿ ತನಗೆ ಸರಿಸಮಾನರಾದವರು ಯಾರೂ ಇಲ್ಲವೆಂದು ಭಾವಿಸುತ್ತಿದ್ದನು. ಅವನೊಂದು ದಿನ ವಿದ್ವಾಂಸನಾದ ಖಾಜೀ ಸಾಹೇಬನೊಂದಿಗೆ, "ದೇವರು ನನ್ನ ಕಡೆಗಿದ್ದಾನೆ. ಅಲ್ಲಾನ ಕರುಣೆಯು ನನ್ನ ಮೇಲೆ ಅಪಾರವಾಗಿದೆ. ಇದೆಲ್ಲಾ ಪುಣ್ಯದ ನಿದರ್ಶನಗಳಲ್ಲವೆ, ನಿಮ್ಮೆಲ್ಲರಿಗಿಂತಲೂ, ನಾನು ವಿಶೇಷವಾಗಿ ದೇವರನ್ನು

ನಂಬಿದವನು. ಈ ನನ್ನ ಸುಖಸಾಮ್ರಾಜ್ಯವೆಲ್ಲವೂ ದೈವಾನುಗ್ರಹದ ಭಾಗ್ಯ" ಎಂದು ಹೇಳಿದ್ದನು.

ಶಿವಾಜಿಯು ಇಂತಹ ರಾಜ್ಯದ ಮೇಲೆ ಹಾದುಹೋಗಬೇಕು. ಶಿವಾಜಿಯು ಯಾವುದನ್ನು ಪಾಪವೆಂದು ಬಗೆದಿದ್ದನೋ, ಅದೇ ಇಲ್ಲಿ ಪುಣ್ಯ ! ಯಾವುದು ಪಾಪಜೀವನವಾಗಿತ್ತೋ ಅದೇ ಭಗವಂತನ ಅನುಗ್ರಹ ! ಇಂತಹ ರಾಜ್ಯವನ್ನು ಹೇಗೆ ಪ್ರವೇಶಿಸುವುದು. ಈ ನಮ್ಮ ಸೈನಿಕರೂ, ಈ ಸೇನಾ ನಾಯಕರೂ ಈ ಅಧಿಕಾರಿಗಳೂ ಇವರನ್ನೆಲ್ಲಾ ನೀತಿವಂತರನ್ನಾಗಿ ಹೇಗೆ ಕಾಪಾಡುವುದು ಎಂಬ ಯೋಚನೆಯು ಅವನ ತಲೆಯಲ್ಲಿ ವಿಶೇಷವಾಗಿ ಕೊರೆಯುತ್ತಿತ್ತು.

ಹನುಮಂತೆ ಎಂಬ ರಾಯಭಾರಿಯನ್ನು ಗೋಲ್ಕಂಡಕ್ಕೆ ಕಳುಹಿಸಿ ಕೊಟ್ಟನು. ಹನುಮಂತೆಯು ಬ್ರಾಹ್ಮಣ, ಸಕಲಶಾಸ್ತ್ರ ಪಾರಂಗತ, ರಾಜನೀತಿ ವಿಶಾರದ. ಅವನು ಮಿತಪರಿವಾರದೊಂದಿಗೆ ಗೋಲ್ಕಂಡಕ್ಕೆ ಬಂದು ಮಹಾ ಪ್ರಧಾನಿ ಮುದ್ದಣನ ಮಹಲಿಗೆ ಬಂದನು.

ಮುದ್ದಣನ ಮಹಲು ಗೋಲ್ಕಂಡದಲ್ಲಿಯೇ ಒಂದು ವಿಚಿತ್ರವಾಗಿದೆ ಎಂದು ಹನುಮಂತೆಯು ಆಶ್ಚರ್ಯಚಕಿತನಾದನು. ಮಹಾಪ್ರಧಾನಿ ಮುದ್ದಣನ ಅರಮನೆಯ ಹೊರಚಾವಡಿಯಲ್ಲಿ ಕಾರಕೂನರೂ ಮುನೀಬರೂ ಕುಳಿತು ಬಡಬಗ್ಗರಿಗೆ ದಾನಧರ್ಮಗಳನ್ನು ನೀಡುತ್ತಿದ್ದರು. ಗೋಸಾಯಿಗಳಿಗೆ, ಫಕೀರರು ಗಳಿಗೆ ಸದಾಬರ್ತ್‌ಗಳನ್ನು ಕೊಡುತ್ತಿದ್ದರು. ಮತ್ತೊಂದು ಕಡೆ ಬಡಮಕ್ಕಳಿಗೆ ಗೋಕ್ಷೀರವನ್ನು ಹಂಚುತ್ತಿದ್ದರು. ಅರಮನೆಯ ಮಹಾದ್ವಾರದಲ್ಲಿ ಮಂಗಳ ವಾದ್ಯಗಳು ಮೊಳಗುತ್ತಿದ್ದವು. ಎಡಪಾರ್ಶ್ವದಲ್ಲಿ ವಿಶಾಲವಾದ ಅತಿಥಿಶಾಲೆ. ವಿದ್ವತ್‌ಜನರಿಗೂ ಸಾಧುಸಂತರಿಗೂ ಆದರಪೂರ್ವಕವಾದ ಆತಿಥ್ಯಗಳು ನಡೆ ಯುತ್ತಿದ್ದವು. ಬಲಪಾರ್ಶ್ವದಲ್ಲಿ ದೇವತಾರ್ಚನೆಯ ಮಂದಿರವೂ ಹೋಮ ಶಾಲೆಯೂ ಭಜನಮಂದಿರವೂ ಪ್ರಕಾಶಿಸುತ್ತಿದ್ದಿತು. ಹೋಮಧೂಮವು ಅರಮನೆಯನ್ನೆಲ್ಲಾ ಪವಿತ್ರಗೊಳಿಸುತ್ತಿದ್ದಿತು. ವೇದಮಂತ್ರಗಳು ಕೇಳಿಬರು ತ್ತಿದ್ದವು. ಅಂಗಳದಲ್ಲಿ ಗೋಪೂಜೆಯು ನಡೆಯುತ್ತಿದ್ದಿತು. ಹನುಮಂತೆಯು ಇದನ್ನೆಲ್ಲಾ ನೋಡಿ, 'ಈ ಮಂತ್ರಿಯು ಧನ್ಯ. ನಮ್ಮ ಮಹಾರಾಜರಿಗಿಂತಲೂ

ವೈದಿಕ ಸಂಪತ್ತಿನಲ್ಲಿ ಇವನೇನು ಕಡಮೆಯಾಗಿಲ್ಲ'. ಎಂದು ಮನಸ್ಸಿನಲ್ಲಿಯೇ ಪ್ರಶಂಸೆಮಾಡಿಕೊಂಡನು.

೪

ಮಹಾಪ್ರಧಾನಿ ಮುದ್ದಣನಿಗೆ ಛತ್ರಪತಿ ಶಿವಾಜಿ ಮಹಾರಾಜರು ಗೋಲ್ಕಂಡ ರಾಜ್ಯದ ಗಡಿಯಲ್ಲಿ ಬಂದು ಬೀಡುಬಿಟ್ಟಿದ್ದಾರೆಂದು ದೂತರ ಮುಖೇನ ತಿಳಿದಿತ್ತು. ಮಹಾರಾಜರ ಕಡೆಯಿಂದ ರಾಯಭಾರಿಯು ಬಂದಿದ್ದಾನೆಂದು ತಿಳಿಯುತ್ತಲೇ ಮುದ್ದಣನು ಗಾಬರಿಯಿಂದ ತಾನೇ ಹೋಗಿ ರಾಯಭಾರಿ ಹನುಮಂತೆಯನ್ನು ಮರ್ಯಾದೆಯಿಂದ ಸ್ವಾಗತಿಸಿದನು. ಮನೆ ಒಳಗೆ ಕರೆದುಕೊಂಡುಹೋಗಿ, ದಿವಾನ್‌ಖಾನೆಯಲ್ಲಿ ಆಸನವನ್ನು ಕೊಟ್ಟು ಕುಳ್ಳಿರಿಸಿದನು. ಪರಸ್ಪರ ಕುಶಲ ಪ್ರಶ್ನೆಗಳು ಆದ ತರುವಾಯ ಮುದ್ದಣನು "ಶಿವಾಜಿ ಮಹಾರಾಜರವರು, ನಮ್ಮ ರಾಜ್ಯದ ಎಲ್ಲೆಕಟ್ಟಿನಲ್ಲಿ ಬಂದು ಇಳಿದಿದ್ದಾರೆಂದು ತಿಳಿಯಿತು. ನಾನೇ ಬಂದು ಅವರ ದರ್ಶನವನ್ನು ತೆಗೆದುಕೊಳ್ಳಬೇಕೆಂದು ಯೋಚಿಸುತ್ತಿದ್ದೆ. ಆ ವಿಷಯಕ್ಕೆ ನಮ್ಮ ಸುಲ್ತಾನರವರ ಅನುಜ್ಞೆಯನ್ನು ಪ್ರತಿಕ್ಷಣವೂ ನಿರೀಕ್ಷಿಸುತ್ತಿದ್ದೆ. ತಾವೇ ಬಂದುಬಿಟ್ಟಿದ್ದೀರಿ. ಇದು ನಮ್ಮ ಮೇಲೆ ಮಹಾರಾಜರ ಅನುಗ್ರಹವೆಂದು ಭಾವಿಸಿದ್ದೇನೆ. ಮಹಾರಾಜರು ಏನಪ್ಪಣೆ ಮಾಡಿದ್ದಾರೆ? ಅದನ್ನು ಹೇಳೋಣವಾಗಲಿ" ಎಂದನು.

ಹನುಮಂತೆಯು "ಪ್ರಧಾನಿಯವರೇ, ಶಿವಾಜಿ ಮಹಾರಾಜರ ಸಂದೇಶವನ್ನು ಹೇಳುವುದಕ್ಕಾಗಿಯೇ ಬಂದಿದ್ದೇನೆ, ಹೇಳುತ್ತೇನೆ. ಆದರೆ, ಮೊದಲು ನನ್ನ ಮನಸ್ಸಿನ ಆನಂದವನ್ನು ಹೇಳಿಬಿಡುತ್ತೇನೆ. ನಿಮ್ಮ ಮನೆಗೆ ಬಂದು ಇಲ್ಲಿಯ ಸನ್ನಿವೇಶವನ್ನೆಲ್ಲಾ ನೋಡಿ ಪರಮಾನಂದವಾಯಿತು. 'ಧನ್ಯೋ ಗೃಹಸ್ಥಾಶ್ರಮಃ' ಎಂಬ ಮಾತು ನಿಮ್ಮಲ್ಲಿ ಅಕ್ಷರಶಃ ಸತ್ಯವಾಗಿ ಕಾಣುತ್ತವೆ. ಈ ತುರಷ್ಕರ ರಾಜ್ಯದಲ್ಲಿ ಈ ಭೋಗೋಪಭೋಗಗಳಿಂದ ತುಂಬಿರುವ ರಾಜಧಾನಿಯಲ್ಲಿ ನಿಮ್ಮಂತಹ ಧರ್ಮಾನುಷ್ಠಾನಪರರು ಹೀಗಿರುವುದು ಆಶ್ಚರ್ಯವೆನಿಸುತ್ತದೆ" ಎಂದು ಆರಂಭ ಮಾಡಿದನು.

ಅವರಿಬ್ಬರ ಮಾತು ಬರುಬರುತ್ತಾ ಶಾಸ್ತ್ರಾರ್ಥಕ್ಕೆ ಇಳಿಯಿತು. ಇಬ್ಬರೂ

ವಿದ್ವಾಂಸರೆಂದು ಪರಸ್ಪರ ಅರಿತುಕೊಂಡರು. ವೇದಶಾಸ್ತ್ರ, ಪುರಾಣೇತಿಹಾಸಗಳ ಚರ್ಚೆಗೆ ಆರಂಭವಾಯಿತು. ಸುಲ್ತಾನನನ್ನೂ ಮಹಾರಾಜನನ್ನೂ ಇಬ್ಬರೂ ಮರತೇಬಿಟ್ಟರು. ಮುದ್ದಣನು ಗೋಲ್ಕಂಡದ ಮಹಾಪ್ರಧಾನಿ ಎಂಬುದೂ, ಹನುಮಂತೆಯು ಶಿವಾಜಿ ಮಹಾರಾಜರ ರಾಯಭಾರಿ ಎಂಬುದೂ ಅವರಿಬ್ಬರಿಗೂ ಮರೆತುಹೋಗಿತ್ತು. ತಮ್ಮನ್ನು ತಾವೇ ಮರೆತು ಶಾಸ್ತ್ರಾರ್ಥಗಳಲ್ಲಿಯೂ ಧರ್ಮಜಿಜ್ಞಾಸೆಯಲ್ಲಿಯೂ ಮಗ್ನರಾಗಿಹೋದರು. ಅವರಿಬ್ಬರ ಆನಂದಕ್ಕೆ ಪಾರವೇ ಇಲ್ಲ. ವಿದ್ವಾಂಸನು ವಿದ್ವಾಂಸನನ್ನು ಅರಿಯಬಲ್ಲನು ಎಂಬುದು ಅವರಿಬ್ಬರಲ್ಲಿ ಪ್ರತ್ಯಕ್ಷವಾಗಿ ಗೋಚರವಾಗುತ್ತಿದ್ದಿತು.

ಮಧ್ಯಾಹ್ನದ ವೇಳೆಯು ಸಮೀಪಿಸಿತು. ಪೂಜಾಮಂದಿರದಲ್ಲಿ ಘಂಟಾನಾದವು ಕೇಳಿಸಿತು. ಮುದ್ದಣನು ಎದ್ದುನಿಂತು ಕೈಮುಗಿದು "ವಿದ್ವಾಂಸರೇ ಭೋಜನದ ಸಮಯವಾಗಿದೆ, ಭೋಜನಕ್ಕೇಳಬೇಕು. ತಮ್ಮಂತಹ ವಿದ್ವಾಂಸರಾದ ಅತಿಥಿಗಳನ್ನು ಇಂದು ಪಡೆದಿರುವುದು ನನ್ನ ಭಾಗ್ಯ" ಎಂದು ಹೇಳಿ ಭೋಜನಕ್ಕೆಬ್ಬಿಸಿದನು. ಇಬ್ಬರೂ ಮಡಿಗಳನ್ನುಟ್ಟು ತೀರ್ಥಪ್ರಸಾದಗಳನ್ನು ಸ್ವೀಕರಿಸಿ, ಭೋಜನಕ್ಕೆ ಕುಳಿತರು. ಭೋಜನ ಕಾಲದಲ್ಲಿ ಅವರಿಬ್ಬರೂ ಲೋಕಾಭಿರಾಮವಾಗಿ ದಕ್ಷಿಣದೇಶದ ದೇವಾಲಯಗಳ–ತೀರ್ಥಕ್ಷೇತ್ರಗಳ ವಿಚಾರವಾಗಿ ಮಾತನಾಡಿದರು. ಮುದ್ದಣನು ತಿರುಪತಿ, ಶ್ರೀಶೈಲ, ಕಂಚಿ, ಶ್ರೀರಂಗ; ಮಧುರೆ ಮುಂತಾದ ಕ್ಷೇತ್ರಗಳನ್ನು ತಾನು ದರ್ಶನ ಮಾಡಿರುವುದಾಗಿಯೂ ರಾಮಸೇತುವಿನವರೆಗೂ ಯಾತ್ರೆ ಮಾಡಿರುವುದಾಗಿಯೂ ವಿವರಿಸಿದನು. ಕಾವೇರಿಯ ತೀರದಲ್ಲಿ ಅನೇಕ ಅಗ್ರಹಾರಗಳಿವೆ ಎಂದೂ ವೇದಾಧ್ಯಯನ ಸಂಪನ್ನರೂ, ಅಗ್ನಿಹೋತ್ರಿಗಳೂ ಆದ ಬ್ರಾಹ್ಮಣೋತ್ತಮರುಗಳು ಇದ್ದಾರೆಂದು ತಿಳಿಸಿದನು.

ದೈವಯೋಗದಿಂದ ಮಹಾರಾಜರು ಅತ್ತಕಡೆಯೇ ಹೊರಟಿದ್ದಾರೆಂದೂ ತನಗೂ ಆ ದಕ್ಷಿಣಾಪಥದ ತೀರ್ಥಕ್ಷೇತ್ರಗಳನ್ನು ಸಂದರ್ಶಿಸುವ ಲಭ್ಯವಿರಬಹುದೆಂದೂ ಹೇಳಿದನು.

"ಮಹಾರಾಜರು ಯಾತ್ರೆಗಾಗಿ ಹೊರಟಿದ್ದರೆ, ಇಷ್ಟೊಂದು ಪ್ರಚಂಡ ಸೈನ್ಯವೇಕೆ ? ಇಷ್ಟುಮಂದಿ ಸೇನಾಧಿಪತಿಗಳೇಕೆ ? ಇದನ್ನೆಲ್ಲಾ ನೋಡಿದರೆ, ಮಹಾರಾಜರು ದಿಗ್ವಿಜಯಾರ್ಥವಾಗಿ ಹೊರಟಿರುವಂತಿದೆ."

"ಹಿಂದೂ ಸಾರ್ವಭೌಮರು ಆ ಅಭಿಲಾಷೆಯನ್ನು ಮನಸದಲ್ಲಿ ಎಣಿಸಿರಬಹುದು. ದುಷ್ಟನಿಗ್ರಹವೂ ಮುಖ್ಯವಾದ ರಾಜಧರ್ಮವಾಗಿದೆಯಷ್ಟೆ. ಕ್ಷತ್ರಿಯರಿಗೆ ಅದಕ್ಕಿಂತಲೂ ಪರಮಧರ್ಮವು ಮತ್ತಾವುದಿದೆ ?"

ಅಷ್ಟರಲ್ಲಿ ಭೋಜನವು ಪೂರ್ತಿಯಾಯಿತು. ಭೋಜನೋತ್ತರ ಮುದ್ದಣನ ಮಹಲಿನ ಮೇಲಂತಸ್ತಿನಲ್ಲಿರುವ ಏಕಾಂತಭವನದಲ್ಲಿ ಅವರಿಬ್ಬರೂ ಕುಳಿತು ತಾಂಬೂಲವನ್ನು ಸವಿಯುತ್ತಿದ್ದರು.

ಮುದ್ದಣನು "ರಾಯಭಾರಿಗಳೇ, ತಾವು ದಯಮಾಡಿಸಿದ ರಾಯಭಾರವನ್ನೇ ಅರುಹಲಿಲ್ಲವಲ್ಲ" ಎಂದು ಹನುಮಂತೆಗೆ ಸೂಚನೆ ಕೊಟ್ಟನು.

ಹನುಮಂತೆಯು "ನನ್ನ ರಾಯಭಾರವು ಬಲು ಸುಲಭವಾದದ್ದು. ರಾಯಭಾರವೆಂಬುದು ಔಪಚಾರಿಕ. ನೀವೂ ನಿಮ್ಮ ಸುಲ್ತಾನರೂ ಸಂತೋಷದಿಂದ ಒಪ್ಪಿಕೊಳ್ಳುವಂತಹ ಸಂದೇಶವನ್ನು ನಾನು ತಂದಿದ್ದೇನೆ" ಎಂದು ಹೇಳಿದನು.

"ಅಪ್ಪಣೆ ಕೊಡಿಸೋಣವಾಗಲಿ."

"ಮಹಾರಾಜರು ನಿಮ್ಮ ರಾಜ್ಯವನ್ನು ಹಾದು ಮುಂದಕ್ಕೆ ಹೋಗಬೇಕಾಗಿದೆ. ನಾವು ನಮ್ಮ ಸೈನ್ಯಗಳು ನಿಮ್ಮ ರಾಜ್ಯದ ಮೇಲೆ ಹಾದುಹೋಗಲು ಒಪ್ಪಿಗೆಯನ್ನು ಕೊಡಬೇಕು ಅಷ್ಟೆ, ನಮ್ಮ ಮಹಾರಾಜರ ಸಂದೇಶ."

ಮುದ್ದಣನು "ನೀವು ಹೇಳುವಂತೆ, ಇದು ಅತ್ಯಂತ ಸುಲಭವಾದ ರಾಯಭಾರವೇ ಆಗಿದೆ. ಶಿವಾಜಿ ಮಹಾರಾಜರು ಬ್ರಹ್ಮಾಂಡ ಸೈನ್ಯದೊಡನೆ ನಮ್ಮ ರಾಜ್ಯದ ಎಲ್ಲೆ ಕಟ್ಟನಲ್ಲಿ ಬಂದು ನಿಂತಿದ್ದಾರೆಂಬುದನ್ನು ಕೇಳಿ ನಮ್ಮ ಸುಲ್ತಾನರು ಭಯಪಟ್ಟಿದ್ದರು. ಮೊಗಲ್ ಸಾಮ್ರಾಟನೇ ಶಿವಾಜಿಯ ಹೆಸರು ಕೇಳಿದರೆ ಭಯಪಡುತ್ತಾನೆಂದು ಕೇಳಿದ್ದೇನೆ. ಇನ್ನು ನಮ್ಮ ಸುಲ್ತಾನರು ಭಯಪಡುವುದರಲ್ಲಿ ಏನು ಆಶ್ಚರ್ಯವಿದೆ ? ನಮ್ಮ ಸುಲ್ತಾನನು ಒಳ್ಳೆಯ ವಿದ್ಯಾವಂತ, ಕಲಾಭಿಮಾನಿ, ಆದರೆ ಯುದ್ಧವನ್ನು ಎಂದೂ ಕಂಡವನಲ್ಲ. ಯುದ್ಧವು ಸಂಭವಿಸಿದರೆ, ನಾನೇ ರಣಕ್ಷೇತ್ರಕ್ಕೆ ಹೊರಡಬೇಕು. ಶಿವಾಜಿ ಮಹಾರಾಜರ ಮುಂದೆ, ನಾನು ಯುದ್ಧ ಮಾಡುವುದೇ ? ಈ ಜೀವನವು ನಶ್ವರವೆಂದು ಭಾವಿಸಿ ಪ್ರಭುಗಳ ಸೇವೆಗಾಗಿ, ಯುದ್ಧಕ್ಕೆ ಹೋಗುವುದೇನೋ ನ್ಯಾಯವಾಗಿಯೇ ಇದೆ. ಆದರೂ ಹಿಂದೂ ಸಾರ್ವಭೌಮನೊಂದಿಗೆ ಎದುರಿಸಿ,

ಯುದ್ಧ ಮಾಡಿದನೆಂಬ ಅಪಕೀರ್ತಿಯು ಶಾಶ್ವತವಾಗಿ ನಿಲ್ಲುತ್ತದೆ. ನಾನು ಈ ಧರ್ಮಸಂಕಟದಲ್ಲಿ ತೊಳಲುತ್ತಿದ್ದೆ. ಪುಣ್ಯಾತ್ಮರಾದ ನೀವು ಬಂದು ನನ್ನ ಧರ್ಮಸಂಕಟವನ್ನು ಪರಿಹರಿಸಿದಿರಿ. ನೀವು ಇಲ್ಲಿ ವಿಶ್ರಮಿಸಿಕೊಳ್ಳಿರಿ. ನಿಮ್ಮ ಪರಿವಾರವೆಲ್ಲವೂ ನಮ್ಮ ಅತಿಥಿಶಾಲೆಯಲ್ಲಿ ಸುಖವಾಗಿದೆ. ನಾನು ಸುಲ್ತಾನರ ಅರಮನೆಗೆ ಹೋಗಿ, ಅವರಲ್ಲಿ ನಿಮ್ಮ ಆಗಮನವನ್ನೂ ಮಹಾರಾಜರ ಸಂದೇಶವನ್ನೂ ಪ್ರಸ್ತಾಪಮಾಡಿ, ಸದುತ್ತರವನ್ನು ತರುತ್ತೇನೆ" ಎಂದು ಹೇಳಿ ಹೊರಟರು.

ಮಾದ್ಧಣನು ಪಲ್ಲಕ್ಕಿಯಲ್ಲಿ ಕುಳಿತು ಅರಮನೆಗೆ ಹೋಗಿ ಸೇರಿದನು. ಸುಲ್ತಾನನು ನಾಟ್ಯಮಂದಿರದಲ್ಲಿ ಇರಲಿಲ್ಲ, ಗಾನಗೋಷ್ಠಿಯಲ್ಲಿ ಸೇರಿರಲಿಲ್ಲ, ಅಂದೆಲ್ಲಾ ಭೋಜನ ಮಾಡಿರಲಿಲ್ಲ. ಏಕಾಂತಗೃಹದಲ್ಲಿ ಚಿಂತಾಸಕ್ತನಾಗಿ ಕುಳಿತಿದ್ದನು. ಪರಿಚಾರಿಕೆಯರು ಹೋಗಿ ಪ್ರಧಾನಿ ಮುದ್ದಣನು ಬಂದಿರುವನೆಂದು ಸುಲ್ತಾನನಿಗೆ ಅರಿಕೆ ಮಾಡಿದರು. ಸುಲ್ತಾನನು ಬುದ್ಧಿವಂತ. ಯಾವ ವಿಚಾರವು ಅವನ ತಲೆಯಲ್ಲಿ ಕೊರೆಯುತ್ತಿದೆಯೋ, ಅದೇ ವಿಚಾರಕ್ಕಾಗಿ, ಮುದ್ದಣನು ಬಂದಿದ್ದಾನೆಂದು ಸುಲಭವಾಗಿ ಊಹೆ ಮಾಡಿದನು. ಮುದ್ದಣನನ್ನು ಅಲ್ಲಿಗೇ ಕರೆತರುವಂತೆ ಪರಿಚಾರಿಕೆಯರಿಗೆ ಸಂಜ್ಞೆಮಾಡಿದನು. ಮುದ್ದಣನು ಸುಲ್ತಾನರ ಸಮ್ಮುಖಕ್ಕೆ ಬಂದು ಅಭಿವಾದನ ಮಾಡಿದನು. ಸುಲ್ತಾನನು ಹಸನ್ಮುಖದಿಂದ ಸ್ವಾಗತಿಸಿ, ತಾನು ಕುಳಿತಿದ್ದ ಮೆತ್ತೆಯ ಮೇಲೆಯೇ ಮುದ್ದಣನನ್ನು ಕೈಹಿಡಿದು ಕುಳ್ಳಿರಿಸಿಕೊಂಡನು.

ಸುಲ್ತಾನನು "ವಜೀರ್‌ರವರು ಏಕಾಏಕೀ ಬಂದಿರುವ ಕಾರಣವೇನು ?" ಎಂದು ಪ್ರಶ್ನೆ ಮಾಡಿದನು.

"ಜಹಾಪನಾ, ತಮಗೆಲ್ಲಾ ತಿಳಿದೇ ಇದೆ. ಛತ್ರಪತಿ ಶಿವಾಜಿ ಮಹಾರಾಜರು ನಮ್ಮ ಗಡಿಗೆ ಬಂದು ನಿಂತಿದ್ದಾರೆ. ಅದೇ ವಿಷಯವನ್ನು ತಮ್ಮೊಡನೆ ಮಂತ್ರಾಲೋಚನೆ ಮಾಡಲು ಬಂದಿದ್ದೇನೆ."

"ಹ್ಞು ! ನಾನೂ ಅದನ್ನೇ ಆಲೋಚಿಸುತ್ತಿದ್ದೇನೆ. ಪ್ರಬಲ ಶತ್ರುವು ಬಂದು ಬಾಗಿಲಲ್ಲಿ ನಿಂತಿರುವಾಗ ಏನು ಮಾಡಬೇಕೆಂಬುದೇ ನನಗೆ ತೋಚದಾಗಿದೆ. ಆ ಮಹಾರಾಜನ ಸೈನಿಕರೆಲ್ಲರೂ, ಗುಡ್ಡಗಾಡಿನ ಜನ, ಸಾಹಸಿಗಳು ನಮ್ಮ ರಾಜಧಾನಿಗೆ ನುಗ್ಗಿ ಈ ಸುಂದರ ನಗರವನ್ನು ಹಾಳುಮಾಡುತ್ತಾರೆಂದು

ನನಗೆ ವ್ಯಥೆಯಾಗಿದೆ. ಇಷ್ಟೊಂದು ಕಲಾವೈಭವದಿಂದ ಮೆರೆಯುತ್ತಿರುವ ನಮ್ಮ ಅರಮನೆಯು ಹಾಳುಸ್ಮಶಾನದಂತೆ ಆಗಿಬಿಡುವುದೆಂದು ನಾನು ಎಣಿಸುತ್ತಿದ್ದೇನೆ. ನೀವೇನು ಹೇಳುವಿರಿ ?

"ಖಾವಂದರು ಹೇಳುವುದೆಲ್ಲಾ ಸರಿಯಾಗಿಯೇ ಇದೆ. ಶಿವಾಜಿ ಮಹಾರಾಜರು ಹಿಂದೂಸ್ಥಾನದಲ್ಲಿ ಮುಸಲ್ಮಾನರ ಶತ್ರುಗಳೆಂಬದು ನಿಜವಾಗಿಯೆ ಇದೆ. ಅವರನ್ನು ಹಾಗೆ ಮಾಡಿದವರು ದೆಹಲಿಯ ಸಾಮ್ರಾಟರು ಮತ್ತು ಬಿಜಾಪುರದ ಸೇನಾಧಿಪತಿಗಳು. ಶಿವಾಜಿ ಮಹಾರಾಜರನ್ನು ಮೋಸದಿಂದ ಸೆರೆಹಿಡಿದ ಕಥೆ ಖಾವಂದರು ಕೇಳಿರಬಹುದು. ದೆಹಲಿಯ ಬಾದಶಹರು ಹಿಂದುಗಳ ಮೇಲೆ ನಡೆಸಿರುವ ಅತ್ಯಾಚಾರಗಳನ್ನೂ ಅವರ ದೇವಾಲಯಗಳನ್ನು ನಾಶಪಡಿಸಿರುವ ಘೋರಕಥೆಗಳನ್ನೂ ಸುಲ್ತಾನರು ಕೇಳಿರಬಹುದು. ಈ ಬಿಜಾಪುರದವರು, ಶಿವಾಜಿ ಮಹಾರಾಜರೊಡನೆ ಅನೇಕ ಯುದ್ಧಗಳನ್ನು ಮಾಡಿ ಸೋತಿದ್ದಾರೆ. ಪರಾಜಯ ಹೊಂದಿದಾಗ, ಸಂಧಿಗಳನ್ನು ಮಾಡಿಕೊಂಡಿದ್ದಾರೆ ಮತ್ತೆ ಆ ಸಂಧಿಯನ್ನು ಮುರಿದು ಘಾತುಕರಂತೆ ವರ್ತಿಸಿದ್ದಾರೆ. ಅಫಜಲ್ ಖಾನನು ಮಹಾಪರಾಕ್ರಮಿ. ಅವನ ಪರಾಕ್ರಮದಿಂದ ಆ ಮಹಾರಾಜನನ್ನು ಗೆಲ್ಲಲಾರದೆ, ಮೋಸದಿಂದ ಶಿವಾಜಿಯನ್ನು ಕೊಲ್ಲಲೆಣಿಸಿ, ತಾನೇ ಮೃತ್ಯುವಿಗೆ ತುತ್ತಾದನು. ಈಗ್ಗೆ ಕೆಲವು ದಿನಗಳ ಹಿಂದೆ ಮೊಗಲ್ ಸಾಮ್ರಾಟರ ಪ್ರತಿನಿಧಿಯಾದ ಬಹದ್ದೂರ್‌ಖಾನನೂ ದಿಲೀಪ್‌ಖಾನನೂ ಶಿವಾಜಿಯನ್ನು ಕೆಣಕಿ ಸೋತು ಓಡಿಹೋದದ್ದು ಖಾವಂದರು ಕೇಳಿರಬಹುದು."

"ಹೌದು ಹೌದು, ಅದನ್ನೆಲ್ಲಾ ಕೇಳಿದ್ದೇನೆ. ಶಿವಾಜಿ ಮಹಾರಾಜನು ಮುಸಲ್ಮಾನರ ಶತ್ರುವೆಂಬುದು ಜಗತ್ಪ್ರಸಿದ್ಧವಾಗಿದೆ. ಈಗ ನಮಗೆ ಗಂಡಾಂತರ ಒದಗಿದೆ. ನಾವೇನು ಮಾಡಬೇಕು ?"

"ದೈವಯೋಗವು ನಮ್ಮ ಕಡೆಗೇ ಸುಮುಖವಾಗಿರುವಂತಿದೆ. ಶಿವಾಜಿ ಮಹಾರಾಜರೇ ಅವರ ಕಡೆ ರಾಯಭಾರಿಯನ್ನು ತಮ್ಮ ಸಮ್ಮುಖಕ್ಕೆ ಕಳುಹಿಸಿ ಕೊಟ್ಟಿದ್ದಾರೆ."

ಸುಲ್ತಾನನಿಗೆ ಗಾಬರಿಯಾಯಿತು. "ಶಿವಾಜಿಯು ರಾಯಭಾರಿಯನ್ನು ಕಳುಹಿಸಿದ್ದಾನೆಯೆ ? ಅವನೆಲ್ಲಿದ್ದಾನೆ ? ಅವನೇನು ಸಂದೇಶವನ್ನು ತಂದಿದ್ದಾನೆ ?"

"ಜಹಾಪನಾ, ಸಾವಧಾನದಿಂದ ಲಾಲಿಸಬೇಕು. ಶಿವಾಜಿ ಮಹಾರಾಜರು ಪ್ರತ್ಯಕ್ಷವಾಗಿ ನಮ್ಮ ಮೇಲೆ ಯುದ್ಧಕ್ಕೆ ಬಂದಿಲ್ಲ, ಅವರು ದಕ್ಷಿಣ ಯಾತ್ರೆ ಹೊರಟಿದ್ದಾರೆ. ಅತ್ತಕಡೆಗೆ ಹೋಗಬೇಕಾದರೆ, ನಮ್ಮ ರಾಜ್ಯವನ್ನು ಹಾದು ಹೋಗಬೇಕು ಅದಕ್ಕೆ ನಾವು ಅನುಮತಿಯನ್ನೀಯಬೇಕೆಂದು ರಾಯಭಾರಿಯನ್ನು ಕಳುಹಿಸಿಕೊಟ್ಟಿದ್ದಾರೆ."

"ವಜೀರರೇ, ಇದನ್ನು ನಂಬುವುದಕ್ಕಾಗುವುದೇ ? ಶಿವಾಜಿ ಮಹಾ ಮೋಸಗಾರ, ಕೃತ್ರಿಮಿ. ಅವನು ಸ್ನೇಹಿತನಂತೆ ನಮ್ಮ ರಾಜ್ಯವನ್ನು ಹೊಕ್ಕು ನಾವು ಯುದ್ಧಸನ್ನದ್ಧರಾಗಿಲ್ಲದಾಗ ಈ ರಾಜಧಾನಿಯನ್ನು ನಾಶ ಮಾಡುವುದಿಲ್ಲವೆಂದೂ, ನಮ್ಮರಮನೆಯನ್ನು ಸೂರೆಮಾಡುವುದಿಲ್ಲವೆಂದೂ ನಂಬುವುದು ಹೇಗೆ ? "

"ನಂಬಿದರೆ ನಂಬಬಹುದು, ಇಲ್ಲದಿದ್ದರೆ ಇಲ್ಲ. ನಾನು ತಮ್ಮ ಸೇನಾಧಿಪತಿ, ಅಷ್ಟೋ ಇಷ್ಟೋ ಸೈನ್ಯವೂ ಇದೆ. ಅಪ್ಪಣೆಯಾದರೆ ಶಿವಾಜಿಯ ಮೇಲೆ ನಾಳೆಯ ಯುದ್ಧಕ್ಕೆ ಹೊರಡಲು ಸಿದ್ಧನಾಗಿದ್ದೇನೆ. ಅಂತಹ ವೀರನೊಂದಿಗೆ ಪ್ರತ್ಯಕ್ಷಯುದ್ಧ ಮಾಡುವುದು ನನಗೆ ಸಂತೋಷಕರವೇ ಆಗಿದೆ."

"ಉಪಾಯಗಳನ್ನೆಲ್ಲಾ ಮಾಡೋಣ. ಯಾವುದೂ ಫಲಿಸದಿದ್ದರೆ, ರಣಕ್ಷೇತ್ರದಲ್ಲಿ ಮಡಿದುಹೋಗೋಣ, ನಾನೂ ಯುದ್ಧಕ್ಕೆ ಬರುತ್ತೇನೆ. ಈ ರಾಯಭಾರಿಯನ್ನು ನೀನು ನಂಬುವುದಾದರೆ, ಮೊದಲು ಆ ಆಲೋಚನೆಯನ್ನೇ ಮಾಡೋಣ."

"ನಾನು ನಂಬುತ್ತೇನೆ ಪ್ರಭು. ಶಿವಾಜಿ ಮಹಾರಾಜನ ಸ್ನೇಹವೇ ಒಳ್ಳೆಯದೆಂದು ನನಗೆ ತೋರುತ್ತಿದೆ. ಪ್ರಕೃತ ಈ ರಾಜ್ಯವನ್ನು ಉಳಿಸುವುದಕ್ಕೆ ಅದೊಂದೇ ಮಾರ್ಗ."

ಸುಲ್ತಾನನು ಕ್ಷಣಹೊತ್ತು ಆಲೋಚನಾಪರವಶನಾಗಿದ್ದು "ವಜೀರರೇ, ನಮ್ಮ ರಾಜ್ಯದಲ್ಲಿ ಅವರಿಗೆ ಮಾರ್ಗ ಬಿಟ್ಟುಕೊಡುವುದರಿಂದ ದೋಷವೇನೂ ಇಲ್ಲ ಅವರು ನಮ್ಮ ರಾಜ್ಯದ ಮೇಲೆ, ಹಾದುಹೋಗಬೇಕೆಂದರೆ, ನಾವು ಒಪ್ಪದಿದ್ದರೂ ಧೈರ್ಯವಾಗಿ ಹಾದುಹೋಗುತ್ತಾರೆ. ಅವರಿಗೆ ಹೀಗೆ ದಾರಿ ಬಿಟ್ಟುಕೊಟ್ಟರೆ, ಮೊಗಲ್ ಬಾದಶಹನು ನಮ್ಮ ಮೇಲೆ ಆಗ್ರಹ ಮಾಡದಿರುವನೇ ? " ಎಂದು ಕೇಳಿದನು.

"ಹೌದು ಪ್ರಭು, ಅದನ್ನು ಚಿಂತಿಸಿ ಫಲವೇನು ? ಮೊಗಲ್ ಬಾದಶಹರು ಇಂದು ನಮ್ಮನ್ನು ಸಂರಕ್ಷಿಸಬಲ್ಲರೆ ? ಅವರು ಇತ್ತ ಕಡೆಗೆ ತಿರುಗಿ ನೋಡುವುದಕ್ಕಿಂತ ಮುಂಚೆಯೇ ನಮ್ಮ ರಾಜ್ಯವೂ ನಾವೂ ನಾಶವಾಗುತ್ತೇವೆ. ಸಮ್ರಾಟರ ರಾಜಪ್ರತಿನಿಧಿ ಬಹದ್ದೂರ್‌ಖಾನ್, ಸೇನಾಧಿಪತಿ ದಿಲೇರ್ ಖಾನರೇ, ಓಡಿಹೋಗಿ, ಅಪಾರ ನಷ್ಟಗಳನ್ನು ಅನುಭವಿಸಿರುವಾಗ ನಮ್ಮ ಪಾಡೇನು ? ಇದನ್ನು ಪ್ರಭುಗಳು ಯೋಚನೆ ಮಾಡಬೇಕು."

"ದಾರಿಯನ್ನು ಬಿಟ್ಟುಕೊಡುವುದಂತೂ ಒಪ್ಪಿಕೊಳ್ಳಲೇಬೇಕು, ಬೇರೆ ವಿಧಿಯೇ ಇಲ್ಲ. ಆ ಶಿವಾಜಿ ಮಹಾರಾಜನಿಗೆ, ನಮ್ಮ ರಾಜಧಾನಿಗೇ ಆಹ್ವಾನವಿತ್ತು ಸ್ನೇಹ ಮಾಡಿಕೊಳ್ಳೋಣ, ಅದರಿಂದ ಹೆಚ್ಚು ಪ್ರಯೋಜನವುಂಟು, ನಮ್ಮ ರಾಜ್ಯಕ್ಕೆ ಭದ್ರತೆಯೂ ಉಂಟು. ಆ ರಾಯಭಾರಿಯನ್ನು ನಮ್ಮ ಸಮ್ಮುಖಕ್ಕೆ ಕರೆದುಕೊಂಡು ಬನ್ನಿ. ಅವನೊಡನೆ ಮಾತನಾಡಿ ಮರ್ಯಾದೆ ಮಾಡಿ ಕಳುಹಿಸೋಣ. ಶಿವಾಜಿ ಮಹಾರಾಜನಿಗೆ ನಮ್ಮ ರಾಜಧಾನಿಗೆ ಆಹ್ವಾನ ಕೊಡುತ್ತೇನೆ. ಅಲ್ಲಾನ ಇಚ್ಛೆ ಇದ್ದಂತಾಗಲಿ."

ಮುದ್ದಣನು "ಮಹಾಪ್ರಭುಗಳೇ, ನೀವು ಧೈರ್ಯದಿಂದಿರಿ, ಎಲ್ಲವೂ ಸುಮುಖವಾಗುತ್ತದೆ, ವೃಥಾ ಚಿಂತೆಯನ್ನು ಹಚ್ಚಿಕೊಳ್ಳಬೇಡಿರಿ, ಎಂತಹ ಪ್ರಸಂಗಗಳಿಗೂ ತಲೆಕೊಡುವುದಕ್ಕೆ ನಾನಿದ್ದೇನೆ ನನ್ನ ತಲೆಯು ನೆಲಕ್ಕುರುಳಿದಲ್ಲದೆ ತಮ್ಮ ಕೂದಲು ಕೊಂಕದು" ಎಂದು ಹೇಳಿ ಮುಜರೆ ಮಾಡಿ ಅರಮನೆಯಿಂದ ಹೊರಟನು.

೫

ಪ್ರಾತಃಕಾಲ ಸ್ನಾನಾಹ್ನಿಕಗಳು ಮುಗಿದ ನಂತರ ಮಹಾ ಪ್ರಧಾನಿ ಮುದ್ದಣನು ರಾಯಭಾರಿ ಹನುಮಂತೆಯನ್ನು ಮ್ಯಾನದಲ್ಲಿ ಕೂಡಿಸಿ, ಅರಮನೆಗೆ ಕರೆದೊಯ್ದನು. ಅರಮನೆಯಲ್ಲಿ ರಾಯಭಾರಿಗಳಿಗೆ ಭೇಟಿ ಕೊಡುವಂತಹ ಮಂತ್ರಾಲೋಚನ ಮಂದಿರವು ಪ್ರಶಸ್ತವಾಗಿ ಅಲಂಕೃತವಾಗಿದ್ದಿತು. ಅನರ್ಘ್ಯವಾದ ರತ್ನಗಂಬಳಿಗಳನ್ನು ಹಾಸಿ ದಿವ್ಯಾಸನಗಳನ್ನು ಸಜ್ಜುಗೊಳಿಸಿದ್ದರು. ಸುಲ್ತಾನನಿಗೋಸ್ಕರ ಚಿನ್ನದ ಪೀಠವು ಅಲಂಕೃತವಾಗಿದ್ದಿತು. ಅವರ

ಎಡ ಬಲ ಪಾರ್ಶ್ವಗಳಲ್ಲಿ ಬೆಳ್ಳಿಯ ಆಸನಗಳು ಸಜ್ಜುಗೊಳಿಸಲ್ಪಟ್ಟಿದ್ದವು. ಸುಗಂಧ ದ್ರವ್ಯಗಳಿಂದ ಆ ಮಂತ್ರಾಲೋಚನಾ ಭವನವು ಸುವಾಸಿತವಾಗಿದ್ದಿತು. ಮುದ್ದಣನು ಹನುಮಂತೆಯನ್ನು ಕರೆದೊಯ್ದು ಸುಲ್ತಾನರ ಪೀಠದ ಸಮೀಪದಲ್ಲಿದ್ದ ಪೀಠದ ಮೇಲೆ ಕುಳ್ಳಿರಿಸಿ, ತಾನೂ ಕುಳಿತುಕೊಂಡನು. ಕ್ಲುಪ್ತ ಸಮಯಕ್ಕೆ ಸರಿಯಾಗಿ, ದ್ವಾರಪಾಲಕರು ಪರಾಕು ಹೇಳುವ ಧ್ವನಿಯು ಕೇಳಿ ಬಂದಿತು. ಪ್ರಶಸ್ತವಾದ ದಿರಸುಗಳನ್ನು ಧರಿಸಿದ್ದ ಅಂಗರಕ್ಷಕರು ಹಿಂದೆ ಬರುತ್ತಿರಲು ಸುಲ್ತಾನನು ಸಭಾಮಂಟಪವನ್ನು ಪ್ರವೇಶ ಮಾಡಿದನು. ಹನುಮಂತೆಯು ಆ ಸುಲ್ತಾನನ ಕಡೆಗೆ ನೋಡಿ, ಬೆರಗಾದನು. ಅಮೂಲ್ಯ ವಸ್ತ್ರಾಭರಣಗಳಿಂದ ಅಲಕೃಂತನಾಗಿ ಜರತಾರಿಯ ಉಷ್ಣೀಶವನ್ನು ಧರಿಸಿದ್ದನು. ಅದರ ಮೇಲೆ ವಜ್ರದ ಶರಪೇಶ್ ಅಲಂಕೃತವಾಗಿದ್ದಿತು. ಸುಲ್ತಾನನನ್ನು ಕಾಣುತ್ತಲೇ ಮುದ್ದಣನೂ ಹನುಮಂತೆಯೂ ಸಂಪ್ರದಾಯಪ್ರಕಾರ ಅಭಿವಾದನ ಮಾಡಿದರು. ಸುಲ್ತಾನನು ಮಂದಹಾಸದಿಂದ ವಂದನೆಗಳ ಸ್ವೀಕಾರವನ್ನು ಸೂಚಿಸಿ ಆಸನದ ಮೇಲೆ ಕೂತುಕೊಳ್ಳಬೇಕೆಂದು ಮೃದುನುಡಿಯಿಂದ ನುಡಿದು ತಾನು ಸಿಂಹಾಸನವನ್ನು ಅಲಂಕರಿಸಿದನು. ರಾಯಭಾರಿಯೂ ಮಹಾ ಪ್ರಧಾನಿಯೂ ಸುಲ್ತಾನನ ಉಭಯಪಾರ್ಶ್ವಗಳಲ್ಲಿ ಎದುರುಬದರಾಗಿ ಕುಳಿತು ಕೊಂಡರು.

ಸುಲ್ತಾನನೇ ಮಾತಿಗೆ ಮೊದಲು ಮಾಡಿದನು. "ರಾಯಭಾರಿಗಳೇ, ಶಿವಾಜಿ ಮಹಾರಾಜರು ಬಹಳ ಪರಾಕ್ರಮಿಗಳೆಂದು, ಉದಾರಚರಿತರೆಂದು ಕೇಳಿದ್ದೇನೆ. ಅವರ ಸಮ್ಮುಖದಿಂದ ಬಂದಿರುವ ರಾಯಭಾರಿಗಳಾದ ನೀವು ಮಹಾವಿದ್ವಾಂಸರೆಂದು ನಮ್ಮ ಪ್ರಧಾನಿಗಳು ಕೊಂಡಾಡುತ್ತಾರೆ. ಮಹಾ ರಾಜರು ನಿಮ್ಮನ್ನು ನಮ್ಮ ದರಬಾರಿಗೆ ಕಳುಹಿಸಿರುವುದರಿಂದಲೇ ಅವರ ಸೌಜನ್ಯವು ವ್ಯಕ್ತವಾಗುತ್ತದೆ. ಅವರ ಸಂದೇಶವು ಏನಿದೆ ಎಂಬುದನ್ನು ಹೇಳಿರಿ."

ಹನುಮಂತೆಯು ಶುದ್ಧವಾದ ಪರ್ಷಿಯನ್ ಭಾಷೆಯಲ್ಲಿ ಮಾತಿಗೆ ಮೊದಲು ಮಾಡಿದನು. "ಷಾಹಾನ್‌ಷಾ ಸುಲ್ತಾನರವರೇ ಈ ದಖನ್‌ನಲ್ಲಿ ಗೋಲ್ಕಂಡವು ಸಂಪದ್ಭರಿತವಾದ ರಾಜ್ಯ. ತಾವು ವಿದ್ಯಾಭಿಮಾನಿಗಳೆಂದು ಕಲಾಪ್ರವೀಣರೆಂದು ಕೇಳಿ ನಮ್ಮ ಮಹಾರಾಜರು ಅತ್ಯಂತ ಪ್ರಸನ್ನರಾಗಿದ್ದಾರೆ.

ಅವರು ದಕ್ಷಿಣ ಯಾತ್ರೆ ಹೊರಟಿದ್ದಾರೆ. ನಮ್ಮ ಸೈನ್ಯಗಳು ಒಂದು ಲಕ್ಷಕ್ಕೂ ಮೇಲಿದೆ. ಬಹುಮಂದಿ ಸೇನಾಧಿಪತಿಗಳು, ಮಂತ್ರಿಗಳು, ಪರಿವಾರಗಳು ಮಹಾರಾಜರನ್ನು ಅನುಸರಿಸಿ ಬಂದಿದ್ದಾರೆ. ನಾವು ದಕ್ಷಿಣಕ್ಕೆ ಹೋಗಬೇಕಾದರೆ ತಮ್ಮ ರಾಜ್ಯದ ಮೂಲಕವಾಗಿಯೇ ಹೋಗಬೇಕಾಗಿದೆ. ತಮ್ಮ ರಾಜ್ಯ ಮಧ್ಯದಲ್ಲಿ ಮಹಾರಾಜರವರು ಈ ಬ್ರಹ್ಮಾಂಡ ಸೈನ್ಯದೊಡನೆ ಸಾಗಿಹೋಗಲು ಯಾವ ಅಡ್ಡಿಯೂ ಇಲ್ಲದೆ, ಸ್ನೇಹಪೂರ್ಣವಾಗಿ ತಾವು ಅವಕಾಶ ಕೊಡಿಸಬೇಕು. ಇಷ್ಟೇ ಶಿವಾಜಿ ಮಹಾರಾಜರು ಸುಲ್ತಾನರಲ್ಲಿ ಕೋರುತ್ತಾರೆ. ನಮ್ಮ ಸೈನ್ಯಕ್ಕೆ ಬೇಕಾಗುವ ಸಾಮಾನು ಸರಂಜಾಮುಗಳನ್ನೆಲ್ಲಾ ತಮ್ಮ ದೇಶದ ಪ್ರಸಿದ್ಧ ವರ್ತಕರಿಂದ ನಮ್ಮ ಅಧಿಕಾರಿಗಳು ನಿಗಧಿಯಾದ ಬೆಲೆ ಕೊಟ್ಟು, ಕೊಂಡುಕೊಳ್ಳುತ್ತಾರೆ. ಮಾರ್ಗಮಧ್ಯದಲ್ಲಿ ಗ್ರಾಮಸ್ಥರಿಗಾಗಲೀ, ಪಟ್ಟಣಗರಿಗಾಗಲೀ, ನಮ್ಮ ಸೈನಿಕರಿಂದ, ನಮ್ಮ ಅಧಿಕಾರಿಗಳಿಂದ ಯಾವ ತೊಂದರೆಯೂ ಆಗದಂತೆ ಕಟ್ಟಪ್ಪಣೆ ಮಾಡಲಾಗಿದೆ."

ಸುಲ್ತಾನನು ಆ ಹನುಮಂತೆಯ ಪರ್ಷಿಯನ್ ಭಾಷೆಯ ಪ್ರಾವೀಣ್ಯವನ್ನು ನೋಡಿ ಬೆರಗಾಗಿಹೋದನು.

"ವಿದ್ವಾಂಸರೇ, ಎಲ್ಲದಕ್ಕಿಂತ ಮೊದಲು ನಿಮ್ಮ ಭಾಷಾಪಾಂಡಿತ್ಯಕ್ಕೆ ಮೆಚ್ಚಬೇಕು. ನಿಮ್ಮ ಹಣೆಯಲ್ಲಿರುವ ವಿಭೂತಿ, ರುದ್ರಾಕ್ಷಿಗಳಿಂದಲೂ, ನಿಮ್ಮ ವೇಶಭೂಷಣಗಳಿಂದಲೂ, ಹಿಂದೂಸ್ಥಾನದ ವೈದಿಕ ಕುಲೋತ್ಪನ್ನರೆಂದು ಹೇಳಬೇಕು. ನಿಮ್ಮ ಮಾತುಗಳನ್ನು ಕೇಳಿದರೆ, ನೀವು ಪರ್ಷಿಯಾ ದೇಶದಲ್ಲಿಯೇ ಹುಟ್ಟಿ ಬೆಳೆದ ಶುದ್ಧ ಪರ್ಶಿಯನರಂತೆ ಕಾಣುತ್ತೀರಿ. ನಿಮ್ಮೊಡನೆ ಮಾತನಾಡಲು ನಮ್ಮಂತವರಿಗೇ ನಾಚಿಕೆಯಾಗುತ್ತದೆ. ಸ್ವಭಾಷೆಯು ಮೊಟ್ಟಮೊದಲು ಮಾನವರಲ್ಲಿ ಆತ್ಮೀಯತೆಯನ್ನು ಹುಟ್ಟಿಸುವ ಸಾಧನ. ಇದರಿಂದ ನೀವು ನಮ್ಮ ಆತ್ಮೀಯರೇ ಆಗಿರುತ್ತೀರಿ. ನಿಮ್ಮ ಮಹಾರಾಜರು ಹೇಳಿಕಳುಹಿಸಿರುವ ಸಂದೇಶವೂ ಕೂಡ ನಮ್ಮನ್ನು ನಾಚಿಸುವಂತಿದೆ. 'ನಿಮ್ಮ ರಾಜ್ಯದಲ್ಲಿ ಹಾದುಹೋಗುತ್ತೇವೆ, ಅವಕಾಶ ಕೊಡಿರಿ' ಎಂದು ಮಹಾರಾಜರು ಸಂದೇಶವನ್ನು ಕಳಿಸಿದ್ದಾರೆ. ಇದು ಶಿವಾಜಿ ಮಹಾರಾಜರ ಸೌಜನ್ಯತೆಯ ಪರಮಾವಧಿ, ಸಮುದ್ರದಂತೆ, ರಭಸವಾಗಿ ಹೋಗುವ ಈ ಪ್ರಚಂಡಸೈನ್ಯವನ್ನು ತಡೆಗಟ್ಟುವ ಶಕ್ತಿಸಾಮರ್ಥ್ಯಗಳಾದರೂ ಯಾರಿಗಿವೆ ? ಅವರು ಸೌಜನ್ಯ

ದಿಂದ ಹಾಗೆ ಕೇಳಿದರೂ, ನಾವು ಅದನ್ನು ಹಾಗೆಯೇ ಒಪ್ಪಿಕೊಂಡರೆ, ಆ ಮಾತಿಗೆ ಅರ್ಥವಿಲ್ಲ. ಮಹಾರಾಜರನ್ನು ತಕ್ಕಹಾಗೆ ಗೌರವಿಸಿದಂತೆ ಆಗುವುದಿಲ್ಲ. ಅವರು ನಮ್ಮ ಮೇಲೆ ಅಭಿಮಾನವಿಟ್ಟು, ರಾಜಧಾನಿಗೆ ದಯಮಾಡಿಸಬೇಕು. ಯತ್ಕಿಂಚಿತ್ ನಾವು ಒಪ್ಪಿಸುವ ಸ್ನೇಹದ ಕಾಣಿಕೆಯನ್ನು ಪ್ರೀತಿಯಿಂದ ಪರಿಗ್ರಹಿಸಬೇಕು, ಇದು ನಮ್ಮ ಇಷ್ಟಾರ್ಥವಾಗಿದೆ. ನಿಮ್ಮ ಮಹಾರಾಜರು ಇಲ್ಲಿಗೆ ಬಂದರೆ, ಅವರು ನಮ್ಮವರೇ ಆಗಿಬಿಡುತ್ತಾರೆ. ಇದಕ್ಕಿಂತಲೂ ಅತಿಶಯವಾದ ಬಯಕೆ ನನಗೆ ಮತ್ತೇನೂ ಇಲ್ಲ, ಇದನ್ನು ನಿಮ್ಮ ಮಹಾರಾಜರಿಗೆ ತಿಳಿಯಪಡಿಸಿರಿ. ನಮ್ಮ ರಾಜ್ಯದಲ್ಲಿ ನಿಮ್ಮ ಸೈನ್ಯಗಳು ಇರುವವರೆಗೆ ಸರಬರಾಜೆಲ್ಲವೂ ನಮ್ಮದೇ ಆಗಿರುತ್ತದೆ. ಮಹಾರಾಜರೆಂದರೆ, ಒಬ್ಬಂಟಿಗರೆಂದು ಭಾವಿಸುವಷ್ಟು ಅಲ್ಪಮತಿಗಳು ನಾವಲ್ಲ. ಸಸೈನ್ಯ ಪರಿವಾರದಿಂದ ಮಹಾರಾಜರಿಗೆ ಆತಿಥ್ಯ ಸಲ್ಲಿಸುವುದು ನಮ್ಮ ಹೆಮ್ಮೆ. ಅದನ್ನು ಸಂತೋಷದಿಂದ ಸ್ವೀಕರಿಸುವುದು ನಮಗೆ ಅವರು ಕೊಡುವ ಅಪೂರ್ವ ಗೌರವ."

ಹನುಮಂತೆಯು ಕೈಮುಗಿದು ಈ ಭಾರತಭೂಮಿಯು ದೇಶವಿದೇಶಗಳಲ್ಲೆಲ್ಲಾ 'ರತ್ನ ಪ್ರಸೂಹು' ಎಂಬ ಬಿರುದನ್ನು ಪಡೆದಿದೆ. ಈ ಇಡೀ ಭಾರತ ಭೂಮಿಗೆ ಆ ಗೌರವವನ್ನು ಸಂಪಾದಿಸಿಕೊಟ್ಟಿರುವುದು ಈ ನಿಮ್ಮ ರಾಜ್ಯ. ಈ ರಾಜ್ಯದ ಅಧೀಶ್ವರರು ನೀವು. ನಿಮ್ಮ ರಾಜ್ಯಕ್ಕೆ ಬಂದ ಮೇಲೆ ನಮ್ಮ ಮಹಾರಾಜರು ನಿಮ್ಮ ಮಾತನ್ನು ಗೌರವಿಸುವುದು ಅವರ ಕರ್ತವ್ಯವೇ ಆಗಿದೆ. ನಾನು ನಿಮ್ಮ ಸ್ನೇಹ ಸೌಜನ್ಯಗಳನ್ನು ಮನೋವೈಶಾಲ್ಯವನ್ನೂ ನಮ್ಮ ಮಹಾರಾಜರಲ್ಲಿ ಅರಿಕೆ ಮಾಡುತ್ತೇನೆ. ತಮ್ಮ ಆಹ್ವಾನವನ್ನು ಮನ್ನಿಸಿ ಸ್ನೇಹಿತರಾಗಿ ಅತಿಥಿಗಳಾಗಿ ನಮ್ಮ ಮಹಾರಾಜರು ತಮ್ಮ ರಾಜಧಾನಿಗೆ ಬರುವಂತೆ ಮಾಡುತ್ತೇನೆ. ನನಗೆ ಅಪ್ಪಣೆ ಕೊಡಬೇಕು. ಈ ರಾಜಧಾನಿಗೆ ನಾನು ಬಂದಂದಿನಿಂದಲೂ ಆಶ್ಚರ್ಯಗಳ ಮೇಲೆ ಆಶ್ಚರ್ಯಗಳನ್ನು ಕಾಣುತ್ತಿದ್ದೇನೆ. ಸಕಲ ಶಾಸ್ತ್ರ ಪಂಡಿತರಾದ ಈ ಮುದ್ದಣಸವರು, ಈ ರಾಜ್ಯದಲ್ಲಿ ಮಹಾಪ್ರಧಾನಿ. ಇವರ ಪರಾಕ್ರಮವನ್ನು ನಮ್ಮ ಮಹಾರಾಜರು ಮೆಚ್ಚಿಕೊಳ್ಳುತ್ತಾರೆಂದು ನನ್ನ ನಂಬಿಕೆ. ನಮ್ಮ ಪುರಾಣಗಳಲ್ಲಿ ಪರಶುರಾಮ, ವಿಶ್ವಾಮಿತ್ರ, ದ್ರೋಣಾಚಾರ್ಯ ಮುಂತಾದ ಮಹಾಪುರುಷರ ಕಥೆಗಳಿವೆ. ಶಸ್ತ್ರವಿದ್ಯೆಯಲ್ಲಿಯೂ ಶಾಸ್ತ್ರದಲ್ಲಿಯೂ ಈ ಮುದ್ದಣನವರು ಆ ಮಹಾವಿಭೂತಿಗಳಿಗೆ ಸರಿಹೋಲುವಂತಿದ್ದಾರೆ. ನಮ್ಮ

ಮಹಾರಾಜರು ಇಲ್ಲಿಗೆ ಬಂದರೆ, ತಮ್ಮ ಐಶ್ವರ್ಯ, ಈ ರತ್ನಗಳ ಥಾಳಥಾಳ್ಯ ಈ ಅರಮನೆಯಿಂದ, ನಾಲ್ಕೂ ದ್ವಾರಗಳಿಂದಲೂ ಹರಿಯುತ್ತಿರುವ ಹೊನ್ನಿನ ಹೊಳೆ ಇವುಗಳಿಗೆಲ್ಲಾ ಆಶೆಪಡುವುದಿಲ್ಲ. ಈ ಮುದ್ದಣನವರನ್ನು ಆಶೆಪಟ್ಟು ನಮಗೆ ಕೊಟ್ಟುಬಿಡಿ ಎಂದು ಕೇಳಿದರೆ, ನಿಮಗೆ ಎಂತಹ ಕಠಿಣ ಪ್ರಸಂಗವನ್ನು ನಾನು ತಂದೊಡ್ಡಿದಂತಾಗುತ್ತದೆ ಎಂದು ಶಂಕಿಸುತ್ತೇನೆ. ಈ ರಾಜಧಾನಿಯಲ್ಲಿ ನಾನು ನೋಡಿದ ಮೊದಲನೇ ಆಶ್ಚರ್ಯವೆಂದರೆ ಇದು.

ಅವರು ಇಲ್ಲಿಗೆ ನನ್ನನ್ನು ಕರೆತಂದು ತಮ್ಮ ದರ್ಶನವನ್ನು ಮಾಡಿಸಿದರು. ತಮ್ಮ ಐಶ್ವರ್ಯ ವೈಭವಗಳಿಗಿಂತಲೂ ತಮ್ಮ ಆಕಾರ, ಮಾತುಕಥೆಗಳು, ಔದಾರ್ಯ, ಸೌಶೀಲ್ಯಗಳು ಮೇರುಪರ್ವತಕ್ಕಿಂತಲೂ ಅಧಿಕವಾಗಿದೆ ಎಂದು ನನ್ನ ಹೃದಯವು ಹರ್ಷಿಸುತ್ತಿದೆ. ನಮ್ಮ ಮಹಾರಾಜರ ಅನುಜ್ಞೆಯನ್ನು ಬೇಡಿ, ನಾನೇ ನಿಮ್ಮ ಆಸ್ಥಾನದಲ್ಲಿ ಇದ್ದುಬಿಡಬಾರದೇಕೆ ಎನ್ನಿಸುತ್ತದೆ."

ಸುಲ್ತಾನನು ನಕ್ಕು "ರಾಯಭಾರಿಗಳೇ, ನಿಮ್ಮ ಮಾತು ಬಹಳ ಸರಿಯಾಗಿದೆ. ಬಡರೈತನು ಒಂಟಿ ಎತ್ತನ್ನು ಇಟ್ಟುಕೊಂಡಿರುತ್ತಾನೆ, ಅವನು ಎಲ್ಲೆಲ್ಲಿಯೂ ಮತ್ತೊಂದು ಎತ್ತನ್ನು ಹುಡುಕುತ್ತಾನೆ, ಆ ಜೊತೆ ಸಿಕ್ಕಿದರೆ ಅವನ ಭಾಗ್ಯದೇವತೆಯು ಕಣ್ಣುಬಿಟ್ಟಂತಾಗುತ್ತದೆ. ಹೀಗೆಯೇ ದಿವ್ಯಾಶ್ವದ ಜೊತೆಗೆ ಮತ್ತೊಂದು ದಿವ್ಯಾಶ್ವವನ್ನು, ಗಜರಾಜನ ಜೊತೆಗೆ ಸಮಾನವಾದ ಮತ್ತೊಂದು ಮಹಾಗಜವನ್ನೂ ರಾಜರು ಹುಡುಕುತ್ತಾರೆ. ಅದಕ್ಕೆ ಕೋಟಿ ಕೋಟಿ ಸುವರ್ಣಮುದ್ರೆಗಳ ಬೆಲೆಯನ್ನಾದರೂ ರಾಜರು ಕೊಟ್ಟುಬಿಡುತ್ತಾರೆ. ಹಾಗೆ ಮುದ್ದಣನ ಜೊತೆಗೆ ನೀವೂ ಸೇರಿದರೆ, ನಮ್ಮ ರಾಜ್ಯವು ವಿದ್ವತ್ಪ್ರಕಾಶದಿಂದ ತುಂಬುತ್ತದೆ. ನಾವೇ ಮಹಾರಾಜರಲ್ಲಿ ಈ ಹನುಮಂತೆಯನ್ನು ನಮ್ಮಲ್ಲಿ ಬಿಟ್ಟುಹೋಗಿರಿ ಎಂದು ಕೇಳಿನೋಡುತ್ತೇನೆ" ಎಂದು ಹೇಳಿ, ಅನರ್ಘ್ಯವಾದ ಖಿಲ್ಲತ್ತುಗಳನ್ನೂ ಉಡುಗೊರೆಗಳನ್ನೂ ಹನುಮಂತೆಗೆ ಕೊಟ್ಟು ಗೌರವಿಸಿ, ಕಳುಹಿಸಿದನು.



ಹನುಮಂತೆಯು ಶಿವಾಜಿ ಮಹಾರಾಜರ ಶಿಬಿರಕ್ಕೆ ಬಂದು ಮಹಾರಾಜರಲ್ಲಿ ರಾಜಧಾನಿಯ ವರ್ಣನೆಯನ್ನೂ ಸುಲ್ತಾನರ ಅರಮನೆಯ ವೈಭವವನ್ನೂ ವರ್ಣಿಸಿದನು, ಸುಲ್ತಾನನ ವಿನಯ ಗಾಂಭೀರ್ಯಗಳನ್ನೂ ವರ್ಣಿಸಿದನು, ಮುದ್ದಣನ ವಿದ್ವತ್ತನ್ನು ಪ್ರಶಂಸೆ ಮಾಡಿದನು, ಸುಲ್ತಾನರ ಆದರಪೂರ್ವಕವಾದ ಆಹ್ವಾನವನ್ನು ವಿಜ್ಞಾಪಿಸಿದನು.

ಶಿವಾಜಿ ಮಹಾರಾಜನ ಸೈನ್ಯಗಳು ಗೋಲ್ಕಂಡದ ರಾಜ್ಯವನ್ನು ಪ್ರವೇಶ ಮಾಡಿದವು. ದಾರಿಯುದ್ದಕ್ಕೂ ಸೈನಿಕರನ್ನು ತಣಿಸುವ ಪ್ರಪಾಶಾಲೆಗಳು ಸಿದ್ಧವಾಗಿದ್ದವು. ಪ್ರತಿಯೊಂದು ಮೊಕ್ಕಾಮಿನಲ್ಲಿಯೂ ರಾಜಯೋಗ್ಯವಾದ ಅತಿಥಿಶಾಲೆಗಳನ್ನು ಸುಲ್ತಾನನು ಏರ್ಪಡಿಸಿದನು. ಸೈನ್ಯದ ಸರಬರಾಜಿಗೋಸುಗವೂ ಸೇವೆಗೋಸ್ಕರವೂ ಗೋಲ್ಕಂಡದ ಹತ್ತುಸಹಸ್ರ ಭಟರು ದಾರಿಯುದ್ದಕ್ಕೂ ಸಿದ್ಧರಾಗಿದ್ದರು. ರಾಜಧಾನಿಯನ್ನು ಅಲಂಕರಿಸಲು ಶಿಲ್ಪಿಗಳೂ ಕಾರೇಗಾರರೂ ನಿಯಮಿಸಲ್ಪಟ್ಟರು. ಕೋಟೆಯ ಮಹಾದ್ವಾರದಿಂದ ಅರಮನೆಯವರೆಗೆ, ಸುಂದರವಾದ ತಳಿರುತೋರಣಗಳಿಂದ ಅಲಂಕೃತವಾದ ಚಪ್ಪರಗಳು ಕಂಗೊಳಿಸುತ್ತಿದ್ದವು. ಆ ಚಪ್ಪರಗಳಲ್ಲಿ ಫಲಪುಷ್ಪಗಳು ಗೊಂಚಲು ಗೊಂಚಲಾಗಿ ತೂಗಾಡುತ್ತಿದ್ದವು. ರಾಜಮಾರ್ಗಗಳಲ್ಲಿ ಶ್ರೀಮಂತರ ಮಹಲುಗಳೆಲ್ಲವೂ ನಾನಾವಿಧವಾದ ವರ್ಣಗಳಿಂದ ರಂಜಿತವಾಗಿ, ಧ್ವಜಪತಾಕೆಗಳಿಂದ ಪರಿಶೋಭಿತವಾಗಿದ್ದವು.

ಶಿವಾಜಿ ಮಹಾರಾಜನು ರಾಜಧಾನಿಯ ಸಮೀಪಕ್ಕೆ ಬರುತ್ತಲೇ ಸುಲ್ತಾನನೇ ಖುದ್ದಾಗಿ ಬಂದು ಎದುರುಗೊಳ್ಳುವುದಾಗಿ ತನ್ನ ಅಧಿಕಾರಿಗಳ ಮುಖಾಂತರ ಹೇಳಿಕಳುಹಿಸಿದನು.

ಶಿವಾಜಿ ಮಹಾರಾಜನು 'ಪರ್ಹಾಪಾ ಸುಲ್ತಾನರು ನಮ್ಮನ್ನೆದುರುಗೊಳ್ಳಲು ಇಲ್ಲಿಗೆ ಬರುವುದು ತರವಲ್ಲ. ನಾವೇ ಅವರ ಅರಮನೆಗೆ ಬಂದು ದರ್ಬಾರಿನಲ್ಲಿ ಅವರ ಭೇಟಿ ಮಾಡುತ್ತೇವೆ. ಸುಲ್ತಾನರಿಗೆ ಗೌರವವನ್ನು ಸಲ್ಲಿಸುವುದಕ್ಕಾಗಿಯೇ ನಾವು ರಾಜಧಾನಿಗೆ ಬರುತ್ತಿದ್ದೇವೆ' ಎಂದು ಹೇಳಿಕಳುಹಿಸಿದನು.

ಸುಲ್ತಾನನು ಶಿವಾಜಿ ಮಹಾರಾಜರನ್ನು ನಗರ ದ್ವಾರದಲ್ಲಿಯೇ ಎದುರುಗೊಂಡು ಅರಮನೆಗೆ ಕರೆತರಬೇಕೆಂದು ಅಪ್ಪಣೆಮಾಡಿ, ಮುದ್ದಣನನ್ನು ಕಳುಹಿಸಿಕೊಟ್ಟನು. ಮಹಾಪ್ರಧಾನಿ ಮುದ್ದಣನು ರಾಜಮರ್ರ್ಯಾದೆಗಳೊಡನೆ ನಗರದ ಮಹಾದ್ವಾರದ ಬಳಿಯಲ್ಲಿ, ಶಿವಾಜಿಯನ್ನು ಎದುರುಗೊಂಡನು. ಮಂತ್ರಿಗಳನ್ನೂ ಸೇನಾಧಿಪತಿಗಳನ್ನೂ ಮರ್ರ್ಯಾದೆಯಿಂದ ಸ್ವಾಗತಿಸಿದನು. ಶಿವಾಜಿ ಮಹಾರಾಜರಿಗೆ, ರಾಜಮರ್ರ್ಯಾದೆಯ ಕಾಣಿಕೆಗಳನ್ನು ಒಪ್ಪಿಸಿ, ಹಸ್ತಲಾಘವವನ್ನಿತ್ತು ಚಿನ್ನದ ಪಲ್ಲಕ್ಕಿಯಲ್ಲಿ ಕೂಡಿಸಿದನು. ಮಂತ್ರಿಗಳನ್ನು, ಅಧಿಕಾರಿಗಳನ್ನು ಬೇರೆಬೇರೆ ಪಲ್ಲಕ್ಕಿಗಳಲ್ಲೇರಿಸಿದನು. ಉತ್ಸವದ ಮುಂದೆ ಕಲಾಪತ್ತಿನ ಛಾದರಗಳಿಂದಲೂ ಚಿನ್ನದ ಗೊಂಡೆಗಳಿಂದಲೂ ಅಲಂಕೃತವಾದ ಎರಡು ಆನೆಗಳು ಚಿನ್ನದ ಅಂಬಾರಿಯ ಸಮೇತ ಮುಂದೆ ಹೊರಟಿದ್ದವು. ಅವುಗಳ ಹಿಂದೆ ಅಲಂಕೃತವಾದ ಕುದುರೆಗಳು ಸಾಲುಸಾಲಾಗಿ ನಡೆದು ಬರುತ್ತಿದ್ದವು. ಅಂದವಾದ ದಿರಸುಗಳನ್ನು ಧರಿಸಿ ಶಸ್ತ್ರಪಾಣಿಗಳಾದ ರಾಜಭಟರು ಶಿಸ್ತಿನಿಂದ ನಡೆದುಬರುತ್ತಿದ್ದರು. ಛತ್ರಚಾಮರಗಳನ್ನು ಮಕರ ಮತ್ಸ್ಯ ತೋರಣಗಳನ್ನೂ ಭಲ್ಲೆಗಳನ್ನೂ ಧರಿಸಿ ರಾಜಭಟರು ಹೊಗಳುತ್ತಾ ಉತ್ಸವದಲ್ಲಿ ಬರುತ್ತಿದ್ದರು. ನಾನಾವಿಧವಾದ ವಾದ್ಯಗಳು ಸುತ್ತಲೂ ಮೊಳಗುತ್ತಿದ್ದವು. ರಾಜಬಂಧುಗಳು, ಸಾಮಂತರು ಚಿನ್ನದ ಪಲ್ಲಕ್ಕಿಗಳಲ್ಲಿ ಕುಳಿತು ಉಭಯಪಾರ್ಶ್ವಗಳಲ್ಲಿಯೂ ಶಿವಾಜಿ ಮಹಾರಾಜನನ್ನು ಓಲೈಸುತ್ತಾ ಬರುತ್ತಿದ್ದರು. ಉತ್ಸವ ಮಧ್ಯದಲ್ಲಿ ನರ್ತಕಿಯರು ಗುಂಪುಗುಂಪಾಗಿ ನರ್ತನ ಮಾಡುತ್ತಿದ್ದರು. ಮಹಲುಗಳ ಮೇಲ್ಭಾಗದ ಛಾವಣಿಗಳಿಂದ ಯುವನ ಸ್ತ್ರೀಯರು ಚಿನ್ನದ ಹೂಗಳನ್ನು ಎರಚುತ್ತಿದ್ದರು. ಹಿಂದೂ ಸ್ತ್ರೀಯರು ಮನೆಮನೆಯ ಬಾಗಿಲುಗಳಲ್ಲಿಯೂ ಆರತಿಗಳನ್ನು ಎತ್ತುತ್ತಿದ್ದರು. ಶಿವಾಜಿ ಮಹಾರಾಜರು ಪಲ್ಲಕ್ಕಿಯಿಂದ ಚಿನ್ನದ ಹೂಗಳನ್ನು ಎರಚುತ್ತಿದ್ದರು. ಶ್ರೀಮಂತರು ದಾರಿಯುದ್ದಕ್ಕೂ ಫಲಪುಷ್ಪಗಳನ್ನೂ ಕಪ್ಪಕಾಣಿಕೆಗಳನ್ನೂ ತಂದು ಒಪ್ಪಿಸುತ್ತಿದ್ದರು.

ಹೀಗೆ ಅಟ್ಟಹಾಸದೊಡನೆ ಶಿವಾಜಿಯ ಮೆರವಣಿಗೆಯು ಅರಮನೆಯ ಮಹಾದ್ವಾರಕ್ಕೆ ಬರುತ್ತಲೇ ಸುಲ್ತಾನನು ದಿವ್ಯವಸ್ತ್ರಗಳನ್ನೂ ರತ್ನಾಭರಣಗಳನ್ನೂ ಧರಿಸಿಕೊಂಡು ಬಂದು ಶಿವಾಜಿಯನ್ನು ಎದುರುಗೊಂಡನು.

ಶಿವಾಜಿಯು ಆಂದೋಳಿಕದಿಂದ ಇಳಿದು ಸುಲ್ತಾನನನ್ನು ಆಲಂಗಿಸಿ ಗೌರವಿಸಿದನು. ವಂದಿಮಾಗಧರು ಇಬ್ಬರನ್ನೂ ಹೊಗಳಿ ಸಾರುತ್ತಿದ್ದರು.

ಸುಲ್ತಾನನು ಶಿವಾಜಿ ಮಹಾರಾಜನಿಗೆ ಹಸ್ತಲಾಘವವನ್ನಿತ್ತು ತನ್ನ ದರ್ಬಾರಿನೊಳಗೆ ಕರೆದುಕೊಂಡು ಹೋಗಿ ಸಿಂಹಾಸನದ ಮೇಲೆ ಕುಳ್ಳಿರಿಸಿ ತಾನೂ ಅದೇ ಸಿಂಹಾಸನದ ಮೇಲೆ ಕುಳಿತುಕೊಂಡನು. ದರಬಾರಿಗಳೆಲ್ಲರೂ ತಮ್ಮ ತಮ್ಮ ಸ್ಥಾನಗಳನ್ನು ಅಲಂಕರಿಸಿದರು. ಸಿಂಹಾಸನದ ಎದುರಿನಲ್ಲಿ ಸದರಿನ ಮೇಲೆ ನರ್ತಕಿಯರು ನರ್ತನ ಮಾಡುತ್ತಿದ್ದರು. ಮೊಟ್ಟಮೊದಲು ಸಂಪ್ರದಾಯದಂತೆ ಪಟ್ಟದಾನೆಯು ಸಿಂಹಾಸನದ ಮುಂದೆ ಬಂದು ಮುಜರೆ ಮಾಡಿತು. ಅನಂತರ ಸಾಮಂತ ನರಪತಿಗಳು ಉಮ್ರಾಗಳೂ ಮಂತ್ರಿ ಸೇನಾಧಿಪತಿಗಳೂ ವರ್ತಕಶ್ರೇಷ್ಠರೂ ಕ್ರಮಕ್ರಮವಾಗಿ ಬಂದು ನಜರನ್ನೊಪ್ಪಿಸಿ ಮುಜರೆ ಮಾಡಿ ತಮ್ಮ ತಮ್ಮ ಸ್ಥಾನಗಳಲ್ಲಿ ಹೋಗಿ ಕುಳಿತುಕೊಳ್ಳುತ್ತಿದ್ದರು. ಅಷ್ಟು ಹೊತ್ತೂ ಸುಲ್ತಾನನೂ ಶಿವಾಜಿಯೂ ಮಾತನಾಡುತ್ತಿದ್ದರು.

ದರಬಾರು ಪೂರೈಸಿದ ನಂತರ ಸುಲ್ತಾನನು ಶಿವಾಜಿಯನ್ನು ಕರೆತಂದು ಆಂದೋಳಿಕೆಯಲ್ಲಿ ಕುಳ್ಳಿರಿಸಿದನು. ಮಂತ್ರಿ ಮುದ್ದಣನೂ ಅಧಿಕಾರಿಗಳೂ ವಾದ್ಯಘೋಷಗಳೊಡನೆಯೂ ರಾಜಮರ್ಯಾದೆಗಳೊಡನೆಯೂ ಶಿವಾಜಿಯನ್ನು ಅವನಿಗಾಗಿ ಸಿದ್ಧಗೊಳಿಸಿದ್ದ ಬಿಡಾರಕ್ಕೆ ಕರೆತಂದು ಸೇರಿಸಿದರು.

ಆ ಬಿಡಾರದಲ್ಲಿ ಶಿವಾಜಿಯ ಆದರೋಪಚಾರಗಳಿಗಾಗಿ ರಾಜಯೋಗ್ಯವಾದ ಸಿದ್ಧತೆಗಳೆಲ್ಲವೂ ಏರ್ಪಡಿಸಿದ್ದವು. ಆ ಏರ್ಪಾಡುಗಳನ್ನು ನೋಡಿ ಶಿವಾಜಿಯು ಅತ್ಯಾನಂದಭರಿತನಾದನು.

ಶಿವಾಜಿಯು ಆ ಗೋಲ್ಕೊಂಡದಲ್ಲಿ ಸುಲ್ತಾನನ ಪ್ರಾರ್ಥನೆಯಂತೆ ಎರಡು ತಿಂಗಳ ಕಾಲ ವಸತಿ ಮಾಡಿದನು. ಪ್ರತಿದಿನವೂ ಶಿವಾಜಿಯ ಆತಿಥ್ಯಕ್ಕಾಗಿ ಮೂರು ಸಾವಿರ ವರಹಗಳನ್ನು ವೆಚ್ಚಮಾಡಬೇಕೆಂದು ಸುಲ್ತಾನನು ಅಪ್ಪಣೆ ಮಾಡಿದ್ದನು. ಸುಲ್ತಾನನೂ ಶಿವಾಜಿಯೂ ಪ್ರತಿದಿನವೂ ಸೇರಿ ಮಾತುಕತೆಗಳಲ್ಲಿ ಕಾಲಕಳೆಯುತ್ತಿದ್ದರು. ಅವರಿಬ್ಬರೂ ನಿಜವಾದ ಸ್ನೇಹಿತರೇ ಆಗಿಬಿಟ್ಟಿದ್ದರು. ಆ ಗೋಲ್ಕೊಂಡದ ರಾಜಧಾನಿಯಲ್ಲಿ ಪ್ರತಿಯೊಂದು ಮಹಲೂ ಅರಮನೆಯಂತೆ ಕಂಗೊಳಿಸುತ್ತಿದ್ದಿತು. ಪ್ರತಿಯೊಂದು ಮನೆಯಲ್ಲಿಯೂ ಐಶ್ವರ್ಯವು ನಲಿದಾಡುತ್ತಿದ್ದಿತು. ಆ ರಾಜಧಾನಿಯ ಉಪವನಗಳೂ ಆ ಉಪ

ವನಗಳಲ್ಲಿ ಕಾರಂಜಿಗಳೂ ಮನೋಹರವಾದ ರಸ್ತೆಗಳು ದೀಪಮಾಲೆಗಳು ಇವು ಗಳೆಲ್ಲವನ್ನೂ ನೋಡಿ ಮಹಾರಾಜನು ಆಶ್ಚರ್ಯಭರಿತನಾಗಿ ಈ ಸುಲ್ತಾನನಿಗೆ ಇಷ್ಟೊಂದು ಐಶ್ವರ್ಯವು ಎಲ್ಲಿಂದ ಬಂದಿತು ? ಎಂದು ಕುತೂಹಲದಿಂದ ವಿಚಾರಿಸಿದನು. ಆ ನಗರದಲ್ಲಿ ಇಪ್ಪತ್ತು ಸಾವಿರ ಮಂದಿ ಗಣಿಕೆಯರಿದ್ದಾ ರೆಂದೂ ಅವರಲ್ಲಿ ಎರಡು ಸಾವಿರ ಗಣಿಕೆಯರು ಸುಲ್ತಾನನ ಪ್ರಸಾದವನ್ನು ಪಡೆದ ಗಣಿಕೆಯರೆಂದೂ ತಿಳಿಯಿತು. ಇಡೀ ರಾಜ್ಯ ಭಾರತೀಯ ಸ್ತ್ರೀಯರ ಕೈಯಲ್ಲಿತ್ತು. ಅವರೆಲ್ಲರೂ ನಾನಾ ವಿಧವಾದ ಮದ್ಯಗಳನ್ನು ವ್ಯಾಪಾರ ಮಾಡುತ್ತಿದ್ದರು. ಆ ವ್ಯಾಪಾರದಿಂದ ಬಂದ ಹಣದಲ್ಲಿ ಸುಲ್ತಾನರಿಗೆ ಪದ್ಧತಿಯ ಪ್ರಕಾರ ಕಪ್ಪಕಾಣಿಕೆಗಳನ್ನು ಒಪ್ಪಿಸುತ್ತಿದ್ದರು. ದೇಶ ವಿದೇಶಗಳ ಶ್ರೀಮಂತರು ಗಳು ವಜ್ರಗಳ ವ್ಯಾಪಾರಕ್ಕಾಗಿಯೂ ಚಿನ್ನದ ವ್ಯಾಪಾರಕ್ಕಾಗಿಯೂ ಅಲ್ಲಿಗೆ ಬಂದು ಹೋಗುತ್ತಿದ್ದರು. ಅನೇಕರು ಅಲ್ಲಿಯೇ ನೆಲೆಸುತ್ತಿದ್ದರು. ಹೊರಗಿನ ವ್ಯಾಪಾರಿಗಳ ವಸತಿ ಸೌಕರ್ಯಗಳಿಗಾಗಿ ಅರಮನೆಗೆ ಸಮಾನವಾದ ಭವ್ಯವಾದ ಅತಿಥಿಶಾಲೆಗಳಿರುತ್ತಿದ್ದವು. ಆ ಅತಿಥಿಶಾಲೆಗಳಲ್ಲಿ ಹಗಲಿರುಳುಗಳ ಭೇದವಿಲ್ಲದೆ ಗಾನನರ್ತನಗಳು ಪಾನಗೋಷ್ಠಿಗಳೂ ನಡೆಯುತ್ತಿದ್ದವು. ಆ ರಾಜ್ಯದಲ್ಲಿ ವಜ್ರದ ಗಣಿಯಿರುವುದೆಂದು ಕೇಳಿ ಶಿವಾಜಿಯು ಸುಲ್ತಾನನ ಅಪ್ಪಣೆ ಪಡೆದು ಮಿತಪರಿ ವಾರದೊಂದಿಗೆ ಆ ಗಣಿಗಳನ್ನು ಹೋಗಿ ನೋಡಿದನು. ಮೂವತ್ತು ಸಾವಿರ ಮಂದಿ ಕೆಲಸಗಾರರು ಅಲ್ಲಿ ಕೆಲಸ ಮಾಡುತ್ತಿದ್ದರು. ಅರಬ್ಬೀ ದೇಶದವರು ಅಬಿಸೀನಿಯನರೂ ತುರ್ಕಿರಾಜ್ಯದವರೂ ಪೋರ್ಚುಗೀಸರೂ ಇವರೆಲ್ಲರೂ ಉನ್ನತಾಧಿಕಾರಿಗಳಾಗಿ ಆ ಗಣಿಗಳಲ್ಲಿ ಮೇಲ್ವಿಚಾರಣೆ ನಡೆಸುತ್ತಿದ್ದರು. ವಜ್ರ ಗಳನ್ನು ತೆಗೆಯುವುದು ಅದಕ್ಕೆ ಸಾಣೆಕೊಡುವುದು ಇದಕ್ಕೆಲ್ಲಾ ಅತ್ಯಂತ ಕೌಶಲ್ಯವಿರಬೇಕೆಂದು ಅಲ್ಲಿಯ ಅಧಿಕಾರಿಗಳು ಶಿವಾಜಿಗೆ ತೋರಿಸಿಕೊಟ್ಟರು. ಆ ವಜ್ರದ ಗಣಿಗಳಲ್ಲಿದ್ದ ಕಟ್ಟುಕಾವಲನ್ನು ನೋಡಿ ಶಿವಾಜಿಗೆ ವಿಸ್ಮಯ ವುಂಟಾಯಿತು. ಅದನ್ನೆಲ್ಲಾ ನೋಡಿಕೊಂಡು ಬಂದು ಸುಲ್ತಾನನನ್ನು ಅವನ ಐಶ್ವರ್ಯಕ್ಕಾಗಿಯೂ ಭಾಗ್ಯಕ್ಕಾಗಿಯೂ ಕೊಂಡಾಡಿದನು.

ಮುದ್ದಣನೊಡನೆ ಶಿವಾಜಿಯು ದೇಶದ ಜನರ ವಿಷಯವಾಗಿ ವಿಚಾರ ಮಾಡಿದನು.

ಮುದ್ದಣನು ಗೋಲ್ಕಂಡ ರಾಜ್ಯವು ಸುಭಿಕ್ಷವಾಗಿದೆಯೆಂದು ಮಳೆಬೆಳೆ

ಗಳು ಚೆನ್ನಾಗಿ ಹೊಡೆಯುತ್ತವೆಂದೂ ಆ ಭೂಮಿಯು ಸಸ್ಯಶಾಲಿನಿಯೆಂದೂ ರೈತರು ಸಮೃದ್ಧಿಯಿಂದ ಇದ್ದಾರೆಂದೂ ತಿಳಿಸಿದನು. ಅವರುಗಳಿಂದ ನೆಪ ಮಾತ್ರಕ್ಕೆ ಅತ್ಯಲ್ಪವಾದ ರಾಜಾದಾಯವನ್ನು ತೆಗೆದುಕೊಳ್ಳುತ್ತೇವೆಂದು ಹೇಳಿದನು. ಬರಗಾಲವು ನಮ್ಮ ರಾಜ್ಯಕ್ಕೆ ಎಂದೂ ಸಂಭವಿಸಿದ ವಾರ್ತೆಯನ್ನೇ ಕೇಳಿಲ್ಲವೆಂದು ಹೇಳಿದನು.

ಶಿವಾಜಿಯು ಅತ್ಯಂತ ಸಂತೋಷದಿಂದ ಮಹಾವಿದ್ವಾಂಸನಾದ ಹನುಮಂತೆಯೊಡನೆ, "ಹನುಮಂತೆ, ಈ ರಾಜ್ಯವನ್ನು ನೋಡು, ಇದೆಷ್ಟು ಸಂಪತ್ ಸಮೃದ್ಧವಾಗಿದೆ. ರಾಜನು ವಿಧರ್ಮಿಯನಾದರೂ ಈ ರಾಜಧಾನಿಯು ಭೋಗಮಂದಿರವಾಗಿದ್ದರೂ ಈ ರಾಜ್ಯವು ಎಷ್ಟೊಂದು ಸುಭಿಕ್ಷವಾಗಿದೆ ನೋಡು" ಎಂದನು.

ಹನುಮಂತೆಯು "ಮಹಾಪ್ರಭುವೇ ! ಧರ್ಮ ಮತ್ತು ಸುಖ, ಧರ್ಮ ಮತ್ತು ಐಶ್ವರ್ಯ ಇವುಗಳಿಗೆ ಪ್ರತ್ಯಕ್ಷವಾದ ಸಂಬಂಧವನ್ನು ಕಲ್ಪಿಸುವುದು ಮೂಢತನ. ಐಶ್ವರ್ಯ ಭೋಗಗಳ ಬುನಾದಿಯೇ ಬೇರೆ, ಧರ್ಮದ ಮೂಲವೇ ಬೇರೆ. ನೋಡು ಮಹಾರಾಜಾ, ಐಶ್ವರ್ಯದಲ್ಲಿ ಭೋಗಗಳಲ್ಲಿ ನಿನಗೂ ಈ ಸುಲ್ತಾನನಿಗೂ ಹೋಲಿಕೆಯನ್ನು ಮಾಡಿದರೆ ಅಜ-ಗಜಾಂತರ ವ್ಯತ್ಯಾಸವಿದೆ. ಎಷ್ಟೋ ಭಾರಿ ಸೈನ್ಯಕ್ಕೆ ಸಂಬಳ ಕೊಡುವುದಕ್ಕೇ ನಮ್ಮಲ್ಲಿ ಹಣವಿರುವುದಿಲ್ಲ, ಇಂಥಾ ಭೋಗಗಳಂತೂ ನಮಗೆ ಇಲ್ಲವೇ ಇಲ್ಲ. ಈ ಸುಲ್ತಾನನೂ ಇವನನ್ನನುಸರಿಸಿದವರೂ ಭೋಗಭಾಗ್ಯಗಳಲ್ಲಿ ಮುಳುಗಿದ್ದಾರೆ, ಆದರೆ ಇವರು ನಿನ್ನ ಪ್ರತಾಪಕ್ಕೆ ಅಂಜುತ್ತಾರೆ. ಇಂದು ನೀನು ಕುಪಿತನಾದರೆ, ಇದೆಲ್ಲವೂ ಭಸ್ಮರಾಶಿಯಾಗಿಹೋಗುತ್ತದೆ. ಈ ಜಗತ್ತಿನಲ್ಲಿ ಹಾಗೆ ಎಷ್ಟೋ ಸಾರಿ ಆದ ನಿದರ್ಶನಗಳಿವೆ. ಆದರಿಂದಲೇ ಭೋಗೈಶ್ವರ್ಯಗಳು ಕ್ಷಣಿಕವಾದವುಗಳೆಂದು ಶಾಸ್ತ್ರಗಳು ಸಾರುತ್ತವೆ. ಈ ಸುಲ್ತಾನರ ಅಂತರಂಗವನ್ನಾದರೂ ನೋಡು, ಎಷ್ಟು ಭಯದಿಂದ ಕೂಡಿದೆ. ಈ ಸುಲ್ತಾನರುಗಳ ಘೋರ ಕೊಲೆಗಳ ಕಥೆಗಳಾದರೂ ಎಷ್ಟಿವೆ, ಈ ರಾಜ್ಯಭಾರವು ಪೂರ್ತಿಯಾಗಿ ಮುದ್ದಣನ ಕೈಯಲ್ಲಿದೆ, ಸುಲ್ತಾನರು ಅವನಿಗೆ ಪ್ರತಿಕ್ಷಣವೂ ಹೆದರಿ ನಡೆಯುತ್ತಾನೆ. ಈ ಭೋಗ ಸಾಮ್ರಾಜ್ಯಕ್ಕೂ ಧರ್ಮ ರಹಸ್ಯಕ್ಕೂ ಗಂಟುಹಾಕಬೇಡ" ಎಂದು ಸಮಾಧಾನ ಹೇಳಿದನು.

ಶಿವಾಜಿಯು ಸಮಯ ಬಂದಾಗ ಇಂಥಾ ಜ್ಞಾನೋಪದೇಶ ಮಾಡುವು ದಕ್ಕಾಗಿಯೇ ಆ ಹನುಮಂತೆಯನ್ನು ಜೊತೆಯಲ್ಲಿಯೇ ಇಟ್ಟುಕೊಂಡಿರು ತ್ತಿದ್ದನು.

ಸುಲ್ತಾನ್ ಅಬುಹುಸೇನನೂ ಶಿವಾಜಿಯೂ ಉದ್ಯಾನದಲ್ಲಿ ಮಾತ ನಾಡುತ್ತ ಕುಳಿತಿದ್ದರು. ಶಿವಾಜಿಯ ಸೇನಾಧಿಪತಿಗಳೂ ಸುಲ್ತಾನನ ಮಂತ್ರಿ ಸೇನಾಧಿಪತಿಗಳೂ ಅಲ್ಲಿ ನೆರೆದಿದ್ದರು. ಮಾವುತರು ಆನೆಗಳನ್ನು ಆ ಉದ್ಯಾನ ದಲ್ಲಿ ಕರೆದುಕೊಂಡು ಬಂದರು. ಮಹಾಗಜವೊಂದಕ್ಕೆ ಮದವೇರಿ ಘೂರ್ಣಿಸು ತ್ತಿದ್ದಿತು. ಸುತ್ತಲೂ ಮಾವುತರು ಆನೆಗಳಿಂದ ಸುತ್ತುಗಟ್ಟಿ ಆ ಗಜವನ್ನು ತಡೆಯುತ್ತಿದ್ದರು. ಆ ದೃಶ್ಯವನ್ನು ನೋಡಿ ಶಿವಾಜಿಯು ಆಹ್ಲಾದಭರಿತ ನಾದನು. ಸುಲ್ತಾನ್ ಅಬೂಹುಸೇನನು, "ಮಹಾರಾಜನೇ, ನಿಮ್ಮ ಸೈನ್ಯದಲ್ಲಿ ಯುದ್ಧದ ಆನೆಗಳಿಲ್ಲವೇ ?" ಎಂದು ಪ್ರಶ್ನಿಸಿದನು.

ಶಿವಾಜಿಯು ನಗುತ್ತಾ, ತನ್ನ ಸೇನಾಧಿಪತಿಗಳ ಕಡೆಗೆ ಕೈತೋರಿ ಇವರುಗಳೇ ನನ್ನ ಸೈನ್ಯದ ದಿಗ್ಗಜಗಳು ಎಂದು ಹೇಳಿದನು.

ಅಬೂಹುಸೇನನು ವಿಸ್ಮಯಗೊಂಡು ಮಹಾರಾಜನ ಮಾತು ಅರ್ಥ ವಿಲ್ಲದ್ದು ಎಂದುಕೊಂಡನು. ಅವನ ಮುಖಭಾವದಿಂದಲೇ ಶಿವಾಜಿಗೆ ಸುಲ್ತಾನನ ಮನಸ್ಸು ತಿಳಿಯಿತು. ಶಿವಾಜಿಯು ತನ್ನ ಸೇನಾಧಿಪತಿಯಾದ ಏಸಾಜಿಯ ಕಡೆಗೆ ತಿರುಗಿನೋಡಿದನು.

ಏಸಾಜಿಯು ಧೀರತೆಯಿಂದ ಆ ಮದಗಜದ ಮುಂದೆ ನಿಂತು ಕತ್ತಿ ಯನ್ನೆತ್ತಿ ಅದರ ಸೊಂಡಿಲಿಗೆ ಹೊಡೆದನು. ಒಂದೇ ಪೆಟ್ಟಿಗೆ ಸೊಂಡಿಲು ತುಂಡಾಗಿ ನೆಲದ ಮೇಲೆ ಬಿದ್ದಿತು. ಮದಗಜವು ಆ ನೋವಿನಿಂದ ಅಡಗಿ ಹೋಯಿತು, ನಡುಗಿತು. ರೂಪ ಹೋಗಿ ನೆಲದ ಮೇಲೆ ಬಿದ್ದು ಹೊರಳ ತೊಡಗಿತು. ಗಜವು ಆ ನೋವನ್ನು ಸಹಿಸಲಾರದೇ ಹೃದಯವಿದ್ರಾವಕವಾದ ಧ್ವನಿ ಮಾಡುತ್ತಾ ಬಿದ್ದಿದ್ದಿತು. ಅಬೂಹುಸೇನನಿಗೆ ಇದನ್ನು ನೋಡಿ ಆಶ್ಚರ್ಯ ಉಂಟಾಯಿತು. ಸೇನಾಧಿಪತಿಯು ಎಷ್ಟು ಧೈರ್ಯಶಾಲಿ, ಎಂಥಾ ಬಲಶಾಲಿ ಎಂದು ಸುಲ್ತಾನನ ಹೃದಯವು ನಡುಗಿತು. ಅವನು ಏಸಾಜಿಗೆ ರತ್ನದ ಭುಜಬಂದಿಯನ್ನು ಖಿಲ್ಲತ್ತುಗಳನ್ನು ತರಿಸಿ ಶಿವಾಜಿಯ ಎದುರಿನಲ್ಲಿ ಉಡುಗೊರೆ ಕೊಟ್ಟನು. ಇಂಥಾ ಬಲಿಷ್ಟರಾದ ಸೇನಾಧಿಪತಿಗಳಿರುವುದರಿಂದಲೇ ಅತ್ಯಂತ

ಸಾಮರ್ಥ್ಯಶಾಲಿಯಾದ ಔರಂಗಜೇಬ್ ಬಾದಶಹನು ಈ ಮಹಾರಾಜನಿಗೆ ಭಯಪಡುತ್ತಾನೆ ಎಂದುಕೊಂಡನು.

ಸುಲ್ತಾನ್ ಅಬೂಹುಸೇನನು ಶಿವಾಜಿಯ ಸೇನಾಧಿಪತಿಗಳಿಗೂ ಜೊತೆಯಲ್ಲಿ ಬಂದಿದ್ದ ಅಧಿಕಾರಿಗಳಿಗೂ ಪರಿವಾರದವರಿಗೂ ರಾಜಯೋಗ್ಯವಾದ ಔತಣವನ್ನೇರ್ಪಡಿಸಿದ್ದನು. ಅರಮನೆಯ ಉದ್ಯಾನದಲ್ಲಿ ಬೆಳದಿಂಗಳಿನ ಉತ್ಸವವು ಏರ್ಪಡಾಗಿದ್ದಿತು. ಬಾಣಸಿಗರು ನಾನಾವಿಧವಾದ ಮಿಠಾಯಿಗಳನ್ನೂ ಭಕ್ಷ್ಯಭೋಜ್ಯಗಳನ್ನೂ ಸಿದ್ಧಗೊಳಿಸಿದ್ದರು. ಮರಾಠಾ ಸೇನಾಧಿಪತಿಗಳು ಕೂಡಾ ಅಂಥ ಭಕ್ಷ್ಯಭೋಜ್ಯಗಳನ್ನು ಎಂದೂ ರುಚಿ ನೋಡಿರಲಿಲ್ಲ. ನಾನಾ ವಿಧವಾದ ಷರಬತ್ತುಗಳೂ ಪಾಯಸಗಳೂ ಸಿದ್ಧವಾಗಿದ್ದವು. ಬೆಳ್ಳಿಯ ತಟ್ಟೆಗಳಲ್ಲಿಯೂ ಚಿನ್ನದ ಬಟ್ಟಲುಗಳಲ್ಲಿಯೂ ಖಾದ್ಯಪೇಯಗಳನ್ನು ಅಣಿಗೊಳಿಸಿಟ್ಟಿದ್ದರು. ಉದ್ಯಾನದಲ್ಲೆಲ್ಲಾ ಸುವಾಸಿತ ಪುಷ್ಪಗಳು ಚೆಲ್ಲಲ್ಪಟ್ಟಿದ್ದವು. ಎಲ್ಲೆಲ್ಲಿಯೂ ಧೂಪದೀಪಗಳು ಕಂಗೊಳಿಸುತ್ತಿದ್ದವು. ಸುತ್ತಲೂ ಅಪ್ಸರಸ್ತ್ರೀಯರ ನಾಟ್ಯಗಾನಗಳು ನಡೆಯುತ್ತಿದ್ದವು. ಮಂಗಳ ವಾದ್ಯಗಳ ಸುಸ್ವರವು ಕೇಳಿಬರುತ್ತಿದ್ದಿತು. ಆ ಉದ್ಯಾನವನವು ನಂದನವನದಂತೆ ಪರಶೋಭಿತವಾಗಿದ್ದಿತು.

ಮರಾಠಾ ಅಧಿಕಾರಿಗಳೂ ಸೇನಾಧಿಪತಿಗಳೂ ಆ ವನಭೋಜನದಲ್ಲಿ ಸೇರಿ ಆನಂದಿಸುತ್ತಿದ್ದರು. ಮುದ್ದಣನು ಶಿವಾಜಿಯನ್ನೂ ಹನುಮಂತೆಯನ್ನೂ ಆ ಸಮಯಕ್ಕೆ ಸರಿಯಾಗಿ ಆ ಉದ್ಯಾನಕ್ಕೆ ಕರೆತಂದನು. ಶಿವಾಜಿಯು ಆ ಉದ್ಯಾನದ ವೈಭವವನ್ನೂ ಗಾನನರ್ತನಗಳ ಕೋಲಾಹಲವನ್ನೂ ನೋಡಿ ಬೆರಗಾಗಿಹೋದನು. ಶಿವಾಜಿಯು ಹಾಸ್ಯ ಮಾತಾಡುತ್ತಾ ಮುದ್ದಣನೊಡನೆ ಹೇಳಿದನು—"ನಿಮ್ಮ ಸುಲ್ತಾನರಿಗೆ ಸೈನ್ಯವಿಲ್ಲ ಸೇನಾಧಿಪತಿಗಳಿಲ್ಲವೆಂಬ ಕೊರತೆಯೇ ಇಲ್ಲ. ಎಂತಹ ರಾಜಾಧಿರಾಜರೂ ನಿಮ್ಮ ರಾಜ್ಯಕ್ಕೆ ಬಂದರೆ ಈ ಅಪ್ಸರೆಯರನ್ನು ನೋಡಿ ಮರುಳಾಗುತ್ತಾರೆ. ಇವರ ಕಂಠಮಾಧುರ್ಯವು ಲೋಕವನ್ನೇ ವಿಸ್ಮಯಗೊಳಿಸುತ್ತದೆ" ಎಂದು ಪ್ರಶಂಸೆ ಮಾಡಿದನು.

"ಮಹಾರಾಜರೇ ನಾವು ಇದುವರೆಗೂ ಹಾಗೆಯೇ ಭಾವಿಸಿದ್ದೆವು. ಈ ಸೌಂದರ್ಯ ವೈಭವಗಳನ್ನು ಜಯಿಸಬಲ್ಲ ಮಹಾಯೋಗಿಗಳಿದ್ದಾರೆಂದು ಈಗ ಪ್ರತ್ಯಕ್ಷವಾಗಿ ಕಂಡುಕೊಂಡಾಯಿತು. ಮಹಾರಾಜರು ಧರ್ಮಾತ್ಮರು ಎಂದು

ಕೇಳಿದ್ದೆವು. ಎಷ್ಟೋ ಮಂದಿ ಉನ್ನತ ಕುಲದ ಯುವನ ಸ್ತ್ರೀಯರನ್ನು ಕೂಡಾ ತಿರಸ್ಕರಿಸಿದ್ದೀರೆಂದು ಹೇಳಿಕೊಳ್ಳುತ್ತಾರೆ. ನಾವು ಅದನ್ನು ಪ್ರತ್ಯಕ್ಷವಾಗಿ ಕಾಣುತ್ತಿದ್ದೇವೆ. ಅಷ್ಟೇ ಅಲ್ಲ, ನಿಮ್ಮ ಅಧಿಕಾರಿಗಳಾಗಲೀ ಸೇನಾಧಿಪತಿ ಗಳಾಗಲೀ ಸ್ತ್ರೀವ್ಯಾಮೋಹಕ್ಕೆ ಸಿಲುಕದಿರುವುದು ಆಶ್ಚರ್ಯಕರವಾಗಿದೆ. ಮಹಾ ರಾಜರವರ ಪರಿವಾರವು ನಮ್ಮ ರಾಜಧಾನಿಗೆ ಬಂದು ಎರಡು ತಿಂಗಳುಗಳಾಗಿವೆ. ಒಬ್ಬನಲ್ಲಾದರೂ ಅವಿನಯವನ್ನು ಅನೀತಿಯನ್ನು ಯಾರೂ ಕಂಡು ಕೇಳಿದು ದಿಲ್ಲ. ಈ ನಗರಿಗೆ ಎಷ್ಟೋ ಮಹಾಪುರುಷರು ಬಂದಿದ್ದಾರೆ. ಇಲ್ಲಿ ಇರುವಷ್ಟು ನಾನಾ ದೇಶದ ಸ್ತ್ರೀರತ್ನಗಳು ಮತ್ತೆಲ್ಲಿಯೂ ಇಲ್ಲ. ಇವರುಗಳನ್ನೆಲ್ಲಾ ನಮ್ಮ ಸುಲ್ತಾನರು ಬಲಪಾಡಿ ಇಟ್ಟಿಟ್ಟಿದ್ದಾರೆಂದು ಮಹಾರಾಜರು ತಿಳಿಯಬಾರದು. ಇವರೆಲ್ಲರೂ ತಾವಾಗಿ ಬಂದು ಸೇರಿದ್ದಾರೆ" ಎಂದು ಮುದ್ದಣನು ಹೇಳಿದನು.

ಶಿವಾಜಿಯು ಸಂಕೋಚದಿಂದ "ಮಂತ್ರಿ ಮುದ್ದಣನವರೇ ! ನೀವು ವಿದ್ವಾಂಸರು, ಇದರ ರಹಸ್ಯವನ್ನು ನೀವರಿಯಬಲ್ಲಿರಿ. ಎಲ್ಲಿ ಮಧುವಿದೆಯೋ ಅಲ್ಲಿ ಜೇನು ಸೇರುತ್ತದೆ. ಐಶ್ವರ್ಯವಿರುವ ಕಡೆ ಇವೆಲ್ಲವೂ ತಾನಾಗಿ ಬಂದು ಸೇರುತ್ತದೆ. ಐಶ್ವರ್ಯ ಭೋಗ ಇವೆರಡೂ ಸಾಹಸಚರ್ಯ ಧರ್ಮಗಳು. ಅವು ಗಳಿಂದ ಬೇರೆಗಾಗದವರಾರು ? ಆದರೆ ಇಂಥಾ ರಾಜ್ಯದಲ್ಲಿಯೂ ನೀವು ಧರ್ಮಾನುಷ್ಠಾನಪರರಾಗಿರುವುದು ನಮಗೆ ಆಶ್ಚರ್ಯವನ್ನುಂಟು ಮಾಡುತ್ತದೆ. ನಾವು ಈ ರಾಜ್ಯಕ್ಕೆ ಬಂದಂದಿನಿಂದಲೂ ನಿಮ್ಮ ವಿಚಾರವಾಗಿ ಇದನ್ನೇ ಯೋಚಿಸುತ್ತಿದ್ದೇವೆ. ಸುಲ್ತಾನರಿಗೂ ನಿಮಗೂ ಇರುವ ಋಣಾನುಬಂಧವು ಪೂರ್ವಜನ್ಮ ಸುಕೃತದಿಂದ ಉಂಟಾದುದೆಂದು ನಾವು ಭಾವಿಸಿದ್ದೇವೆ. ನಮ್ಮ ಹನುಮಂತೆಯು ಪದೇ ಪದೇ ಅದನ್ನೇ ಹೇಳುತ್ತಾರೆ. ನಮ್ಮ ಅಧಿಕಾರಿಗಳಿಗೆ ನೀವು ಏರ್ಪಡಿಸಿರುವ ಔತಣವು ಅತ್ಯಂತ ಸಂತೋಷಕರವಾದುದು. ನಿಜ ವಾಗಿಯೂ ನಮ್ಮ ಜನರು ಇಂಥಾ ರಾಜ ಆತಿಥ್ಯದಿಂದ ತೃಪ್ತರಾಗಿದ್ದಾರೆ. ಇದನ್ನೆಲ್ಲಾ ನೋಡಿ ನನ್ನ ಮನಸ್ಸಿಗೆ ಸಂಕೋಚವಾಗುತ್ತದೆ. ಸುಲ್ತಾನರು ನಮ್ಮ ರಾಜ್ಯಕ್ಕೆ ಬಂದರೆ ಒಂದು ದಿನವಾದರೂ ಇಂತಹ ಔತಣವನ್ನು ಮಾಡಿ ಸಲು ನಮಗೆ ಶಕ್ತಿಯಿದೆಯೇ ಎಂದೆನಿಸುತ್ತದೆ" ಎಂದು ಹೇಳಿದನು.

ಮುದ್ದಣನು ಮಹಾಪ್ರಭುಗಳ ಪಟ್ಟಾಭಿಷೇಕವನ್ನೂ ಆ ಉತ್ಸವದಲ್ಲಿ ನಡೆದ ದಾನಧರ್ಮ ಬ್ರಾಹ್ಮಣ ಸಂತರ್ಪಣೆಗಳನ್ನೂ ಈ ಭಾರತವರ್ಷದಲ್ಲಿ

ಬಿಂದೂ ಜನರು ಮನೆಮನೆಗಳಲ್ಲಿಯೂ ಕೊಂಡಾಡುತ್ತಾರೆ. ತಮ್ಮ ಔದಾರ್ಯವು ಸಮುದ್ರರಾಜನಿಗೆ ಸಮಾನವಾದುದು" ಎಂದು ಹೇಳಿದನು.

ಮಾರನೆಯ ದಿನ ಸುಲ್ತಾನನು ದರ್ಬಾರು ನಡೆಸಿ ಆ ದರ್ಬಾರಿಗೆ ಶಿವಾಜಿಯನ್ನು ಮರ್ಯಾದೆಯಿಂದ ಕರೆದುಕೊಂಡು ಬಂದು ಸಿಂಹಾಸನದ ಮೇಲೆ ಕುಳ್ಳಿರಿಸಿದನು. ಶಿವಾಜಿಯನ್ನು ಬೀಳ್ಕೊಡುವುದಕ್ಕಾಗಿಯೇ ಆ ದರ್ಬಾರು ಏರ್ಪಾಡಾಗಿದ್ದಿತು. ಸೇನಾಧಿಪತಿಗಳಿಗೂ ಅಧಿಕಾರಿಗಳಿಗೂ ಅನರ್ಘ್ಯ ರತ್ನಾಭರಣಗಳನ್ನು ಒಪ್ಪಿಸಿ ಮರ್ಯಾದೆ ಮಾಡಿಸಿದನು. ಸೈನಿಕರಿಗೆಲ್ಲಾ ಹೇರಳವಾದ ಇನಾಮುಗಳು ಕೊಡಲ್ಪಟ್ಟವು.

ಶಿವಾಜಿಯು ಮುಂದಕ್ಕೆ ಹೊರಡಬೇಕೆಂದು ತನ್ನಭಿಪ್ರಾಯವನ್ನು ಸೂಚಿಸಿದನು. ಸುಲ್ತಾನನು ತನ್ನ ರಾಜ್ಯದಲ್ಲಿ ದಾರಿಯುದ್ದಕ್ಕೂ ಮಹಾರಾಜನ ಸೈನ್ಯಕ್ಕೆ ಸರಬರಾಜುಗಳನ್ನು ಮಾಡಬೇಕೆಂದು ಆಜ್ಞಾಪತ್ರಗಳನ್ನು ಕಳಿಸಿಕೊಟ್ಟನು. ಶಿವಾಜಿಗೆ ಅನೇಕ ರತ್ನಾಭರಣಗಳನ್ನು ಸುವರ್ಣದ ಕಾಣಿಕೆಗಳನ್ನು ಒಪ್ಪಿಸಿದನು. ಶಿವಾಜಿಯು ಸುಲ್ತಾನನ ಅಪ್ಪಣೆಯನ್ನು ಪಡೆದು ಮುಂದಕ್ಕೆ ಹೊರಟನು.

## ೭

ದಕ್ಷಿಣದೇಶದ ಕಡೆಗೆ ಶಿವಾಜಿಯ ಸೈನ್ಯವು ಹೊರಟಿತು. ಶಿವಾಜಿಯ ತಮ್ಮನಾದ ವೆಂಕಾಜಿಯು ತಂಜಾವೂರಿನಲ್ಲಿ ರಾಜ್ಯಭಾರ ಮಾಡುತ್ತಿದ್ದನು. ಅವನು ಶಿವಾಜಿಯ ಚಿಕ್ಕತಾಯಿಯ ಮಗ. ಕರ್ನಾಟಕಕ್ಕೆಲ್ಲಾ ನಾನೇ ದೊರೆ ಎಂದು ವೆಂಕಾಜಿಯು ಅಟ್ಟಹಾಸ ಮಾಡುತ್ತಿದನು. ಅವನು ಶಿವಾಜಿಯ ಮೇಲೆ ಅಕಾರಣವಾಗಿ ದ್ವೇಷಸಾಧನೆ ಮಾಡುತ್ತಿದ್ದನು. ಆ ವೆಂಕಾಜಿಯನ್ನು ಸೋಲಿಸಿ ದಕ್ಷಿಣವನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳಬೇಕೆಂದು ಶಿವಾಜಿಯು ಅತ್ತಕಡೆಗೆ ತನ್ನ ದಂಡನ್ನು ತಿರುಗಿಸಿದನು. ಮರಾಠಾ ಸೈನ್ಯಗಳು ರಭಸದಿಂದ ದಕ್ಷಿಣಾಪಥದಲ್ಲಿ ಮುಂದುವರಿಯುತ್ತಿದ್ದವು. ಈ ಸಮಯದಲ್ಲಿ ಸಮೀಪದಲ್ಲಿಯೇ ಶ್ರೀಶೈಲ ಕ್ಷೇತ್ರವಿದೆಯೆಂದು ಶಿವಾಜಿಗೆ ತಿಳಿಯಿತು. ಅವನು ತನ್ನ ಸೈನ್ಯದಲ್ಲಿ ಯಾರಿಗೂ ತಿಳಿಸದಂತೆ ಹನುಮಂತೆಯನ್ನು ಜೊತೆಯಲ್ಲಿ ಕರೆದು

ಕೊಂಡು ಶ್ರೀಶೈಲ ಕ್ಷೇತ್ರಕ್ಕೆ ಹೊರಟುಹೋದನು. ಮಲ್ಲಿಕಾರ್ಜುನ ಸ್ವಾಮಿಯ ದರ್ಶನದಿಂದ ಶಿವಾಜಿಗೆ ಪರಮಾನಂದವಾಯಿತು. ಆ ಈಶ್ವರ ಸಾನ್ನಿಧ್ಯವನ್ನು ಬಿಟ್ಟುಹೋಗಲಾರದೇ ಶಿವಾಜಿಯು ಎಲ್ಲವನ್ನೂ ಮರೆತು ಪರಶಿವನ ಧ್ಯಾನ ಮಾಡುತ್ತಾ ಕುಳಿತುಬಿಟ್ಟನು. ಒಂದು ದಿನವಾಯಿತು, ಎರಡು ದಿನಗಳಾದವು, ಹತ್ತು ದಿನಗಳೂ ಉರುಳಿಹೋದವು. ಶಿವಾಜಿಯು ಅನ್ನಾಹಾರಗಳನ್ನು ಮರೆತನು. ಹತ್ತು ದಿವಸಗಳು ಉಪವಾಸದಿಂದ ಈಶ್ವರ ಧ್ಯಾನಮಾಡುತ್ತಾ ಕುಳಿತುಬಿಟ್ಟನು. ಹನುಮಂತೆ ಅವನನ್ನು ಹಿಂತಿರುಗಿಸಲು ಎಷ್ಟೋ ಪ್ರಯತ್ನ ಮಾಡಿದನು. "ನನಗೆ ರಾಜ್ಯ ಬೇಡ, ಸೈನ್ಯ ಬೇಡ. ಎಲ್ಲರೂ ಹೊರಟು ಹೋಗಿರಿ. ಮಹಾರಾಷ್ಟ್ರ ದೇಶವನ್ನು ಪೌರುಷದಿಂದ ಉಳಿಸಿಕೊಳ್ಳಿರಿ. ನಾನು ಶಿವಸಾನ್ನಿಧ್ಯವನ್ನು ಬಿಟ್ಟುಅಲಗುವುದಿಲ್ಲ. ಆ ಪರಶಿವನು ಪ್ರತ್ಯಕ್ಷ ನಾಗಬೇಕು" ಎಂದು ಹೇಳಿದನು. ಹನುಮಂತೆಗೆ ಗಾಬರಿಯಾಯಿತು. "ಮಹಾರಾಜ, ಮಹರ್ಷಿಗಳು ನೂರಾರು ವರ್ಷಗಳ ತಪಸ್ಸಿನಿಂದ ಈಶ್ವರನನ್ನು ಪ್ರತ್ಯಕ್ಷ ಮಾಡಿಕೊಂಡಿದ್ದಾರೆಂದು ಪುರಾಣಗಳಲ್ಲಿ ಹೇಳಿದೆ. ಈ ಕಲಿಯುಗದಲ್ಲಿ ಪರಶಿವನ ಸಾಕ್ಷಾತ್ಕಾರವುಂಟೆ ? ಆ ಶಿವನ ಪೂರ್ಣಾನುಗ್ರಹವಿರುವುದರಿಂದಲೇ ಇಂಥಾ ಮಹಾರಾಜ್ಯವನ್ನು ನಿರ್ಮಾಣಮಾಡಿರುವೆ. ವಿಧರ್ಮಿಯರನ್ನು ಜಯಿಸಿ ಧರ್ಮೋದ್ಧಾರ ಮಾಡಿರುವೆ. ಪರಮೇಶ್ವರನ ಆರಾಧನೆಯು ಸಾಕು. ನೀನು ಎದ್ದು ಹೊರಡು ಎಂದು ಕೇಳಿಕೊಂಡನು.

ಶಿವಾಜಿಯು ಪರಶಿವನು ಪ್ರತ್ಯಕ್ಷನಾಗದಿದ್ದರೆ ನನ್ನ ಖಡ್ಗದಿಂದಲೇ ನನ್ನ ಶಿರಸ್ಸನ್ನು ಕತ್ತರಿಸಿ ಪರಶಿವನಿಗೆ ಅರ್ಪಣಮಾಡಿಬಿಡುತ್ತೇನೆ. ಹಾಗೆಯೇ ನನ್ನ ತಪಸ್ಸು ಮುಕ್ತಾಯಗೊಳ್ಳಲಿ, ನಾನು ಮತ್ತೆ ರಾಜ್ಯಕ್ಕೆ ಹಿಂದಿರುಗಿ ಬರುವುದಿಲ್ಲ ಎಂದು ಹಟದಿಂದ ನುಡಿದನು.

ಹನುಮಂತೆಯು ಶಿಬಿರಕ್ಕೆ ಹಿಂತಿರುಗಿ ಹೋದನು. ಹತ್ತು ದಿನಗಳಿಂದಲೂ ಶಿವಾಜಿಯನ್ನು ಕಾಣದೇ ಸೇನಾಧಿಪತಿಗಳೆಲ್ಲರೂ ಪರಿತಪಿಸುತ್ತಿದ್ದರು, ಎಲ್ಲೆಲ್ಲಿಯೂ ಹುಡುಕುತ್ತಿದ್ದರು. ಯಾವುದೋ ಮಾಯೆ ಯಿಂದ ಶಿವಾಜಿಯನ್ನು ಅಪಹರಿಸಿಕೊಂಡು ಹೋಗಿದ್ದಾರೆಂದು ದುಃಖದಿಂದಲೂ ರೋಷಾವೇಷದಿಂದಲೂ ಕುದಿಯುತ್ತಿದ್ದರು. ಹನುಮಂತೆಯನ್ನು ಕಾಣುತ್ತಲೇ ಅವರೆಲ್ಲರೂ ಓಡುತ್ತಾ ಬಂದು ಸುತ್ತುಗಟ್ಟಿದರು. ಹನುಮಂತೆಯು ಭಯದಿಂದ

ಎಲ್ಲ ವಿದ್ಯಮಾನಗಳನ್ನೂ ಸೇನಾಧಿಪತಿಗಳಿಗೆ ಅರುಹಿದನು. ಸೇನಾಧಿಪತಿಗಳು ಮಂತ್ರಿಗಳೂ ಧಾವಿಸುತ್ತಾ ಶ್ರೀಶೈಲಕ್ಕೆ ಬಂದು ಮಲ್ಲಿಕಾರ್ಜುನನ ಸನ್ನಿಧಾನ ದಲ್ಲಿ ಶಿವಾಜಿಯನ್ನು ದರ್ಶನ ಮಾಡಿದರು, ಪ್ರಾರ್ಥನೆ ಮಾಡದರು, ಮೊರೆಯಿಟ್ಟರು, ಶಿವಾಜಿಯು ಕದಲಲಿಲ್ಲ. ಸೇನಾಧಿಪತಿಗಳೆಲ್ಲರೂ ರಾಜ್ಯದ ನಾಶವಾಗಿಹೋಗುತ್ತದೆ, ಧರ್ಮವು ಮೂಲೋತ್ಪಾಟನವಾಗುತ್ತದೆ, ನೀವು ನಮ್ಮೆಲ್ಲರನ್ನೂ ಈ ಶ್ರೀಶೈಲದಲ್ಲಿಯೇ ಬಲಿ ಕೊಟ್ಟುಬಿಡಿ, ನಮಗೆ ರಾಜನಿಲ್ಲದೇ ಅಧಿಪತಿಯಿಲ್ಲದೇ ಯಾವ ಕಾರ್ಯಸಾಧನೆಗೂ ನಾವು ಅಸಮರ್ಥ ರಾಗಿದ್ದೇವೆ ಎಂದು ಶಪಥಪೂರ್ವಕವಾಗಿ ಹಟತೊಟ್ಟು ನಿಂತರು.

ಶಿವಾಜಿಯ ಮನಸ್ಸು ತಿರುಗಿತು. ಅವನು ತನ್ನ ತಪಸ್ಸು ಭಂಗ ವಾಯಿತು, ಶಿವನು ಈ ಜನರ ಸಹವಾಸದಲ್ಲಿ ಈ ಸೇವೆಗಾಗಿಯೇ ನನ್ನನ್ನು ಸೃಷ್ಟಿ ಮಾಡಿದ್ದಾನೆ. ತುಕಾರಾಮನ ಸನ್ನಿಧಾನದಲ್ಲಿ ಸಂನ್ಯಾಸಿಯಾಗಿ ಆನಂದ ದಿಂದಿದ್ದೆ, ತಾಯಿಯು ನನ್ನನ್ನು ಹಿಡಿದುಕೊಂಡು ಹೋಗಿ ಆ ಸಂಗಡಿಗರಿಗೆ ಒಪ್ಪಿಸಿದಳು. ಗುರುಸಮರ್ಥ ರಾಮದಾಸರ ಅನುಗ್ರಹದಿಂದ ಭಕ್ತಿಪಂಥವನ್ನು ಸ್ವೀಕರಿಸಿದೆ, ಗುರುಗಳೇ ಆಜ್ಞೆಯಿತ್ತು ನನ್ನನ್ನು ಮತ್ತೆ ಈ ಕರ್ಮಕ್ಷೇತ್ರಕ್ಕೆ ತಳ್ಳಿದರು, ಇದು ಮೂರನೆಯ ಪರೀಕ್ಷೆ, ಈ ಸಂಗಡಿಗರು ನನ್ನನ್ನು ಶಿವನ ಸಮೀಪಕ್ಕೆ ಬಿಡಲೊಲ್ಲರು, ನಾನು ಈ ಜನರ ಸೊತ್ತು ಎಂದುಕೊಂಡು ಆ ಸೇನಾಧಿಪತಿಗಳೊಡನೆ ಶಿಬರಕ್ಕೆ ಹಿಂದಿರುಗಲು ನಿರ್ಧಾರ ಮಾಡಿಕೊಂಡನು. ಶ್ರೀಶೈಲನಾಥನಿಗೆ ಪೂಜಾದಿಗಳನ್ನು ನೆರವೇರಿಸಿ ಅಪಾರವಾದ ಧನಕನಕಗಳ ಕಾಣಿಕೆಗಳನ್ನೊಪ್ಪಿಸಿ ತನ್ನ ಸಂಗಡಿಗರಾದ ಸೇನಾಧಿಪತಿಗಳೊಡನೆ ಶಿಬಿರಕ್ಕೆ ಹಿಂತಿರುಗಿದನು.

ವೆಂಕಾಜಿಯು ತಂಜಾವೂರಿನಲ್ಲಿ ರಾಜ್ಯಭಾರ ಮಾಡುತ್ತಿದ್ದನು. ಶಿವಾಜಿ ಯನ್ನು ದಕ್ಷಿಣಕ್ಕೆ ಬಾರದಂತೆ ಹೊಡೆದು ಓಡಿಸುತ್ತೇನೆಂದು ಶಪಥ ತೊಟ್ಟನು. ಬಿಜಾಪುರಕ್ಕೆ ರಾಯಭಾರಿಗಳನ್ನು ಕಳುಹಿಸಿ ಸೈನ್ಯಸಹಾಯ ಮಾಡಬೇಕು, ನಮ್ಮ ತಂದೆ ಷಾಜಿಯವರೂ ನಾನೂ ಸಹಾ ಬಿಜಾಪುರದ ಸುಲ್ತಾನರಿಗೆ ಅಂಕಿತರಾಗಿದ್ದೇವೆ, ನಮ್ಮ ತಂದೆ ಷಾಜಿಯವರು ಕಾಲವಾಗಿ ಹೋದಾಗಲೂ ಶಿವಾಜಿಯು ನಮ್ಮ ಕಡೆಗೆ ತಿರುಗಿನೋಡಲಿಲ್ಲ. ನಮ್ಮ ತಂದೆಯು ಅವನನ್ನು ಮೊದಲೇ ಪರಿತ್ಯಜಿಸಿಬಿಟ್ಟಿದ್ದರು, ಈಗ ಅನ್ಯಾಯವಾಗಿ ನನ್ನ ಮೇಲೆ

ಯುದ್ಧಕ್ಕೆ ಬರುತ್ತಿದ್ದಾನೆ, ಅವನಿಗೆ ತಕ್ಕ ಪ್ರತೀಕಾರ ಮಾಡುತ್ತೇನೆ ಎಂದು ಹೇಳಿಕಳಿಸಿ ಬಿಜಾಪುರದಿಂದ ಪ್ರತಿದಿನವೂ ಸಹಾಯವನ್ನು ನಿರೀಕ್ಷಣೆ ಮಾಡುತ್ತಿದ್ದನು.

ತಂಜಾವೂರಿನ ಸುತ್ತಮುತ್ತಲೂ ಇದ್ದ ಪಾಳೆಯಗಾರರುಗಳನ್ನು ನಾಯಕರುಗಳನ್ನೂ ಜೊತೆಗೆ ಸೇರಿಸಿಕೊಂಡು ಅಟ್ಟಹಾಸಮಾಡುತ್ತಾ ಶಿವಾಜಿಯ ಸೈನ್ಯವನ್ನು ಎದುರಿಸಲು ಹೊರಟನು.

ಮಧುರೆಯಲ್ಲಿದ್ದ ತುರುಷ್ಕ ಸೇನಾಧಿಪತಿಯು ಸೈನ್ಯಸಮೇತನಾಗಿ ಬಂದು ವೆಂಕಾಜಿಗೆ ಸಹಾಯ ಮಾಡಿದನು.

ಕಾಂಚಿಯ ಸಮೀಪದಲ್ಲಿ ವೆಂಕಾಜಿಯ ಸೈನ್ಯಗಳಿಗೂ ಶಿವಾಜಿಯ ಸೈನ್ಯಕ್ಕೂ ಬಲವಾದ ಯುದ್ಧವಾಯಿತು. ಈ ಯುದ್ಧವು ನಡೆಯುತ್ತಿರುವಂತೆಯೇ ವೆಂಕಾಜಿಯು ಶಿವಾಜಿಯ ಸಮೀಪಕ್ಕೆ ಅನೇಕ ರಾಯಭಾರಿಗಳನ್ನು ಕಳುಹಿಸಿಕೊಟ್ಟನು. ರಾಯಭಾರಿಗಳು ಶಿವಾಜಿಯ ಶಿಬಿರಕ್ಕೆ ಬಂದು ಶಿವಾಜಿಯನ್ನು ಭೇಟಿ ಮಾಡಿದರು. ಅವರುಗಳು, "ಹಿಂದೂ ಸಾರ್ವಭೌಮರಾದ ಶಿವಾಜೀ ಮಹಾರಾಜರವರೇ ನೀವು ಹಿಂದೂಧರ್ಮವನ್ನು ಉದ್ಧಾರಮಾಡುವುದಕ್ಕೋಸ್ಕರ ಕಂಕಣಬದ್ಧರಾಗಿರುವ ಮಹಾಪುರುಷರು. ನಿಮ್ಮ ತಂದೆ ಷಾಜಿಯವರು ಈ ರಾಜ್ಯವನ್ನು ನಿಮ್ಮ ತಮ್ಮಂದಿರಿಗೆ ಒಪ್ಪಿಸಿಕೊಟ್ಟಿದ್ದಾರೆ. ಈ ಪ್ರಾಂತ್ಯದಲ್ಲಿರುವ ಪಾಳಯಗಾರರೆಲ್ಲರೂ ಹಿಂದೂ ಜನರು, ಇವರೆಲ್ಲಾ ದೈವ ಭಕ್ತರು. ತಮ್ಮಂಥಾ ಮಹಾರಾಜರು ಹಿಂದೂ ರಾಜರ ಮೇಲೆಯೇ ಯುದ್ಧ ಮಾಡುವುದು ನ್ಯಾಯವೆನಿಸುವುದೇ ? ನಮ್ಮಿಂದ ನಿಮಗೇನು ಅಪರಾಧವಾಗಿದೆ. ಅದರಲ್ಲಿಯೂ ನಿಮ್ಮ ತಮ್ಮನೇ ರಾಜನಾಗಿರುವಾಗ ಕಾರಣವಿಲ್ಲದೇ ನೀವು ಯುದ್ಧ ಮಾಡುವುದು ಧರ್ಮವಾದೀತೆ ? " ಎಂದು ಹೇಳಿಕೊಂಡರು.

ಶಿವಾಜಿಯು, " ನೀವು ಹೇಳುವುದೆಲ್ಲವೂ ನ್ಯಾಯವಾಗಿದೆ. ಅಣ್ಣ ತಮ್ಮಂದಿರ ಧರ್ಮಾಧರ್ಮಗಳನ್ನು ತಿಳಿದು ಹೇಳುತ್ತಿದ್ದೀರಿ. ನಾನು ಹಿರಿಯಣ್ಣ ನೆಂಬ ಭಾವನೆಯಿದ್ದರೆ. ನಿಮ್ಮ ವೆಂಕಾಜಿ ಮಹಾರಾಜರವರೇ ಸೌಜನ್ಯದಿಂದ ನಮ್ಮಲ್ಲಿ ಬಂದು ಪ್ರಾರ್ಥನೆಮಾಡಬಹುದಾಗಿತ್ತು. ನಾವು ಅವರನ್ನು ಹಿಡಿದು ಕೊಂಡುಹೋಗುತ್ತಿರಲಿಲ್ಲ. ಮಧುರೆ, ತಿರುಚನಾಪಳ್ಳಿ ಈ ಪ್ರಾಂತದಲ್ಲೆಲ್ಲಾ ಮೊಗಲರಿಂದ ನಿಯುಕ್ತರಾದ ತುರುಷ್ಕಸೇನಾಧಿಪತಿಗಳು ಫೌಜುದಾರರು

ಪ್ರಬಲರಾಗಿದ್ದಾರೆ. ಹಿಂದೂ ಮಹಾರಾಜರೆಂದು ಹೆಸರು ಹೊತ್ತ ವೆಂಕಾಜಿ ಯವರು ಅವರ ಆಶ್ರಯದಲ್ಲಿ ತಮ್ಮ ಸುಖಭೋಗಗಳನ್ನು ನಡೆಸಿಕೊಳ್ಳುತ್ತಾ ಕಾಲಕಳೆಯುತ್ತಿದ್ದಾರೆ. ಈ ದಕ್ಷಿಣಾಪಥದಲ್ಲಿ ಮಹಾಮಹಾ ಕ್ಷೇತ್ರಗಳು ಪುಣ್ಯತೀರ್ಥಗಳು ಬೇಕಾದಷ್ಟಿವೆ. ಈ ತುರುಷ್ಕರ ಹಾವಳಿಯಿಂದ ಎಲ್ಲವೂ ಮಲಿನವಾಗಿಹೋಗಿವೆ. ನಿಮ್ಮ ಮಹಾರಾಜ ವೆಂಕಾಜಿಯು ನಮ್ಮಲ್ಲಿ ಬಂದು ಶರಣಾಗತನಾಗಿ ನಡೆದುಕೊಂಡರೆ ನಮ್ಮಿಂದ ಅವನಿಗೆ ಯಾವ ಭಯವೂ ಉಂಟಾಗುವುದಿಲ್ಲ. ಹಿಂದೂ ವಿದ್ವೇಷಿಗಳಾದ ಯವನಸೇನಾಧಿಪತಿಗಳನ್ನೂ ಅಧಿಕಾರಿಗಳನ್ನೂ ನಿರ್ಮೂಲಮಾಡಿ ನಾವು ಹಿಂತಿರುಗುತ್ತೇವೆ. ನಾನೂ ವೆಂಕಾಜಿಯೂ ಅಣ್ಣತಮ್ಮಂದಿರಾಗಿರುವಾಗ ನಮ್ಮಿಬ್ಬರ ನಡುವೆ ರಾಯಭಾರ ವೆಂಬರೇನು ? ನೀವೆಲ್ಲರೂ ರಾಯಭಾರಿಗಳಾಗಿ ಬರಲೇಕೆ ? ಸ್ವಯಂ ಅಪರಾಧ ವೇನೂ ಇಲ್ಲದಿದ್ದರೆ ವೆಂಕಾಜಿಯು ನಮ್ಮಲ್ಲಿಗೆ ಬರುವುದಕ್ಕೆ ಸಂಕೋಚವೇನಿದೆ. ನೀವೆಲ್ಲರೂ ವಿದ್ವಾಂಸರಂತೆ ಕಾಣುತ್ತೀರಿ, ಅವನಿಗೆ ವಿವೇಕ ಹೇಳಿ ಧೈರ್ಯ ಗೊಟ್ಟು ನಮ್ಮಲ್ಲಿಗೆ ಕಳಿಸಿಕೊಡಿರಿ, ಎಲ್ಲವೂ ಸರಿಹೋಗುತ್ತದೆ. ನನ್ನ ತಮ್ಮ ನೆಂದು ಹೇಳಿಕೊಳ್ಳುತ್ತಾ ಈ ಮ್ಲೇಂಛರ ಮರೆಯಲ್ಲಿ ವೆಂಕಾಜಿಯು ಅವಿತು ಕೊಂಡಿರುವುದು ಬಹಳ ಅಪಮಾನಾಸ್ಪದವಾಗಿದೆ" ಎಂದು ಹೇಳಿದನು.

ರಾಯಭಾರಿಗಳು ಮೌನದಿಂದ ತಲೆಬಾಗಿಸಿ ಹಿಂದಕ್ಕೆ ಹೊರಟುಹೋದರು.

ಅವರು ಶಿವಾಜಿ ಮಹಾರಾಜರ ಭೇಟಿಮಾಡಿದ್ದುದನ್ನೂ ಅಲ್ಲಿ ನಡೆದ ಮಾತುಕಥೆಗಳನ್ನೂ ವೆಂಕಾಜಿ ಮಹಾರಾಜನಲ್ಲಿ ವಿವರವಾಗಿ ತಿಳಿಸಿದರು.

ವೆಂಕಾಜಿ ಮಹಾರಾಜನ ಧರ್ಮಪತ್ನಿಯರು ಶಿವಾಜಿ ಮಾತುಗಳಂತೆ ಅವರಲ್ಲಿ ಹೋಗಿ ಸೇರಿಕೊಳ್ಳುವುದೇ ಒಳ್ಳೆಯದೆಂದು ಮಹಾರಾಜನಲ್ಲಿ ನಾನಾ ವಿಧವಾಗಿ ಹೇಳಿಕೊಂಡರು.

ವೆಂಕಾಜಿಯ ಮನಸ್ಸು ಅತ್ತಕಡೆಗೂ ಇತ್ತಕಡೆಗೂ ಉಯ್ಯಾಲೆಯಾಡು ತ್ತಿದ್ದಿತು. ಅವನ ಮಂತ್ರಿಗಳು ಶಿವಾಜಿಗೆ ಅಧೀನರಾಗಬಾರದು, ಯುದ್ಧವನ್ನು ಮುಂದುವರಿಸೋಣ–ಶಿವಾಜಿಯ ಶತೃಗಳು ಎಷ್ಟೋ ಮಂದಿ ಇದ್ದಾರೆ. ನಮಗೆ ಅವರ ಸಹಾಯವು ದೊರೆಯುತ್ತದೆ ಎಂದು ವೆಂಕಾಜಿಯನ್ನು ಪ್ರೋತ್ಸಾಹಿಸಿದರು.

ಯುದ್ಧವು ಮುಂದುವರಿಯಿತು. ಶಿವಾಜಿಯ ಮಹಾಬಲ ಸೈನ್ಯಗಳು

ತಂಜಾಊರಿಗೆ ಹತ್ತುಮೈಲಿಗಳ ಸಮೀಪದಲ್ಲಿ ಬಂದು ಬೀಡುಬಿಟ್ಟವು. ಶಿವಾಜಿಯ ಸೈನ್ಯಗಳಿಗೂ ವೆಂಕಾಜಿಯ ಸೈನ್ಯಗಳಿಗೂ ಒಂದೆರಡು ದಿನಗಳು ಬಲವಾದ ಯುದ್ಧ ನಡೆಯಿತು. ವೆಂಕಾಜಿಯು ಶರಣಾಗತನಾಗುವುದಾಗಿ ನಿಶ್ಚಯ ಮಾಡಿ ಹೇಳಿ ಕಳಿಸಿದನು. ಶಿವಾಜಿಯು ತನ್ನ ಸಮೀಪಕ್ಕೆ ಬರಬಹುದೆಂದೂ ಅವನ ತಪ್ಪುಗಳನ್ನೆಲ್ಲಾ ಕ್ಷಮಿಸುವುದಾಗಿಯೂ ಹೇಳಿಕಳಿಸಿದನು. ವೆಂಕಾಜಿಯು ತನ್ನ ಮಂತ್ರಿಗಳೊಡನೆ ಶಿವಾಜಿಯ ಶಿಬಿರಕ್ಕೆ ಬಂದು ಶಿವಾಜಿಯ ಭೇಟಿಮಾಡಿದನು. ಶಿವಾಜಿಯು ತಮ್ಮನನ್ನು ಆದರದಿಂದ ಕಂಡು ಸಮಾಧಾನಗೊಳಿಸಿದನು. "ತಂಜಾಊರು ರಾಜ್ಯವನ್ನು ನಿನಗೇ ಕೊಡಿಸುತ್ತೇನೆ. ನೀನು ಮೊದಲಿನಿಂದಲೂ ಈ ತುರುಷ್ಕರ ಸಹವಾಸದಿಂದ ನಿಸ್ಸತ್ವನಾಗಿದ್ದೀಯೆ, ಚಂಚಲಮನಸ್ಕನಾಗಿದ್ದೀಯೆ. ನಾವು ಈ ದಕ್ಷಿಣ ದೇಶದ ವಿಜಯಯಾತ್ರೆಯನ್ನು ಪೂರೈಸುವವರೆಗೆ ನಿನ್ನ ಐವರು ಮಂತ್ರಿಗಳನ್ನು ನಮ್ಮ ಸ್ವಾಧೀನಕ್ಕೆ ಕೊಡಬೇಕು ಎಂದು ಶರತ್ತು ಹಾಕಿದನು.

ಆ ಮಂತ್ರಿಗಳು ವೆಂಕಾಜಿಯ ಜೊತೆಯಲ್ಲಿಯೇ ಬಂದಿದ್ದರು. ಅವರಾಗಿ ಶಿವಾಜಿಯ ಅಧೀನರಾಗದಿದ್ದರೂ ಶಿವಾಜಿಯು ಅವರನ್ನು ಹಿಡಿಸುತ್ತಾನೆಂದು ಅವರು ಖಚಿತಮಾಡಿಕೊಂಡಿದ್ದರು. ಸ್ನೇಹದಿಂದಲೇ ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳುವುದು ಉತ್ತಮವೆಂದು ಬಗೆದು ಅವರು ಶಿವಾಜಿ ಮಹಾರಾಜನನ್ನು ಭೇಟಿಮಾಡಿ ತಾವಾಗಿಯೇ ಅಧೀನರಾಗುತ್ತೇವೆಂದು ಒಪ್ಪಿಕೊಂಡರು. "ನಮ್ಮ ಪ್ರಭುವಾದ ವೆಂಕಾಜಿ ಮಹಾರಾಜರಲ್ಲಿ ನಾವು ಭಕ್ತಿಯಿಂದ ಸೇವೆ ಮಾಡಿದ್ದೇವೆ. ಯವನಸೇನಾಧಿಪತಿಗಳಿಗೂ ನಮಗೂ ಯಾವ ಸ್ನೇಹ ಬಾಂಧವ್ಯವೂ ಇಲ್ಲ, ಅವರು ಪ್ರಬಲರಾಗಿದ್ದಾರೆ, ನಾವು ದುರ್ಬಲರಾಗಿದ್ದೇವೆ. ಆದರಿಂದ ಮಾತ್ರವೆ ಅವರೊಡನೆ ಸ್ನೇಹದಿಂದ ಕಾಲಕ್ಷೇಪಮಾಡುತ್ತಿದ್ದೇವೆ. ಈ ಪ್ರಾಂತ್ಯದ ನಾಯಕರೆಲ್ಲರೂ ಕೃತ್ರಿಮಿಗಳು. ಅವರಲ್ಲಿ ಭರವಸೆ ಇಟ್ಟು ಈ ಮುಸ್ಲಿಂ ಸೇನಾಧಿಪತಿಗಳೊಡನೆ ವಿರೋಧ ಕಟ್ಟಿಕೊಂಡರೆ ನಾವು ಬಾಳುವುದೇ ಕಷ್ಟ, ಅಷ್ಟೇ ಅಲ್ಲ. ನಿಮ್ಮ ತಂದೆಯವರಾದ ಷಾಜಿಯವರು ಈ ರಾಜ್ಯವನ್ನು ಸಂಪಾದಿಸಿದ್ದೂ ಬಿಜಾಪುರ ಸುಲ್ತಾನರ ಸಹಾಯದಿಂದಲೇ. ಹೀಗಿರುವಲ್ಲಿ ನೀವು ನಾವು ಯವನರ ಕಡೆಯಿದ್ದೇವೆ ಎಂದು ಸಂದೇಹಪಡುವುದು ನ್ಯಾಯವಲ್ಲ. ನಮ್ಮ ಮಹಾರಾಜರು ನಿಮ್ಮ ರಕ್ತವನ್ನು ಹಂಚಿಕೊಂಡು

ಹುಟ್ಟಿರುವವರಲ್ಲವೇ ? ಅವರಲ್ಲಿಯೂ ಪೌರುಷವಿದೆ, ಧರ್ಮಾಭಿಮಾನವಿದೆ, ಪರಿಸ್ಥಿತಿಯು ಮಾತ್ರ ಹೀಗಿದೆ ಎಂದು ಬುದ್ಧಿವಂತಿಕೆಯಿಂದ ಅರಿಕೆ ಮಾಡಿದರು.

ಶಿವಾಜಿಯು ನಗುತ್ತಾ, "ವೆಂಕಾಯುಜಿ ನನ್ನ ತಮ್ಮನೇ ಹೌದು, ಆದರೆ ಎಂದೂ ಮುಸಲ್ಮಾನರೊಡನೆ ಹೋರಾಡಿ ನೋಡಿಲ್ಲ, ಅವನು ಮುಸಲ್ಮಾನರಿಗೆ ಯಾವಾಗಲೂ ಅಂಜುತ್ತಾನೆ, ಅವರ ಶಕ್ತಿಸಾಮರ್ಥ್ಯಗಳು ಬಲು ಹೆಚ್ಚಿನದೆಂದು ಅವನೂ ಭಾವಿಸಿದ್ದಾನೆ, ನೀವೂ ಅದೇ ಭ್ರಾಂತಿಯಲ್ಲಿ ತೊಳಲುತ್ತಿದ್ದೀರಿ. ಹಿಂದುಗಳು ಪೌರುಷದಿಂದ ಹೊಡೆದಾಡಿ ಆ ತುರುಷ್ಕರನ್ನು ಓಡಿಸದಿದ್ದರೆ, ಹಿಂದೂಧರ್ಮಕ್ಕೆ ಅಪಾಯವು ತಪ್ಪದು" ಎಂದು ಹೇಳಿ ಅವರನ್ನೆಲ್ಲಾ ತನ್ನ ಶಿಬಿರದಲ್ಲಿಯೇ ಬಂಧನದಲ್ಲಿಡಿಸಿದನು.

ವೆಂಕಾಜಿಯು ನಾಲ್ಕಾರು ದಿನಗಳ ತನಕ ಶಿವಾಜಿಯ ಶಿಬಿರದಲ್ಲಿಯೇ ಇರುತ್ತಿದ್ದನು.

೮

ವೆಂಕಾಜಿಗೆ ಶಿವಾಜಿಯ ಶಿಬಿರದ ಅನುಭವವು ಅತ್ಯಂತ ಹೊಸರೀತಿಯದಾಗಿದ್ದಿತು. ಅವನು ಬೇರೊಂದು ಲೋಕದಲ್ಲಿಯೇ ಇರುವಂತೆ ಭಾವಿಸುತ್ತಿದ್ದನು. ಸೇನಾಧಿಪತಿಗಳೆಲ್ಲರೂ ವೆಂಕಾಜಿಯನ್ನು ಅತಿವಿಶ್ವಾಸದಿಂದ ಕಾಣುತ್ತಿದ್ದರು. ಆ ಶಿಬಿರದಲ್ಲಿ ಯುವರಾಜನಿಗೆ ಸಲ್ಲುವ ಮಾನ, ಮನ್ನಣೆಗಳೆಲ್ಲವನ್ನೂ ತಾವಾಗಿಯೇ ಸಲ್ಲಿಸುತ್ತಿದ್ದರು. ವೆಂಕಾಜಿಗೆ ಶಿವಾಜಿಯನ್ನು ಕಂಡರೆ ಭಯವಾಗುತ್ತಿದ್ದಿತು. ಅವನ ಸಮೀಪಕ್ಕೆ ಹೋಗುವುದಕ್ಕೆ ಹಿಂತೆಗೆಯುತ್ತಿದ್ದನು, ಮಾತನಾಡುವುದಕ್ಕೆ ಸಿಕ್ಕದೆ ತಪ್ಪಿಸಿಕೊಳ್ಳುತ್ತಿದ್ದನು. ಸೈನ್ಯದಲ್ಲಿ ಎಲ್ಲ ಕಡೆಯೂ ನೋಡಿ, ವೆಂಕಾಜಿಗೆ ಆಶ್ಚರ್ಯಕರವಾದ ಎಷ್ಟೋ ಹೊಸಹೊಸ ಅನುಭವಗಳಾಗುತ್ತಿದ್ದವು. ಪ್ರತಿಯೊಬ್ಬ ಸೈನಿಕನಿಗೆ ಶಿವಾಜಿಯಲ್ಲಿ ಅತ್ಯಂತ ಭಕ್ತಿ ಇರುವುದೆಂದು ವೆಂಕಾಜಿಗೆ ಅರ್ಥವಾಯಿತು. ಪರಾಕ್ರಮದಲ್ಲಿ, ಧೈರ್ಯ ಸಾಹಸಗಳಲ್ಲಿ ಯಾವ ಸೈನಿಕನೂ ಒಬ್ಬನಿಗಿಂತ ಒಬ್ಬನು ಕಡಿಮೆಯಾಗಿರಲಿಲ್ಲ. ಸೇನಾಧಿಪತಿಗಳಲ್ಲಿಯೂ ಅಂತಹ ಪ್ರಕರ್ಷವಾದ ರಾಜನಿಷ್ಠೆಯನ್ನು ವೆಂಕಾಜಿಯು ಕಾಣುತ್ತಿದ್ದನು. ಮುಸಲ್ಮಾನರ ವಿಷಯದಲ್ಲಿ ಪ್ರತಿಯೊಬ್ಬ

ಸೇನಾಧಿಪತಿಯೂ ಸೈನಿಕನಿಗೂ ತೀವ್ರವಾದ ದೋಷವು ಎದ್ದು ಕಾಣುತ್ತಿದ್ದಿತು. ಬುದ್ಧಿವಂತನಾದ ವೆಂಕಾಜಿಯು ಇದನ್ನೆಲ್ಲಾ ಸೂಕ್ಷ್ಮವಾಗಿ ತಿಳಿದುಕೊಂಡನು. ಅವನ ಮನಸ್ಸಿಗೆ ಈ ಸಮೂಹದಲ್ಲಿರುವುದು ಸುಖಕರವಲ್ಲವೆಂದು ತೋರ ಲಾರಂಭಿಸಿತು. ಸುಖ ಮತ್ತು ಐಶ್ವರ್ಯಗಳನ್ನು ಸರ್ವದಾ ಬಯಸುವ ತನಗೂ ಶಿವಾಜಿಗೂ ಎಂದೆಂದಿಗೂ ಹೊಂದಿಕೆಯಾಗುವುದಿಲ್ಲವೆಂದು ಅವನ ಮನಸ್ಸಿನಲ್ಲಿ ನಿರ್ಧಾರಮಾಡಿಕೊಂಡನು.

ವೆಂಕಾಜಿಯು ಶಿವಾಜಿಗೆ ಮನಃಪೂರ್ವಕವಾಗಿ ಶರಣಾಗತನಾಗಿರಲಿಲ್ಲ. ಅಣ್ಣನೆಂಬ ಭಕ್ತಿಯು ಅವನಲ್ಲಿ ಲವಲೇಶವೂ ಇರಲಿಲ್ಲ. ಶಿವಾಜಿಯು ತನ್ನ ಮೇಲೆ ಆಕ್ರಮಣ ಮಾಡುವನೆಂಬ ಭಾವನೆ ಅವನಿಗಿರಲೇ ಇಲ್ಲ. ಏಕಾಏಕೀ ಮಹಾರಾಷ್ಟ್ರ ಸೈನ್ಯಗಳು ಬಂದು ಮುತ್ತಿಗೆ ಹಾಕಿಬಿಟ್ಟವು. ಅವನಲ್ಲಿ ಸ್ವಂತ ಸೈನ್ಯವು ಇರಲೇ ಇಲ್ಲ. ಮುಸಲ್ಮಾನ್ ಸುಲ್ತಾನರ ಸೈನ್ಯಗಳ ಮೇಲೆ ಬಹಳ ಭರವಸೆ ಇತ್ತು. ಪಾಳೆಯಗಾರರು ತನ್ನ ಸಹಾಯಕ್ಕೆ ಬಂದು ಹಣಾಹಣೀ ಯುದ್ಧ ಮಾಡುವರೆಂದು ನಂಬಿಕೆ ಇಟ್ಟುಕೊಂಡಿದ್ದನು, ಆದೆಲ್ಲಾ ಬಯಲಾಗಿ ಹೋಯಿತು. ಶಿವಾಜಿಗೆ ಶರಣಾಗತನಾದದ್ದೇನೋ ಆಯಿತು, ಆದರೂ ನಾನು ಸ್ವತಂತ್ರನಾಗಿ ಬಾಳಬೇಕು, ಮುಸಲ್ಮಾನರಿಗೂ ಅಧೀನನಾಗಬಾರದು, ಶಿವಾಜಿಯ ಅಧೀನದಲ್ಲಿಯೂ ಇರಬಾರದು, ಶಿವಾಜಿಗೆ ಇಬ್ಬರು ಮಕ್ಕಳಿದ್ದಾರೆ, ಸಾಂಬಾಜಿಯು ಪರಾಕ್ರಮಶಾಲಿ ಎಂದು ಈ ಸೇನಾಧಿಪತಿಗಳು ಹೇಳುತ್ತಾರೆ. ಯುವರಾಜಪಟ್ಟವಾದರೂ ಅವನಿಗೇ ಸಲ್ಲತಕ್ಕದ್ದು ನನಗೆಲ್ಲಿ ಬರುತ್ತದೆ, ಈ ತಂಜಾವೂರನ್ನು ಸ್ವತಂತ್ರವಾಗಿ ಉಳಿಸಿಕೊಳ್ಳಬೇಕು ಎಂದು ಆಲೋಚನೆ ಮಾಡಿ, ತನ್ನ ಕಡೆಯ ಜನರನ್ನು ಗುಟ್ಟಾಗಿ ತಂಜಾವೂರಿಗೆ ಕಳುಹಿಸಿಕೊಟ್ಟನು. ರಾತ್ರಿವೇಳೆಯಲ್ಲಿ ಯಾರಿಗೂ ಕಣ್ಣಿಗೆ ಬೀಳದಂತೆ ಅರಮನೆಯಲ್ಲಿದ್ದ ಐಶ್ವರ್ಯವನ್ನೆಲ್ಲಾ ಎತ್ತುಗಳ ಮೇಲೆ ಹೇರಿಸಿ ರಘೋಬನೆಂಬ ಆಪ್ತ ಸೇನಾಧಿಪತಿಯೊಡನೆ ಅದನ್ನೆಲ್ಲಾ ಮದರಾಸಿಗೆ ಸಾಗಿಸುವ ವ್ಯವಸ್ಥೆ ಮಾಡಿದನು. ಶುಂಠಿ, ಮೆಣಸು, ಯಾಲಕ್ಕಿ ಮುಂತಾದ ಪದಾರ್ಥಗಳನ್ನು ಇಂಗ್ಲೀಷ್ ಕೋಠಿಗೆ ಸಾಗಿಸಿಕೊಂಡುಹೋಗುವ ವ್ಯಾಪಾರಿಗಳಂತೆ ವೇಶವನ್ನು ಧರಿಸಿಕೊಂಡು ರಘೋಬನು ಮದರಾಸಿನ ಕಡೆಗೆ ಪ್ರಯಾಣ ಮಾಡಿದನು.

ವೆಂಕಾಜಿಯು ತಹತಹಪಡುತ್ತಾ ಅತಿಪ್ರಯಾಸದಿಂದ ಶಿವಾಜಿಯ ಶಿಬಿರ

ದಲ್ಲಿ ದಿನದಿನಗಳನ್ನು ಎಣಿಸುತ್ತಾ ಕಾಲಕಳೆಯುತ್ತಿದ್ದನು. ರಘೋಬನು ಮದರಾಸಿಗೆ ನಿರಾತಂಕವಾಗಿ ಸೇರಿದ ವಾರ್ತೆಯೂ ಬಂದಿತು. ವೆಂಕಾಜಿಯು ರಾತ್ರಿಯ ವೇಳೆಯಲ್ಲಿ ಇದ್ದಕ್ಕಿದ್ದಂತೆ ಶಿಬಿರದಿಂದ ಮಾಯವಾಗಿಹೋದನು. ಬೆಳಕು ಹರಿಯುತ್ತಲೇ ಶಿಬಿರದಲ್ಲಿ ವೆಂಕಾಜಿಯನ್ನು ಕಾಣದೆ ಸೇನಾಧಿಪತಿಗಳು ಗಾಬರಿಗೊಂಡರು. ಶಿವಾಜಿಗೆ ವೆಂಕಾಜಿ ಮಹಾರಾಜನು ಮಾಯವಾಗಿದ್ದಾ ನೆಂದು ತಿಳಿಯಪಡಿಸಿದರು. ಶಿವಾಜಿಯು ತಂಜಾವೂರಿನಲ್ಲಿ ವೆಂಕಾಜಿಯನ್ನು ಹುಡುಕಿಸಿದ, ಎಲ್ಲಿಯೂ ಅವನ ಸುಳಿವೇ ಸಿಗಲಿಲ್ಲ. ಸೇನಾಧಿಪತಿಗಳನ್ನು ಕರೆದು ತಂಜಾವೂರಿನ ಕೋಟೆಯನ್ನೂ ಅರಮನೆಯನ್ನೂ ವಶಪಡಿಸಿಕೊಳ್ಳುವಂತೆ ಅಪ್ಪಣೆ ಮಾಡಿದನು.

ಮರಾಠಾ ಸೈನ್ಯಗಳು ತಂಜಾವೂರನ್ನು ಮುತ್ತಿ ಸುಲಭವಾಗಿ ವಶಪಡಿಸಿ ಕೊಂಡವು, ಯಾವ ಪ್ರತಿರೋಧವೂ ಇರಲಿಲ್ಲ. ತಂಜಾವೂರು ಪೂರ್ತಿಯಾಗಿ ವಶವಾದ ನಂತರ ಶಿವಾಜಿಯು ಅರಮನೆಗೆ ಕಾವಲುಹಾಕಿ, ರಾಣಿವಾಸದವರೆಲ್ಲ ರಿಗೂ ಹೇಳಿಕಳುಹಿಸಿದನು. ವೆಂಕಾಜಿಯು ಮನಶ್ಶಾಂತಿ ಇಲ್ಲದೆ, ಎಲ್ಲಿಯೋ ಅಲೆಯುತ್ತಿದ್ದಾನೆ. ಅರಮನೆಗೆ ಬೇಕಾದ ಸರಬರಾಜುಗಳನ್ನೆಲ್ಲಾ ನಮ್ಮ ಸೇನಾಧಿಪತಿಗಳು ಗೌರವದಿಂದ ನಡೆಸುತ್ತಾರೆ. ಅರಮನೆಗೆ ಬಂದುಹೋಗುವ ಬ್ರಾಹ್ಮಣರು, ದಾಸದಾಸಿಯರು, ಕಾರಕೂನರು, ಮುತ್ಸದ್ದಿಗಳು ಇವರ್ಯಾ ರಿಗೂ ಪ್ರವೇಶಕ್ಕೆ ಅಡ್ಡಿಯಿರುವುದಿಲ್ಲ, ಅರಮನೆಯ ಮಾನಮರ್ಯಾದೆಗಳಿಗೆ ಎಳ್ಳಷ್ಟೂ ಕುಂದಿಲ್ಲ, ಎಲ್ಲರೂ ಧೈರ್ಯದಿಂದಿರಲಿ, ವೆಂಕಾಜಿಯು ಎಲ್ಲಿದ್ದರೂ ಹುಡುಕಿಸಿ ಕರೆಸಿಕೊಡುತ್ತೇನೆ, ಅವನ ತಪ್ಪುಗಳನ್ನೆಲ್ಲಾ ಕ್ಷಮಿಸಿದ್ದೇನೆ ಎಂದು ಹೇಳಿಕಳುಹಿಸಿದನು.

ಪುರಪ್ರಮುಖರನ್ನೂ ಅಧಿಕಾರಿಗಳನ್ನೂ ಶಿವಾಜಿಯು ತನ್ನ ಸಮ್ಮುಖಕ್ಕೆ ಕರೆಸಿಕೊಂಡು ಅವರೆಲ್ಲರಿಗೂ ಧೈರ್ಯಹೇಳಿ ಅವರವರ ಕಾರ್ಯಗಳಲ್ಲಿ ಅವರುಗಳು ನಿರತರಾಗಿರುವಂತೆ ಅಪ್ಪಣೆ ಮಾಡಿದನು. ಕೋಟೆ ಕೊತ್ತಲುಗಳಲ್ಲೆಲ್ಲಾ ಶಿವಾಜಿಯ ಸೈನಿಕರು ಆಕ್ರಮಿಸಿಕೊಂಡು ಕಟ್ಟುಕಾವಲನ್ನು ಕಾಯಲಾರಂಭಿಸಿ ದರು.

ಶಿವಾಜಿಯು ತನ್ನ ಶಿಬಿರದಲ್ಲಿ ಬಂಧನದಲ್ಲಿದ್ದ ವೆಂಕಾಜಿಯ ಮಂತ್ರಿ ಗಳನ್ನು ಕರೆಸಿ "ನಿಮ್ಮ ಮಹಾರಾಜನು ನಮ್ಮ ಶಿಬಿರದಿಂದ ತಲೆತಪ್ಪಿಸಿಕೊಂಡು

ಓಡಿಹೋಗಿದ್ದಾನೆ. ಅವನು ಹುಡುಗರಂತೆ ಚಂಚಲ ಮನಸ್ಸಿನವನಾಗಿದ್ದಾನೆ, ಎಲ್ಲಿ ಹೋದರೂ ಮತ್ತೆ ನಮ್ಮಲ್ಲಿಗೇ ಬರುತ್ತಾನೆ, ಅವನನ್ನೇ ನಿಮ್ಮ ರಾಜನನ್ನಾಗಿ ಪಟ್ಟಕಟ್ಟಿಸುತ್ತೇನೆ, ನೀವುಗಳು ಅವನ ದುರ್ಮಂತ್ರಿಗಳೆಂದು ಭಾವಿಸಿ ನಿಮ್ಮನ್ನು ಬಂಧನದಲ್ಲಿಡಿಸಿದೆ, ನೀವು ಮುಸಲ್ಮಾನ್ ಫೌಜುದಾರರುಗಳ ಸುಲ್ತಾನರ ಆಶ್ರಯಕ್ಕೆ ಹೋಗಬೇಡಿರಿ. ಅವರು ನಿಜವಾಗಿಯೂ ಪ್ರೀತಿಯಿಂದ ಆಶ್ರಯ ಕೊಡತಕ್ಕವರಲ್ಲ, ಅಷ್ಟೇ ಅಲ್ಲ, ಅವರುಗಳನ್ನು ಪೂರ್ತಿಯಾಗಿ ನಿರ್ಮೂಲ ಮಾಡದೇ ನಾನು ಈ ದಕ್ಷಿಣರಾಜ್ಯದಿಂದ ಹಿಂತಿರುಗುವುದೂ ಇಲ್ಲ, ಹಿಂದುಗಳಾಗಿ ಬಾಳಿ ಬದುಕಿರಿ, ಪರಾಕ್ರಮದ ಬಾಳನ್ನು ಸಾಧಿಸಿರಿ" ಎಂದು ಅವರುಗಳಿಗೆ ಬುದ್ಧಿವಾದಗಳನ್ನು ಹೇಳಿ ಉಡುಗರೆಗಳನ್ನೂ ಸುವರ್ಣ ವರಹಗಳನ್ನೂ ತರಿಸಿಕೊಟ್ಟು ಬಿಡುಗಡೆ ಮಾಡಿ ಕಳುಹಿಸಿದನು. ತಂಜಾವೂರಿನ ಅಧಿಕಾರಕ್ಕೆ ಹನುಮಂತೆಯನ್ನು ನಿಯಮಿಸಿ ಮಧುರೆಯ ಕಡೆಗೆ ಸೈನ್ಯವನ್ನು ತೆಗೆದುಕೊಂಡು ಹೊರಟನು.

ಮಧುರೆಯಲ್ಲಿ ಇನಾಯಿತುಲ್ಲಾ ಎಂಬ ಫೌಜುದಾರನಿದ್ದನು. ಅವನು ಬಾದಶಹ ಔರಂಗಜೇಬನ ಸೇನಾಧಿಪತಿ ಎಂದು ಹೇಳಿಕೊಳ್ಳುತ್ತಿದ್ದನು. ಆದರೆ ಜನರೆಲ್ಲರೂ ಅವನನ್ನು ಸುಲ್ತಾನನೆಂದೇ ಕರೆಯುತ್ತಿದ್ದರು. ಮರಾಠಾ ಸೈನ್ಯಗಳು ತನ್ನ ಮೇಲೆ ಯುದ್ಧಕ್ಕೆ ಬರುತ್ತಿದೆ ಎಂದು ತಿಳಿದು ಸುಲ್ತಾನನು ತನ್ನ ಸೈನ್ಯವನ್ನು ಹುರಿದುಂಬಿಸಿ ಎತ್ತಿಕಟ್ಟಿದನು. ದೆಹಲಿಗೆ ಸಹಾಯವನ್ನು ಕಳುಹಿಸಿಕೊಡಬೇಕೆಂದು ದೂತರನ್ನು ಅಟ್ಟಿದನು. ಸುಲ್ತಾನನು ಶಿವಾಜಿಯನ್ನು ಎದುರಿಸಲು ದಂಡೆತ್ತಿ ದಿಂಡಿಗಲ್ಲಿನವರೆಗೆ ಬಂದು ನಿಂತನು. ಶಿವಾಜಿಗೂ ಸುಲ್ತಾನನಿಗೂ ಯುದ್ಧವು ನಡೆಯಿತು. ಸುಲ್ತಾನನು ಪರಾಕ್ರಮದಿಂದ ಯುದ್ಧ ಮಾಡಿದರೂ ಹಿಂದುಹಿಂದಕ್ಕೆ ಸರಿಯುತ್ತಲೇ ಹೋದನು. ಕೊನೆಗೆ ಮಧುರೆಯ ಸಮೀಪದಲ್ಲಿಯೇ ಪ್ರಬಲವಾದ ಯುದ್ಧವಾಯಿತು. ಸುಲ್ತಾನನು ತನ್ನ ಸೇನಾಬಲವು ಕಡಿಮೆಯಾಗಿದೆ ಎಂದು ತಿಳಿದುಕೊಂಡು ಶಿವಾಜಿಯೊಡನೆ ಸಂಧಿಯನ್ನು ಬೇಡಿದನು. ಶಿವಾಜಿಯು ಸಂಧಿಗೆ ಸಮ್ಮತಿಸಲಿಲ್ಲ. ಮಧುರೆಯಲ್ಲಿ ಸುಲ್ತಾನೀ ರಾಜ್ಯವು ಎಂದೂ ಇರಲಿಲ್ಲ. ಹಿಂದೆಯೂ ದೆಹಲಿಯ ಬಾದಶಹನ ಕಡೆಯ ಫೌಜುದಾರರು, ಈ ರಾಜ್ಯದ ಮೇಲೆ ದುರಾಕ್ರಮಣ ಮಾಡಿ ಇಲ್ಲಿ ನಿಂತರು. ಈಗ ಅದೇ ಪುನರಾವೃತ್ತಿಯಾಗಿದೆ. ಇನಾಯಿತುಲ್ಲನು ಮಧುರೆಯಲ್ಲಿರಲು

ನಾವು ಎಡೆಗೊಡುವುದಿಲ್ಲ. ಅವನು ಅಳಿದುಳಿದಿರುವ ಸೈನ್ಯಗಳೊಡನೆ ತನ್ನ ಪರಿವಾರದೊಡನೆ ಹಿಂತಿರಿಗಿ ಹೋಗಬಹುದು ಪ್ರಾಣಸಹಿತ ಬಿಟ್ಟುಕೊಡುತ್ತೇವೆ. ಈ ರಾಜ್ಯದಲ್ಲಿ ಅಂಗೈ ಅಗಲವೂ ಫೌಜುದಾರನಿಗೆ ಸಿಕ್ಕುವುದಿಲ್ಲ' ಎಂದು ಹೇಳಿ ಕಳುಹಿಸಿದನು. ಸುಲ್ತಾನನು ಅಪಮಾನಿತನಾಗಿ ಯುದ್ಧಕ್ಕೆ ಸಿದ್ಧನಾಗಿ ಬಂದನು. ಯುದ್ಧದಲ್ಲಿ ಪರಾಕ್ರಮದಿಂದ ಹೋರಾಡಿ ಒಂದೇ ದಿನದಲ್ಲಿ ಮಡಿದು ಹೋದನು.

ಸುಲ್ತಾನನ ಸೈನಿಕರೆಲ್ಲರೂ ದಿಕ್ಕಾಪಾಲಾಗಿ ಓಡಿಹೋದರು. ಶಿವಾಜಿಯು ಮಧುರೆಯನ್ನು ಆಕ್ರಮಣಮಾಡಿದನು. ಸುಲ್ತಾನನ ಅರಮನೆಯಲ್ಲಿದ್ದ ಸ್ತ್ರೀಯರನ್ನೆಲ್ಲಾ ಮರ್ಯಾದೆಯಿಂದ ಅವರವರ ತವರೂರುಗಳಿಗೆ ಸಾಗಿಸಿ ಅರಮನೆಯನ್ನು ವಶಪಡಿಸಿಕೊಂಡನು. ಶಿವಾಜಿಯು ಕೆಲವು ದಿನಗಳು ಮಧುರೆಯಲ್ಲಿಯೇ ಇದ್ದನು. ಮೀನಾಕ್ಷಿ ದೇವಾಲಯವನ್ನು ಮಂಟಪ ಸರೋವರಗಳನ್ನು ದುರಸ್ತು ಮಾಡಿಸಿ ಆ ಊರಿಂದ ಓಡಿಹೋಗಿದ್ದ ವೈದಿಕ ಬ್ರಾಹ್ಮಣರುಗಳನ್ನು ಸುತ್ತಮುತ್ತಲಿಂದ ಕರೆಸಿ ಮಧುರೆಯಲ್ಲಿಯೇ ಇರುವಂತೆ ವ್ಯವಸ್ಥೆ ಮಾಡಿದನು. ಮಧುರೆಯ ಮೀನಾಕ್ಷಿ ದೇವಾಲಯಕ್ಕೆ ರತ್ನಾಭರಣಗಳನ್ನು ಒಪ್ಪಿಸಿ ಭೂಮಿ. ಕಾಣಿಕೆಗಳನ್ನು ಕೊಡಿಸಿದನು. ಸುಲ್ತಾನನು ಮಧುರೆಯ ನಾಯಕರನ್ನು ದೂರದಲ್ಲಿದ್ದ ಪಳನಿ ಕ್ಷೇತ್ರದಲ್ಲಿ ಸೆರೆ ಇಟ್ಟಿದ್ದನು. ಶಿವಾಜಿಯು ಅವರನ್ನು ಕರೆಸಿ ಮಧುರೆಯ ರಾಜ್ಯವನ್ನು ಅವರಿಗೊಪ್ಪಿಸಿ ಅವರ ರಕ್ಷಣೆಗೆ ಸೈನ್ಯವನ್ನು ಇಟ್ಟು ತಿರುಚನಾಪಳ್ಳಿಗೆ ಸೈನ್ಯಸಮೇತವಾಗಿ ಹಿಂತಿರುಗಿದನು. ತಿರಚನಾಪಳ್ಳಿಯಲ್ಲಿದ್ದ ನವಾಬನು ಮಧುರೆಯ ಸುಲ್ತಾನರ ಗತಿಯನ್ನು ಕೇಳಿ ಭಯದಿಂದ ತನ್ನಲ್ಲಿದ್ದ ಐಶ್ವರ್ಯವನ್ನೆಲ್ಲಾ ತೆಗೆದುಕೊಂಡು ಪರಿವಾರಸಮೇತನಾಗಿ ಮಲೆಯಾಳದ ಕಡೆಗೆ ಓಡಿ ಹೋಗಿದ್ದನು. ಶಿವಾಜಿಯು ತಿರುಚನಾಪಳ್ಳಿಯ ಕೋಟೆಯನ್ನು ನಿರಾತಂಕವಾಗಿ ವಶಪಡಿಸಿಕೊಂಡನು. ಶ್ರೀರಂಗ, ಜಂಬುಕೇಶ್ವರ ಮುಂತಾದ ದೇವಾಲಯುಗಳನ್ನೆಲ್ಲಾ ಪುನರುದ್ಧಾರಗೊಳಿಸಿ ಬೆಳಗುವಂತೆ ಮಾಡಿದನು.

ಶಿವಾಜಿಯು ದಕ್ಷಿಣಕ್ಕೆ ಬಂದು ಆರು ತಿಂಗಳುಗಳ ಕಾಲ ಕಳೆದು ಹೋಯಿತು. ಅವನು ಮಹಾರಾಷ್ಟ್ರಕ್ಕೆ ಹಿಂತಿರುಗಬೇಕೆಂದು ಆಲೋಚನೆ ಮಾಡುತ್ತಿದ್ದನು.

ಶಿವಾಜಿಯ ಶಿಬಿರದಿಂದ ಪಲಾಯನಮಾಡಿದ್ದ ವೆಂಕಾಜಿಯು ಮದರಾಸಿಗೆ ಹೋಗಿ ಇಂಗ್ಲೀಷರ ಆಶ್ರಯದಲ್ಲಿ ಗೋಪ್ಯವಾಗಿ ಅಜ್ಞಾತವಾಸ ಮಾಡಲು ಆರಂಭಿಸಿದನು. ತನ್ನ ಕಡೆಯ ರಾಯಭಾರಿಗಳನ್ನು ಬಿಜಾಪುರಕ್ಕೂ ದೆಹಲಿಗೂ ಕಳುಹಿಸಿಕೊಟ್ಟನು. 'ಶಿವಾಜಿಯು ಮುಸಲ್ಮಾನರ ವಿದ್ವೇಷಿ. ಅವನನ್ನು ದಕ್ಷಿಣದಿಂದ ಹೊಡೆದೋಡಿಸದಿದ್ದರೆ, ಮುಸಲ್ಮಾನರಿಗೆ ದಕ್ಷಿಣದಲ್ಲಿ ಉಳಿಗಾಲ ವಿಲ್ಲ. ಹುಟ್ಟಿದಂದಿನಿಂದಲೂ ನಾನು ಶಿವಾಜಿಯನ್ನು ದ್ವೇಶಿಸುತ್ತಲೇ ಬಂದಿದ್ದೇನೆ. ಅವನನ್ನು ಸೋಲಿಸಿ ಹಿಂದಕ್ಕೋಡಿಸಬೇಕೆಂದು ದೃಢಸಂಕಲ್ಪ ಮಾಡಿದ್ದೇನೆ. ಮಧುರೆಯ ಸುಲ್ತಾನನು ರಣರಂಗದಲ್ಲಿ ಮಡಿದುಹೋದ ತಿರುಚನಾಪಳ್ಳಿಯ ನವಾಬನೂ ಪಲಾಯನಮಾಡಿದ್ದಾನೆ. ನನಗೆ ಸಹಾಯ ಮಾಡಿದರೆ. ಶಿವಾಜಿಯನ್ನು ತುಂಗಭದ್ರೆಯ ಆಚೆಗೆ ಹೊಡೆದು ಓಡಿಸುತ್ತೇನೆ. ಮಧುರೆ, ತಿರುಚನಾಪಳ್ಳಿಯ ರಾಜ್ಯವನ್ನು ಮುಸಲ್ಮಾನರಿಗೆ ಬಿಟ್ಟುಕೊಡುತ್ತೇನೆ, ತಂಜಾವೂರು ರಾಜ್ಯವನ್ನು ಮಾತ್ರ ನಾನು ಇಟ್ಟುಕೊಳ್ಳುತ್ತೇನೆ' ಎಂದು ಹೇಳಿಕಳುಹಿಸಿದನು. ರಾಯಭಾರಿಗಳು ಬಿಜಾಪುರಕ್ಕೂ ದೆಹಲಿಗೂ ಯಥೇಚ್ಛ ಹಣವನ್ನು ತೆಗೆದುಕೊಂಡು ಹೋಗಿ, ಆ ದರ್ಬಾರುಗಳಲ್ಲಿ ವೆಂಕಾಜಿಯ ಸಂದೇಶವನ್ನು ಹೇಳಿ ಪ್ರಯತ್ನಪಟ್ಟರು, ಎರಡು ಸ್ಥಳಗಳಲ್ಲಿಯೂ ಪ್ರಯೋಜನವಾಗಲಿಲ್ಲ. ಬಿಜಾಪುರದಲ್ಲಿ ಸುಲ್ತಾನನ ಅರಮನೆಯ ಅಂತಃಕಲಹ ಗಳಿಂದ ಬೇಯುತ್ತಿದ್ದಿತು, ಅಲ್ಲಿ ವೆಂಕಾಜಿಯ ರಾಯಭಾರಿಗಳ ಮಾತನ್ನು ಕೇಳುವವರೂ ಇಲ್ಲ, ಕಿವಿಗೊಡುವವರೂ ಇಲ್ಲ, ದೆಹಲಿಯಲ್ಲಿ ಔರಂಗಜೇಬ್ ಬಾದಶಹನು ಇರಲಿಲ್ಲ. ಅಲ್ಲಿದ್ದ ದರ್ಬಾರಿನ ಅಧಿಕಾರಿಗಳು ಆ ರಾಯಭಾರಿ ಗಳನ್ನು ದಖನ್ನಿನ ಸರ್ವಸೇನಾಧಿಪತಿ ದಿಲೀಪ್‌ಖಾನನಲ್ಲಿ ಸಾಗುಹಾಕಿದರು. ರಾಯಭಾರಿಗಳು ಔರಂಗಾಬಾದಿನಲ್ಲಿದ್ದ ದಿಲೀಪ್‌ಖಾನನನ್ನು ಭೇಟಿ ಮಾಡಿ ವೆಂಕಾಜಿ ಮಹಾರಾಜರ ಸಂದೇಶವನ್ನು ಅರುಹಿದರು. ದಿಲೀಪ್‌ಖಾನನು "ಎಲ್ಲವೂ ಕೈಮಿಂಚಿಹೋಗಿದೆ. ನಿಮ್ಮ ಮಹಾರಾಜನು ಕೋಟೆಯನ್ನು ಬಿಟ್ಟು ಓಡಿಹೋಗಿದ್ದಾನೆ, ಮಧುರೆ ರಾಜ್ಯವು ತಿರುಚನಾಪಳ್ಳಿಯ ಕೋಟೆಯೂ ಶಿವಾಜಿಯ ವಶವಾಗಿದೆ, ಈಗ ನಾವು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಬಂದು ಶಿವಾಜಿಯನ್ನು ಗೆದ್ದು ದಕ್ಷಿಣ ದೇಶವನ್ನೆಲ್ಲಾ ಸ್ವಾಧೀನಪಡಿಸಿಕೊಂಡು ನಿಮ್ಮ ಮಹಾರಾಜನನ್ನು ಅಧಿಪತಿಯಾಗಿ ಮಾಡಬೇಕು. ಅವನೂ ಶಿವಾಜಿಯ

ಸೋದರನೇ, ಇದರಿಂದ ಬಾದಶಹರಿಗೆ ತೃಪ್ತಿಯಾಗುವುದಿಲ್ಲ" ಎಂದು ಖಡಾ ಖಂಡಿತವಾಗಿ ಹೇಳಿ ರಾಯಭಾರವನ್ನು ನಿರಾಕರಿಸಿದನು.

ರಾಯಭಾರಿಗಳಿಗೆ ನಿರಾಶೆ ಉಂಟಾಯಿತು, ಅವರು ಹಿಂತಿರುಗಿ ಬರಲೇ ಇಲ್ಲ. ದೂತರ ಮುಖೇನ ತಮ್ಮ ರಾಯಭಾರಗಳು ನಿರರ್ಥಕವಾದುವೆಂದು ಹೇಳಿ ಕಳುಹಿಸಿದರು.

ವೆಂಕಾಜಿಗೆ ನಿರಾಶೆಯಾಯಿತು. ದಿಕ್ಕುತೋಚದಂತಾಯಿತು. ತಂಜಾ ಊರಿನ ಕಡೆಯಿಂದಲೂ ಗುಪ್ತಚಾರರ ಮೂಲಕ ಅವನಿಗೆ ಸಮಾಚಾರಗಳು ಬರುತ್ತಿದ್ದಿತು. ಶಿವಾಜಿಯು ತನ್ನ ಅರಮನೆಯ ಗೌರವಕ್ಕೆ ಲೋಪವನ್ನುಂಟು ಮಾಡಿಲ್ಲ. ಬಂಧನದಲ್ಲಿಟ್ಟುಕೊಂಡಿದ್ದ ಮಂತ್ರಿಗಳನ್ನು ಮರ್ಯಾದೆಮಾಡಿ ಬಿಟ್ಟು ಬಿಟ್ಟಿದ್ದಾನೆ, ತನ್ನ ಕಡೆಯ ಅಧಿಕಾರಿಗಳನ್ನೆಲ್ಲಾ ಅವರವರ ಕೆಲಸಗಳಿಗೆ ನೇಮಿಸಿದ್ದಾನೆ, ಅಲ್ಲಿ ಮಾತ್ರ ಇನ್ನೂ ಸ್ವಲ್ಪ ಆಸೆ ಉಳಿದಿದೆ ಎಂದು ಯೋಚನೆ ಮಾಡಿಕೊಂಡು ಮದರಾಸಿನಿಂದ ಹಿಂತಿರುಗಿ ಬಂದು ಶಿವಾಜಿಯನ್ನು ಭೇಟಿಮಾಡಿ ಅಣ್ಣನ ಪಾದಗಳಿಗೆರಗಿ ಕ್ಷಮಾಪ್ರಾರ್ಥನೆಮಾಡಿ ಶರಣಾಗತನಾದನು. ಶಿವಾಜಿಯು ಅವನನ್ನು ಎತ್ತಿ ಆಲಿಂಗಿಸಿ "ವೆಂಕಾಜಿ, ನಿನ್ನಲ್ಲಿ ಏನೂ ತಪ್ಪಿಲ್ಲ, ನಿನ್ನ ಬುದ್ಧಿಯಲ್ಲಿ ತಪ್ಪಿದೆ. ನಮ್ಮ ವಿರೋಧಿಗಳಾದ ಮುಸಲ್ಮಾನರನ್ನು ನಂಬಿದ್ದೇ ನಿನ್ನ ದೋಷ. ನಮ್ಮ ತಂದೆಯವರಿಗೆ ಈ ಮುಸಲ್ಮಾನರಲ್ಲಿ ಬಹಳ ನಂಬಿಕೆ ಇತ್ತು. ಮುಸಲ್ಮಾನರ ಸಹವಾಸದಿಂದ ಅವರೂ ಎಷ್ಟೋ ಸಂಕಟ ಗಳನ್ನು ಅನುಭವಿಸಿದರು ನಿನಗೂ ಅದೇ ಪ್ರಾಪ್ತವಾಯಿತು. ನಾನು ಜೀವಂತ ನಾಗಿರುವಾಗ ನನ್ನ ಹೆಸರು ಈ ರಾಜ್ಯದಲ್ಲಿ ಕೇಳಿಬರುವವರೆಗೆ ಮುಸಲ್ಮಾನರಿಗೆ ಇತ್ತಕಡೆಗೆ ಇಣಕಿ ನೋಡದಂತೆ ಮಾಡಿದ್ದೇನೆ, ನೀನು ತಂಜಾಊರು ರಾಜ್ಯ ದಲ್ಲಿ ಸುಖವಾಗಿರು, ನಿನ್ನ ದೊರೆತನವು ವಂಶಪಾರಂಪರ್ಯವಾಗಿ ಬೆಳೆದುಬರು ತ್ತದೆ" ಎಂದು ಹೇಳಿ ಆಶೀರ್ವದಿಸಿ ಅವನನ್ನು ತಂಜಾಊರಿಗೆ ಕರೆತಂದು ಪುನಃ ಪಟ್ಟಾಭಿಷೇಕ ಮಾಡಿಸಿದನು. ಹನುಮಂತೆಯನ್ನು ಅವನ ಮಂತ್ರಿಯಾಗಿ ನಿಯಮಿಸಿದನು. ಗೆದ್ದ ರಾಜ್ಯಗಳಲ್ಲೆಲ್ಲಾ ಆಡಳಿತ ವ್ಯವಸ್ಥೆಯನ್ನು ಏರ್ಪಡಿಸಿ ಮಹಾರಾಷ್ಟ್ರ ರಾಜ್ಯಕ್ಕೆ ಮೈಸೂರು ದೇಶದ ಮಾರ್ಗವಾಗಿ ಶಿವಾಜಿಯು ಹಿಂತಿರುಗಿದನು.

ವೆಂಕಾಜಿಗೆ ಆ ದೊರೆತನವು ಸೊಗಸಲಿಲ್ಲ, ಅವನಿಗೆ ಎಲ್ಲಾ ವಿಷಯ

ಗಳಲ್ಲಿಯೂ ಬೇಸರ ಉಂಟಾಯಿತು, ತನ್ನಲ್ಲಿಯೇ ತನಗೆ ಜಿಗುಪ್ಸೆ ಉಂಟಾಯಿತು.

ಕೆಲವು ದಿವಸಗಳ ನಂತರ ಪಂತಾಜಿಯು ಸನ್ಯಾಸವನ್ನು ಸ್ವೀಕರಿಸಿ ಚಿದಂಬರ ಕ್ಷೇತ್ರಕ್ಕೆ ಹೊರಟುಹೋದನು.




ಶಿವಾಜಿಗೆ ಎಲ್ಲ ಸಾಮಾನ್ಯ ಜನರಂತೆ ಗೃಹಕೃತ್ಯದ ತೊಂದರೆಗಳೂ ಬೇಕಾದಷ್ಟಿದ್ದವು. ಗೃಹೋಚಿತ ಸುಖಭೋಗಗಳಲ್ಲಿ ಅವನು ಆಸಕ್ತನಲ್ಲದಿದ್ದರೂ ಅವನಿಗೆ ಆ ದುಃಖಗಳು ತಪ್ಪಿರಲಿಲ್ಲ. ಮೂರು ಜನ ಪತ್ನಿಯರು ಇದ್ದರು. ತಾಯಿಯ ಮರಣಾನಂತರ ತನ್ನ ಗೃಹಕೃತ್ಯದ ವಿಚಾರದಲ್ಲಿ ಶಿವಾಜಿಯು ವ್ಯಾಕುಲಚಿತ್ತನಾಗಿಯೇ ಇರುತ್ತಿದ್ದನು. ಅವನ ಹಿರಿಯ ಹೆಂಡತಿ ಸಾಯಿಬಾಯಿಯು ಸತ್ತುಹೋದ ಮೇಲೆ ಎರಡನೆಯ ಹೆಂಡತಿಯಾದ ಸೋರ್ಯಾಬಾಯಿಯ ಅಧಿಪತ್ಯವೇ ಅಂತಃಪುರದಲ್ಲೆಲ್ಲಾ ಪ್ರಬಲವಾಗಿದ್ದಿತು. ಹಿರಿಯ ಹೆಂಡತಿಯ ಮಗನಾದ ಸಾಂಬಾಜಿಯ ಮೇಲೆ ಶಿವಾಜಿಗೆ ವಿಶೇಷ ಪ್ರೇಮವಿದ್ದರೂ ಅವನ ನಡವಳಿಕೆಗಳಿಂದ ಶಿವಾಜಿಯು ಆಗಾಗ ಖೇದಪಡುತ್ತಿದ್ದನು. ಅದಕ್ಕೆ ಸರಿಯಾಗಿ ಸೋರ್ಯಾಬಾಯಿಯು ತನ್ನ ಮಗನಾದ ರಾಜಾರಾಮನಿಗೆ ಪಟ್ಟಕಟ್ಟಿಸಬೇಕೆಂಮ ಮಹಾಪ್ರಯತ್ನ ಮಾಡುತ್ತಿದ್ದಳು. ಸಾಂಬಾಜಿಯ ನಡೆನುಡಿಗಳಲ್ಲಿಯೂ ಆಚಾರದಲ್ಲಿಯೂ ವಿಧರ್ಮೀಯರ ಅನುಕರಣವು ಕಾಣುತ್ತಿದ್ದಿತು. ಅದನ್ನು ತಪ್ಪಿಸುವುದಕ್ಕಾಗಿ ಶಿವಾಜಿಯು ಒಬ್ಬ ಗುರುವಿನಲ್ಲಿಗೆ ಸಾಂಬಾಜಿಯನ್ನು ಕಳುಹಿಸಿ ಮತಗ್ರಂಥಗಳ ಶಿಕ್ಷಣ ಕೊಡಿಸಬೇಕೆಂದು ಆಲೋಚನೆ ಮಾಡಿದನು. ಸಂಗಮೇಶ್ವರದಲ್ಲಿ ಮಹಾಪಂಡಿತನೆನಿಸಿಕೊಂಡಿದ್ದ ಕೇಶವಭಟ್ಟ ಉಪಾಧ್ಯಾಯನಲ್ಲಿಗೆ ಮಗನನ್ನು ಕಳಿಸಬೇಕೆಂದು ಶಿವಾಜಿಯು ನಿಶ್ಚಯಿಸಿದನು. ಆ ಕಾಲದಲ್ಲಿ ಕೇಶವಭಟ್ಟ ಉಪಾಧ್ಯಾಯನ ಹೆಸರು ಇಡೀ ಹಿಂದೂಸ್ಥಾನದಲ್ಲೆಲ್ಲಾ ಪ್ರಸಿದ್ಧವಾಗಿದ್ದಿತು. ಆಚಾರ ವ್ಯವಹಾರಗಳಲ್ಲಿ ಅವನು ಪ್ರಾಚೀನ ಋಷಿಗಳಿಗೆ ಸಮಾನನೆನಿಸಿಕೊಂಡಿದ್ದನು. ಯುವರಾಜನಾದ ಸಾಂಬಾಜಿಯು ತಂದೆಯಿಂದ ಆಜ್ಞಪ್ತನಾಗಿ

ಸಂಗಮೇಶ್ವರಕ್ಕೆ ಹೋಗಿ ಉಪಾಧ್ಯಾಯರಲ್ಲಿ ವ್ಯಾಸಂಗಕ್ಕೆ ನಿಂತನು. ಯುವ ರಾಜನಿಗೆ ರಾಜ್ಯಾಡಳಿತದ ಅನುಭವಗಳನ್ನು ಮಾಡಿಸಿಕೊಡಲು ಪೇಷ್ವೆಯುವರ ಮಗನಾದ ನೀಲೋ ಮಾರೇಶ್ವರ್ ಎಂಬ ಸರದಾರನನ್ನು ಶಿವಾಜಿಯು ಕಳಿಸಿ ಕೊಟ್ಟಿದ್ದನು. ಅವನಿಗೆ ಆ ಪ್ರಾಂತದ ಅಧಿಕಾರವು ಕೊಡಲ್ಪಟ್ಟಿದ್ದಿತು.

ಕೇಶವಭಟ್ಟರಲ್ಲಿ ವ್ಯಾಸಂಗವೇನೋ ಸರಿಯಾಗಿಯೇ ನಡೆಯುತ್ತಿತ್ತು. ಅವರು ಸಾಂಬಾಜಿಯ ಬುದ್ಧಿಗೆ ಮೆಚ್ಚಿ ಅತ್ಯಂತ ಶ್ರದ್ಧೆಯಿಂದ ಹಿಂದೂ ಮತ ಗ್ರಂಥಗಳನ್ನು ಅವನಿಗೆ ಉಪದೇಶಮಾಡಿಸುತ್ತಿದ್ದರು. ಸಾಂಬಾಜಿಯು ಅನೇಕ ಸ್ತೋತ್ರಪಾಠಗಳನ್ನೂ ಗೀತಾದಿ ಗ್ರಂಥಗಳನ್ನೂ ಬಾಯಿಪಾಠಮಾಡಿ ಚೆನ್ನಾಗಿ ಒಪ್ಪಿಸುತ್ತಿದ್ದನು. ಆದರೆ ಲೌಕಿಕ ವಿಚಾರಗಳಲ್ಲಿ ನೀಲೋ ಮಾರೇಶ್ವರನಿಗೆ ಅತಿ ಪ್ರಯಾಸವಾಗುತ್ತಿತ್ತು. ಸಾಂಬಾಜಿಯಲ್ಲಿ ಗಾಂಭೀರ್ಯ ಉದಾತ್ತ ಗುಣ ಗಳಿಲ್ಲದೇ ಅವನ ಬುದ್ಧಿಯು ನಾನಾ ಮಾರ್ಗಗಳಲ್ಲಿ ಹರಿಯುತ್ತಿದ್ದಿತು. ಅದಕ್ಕೆ ತಕ್ಕಂಥಾ ಜನಗಳೇ ಯುವರಾಜನ ಆಶ್ರಯದಲ್ಲಿ ಸೇರುತ್ತಿದ್ದರು. ಆ ಮಂತ್ರಿಯ ಅಧಿಕಾರವು ಮಣ್ಣುಪಾಲಾಗುವುದು ಮಾತ್ರವಲ್ಲದೇ ಶಿವಾಜಿ ಮಹಾರಾಜರವರ ಕೀರ್ತಿಗೂ ಕಳಂಕ ತಟ್ಟುವಂಥವುಗಳಾಗಿದ್ದವು. ಈ ಸಮಾಚಾರಗಳೆಲ್ಲವೂ ಶಿವಾಜಿ ಮಹರಾಜನಿಗೆ ತಿಳಿದೇ ತಿಳಿಯುತ್ತದೆ. ಶಿವಾಜಿಯು ಯುವರಾಜನ ಮೇಲೆ ಆಗ್ರಹಗೊಳ್ಳಬಹುದು ಅಥವಾ ಪುತ್ರಪ್ರೇಮದಿಂದ ಅವನನ್ನು ಕ್ಷಮಿಸ ಬಹುದು. ಆದರೆ ತನಗೆ ಮಾತ್ರ ನಿಸ್ತಾರವಿಲ್ಲವೆಂದು ಅವನು ಭಯಪಡ ತೊಡಗಿದನು. ಮೊದಮೊದಲು ಯುವರಾಜನ ವಿಲಾಸಗಳಿಗೆ ಅಡ್ಡಿಪಡಿಸುತ್ತ ಬಂದನು. ಆಮೇಲೆ ಆ ಹದ್ದು ಉಳಿಯದೇಹೋಯಿತು. ಸಾಂಬಾಜಿಯ ಭೇಟಿಯೇ ಆ ಮಂತ್ರಿಗೆ ದುರ್ಲಭವಾಯಿತು. ಯುವರಾಜನು ವಾಸಿಸುತ್ತಿದ್ದ ಅರಮನೆಗೆ ಹೋಗುವುದು ಕೂಡಾ ತನ್ನ ಗೌರವಕ್ಕೆ ಕುಂದುಕವಾದುದೆಂದು ಅವನು ಖಿನ್ನನಾದನು. ಕೇಶವಭಟ್ಟರಿಗೂ ಶಿಷ್ಯನ ವೃತ್ತಿಯು ಸರಿಬೀಳದ ಹೋಯಿತು. ಯುವರಾಜನು ಗುರುಗಳ ಸಮೀಪಕ್ಕೆ ಬಂದರೆ ಬಂದ, ಇಲ್ಲ ದಿದ್ದರೆ ಇಲ್ಲ. ಸ್ವಾಭಿಮಾನಿಗಳಾದ ಉಪಾಧ್ಯಾಯರು ಶಿಷ್ಯನಿಗೆ ಸ್ಪಷ್ಟವಾಗಿ ತಿಳಿಸಿಬಿಟ್ಟರು. ಇಂಥಾ ವಿದ್ಯಾಭ್ಯಾಸದಿಂದ ಯುವರಾಜನಿಗ ಲಾಭವೂ ಇಲ್ಲ, ಉಪಾಧ್ಯಾಯರಿಗೆ ಗೌರವವೂ ಬರುವುದಿಲ್ಲ. ಯುವರಾಜನು ರಾಜಧಾನಿಗೆ ಹಿಂದಿರುಗಿ ಹೋಗುವುದು ಉತ್ತಮ ಎಂದು ಹೇಳಿಬಿಟ್ಟರು. ಯುವರಾಜನು

ಗುರುಗಳ ಮಾತಿಗೆ ವಿಶೇಷ ಗೌರವ ಕೊಡಲಿಲ್ಲ. ಸಂಗಮೇಶ್ವರದಲ್ಲಿಯೇ ಕಾಲಕಳೆಯುತ್ತಿದ್ದನು.

ಮಂತ್ರಿ ಮೋರೇಶ್ವರನು ದೃಢನಿಶ್ಚಯ ಮಾಡಿಕೊಂಡು ರಾಯಗಡಕ್ಕೆ ಹೋಗಿ ಶಿವಾಜಿ ಮಹಾರಾಜರ ಭೇಟಿಮಾಡಿದನು. "ಮಹಾಪ್ರಭುಗಳೇ, ಸತ್ಯಾಂಶಗಳನ್ನು ಮುಚ್ಚಿಟ್ಟರೆ ಪ್ರಭುಗಳಿಗೆ ದ್ರೋಹಮಾಡಿದಂತಾಗುತ್ತದೆ. ಯುವರಾಜರು ಅತ್ಯಂತ ಬುದ್ಧಿವಂತರು, ಸಾಮರ್ಥ್ಯಶಾಲಿಗಳು, ಆದರೆ ಅವರ ಆಚಾರ ವ್ಯವಹಾರಗಳು ಸರಿಯಾಗಿಲ್ಲ, ಸಹವಾಸವು ಬಲು ಕೆಟ್ಟುಹೋಗಿದೆ. ಉಪಾಧ್ಯಾಯ ಕೇಶವಭಟ್ಟರು ಯುವರಾಜರಿಗೆ ಪಾಠಹೇಳುವುದಿಲ್ಲವೆಂದು ಖಡಾಖಂಡಿತವಾಗಿ ಹೇಳಿಬಿಟ್ಟರು. ದೈವಭಕ್ತಿಯಿಲ್ಲದೇ ಅನಾಚಾರಿಗಳಾಗಿರುವವರಿಗೆ ಅಧ್ಯಾತ್ಮ ವಿದ್ಯೆಯು ಲಭಿಸುವುದಿಲ್ಲವೆಂದು ಅವರು ಯುವರಾಜನಿಗೆ ತಿಳಿಸಿದರು. ಸನಗಂತೂ ಯುವರಾಜರಲ್ಲಿ ಯಾವ ಕಾರ್ಯವೂ ಇಲ್ಲ. ಈಚೆಗೆ ಅವರ ದರ್ಶನಲಾಭವೇ ದುರ್ಲಭವಾಗಿದೆ. ಅವರ ವಾಸಸ್ಥಾನವು ನಟವಿಟ ಗಾಯಕರಿಂದ ತುಂಬಿಹೋಗಿದೆ, ಅದೊಂದು ವಿಲಾಸಭೂಮಿಯಂತೆ ಭಾಸವಾಗುತ್ತದೆ. ಆ ವೆಚ್ಚಗಳಿಗೆ ಹಣ ಸರಬರಾಜು ಮಾಡುವುದಂತೂ ನನಗೆ ಪ್ರಯಾಸವಾಗಿದೆ. ತಮ್ಮ ಆಗ್ರಹಕ್ಕೆ ನಾನು ಗುರಿಯಾಗುವುದಂತೂ ನಿಶ್ಚಯ. ಇಂಥಾ ಧರ್ಮಸಂಕಟದಿಂದ ನನ್ನನ್ನು ಪಾರುಮಾಡಬೇಕು" ಎಂದು ಕೇಳಿಕೊಂಡನು.

ಶಿವಾಜಿಯು, "ಮೋರೇಶ್ವರ್ ! ನೀನು ನಮ್ಮಲ್ಲಿ ಬಂದು ಯುವರಾಜರ ಮೇಲೆ ದೂರು ಕೊಟ್ಟೆಯೆಂದು ನಾನು ಭಾವಿಸುವುದಿಲ್ಲ. ನಿನ್ನ ಕರ್ತವ್ಯವನ್ನು ನೀನು ಸರಿಯಾಗಿ ನಡಸಿದ್ದೀಯೆ. ಸಾಂಬಾಜಿಯು ಈ ಸಿಂಹಾಸನಕ್ಕೆ ಅರ್ಹನಾಗಬೇಕಾದರೆ, ಶೌರ್ಯ ಪರಾಕ್ರಮಗಳಿದ್ದರೆ ಸಾಲದು. ನನ್ನ ಮಗನೆಂಬ ಅಧಿಕಾರದಿಂದ ಈ ಧರ್ಮಸಿಂಹಾಸನವನ್ನು ಏರಲಾಗುವುದಿಲ್ಲ. ರಾಜನು ಧರ್ಮಾತ್ಮನೂ ಧರ್ಮಿಷ್ಠನೂ ಆಗಿರಬೇಕು. ಪರಿಶುದ್ಧ ಚಾರಿತ್ರ್ಯವಿರಬೇಕು. ಆಗಲಿ, ಭವಾನಿಯ ಅನುಗ್ರಹವಿದ್ದರೆ ಆ ಸಾಂಬಾಜಿಯು ಎಂದಾದರೂ ಬುದ್ಧಿಕಲಿತಾನು" ಎಂದು ಹೇಳಿಕಳಿಸಿದನು. ತನ್ನ ಆಪ್ತರಾದ ರಾಜಭಟರನ್ನು ಸಂಗಮೇಶ್ವರಕ್ಕೆ ಹೋಗಿ ತಕ್ಷಣ ಸಾಂಬಾಜಿಯನ್ನು ರಾಯಗಡಕ್ಕೆ ಕರೆತರಬೇಕೆಂದು ಅಪ್ಪಣೆ ಇತ್ತನು.

ಶಿವಾಜಿಯ ಅಂತರಂಗದ ದುಃಖವು ಮತ್ತೂ ಪ್ರಬಲವಾಯಿತು. ಅವನು ಯಾರೊಡನೆಯೂ ಯುವರಾಜನ ವಿಚಾರವಾಗಿ ಮಾತನಾಡಲಿಲ್ಲ. ಹೃದಯದಲ್ಲಿಯೇ ಕುದಿಯುತ್ತಿದ್ದಿತು.

ಶಿವಾಜಿಯು ಹಠವಾದಿ. ಮನಸ್ಸಿಗೆ ತೋರಿದ್ದನ್ನು ಸರ್ವಥಾ ಬಿಡುವವನಲ್ಲ. ಈ ಸಾಂಬಾಜಿಯನ್ನು ಸನ್ಮಾರ್ಗಕ್ಕೆ ತರಲೇಬೇಕು ಎಂದು ಹಠತೊಟ್ಟನು. ಆದರೆ ಏನು ಮಾಡಬೇಕೆಂದು ಅವನಿಗೆ ದಿಕ್ಕುತೋಚದಾಯಿತು. ಆ ಸಮಯಕ್ಕೆ ಸರಿಯಾಗಿ ಸದ್ಗುರು ರಾಮದಾಸರ ನೆನಪು ಬಂದಿತು. ಗುರುಗಳ ಅನುಗ್ರಹವಾದರೆ ಸಾಕು, ಅವರ ಕಟಾಕ್ಷವು ಬಿದ್ದರೆ ಸಾಕು, ಎಂತಹ ಪಾಪಿಗಳಾದರೂ ಪುಣ್ಯಾತ್ಮರಾಗಿಬಿಡುತ್ತಾರೆ ಎಂಬ ದೃಢಭಾವನೆ ಶಿವಾಜಿಗೆ ಇದ್ದಿತು. ಅವನು ತಕ್ಷಣವೇ ಯುವರಾಜ ಸಾಂಬಾಜಿಯನ್ನು ಸಜ್ಜನಗಡಕ್ಕೆ ಗುರುಸನ್ನಿಧಿಗೆ ಕಳುಹಿಸಿಕೊಡುವ ಆಲೋಚನೆ ಮಾಡಿದನು. ಗುರುಗಳ ಸನ್ನಿಧಿಯಲ್ಲಿ ಭಕ್ತವೃಂದವು ನೆರೆದಿರುತ್ತದೆ. ಅಲ್ಲಿ ಆಡಂಬರ ಜೀವನಕ್ಕೆ ಆಸ್ಪದವೇ ಇಲ್ಲ. ಒಂದು ಪಕ್ಷ ಆಡಂಬರ ಮಾಡಿದರೂ ಧಾರ್ಮಿಕವಾದ ಆಡಂಬರ ಮಾಡಬೇಕು. ಭೋಗವಿಲಾಸಗಳಿಗಂತೂ ಆಸ್ಪದವೇ ಇಲ್ಲ ಎಂದು ನಿಶ್ಚಯಿಸಿಕೊಂಡನು. ಸಾಂಬಾಜಿಯು ಸ್ತ್ರೀಲೋಲನೆಂದು ಅನೇಕ ದೂರುಗಳು ಶಿವಾಜಿಯ ಕಿವಿಗೆ ಬಿದ್ದಿದ್ದವು. ಸಾಂಬಾಜಿಯ ಪತ್ನಿ ಏಸೂಬಾಯಿಯನ್ನು ಯುವರಾಜನ ಜೊತೆಯಲ್ಲಿ ಸಜ್ಜನಗಡಕ್ಕೆ ಕಳಿಸುವ ವ್ಯವಸ್ಥೆ ಮಾಡಿದನು. ಏಸೂಬಾಯಿಯನ್ನು ಅಂತರಂಗದಲ್ಲಿ ಕರೆಸಿಕೊಂಡು ಶಿವಾಜಿಯು "ಮಗಳೇ ! ಮುಂದೆ ನೀನು ಈ ರಾಜ್ಯದ ಮಹಾರಾಣಿಯಾಗುವವಳು. ರಾಜನ ಗುಣ ದೋಷಗಳನ್ನು ಕಂಡುಕೊಂಡು ಅವನನ್ನು ಸನ್ಮಾರ್ಗದಲ್ಲಿ ನಡೆಸಿಕೊಂಡು ಹೋಗುವ ಅಧಿಕಾರವು ಮಹಾರಾಣಿಗೆ ಇದೆ. ನೀನು ಸಾಂಬಾಜಿಗೆ ಧರ್ಮಪತ್ನಿಯಾಗಿ, ಸಖಿಯಾಗಿ, ಗುರುವಾಗಿ, ಶಿಕ್ಷಕಳಾಗಿ ಅವನನ್ನು ಸಿಂಹಾಸನಕ್ಕೆ ಅರ್ಹನಾಗಿ ಮಾಡಬೇಕು. ಸಜ್ಜನಗಡವು ಪವಿತ್ರಕ್ಷೇತ್ರ, ಗುರುಸ್ಥಾನ, ಭಕ್ತವೃಂದದಿಂದ ನಿಬಿಡವಾದ ಪ್ರದೇಶ. ಆ ಸ್ಥಳದಲ್ಲಿ ಸಾಂಬಾಜಿಯು ಇದ್ದರೆ ಗುರುಗಳ ಅನುಗ್ರಹಕ್ಕೆ ಪಾತ್ರನಾಗುವನೆಂಬ ಆಸೆಯಿಂದ ಅವನನ್ನು ಅಲ್ಲಿಗೆ ಕಳಿಸುತ್ತಿದ್ದೇನೆ. ಆನೆಗೆ ಅಂಕುಶ ಹಾಕಿದಂತೆ ನಿನ್ನನ್ನು ಅವನೊಡನೆ ಕಳಿಸುತ್ತಿದ್ದೇನೆ.

ಆ ಕ್ಷೇತ್ರದಲ್ಲಿ ನೀವಿಬ್ಬರೂ ಗುರುಗಳ ಅನುಗ್ರಹ ಪಡೆದು ಬರಬೇಕು" ಎಂದು ಹೇಳಿದನು.

ಏಸಾಬಾಯಿಯು ಶಿವಾಜಿ ಮಹಾರಾಜರಿಗೆ ಅಭಿವಾದನ ಮಾಡಿ, ಆಶೀರ್ವಚನವನ್ನು ಪಡೆದು ಹೊರಟಳು.

ಮಹಾರಾಜರ ಆಜ್ಞೆಯಂತೆ ಸಾಂಬಾಜಿಯು ಪತ್ನೀಸಮೇತನಾಗಿ ಸಜ್ಜನ ಗಡಕ್ಕೆ ಪ್ರಯಾಣ ಬೆಳೆಸಿದನು. ತನ್ನ ತಂದೆಯು ಹಿತಕ್ಕಾಗಿ ತನ್ನನ್ನು ಗುರು ಸಾನ್ನಿಧ್ಯಕ್ಕಾಗಿ ಕಳುಹಿಸುತ್ತಿದ್ದಾನೆಂದು ಸಾಂಬಾಜಿಗೆ ಚೆನ್ನಾಗಿ ತಿಳಿದಿತ್ತು. ಚಿಕ್ಕತಾಯಿ ಸೋಯ್ರಾಬಾಯಿಯು ತನಗೆ ಸಿಂಹಾಸನವನ್ನು ತಪ್ಪಿಸಬೇಕೆಂದು ಸರ್ವಪ್ರಯತ್ನ ಮಾಡುತ್ತಿದ್ದಾಳೆಂದು ಅವನು ಚೆನ್ನಾಗಿ ತಿಳಿದುಕೊಂಡಿದ್ದನು. ತನ್ನ ತಪ್ಪುಗಳು ಎಷ್ಟೇ ಇರಲಿ, ಅವುಗಳನ್ನೆಲ್ಲಾ ಮನ್ನಿಸಿ, ತನ್ನ ತಂದೆಯು ತನ್ನನ್ನು ಅತ್ಯಂತ ಪ್ರೀತ್ಯಾದರಗಳಿಂದ ಕಾಣುತ್ತಿರುವನೆಂದು ಯುವರಾಜನಿಗೆ ಚೆನ್ನಾಗಿ ತಿಳಿದಿತ್ತು. ಇದರಿಂದ ಆ ತಂದೆಯ ಮೇಲಿನ ಭಕ್ತಿಯು ಅವನಲ್ಲಿ ಅಪಾರವಾಗಿದ್ದಿತು. ತನ್ನ ಅಪರಾಧಗಳು ಎಷ್ಟೇ ಇರಲಿ ಮಹಾಗುರುವಿನ ಅನುಗ್ರಹ ದೊರೆತರೆ, ತಾನು ಕೃತಾರ್ಥನಾಗುವೆನೆಂದು ಸಿಂಹಾಸನವು ತನ್ನದೇ ಆಗುವುದೆಂದು ದೃಢವಾದ ನಂಬಿಕೆ ಹುಟ್ಟಿತ್ತು. ಯುವರಾಜನು ತನ್ನ ಪತ್ನಿ ಯಾದ ಏಸಾಬಾಯಿಯೊಡನೆ ತಾನು ಸಜ್ಜನಗಡದಲ್ಲಿ ಬಹಳ ನಿಷ್ಠೆಯಿಂದಲೂ ಸದಾಚಾರಸಂಪನ್ನನಾಗಿಯೂ ಇರುವೆನೆಂದು ಭಕ್ತಿಯಿಂದ ಗುರುಗಳನ್ನು ಮೆಚ್ಚಿಸಿ ಅನುಗ್ರಹಕ್ಕೆ ಪಾತ್ರನಾಗುವೆನೆಂದೂ ಹೆಮ್ಮೆಯಿಂದ ಹೇಳಿಕೊಂಡು ಹೊರಟಿದ್ದನು.

ಸಜ್ಜನಗಡದಲ್ಲಿ ಸಾಂಬಾಜಿಯು ನಿಜವಾಗಿಯೂ ಭಕ್ತನಂತೆಯೇ ನಡೆದು ಕೊಳ್ಳುತ್ತಿದ್ದನು. ಅಲ್ಲಿದ್ದ ಭಕ್ತರೆಲ್ಲರೂ ಅವನನ್ನು ವಿಶೇಷ ಪ್ರೇಮದಿಂದ ಕಾಣುತ್ತಿದ್ದರು. ಅವನ ಸರಳ ಸ್ವಭಾವ ಭಕ್ತಿಭಾವಗಳನ್ನು ನೋಡಿ ಗುರುಗಳು ಆಗಾಗ ಸಂತೋಷಚಿತ್ತರಾಗಿ ಸಾಂಬಾಜಿಗೆ ಸದುಪದೇಶಗಳನ್ನು ಮಾಡು ತ್ತಿದ್ದರು.

ಈ ಸ್ಥಿತಿಯು ಬಹುದಿನಗಳು ಉಳಿಯಲಿಲ್ಲ. ಸ್ವಲ್ಪದಿನಗಳಲ್ಲಿಯೇ ಸಜ್ಜನಗಡದ ಕಿಲೇದಾರನಿಗೂ ಯುವರಾಜನಿಗೂ ವೈಮನಸ್ಯ ಉಂಟಾಯಿತು. ಕೋಪಾವೇಶದಿಂದ ಸಾಂಭಾಜಿಯು ಕಿಲೇದಾರನ ಅನುಚರರನ್ನೆಲ್ಲಾ

ವಿರೋಧವಾಗಿ ಎತ್ತಿಕಟ್ಟಿದನು. ದೊಡ್ಡ ದೊಡ್ಡ ಜಗಳಗಳಿಗೆ ಆರಂಭವಾದುವು. ಯುವರಾಜನು ದೇವಮಂದಿರಕ್ಕೂ ಗುರುಗಳ ಸನ್ನಿಧಿಗೂ ಹೋಗುವುದನ್ನು ಮರೆತು ಕಿಲೇದಾರನ ಮೇಲೆ ನಾನಾ ವಿಧವಾದ ಉಪಟಳಗಳನ್ನು ಹೂಡಲು ಪ್ರಯತ್ನಿಸುತ್ತಿದ್ದನು. ಕಿಲೇದಾರನು ಸತ್ಪುರುಷನಾಗಿ ಶಿವಾಜಿಯ ವಿಶ್ವಾಸವನ್ನು ಗಳಿಸಿದ್ದುದು ಮಾತ್ರವಲ್ಲದೇ ಗುರುಗಳ ಪರಮಾನುಗ್ರಹಕ್ಕೂ ಪಾತ್ರನಾಗಿದ್ದನು. ಅವನನ್ನು ಪ್ರತ್ಯಕ್ಷವಾಗಿ ವಿರೋಧಿಸುವ ಧೈರ್ಯವು ಯುವರಾಜನಿಗಿರಲಿಲ್ಲ. ಯುವರಾಜನ ತಂತ್ರಗಳಿಂದ ಕಿಲೇದಾರನು ಅಪಾಯಕ್ಕೆ ಬೀಳುವ ಪ್ರಮೇಯವು ಸನ್ನಿಹಿತವಾಯಿತು. ಕಿಲೇದಾರನು ಆಂತರಂಗದಲ್ಲಿ ಗುರುಗಳ ಭೇಟಿಮಾಡಿ ಯುವರಾಜನಿಂದ ತನಗಾಗುತ್ತಿರುವ ವಿರೋಧವನ್ನು ಕಷ್ಟಗಳನ್ನು ಹೇಳಿ ಕೊಂಡನು.

ಗುರುಗಳು, "ಏಕೆ ಭಯಪಡುತ್ತೀ, ಶ್ರೀರಾಮನು ಭಕ್ತರನ್ನು ಕಾಪಾಡುತ್ತಾನೆ. ಈ ಸಜ್ಜನಗಡವು ಶ್ರೀರಾಮನ ರಾಜ್ಯ. ಇಲ್ಲಿ ಸಾಂಬಾಜಿಯ ಕಾರಸ್ಥಾನವೇನೂ ಫಲಿಸುವುದಿಲ್ಲ" ಎಂದು ಹೇಳಿದರು.

ಅಲ್ಲಿ ಅಡಗಿದ್ದ ಗುಪ್ತಚಾರರ ಮುಖಾಂತರ ಈ ವಿಚಾರಗಳು ಸಾಂಬಾಜಿಗೆ ತಿಳಿದವು. ಸಾಂಬಾಜಿಯು ಗುರುಗಳಿಗೆ ಮುಖ ತೋರಿಸಲು ಲಜ್ಜಿತನಾದನು. ಅವರಲ್ಲಿ ಹೋಗಿ ಕ್ಷಮಾಪ್ರಾರ್ಥನೆ ಮಾಡಬೇಕು ಬೇರೆ ಮಾರ್ಗವಿಲ್ಲ. ಆ ಮಹಾಪುರುಷರಲ್ಲಿ ಕ್ಷಮಾಯಾಚನೆ ಮಾಡುವುದು ಸಾಂಬಾಜಿಗೆ ದೋಷವೆಂದು ಕಾಣಲಿಲ್ಲ. ಆದರೆ ಕಿಲೇದಾರನ ಎದುರಿನಲ್ಲಿ ತಾನು ಅಪಮಾನಿತನಾದಂತಾಗುತ್ತದೆ, ತನ್ನಿಂದಲೇ ಚಿತಾವಣೆ ಮಾಡಲ್ಪಟ್ಟ ಅಧಿಕಾರಿಗಳೆಲ್ಲಾ ರಾಜಾಗ್ರಹಕ್ಕೆ ಗುರಿಯಾಗುತ್ತಾರೆ. ಆದರಿಂದ ತನ್ನ ಸ್ಥಿತಿಯು ಹೀನಾಯಕ್ಕೆ ಬರುತ್ತದೆ. ಈ ಶಂಕೆಯಿಂದ ಯುವರಾಜನು ಪರಿತಪಿಸತೊಡಗಿದನು. ಅವನ ಮನವು ಡೋಲಾಯಮಾನವಾಯಿತು. ಆ ಸ್ಥಳದಲ್ಲಿ ಇರುವುದು ಅವನಿಗೆ ಕಷ್ಟತರವಾಗಿ ಭಾಸವಾಯಿತು. ಸಾಂಬಾಜಿಯು ಇತಿ ಕರ್ತವ್ಯತಾ ಮೂಢನಾಗಿ ಏಕಾಏಕಿ ತನ್ನ ಪತ್ನಿಯೊಡನೆ ಕುದುರೆಯನ್ನೇರಿ ಯಾರಿಗೂ ತಿಳಿಯದಂತೆ ಸಜ್ಜನಗಡವನ್ನು ಬಿಟ್ಟು ಹೊರಟನು, ಏಸೂಬಾಯಿಯು ಖಿನ್ನಳಾಗಿ ಅವನನ್ನು ಅನುವರ್ತಿಸಿದಳು. ಯುವರಾಜನು ರಾಜಧಾನಿಗೆ ಬಂದು ಸೇರಿಕೊಂಡ ಮೇಲೆ ಶಿವಾಜಿ

ಮಹಾರಾಜನಿಗೆ ಆ ವೃತ್ತಾಂತವೆಲ್ಲವೂ ತಿಳಿಯಬಂದಿತು. ಅವನು ಸಾಂಬಾಜಿ ವಿಷಯದಲ್ಲಿ ವಿರಕ್ತನಾಗಿ ಉದಾಸೀನವಾದನು.

೧೦

ಶಿವಾಜಿಯು ಸೈನ್ಯ ಸಮೇತನಾಗಿ ರಾಯಘಡಕ್ಕೆ ಹಿಂತಿರುಗಿ ಬಂದು ಸೇರಿದನು. ಸೈನಿಕರೆಲ್ಲರಿಗೂ ಯಥೇಚ್ಛವಾದ ಬಹುಮಾನಗಳನ್ನು ಕೊಟ್ಟನು. ದಕ್ಷಿಣದಿಂದ ಹಿಂತಿರುಗಿ ಬರುವಾಗ ಅಪಾರವಾದ ಧನಕನಕಗಳನ್ನು ಅಮೂಲ್ಯವಾದ ರತ್ನಗಳನ್ನು ತೆಗೆಸಿಕೊಂಡು ಬಂದಿದ್ದನು. ರಾಜಧಾನಿಗೆ ಹಿಂತಿರುಗಿದ ಮೇಲೆ ಶಿವಾಜಿಯ ಧರ್ಮಪತ್ನಿ ಸೋಯರ್ಾಬಾಯಿ ಎಂಬಾಕೆಯು ಅತ್ಯಂತ ಉತ್ಸಾಹದಿಂದ ಗಂಡನನ್ನು ಉಪಚರಿಸುತ್ತಿದ್ದಳು. ಅವಳ ಮಗ ರಾಜಾರಾಮ ಎಂಬುವನ ಮೇಲೆ ಶಿವಾಜಿಗೆ ಹೆಚ್ಚು ವಿಶ್ವಾಸ ಉಂಟಾಗಿ ಅವನಿಗೆ ಯುವರಾಜ ಪಟ್ಟವನ್ನು ಕಟ್ಟಿಸಬೇಕೆಂದು ಅವಳು ನಾನಾ ವಿಧವಾಗಿ ಪ್ರಯತ್ನಗಳನ್ನು ನಡೆಸುತ್ತಿದ್ದಳು. ಶಿವಾಜಿಯ ಹಿರಿಯ ಮಗ ಸಾಂಬಾಜಿಗೆ ಮೊದಲೇ ಯುವರಾಜ ಪಟ್ಟಾಭಿಷೇಕವು ಆಗಿಹೋಗಿದ್ದಿತು. ಸಾಂಬಾಜಿಯನ್ನು ತಳ್ಳಿಹಾಕಿ ರಾಜಾರಾಮನಿಗೆ ಯುವರಾಜ ಪಟ್ಟವನ್ನು ಕಟ್ಟಿಸಲು ಅಂತರಂಗದಲ್ಲಿಯೇ ಪ್ರಯತ್ನಗಳು ನಡೆಯುತ್ತಿದ್ದವು. ರಾಣಿ ಸೋಯರ್ಾಬಾಯಿಯು ಯಾವುದಕ್ಕೂ ಮುಂದೆ ಬರುತ್ತಿರಲಿಲ್ಲ. ಆದರೆ ಅವಳ ಇಚ್ಛೆಗೆ ಅನುಸಾರವಾಗಿ ತಾಳ ಹಾಕುವವರೂ ಶಿವಾಜಿಯ ದರ್ಬಾರಿನಲ್ಲಿ ಬೇಕಾದಷ್ಟು ಜನರಿದ್ದರು. ಸಾಂಬಾಜಿಯು ತಾಯಿ ಸಾಯೀಬಾಯಿ ವಿಧಿವಶಳಾಗಿ ಬಹುದಿನಗಳಾಗಿ ಹೋಗಿತ್ತು. ಶಿವಾಜಿಯ ಮಾತೆ ಜೀಜಾಬಾಯಿಯು ಪರಲೋಕವನ್ನೈದಿದ್ದಳು. ಅರಮನೆಯ ಅಂತಃಪುರದ ಅಧಿಕಾರವೆಲ್ಲವೂ ಸೋಯರ್ಾಬಾಯಿದೇ ಆಗಿತ್ತು. ಅವಳ ಘನತೆ ಗೌರವಗಳು ಅದಕ್ಕನುಗುಣವಾಗಿಯೇ ಇದ್ದುವು. ಅರಮನೆಯವರೆಲ್ಲರೂ ರಾಜಾರಾಮನನ್ನು ವಿಶೇಷ ಪ್ರೀತಿಯಿಂದ ಕಾಣುತ್ತಿದ್ದರು. ಸಾಂಬಾಜಿಯು ಶೂರ ಮತ್ತು ಪರಾಕ್ರಮಿ, ಆದರೂ ಅವನ ದುರುಳತನವನ್ನು ನೋಡಿ ಶಿವಾಜಿಗೆ ಆಗಾಗ ಅಸಮಾಧಾನವಾಗುತ್ತಿದ್ದಿತು. ದುರ್ನಡತೆಯ ಮಾತುಗಳು ಶಿವಾಜಿಯ ಕಿವಿಗೆ ಬಿದ್ದಾಗಲಂತೂ ಅವನಿಗೆ ಬಹಳ ಕೋಪ ಬರುತ್ತಿತ್ತು.

ಆದರೂ ಅಂತರಂಗದಲ್ಲಿ ಸಾಂಬಾಜಿಯನ್ನು ವಿಶೇಷವಾಗಿ ಪ್ರೀತಿಸುತ್ತಿದ್ದನು. ಸಾಂಬಾಜಿಯು ಶೂರ, ಪರಾಕ್ರಮಿ. ಮುಂದೆ ತನ್ನ ಹೆಸರಿಗೇ ತಕ್ಕ ರಾಜನೆಂದು ಖ್ಯಾತಿಯನ್ನು ಪಡೆಯುತ್ತಾನೆಂಬ ಆಸೆ ಯಾವಾಗಲೂ ಶಿವಾಜಿಯ ಮನದಲ್ಲಿ ಜಾಗೃತವಾಗಿಯೇ ಇದ್ದಿತು. ಶಿವಾಜಿಯು ಇದನ್ನು ಯಾವಾಗಲೂ ಬಹಿರಂಗ ದಲ್ಲಿ ತೋರ್ಪಡಿಸಿಕೊಳ್ಳುತ್ತಿರಲಿಲ್ಲ. ತನ್ನ ರಾಣಿ ಸೋಯಿರಾಬಾಯಿಯ ಮನೋಭಿಪ್ರಾಯವನ್ನು ಶಿವಾಜಿಯು ಚೆನ್ನಾಗಿ ಅರ್ಥಮಾಡಿಕೊಂಡಿದ್ದನು. ರಾಜಾರಾಮನು ಹಿಂದೂ ಬಾದಶಹನೆನಿಸಿಕೊಳ್ಳುವಂತಹ ಪ್ರಭಾವಶಾಲಿ ಯಾಗುವುದಿಲ್ಲವೆಂಬ ಭಾವನೆಯು ಶಿವಾಜಿಯ ಅಂತರಂಗದಲ್ಲಿ ಚೆನ್ನಾಗಿ ಬೇರೂರಿತ್ತು. ಮುದ್ದಾಗಿ ಬೆಳೆದ ಮಗ ಮುದ್ದು ಮಗನೇ ಎಂದುಕೊಳ್ಳು ತ್ತಿದ್ದನು. ಆದರೆ ಶಿವಾಜಿಯು ಯಾವಾಗಲೂ ರಾಜಾರಾಮನ ವಿಷಯದಲ್ಲಿ ತಾತ್ಸಾರವನ್ನು ತೋರುತ್ತಿರಲಿಲ್ಲ. ರಾಜಾರಾಮನ ಎಳೆಯ ವಯಸ್ಸಿನಲ್ಲಿ ಎಷ್ಟೋ ಬಾರಿ ಸಿಂಹಾಸನದ ಮೇಲೆ ಕೂಡುವಾಗ ಶಿವಾಜಿಯು ಆ ಮಗುವನ್ನು ತೊಡೆಯಮೇಲೆತ್ತಿಕೊಂಡು ಕುಳಿತಿದ್ದೂ ಉಂಟು. ಇದರಿಂದ ಸೋಯಿರಾಬಾಯಿಯ ಆಶಾಂಕುರವು ಚಿಮ್ಮಿ ಪ್ರಕಾಶಿಸುತ್ತಿದ್ದಿತು. ರಾಜಾರಾಮನು ಶ್ರೀರಾಮಚಂದ್ರನ ಅನುಗ್ರಹದಿಂದ ಹುಟ್ಟಿದವನೆಂದು ಶಿವಾಜಿಯೇ ಎಷ್ಟೋ ಬಾರಿ ಹೇಳಿದ್ದನು.

ಶಿವಾಜಿಯು ದಕ್ಷಿಣದ ಯಾತ್ರೆಯನ್ನು ಪೂರೈಸಿಕೊಂಡು ಬಂದ ಮೇಲೆ ಒಂದೆರಡು ಬಾರಿ, ಸಾಂಬಾಜಿಯು ಬಂದು ತಂದೆಯ ದರ್ಶನ ಮಾಡಿಕೊಂಡು ಹೋಗಿದ್ದನು.

ಸಾಂಬಾಜಿಯು ರಾಯಘಡದಲ್ಲಿ ವಿಶೇಷವಾಗಿ ಇರುತ್ತಿರಲಿಲ್ಲ. ಯಾವು ದಾದರೂ ನೆಪ ಮಾಡಿಕೊಂಡು ಪ್ರತಾಪಗಡದಲ್ಲಿಯೋ, ಪುಣೆಯಲ್ಲಿಯೋ ಇರುತ್ತಿದ್ದನು. ಇದಕ್ಕೆ ಮುಖ್ಯವಾಗಿ ಎರಡು ಕಾರಣಗಳಿದ್ದವು. ಚಿಕ್ಕಮ್ಮ ನಿಂದ ದೂರ ಇರುವುದು ಒಂದು ಕಾರಣ, ಮತ್ತೊಂದು ಸಾಂಬಾಜಿಯ ಸ್ವೇಚ್ಛಾ ಪ್ರವೃತ್ತಿ. ಸಾಂಬಾಜಿಯು ಸ್ತ್ರೀಮೋಹದಿಂದ ಅಘಟನ ಘಟನೆಗಳಲ್ಲಿ ಸಿಕ್ಕಿಬೀಳು ತ್ತಿದ್ದನು. ಶಿವಾಜಿಯ ದರ್ಬಾರಿನಲ್ಲಿ ಪರಸ್ತ್ರೀ ವ್ಯಾಮೋಹ ಅಪಮಾನಗಳು ಮಹಾಪರಾಧವೆಂದು ಪರಿಗಣಿಸಲ್ಪಟ್ಟಿದ್ದವು. ಸಾಮಾನ್ಯ ಸೈನಿಕರಿಗೆ ಕೂಡಾ ಈ ವಿಚಾರದಲ್ಲಿ ಕಟ್ಟಪ್ಪಣೆ ಇದ್ದಿತು. ಮದ್ಯಪಾನ, ಪರಸ್ತ್ರೀ ಅಪಹರಣಗಳಿಗೆ ಕಠೋರ ಶಿಕ್ಷೆಯು ವಿಧಿಸಲ್ಪಡುತ್ತಿದ್ದಿತು. ಸಾಂಬಾಜಿಗೆ ಸ್ವೇಚ್ಛಾ ವಿಹಾರದಲ್ಲಿ

ಎಷ್ಟು ಆಸಕ್ತಿ ಇದ್ದಿತೋ ಶಿವಾಜಿಯು ರಾಜದಂಡದಲ್ಲಿಯೂ ಅಷ್ಟೇ ಭಯ ಪಿಡ್ಡಿತು. ಯುವರಾಜನಿಗೆ ಸರ್ವಥಾ ಕ್ಷಮೆ ದೊರೆಯುವುದಿಲ್ಲವೆಂದು ಅವನು ಮನಪಟ್ಟು ಮಾಡಿಕೊಂಡಿದ್ದನು.

ಸಾಂಬಾಜಿಯು ಹಿಂದೆ ಕೆಲವು ದಿನಗಳು ಔರಂಗಾಬಾದಿನಲ್ಲಿ ಬಾದಶಹರ ಪ್ರತಿನಿಧಿಯ ಜೊತೆಯಲ್ಲಿರುವ ಅವಕಾಶವನ್ನು ಪಡೆದಿದ್ದನು. ಅದರಿಂದ ಅವನ ಸ್ವೇಚ್ಛಾ ಪ್ರವೃತ್ತಿಗೆ ಅಮೃತಸೇಚನವಾದಂತೆ ಆಗಿದ್ದಿತು. ಅಲ್ಲಿ ಅವನು ಸ್ವರ್ಗದಲ್ಲಿಯೇ ಇದ್ದೇನೆಂದು ಎಷ್ಟೋ ಬಾರಿ ಭಾವಿಸುತ್ತಿದ್ದನು.

ಶಿವಾಜಿಯು ದಕ್ಷಿಣ ಯಾತ್ರೆಗೆ ಹೊರಟು ಹೋಗಿದ್ದಾಗ ಸಾಂಬಾಜಿಯ ಸ್ವೇಚ್ಛಾ ಪ್ರವೃತ್ತಿಯು ತಡಬಡೆ ಇಲ್ಲದೇ ಹರಿದಿತ್ತು. ಅನೇಕ ಸುಂದರಿ ಯರನ್ನು ಪ್ರಲೋಭದಿಂದ ವಶಪಡಿಸಿಕೊಂಡಿದ್ದನು. ಬಲಾತ್ಕಾರದಿಂದ ಭೋಗೇಚ್ಛೆಯನ್ನು ಪೂರೈಸಿಕೊಂಡ ಕುತ್ತಗಳು ಎಷ್ಟೋ ಇದ್ದವು. ಇದೆಲ್ಲದರ ಅಳಕು ಸಾಂಬಾಜಿಯ ಮನಸ್ಸಿನಲ್ಲಿ ಇದ್ದೇ ಇದ್ದಿತು.

ಶಿವಾಜಿಯು ರಾಜಧಾನಿಗೆ ಬಂದ ಮೇಲೆ ಸಾಂಬಾಜಿಯ ಮೇಲೆ ಅಂತ ರಂಗದಲ್ಲಿ ಅನೇಕರು ದೂರುಕೊಟ್ಟಿದ್ದಾರೆಂದು ಸಾಂಬಾಜಿಗೆ ಅವನ ನಿಷ್ಠ ಸಚಿವರ ಮೂಲಕ ತಿಳಿದಿದ್ದಿತು. ಅವನು ಶಿವಾಜಿಯ ಎದುರಿಗೆ ಬರುವಾಗಲೆಲ್ಲಾ ಹೆದರಿಕೊಂಡೇ ಬರುತ್ತಿದ್ದನು, ತಪ್ಪಿಸಿಕೊಂಡು ಹೊರಟುಹೋಗುತ್ತಿದ್ದನು. ಸಾಂಬಾಜಿಯು ತನ್ನ ಮೇಲೆ ಶಿವಾಜಿಗೆ ಆಗ್ರಹ ಉಂಟಾಗುತ್ತದೆ. ಅಷ್ಟರೊಳ ಗಾಗಿ ತಪ್ಪಿಸಿಕೊಂಡು ಎಲ್ಲಿಯಾದರೂ ಓಡಿಹೋಗಬೇಕೆಂದು ಮನಸ್ಸಿನಲ್ಲಿಯೇ ಆಲೋಚಿಸುತ್ತಿದ್ದನು.

ದಖನ್ನಿನ ಸರ್ವಸೇನಾಧಿಪತಿಯಾದ ದಿಲೀರ್‌ಖಾನನಿಗೂ ಸಾಂಬಾಜಿಗೂ ಪೂರ್ವಸ್ನೇಹವಿದ್ದಿತು. ಔರಂಗಾಬಾದಿನಲ್ಲಿ ಸಾಂಬಾಜಿಯು ಹಿಂದೆ ಇದ್ದಾಗ ಅವರಿಬ್ಬರೂ ಅನೇಕಬಾರಿ ಬೇಟೆಗೆ ಹೋಗುತ್ತಿದ್ದರು. ಪಾನಗೋಷ್ಠಿಗಳಲ್ಲಿ. ಸ್ತ್ರೀಯರ ನಡುವೆ ಎಷ್ಟೋ ಕಾಲವನ್ನು ಅವರಿಬ್ಬರೂ ಸುಖದಿಂದ ಕಳೆದಿದ್ದರು ದಿಲೀರ್‌ಖಾನನು ಈ ತಂದೆ ಮಕ್ಕಳಲ್ಲಿ ಎಂದಾದರೂ ಪ್ರಬಲ ವಿರೋಧವನ್ನು ಕಲ್ಪಿಸಿದರೆ ಶಿವಾಜಿಯ ಅರ್ಧಬಲವನ್ನು ಮುರಿದಂತಾಗುವುದೆಂದು ದುರಾ ಲೋಚನೆ ಮಾಡಿದ್ದನು. ಅನೇಕ ಬಾರಿ ಸಾಂಬಾಜಿಯನ್ನು ತಮ್ಮ ರಾಜಧಾನಿಗೆ ಬರಬೇಕೆಂದು ಪ್ರಾರ್ಥಿಸಿ ಆಹ್ವಾನಗಳನ್ನು ಕಳುಹಿಸಿಕೊಟ್ಟಿದ್ದನು.

ಸಾಂಬಾಜಿಯು ಶಿವಾಜಿಯ ಪ್ರತ್ಯಕ್ಷ ವಿಚಾರಣೆಯನ್ನು ತಪ್ಪಿಸಿಕೊಳ್ಳುವುದ ಕ್ಕಾಗಿ ದಿಲೀರ್‌ಖಾನನ ಸಮೀಪಕ್ಕೆ ಹಾರಿಹೋಗಲೇ ಎಂದು ಅನೇಕ ಬಾರಿ ಯೋಚಿಸುತ್ತಾ ಅವನ ಮನಸ್ಸು ಡೋಲಾಯಮಾನವಾಗಿದ್ದಿತು.

ಶಿವಾಜಿಯು ರಾಜಧಾನಿಯಲ್ಲಿಲ್ಲದಾಗ ನಡೆದ ಅನೇಕ ಕೃತ್ಯಗಳ ಬಗ್ಗೆ ಶಿವಾಜಿಯ ಕಿವಿಯಲ್ಲಿ ಅನೇಕ ಸಂಗತಿಗಳು ಸಿತಾಸಿತವಾಗಿ ಬಿದ್ದಿದ್ದವು. ಆದರೆ ಅವನು ಆ ವಿಚಾರವಾಗಿ ಯಾವಾಗಲೂ ಕುತೂಹಲವನ್ನು ತೋರುತ್ತಿರಲಿಲ್ಲ. ರಾಣಿ ಸೋಯರ್ಾಬಾಯಳೇ ಉಪಾಯಾಂತರಗಳಿಂದ ಈ ದೂರುಗಳನ್ನೆಲ್ಲಾ ಶಿವಾಜಿಯ ಕಿವಿಗೆ ಮುಟ್ಟುವಂತೆ ಮಾಡಿದ್ದಳು.

ಶಿವಾಜಿಯು ಅಂತಃಪುರದಲ್ಲಿದ್ದಾಗ ಸೋಯರ್ಾಬಾಯಿಯು ಮೆಲ್ಲಗೆ ತಂಜಾವೂರಿನ ಪ್ರಸ್ತಾಪವನ್ನು ಎತ್ತಿದಳು. ಶಿವಾಜಿಯು ದಕ್ಷಿಣ ದೇಶದ ತೀರ್ಥಕ್ಷೇತ್ರಗಳ, ದೇವಾಲಯಗಳ ವರ್ಣನೆಯನ್ನು ಮಾಡಿ. ಆ ವೈಭವಗಳನ್ನು ಉತ್ಸಾಹದಿಂದ ಹೇಳಿದನು. "ಸೋಯರ್ಾ, ನಿನ್ನನ್ನು ಮತ್ತೊಂದು ಬಾರಿ ಆ ದಕ್ಷಿಣ ಯಾತ್ರೆಗೆ ಕರೆದುಕೊಂಡು ಹೋಗುತ್ತೇನೆ" ಎಂದು ವಚನವಿತ್ತನು.

ಸೋಯರ್ಾಳು "ನಿಮ್ಮ ತಮ್ಮ ವೆಂಕಾಜಿ ಮಹಾರಾಜನು ಅಲ್ಲಿದ್ದಾನಂತೆ, ಅವನ ಅರಮನೆ ಅಂತಃಪುರಗಳು ವೈಭವೋಪೇತವಾಗಿದೆಯಂತೆ, ನನಗೂ ಆ ಮೈದುನನ ಸಂತೋಷವನ್ನು ನೋಡಬೇಕೆಂಬ ಕುತೂಹಲವಿದೆ" ಎಂದು ಹೇಳಿದಳು.

ಶಿವಾಜಿಯು ಉತ್ಸಾಹವನ್ನು ತೋರದೆ, ವಿಷಣ್ಣವದನನಾಗಿ "ಆ ವೆಂಕಾಜಿಯು ನನ್ನ ಸೋದರನೆನಿಸಿಕೊಳ್ಳಲು ಅರ್ಹನಾಗಿಲ್ಲ. ಅವನ ಅಂತಃಪುರವು ಅನೇಕ ವಿಧವಾದ ಸ್ತ್ರೀಯರಿಂದ ತುಂಬಿದೆ ಎಂದು ಕೇಳಿದ್ದೇನೆ, ಈ ಹುಚ್ಚು ಮನುಷ್ಯನು ಸ್ತ್ರೀಯರ ಸೌಂದರ್ಯಕ್ಕೆ ಮರುಳಾಗಿ ಧರ್ಮವನ್ನೇ ಮರೆತು ಬಿಡುತ್ತಾನೆ. ಆ ಸ್ತ್ರೀಯರುಗಳ ಆರಾಧನೆಗಾಗಿ ತನ್ನ ಸರ್ವಸ್ವವನ್ನೂ ಅರ್ಪಣೆ ಮಾಡುತ್ತಾನೆ. ಇದರಿಂದ ಅವರು ಆಮರಣಾಂತ ಪೇಡಿಗಳಾಗಿ ಬದುಕುತ್ತಾರೆ. ಅವನು ಬಿಜಾಪುರದ ವೈಭವದಲ್ಲಿ ಬೆಳೆದವನು, ಅಲ್ಲಿಯ ಸುಲ್ತಾನರುಗಳು ಹೀಗೆಯೆ ಇದ್ದಾರೆ, ವೆಂಕಾಜಿಯು ಒಬ್ಬ ಸುಲ್ತಾನನಂತೆಯೇ ಜೀವನಪಥವನ್ನು ಸವೆಸುತ್ತಿದ್ದಾನೆ. ನೋಡು ಸೋಯರ್ಾ, ನಾನು ಗೋಲ್ಕಂಡದಲ್ಲಿ ಎರಡು ತಿಂಗಳು ಕಾಲ ಕಳೆಯಬೇಕಾಯಿತು. ಆ ಎರಡು ತಿಂಗಳು ಆ ಗೋಲ್ಕಂಡದ

ವೈಭವಗಳನ್ನು ಕಣ್ಣಾರ ನೋಡುತ್ತಿದ್ದನು. ದೆಹಲಿಯ ಬಾದಶಹನ ಐಶ್ವರ್ಯಕ್ಕಿಂತಲೂ ಗೋಲ್ಕಂಡದ ಸುಲ್ತಾನನ ಐಶ್ವರ್ಯವು ಮಿಗಿಲಾದುದು. ಆ ಸುಲ್ತಾನನ ರಾಜಧಾನಿಯಲ್ಲಿ ಇಪ್ಪತ್ತುಸಹಸ್ರ ವಾರಾಂಗನೆಯರಿದ್ದಾರಂತೆ, ನಾಲ್ಕುದಿಕ್ಕುಗಳಲ್ಲಿಯೂ ಹಗಲಿರುಳು ಗಾನನರ್ತನಗಳ ಧ್ವನಿಯು ಕೇಳಿಸುತ್ತಲೇ ಇರುತ್ತದೆ. ಮದ್ಯಪಾನ, ವ್ಯಭಿಚಾರಗಳಿಗಂತೂ ಎಲ್ಲೆಯಿಲ್ಲ. ಆ ರಾಜ್ಯದಲ್ಲಿ ಮುದ್ದಣನೆಂಬ ಪ್ರಧಾನಿ ಇದ್ದಾನೆ. ಅವನು ದೈವ ಬ್ರಾಹ್ಮಣ ಭಕ್ತನೆಂದೂ, ವೇದಶಾಸ್ತ್ರ ಪಾರಂಗತನೆಂದು ಹನುಮಂತೆಯೇ ಒಪ್ಪಿಕೊಳ್ಳುತ್ತಾನೆ. ಅವನು ಬ್ರಾಹ್ಮಣ. ಅವನಿಗೆ ನಾಲ್ವರು ಬ್ರಾಹ್ಮಣ ಪತ್ನಿಯರಲ್ಲದೆ ಇಬ್ಬರು ಯವನ ಸುಂದರಿಯರನ್ನೂ ಮದುವೆಯಾಗಿದ್ದಾನಂತೆ, ಅವರಿಬ್ಬರೂ ಸುಲ್ತಾನನ ಸೋದರಿಯರಂತೆ, ಅವರ ಅನುಗ್ರಹದಿಂದಲೇ ಮುದ್ದಣನ ಪ್ರಧಾನ ಪಟ್ಟವು ಅಲುಗದೆ, ಸ್ಥಿರವಾಗಿದೆಯಂತೆ ಇಷ್ಟಾದರೂ ಅವನಿಗಾಗಿ ಮೀಸಲಾಗಿರುವ ವಾರಾಂಗನೆಯರೂ ಇದ್ದಾರಂತೆ, ಇಂತಹವರಿಗೆ ರಾಜ್ಯವಿರಬಾರದು, ರಾಜ್ಯಕ್ಕೆ ಇಂತಹ ದೊರೆಗಳಿರಬಾರದು, ನನ್ನ ತಮ್ಮನೆಂದುಕೊಳ್ಳುವ ವೆಂಕಾಜಿಯು ಇದೇ ಅನುಕರಣವನ್ನು ಮಾಡುತ್ತಿದ್ದಾನೆ, ಇಂಥವನನ್ನು ನನ್ನ ತಮ್ಮನೆಂದು ನಾನು ಹೇಗೆ ತಾನೇ ಒಪ್ಪಿಕೊಳ್ಳಲಿ ? ಅಂತಹ ತಮ್ಮನಿರುವುದು ನನಗೊಂದು ಕಳಂಕವೇ ಹೊರತು, ಭೂಷಣಪ್ರಾಯವಲ್ಲ" ಎಂದು ನಿಟ್ಟುಸಿರು ಬಿಟ್ಟನು.

ಸೋಯರಾಬಾಯಿಯು "ಮಹಾಪ್ರಭುಗಳೇ ಲೋಕವೆಲ್ಲವೂ ಹಾಗೆಯೇ ಇದೆ. ತಮ್ಮಂಥ ಧರ್ಮ ಪ್ರಭುಗಳು ನಿಜವಾದ ದೈವಭಕ್ತರು ಮತ್ತಾರು ಸಿಗಬೇಕು. ಈ ಸುಲ್ತಾನೀ ವೈಭವಗ ಪ್ರಭೆಯು ತಮ್ಮ ಅರಮನೆಗೂ ಬೀಳುತ್ತಿದೆ, ತಮ್ಮ ಯುವರಾಜರೂ ಇದೇ ಪಥವನ್ನೇ ತುಳಿಯುತ್ತಿದ್ದಾರೆ. ನೀವು ಈ ರಾಜ್ಯವನ್ನು ಬಿಟ್ಟು ದೂರದೇಶದಲ್ಲಿರುವಾಗ ಇಲ್ಲಿಯ ಕಥೆಗಳು ನಿಮ್ಮ ಕಿವಿಗಿನ್ನೂ ಬಿದ್ದಿಲ್ಲವೆಂದು ತೋರುತ್ತದೆ. ಎಷ್ಟು ಸುಂದರಿಯರ ಅಪಹರಣವಾಗಿದೆ, ಅಬ್ಬಬ್ಬಾ ! ಒಬ್ಬೊಬ್ಬ ಸ್ತ್ರೀಯು ಎಷ್ಟು ಭಾಗ್ಯವತಿಯಾದಳು. ನಿಮ್ಮ ಅರಮನೆಯಿಂದ ಹೆಣ್ಣಿಗೆ ಹೆಣ್ಣಿನ ತೂಕದ ಹೊನ್ನು ಧಾರೆ ಎರೆದು ಕೊಡಲ್ಪಟ್ಟಿದೆ. ಬಹುಶಃ ಆಗರ್ಭಶ್ರೀಮಂತರೆಲ್ಲರೂ ಹೀಗೆಯೇ ಎಂದು ಕಾಣುತ್ತದೆ."

ಶಿವಾಜಿಯು ಸಪ್ಪೆ ಮುಖಮಾಡಿಕೊಂಡು "ಸ್ವಲ್ಪಸ್ವಲ್ಪ ನನ್ನ ಕಿವಿಗೂ

ಬಿದ್ದಿದೆ, ಮನಸ್ಸಿಗೆ ವ್ಯಥೆ ಉಂಟಾಗಿದೆ, ಸಾಂಬಾಜಿಯು ಪ್ರಾಯಸಮರ್ಥನಾಗಿದ್ದಾನೆ, ಶೂರನೂ ಹೌದು, ಅವನನ್ನು ಮುಖಾಮುಖಿ ಖಂಡಿಸುವುದರಿಂದ ಬುದ್ಧಿ ಬರುವುದಿಲ್ಲ. ಇದೊಂದು ದೋಷವಿಲ್ಲದಿದ್ದರೆ, ಅವನು ನನಗಿಂತಲೂ ಪ್ರಖ್ಯಾತಿಗೆ ಬರುತ್ತಾನೆ, ನನ್ನ ಮನಸ್ಸಿನಲ್ಲಿ ಇದೊಂದೇ ಚಿಂತೆ" ಎಂದು ಆಕಾಶದ ಕಡೆಗೆ ನೋಡುತ್ತಾ ಮೌನವನ್ನು ಅವಲಂಬಿಸಿದನು.

ರಾಣಿಯು ಸಮಯವು ಸರಿಯಾಗಿದೆಯೆಂದು ಅರಿತು ತನ್ನ ಅಸ್ತ್ರವನ್ನು ಬಲವಾಗಿ ಪ್ರಯೋಗಿಸಿದಳು. "ಪ್ರಭುಗಳೇ, ಮತ್ತೊಂದು ವಿಚಾರವಿದೆ, ಅದನ್ನು ಮನಸ್ಸಿನಲ್ಲಿಟ್ಟುಕೊಳ್ಳಲಾರೆ. ಯುವರಾಜನು ಪಂಡರಾಪುರದಿಂದ ಸಕ್ಕೂಬಾಯಿ ಎಂಬ ಬ್ರಾಹ್ಮಣಸ್ತ್ರೀಯನ್ನು ಅಪಹರಿಸಿಕೊಂಡು ಬಂದು ಪ್ರತಾಪಗಡದ ಅರಮನೆಯಲ್ಲಿ ಬಚ್ಚಿಟ್ಟುಕೊಂಡಿದ್ದಾನೆ; ಪ್ರತಾಪಗಡವೆಲ್ಲಾ ಗುಲ್ಲೋ ಗುಲ್ಲು ಎದ್ದಿದೆ, ಪಂಡರಾಪುರದ ಕ್ಷೇತ್ರದಲ್ಲಂತೂ ಎಲ್ಲರ ಬಾಯಿಯಲ್ಲಿಯೂ ಇದೇ ಮಾತು, ಬಹುಮಂದಿ ಬ್ರಾಹ್ಮಣರು ನಿಮ್ಮ ಅರಮನೆಗೆ ಶಾಪವಿಡುತ್ತಿದ್ದಾರೆ. ಅದಕ್ಕಾಗಿಯೇ ಯುವರಾಜನು ಒಂದು ದಿನವೂ ನಿಮ್ಮ ಸನ್ನಿಧಾನದಲ್ಲಿ ನಿಲ್ಲದೇ ನುಸುಳಿಕೊಂಡು ಓಡಿಹೋಗುತ್ತಿದ್ದಾನೆ."

ಈ ಮಾತುಗಳನ್ನು ಕೇಳಿ ಶಿವಾಜಿಯ ಕಣ್ಣು ಕೆಂಪಾಯಿತು. ನರಗಳೆಲ್ಲವೂ ಸೆಟೆದುಕೊಂಡವು. "ಛೇ, ಸಾಂಬಾಜಿಯು ಎಂತಹ ಪಾಪಕರ್ಮವನ್ನು ಮಾಡಿದ. ನಮ್ಮ ಸಿಂಹಾಸನಕ್ಕೆ ಅಪಖ್ಯಾತಿಯು ಮಾತ್ರವಲ್ಲ, ಅನಿಷ್ಟವೂ ತಟ್ಟದಂತಾಯಿತು. ಸಾಂಬಾಜಿಯು ಈ ಸಿಂಹಾಸನಕ್ಕೆ ಇನ್ನೆಂದಿಗೂ ಅರ್ಹನಲ್ಲ, ಅವನನ್ನು ಹಿಡಿತರಿಸಿ ಕ್ರೂರದಂಡನೆ ವಿಧಿಸುತ್ತೇನೆ" ಎಂದು ಆಕ್ರೋಶದಿಂದ ನುಡಿದನು.

ಸೋಯ್ರಾಬಾಯಿಯು ವಿನಯದಿಂದ "ಮಹಾಪ್ರಭುಗಳು ಅಷ್ಟು ಸಿಟ್ಟಾಗಬಾರದು, ನಾನೂ ಪರಿಜನರ ಬಾಯಿಯಿಂದ ಕೇಳಿದ ಮಾತುಗಳಿವು, ನಿಜವೆಷ್ಟೋ ಸುಳ್ಳೆಷ್ಟೋ, ಪ್ರತ್ಯಕ್ಷವಾಗಿ ಕಂಡರೂ ಪ್ರಮಾಣಗಳಿಂದ ಪರೀಕ್ಷಿಸಬೇಕು, ಸಾರ್ವಭೌಮರೆನಿಸಿಕೊಂಡ ನೀವು ಇಷ್ಟು ಶೀಘ್ರಕೋಪಿಗಳಾದರೆ ನ್ಯಾಯಾನ್ಯಾಯ ವಿಮರ್ಶೆಯು ಹೇಗೆತಾನೇ ನಡೆಯಬೇಕು" ಎಂದು ಹೇಳಿ ಕೈಮುಗಿದಳು.

ಶಿವಾಜಿಯು "ಅದೂ ಸರಿಯೇ, ವಿಚಾರಣೆ ಮಾಡುತ್ತೇನೆ. ಜನರ

ಬಾಯಲ್ಲಿ ಹೊರಟ ಮಾತು ಸುಳ್ಳಾದೀತೆ? ಬೆಂಕಿ ಇಲ್ಲದೆ ಹೊಗೆಯಾಗುವುದೇ" ಎಂದು ಹೇಳಿ ಅಂತಃಪುರದಿಂದ ಹೊರಟುಹೋದನು.

ರಾಣಿಯ ಹೃದಯವು ಕ್ಷಣಕಾಲ ತಲ್ಲಣಿಸಿತು. 'ಶಿವಾಜಿ ಮಹಾರಾಜನು ಉಗ್ರಕೋಪಿ, ವಿಚಾರಣೆಯನ್ನೇನೋ ನಡೆಸಿಯೇ ನಡೆಸುತ್ತಾನೆ. ನನ್ನ ಮಾತುಗಳು ನಿಜವಾಗಿದ್ದರೆ ಸಾಂಬಾಜಿಗೆ ಕಠೋರ ಶಿಕ್ಷೆ ತಪ್ಪದು, ಸುಳ್ಳಾದರೆ ಮಾತ್ರ ಮಹಾರಾಜನು ಮತ್ತೆ ನನ್ನ ಮುಖದರ್ಶನ ಮಾಡದೇ ಹೋಗಬಹುದು' ಎಂದು ಭಯಪಟ್ಟಳು. ಮನಸ್ಸನ್ನು ಪುನಃ ಘಟ್ಟಿಮಾಡಿಕೊಂಡಳು. ದೇವರು ನನ್ನ ಕಡೆಗಿದ್ದಾನೆ, ಈ ವಾರ್ತೆಯು ನಿಜ, ಸಾಂಬಾಜಿಯ ದಂಡನೆಯಿಂದ ನನಗೇನೂ ಲಾಭವಿಲ್ಲ. ಮಹಾರಾಜನು 'ಸಾಂಬಾಜಿಯು ಸಿಂಹಾಸನಕ್ಕೆ ಅನರ್ಹ' ಎಂದು ಹೇಳಿದ ಮಾತು ಘಟ್ಟಿಮಾಡಿಸಿದರೆ ಸಾಕು ಎಂದು ನಿರ್ಧಾರ ಮಾಡಿಕೊಂಡಳು.

ರಾಣಿಯು ಆ ರಾತ್ರಿ ನಿದ್ದೆಮಾಡಲಿಲ್ಲ. ತನ್ನ ಆಪ್ತರಾದ ದೂತರನ್ನು ಅಂತರಂಗದಲ್ಲಿ ಬರಮಾಡಿಕೊಂಡು ಅವರಿಗೆ ಕೈತುಂಬಾ ಹಣಕೊಟ್ಟು ಹುಚ್ಚನಂತೆ ರಾಜಧಾನಿಯಲ್ಲಿ ಅಲೆಯುತ್ತಿದ್ದ ಶಂಕರಭಟ್ಟನನ್ನು ಕರೆತಂದು ಪ್ರಾತಃಕಾಲ ಮಹಾರಾಜರ ಮುಂದೆ ನಿಲ್ಲಿಸಬೇಕು. ಅವನು ಧೈರ್ಯವಾಗಿ ಯುವರಾಜನ ಮೇಲೆ ದೂರು ಕೊಡುವಂತೆ ಮಾಡಬೇಕು ಎಂದು ಪ್ರೇರೇಪಿಸಿ ಆ ದೂತರನ್ನು ಕಳುಹಿಸಿಕೊಟ್ಟಳು.

## ೧೧

ಶಿವಾಜಿ ಮಹಾರಾಜನಿಗೂ ರಾತ್ರಿ ಕಣ್ಣಿಗೆ ನಿದ್ದೆಹತ್ತಲಿಲ್ಲ. ಆ ರಾತ್ರಿಯೆಲ್ಲಾ ಶಿವಾಜಿಯು ಪರಿತಪಿಸುತ್ತಿದ್ದನು. ಬೆಳಕುಹರಿಯುತ್ತಲೇ ಸ್ನಾನಾನ್ಹಿಕಗಳನ್ನು ಪೂರೈಸಿಕೊಂಡು ದೇವಮಂದಿರಕ್ಕೆ ಬರುವ ಸಮಯಕ್ಕೆ ಸರಿಯಾಗಿ ನಿರ್ಭಾಗ್ಯ ಬ್ರಾಹ್ಮಣ ಶಂಕರಭಟ್ಟನು ಬಂದು ಮಹಾರಾಜರ ಆಗಮನ ನಿರೀಕ್ಷೆ ಮಾಡುತ್ತಾ ನಿಂತಿದ್ದನು.

ಮಹಾರಾಜನು ಅವನ ಕಡೆಗೆ ತಿರುಗಿನೋಡುತ್ತಲೇ ಆ ಬ್ರಾಹ್ಮಣನು ರಾಜನಿಗೆ ದೀರ್ಘದಂಡ ಪ್ರಣಾಮಮಾಡಿ "ಪ್ರಭು, ನಾನು ಕಷ್ಟದಲ್ಲಿದ್ದೇನೆ,

ಅತಿ ದುಃಖಪಡುತ್ತಿದ್ದೇನೆ, ಅಪಮಾನಿತನಾಗಿದ್ದೇನೆ, ನನ್ನ ದೂರನ್ನು ಲಾಲಿಸ ಬೇಕು. ತಮಗೆ ವಿಜ್ಞಾಪನೆ ಮಾಡಿ ಕಾಶೀಕ್ಷೇತ್ರಕ್ಕೆ ಓಡಿಹೋಗಬೇಕೆಂದು ನಿಶ್ಚಯಮಾಡಿಕೊಂಡಿದ್ದೇನೆ" ಎಂದು ಹೇಳಿದನು.

ಶಿವಾಜಿಯು ಅವನನ್ನು ಕಾದಿರುವಂತೆ ಕೈಸನ್ನೆಮಾಡಿ ದೇವಮಂದಿರ ದೊಳಗೆ ಪ್ರವೇಶಮಾಡಿ ಭವಾನಿಯನ್ನು ಸ್ತೋತ್ರಗಳಿಂದ ಪ್ರಾರ್ಥನೆಮಾಡಿ, "ದೇವೀ, ಅಪಚಾರವನ್ನು ಮನ್ನಿಸು, ರಾಜ್ಯಕ್ಕೆ ಶುಭವನ್ನು ಕರುಣಿಸು" ಎಂದು ಪ್ರಾರ್ಥನೆಮಾಡಿ ಪ್ರಸಾದವನ್ನು ಸ್ವೀಕರಿಸಿ ದೇವಮಂದಿರದ ಹೊರಮಂಟಪ ದಲ್ಲಿದ್ದ ಧರ್ಮಪೀಠದ ಮೇಲೆ ಕುಳಿತುಕೊಂಡನು. ಮೊದಲು ಬ್ರಾಹ್ಮಣರಿಗೆ ನಿತ್ಯದಾನಗಳನ್ನು ಕೊಟ್ಟನು. ತರುವಾಯ ಆ ಬ್ರಾಹ್ಮಣನನ್ನು ಸಮ್ಮುಖಕ್ಕೆ ಕರೆಯಿಸಿ "ಹೇಳು, ನಿನ್ನ ದೂರೇನು? ಯಾರ ಮೇಲೆ ದೂರು ತಂದಿರುವೆ. ನಿನ್ನ ಹೆಸರೇನು? ಧೈರ್ಯವಾಗಿ ಹೇಳು. ಸತ್ಯವನ್ನು ನುಡಿ, ಭವಾನಿಯ ಸಾನಿಧ್ಯದಲ್ಲಿದ್ದೀಯೆ?" ಎಂದು ಪ್ರಶ್ನೆ ಮಾಡಿದನು.

"ಮಹಾಪ್ರಭು, ನನ್ನ ಹೆಸರು ಶಂಕರಭಟ್ಟ, ನಾನು ಸತ್ಯವನ್ನೇ ನುಡಿಯು ತ್ತೇನೆ. ನನ್ನ ಹೆಂಡತಿಯ ತೌರೂರು ಪುಣೆ, ಪುಣೆಯ ಯಜ್ಞೇಶ್ವರದೀಕ್ಷಿತರ ಮಗಳು ನನ್ನ ಧರ್ಮಪತ್ನಿ, ಅವಳ ಹೆಸರು ಸಕ್ಕೂಬಾಯಿ, ನಾನು ಶಿವಪುರದ ಗ್ರಾಮಸ್ಥ, ಮಕ್ಕಳಿಲ್ಲದೇ ಪಂಡರಾಪುರಕ್ಕೆ ಹೋಗಿ ನಾವು ದಂಪತಿಗಳು ಸೇವೆ ಮಾಡುತ್ತಿದ್ದೆವು, ಯುವರಾಜ ಸಾಂಬಾಜಿಯುವರು ದೇವರ ದರ್ಶನಕ್ಕೆ ದಯ ಮಾಡಿಸಿದರು, ದೇವಸ್ಥಾನದಿಂದ ಅವರು ಹೊರಟುಹೋಗುವಾಗ ರಾಜರ ದರ್ಶನ ಕುತೂಹಲದಿಂದ ನನ್ನ ಹೆಂಡತಿಯು ಸಮೀಪದಲ್ಲಿ ನಿಂತು ರಾಜರನ್ನು ದರ್ಶನಮಾಡಿದಳು. ಯುವರಾಜರು ತಮ್ಮ ಕಂಠದಲ್ಲಿದ್ದ ಮುತ್ತಿನಹಾರವನ್ನು ತೆಗೆದು ನನ್ನ ಪತ್ನಿಗೆ ಕೊಟ್ಟು ಹೊರಟುಹೋದರು. ನನ್ನ ಪತ್ನಿಯು ಗಾಬರಿ ಗೊಂಡು ಆ ಹಾರವನ್ನು ಪಂಡರೀನಾಥನ ಪಾದಗಳಿಗೆ ಅರ್ಪಿಸಿ ಹೊರಟು ಬಂದಳು. ಇದನ್ನು ಭಕ್ತಜನರೆಲ್ಲರೂ ಕಣ್ಣಾರ ನೋಡಿದ್ದಾರೆ. ಆ ಹಾರವು ಪಂಡರೀನಾಥನ ಪಾದಗಳ ಮೇಲೆಯೇ ಇದೆ.

ಆ ರಾತ್ರಿಯೇ ರಾಜದೂತರು ಬಂದು ನನ್ನನ್ನು ಯುವರಾಜರ ಸಮ್ಮುಖಕ್ಕೆ ಕರೆದೊಯ್ದರು. ಅವರು ನಿಶ್ಶಂಕೆಯಿಂದ 'ಆ ಸಕ್ಕೂಬಾಯಿ ಯನ್ನು ನನಗೊಪ್ಪಿಸಿಬಿಡಬೇಕು, ನಿನಗೆ ಅಪಾರ ಐಶ್ವರ್ಯವನ್ನು ಕೊಡಿಸು

ತ್ತೇನೆಂದು' ಹೇಳಿದರು, ನಾನು ಕೈಮುಗಿದು 'ಮಹಾಪ್ರಭುಗಳ ಬಾಯಿಯಿಂದ ಇಂತಹ ಮಾತು ಬರಬಾರದು' ಎಂದು ಬೇಡಿಕೊಂಡೆ, ನಾನು ಪೂಜಾರಿಗಳ ಮನೆಯ ಹಿಂಭಾಗದಲ್ಲಿ ಬಿಡಾರಮಾಡಿದ್ದೆ, ಹಿಂತಿರುಗಿ ಬಂದು ನೋಡುವ ವೇಳೆಗೆ ನನ್ನ ಪತ್ನಿಯು ಮಾಯವಾಗಿಹೋಗಿದ್ದಳು, ಹಿಂತಿರುಗಿ ಬರುವಷ್ಟರಲ್ಲಿ ಯುವರಾಜರು ಪರಿವಾರ ಸಮೇತ ಹೊರಟುಹೋಗಿದ್ದರು. ನನ್ನ ಪತ್ನಿಯನ್ನು ಪ್ರತಾಪಗಡದ ಅರಮನೆಯಲ್ಲಿ ಬಂಧಿಸಿಟ್ಟಿದ್ದಾರೆಂದು ಕೇಳಿದ್ದೇನೆ, ಎಷ್ಟೋ ಮಂದಿ ಅಧಿಕಾರಿಗಳಲ್ಲಿ ಹೇಳಿಕೊಂಡೆ. ಎಲ್ಲವೂ ನಿಷ್ಫಲವಾಯಿತು. ಆ ಪತ್ನಿಯ ಆಶೆಯನ್ನು ತೊರೆದುಬಿಟ್ಟಿದ್ದೇನೆ. ಇನ್ನು ಅವಳು ನನ್ನವಳಲ್ಲ. ಪಂಢರಿನಾಥನಿಗೆ ಒಪ್ಪಿಸಿ ಬಿಟ್ಟಿದ್ದೇನೆ. ಈ ದುಃಖದಿಂದ ನಾನು ಬೇಗ ಸಾಯುತ್ತೇನೆ. ಸಾಯುವಾಗ ಕಾಶಿಗೆ ಹೋಗಿ ಗಂಗಾತೀರದಲ್ಲಿ ಸಾಯಬೇಕೆಂದು ಸಂಕಲ್ಪ ಮಾಡಿದ್ದೇನೆ. ನನ್ನ ದೂರು ಇಷ್ಟೆ. ಪ್ರತಿಫಲವಿಲ್ಲದ ದೂರು, ಧರ್ಮಾಧರ್ಮಗಳನ್ನು ಮಹಾಪ್ರಭುಗಳು ವಿಚಾರಣೆ ಮಾಡಿಕೊಳ್ಳಬಹುದು" ಎಂದು ಕಣ್ಣೀರಿಡುತ್ತಾ ಹೇಳಿದನು.

ಆ ಬ್ರಾಹ್ಮಣ ಸಮೂಹದಲ್ಲಿ ಆ ದೇವಮಂದಿರದಲ್ಲಿ ಧರ್ಮಾಸನದ ಮೇಲೆ ಕುಳಿತಿದ್ದ ಮಹಾರಾಜನಿಗೆ ಆ ಮಾತುಗಳನ್ನು ಕೇಳಿ ಸಿಡಿಲುಬಡಿದಂತಾಯಿತು. ಅವನು ದೇವಿಯ ಕಡೆಗೆ ನೋಡುತ್ತಾ ಬ್ರಾಹ್ಮಣನಿಗೆ ಮನಃಪೂರ್ವಕವಾಗಿ ವಂದಿಸಿ ಅರಮನೆ ಒಳಗೆ ಪ್ರವೇಶಮಾಡಿದನು. ತನ್ನ ಸೇನಾಧಿಪತಿಗಳಾದ ಹಿಂಗಳೆ ಮತ್ತು ದತ್ತೂರಾವ್ ಇವರಿಬ್ಬರನ್ನೂ ಕರೆಸಿ "ನೀವುಗಳು ಪ್ರತಾಪಗಡಕ್ಕೆ ಹೋಗಿ ಸಾಂಬಾಜಿಯನ್ನು ಕರೆತರಬೇಕು, ಅವನ ವಿಚಾರಣೆಯಾಗಬೇಕು. ಅದುವರೆಗೆ ನಾನು ಅನ್ನಾಹಾರಗಳನ್ನು ಮುಟ್ಟುವುದಿಲ್ಲ, ಜಲಪಾನ ಮಾಡುವುದಿಲ್ಲ" ಎಂದು ಹೇಳಿದನು. ಮಹಾರಾಜನ ನಿಷ್ಠುರ ವಚನಗಳನ್ನು ಕೇಳಿ ಅವರಿಬ್ಬರೂ ಗಾಬರಿಗೊಂಡರು, ಮರುಮಾತನಾಡದೇ ಪ್ರತಾಪಘಡಕ್ಕೆ ಹೊರಟುಹೋದರು.

ಅವರಿಬ್ಬರೂ ಸಾಂಬಾಜಿಯನ್ನು ಕಂಡು ಶಿವಾಜಿ ಮಹಾರಾಜರ ಆಜ್ಞೆಯನ್ನು ತಿಳಿಸಿದರು. ಆ ಸೇನಾಧಿಪತಿಗಳು ಕಾರಣವನ್ನು ತಿಳಿಸಲಿಲ್ಲ. ಸಾಂಬಾಜಿಯು ಭಯಗೊಂಡನು. ಸೇನಾಧಿಪತಿಗಳಿಬ್ಬರೂ ಸಾಂಬಾಜಿಗೆ ನಾನಾ ವಿಧವಾಗಿ ಧೈರ್ಯ ಹೇಳಿ ಅವನನ್ನು ರಾಯಘಡಕ್ಕೆ ಕರೆದುಕೊಂಡು ಬಂದರು,

ಮರುದಿನ ಪ್ರಾತಃಕಾಲ ಶಿವಾಜಿಯು ದರ್ಬಾರಿನಲ್ಲಿ ಬಂದು ಕುಳಿತನು. ಮಂತ್ರಿಗಳು, ವಿದ್ವಾಂಸರುಗಳು ಬಂದು ತಮ್ಮ ತಮ್ಮ ಆಸನಗಳಲ್ಲಿ ಕುಳಿತರು. ಸೇನಾಧಿಪತಿಗಳು ಯುವರಾಜನನ್ನು ಮಹಾರಾಜರ ಸಮ್ಮುಖದಲ್ಲಿ ಕರೆತಂದು ನಿಲ್ಲಿಸಿದರು. ಶಿವಾಜಿಯು ಸಾಂಬಾಜಿಯ ಮುಖವನ್ನು ನೋಡದೆ, ಮಂತ್ರಿಗಳ ಕಡೆಗೂ ವಿದ್ವಾಂಸರ ಕಡೆಗೂ ತಿರುಗಿ ನೋಡಿ "ಈ ಸಾಂಬಾಜಿಯು ಮಹಾಪರಾಧಮಾಡಿದ್ದಾನೆ. ಅಪರಾಧವು ಸಾಮಾನ್ಯವಾದುದಲ್ಲ, ಅದು ಮಹಾಪಾತಕ. ನನ್ನ ಮಗನೆಂದೂ, ಯುವರಾಜನೆಂದೂ ನೀವು ದಾಕ್ಷಿಣ್ಯ ಪಡಕೂಡದು, ಇವನಿಗೆ ತಕ್ಕ ಶಿಕ್ಷೆಯನ್ನು ವಿಧಿಸಬೇಕು. ಈ ಬಗ್ಗೆ ನನಗೂ ಪ್ರಾಯಶ್ಚಿತ್ತವಿಧಾನ ಮಾಡಬೇಕು" ಎಂದು ಹೇಳಿ ಶಂಕರಭಟ್ಟನನ್ನು ಸಿಂಹಾಸನದ ಮುಂದೆ ಕರೆತಂದು ನಿಲ್ಲಿಸುವಂತೆ ಅಪ್ಪಣೆಮಾಡಿದನು.

ಶಂಕರಭಟ್ಟನು ದರ್ಬಾರಿಗೆ ಬಂದು ಮಹಾರಾಜರಿಗೆ ಅಭಿವಂದಿಸಿ ನಿಂತುಕೊಂಡನು. ಶಿವಾಜಿಯು "ಹೇಳು ವಿಪ್ರ, ನಿನ್ನ ದೂರನ್ನು ನಿಶ್ಶಂಕೆಯಿಂದ ಈ ರಾಜಸಭೆಯಲ್ಲಿ ಹೇಳು. ನನ್ನ ಮೇಲೆಯೇ ದೂರಿದ್ದರೂ ಧೈರ್ಯವಾಗಿ ಹೇಳು, ಈ ಸಿಂಹಾಸನವನ್ನಾದರೂ ಪರಿತ್ಯಜಿಸಲು ನಾನು ಸಿದ್ಧನಾಗಿದ್ದೇನೆ" ಎಂದು ಹೇಳಿದನು.

ಶಂಕರಭಟ್ಟನು ಕಣ್ಣೀರುಗರೆಯುತ್ತಾ "ಮಹಾಪ್ರಭುಗಳೇ, ಈ ಯುವರಾಜರು ಪಂಡರಾಪುರ ಕ್ಷೇತ್ರದಲ್ಲಿ ನನ್ನ ಧರ್ಮಪತ್ನಿಯನ್ನು ಅಪಹಾರಮಾಡಿದ್ದಾರೆ, ಕ್ಷೇತ್ರವನ್ನು ಅಪವಿತ್ರಗೊಳಿಸಿದ್ದಾರೆ, ನನ್ನ ಪತ್ನಿಯ ಪಾತಿವ್ರತ್ಯವನ್ನು ಭಂಗಗೊಳಿಸಿದ್ದಾರೆ, ತಮ್ಮ ಈ ಧರ್ಮಸಿಂಹಾಸನಕ್ಕೆ ಕಳಂಕವನ್ನುಂಟುಮಾಡಿದ್ದಾರೆ. ಇದಕ್ಕೆ ಪಂಡರೀನಾಥನೇ ಸಾಕ್ಷಿ, ಅಲ್ಲಿ ನೆರೆದಿದ್ದ ಭಕ್ತವೃಂದವು ಸಾಕ್ಷಿ, ಪಂಡರೀನಾಥನ ಪಾದಗಳಲ್ಲಿರುವ ಮುಕ್ತಾಹಾರವು ಸಾಕ್ಷಿ" ಎಂದು ಹೇಳಿ ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು ಕಣ್ಣೀರಿಡುತ್ತಾ ನಿಂತುಕೊಂಡನು.

ಸಾಂಬಾಜಿಯು ತಲೆ ಎತ್ತಲಿಲ್ಲ. ಶಿವಾಜಿಯ ಮುಖವನ್ನು ಕಣ್ಣೆತ್ತಿ ನೋಡಲು ಅವನಿಗೆ ಧೈರ್ಯಬರಲಿಲ್ಲ. ತಲೆತಗ್ಗಿಸಿಕೊಂಡು, ಕಲ್ಲುಗೊಂಬೆಯಂತೆ ಅಲುಗದೇ ನಿಂತಿದ್ದನು.

ಶಿವಾಜಿಯು ಮಂತ್ರಿಗಳ ಕಡೆಯೂ ವಿದ್ವಾಂಸರ ಕಡೆಯೂ ತಿರುಗಿ

ನೋಡಿದನು. ಯಾರೂ ಮಾತನಾಡಲಿಲ್ಲ, ಎಲ್ಲರ ಮುಖಗಳೂ ಮ್ಲಾನವಾಗಿದ್ದವು. ಶಿವಾಜಿಯು ಗದ್ದರಿಸಿ "ಸಾಂಬಾಜೀ, ನಿನ್ನ ಅಪರಾಧವನ್ನು ಒಪ್ಪಿಕೊಳ್ಳುವೆಯಾ, ಪಶ್ಚಾತ್ತಾಪದಿಂದ ಒಪ್ಪಿಕೊಳ್ಳುವೆಯಾ? ಪ್ರಾಯಶ್ಚಿತ್ತವನ್ನು ಅನುಭವಿಸುವ ಧೈರ್ಯವಿದೆಯೇ?" ಎಂದು ಪ್ರಶ್ನೆಮಾಡಿದನು.

ಸಾಂಬಾಜಿಯು ತಲೆ ಎತ್ತಿ ಕೈಮುಗಿದು "ನನ್ನ ಮಹಾಪರಾಧವನ್ನು ಒಪ್ಪಿಕೊಳ್ಳುತ್ತೇನೆ. ಮೊದಲು ಈ ಬ್ರಾಹ್ಮಣನಲ್ಲಿ ಕ್ಷಮಾಯಾಚನೆ ಮಾಡುತ್ತೇನೆ. ನನಗೆ ತಕ್ಕ ಶಿಕ್ಷೆಯನ್ನು ವಿಧಿಸಬೇಕೆಂದು ಮಹಾರಾಜರವರಲ್ಲಿ ಪ್ರಾರ್ಥನೆಮಾಡುತ್ತೇನೆ. ಎಷ್ಟು ಸಂತೋಷದಿಂದ ಪಾಪವನ್ನೆಸಗಿದೆನೋ ಅಷ್ಟೇ ಹರ್ಷದಿಂದ ಶಿಕ್ಷೆಯನ್ನು ಅನುಭವಿಸುತ್ತೇನೆ" ಎಂದು ಹೇಳಿದನು.

ಶಿವಾಜಿಯು ಮತ್ತೊಮ್ಮೆ ಸಭಾಸದರ ಕಡೆಗೆ ತಿರುಗಿನೋಡಿದನು, ಪುನಶ್ಚ–ಮೌನ–ಸರ್ವತ್ರ ಮೌನ.

ಶಿವಾಜಿಯು ಕ್ಷಣಹೊತ್ತು ಆಕಾಶದ ಕಡೆಗೆ ನೋಡುತ್ತಿದ್ದು "ಈ ಅಪರಾಧಕ್ಕೆ ಶಿರಚ್ಛೇದನವು ಶಿಕ್ಷೆ" ಎಂದು ಹೇಳಿದನು. ಸಭೆಯಲ್ಲೆಲ್ಲಾ ಹಾಹಾಕಾರವೆದ್ದಿತು. ಮಂತ್ರಿಗಳೂ ವಿದ್ವಾಂಸರೂ ಕೈಮುಗಿದು "ಯುವರಾಜನನ್ನು ಕ್ಷಮಿಸಬೇಕು" ಎಂದು ಕೇಳಿಕೊಂಡರು.

ಶಿವಾಜಿಯು ಅಲುಗಲಿಲ್ಲ, ಮುಖದ ಹುಬ್ಬಿನ ಗಂಟು ಸಡಿಲವಾಗಲಿಲ್ಲ.

ಶಂಕರಭಟ್ಟನು ಕಣ್ಣುಬಿಟ್ಟು ಸುತ್ತಲೂ ನೋಡಿದನು. ಹಟಾತ್ತನೆ ಸಿಂಹಾಸನದ ಸಮೀಪಕ್ಕೆ ಓಡಿಬಂದು ಶಿವಾಜಿಯ ಪಾದಗಳಿಗೆರಗಿ "ಮಹಾಪ್ರಭು, ಕ್ಷಮಿಸಬೇಕು. ಸ್ತ್ರೀಮೋಹವು ದೇವಾಧಿದೇವತೆಗಳನ್ನೂ ಬಿಟ್ಟದ್ದಲ್ಲ, ಆದರೆ ಈ ಸಿಂಹಾಸನದ ದೀಪವು ನನ್ನಿಂದ ಆರಿಹೋಗಕೂಡದು. ರಾಜವಧೆಯ ಪಾಪವನ್ನು ನನ್ನ ತಲೆಯಮೇಲೆ ಕಟ್ಟಕೂಡದು. ಈ ಮಹಾರಾಷ್ಟ್ರ ರಾಜ್ಯವು ಇರುವತನಕ ನನ್ನ ಅಪಖ್ಯಾತಿಯು ಅಳಿಸಿಹೋಗಲು ನನಗೇ ಏಕೆ ಇಡೀ ಬ್ರಾಹ್ಮಣಕುಲಕ್ಕೇ ಈ ರಾಜವಧೆಯ ಕಳಂಕವು ಶಾಶ್ವತವಾಗಿ ಅಂಟುವುದು. ತಾವು ದೇವಿಯ ಸನ್ನಿಧಾನದಲ್ಲಿ ಧರ್ಮಪೀಠದಲ್ಲಿ ಕುಳಿತು ಬ್ರಾಹ್ಮಣರೆಲ್ಲರಿಗೂ ದಾನಮಾಡಿದಿರಿ, ಆಗ ನಾನು ಪರಿಗ್ರಹಿಸಲಿಲ್ಲ. ಈಗ ನಾನಾಗಿಯೇ ಯುವರಾಜರನ್ನು ಕ್ಷಮಿಸಿದ್ದೇನೆ, ಅವರ ಪ್ರಾಣಭಿಕ್ಷೆಯನ್ನು ಬೇಡುತ್ತಿದ್ದೇನೆ. ಯುವರಾಜರ ಅಪರಾಧಕ್ಕೆ ಹೇಗೆ ಪಂಡರಿನಾಥನು ಸಾಕ್ಷಿಯೊ ಹಾಗೆ ನಾನು




ಕೊಟ್ಟಿರುವ ಕ್ಷಮೆ, ನಾನು ಬೇಡುತ್ತಿರುವ ಯುವರಾಜರ ಪ್ರಾಣಭಿಕ್ಷೆಗಳಿಗೆ ಈ ವಿದ್ವತ್‌ಸಮೂಹವು ಸಾಕ್ಷಿಯಾಗಿದೆ" ಎಂದು ಹೇಳಿದನು.

ವಿದ್ವಾಂಸರೆಲ್ಲರೂ ಮಹಾರಾಜನಲ್ಲಿ ಪ್ರಾರ್ಥಿಸಿಕೊಂಡರು. ಶಿವಾಜಿಯು ಬ್ರಾಹ್ಮಣನು ಬೇಡಿದರೂ ವಿದ್ವತ್ ಜನರು ಸಮ್ಮತಿಸಿದರೂ ಮಂತ್ರಿಗಳು ಸಲಹೆ ಕೊಟ್ಟರೂ "ಅಪರಾಧಕ್ಕೆ ಶಿಕ್ಷೆ ಇಲ್ಲದೇ ಇರಕೂಡದು. ಯುವರಾಜ ಸಾಂಬಾಜಿಗೆ ಆಮರಣಾಂತ ಕಾರಾಗೃಹ ಶಿಕ್ಷೆಯನ್ನು ವಿಧಿಸಿದ್ದೇನೆ" ಎಂದು ಹೇಳಿ ಸಭಾಭವನವನ್ನು ಬಿಟ್ಟುಹೋದನು.

ಯುವರಾಜ ಸಾಂಬಾಜಿಯನ್ನು ಕಟ್ಟುಕಾವಲಿನೊಡನೆ ಪನ್ಹಾಲಾಕೋಟೆಗೆ ಕಳುಹಿಸಿಕೊಟ್ಟರು. ಪನ್ಹಾಲಾ ಕೋಟೆಯಲ್ಲಿ ಸಾಂಬಾಜಿಯನ್ನು ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳಬೇಕೆಂದು ಆಜ್ಞೆ ಇತ್ತರು. ಮಹಾರಾಜರಲ್ಲಿ ದೂರು ಕೊಟ್ಟ ಬ್ರಾಹ್ಮಣನು ತನ್ನ ಪತ್ನಿಯನ್ನು ಪುನಃ ಪರಿಗ್ರಹಿಸಲು ಒಪ್ಪಲಿಲ್ಲ. ಶಿವಾಜಿ ಮಹಾರಾಜನು ಖಿನ್ನಳಾದ ಆ ಬ್ರಾಹ್ಮಣಿಯನ್ನು ಪಂಡರೀಪುರಕ್ಕೆ ಹೋಗಿ ಭಗವತ್ಸೇವೆಯಲ್ಲಿ ಕಾಲಕಳೆಯುವಂತೆ ಅಪ್ಪಣೆಯಿತ್ತು ಕಳುಹಿಸಿಕೊಟ್ಟನು. ಆ ಬ್ರಾಹ್ಮಣನು ವಾರಣಾಸಿಗೆ ಹೊರಟುಹೋದನು. ಶಿವಾಜಿಯ ಮನಸ್ಸು ಇಷ್ಟಾದರೂ ಶಾಂತಿಯನ್ನು ಪಡೆಯಲಿಲ್ಲ. ಸಾಂಬಾಜಿಯು ಪಾಪಕೃತ್ಯಗಳು ತನ್ನ ಸಿಂಹಾಸನದ ಮೇಲೆ ಕಳಂಕವನ್ನು ಬೀರದಿರವು ಎಂದು ಸರ್ವದಾ ಪರಿತಪಿಸುತ್ತಲೇ ಇದ್ದನು. ಅಂತಃಪುರಕ್ಕೆ ಶಿವಾಜಿಯು ಹೋಗುವುದನ್ನೇ ಬಿಟ್ಟುಬಿಟ್ಟನು. ಚಿಕ್ಕರಾಣಿ ಸೋರ್ಯಾಬಾಯಿಯು ಸಾಂಬಾಜಿಯ ಮೇಲೆ ಸರ್ವದಾ ದೂರು ಹೇಳುತ್ತಾ ತನ್ನ ಮಗನಾದ ರಾಜಾರಾಮನಿಗೆ ಪಟ್ಟ ಕಟ್ಟಿಸಬೇಕೆಂದು ಪ್ರಯತ್ನಿಸುತ್ತಿದ್ದಳು. ಇದಕ್ಕನುಗುಣವಾಗಿ ಅನೇಕ ಮಂದಿ ವಿದ್ವತ್ ಜನರನ್ನು, ಮಂತ್ರಿಗಳನ್ನು ನಾನಾ ಮಾರ್ಗಗಳಿಂದ ಪ್ರೇರೇಪಿಸುತ್ತಿದ್ದಳು. ಇವೆಲ್ಲ ಕಾರಣಗಳಿಂದಲೂ ಶಿವಾಜಿಯು ಅತ್ಯಂತ ಖಿನ್ನನಾಗಿದ್ದನು.

## ೧೨

ಪನ್ಹಾಲಾ ದುರ್ಗದಲ್ಲಿ ಅರಮನೆಯಲ್ಲಿ ಏಕಾಂತವಾಸವನ್ನು ಅನುಭವಿಸುತ್ತಿದ್ದ ಸಾಂಬಾಜಿಗೆ ತನ್ನ ಜೀವನವೇ ಭಾರವಾಗಿ ಕಾಣತೊಡಗಿತು. ಶಿವಾಜಿ

ಮಹಾರಾಜರಲ್ಲಿ ಪ್ರಾರ್ಥನೆ ಮಾಡಿ ಬಂಧನದಿಂದ ವಿಮುಕ್ತಿ ಹೊಂದೋಣವೇ ಎಂದು ಮನದಲ್ಲಿಯೇ ಚಿಂತಿಸತೊಡಗಿದನು. ಬಹುಮಂದಿ ಮಂತ್ರಿಗಳೂ, ಅನೇಕ ಸೇನಾಧಿಪತಿಗಳೂ ತನ್ನ ಕಡೆಗಿದ್ದರೆಂಬ ಪೂರ್ಣಭರವಸೆಯು ಅವನ ಗಿದ್ದಿತು. ರಾಜರುಗಳು ತನ್ನ ಮನಸ್ಸಿಗೆ ಒಲಿದ ಸ್ತ್ರೀಯರನ್ನು ಪರಿಗ್ರಹಿಸ ಬಾರದೆಂಬ ನ್ಯಾಯವೇ ಅವನ ಮನಸ್ಸಿಗೆ ಹೊಳೆಯುತ್ತಿರಲಿಲ್ಲ. ಬಂಧನದಿಂದ ವಿಮುಕ್ತನಾಗಿ ಪುನಃ ಎಲ್ಲಿಗೆ ಹೋದರೂ ತನ್ನ ಮೇಲೆ ದೂರುಗಳು ಬಂದೇ ಬರುತ್ತವೆ. ತಂದೆಯಾದ ಶಿವಾಜಿ ಮಹಾರಾಜನು ಅಡಿಗಡಿಗೆ ತನ್ನ ಮೇಲೆ ಆಗ್ರಹಪಟ್ಟುಕೊಳ್ಳುವಂಥಾ ಕಾರಣಗಳು ಬಂದೊದಗುತ್ತವೆ. ಅಷ್ಟೇ ಅಲ್ಲ, ತನಗೆ ದರಬಾರಿನಲ್ಲಿ ತಲೆ ಎತ್ತದಂಥಾ ಅಪಮಾನವಾಗಿದೆ. ಮಹಾರಾಜರವರೇ ಕ್ಷಮಿಸಿದರೂ ಕೂಡಾ ಇನ್ನು ದರಬಾರಿಗೆ ಹೋಗಬಾರದು. ಚಿಕ್ಕತಾಯಿ ಸೋಯ್ರಾಬಾಯಿಯು ತನ್ನ ಮೇಲೆ ಯಾವಾಗಲೂ ದ್ವೇಷವನ್ನು ಕಾರುತ್ತಲೇ ಇರುತ್ತಾಳೆ. ತನಗೆ ಇದೂ ಒಂದು ದೈವದತ್ತವಾದ ಶಾಪವೇ ಆದಂತಾಗಿದೆ, ಇನ್ನು ರಾಜಧಾನಿಗೆ ಹೋಗುವುದಿಲ್ಲ. ತಂದೆಯು ಏನು ಬೇಕಾದರೂ ಮಾಡಿ ಕೊಳ್ಳಲಿ. ಆ ರಾಜ್ಯಕ್ಕಾಗಿ ನಾನು ಆಸೆಪಡುವುದೂ ಇಲ್ಲ ಎಂದು ನಿರ್ಧಾರ ಮಾಡಿಕೊಂಡನು.

ಸಾಂಬಾಜಿಗೆ ಬಿಜಾಪುರಕ್ಕೆ ಹೋದರೆ ಅಲ್ಲಿ ಸುಲ್ತಾನನು ತನ್ನನ್ನು ಆದರಿಸಿ ಇಟ್ಟುಕೊಳ್ಳಬಹುದು, ಅಲ್ಲಿ ಬೇಕಾದಷ್ಟು ಸುಖಭೋಗಗಳನ್ನು ಅನುಭವಿಸಲೂಬಹುದು. ಆ ದರ್ಬಾರಿನಲ್ಲಿ ಭೋಗ ಜೀವನವನ್ನು ದೂಷ್ಯ ವೆಂದು ಭಾವಿಸುವವರೂ ಯಾರೂ ಇಲ್ಲ. ತನ್ನ ಪಿತಾಮಹನಾದ ಷಾಜಿಯು ಆ ದರ್ಬಾರಿನಲ್ಲಿದ್ದು ಗೌರವವನ್ನು ಸಂಪಾದಿಸಿದ್ದನು. ಷಾಜಿಯ ಮೊಮ್ಮಗ ನೆಂದು ದರಬಾರಿಗಳೂ ತನ್ನನ್ನು ವಿಶೇಷ ಗೌರವಿಸುತ್ತಾರೆ. ಅದು ತನಗೆ ತಕ್ಕ ಸ್ಥಳ ಎಂದುಕೊಂಡು ತನ್ನ ಅತ್ಯಂತ ಆಪ್ತನಾದ ಗಂಗಾಧರರಾಯನನ್ನು ಬಿಜಾಪುರಕ್ಕೆ ರವಾನೆ ಹಾಕಿದನು. ಪನ್ಹಾಲಾದ ಸುಬೇದಾರನು ಸಾಂಬಾಜಿಗೆ ಹೆಚ್ಚು ನಿರ್ಬಂಧವನ್ನು ವಿಧಿಸಿರಲಿಲ್ಲ. ಸಾಂಬಾಜಿಯು ಬಂಧಿತನಾಗಿ ಪನ್ಹಾಲಕ್ಕೆ ತರಲ್ಪಡುತ್ತಲೇ ಕಿಲ್ಲೇದಾರ ರಘುನಾಥರಾಯನು ಯುವರಾಜನ ಭೇಟಿ, "ಯುವರಾಜರವರೇ, ನೀವು ನಮ್ಮ ಮಹಾಪ್ರಭುಗಳವರು. ಶಿವಾಜಿ ಮಹಾರಾಜರಿಗೆ ಇಂದು ತಮ್ಮ ಮೇಲೆ ಆಗ್ರಹಬಂದಿರಬಹುದು, ನಾಳೆ ಸಮಾ

ಧಾನವಾಗಬಹುದು. ಇಂದು ಯುವರಾಜರಾದ ತಾವು ನಾಳೆ ಸಾರ್ವಭೌಮ ಸಿಂಹಾಸನಕ್ಕೆ ಪಟ್ಟಭದ್ರರಾಗುವುದು ನ್ಯಾಯ. ನನ್ನ ಮೇಲೆ ಏನೂ ದೋಷ ಬಾರದಂತೆ ತಾವೇ ನೋಡಿಕೊಳ್ಳಬೇಕು ಎಂದು ಕೇಳಿಕೊಂಡಿದ್ದನು. ಸಾಂಬಾಜಿಯು "ರಘುನಾಥರಾಯ, ಮಹಾರಾಜರವರು ಕೊಟ್ಟಿರುವ ಅಪ್ಪಣೆ ಯನ್ನು ಶಿರಸಾವಹಿಸಿ ನಾನಿಲ್ಲಿಗೆ ಬಂದಿದ್ದೇನೆ. ಎಲ್ಲಿ ಹೋದರೂ ಅವರ ಅಪ್ಪಣೆಯು ನನ್ನ ತಲೆಯ ಮೇಲೆ ಇದ್ದೇ ಇರುತ್ತದೆ. ನಿನ್ನ ಮೇಲೆ ಆಕ್ಷೇಪಣೆ ಬರುವಂಥಾ ಕಾರ್ಯವನ್ನು ನಾನೆಂದಿಗೂ ಆಚರಿಸುವವನಲ್ಲ" ಎಂದು ಅಭಯ ಪ್ರದಾನ ಮಾಡಿದ್ದನು. ಅಡಿಗೆಯವರು ಪರಿಚಾರಕರು ಸೇವಕರು ಪೂಜೆಯ ಬ್ರಾಹ್ಮಣರು ಇವರೆಲ್ಲರೂ ಯುವರಾಜನಲ್ಲಿಗೆ ಬಂದುಹೋಗಲು ಯಾವ ಆಕ್ಷೇಪಣೆಯೂ ಇರಲಿಲ್ಲ. ಯುವರಾಜನು ಮಾತ್ರ ಕೋಟೆಯನ್ನು ದಾಟಿ ಹೋಗಬಾರದೆಂದು ಮಹಾರಾಜರ ಆಜ್ಞೆಯಾಗಿತ್ತು.

ಗಂಗಾಧರರಾಯನು ಎಂದೂ ಬಿಜಾಪುರವನ್ನು ನೋಡಿದವನಲ್ಲ. ಅವನು ಬಿಜಾಪುರದ ಸೌಧಗಳನ್ನು ವೈಭವವನ್ನು ನೋಡಿ ಆಶ್ಚರ್ಯಗೊಂಡನು. ಆ ದರಬಾರಿನಲ್ಲಿದ್ದ ಅಧಿಕಾರಿಗಳ ಐಶ್ವರ್ಯವನ್ನು ಕಂಡು ಬೆರಗಾದನು. ಬಿಜಾಪುರಕ್ಕೆ ಹೋಗಿದ್ದ ಗಂಗಾಧರರಾಯನು ಸುಲ್ತಾನರ ಭೇಟಿಗೆ ಯಾರ ಮುಖಾಂತರ ಹೋಗಬೇಕೆಂದು ಯೋಚನೆಮಾಡುತ್ತಿದ್ದನು. ಸುಲ್ತಾನರ ಅರಮನೆಯಲ್ಲಿ ಎಷ್ಟೋ ಮಂದಿ ಹಿಂದೂ ಅಧಿಕಾರಿಗೂ ಗೌರವದಿಂದ ಬಾಳು ತ್ತಿದ್ದರು. ನಾರಾಯಣಪಂತನೆಂಬ ವೃದ್ಧ ಸರದಾರನು ಸುಲ್ತಾನರ ಖಾಸ್ ಕಛೇರಿಯಲ್ಲಿ ಕಾರಕೂನನಾಗಿದ್ದನು. ತೇಜಸ್ವಿಯಾದ ಯುವಕ ಗಂಗಾಧರ ರಾಯನು ನಾರಾಯಣಪಂತನ ಮನೆಗೆ ಹೋಗಿ ಅವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ತನಗೆ ಸುಲ್ತಾನರ ಭೇಟಿ ಮಾಡಿಸಬೇಕೆಂದು ಕೇಳಿಕೊಂಡನು. ನಾರಾಯಣ ಪಂಡಿತನು "ನಿನಗೆ ಸಂಗೀತ ಬರುತ್ತದೋ ಮತ್ತಾವುದಾದರೂ ಕಲೆಯನ್ನು ಕಲಿತಿರುವೆಯೋ ? " ಎಂದು ಪ್ರಶ್ನೆ ಮಾಡಿದನು.

ಗಂಗಾಧರನಿಗೆ ತಬ್ಬಿಬ್ಬಾಯಿತು.

"ಇಲ್ಲ ಪಂತ್‌ಜೀಯವರೇ ! ಅಂತಹ ಕಲಾನೈಪುಣ್ಯವೇನೂ ಇಲ್ಲ."

"ಹಾಗಾದರೆ ಈ ದರ್ಬಾರಿನಲ್ಲಿ ಹಿಂದುಗಳಿಗೆ ಮನ್ನಣೆ ಸಿಕ್ಕದು. ನಾವು ಗಳು ವಂಶಪಾರಂಪರ್ಯವಾಗಿ ಬಂದವರು ಅಪ್ಪ ಹಾಕಿದ ಆಲದ ಮರವೆಂದು

ನಂಬಿಕೊಂಡು ಕುಳಿತಿದ್ದೇವೆ. ನಮ್ಮ ಕಾಲದಲ್ಲಿ ಮಹಾರಾಷ್ಟ್ರರಿಗೆ ಯಾವ ಮನ್ನಣೆಯೂ ಇರಲಿಲ್ಲ. ಈ ಸುಲ್ತಾನರುಗಳ ಸೇವೆಗೆ ಸೇರಿಕೊಂಡೆವು. ಈಗ ಶಿವಾಜಿ ಮಹಾರಾಜರಿದ್ದಾರೆ, ನೀನು ಅಲ್ಲಿಗೆ ಹೋಗು. ನಿನ್ನ ಯೋಗ್ಯತೆಗೆ ತಕ್ಕ ಸ್ಥಾನವನ್ನು ಹೊಂದಬಹುದು."

ಗಂಗಾಧರರಾಯನ ಆಟವೇನೂ ನಡೆಯದೇ ಹೋಯಿತು. ಅವನು ಒಂದು ತಿಂಗಳ ಕಾಲ ಬಿಜಾಪುರದಲ್ಲಿ ಅಲೆಯುತ್ತಿದ್ದನು. ಸುಲ್ತಾನರನ್ನು ಭೇಟಿಮಾಡುವ ಸುಸಂಧಿಯೊಂದು ಅವನಿಗೆ ಸಿಕ್ಕಿತು. ಸುಲ್ತಾನರ ಅರಮನೆಯ ಪರಿಚಾರಿಕೆಯೊಬ್ಬಳು ಒಂದು ಮುತ್ತಿನ ಹಾರವನ್ನು ಕದ್ದುತಂದು ಯಾರಿಗಾದರೂ ಮಾರಲು ಪ್ರಯತ್ನಪಡುತ್ತಿದ್ದಳು. ಜವಾಹಿರಿ ಮಾರುವ ಪೇಟೆಯಲ್ಲಿ ಪರದೇಶದ ವ್ಯಾಪಾರಸ್ಥನೊಬ್ಬನು ಆ ಮುತ್ತಿನಹಾರವನ್ನು ಪರೀಕ್ಷಿಸಿ ನೋಡಿ ಒಳ್ಳೆಯ ಬೆಲೆಬಾಳುವ ಪದಾರ್ಥವೆಂದು ತನ್ನ ಕಿಸೆಯಲ್ಲಿಟ್ಟುಕೊಂಡು ಎರಡು ವರಹಗಳನ್ನು ತೆಗೆದು ಪರಿಚಾರಿಕೆಯ ಕೈಗೆ ಕೊಟ್ಟುಹೋಗು ಎಂದು ಗದ್ದರಿಸಿದನು.

ಪರಿಚಾರಿಕೆಯು ಅದಕ್ಕೊಪ್ಪದೇ ಹಾರವನ್ನು ವಾಪಸು ಕೊಡಬೇಕೆಂದು ಅವನನ್ನು ಬಲಾತ್ಕರಿಸಿದಳು. ಪೇಟೆಯ ಮೂಲೆಯಲ್ಲೊಂದು ಕಡೆ ಈ ಗದ್ದಲ ನಡೆಯುತ್ತಿದ್ದಿತು. ಗಂಗಾಧರರಾಯನು ಆವರಿಬ್ಬರ ವ್ಯವಹಾರವನ್ನು ನೋಡುತ್ತ ನಿಂತಿದ್ದನು. ಅಚ್ಚ ಪಾರಸೀಭಾಷೆಯಲ್ಲಿ 'ಕೊಟ್ಟುಬಿಡು, ಅವಳ ಪದಾರ್ಥ ಅವಳಿಗೆ ಕೊಡು' ಎಂದು ಹೇಳಿದನು.

ಅವನು ಗಂಗಾಧರನ ಕಡೆಗೆ ದುರುಗುಟ್ಟಿ ನೋಡುತ್ತಾ, ನೀನಾರೋ ಹಿಂದೂ ಭಿಕಾರಿ, ನಿನಗೇಕೆ ನಮ್ಮ ವ್ಯವಹಾರ, ತಿರುಪೆಬೇಡಿದರೆ ದುಗ್ಗಾಣಿ ಸಿಕ್ಕೀತು, ನಮ್ಮ ತಂಟೆಗೆ ಬಂದರೆ ಬೆನ್ನುಮೇಲೆ ಬಾಸುಂಡೆ ಬರುವಂತೆ ಪೆಟ್ಟು ಬಿದ್ದೀತು ಎಂದು ಹೇಳಿದನು.

ಅವರವರಿಗೆ ಕೈಕೂಡಿತು. ಗಂಗಾಧರನು ಬೀದಿಯಲ್ಲಿಯೇ ಅವನನ್ನು ನೆಲದ ಮೇಲುರುಳಿಸಿ ಕಾಲಿನಿಂದ ಒದ್ದು "ಹರಾಂ, ಹೆಂಗಸಿನ ನಗ ಕಿತ್ತುಕೊಂಡು ಭಂಡತನ ಮಾಡುತ್ತಾನೆ" ಎಂದು ಗದ್ದರಿಸಿದನು.

ಪರಿಚಾರಿಕೆಯು ಗದ್ದಲ ದೊಡ್ಡದಾದುದನ್ನು ಕಂಡು ಭಯಪಟ್ಟು ನುಸುಳಿಕೊಂಡು ಓಡಿಹೋದಳು. ಕಾವಲಿನ ರಾಜಭಟರು ಅವರಿಬ್ಬರನ್ನೂ

ಹಿಡಿದುಕೊಂಡು ಹೋಗಿ ಕೊತ್ವಾಲನ ಮುಂದೆ ನಿಲ್ಲಿಸಿದರು. ಗಂಗಾಧರ ರಾಯನು ನಡೆದ ಕಥೆಯನ್ನು ಹೇಳಿದನು ದಳ್ಳಾಳಿಯು ತನ್ನ ಕಿಸೆಯಲ್ಲಿರುವ ಮುತ್ತಿನ ಹಾರವು ತನ್ನದೇ ಎಂದು ಸಾಧಿಸಿದನು. ಕೊತ್ವಾಲರು ಹಾರವನ್ನು ಕೈಗೆ ತೆಗೆದುಕೊಂಡು ನೋಡಿ, "ಇದು ಸುಲ್ತಾನರ ಅರಮನೆಯ ಹಾರ" ಎಂದು ಹೇಳಿ ವರ್ತಕನನ್ನು ಬಂಧಿಸಿದರು.

ಈ ಸಮಾಚಾರ ಗತ್ವಾಗತ್ವಾ ಸುಲ್ತಾನರ ಕಿವಿಗೆ ಬಿದ್ದಿತು. ಹಾರವನ್ನು ತರಿಸಿಕೊಂಡು ನೋಡಿ ಆ ಬ್ರಾಹ್ಮಣನಿಗೆ ಇನಾಂ ಕೊಡುವಂತೆ ಅಪ್ಪಣೆಮಾಡಿದರು. ಬ್ರಾಹ್ಮಣನು ಇನಾಮನ್ನು ನಿರಾಕರಿಸುತ್ತಾನೆಂದು ಅಧಿಕಾರಿಗಳು ಸುಲ್ತಾನರಿಗೆ ತಿಳಿಸಿದರು. ಸುಲ್ತಾನರು ಆ ಬ್ರಾಹ್ಮಣನನ್ನು ಕರೆಸಿಕೊಂಡು ಯಾವ ದೇಶದವನು ಇಲ್ಲಿಗೇಕೆ ಬಂದಿದ್ದೀ ?" ಎಂದು ವಿಚಾರಿಸಿದನು.

"ನಾನು ರಾಯಗಡದವನು" ಎಂದು ಸ್ಪಷ್ಟವಾಗಿ ಹೇಳಿದನು. ಸುಲ್ತಾನರಿಗೆ ಆಶ್ಚರ್ಯವಾಯಿತು. ಅಲ್ಲಿದ್ದವರನ್ನೆಲ್ಲಾ ದೂರ ಕಳಿಸಿ ಏಕಾಂತದಲ್ಲಿ ಗಂಗಾಧರರಾಯನನ್ನು ಕೂಡಿಸಿಕೊಂಡು ಶಿವಾಜೀ ಮಹಾರಾಜರ ವಿಷಯವಾಗಿ ಅನೇಕ ಪ್ರಶ್ನೆಗಳನ್ನು ಹಾಕಿದರು.

ಗಂಗಾಧರನು ಸಮಂಜಸವಾದ ಉತ್ತರಗಳನ್ನು ಕೊಟ್ಟನು. ಸುಲ್ತಾನನ ಮನಸ್ಸಿಗೆ ಇವನು ರಾಯಗಢದ ಅರಮನೆಯಲ್ಲಿರುವನೆಂಬುದು ನಿಜ. ಸತ್ಯವನ್ನು ಹೇಳುತ್ತಾನೆ ಎಂದುಕೊಂಡು —"ಇಲ್ಲಿಗೇಕೆ ಬಂದೆ ?"

"ಜಹಾಪನಾ, ತಮ್ಮ ಭೇಟಿಗಾಗಿ ಬಂದೆ. ಒಂದು ತಿಂಗಳಿಂದ ಅಧಿಕಾರಿಗಳ ಮನೆಗಳಿಗೆ ಅಲೆದು ಅಲೆದು ಬೇಸತ್ತು ಹೋಗಿದ್ದೇನೆ—ಇಂದು ತಮ್ಮ ಭೇಟಿಯಾಯಿತು." ಸುಲ್ತಾನನಿಗೆ ಮತ್ತೂ ಆಶ್ಚರ್ಯವಾಯಿತು. "ನೀನು ಶಿವಾಜಿ ಮಹಾರಾಜರ ಆಸ್ಥಾನಕ್ಕೆ ಸೇರಿದವನು ನಮ್ಮ ಭೇಟಿಗೆ ಬಂದಿದ್ದೀಯೆ, ಇದು ಆಶ್ಚರ್ಯವಾಗಿದೆ."

ಗಂಗಾಧರರಾಯನು ತನ್ನನ್ನು ಯುವರಾಜ ಸಾಂಬಾಜಿಯವರು ಮುದ್ದಾಂಗಿ ಸುಲ್ತಾನರ ಬಳಿಗೆ ಕಳಿಸಿದ್ದಾರೆಂದು ತಿಳಿಸಿದನು. ಸುಲ್ತಾನನಿಗೆ ಕುತೂಹಲವು ಹೆಚ್ಚಿತು, ನಮ್ಮ ಯುವರಾಜಾ ಸಾಂಬಾಜಿಯವರ ಮೇಲೆ ಶಿವಾಜಿ ಮಹಾರಾಜರು ಆಗ್ರಹಗೊಂಡು, ಪನ್ಹಾಲಾಕ್ಕೆ ಕಳಿಸಿಬಿಟ್ಟಿದ್ದಾರೆ, ಯುವರಾಜರು ತಮ್ಮ ಆಶ್ರಯದಲ್ಲಿರಬೇಕೆಂದು ನಿರ್ಧರಮಾಡಿಕೊಂಡಿದ್ದಾರೆ,

ಇಮ ಸಾಂಬಾಜಿಯವರಿದ್ದ ದರ್ಬಾರು. ಖಾವಿಂದರು ಪುರಸ್ಕರಿಸುವುದಾದರೆ ಯುವರಾಜಾ ಸಾಂಬಾಜಿಯವರು ಇಲ್ಲಿಗೆ ಬರುತ್ತಾರೆ ಎಂದು ತಿಳಿಸಿದನು.

ಬಹಳ ಸಂತೋಷದಿಂದ ಸುಲ್ತಾನನು ತಮ್ಮ ಆಸ್ಥಾನದಲ್ಲಿ ಯುವರಾಜಾ ಸಾಂಬಾಜಿಯವರಿಗೆ ಪ್ರಥಮಸ್ಥಾನವನ್ನು ಕೊಡಿಸುವುದಾಗಿ ತಿಳಿಸಿದನು. ಗಂಗಾಧರನು ಸುಲ್ತಾನರ ಅಪ್ಪಣೆ ಪಡೆದು ಬಿಜಾಪುರವನ್ನು ಬಿಟ್ಟು ಹೋಗುವ ಮೊದಲು ನಾರಾಯಣಪಂತರನ್ನು ನೋಡಿ ಅವರಿಗೆ ವಂದನೆಗಳನ್ನರ್ಪಿಸಿ ಹೋಗಬೇಕೆಂದು ಅವರ ಮನೆಗೆ ಹೋಗಿ ಭೆಟ್ಟಿಯಾದನು.

ಅನಿರೀಕ್ಷಿತವಾಗಿ ತನಗೆ ಸುಲ್ತಾನರ ಭೇಟಿಯಾಯಿತೆಂದೂ ತಾನು ಬಂದ ಕಾರ್ಯವು ಕೈಗೂಡಿತೆಂದೂ ತಿಳಿಸಿದನು.

ಪಂತರು ಸಂತೋಷವನ್ನು ವ್ಯಕ್ತಪಡಿಸುತ್ತಾ "ನೀನು ಬಂದ ಕಾರ್ಯವೇನು? ನನಗೂ ಕುತೂಹಲವುಂಟಾಗಿದೆ" ಎಂದರು.

ಗಂಗಾಧರನು ಸಂತೋಷದಿಂದ ತಾನು ಬಂದ ಸಮಾಚಾರವನ್ನು ತಿಳಿಸಿದನು, ಶಿವಾಜಿ ಮಹಾರಾಜರಿಗೆ ಯುವರಾಜರ ಮೇಲೆ ಆಗ್ರಹ ಬಂದಿದೆ. ಅವರನ್ನು ಪನ್ಹಾಲಾದಲ್ಲಿ ಬಂಧನದಲ್ಲಿಡಿಸಿದ್ದಾರೆ. ಯುವರಾಜರು ಸ್ವತಂತ್ರವನ್ನಪೇಕ್ಷಿಸಿ ಬಿಜಾಪುರದ ಸುಲ್ತಾನರ ಆಶ್ರಯವನ್ನು ಪ್ರಾರ್ಥನೆಮಾಡಲು ನನ್ನನ್ನು ಕಳುಹಿಸಿದರು, ಸುಲ್ತಾನರು ಸಂತೋಷದಿಂದ ಒಪ್ಪಿಕೊಂಡರು. ಆಸ್ಥಾನದಲ್ಲಿ ಪ್ರಥಮ ಸಾಮಂತ ಸ್ಥಾನವನ್ನು ಕೊಡಿಸುವುದಾಗಿ ಹೇಳಿದರು, ಈ ಮಾತುಗಳನ್ನು ಕೇಳಿ ವೃದ್ಧಪಂತನ ಕಣ್ಣುಗಳು ಕೆಂಡದಂತೆ ಕೆಂಪಾದವು. ಮೀಸೆಯು ಕುಣಿಯತೊಡಗಿತು, ವೃದ್ಧನು ಆಸನದಿಂದೆದ್ದು ದೇಶದ್ರೋಹಿ ! ನಿನ್ನ ನಾಲಿಗೆಯನ್ನು ಸೀಳಬೇಕು. ಹಿಂದೂಬಾದಶಹನ ಮಗ ಯುವರಾಜ ಸಾಂಬಾಜಿಯು ಬಿಜಾಪುರದ ಸುಲ್ತಾನನ ಆಶ್ರಯವನ್ನು ಕೋರುತ್ತಾನೆ. ಮಹಾರಾಷ್ಟ್ರ ರಾಜ್ಯಕ್ಕೆ ಎಂಥಾ ಅಪಮಾನವಿದು. ಆ ಸಾಂಬಾಜಿ ಇಷ್ಟು ನೀಚನೆಂದುಕೊಂಡಿರಲಿಲ್ಲ. ನಿನ್ನ ತಲೆಯನ್ನು ಕತ್ತರಿಸಿ ಬಿಸುಡುತ್ತಿದ್ದೆ. ನೀನು ಬ್ರಾಹ್ಮಣ. ನಿನ್ನಂಥಾ ಘಾತುಕರು ಮಹಾರಾಷ್ಟ್ರದಲ್ಲಿ ಮತ್ತೆ ಬೇರೆ ಯಾರೂ ಇರಲಾರರು, ಹೋಗು ಎಂದು ಗದ್ದರಿಸಿ ಕಳಿಸಿಬಿಟ್ಟನು.

ಗಂಗಾಧರರಾಯನು ಪನ್ಹಾಲಾಗೆ ವೇಗವಾಗಿ ಹಿಂತಿರುಗಿ ಬಂದನು. ಸಾಂಬಾಜಿಯೊಡನೆ ಸುಲ್ತಾನರು ನಮ್ಮ ಪ್ರಾರ್ಥನೆಯನ್ನು ಅತ್ಯಂತ ಸಂತೋಷ

ದಿಂದ ಅಂಗೀಕಾರ ಮಾಡಿದರೆಂದು ತಿಳಿಸಿದನು. ಬಿಜಾಪುರದ ನಗರ ಸೌಂದರ್ಯ ವನ್ನು ವರ್ಣಿಸಿದನು. ಷಾಜಿಯವರು ವಾಸವಾಗಿದ್ದ ಅರಮನೆಯನ್ನು ನೋಡಿ ಬಂದುದಾಗಿ ತಿಳಿಸಿದನು. ಬಿಜಾಪುರದ ಐಶ್ವರ್ಯವನ್ನು ಬಣ್ಣಿಸುತ್ತಾ ಅದೊಂದು ಗಂಧರ್ವಲೋಕ, ಅಪ್ಸರೆಯರ, ನಾಟ್ಯಭೂಮಿ, ರಸಿಕರ ಸ್ವರ್ಗ ಎಂದು ವರ್ಣನೆಮಾಡಿದನು. ಕೊನೆಯಲ್ಲಿ ವೃದ್ಧ ನಾರಾಯಣಪಂತನ ವಿಚಾರವನ್ನೆತ್ತಿದನು. ಆ ವೃದ್ಧ ಸರದಾರನನ್ನು ಮೊದಲು ಭೇಟಿಮಾಡಿದ್ದನ್ನು ಅವನಾಡಿದ ಮಾತುಗಳನ್ನೂ ಹೇಳಿದನು. ಆ ರಾಜಧಾನಿಯನ್ನು ತಾನು ಬಿಟ್ಟುಬರುವಾಗ ಪುನಃ ಪಂತನ ಭೇಟಿ ಮಾಡಿದುದನ್ನೂ ಅವನ ಆಗ್ರಹ, ಪ್ರಚಂಡ ಕೋಪ ಅವನಾಡಿದ ಶಲ್ಯದಂತಹ ಮಾತುಗಳು ಇವೆಲ್ಲವನ್ನೂ ವಿವರ ವಾಗಿ ತಿಳಿಸಿದಳು. ಸುಲ್ತಾನನ ಆದರ ವಚನಗಳನ್ನು ಕೇಳಿ ಸಂತೋಷದಿಂದ ಪ್ರಫುಲ್ಲಿತವಾಗಿದ್ದ ಸಾಂಬಾಜಿಯ ಮುಖವು ವೃದ್ಧ ಪಂತನ ಆವೇಶಪೂರ್ಣ ವಾದ ಮಾತುಗಳನ್ನು ಕೇಳಿ ವಿವರ್ಣವಾಯ್ತು, ಸಪ್ಪಗಾಯಿತು ತಾನು ಯಾವ ಅಪರಾಧ ಮಾಡಿ ಈ ಶಿಕ್ಷೆಯನ್ನು ಅನುಭವಿಸುತ್ತಿದ್ದಾನೋ ಅದಕ್ಕಿಂತಲೂ ಬಿಜಾಪುರಕ್ಕೆ ಹೋಗುವುದು ಮಹಾಪರಾಧವೆಂದು ಅವನ ಮನಸ್ಸು ಮಿಡಿಯ ಲಾರಂಭವಾಯಿತು. ಸಾಂಬಾಜಿಯು ತಲೆ ತಗ್ಗಿಸಿಕೊಂಡು ನಿರ್ವಿಣ್ಣನಾಗಿ ಕುಳಿತುಬಿಟ್ಟನು.

ಸಾಂಬಾಜಿಯ ಮನಸ್ಸು ಈ ಪ್ರಕರಣದಿಂದ ನೊಂದಿದ್ದರೂ ಸ್ಥಿರವಾಗ ಲಿಲ್ಲ. ಹೃದಯದಲ್ಲಿ ಚಾಂಚಲ್ಯವು ತುಂಬಿದ್ದಿತು. ಅವನ ಯೌವನದ ಪ್ರಭಾವವು ಅವನನ್ನು ಹಾಗೆ ಮಾಡಿದ್ದಿತು. ದೊಡ್ಡ ದೊಡ್ಡ ಮೊಗಲ್ ಸರದಾರರಂತೆ ವೇಷಭೂಷಣಗಳಿಂದ ಅಲಂಕೃತನಾಗಬೇಕು, ಕಾಮಿನಿಯರು ಕಲಾವತಿಯರು, ಸುಂದರಿಯರ ಮಧ್ಯದಲ್ಲಿರಬೇಕು ಎಂದು ಪದೇ ಪದೇ ಅವನ ಮನಸ್ಸು ತವಕಪಡುತ್ತಿದ್ದಿತು. ದಿನದಿನಕ್ಕೆ ಈ ಪನ್ಹಾಳಾದಲ್ಲಿ ಬಂಧನದಲ್ಲಿ ಇರುವುದು ಅಸಹ್ಯವಾಗಿ ಕಂಡಿತು. ಹಿಂದೊಮ್ಮೆ ಔರಂಗಾಬಾದಿನಲ್ಲಿ ತಾನಿದ್ದ ದಿನಗಳ ನೆನಪಾಯಿತು. ಮೊಗಲರೊಡನೆ ಸಂಧಿಮಾಡಿಕೊಂಡು ಆಗ ಶಿವಾಜಿ ಮಹಾರಾಜನೇ ಸಾಂಬಾಜಿಯನ್ನು ಅಲ್ಲಿಗೆ ಕಳಿಸಿಕೊಟ್ಟಿದ್ದನು. ಆ ನೆನಪು ಸಾಂಬಾಜಿಯನ್ನು ಪೀಡಿಸುತ್ತಿದ್ದಿತು. ಸಾಂಬಾಜಿಯು ದುರ್ಗದ ಅಧಿಕಾರಿ ಯಾಗಿದ್ದ ರಘುನಾಥರಾಯನಿಗೆ ಮೋಸಮಾಡಿ ಕೋಟೆಯ ಮಹಾದ್ವಾರವನ್ನು

ದಾಟಿ ಮಿತಪರಿವಾರದೊಂದಿಗೆ ಇದ್ದಕ್ಕಿದ್ದಂತೆ ಪಲಾಯನ ಮಾಡಿದನು. ಸಾಂಬಾಜಿಯು ಪನ್ಹಾಲಾದಿಂದ ಹೊರಟು ಔರಂಗಾಬಾದಿಗೆ ಹೋಗಿ ಸೇರಿದನು. ಔರಂಗಾಬಾದಿನಲ್ಲಿ ದಿಲೀರ್‌ಖಾನನು ಸರ್ವಸೇನಾಧಿಪತಿಯಾಗಿಯೂ ಮೊಗಲ್ ಸಾರ್ವಭೌಮನ ಪ್ರತಿನಿಧಿಯಾಗಿಯೂ ಇದ್ದನು. ಸಾಂಬಾಜಿಯು ತಮ್ಮ ರಾಜಧಾನಿಗೆ ಬಂದಿರುವ ಸಮಾಚಾರವನ್ನು ಕೇಳಿ ದಿಲೀರ್‌ಖಾನನು ಗೌರವದಿಂದ ತನ್ನ ದರ್ಬಾರಿಗೆ ಬರಮಾಡಿಕೊಂಡನು. ಕೆಲವು ಕಾಲದ ಹಿಂದೆ ಸಾಂಬಾಜಿಯು ಅಲ್ಲಿದ್ದಾಗಲೂ ದಿಲೀರ್‌ಖಾನನೂ ಸಾಂಬಾಜಿಯೂ ಬಹಳ ಸ್ನೇಹಿತರಾಗಿದ್ದರು. ಸಾಂಬಾಜಿಯ ಗುಣಗಳು ದಿಲೀರ್‌ಖಾನನಿಗೆ ಬಹಳ ಮೆಚ್ಚುಗೆಯಾಗಿದ್ದವು. ಪರಾಕ್ರಮದಲ್ಲಿಯೂ ಇವನು ಶಿವಾಜಿಗೆ ಯಾವ ವಿಧದಲ್ಲಿಯೂ ಕಡಿಮೆ ಆದವನಲ್ಲವೆಂದು ದಿಲೀರ್‌ಖಾನನು ನಂಬಿದ್ದನು. ಸಾಂಬಾಜಿಗೆ ಅವನ ಗೌರವಕ್ಕೆ ತಕ್ಕಂಥಾ ಅರಮನೆಯನ್ನೂ ರಾಜೋಪಚಾರಗಳನ್ನೂ ಏರ್ಪಡಿಸಿ ಕೊಟ್ಟನು.

ದೆಹಲಿಯ ದರ್ಬಾರಿಗೆ ಬರೆದುಕಳುಹಿಸಿ ಸಾಂಬಾಜಿಗೆ ಅತ್ಯುನ್ನತ ಗೌರವ ಸ್ಥಾನವನ್ನು ಕೊಡಿಸುವುದಾಗಿ ಭರವಸೆ ಇತ್ತನು. ಸಾಂಬಾಜಿಗೆ ಆ ಮೊಗಲ್ ರಾಜಧಾನಿಯ ಸನ್ನಿವೇಶ, ಅಲ್ಲಿದ್ದ ಸೌಭಾಗ್ಯ ಭೋಗ ಜೀವನಗಳು ಆಹ್ಲಾದ ಕಾರಿಯಾಗಿದ್ದವು. ದಿಲೀರ್ ಖಾನನ ವಿಷಯದಲ್ಲಿ ಸಾಂಬಾಜಿಗೆ ಬಹಳ ಗೌರವವೂ ನಂಬಿಕೆಯೂ ಇದ್ದವು. ಅವನು ಕೊಟ್ಟ ಮಾತಿಗೆ ಸರ್ವಥಾ ತಪ್ಪುವವನಲ್ಲವೆಂದು ಸಾಂಬಾಜಿಯು ಯಥಾರ್ಥವಾಗಿ ನಂಬಿದ್ದನು, ಅದಕ್ಕೆ ತಕ್ಕಂತೆಯೇ ದಿಲೀರ್‌ಖಾನನು ಸಾಂಬಾಜಿಯನ್ನು ವಿಶೇಷ ಗೌರವದಿಂದ ಕಾಣುತ್ತಿದ್ದನು.

ಸಾಂಬಾಜಿಯನ್ನು ಅಷ್ಟೊಂದು ಆದರ ಗೌರವಗಳಿಂದ ತಮ್ಮ ರಾಜಧಾನಿ ಯಲ್ಲಿ ಇಟ್ಟುಕೊಂಡಿರಲು ದಿಲೀರ್‌ಖಾನನಿಗೆ ವಿಶೇಷ ಅಭಿನಿವೇಶವೂ ಇತ್ತು. ಶಿವಾಜಿ ಮಹಾರಾಜನು ಮೊಗಲ್ ಸಾಮ್ರಾಟನ ಕಣ್ಣು ಕುಕ್ಕುತ್ತಿದ್ದಾನೆ. ಮಹಾರಾಷ್ಟ್ರ ರಾಜ್ಯವು ಸಂಪೂರ್ಣ ಸ್ವತಂತ್ರವಾಗಿದೆ. ಈ ಸಾಂಬಾಜಿಯನ್ನು ಗೌರವಿಸಿ ಶಿವಾಜಿಗೆ ಎದುರುಪಕ್ಷವಾಗಿ ನಿಲ್ಲಿಸಿದರೆ ಮಹಾರಾಷ್ಟ್ರವನ್ನು ಇಬ್ಭಾಗ ವಾಗಿ ಒಡೆದು ಹಾಕಿದಂತಾಗುತ್ತದೆ. ತನ್ನ ಮಗ ಯುವರಾಜನೇ ಎದುರು

ಕಕ್ಷಿಯಾಗಿ ನಿಂತರೆ ಶಿವಾಜಿಯ ಪೌರುಷವು ಕುಂದಿ ಹೋಗುತ್ತದೆ. ನಾವು ಸರಿಯಾದ ಪಕ್ಷವನ್ನೇ ಹಿಡಿದಂತಾಗುತ್ತದೆ ಎಂಬ ಅಭಿನಿವೇಶವಿತ್ತು.

## ೧೩

ಸಾಂಬಾಜಿಯು ಔರಂಗಾಬಾದಿಗೆ ಬಂದ ಮೇಲೆ ಸುಖಭೋಗಗಳಿಂದ ಸ್ವೇಚ್ಛೆಯಾಗಿ ತನ್ನ ಮನವನ್ನು ದಣಿಸಿಕೊಳ್ಳಲು ಆರಂಭ ಮಾಡಿದನು. ಆವನ ಬಂಧನಗಳೆಲ್ಲವೂ ಕಡಿದುಹೋದಂತಾಯ್ತು. ಮಹಾರಾಷ್ಟ್ರದಲ್ಲಿ ಅತ್ಯಂತ ಪ್ರತಾಪಶಾಲಿಯಾದ ತಂದೆಯ ಸಮೀಪದಲ್ಲಿ ಯಾವ ಯಾವ ನಿರ್ಬಂಧ ಗಳಿದ್ದವೋ ಅವೆಲ್ಲವೂ ಕಳಚಿಬಿದ್ದಂತಾಯಿತು. ಶಿವಾಜಿಯ ದರ್ಬಾರಿನಲ್ಲಿ ಇದ್ದ ರೀತಿಯೇ ಬೇರೆ, ಮೊಗಲ್ ರಾಜಧಾನಿಯಲ್ಲಿ ನಡೆಯುತ್ತಿದ್ದ ವೈಭವಗಳೇ ಬೇರೆ. ಎಂದಾದರೊಂದು ದಿನ ತಾನು ಮಹಾರಾಷ್ಟ್ರ ಸಿಂಹಾಸನವನ್ನೇರಿದರೆ ಇಂಥದೊಂದು ರಾಜಧಾನಿಯನ್ನು ನಿರ್ಮಾಣ ಮಾಡುತ್ತೇನೆಂದು ಸಾಂಬಾಜಿಯು ಹಗಲುಕನಸುಗಳನ್ನು ಕಾಣುತ್ತಿದ್ದನು. ಗಾಯಕಿಯರು ನರ್ತಕಿಯರು ವಿವಿಧ ರೀತಿಗಳಿಂದ ಸಾಂಬಾಜಿಯನ್ನು ಓಲೈಸುತ್ತಿದ್ದರು. ದಿಲೀರ್‌ಖಾನನು ಇದಕ್ಕೆಲ್ಲಾ ಪರಿಪೂರ್ಣವಾಗುವಷ್ಟು ಧಾರಾಳವಾಗಿ ಹಣವನ್ನು ಒದಗಿಸಿಕೊಡುತ್ತಿದ್ದನು.

ದಿಲೀರ್‌ಖಾನ್ ಮತ್ತು ಸಾಂಬಾಜಿ ಅವರಿಬ್ಬರ ಸ್ನೇಹವು ಅಲ್ಪಕಾಲ ದಲ್ಲಿಯೇ ಪ್ರಗಾಢವಾಗಿ ಬೆಳೆಯಿತು, ದಿಲೀರ್‌ಖಾನನಿಗೆ ಅಭಿಲಾಷೆ ಅಭಿನಿವೇಶ ಗಳಿದ್ದರೂ ಸಾಂಬಾಜಿಯ ವಿಷಯದಲ್ಲಿ ಕೃತ್ರಿಮ ಭಾವನೆಯೇ ಇರಲಿಲ್ಲ. ಸಾಂಬಾಜಿಯು ಶೂರೋದಾತ್ತ ಪುರುಷನೆಂದು ದಿಲೀರ್‌ಖಾನನು ಮನಸಾರ ಗೌರವಿಸುತ್ತಿದ್ದನು. ಬಾದಶಹರಿಗೆ ಸಾಂಬಾಜಿಯ ವಿಚಾರವಾಗಿ ಎರಡು ಮೂರು ಪತ್ರಗಳನ್ನು ಬರೆಸಿ ಕಳುಹಿಸಿದ್ದನು. ಮುಖ್ಯವಾಗಿ ಸಾಂಬಾಜಿಯನ್ನು ಸ್ನೇಹಮಾಡಿಕೊಂಡು ಸ್ವಾಧೀನದಲ್ಲಿಟ್ಟುಕೊಂಡಿರುವುದು ಮಹಾರಾಷ್ಟ್ರವನ್ನು ಜಯಿಸಿದ್ದಕ್ಕಿಂತಲೂ ಮಹತ್ವ ಉಳ್ಳದ್ದೆಂದು ಬಾದಶಹರವರಿಗೆ ಬರೆಸಿದ್ದನು. ಸಾಂಬಾಜಿಯು ಸದ್ಗುಣಸಂಪನ್ನನೆಂದೂ ಶಿವಾಜಿಯಂತೆ ಕೃತ್ರಿಮ ಸ್ವಭಾವದವ ನಲ್ಲವೆಂದೂ ಬಾದಶಹರಿಗೆ ದಿಲೀರ್‌ಖಾನನು ಬರೆಸಿದ್ದನು. ಈ ಪತ್ರಗಳಿಗೆಲ್ಲಾ ಪ್ರತ್ಯುತ್ತರವಾಗಿ ಬಾದಶಹರಿಂದ ಒಂದು ಪತ್ರವು ಬಂದಿತು. ಅದರಲ್ಲಿ

ಸಾಂಬಾಜಿಗೆ ಹತ್ತು ಸಹಸ್ರ ಸೈನ್ಯಗಳ ಸೇನಾಧಿಪತ್ಯವು ಕೊಡಲ್ಪಟ್ಟಿದೆಯೆಂದು ಅದಕ್ಕೆ ಬೇಕಾಗುವ ಹಣವನ್ನೆಲ್ಲಾ ಬಾದಶಹರ ಭಂಡಾರದಿಂದ ಕೊಡಲ್ಪಡ ತಕ್ಕದೆಂದೂ ಆಜ್ಞೆಯು ಬಂದಿತ್ತು. ಬಾದಶಹರ ದರ್ಬಾರಿನಲ್ಲಿ ಉನ್ನತಾಧಿಕಾರಿಗಳಿಗೆ ಕೊಡಲ್ಪಡುವ ಬಿರುದುಬಾವಲಿಗಳನ್ನು ಎರಡು ಆನೆಗಳನ್ನು ವಜ್ರ ಖಚಿತವಾದ ಹಿಡಿಯುಳ್ಳ ಕತ್ತಿಯನ್ನು ಬಾದಶಹನು ಸಾಂಬಾಜಿಗೋಸ್ಕರ ಕಳುಹಿಸಿಕೊಟ್ಟಿದ್ದನು.

ಆ ಕಾಲದಲ್ಲಿ ದೆಹಲಿಯ ದರ್ಬಾರಿನಲ್ಲಿ ಎಂಥಾ ಪರಾಕ್ರಮಶಾಲಿಗಳಾದ ಹಿಂದೂ ಸರದಾರರಿಗಾಗಲೀ ರಾಜರಿಗಾಗಲೀ ಇದಕ್ಕಿಂತಲೂ ಅತಿಶಯವಾದ ಗೌರವವು ಮತ್ತಾವುದೂ ಇರಲಿಲ್ಲ. ಬಾದಶಹನು ತನ್ನ ಅಭಿಪ್ರಾಯಕ್ಕೆ ಮನ್ನಣೆ ಕೊಟ್ಟು ಸಾಂಬಾಜಿಯನ್ನು ಇಷ್ಟೊಂದು ಮೇಲಂತಸ್ತಿನಲ್ಲಿ ಗೌರವ ಪಡಿಸಿದ್ದಕ್ಕಾಗಿ ದಿಲೀರ್‌ಖಾನನಿಗೆ ಅತ್ಯಾನಂದವಾಯಿತು.

ದಿಲೀರ್‌ಖಾನನು ಔರಂಗಾಬಾದಿನ ಅರಮನೆಯಲ್ಲಿ ದೊಡ್ಡದಾದ ದರಬಾರನ್ನು ನಡೆಯಿಸಿದನು. ಉನ್ನತಾಧಿಕಾರಿಗಳು ಸೇನಾಧಿಪತಿಗಳು ಆ ಪ್ರಾಂತದ ಆಶ್ರಿತ ರಾಜರು ಮತ್ತು ಪಾಳೆಯಗಾರರು ಎಲ್ಲರೂ ಆ ದರಬಾರಿನಲ್ಲಿ ಸೇರಿದ್ದರು. ದಿಲೀರ್‌ಖಾನನು ಸಾಂಬಾಜಿಯನ್ನು ಅತ್ಯಂತ ಗೌರವದಿಂದ ಆ ದರಬಾರಿಗೆ ಕರೆತಂದು ಆಸನದ ಮೇಲೆ ಕುಳ್ಳಿರಿಸಿ ಬಾದಶಹರು ಅನುಗ್ರಹಿಸಿದ ಪೋಷಾಕುಗಳನ್ನೂ ಬಿರುದುಬಾವಲಿಗಳನ್ನೂ ಸಾಂಬಾಜಿಗೆ ತಾನೇ ತೊಡಿಸಿ ಬಾದಶಹರಿಂದ ಕಳುಹಿಸಲ್ಪಟ್ಟಿದ್ದ ಕತ್ತಿಯನ್ನು ಸಾಂಬಾಜಿಗೆ ಕೊಟ್ಟು ದೆಹಲಿಯ ದರ್ಬಾರಿನಿಂದ ಬಂದಿದ್ದ ಅಧಿಕಾರಪತ್ರವನ್ನು ಸಾಂಬಾಜಿಗೆ ಒಪ್ಪಿಸಿದನು. ದರಬಾರಿನಲ್ಲಿದ್ದ ಅಧಿಕಾರಿಗಳೆಲ್ಲರೂ ಸಾಂಬಾಜಿಗೆ ಮುಜರೆ ಮಾಡಿ ಗೌರವವನ್ನು ತೋರಿದರು. ದಿಲೀರ್‌ಖಾನನು ಗದ್ದುಗೆಯ ಮೇಲಿದ್ದ ತನ್ನ ಆಸನದಲ್ಲಿಯೇ ಸಾಂಬಾಜಿಯನ್ನು ಕೂಡಿಸಿಕೊಂಡು ಬಾದಶಹರ ಔದಾರ್ಯವನ್ನು ಪ್ರಶಂಸೆ ಮಾಡಿ, ದೆಹಲಿಯ ದರ್ಬಾರಿನಲ್ಲಿ ಮಹಾರಾಜ ಜಯಸಿಂಹರವರಿಗೆ ಕೊಡಲ್ಪಟ್ಟಿದ್ದ ಗೌರವವೂ ಮರ್ಯಾದೆಗಳು ಸಾಂಬಾಜಿಗೆ ಕಾದಿಡಲ್ಪಟ್ಟಿವೆ ಎಂದು ಹೇಳಿ ಸಾಂಬಾಜಿಯನ್ನು ಪ್ರಶಂಸೆ ಮಾಡಿದರು. ಸಾಂಬಾಜಿಯು ಅವರೆಲ್ಲರಿಗೂ ಧನ್ಯವಾದಗಳನ್ನರ್ಪಿಸಿ ದಿಲೀರ್‌ಖಾನನಿಗೆ ಗೌರವಪೂರ್ವಕವಾದ ವಂದನೆಗಳನ್ನು ಸಮರ್ಪಿಸಿ ಆ ದರ್ಬಾರಿನಿಂದ ತನ್ನರಮನೆಗೆ ಹಿಂತಿರುಗಿದನು. ಅಂದು

ಸಾಂಬಾಜಿಯ ಅರಮನೆಯಲ್ಲಿ ಆಮೋದ ಪ್ರಮೋದಗಳು ಯಥೇಚ್ಛವಾಗಿ ನಡೆಯುತ್ತಿದ್ದವು. ಔರಂಗಾಬಾದಿನಲ್ಲಿದ್ದ ನಾನಾ ಅಂತಸ್ತುಗಳ ಅಧಿಕಾರಿಗಳ್ ಗುಂಪುಗುಂಪಾಗಿ ಬಂದು ಆ ಆಮೋದ ಪ್ರಮೋದಗಳಲ್ಲಿ ಭಾಗಿಗಳಾಗಿ ಸಾಂಬಾಜಿಗೆ ಧನ್ಯವಾದಗಳನ್ನರ್ಪಿಸಿ ಹೋಗುತ್ತಿದ್ದರು. ಸಾಂಬಾಜಿಯು ತನ್ನ ಜನ್ಮದಲ್ಲಿಯೇ ಅದೊಂದು ಸುದಿನವೆಂದೂ ಸುಯೋಗ ಕಾಲವು ಪ್ರಾಪ್ತವಾಗಿದೆ ಯೆಂದೂ ಹರ್ಷಿತನಾಗಿದ್ದನು. ಈ ಸಮಾರಂಭಗಳು ಎರಡು ವಾರಗಳ ತನಕ ಅವಿಚ್ಛನ್ನವಾಗಿ ನಡೆಯುತ್ತಿದ್ದವು.

ಒಂದು ವಾರ ಕಳೆದು ಎರಡನೆಯ ವಾರವು ಆರಂಭವಾಗಿತ್ತು. ಆ ದಿನ ಪ್ರಾತಃಕಾಲ ಕಾಷಾಯವಸನಧಾರಿಯಾದ ಜಟಾಜೂಟಗಳನ್ನು ಧರಿಸಿದ್ದ ತೇಜಸ್ವಿಯಾದ ಯೋಗೀಶ್ವರನೊಬ್ಬನು ಸಾಂಬಾಜಿಯ ಅರಮನೆಗೆ ಬಂದು ದರ್ಶನವಿತ್ತನು. ಸಾಂಬಾಜಿಯು ಆ ಮಹಾಪುರುಷನನ್ನು ಆದರದಿಂದ ಕಂಡು ತನ್ನರಮನೆಯಲ್ಲಿ ಆ ಯೋಗೀಶ್ವರನಿಗೆ ಪೂಜಾದಿಗಳನ್ನರ್ಪಿಸಿ ತನಗೆ ಬಾದಶಹ ನಿಂದ ದೊರೆತಿರುವ ಮಹೋನ್ನತ ಅಧಿಕಾರ ಮನ್ನಣೆಗಳನ್ನು ತಿಳಿಸಿ ತನ್ನನ್ನು ಹರಸಬೇಕೆಂದು ಪ್ರಾರ್ಥನೆ ಮಾಡಿದನು.

ಯೋಗೀಶ್ವರನು ತನ್ನೆರಡು ಕೈಗಳನ್ನು ಸಾಂಬಾಜಿಯ ತಲೆಯಮೇಲಿಟ್ಟು ದೀರ್ಘಾಯುಷ್ಯಮಂತನಾಗಿರು ಎಂದು ಹರಸಿದನು.

ಸಾಂಬಾಜಿಯು ಯೋಗೀಶ್ವರರ ಆಗಮನದಿಂದ ನಾನು ಧನ್ಯನಾಗಿದ್ದೇನೆ, ನನ್ನಿಂದ ಯಾವ ಸೇವೆಯಾಗಬೇಕಾಗಿದ್ದರೂ ಅದನ್ನು ಸಮರ್ಪಿಸಲು ಸಿದ್ಧ ನಾಗಿದ್ದೇನೆ ಎಂದು ಕೇಳಿಕೊಂಡನು. ಯೋಗೀಶ್ವರನು ಶಿವಕುಮಾರ ಕಾರ್ಯವಿಲ್ಲದೇ ನಾನು ಈ ಮ್ಲೇಂಛರ ರಾಜಧಾನಿಗೆ ಬಂದವನಲ್ಲ, ನಿನ್ನ ಮಹೋನ್ನತ ಗೌರವಗಳನ್ನು ಇಲ್ಲಿ ನಾನು ನೋಡಿದೆ. ಇದೆಲ್ಲಾ ನಿನ್ನಂಥವನಿಗೆ ಅರ್ಹವಾದವುಗಳಲ್ಲ, ನೀನು ಈ ಮ್ಲೇಂಛ ಭೂಪತಿಯ ಸೇವಕನಾಗಿರಲು ಹುಟ್ಟಿದವನಲ್ಲ, ಭವಾನಿಯ ಅನುಗ್ರಹದಿಂದ ಹಿಂದೂ ಸಿಂಹಾಸನಕ್ಕೆ ಭೂಷಣ ಪ್ರಾಯನಾಗಿ ಹುಟ್ಟಿದವನು ನೀನು, ಸಾಂಬಾಜಿಯೆಂಬ ಹೆಸರನ್ನು ನೀನು ಮರೆತುಬಿಡಲಾದೀತೆ? ಅದು ಅಂಬಾನುಗ್ರಹ. ಇದನ್ನೆಲ್ಲಾ ಮರೆತು ನೀನು ಇಲ್ಲಿ ಸಂತೋಷಚಿತ್ತನಾಗಿರುವುದು ನನಗೆ ಆಶ್ಚರ್ಯವಾಗಿದೆ, ಖೇದಕರವಾಗಿದೆ, ಇದೇಕೆ ಹೀಗಾಯಿತು, ಇಡೀ ಭಾರತವರ್ಷದ ಹಿಂದುಗಳ ಆಶಾಕಿರಣವನ್ನು

ನೀನು ತೆಗೆದುಹಾಕುತ್ತಿರುವಿ. ಶಿವಾಜಿ ಮಹಾರಾಜರ ಶ್ರೀಮಂತ ಪುತ್ರನು ಈ ಮೊಗಲ ಅಧಿಕಾರಿಗಳ ಪಾದತಲದಲ್ಲಿ ಕುಳಿತಿರುವುದನ್ನು ನಾನು ನೋಡಲಾರೆ, ನೋಡಿ ಸಹಿಸಲಾರೆ, ನಿನ್ನನ್ನು ಇಲ್ಲಿಂದ ಕರೆದುಕೊಂಡು ಹೋಗುವುದಕ್ಕಾಗಿ ನಾನಿಲ್ಲಿಗೆ ಬಂದಿದ್ದೇನೆ, ಈಗಲೇ ನೀನು ನನ್ನ ಜೊತೆಯಲ್ಲಿ ಹೊರಡಬೇಕು" ಎಂದನು.

ಸಾಂಬಾಜಿಯು ದಿಗ್ಭ್ರಾಂತನಾಗಿ ಮಹಾಮಹಿಮನಾದ ಯೋಗೀಶ್ವರನೇ ನಾನೆಲ್ಲಿಗೆ ಹೊರಡಬೇಕು, ತಮಗೆ ನನ್ನ ಈಚಿನ ದುಃಖಿಕರವಾದ ವಿಚಾರಗಳೆಲ್ಲಾ ತಿಳಿಯದಾಗಿದೆ, ಎಂದನು.

ಯೋಗೀಶ್ವರನು ತಿರಸ್ಕಾರದ ನಗುವನ್ನು ನಕ್ಕು "ನೀನು ಶಿವಪ್ರಭುಗಳ ಸನ್ನಿಧಾನಕ್ಕೆ ನನ್ನೊಡನೆ ಹೊರಟು ಬರಬೇಕು."

"ಮಹಾರಾಜರು ನನ್ನನ್ನು ಕ್ಷಮಿಸುವರೇ ?"

"ಅವರು ನನ್ನನ್ನು ಕರೆತರುವಂತೆ ಅಜ್ಞೆ ಮಾಡಿದ್ದಾರೆಯೇ ?"

"ಸಾಂಬಾಜಿ. ಶಿವಪ್ರಭುಗಳು ನಿನ್ನನ್ನು ಕರೆತರುವಂತೆ ಆಜ್ಞೆಯನ್ನು ಕಳಿಸುವುದಾಗಿದ್ದರೆ ದೂತರನ್ನು ಕಳಿಸುತ್ತಿದ್ದರು, ಸೇನಾಧಿಪತಿಗಳನ್ನು ಕಳಿಸುತ್ತಿದ್ದರು, ನಾನೇಕೆ ಬರಬೇಕು. ನಾನು ಈಶ್ವರ ಪ್ರೇರಣೆಯಿಂದ ಇಲ್ಲಿಗೆ ಬಂದಿದ್ದೇನೆ, ನಿನ್ನ ಅಪರಾಧವು ಅಕ್ಷಮ್ಯವಾದದ್ದು, ಇಡೀ ಹಿಂದೂಸ್ಥಾನದ ಹಿಂದುಗಳ ವರ್ಚಸ್ಸಿಗೆ ನೀನು ಕಳಂಕವನ್ನು ತಂದಿದ್ದಿ. ನಾನು ನಿನ್ನನ್ನು ಜೊತೆಯಲ್ಲಿ ಕರೆದೊಯ್ಯುವುದರಿಂದ ಶಿವಪ್ರಭುಗಳು ಕ್ಷಮಿಸುತ್ತಾರೆ. ಅಂಥಾ ಕ್ಷಮೆಯನ್ನು ನಿನಗೆ ಕೊಡಿಸುವುದಕ್ಕೋಸ್ಕರ ನಾನಿಲ್ಲಿಗೆ ಬಂದಿದ್ದೇನೆ."

ಸಾಂಬಾಜಿಯು ಉತ್ತರ ಹೇಳಲು ಅಸಮರ್ಥನಾಗಿ ಸ್ವಲ್ಪ ಹೊತ್ತು ಯೋಚನೆಮಾಡಿದನು.

"ಯೋಗೀಶ್ವರರೇ ! ನನ್ನ ಮಾತನ್ನು ನೀವು ಆಲೈಸಿರಿ. ನನ್ನ ದುರ್ದೈವವಶಾತ್ ನನ್ನ ಮಾತೆಯು ಸ್ವರ್ಗಕ್ಕೈದಿದಳು. ಮಾತೂಶ್ರೀ ಸೋಯ್ರಾಬಾಯಿಯು ನನ್ನ ಮೇಲೆ ಒಂದಲ್ಲ ಒಂದು ವಿಧವಾಗಿ ಪಿತೂರಿಗಳನ್ನು ಮಾಡುತ್ತಲೇ ಇದ್ದಾಳೆ. ನನ್ನ ತಮ್ಮನಾದ ರಾಜಾರಾಮನಿಗೆ ಪಟ್ಟ ಕಟ್ಟಿಸಬೇಕೆಂದು ಮಾತೂಶ್ರೀಯವರು ಕಂಕಣಬದ್ಧರಾಗಿದ್ದಾರೆ, ಅವರ ಇಷ್ಟದಂತೆಯೆ ನಡೆಯಲಿ, ನಾನು ದೂರ ಸರಿದು ಬಂದುಬಿಟ್ಟಿದ್ದೇನೆ. ನನ್ನಂತೆ ಮಾತಾಪಿತೃ

ಗಳಿಂದ ತಿರಸ್ಕೃತರಾದವರು ಪ್ರಬಲ ವಿರೋಧಿಗಳಾಗಿ ಕುಲಕ್ಕೆ ಅಪಘಾತ ವನ್ನುಂಟುಮಾಡಿದ ನಿದರ್ಶನಗಳೆಷ್ಟೋ ಇವೆ. ನಾನು ಹಾಗೆ ಮಾಡದೇ ಅವರ ಮಾರ್ಗವನ್ನು ಅವರಿಗೇ ಬಿಟ್ಟು ಬಂದಿದ್ದೇನೆ, ಪುನಃ ಅಲ್ಲಿಗೇ ಬರಬೇಕೆಂದು ನೀವೇಕೆ ಪ್ರೇರೇಪಿಸುತ್ತೀರಿ, ಆ ಅಪಮಾನವನ್ನು ನಾನು ಸಹಿಸಲಾರೆ".

ಯೋಗೀಶ್ವರನು ಆಸನದಿಂದ ಎದ್ದು ನಿಂತು ಬಾಲಾ! ಮುಂದೆ ಬರುವು ದನ್ನು ನಾನು ನೋಡಬಲ್ಲೆ, ನೀನು ಕಾಣಲಾರೆ. ನಿನಗೆ ಇಲ್ಲಿ ಪ್ರಬಲವಾದ ಆಪತ್ತು ಸಂಭವಿಸಬಹುದು. ರಕ್ಷಣೆಯನ್ನು ಕೊಡುವುದಕ್ಕೋಸ್ಕರ ನಾನು ಬಂದಿದ್ದೇನೆ. ನಾನಾರೆಂದು ತಿಳಿದುಕೊಳ್ಳುವುದು ನಿನಗೆ ಒಳ್ಳೆಯದು, ಸಮರ್ಥ ರಾಮದಾಸ ಗುರುಗಳ ಶಿಷ್ಯನು ನಾನು. ಗುರುಪ್ರೇರಣೆಯಂತೆ ನಾನು ಬಂದಿ ದ್ದೇನೆ, ನನ್ನೊಡನೆ ಬರುವೆಯೋ ಇಲ್ಲವೊ! ಈಗ ಹೇಳು" ಎಂದನು.

"ಗುರುವರ್ಯರೇ, ನಾನಿಲ್ಲಿ ಮೊಗಲ್ ಸರ್ವಾಧಿಕಾರಿಗೆ ಮಾತು ಕೊಟ್ಟಿ ದ್ದೇನೆ. ಶಿವಾಜಿ ಮಹಾರಾಜರ ಪುತ್ರನು ಕೊಟ್ಟ ವಾಗ್ದಾನಕ್ಕೆ ತಪ್ಪಿದನೆಂದು ಲೋಕದಲ್ಲಿ ಅಪಖ್ಯಾತಿಯು ಬರಕೂಡದು. ತಮ್ಮ ಆಶೀರ್ವಾದವು ನನ್ನ ಮೇಲಿರಲಿ, ಅದು ಎಲ್ಲ ಆಪತ್ತುಗಳಿಂದಲೂ ಪಾರುಮಾಡಿಸುತ್ತದೆ" ಎಂದು ನಮಸ್ಕರಿಸಿದನು.

ಯೋಗೀಶ್ವರನು ಆಶೀರ್ವಾದ ಮಾಡಿ ಆ ಸ್ಥಳದಿಂದ ಹೊರಟು ಹೋದನು.

ಸಾಂಬಾಜಿಯ ಮನಸ್ಸಿನಲ್ಲಿ ಈ ಶಂಕೆಯು ಉತ್ಪನ್ನವಾಯಿತು. ಗುರು ವರ್ಯರಾದ ರಾಮದಾಸರ ಶಿಷ್ಯರು ಅಕಾರಣವಾಗಿ ಇಲ್ಲಿಗೆ ಬರುವರೇ. ನನ್ನ ಮೇಲಿನ ಪರಮಾನುಗ್ರಹದಿಂದಲೇ ಆ ಯೋಗೀಶ್ವರನು ಇಲ್ಲಿಗೆ ಬಂದಿದ್ದಾನೆ. ಆದರೆ ಮಹಾರಾಜರವರ ಆಸ್ಥಾನದಲ್ಲಿ ಅಷ್ಟು ಮಂದಿ ಸೇನಾಧಿಪತಿಗಳು, ಮಂತ್ರಿಗಳು ಅವರ ಎದುರಿನಲ್ಲಿ ನನಗಾದ ಅಪಮಾನವನ್ನು ಆ ಯೋಗೀಶ್ವರ ನೇನು ಬಲ್ಲ? ರಾಮದಾಸರ ಪ್ರೇರಣೆಯಾದರೆ ಮಹಾರಾಜರೇ ನನ್ನನ್ನು ಬರಬೇಕೆಂದು ಹೇಳಿಕಳಿಸುತ್ತಾರೆ. ಅವರ ಅಪ್ಪಣೆಯಾದರೆ ನಾನಲ್ಲಿಗೆ ಹೋಗಲು ಅಡ್ಡಿಯೇನು ಎಂದುಕೊಂಡನು. ಅಂದಿನಿಂದಲೂ ಅವನ ಮನಸ್ಸಿನಲ್ಲಿ ಯಾತಾಯಾತಕ್ಕೆ ಆರಂಭವಾಯಿತು. ಅವರೂ ದಿಲೀರ್‌ಖಾನನ ಸ್ನೇಹ ಪೂರ್ಣ

ವಾದ ಸೌಜನ್ಯ, ಕಾಮೋಪಭೋಗಗಳ ಸ್ವೇಚ್ಛಾಚಾರ ಇವುಗಳ ಆಕರ್ಷಣೆಯಲ್ಲಿ ಸಿಕ್ಕಿ ಸಾಂಬಾಜಿಯು ಯೋಗೀಶ್ವರರ ಎಚ್ಚರಿಕೆಯನ್ನು ಮರೆತೇ ಬಿಟ್ಟನು.

ಸಾಂಬಾಜಿಯು ಬಂಧನದಿಂದ ತಪ್ಪಿಸಿಕೊಂಡು ಹೊರಟುಹೋದ ಸಮಾಚಾರವು ಶಿವಾಜಿಗೆ ತಿಳಿಯಿತು, ಶಿವಾಜಿಯು ಉದ್ವಿಗ್ನನಾಗಲಿಲ್ಲ, ಯಾರೊಡನೆಯೂ ಸಾಂಬಾಜಿಯ ಮಾತನ್ನು ಎತ್ತಲೂ ಇಲ್ಲ. ಸಾಂಬಾಜಿಯು ಹೋಗಿ ದಿಲೀರ್‌ಖಾನನೊಡನೆ ಸೇರಿಕೊಂಡಿದ್ದಾನೆಂಬ ಸಮಾಚಾರವೂ ಬಂದಿತು, ಇರಲಿ, ಅಂತಹ ನೂರಾರು ಅನುಭವಗಳಾಗದಿದ್ದರೆ, ಸಾಂಬಾಜಿಯು ಈ ಲೋಕದಲ್ಲಿ ಮನುಷ್ಯನೆನಿಸಿಕೊಳ್ಳುವನೇ ? ಆ ಮೊಗಲರ ಅಂತರಂಗದಲ್ಲಿದ್ದರೆ ಅವರಿಂದ ಹಿಂದುಗಳಿಗೆ ಆಗುತ್ತಿರುವ ಅಪಮಾನ ಕಷ್ಟನಷ್ಟಗಳು ಅವನಿಗೇ ಪ್ರತ್ಯಕ್ಷವಾಗಿ ಗೋಚರವಾಗುವುದು. ಆಗ ಸಾಂಬಾಜಿಯು ಅಷ್ಟೇ ತೀವ್ರತೆಯಿಂದ ಪ್ರತೀಕಾರ ಮಾಡಲುಜ್ಜುಗಿಸುವನು ಎಂದು ಸಮಾಧಾನ ಮಾಡಿಕೊಂಡನು.

ಹಾಗೆಯೇ ಪನ್ಹಾಲದ ಸುಬೇದಾರನಾಗಿದ್ದ ರಘುನಾಥರಾಯನನ್ನು ದರಬಾರಿಗೆ ಬರಬೇಕೆಂದು ಆಜ್ಞೆಮಾಡಿದನು. ರಘುನಾಥರಾಯನು ಭಯದಿಂದ ನಡುಗುತ್ತಾ ಮಹಾರಾಜರ ಸಮ್ಮುಖಕ್ಕೆ ಬಂದು ನಮಸ್ಕರಿಸಿ "ಮಹಾಪ್ರಭುಗಳೇ ! ನನ್ನನ್ನು ಕಾಪಾಡಬೇಕು. ನನ್ನ ಅಪರಾಧವೇನೂ ಇಲ್ಲ. ಯುವರಾಜರನ್ನು ಕಣ್ಣಿನಲ್ಲಿ ಕಣ್ಣಿಟ್ಟು ನಾನು ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿದ್ದೆ. ಅದರಲ್ಲಿಯೂ ನಾನಾವ ದೋಷವನ್ನೂ ಕಾಣಲಿಲ್ಲ. ನಿಷ್ಠೆಯಿಂದ ಬಂಧನದಲ್ಲಿದ್ದರು ಯಾವ ಮಾಯೆಯೋ ಏನೋ ನಿಜವಾಗಿಯೂ ಅದನ್ನು ಊಹಿಸಲೂ ಅಶಕ್ತನಾಗಿದ್ದೇನೆ. ಯುವರಾಜರು ಮಾಯವಾಗಿಹೋಗಿದ್ದರು. ನಾನೆಂದೂ ಸ್ವಾಮಿಭಕ್ತಿಯಲ್ಲಿ ದ್ರೋಹವೆಣಿಸಿದವನಲ್ಲ" ಎಂದು ಹೇಳಿದನು.

"ಏನೇ ಆಗಲಿ, ಅಪರಾಧಕ್ಕೆ ತಕ್ಕ ಶಿಕ್ಷೆಯಾಗಲೇಬೇಕು. ಇಲ್ಲದಿದ್ದರೆ ರಾಜ್ಯಭಾರವು ಧರ್ಮದಿಂದ ನಡೆಯದು. ನಿರಪರಾಧಿಯೆಂದು ಬಗೆದು ನಿನಗೆ ಪ್ರಾಣದಾನವನ್ನು ನೀಡಿದ್ದೇನೆ. ಆದರೆ ನಮ್ಮ ರಾಜ್ಯದಲ್ಲಿ ಎಲ್ಲಿಯೂ ಅಧಿಕಾರದಲ್ಲಿ ನಿನ್ನನ್ನಿಡಲು ಸಾಧ್ಯವಿಲ್ಲ" ಎಂದು ಹೇಳಿ ಅವನನ್ನು ಮಹಾರಾಷ್ಟ್ರ ಸೀಮೆಯಿಂದ ಗಡೀಪಾರು ಮಾಡಿಸಿ ಸಂತೋಷರಾವ್ ಎಂಬ ಸೇನಾಧಿಪತಿಯನ್ನು ಪನ್ಹಾಲಾ ಕೋಟೆಯ ಅಧಿಕಾರಿಯಾಗಿ ನೇಮಿಸಿದನು.

ರಘುನಾಥರಾಯನು ಮಹಾರಾಜರ ಸನ್ನಿಧಾನದಿಂದ ಹೊರಟು ನೇರವಾಗಿ ಔರಂಗಾಬಾದಿಗೆ ಹೋಗಿ ಯುವರಾಜನ ಭೇಟಿ ಮಾಡಿದನು. ಮಹಾರಾಜರು ತನ್ನನ್ನು ದೇಶದಿಂದ ಗಡೀಪಾರು ಮಾಡಿರುತ್ತಾರೆಂದು ತಿಳಿಯಪಡಿಸಿದನು. ಯುವರಾಜನ ಅಪ್ಪಣೆಯಂತೆ ರಘುನಾಥರಾಯನು ಅಲ್ಲಿಯೇ ನಿಂತುಬಿಟ್ಟನು.

ಮಹಾರಾಣಿ ಸೋರ್ಯಾಬಾಯಿಯು ಬಹುಪ್ರಯಾಸದಿಂದ ಮಹಾರಾಜರವರಲ್ಲಿ ಸಾಂಬಾಜಿಯ ಮಾತನ್ನೆತ್ತಿದಳು. ಸರಳವಾಗಿ ನಮ್ಮ ಯುವರಾಜರು ಮೊಗಲ್ ಸೇನಾಧಿಪತಿಯೊಡನೆ ಸೇರಿಕೊಂಡಿದ್ದಾರೆಂದು ಸಮಾಚಾರ ಬಂದಿದೆ. ಯುವರಾಜನು ಇಷ್ಟು ದೂರ ಮಿತಿಮೀರಿ ಹೋಗುತ್ತಾನೆಂದು ಯಾರೂ ಭಾವಿಸಿರಲಿಲ್ಲ. ಇನ್ನು ಅವನಿಗಾಗಿ ಚಿಂತಿಸುವುದು ವ್ಯರ್ಥ ಎಂದು ಮಾತಿಗೆ ಪ್ರಾರಂಭಿಸಿದಳು.

"ನಿಮ್ಮಂತೆಯೇ ನಾನೂ ಯುವರಾಜನ ಸಮಾಚಾರ ಕೇಳಿದೆ, ಅವನು ಮೊಗಲ್ ಸೇನಾಧಿಪತಿಯೊಡನೆ ಸಧ್ಯಕ್ಕೆ ಸೇರಿಕೊಂಡಿರಬಹುದು. ಮುಂದೆ ಬಾದಶಹನೇ ಅವನನ್ನು ದೆಹಲಿಗೆ ಕರೆಸಿಕೊಂಡು ದೊಡ್ಡ ಅಧಿಕಾರವನ್ನು ಕೊಟ್ಟರೂ ಕೊಡಬಹುದು. ನಿಜವಾಗಿ ಅವನ ವಿಚಾರವಾಗಿ ಚಿಂತೆಯನ್ನು ಹಚ್ಚಿಕೊಳ್ಳದಿರುವುದೇ ಒಳ್ಳೆಯದು."

"ಯುವರಾಜನು ನಿಮ್ಮ ವಿದ್ವೇಷಿಯಾದ ಬಾದಶಹನ ಸೇವೆಗೆ ಹೋದರೆ ನಿಮ್ಮ ಗೌರವವೇನಾಗುತ್ತದೆ ? "

ನಗುತ್ತಾ "ಶ್ರೀರಾಮನು ಮಾತೃವಾಕ್ಯ ಪರಿಪಾಲನೆ ಮಾಡಿದಂತೆ ಈ ಕಲಿಯುಗದಲ್ಲಿ ಸಾಂಬಾಜಿಯು ಮಾತೆಯ ಇಷ್ಟಾರ್ಥ ಸಿದ್ಧಿಯನ್ನು ನೆರವೇರಿಸಿದಂತಾಗುತ್ತದೆ. ನಮ್ಮ ವಂಶದಲ್ಲಿ ಈ ಹಗಲು ಕತ್ತಲೆಗಳು ಹೊರಳುತ್ತಲೇ ಬಂದಿವೆ. ನಮ್ಮ ತಂದೆ ಷಾಜಿಯವರು ಬಿಜಾಪುರದ ಸುಲ್ತಾನರ ಸೇವೆಯಲ್ಲಿಯೇ ಆಯುಷ್ಯವನ್ನೆಲ್ಲಾ ಕಳೆದರು. ನಾನು ಹುಟ್ಟಿದಂದಿನಿಂದ ಮುಸಲ್ಮಾನರ ವಿದ್ವೇಷದಿಂದಲೇ ಆಯುಸ್ಸನ್ನು ಕಳೆಯುತ್ತಿದ್ದೇನೆ. ಸಾಂಬಾಜಿ ಮತ್ತೆ ಮುಸಲ್ಮಾನರ ಸೇವೆಗೆ ಹೋದರೆ ಅದರಲ್ಲಿ ಆಶ್ಚರ್ಯವೇನೂ ಇರುವುದಿಲ್ಲ. ನನ್ನ ಮನಸ್ಸಿಗೆ ಕಿಂಚಿತ್ತಾದರೂ ದುಃಖವಿಲ್ಲ. ನಿಮ್ಮ ಮುದ್ದುಮಗ ರಾಜಾ

ರಾಮನು ಇದ್ದೇ ಇದ್ದಾನೆ. ನಮ್ಮ ಸಿಂಹಾಸನಕ್ಕೆ ಅವನ ಉತ್ತರಾಧಿಕಾರವು ನಿಷ್ಕಂಟಕವಾಗಿ ಸಿದ್ಧಿಸಿದಂತಾಯಿತು."

ರಾಣಿಯು ಅತ್ಯಂತ ಸಂತುಷ್ಟಳಾಗಿ ಮಹಾರಾಜರ ಮನಸ್ಸು ನನಗೆ ಗೊತ್ತು. ನಿಮ್ಮ ಬಾಯಿಯಲ್ಲಿಯೇ ಒಂದು ಬಾರಿ ಈ ಮಾತನ್ನು ಕೇಳಬೇಕೆಂದು ನನಗೆ ಬಹುದಿನಗಳಿಂದ ಆಸೆಯಿತ್ತು. ಜೋತಿಷ್ಕರು ರಾಜಾರಾಮನು ಹುಟ್ಟಿದಾಗಲೇ ಜಾತಕವನ್ನು ನೋಡಿ ಇವನು ರಾಜನಾಗುತ್ತಾನೆ ಎಂದು ನನ್ನೊಡನೆ ಅಂತರಂಗವಾಗಿ ಹೇಳಿದ್ದರು.

ನಸುನಗುವನ್ನು ನಗುತ್ತಾ "ಹೌದು! ಅದನ್ನರಿತೇ ನಾನು ನಿಮ್ಮ ಮಗನಿಗೆ ರಾಜಾರಾಮನೆಂದು ನಾಮಕರಣ ಮಾಡಿದ್ದೇನೆ."

"ತಮ್ಮ ಇಷ್ಟವು ಸಾರ್ಥಕವಾಗದೇ ಹೋದೀತೆ? ರಾಜಾರಾಮನಿಗೆ ಯುವರಾಜನೆಂದು ಪಟ್ಟಕಟ್ಟಿಬಿಟ್ಟರೆ ತಮ್ಮ ದರ್ಬಾರಿನವರೆಲ್ಲರೂ ಸಂತೋಷ ಪಡುತ್ತಾರೆ. ಈ ರಾಜ್ಯವೆಲ್ಲವೂ ಆನಂದೋತ್ಸವಗಳನ್ನು ನಡೆಸುತ್ತದೆ."

"ಹೌದು ಸೋರ್ಯಾಬಾಯಿಯವರೇ! ನಿಮ್ಮ ಮಾತು ಚಿನ್ನದಂತಹ ಮಾತು. ನನ್ನ ಮಗನಾದ ರಾಜಾರಾಮನಿಗೆ ಹೊಸದಾಗಿ ಯುವರಾಜ ಪಟ್ಟಾಭಿಷೇಕದ ಅಗತ್ಯವೇನೂ ಇಲ್ಲ. ಸಾಂಬಾಜಿಯು ದೇಶಭ್ರಷ್ಟನಾಗಿ ಹೋಗಿರುವಾಗ ರಾಜಾರಾಮನೇ ಸಿಂಹಾಸನವನ್ನೇರತಕ್ಕವನೆಂದು ಎಲ್ಲರಿಗೂ ತಿಳಿದೇ ಇದೆ. ಆದರೆ ಈ ರಾಜಕೀಯವನ್ನು ಮತ್ತೂ ಸೂಕ್ಷ್ಮವಾಗಿ ನೋಡುವ ಆಗತ್ಯವಿದೆ. ಒಂದು ಬಾರಿ ಗುರು ರಾಮದಾಸರ ಅಪ್ಪಣೆಯಂತೆ ಸಾಂಬಾಜಿಗೆ ಯುವರಾಜ ಪಟ್ಟ ಕಟ್ಟಿದ್ದಾಗಿದೆ. ಅವನು ಶೂರ, ಪರಾಕ್ರಮಿ ಎಂದು ನಮ್ಮ ದರಬಾರಿನಲ್ಲಿ ಬಹುಜನ ಸೇನಾಧಿಪತಿಗಳು ಮತ್ತು ಮಂತ್ರಿಗಳು ಇವರುಗಳ ಪೂರ್ಣಾಭಿಮಾನವು ಸಾಂಬಾಜಿಯ ಮೇಲಿದೆ. ನಾವು ಆತುರಪಟ್ಟು ಏನಾದರೊಂದು ಕಾರ್ಯ ಮಾಡಿದರೆ ನಮ್ಮ ದರ್ಬಾರು ಇಬ್ಭಾಗವಾಗಿ ಹೋದೀತು. ಸಾಂಬಾಜಿಯು ಹುಂಬಿನ ಮನುಷ್ಯ. ಹೋದ ಮಾರ್ಗದಲ್ಲಿ ಮತ್ತೆ ಮತ್ತೆ ಮುಂದುವರಿಯುತ್ತಾನೆ. ದೆಹಲಿಯ ದರ್ಬಾರಿಗೂ ಹೋಗಬಹುದು. ವಂಚಕನಾದ ಬಾದಶಹನು ಸಾಂಬಾಜಿಯನ್ನು ವಂಚಿಸಿದರೆ "ಇತೋ ಭ್ರಷ್ಟಃ ತತೋ ಭ್ರಷ್ಟಃ" ಆದಂತಾಗುವುದು ಅವನ ಗತಿ. ಆಗ ಲೋಕವೆಲ್ಲಾ ಅವನನ್ನು ನಿಂದಿಸುವುದು ಅಥವಾ ಬಾದಶಹನು ಸಾಂಬಾಜಿಯನ್ನು ಪುರಸ್ಕರಿಸಿದರೆ

ಅವನು ಪೂರ್ಣವಾಗಿ ಶತ್ರುಪಕ್ಷವನ್ನು ಸೇರಿದಂತಾಗುವುದು. ನಮ್ಮ ರಾಜ್ಯದಲ್ಲಿ ನಮ್ಮ ಸಿಂಹಾಸನದಲ್ಲಿ ಅವನಿಗಾವ ಅಧಿಕಾರವೂ ಇರುವುದಿಲ್ಲ. ಅದನ್ನೆಲ್ಲಾ ಅವನೇ ಕಳೆದುಕೊಂಡಂತಾಗುವುದು. ಆಗ ನಮ್ಮ ದರ್ಬಾರಿಗಳೆಲ್ಲರೂ ಏಕ ಕಂಠದಿಂದ ನಿಮ್ಮ ಮಗನನ್ನು ಯುವರಾಜನೆಂದು ಕರೆಯುವರು. ಅದಕ್ಕಿಂತಲೂ ಮಹತ್ತರವಾದ ಆನಂದವು ಮತ್ತಾವುದಿದೆ."

ಮಹಾರಾಣಿಯು ಮನಸ್ಸಿಗೆ ಒಂದು ಪಥವಾಗಿ ಸಮಾಧಾನವಾದರೂ ಮತ್ತೊಂದು ಪಥವಾಗಿ ಶಂಕೆಯು ಉಳಿದೇ ಉಳಿಯಿತು. ಇರಲಿ, ಮಹಾರಾಜರು ಹಠವಾದಿಗಳೆಂಬುದು ಲೋಕಕ್ಕೆ ತಿಳಿದಿದೆ. ಇಂದಲ್ಲ ನಾಳೆ ಅವರು ರಾಜಾರಾಮನಿಗೆ ಪಟ್ಟಕಟ್ಟಲೇಬೇಕಾಗುತ್ತದೆ ಎಂದು ನಿರ್ಧಾರ ಮಾಡಿಕೊಂಡು ತೀರ್ಥಯಾತ್ರೆಗಳನ್ನು ಮಾಡಿಕೊಂಡು ಬರಲು ಮಹಾರಾಜರಲ್ಲಿ ಅಪ್ಪಣೆ ಬೇಡಿದಳು. ರಾಣಿಯವರು ರಾಜಾರಾಮನನ್ನು ಮಹಾರಾಜರ ಸಮೀಪ ದಲ್ಲಿಯೇ ಬಿಟ್ಟು ಪಂಡರಪುರಕ್ಕೆ ಯಾತ್ರೆ ಹೊರಟರು.

ಅಲ್ಲಿ ಯಥೇಚ್ಛವಾದ ಬ್ರಾಹ್ಮಣ ಭೋಜನಗಳನ್ನೂ ಭೂರಿ ದಕ್ಷಿಣೆಗಳನ್ನೂ ಕೊಡಿಸಿ ದೇವತಾ ಸೇವೆಗೆ ಆರಂಭಮಾಡಿದರು. ಬ್ರಾಹ್ಮಣರಿಂದ ರಾಜಾರಾಮನ ಕ್ಷೇಮಾರ್ಥವಾಗಿಯೂ ರಾಜ್ಯಪ್ರಾಪ್ತಿಗಾಗಿಯೂ ಹೋಮ ಹವನಗಳನ್ನು ಮಾಡಿಸತೊಡಗಿದರು. ರಾಜಾರಾಮನ ಹೆಸರಿನಲ್ಲಿ ಗೃಹಗಳನ್ನು ನಿರ್ಮಾಣಮಾಡಿಸಿ ಶ್ರೋತ್ರಿಯರಾದ ಬ್ರಾಹ್ಮಣರಿಗೆ ದಾನ ಮಾಡಿಸಿದರು. ಮಹಾರಾಣಿಯವರ ದಾನಧರ್ಮಗಳಿಂದ ಸುಪ್ರೀತರಾದ ಬ್ರಾಹ್ಮಣರು ರಾಜಾರಾಮನೇ ಯುವರಾಜನೆಂದು ಹೊಗಳಿ ಕೊಂಡಾಡಲಾರಂಭಿಸಿದರು. ವಿದ್ವಾಂಸರಾದ ಹಲವರು ಬ್ರಾಹ್ಮಣರು ಮಹಾರಾಣಿಯವರನ್ನು ಅಂತರಂಗದಲ್ಲಿ ಭೆಟ್ಟಿಯಾಗಿ ತಾವುಗಳು ಶಿವಾಜಿ ಮಹಾರಾಜರಲ್ಲಿ ಹೋಗಿ ನಾನಾ ಮಾರ್ಗಗಳಿಂದ ಪ್ರಯತ್ನ ಮಾಡಿ ರಾಜಾರಾಮನಿಗೆ ಯುವರಾಜ ಪಟ್ಟಾಭಿಷೇಕ ಮಾಡಿಸುವುದಾಗಿ ಶಪಥ ಮಾಡಿ ರಾಯಗಡಕ್ಕೆ ಹೊರಟರು.





## ೧೪

ಸಂಭಾಜಿಯು ಔರಂಗಾಬಾದಿಗೆ ಬಂದು ಮೊಗಲ್ ಸೇನಾಧಿಪತಿಯ ಪ್ರಮಾಣವನ್ನು ಪಡೆದಿರುವುದು ದೆಹಲಿಯಲ್ಲಿ ಎಲ್ಲರಿಗೂ ಆಶ್ಚರ್ಯವನ್ನುಂಟು ಮಾಡಿತು, ಕುತೂಹಲವನ್ನು ಕೆರಳಿಸಿತು, ಎಲ್ಲೆಲ್ಲಿಯೂ ಇದೇ ಮಾತು. ಮಹಾರಾಷ್ಟ್ರ ವೀರ ಶಿವಾಜಿಯ ಮಗನು ತಾನಾಗಿ ಬಂದು ಸೇರಿದ್ದಾನಂತೆ. ಬಾದಶಹರು ಅವನಿಗೆ ಬಿರುದುಬಾವಲಿಗಳನ್ನು ಕೊಟ್ಟು ಗೌರವಿಸಿದ್ದಾರಂತೆ ಎಂದು ಸಾಮಾನ್ಯ ಜನರು ಕೂಡಾ ಮಾತನಾಡಿಕೊಳ್ಳುತ್ತಿದ್ದರು, ಅಂತಃಪುರದಲ್ಲಿಯೂ ಇದೇ ಮಾತುಗಳು. ಅಂತಃಪುರದ ಸ್ತ್ರೀಯರು ಎಂಥಾ ಮಹತ್ತ್ವರವಾದ ರಾಜಕೀಯವನ್ನಾದರೂ ಲಘುವಾಗಿ ಮಾತನಾಡಿಕೊಳ್ಳುತ್ತಿದ್ದರು. ಅಂತಃಪುರ ರಮಣಿಯರ ಮಾತುಕತೆಗಳಿಂದ ದರಬಾರಿನ ಎಷ್ಟೋ ದೊಡ್ಡ ದೊಡ್ಡ ಪ್ರಕರಣಗಳು ತಲೆಕೆಳಗಾಗಿಹೋಗುತ್ತಿದ್ದವು. ಷಯಿಸ್ತಾಖಾನನ ಹೆಂಡತಿ ಬೇಗಂಸಾಹೇಬಳು ದಕ್ಷಿಣದ ರಾಜ್ಯಭಾರದಲ್ಲಿ ಯಾವಾಗಲೂ ಕಣ್ಣಿಟ್ಟಿದ್ದಳು. ಅವಳ ಪತಿ ದಕ್ಷಿಣದಲ್ಲಿ ಸರ್ವಸ್ವವನ್ನೂ ಕಳೆದುಕೊಂಡಿದ್ದನು. ಮಹೋನ್ನತವಾದ ಅಧಿಕಾರ ಗೌರವಗಳು ಮಣ್ಣುಪಾಲಾಗಿ ಹೋದುದಲ್ಲದೇ ಪ್ರಿಯತಮನಾದ ಪುತ್ರನನ್ನು ಅವನು ದಕ್ಷಿಣದಲ್ಲಿ ಕಳೆದುಕೊಂಡಿದ್ದನು. ಷಯಿಸ್ತಾಖಾನನ ನಂತರ ಎಷ್ಟೋ ಅಧಿಕಾರಿಗಳು ದಕ್ಷಿಣದಲ್ಲಿ ರಾಜ್ಯಭಾರ ಮಾಡಿದ್ದರು. ಎಲ್ಲರೂ ಒಂದೇ. ಒಂದಲ್ಲ ಒಂದು ವಿಧದಿಂದ ಶಿವಾಜಿಯಿಂದ ಪರಾಭವ ಹೊಂದಿದವರು ಅಥವಾ ಮೋಸಹೋದವರು. ಸಾಕ್ಷಾತ್ ಯುವ ರಾಜನೇ ಅಧಿಕಾರಿಯಾಗಿದ್ದು ಎಂಥಾ ಅಪಮಾನವನ್ನು ಅನುಭವಿಸಬೇಕಾಯಿತು. ಆದರೆ ದೆಹಲಿಯ ದರ್ಬಾರಿನಲ್ಲಿ ಔರಂಗಜೇಬ್ ಬಾದಶಹನು ಷಯಿಸ್ತಾಖಾನನನ್ನು ಎಷ್ಟೊಂದು ಅಪಮಾನಕ್ಕೆ ಗುರಿಪಡಿಸಿದನು. ಈ ಅಪಮಾನ ಛಲ ದ್ವೇಷಾಸೂಯೆಗಳೆಲ್ಲಾ ಬೇಗಂ ಸಾಹೇಬಳ ಹೃದಯವನ್ನು ಸುಡುತ್ತಿದ್ದವು. ಬಾದಶಹನಿಗೆ ಪ್ರತೀಕಾರ ಮಾಡಲು ಆಸ್ಪದವಿಲ್ಲದೇ ಯಾರು ದಕ್ಷಿಣದ ಸರ್ವಾಧಿಕಾರಿಯಾಗಿ ಹೋದರೂ ಅವರ ಮೇಲೆ ಏನಾದರೊಂದು ದೋಷವನ್ನು ಹೆಚ್ಚಿ ಬೇಗಂ ಸಾಹೇಬಳು ಆಟವಾಡಿಸುತ್ತಿದ್ದಳು. ಈಗ ಅವಳ ಅಭಿಯೋಗಕ್ಕೆ ಒಳ್ಳೆಯ ಆಸ್ಪದ ಸಿಕ್ಕಿದಂತಾಯಿತು. ಅಂತಃಪುರದಲ್ಲಿ ಬೇಗಂ

ಸಾಹೇಬಳಿಗೆ ಇದ್ದ ಆಶ್ರಯವೆಂದರೆ, ಔರಂಗಜೇಬನ ಸಹೋದರಿ ರೋಷನಾರ ಳೊಬ್ಬಳು, ಅವನ ಪ್ರಿಯತಮೆ ಉದಯಪುರಿ ಬೇಗಂಳೊಬ್ಬಳು. ಬೇಗಂ ಸಾಹೇಬಳು ಉದಯಪುರಿ ಬೇಗಂಳನ್ನು ಅಂತಃಪುರದಲ್ಲಿ ಭೇಟಿಮಾಡಿದಳು. ಆ ರಾಣಿ ಆಗ ತಾನೇ ಸ್ನಾನಗೃಹದಿಂದ ಬಂದು ಅಲಂಕಾರಗೃಹದಲ್ಲಿ ಕುಳಿತಳು. ಬೇಗಂ ಸಾಹೇಬಳು ಅಲಂಕಾರ ಸಾಧನಗಳನ್ನು ತೆಗೆದುಕೊಂಡು ರಾಣಿ ಉದಯ ಪುರಿಗೆ ತಾನಾಗಿಯೇ ಅಲಂಕಾರ ಮಾಡಲಾರಂಭಿಸಿದಳು. ತಲೆಯ ಕೂದಲು ಗಳನ್ನು ಬಾಚಿ ಹೆರಳುಕಟ್ಟಿದಳು. ಉದಯಪುರಿಗೆ ಎಲ್ಲ ಸೌಭಾಗ್ಯಗಳಿಗಿಂತಲೂ ಆ ತಲೆಯ ಕೂದಲಿನ ಸೌಭಾಗ್ಯವು ಅತಿಶಯವಾದದ್ದು. ಹಿಂದೆ ಕನ್ನಡಿ ಯನ್ನಿಟ್ಟು ಮುಂದಿನ ಕನ್ನಡಿಯಲ್ಲಿ ಆ ಹೆರಳು ಕಾಣುವಂತೆ ಮಾಡಿ ತೋರಿಸಿ ದಳು. ಅದರ ಮೇಲೆ ಮುತ್ತಿನ ಸರವನ್ನು ಕಟ್ಟಿ ಉಭಯಪಾರ್ಶ್ವಗಳಲ್ಲಿಯೂ ಕುಚ್ಚುಗಳನ್ನು ಬಿಟ್ಟಳು. ಒಂದೊಂದಾಗಿ ರತ್ನಾಭರಣಗಳನ್ನು ತೆಗೆದು ಆ ಉದಯಪುರಿ ಬೇಗಂಳಿಗೆ ತೊಡಿಸತೊಡಗಿದಳು. ಬೇಗಂ ಸಾಹೇಬಳ ಕೌಶಲ ವನ್ನು ನೋಡಿ ಉದಯಪುರಿಯು ಪ್ರಶಂಸೆಮಾಡಿದಳು. ಹೀಗೆ ಸಂತೋಷ ವಾಗಿದ್ದ ಸಂದರ್ಭವನ್ನು ಕಾದು ಬೇಗಂ ಸಾಹೇಬಳು, ಮಾತಿಗೆ ಮೊದಲು ಮಾಡಿದಳು.

"ದಖ್ಖನ್ನಿನ ಸಮಾಚಾರಗಳನ್ನು ಕೇಳಿದಿರಾ ರಾಣೀ ಸಾಹೇಬ್. ಎಲ್ಲವೂ ತಲೆಕೆಳಗಾಗುವಂತೆ ಆಗಿದೆ. ಬಾದಷರು ಅತ್ತಕಡೆಗೆ ತಿರುಗಿ ನೋಡುವುದನ್ನೂ ಮರೆತುಬಿಟ್ಟಂತೆ ಕಾಣುತ್ತದೆ. ಅದು ಆ ಕಳ್ಳ ಶಿವಾಜಿಯ ಅದೃಷ್ಟವೆನ್ನ ಬೇಕು."

"ಅದೇಕೆ ಅತ್ತೆ ಆ ಶಿವಾಜಿಯ ಮೇಲೆ ಅಷ್ಟು ದ್ವೇಷ ಮಾಡುತ್ತೀರಿ. ದ್ವೇಷಿಗಳಾದರೂ ಪರಾಕ್ರಮಿಗಳನ್ನು ಮೆಚ್ಚಿಕೊಳ್ಳಬೇಕು."

"ಹಾಗಲ್ಲ ರಾಣೀ ಸಾಹೇಬ್, ಶಿವಾಜಿಯು ಎಂಥಾ ಪರಾಕ್ರಮಿ. ರಜಪೂತರಂತೆ ಅವನು ಶೂರನೂ ಅಲ್ಲ, ಪರಾಕ್ರಮಿಯೂ ಅಲ್ಲ. ಕಳ್ಳರಂತೆ ತಲೆ ತಪ್ಪಿಸಿಕೊಂಡು ಓಡಿಹೋಗುತ್ತಾನೆ, ಡಕಾಯಿತರಂತೆ ತಲೆ ಒಡೆದುಹಾಕುತ್ತಾನೆ, ಅವನೆಂಥಾ ಪರಾಕ್ರಮಿ ಬಿಡಿ, ನೀವೇನು ಬಲ್ಲಿರಿ ನಾನು ಕಣ್ಣಾರೆಕಂಡಿದ್ದೇನೆ."

"ಒಳ್ಳೆಯದು, ಈಗೇನು ಅವನ ಪ್ರಸ್ತಾಪವೆತ್ತಿದಿರಿ? ಆಗೊಂದು

ಸಾರಿ ರಾಜಧಾನಿಗೆ ಬಂದಿದ್ದನಂತೆ, ಓಡಿಹೋದ. ಬಾದಶಹರು ಅವನನ್ನು ಈಗ ಪುನಃ ರಾಜಧಾನಿಗೆ ಕರೆಸಿದ್ದಾರೇನು ?"

"ಇಲ್ಲ ರಾಣೀ ಸಾಹೇಬ್! ದಕ್ಷಿಣ್ ರಾಜ್ಯವೆಲ್ಲವೂ ಅವನ ವಶವಾದಂತೆಯೇ. ಅವನೆಷ್ಟು ಬಾರಿ ಮೋಸಮಾಡಿದರೂ ನಮ್ಮವರು ಅವನನ್ನು ನಂಬುತ್ತಾರೆ, ಇದೇ ಆಶ್ಚರ್ಯ. ಹಿಂದೆ ಬಹದ್ದೂರ್‌ಖಾನನೊಡನೆ ಸ್ನೇಹಮಾಡಿಕೊಳ್ಳುತ್ತೇನೆಂದು ನಟನೆಮಾಡಿ ಏಕಾಏಕಿ ಅವರ ಶಿಬಿರದ ಮೇಲೆ ಬಿದ್ದು ಯಥೇಚ್ಛ ಐಶ್ವರ್ಯವನ್ನು ಕೊಳ್ಳೆಹೊಡೆದುಕೊಂಡು ಹೋದ. ಅದಕ್ಕೆ ಬಾದಶಹನು ಮಾಡಿದ ಪ್ರತೀಕಾರವೇನು? ಬಹದ್ದೂರ್‌ಖಾನನ್ನು ದೆಹಲಿಗೆ ಕರೆಸಿ ದಿಲೀರ್‌ಖಾನನನ್ನ ಸರ್ವಾಧಿಕಾರಿಯಾಗಿ ನೇಮಿಸಿಬಿಟ್ಟ. ಆ ದಿಲೀರ್‌ಖಾನನ ಪೂರ್ವ ಚರಿತ್ರೆಯನ್ನು ಕೇಳಿಲ್ಲವೇ ರಾಣೀ ಸಾಹೇಬಾ? ಯುವರಾಜ ಅಜಂ ಮನೆಗೆ ತಿರುಗಿಬಿದ್ದು ಯುದ್ಧಕ್ಕೆ ನಿಂತಿದ್ದವನು ಆ ದಿಲೀರ್‌ಖಾನ್, ಎಷ್ಟಾದರೂ ಆಫ್‌ಘನನಲ್ಲವೇ, ಅವರಿಗೂ ನಮಗೂ ಮೊದಲಿನಿಂದಲೂ ಕೂಡಿಬಂದಿಲ್ಲ. ಈಗ ಶಿವಾಜಿಯ ಮಗ ಸಾಂಬಾಜಿಯು ಅವನೊಡನೆ ಬಂದು ಸೇರಿಕೊಂಡಿದ್ದಾನೆ. ಅವನೂ ಮಹಾ ಪರಾಕ್ರಮಿಯಾದ ಸೇನಾಧಿಪತಿಯೆಂದು ನೀವು ಕೇಳಿರಬಹುದು, ಅವರಿಬ್ಬರೂ ಸ್ನೇಹಿತರು. ಹಿಂದೊಮ್ಮೆ ಬಾದಶಹನು ಔರಂಗಾಬಾದಿನಲ್ಲಿ ಆ ಸಾಂಬಾಜಿಯನ್ನು ಹಿಡಿದುಕಳಿಸಬೇಕೆಂದು ಅಪ್ಪಣೆ ಮಾಡಿದಾಗ ಈ ದಿಲೀರ್‌ಖಾನನೇ ಗುಟ್ಟಾಗಿ ಸಮಾಚಾರ ಕೊಟ್ಟು ಆ ಸಾಂಬಾಜಿಯನ್ನು ಪರಾರಿ ಮಾಡಿಸಿಬಿಟ್ಟಿದ್ದ, ಈಗ ಪುನಃ ಅವರಿಬ್ಬರೂ ಸೇರಿಕೊಂಡಿದ್ದಾರೆ. ಆ ಸಾಂಬಾಜಿಗೆ ಬಾದಶಹನು ದರಬಾರಿನಿಂದ ವಿಶೇಷ ಗೌರವಾಸ್ಪದವಾದ ಬಿರುದುಬಾವಲಿಗಳನ್ನು ಕಳಿಸಿದ್ದಾನೆ. ದೊಡ್ಡ ದೊಡ್ಡ ದರಬಾರಿಗಳೆಲ್ಲರೂ ಒಳಗೊಳಗೇ ಪರಿಹಾಸ್ಯ ಮಾಡಿಕೊಂಡು ನಗುತ್ತಾರೆ, ಇದನ್ನೆಲ್ಲಾ ಕೇಳಿ ನನಗೆ ಹೊಟ್ಟೆ ಉರಿಯುತ್ತದೆ. ನಿಮ್ಮವರೆಗೆ ಬಂದು ಹೇಳುವವರಾರು ? ಬಾದಶಹನಿಗೆ ತಿಳಿಸುವವರಾದರೂ ಯಾರು ? ದೆಹಲಿ ದರ್ಬಾರಿನ ಗೌರವವನ್ನು ಉಳಿಸುವುದು ನಮ್ಮ ಕರ್ತವ್ಯ, ಅದು ನಿಮ್ಮ ಕೈಯಲ್ಲಿದೆ" ಎಂದು ಪ್ರೋತ್ಸಾಹಿಸಿದಳು.

"ನಾನೇನು ಮಾಡಬಹುದು—ಬಾದಶಹರಿಗೆ ಒಂದು ಮಾತು ಹೇಳಬಹುದು. ಅವರು ನಾನು ಹೇಳಿದ್ದನ್ನೆಲ್ಲಾ ನಡೆಸುತ್ತಾರೆಂದು ಎಲ್ಲರೂ ತಿಳಿ

ದಿದ್ದಾರೆ, ಅದು ಶುದ್ಧ ಭ್ರಾಂತಿ. ಬಾದಶಹರು ಮೊಲಕ್ಕೆ ಮೂರೇ ಕಾಲು ಎಂದು ಹಟ ಹಿಡಿದರೆ ಅದನ್ನು ಬಿಡುವವರೇ ಅಲ್ಲ, ಇರಲಿ ಅತ್ತೆಮ್ಮ, ನಾನು ಇಂದೇ ಬಾದಶಹರಿಗೆ ಹೇಳುತ್ತೇನೆ."

"ಏನೂ ಇಲ್ಲ. ಆ ಸಾಂಬಾಜಿಯನ್ನು ಇಲ್ಲಿಗೆ ಹಿಡಿತರಿಸಿಬಿಟ್ಟರೆ ಇಲ್ಲಿ ತಕ್ಕ ಬಂದೋಬಸ್ತು ಮಾಡುವಂತೆ ಏರ್ಪಾಡು ಮಾಡಬಹುದು, ಅದೆಲ್ಲಾ ನಮ್ಮ ಕೈಯಲ್ಲಿದೆ" ಎಂದು ಕಣ್ಣು ಹಾರಿಸುತ್ತಾ ಹೇಳಿದಳು.

ಬೇಗಂ ಸಾಹೇಬಳು ಅಲ್ಲಿದ್ದಂತೆಯೇ ಬಾದಶಹನು ಬರುತ್ತಿದ್ದಾನೆಂದು ದಾಸಿಯು ಬಂದು ತಿಳಿಸಿದಳು. ಉದಯಪುರಿ ಬೇಗಂಳು "ಒಳ್ಳೆಯದಾಯಿತು, ನೀವೇ ಒಂದು ಮಾತು ಬಾದಶಹರ ಕಿವಿಗೆ ಹಚ್ಚಬಿಡಿರಿ, ಆಮೇಲೆ ನಾನು ನೋಡಿಕೊಳ್ಳುತ್ತೇನೆ" ಎಂದಳು.

"ಇಲ್ಲ, ಇಲ್ಲ. ಮೊದಲು ಉದಯಪುರಿ ರಾಣಿಯವರ ಬಾಯಿಂದ ಬರಬೇಕು. ನಿಮ್ಮ ಬಾಯಿಂದ ಬಂದದ್ದು ಅಮೃತವಾಗುತ್ತದೆ. ಬಾದಶಹನು ಹುಟ್ಟಿದಂದಿನಿಂದ ಎರಡು ವಿದ್ಯೆಗಳನ್ನು ಕಲಿತಿದ್ದಾನೆ. ಯಾರನ್ನೂ ಆಪ್ತರೆಂದು ನಂಬದಿರುವುದೊಂದು, ಯಾರ ಮಾತನ್ನೂ ಕಿವಿಗೆ ಹಾಕಿಕೊಳ್ಳದಿರುವುದು ಇನ್ನೊಂದು. ನಾನು ಹೇಳಿದರೆ ಬಾದಶಹನು ಅಪಾರ್ಥ ಮಾಡುತ್ತಾನೆ. ದಿಲೇರ್‌ಖಾನನಿಗೂ ಸಾಂಬಾಜಿಗೂ ಇನ್ನೂ ದೊಡ್ಡ ದೊಡ್ಡ ಬಿರುದುಗಳನ್ನು ಕಳಿಸಿಕೊಡುತ್ತಾನೆ" ಎಂದು ಹೇಳಿ ಅಂತಃಪುರದಿಂದ ಬೇರೆ ಮಾರ್ಗವಾಗಿ ಹೊರಟುಹೋದಳು.

ಬಾದಶಹನು ಉದಯಪುರಿ ಬೇಗಂಳನ್ನು ನೋಡಿ ಆಶ್ಚರ್ಯದಿಂದ "ಇಂದೇನು ? ರಾಣೀಸಾಹೇಬರು ಭೂಷಣಗಳಿಂದ ಅಲಂಕರಿಸಿಕೊಂಡಂತಿದೆ. ಎಂದೂ ಇಲ್ಲದ ಅಲಂಕಾರ ಇಂದು ರಾಣಿ ಉದಯಪುರಿಗೆ ಇದೊಂದೂ ಶೋಭಿಸುವುದಿಲ್ಲವಲ್ಲಾ" ಎಂದನು.

ಉದಯಪುರಿಯು ತಲೆದೂಗಿ ಮಂದಹಾಸವನ್ನು ಬೀರುತ್ತಾ "ನಿಮ್ಮ ಸೋದರತ್ತೆ ಬೇಗಂ ಸಾಹೇಬರು ಬಂದಿದ್ದರು. ಅವರು ಬಲಾತ್ಕರಿಸಿ, ಒಂದೊಂದಾಗಿ ಈ ಅಲಂಕಾರಗಳನ್ನೆಲ್ಲಾ ಮಾಡಿ ಹೋದರು" ಎಂದಳು.

"ಹಾ ! ಆ ಬೇಗಂ ಸಾಹೇಬಳು ಬಹಳ ಅಲಂಕಾರಪ್ರಿಯಳೆಂದು

ಕೇಳಿದ್ದೇವೆ. ಇಂದಿನ ಅಲಂಕಾರವು ಬಹಳ ಸೊಗಸಾಗಿದೆ. ಆದರೆ ಇದೆಲ್ಲವೂ ಹಿಂದುಗಳ ಅಲಂಕಾರಗಳಂತಿದೆ."

ನಗುತ್ತಾ "ಈ ಅಲಂಕಾರಗಳನ್ನು ಕಂಡರೆ ಬಾದಶಹರಿಗೆ ಭಯವಾಗುತ್ತದೇನು ? ಅವರ ಪ್ರೀತಿಯ ಉದಯಪುರಿ ಬೇಗಂಳು ಪುನಃ ಹಿಂದುವಾಗಿ ಬಿಡಬಹುದೆಂದು ಭಯವೇನು ?"

"ಇಲ್ಲ ಇಲ್ಲ. ಆ ಹಿಂದುಗಳು ನಿರ್ಘೃಣರು. ಅವರೆಂದಿಗೂ ನಮ್ಮನ್ನು ಪುನಃ ತಮ್ಮ ಜಾತಿಗೆ ಸೇರಿಸಿಕೊಳ್ಳುವುದಿಲ್ಲ."

ಬಾದಶಹನು ಬೇಗಂಳ ಕೈಹಿಡಿದುಕೊಂಡು "ಆ ಮಾತು ಬಿಡಿ, ಆ ಜಾತಿ ಹಾಳಾಗಿಹೋಗಲಿ. ಕಲ್ಲುದೇವರುಗಳನ್ನು ಪೂಜೆಮಾಡುವ ಮೂಢರವರು. ನಿಮ್ಮ ಅಲಂಕಾರವೇನೋ ಇಂದು ಸೊಗಸಾಗಿದೆ" ಎಂದು ಹೇಳುತ್ತಾ ಪರ್ಯಂಕದ ಮೇಲೆ ಕುಳಿತುಕೊಂಡನು.

ಉದಯಪುರಿಯು ನಗುತ್ತಾ "ಬಾದಶಹರು ದಖ್ಖನ್ನಿಗೆ ಪ್ರಯಾಣ ಹೊರಡುತ್ತಾರೆಂದು ಅಂತಃಪುರದವರೆಲ್ಲರೂ ಮಾತನಾಡಿಕೊಳ್ಳುತ್ತಾರೆ, ಅದು ನಿಜವೇನು ? ನನಗಿಷ್ಟು ಹೇಳಬಾರದೇ" ಎಂದಳು.

"ದಖ್ಖನ್ನಿಗೆ ನಾವು ಹೊರಡುವ ಪ್ರಮೇಯವೇನೂ ಕಾಣುವುದಿಲ್ಲ. ಆ ಶಿವಾಜಿಯು ತಣ್ಣಗಿದ್ದಾನೆ. ಬಿಜಾಪುರದವರೊಡನೆಯೋ ಗೋಲ್ಕಂಡದವರೊಡನೆಯೋ ಜಗಳವೆತ್ತಿಕೊಂಡು ಅಲೆದಾಡುತ್ತಿದ್ದಾನೆ. ಅದು ಇಲಿ ಹೆಗ್ಗಣಗಳ ಜಗಳದಂತಾಗಿದೆ. ನಮಗೆ ಅಲ್ಲಿಗೆ ಹೋಗುವ ಕಾರ್ಯವೇನೂ ಇಲ್ಲ. ದಖ್ಖನ್ನಿನ ಸರ್ವಾಧಿಕಾರಿ ದಿಲೀರ್‌ಖಾನನು ಬಹಳ ಸಾಮರ್ಥ್ಯಶಾಲಿಯೆಂದು ನೀವು ಕೇಳಿರಬಹುದು. ಅವನಿಗೆ ಪರಾಕ್ರಮವೆಷ್ಟಿದೆಯೋ ಅದಕ್ಕಿಂತೂ ಅಧಿಕವಾಗಿ ಉಪಾಯವಿದೆ. ಅಂಥವರನ್ನು ಕಂಡರೆ ನನಗೆ ಬಲು ಮೆಚ್ಚುಗೆ. ರಾಣೀಸಾಹೇಬಾ, ನೀವು ಆ ಶಿವಾಜಿಯ ಮಗ ಸಾಂಬಾಜಿಯ ವಿಷಯ ಕೇಳಿರಬಹುದು. ಅವನು ಶಿವಾಜಿಗಿಂತಲೂ ಅತ್ಯಂತ ಪರಾಕ್ರಮಶಾಲಿ. ಮಹಾ ಸುಂದರ ಪುರುಷನೂ ಹೌದು. ದಿಲೀರ್‌ಖಾನನು ಅವನನ್ನು ಸಂಗ್ರಹಿಸಿಬಿಟ್ಟಿದ್ದಾನೆ."

"ಏನು ಸೆರೆಹಿಡಿದಿದ್ದಾನೆಯೇ ? ಸಾಂಬಾಜಿಯು ನಮ್ಮ ಸೆರೆಯಲ್ಲಿದ್ದಾನೆಯೇ ? "

"ಇಲ್ಲ—ಇಲ್ಲ, ಸಾಂಬಾಜಿಯು ದಿಲೀರ್‌ಖಾನನ ವಶವರ್ತಿಯಾಗಿದ್ದಾನೆ."

"ಜಹಾಪನಾ! ಆ ಶಿವಾಜಿಯ ಮಗನನ್ನು ನೀವು ನಂಬುವಿರಾ?"

"ನಾನು ಮಾತ್ರವಲ್ಲ, ಈ ದರಬಾರಿನವರೆಲ್ಲರೂ ನಂಬುವಂಥಾ ಕಾಲವು ಬರುತ್ತದೆ. ದಿಲೀರ್‌ಖಾನನ ಸ್ನೇಹ ಸಹವಾಸಗಳಿಂದ ಸಾಂಬಾಜಿಯು ವೇಷ, ಭೂಷಣ, ಆಚಾರ, ವ್ಯವಹಾರ, ನಡೆ, ನುಡಿಗಳಲ್ಲೆಲ್ಲಾ ಮೊಗಲ್ ಅಧಿಕಾರಿಗಳಂತೆಯೇ ಆಗಿಬಿಟ್ಟಿದ್ದಾನೆ. ನಾವೇನೂ ಪ್ರಯತ್ನ ಮಾಡಬೇಕಾದುದಿಲ್ಲ. ಅವನಾಗಿಯೇ ಪವಿತ್ರ ಇಸ್ಲಾಂ ಮತಕ್ಕೆ ಬಂದು ಸೇರಿಬಿಡುತ್ತಾನೆ. ದಿಲೀರ್‌ಖಾನನ ಪ್ರಚೋದನೆಯು ಅಷ್ಟು ಪ್ರಬಲವಾಗಿದೆ."

ಬೇಗಂ ಸಾಹೇಬಳ ಮುಖವು ಸಪ್ಪಗಾಯಿತು. "ಜಹಾಪನಾ! ಇದನ್ನೆಲ್ಲಾ ತಮಗಾರು ಹೇಳಿದರು" ಎಂದಳು.

"ಖುದ್ದು ದಿಲೀರ್‌ಖಾನನೇ ಪತ್ರಗಳನ್ನು ಬರೆಸಿದ್ದಾನೆ. ಆ ಸಾಂಬಾಜಿಗೆ ಪ್ರೋತ್ಸಾಹಿಸುವುದಕ್ಕೋಸ್ಕರ ನಾವೂ ಅವನಿಗೆ ಬಿರುದುಗಳನ್ನು ಕೊಟ್ಟಿದ್ದೇವೆ. ಅಧಿಕಾರ ಕೊಟ್ಟು ಮನ್ನಣೆ ಮಾಡಿದ್ದೇವೆ."

"ದಿಲೀರ್‌ಖಾನನ ಮಾತುಗಳೆಲ್ಲಾ ಸುಳ್ಳಾದರೆ?"

ಔರಂಗಜೇಬನ ಕಣ್ಣು ಕೆಂಪಾಯಿತು. "ಸುಳ್ಳೆ–ಸುಳ್ಳಾದರೆ ಅವನ ತಲೆಯು ನೂರು ಪಾಲಾಗಿ ಬೀಳುತ್ತದೆಂಬುದನ್ನು ಅವನು ಅರಿತಿಲ್ಲವೇನು?"

ಉದಯಪುರಿಯು ನಗುತ್ತಾ "ಬಾದಶಹರು ಚೆನ್ನಾಗಿ ತಲೆಗೆ ಹಚ್ಚಿಕೊಂಡಿರುವಂತಿದೆ. ಕೋಟೆಯು ಶತ್ರುಗಳ ವಶವಾದ ಮೇಲೆ ಬಾಗಿಲನ್ನು ಭದ್ರಪಡಿಸಿದಂತಿದೆ. ಆ ದಿಲೀರ್‌ಖಾನನು ಅಫ್‌ಘನನೆಂಬುದನ್ನು ಖಾವಂದರು ಮರೆತೇಬಿಟ್ಟಿರುವಂತಿದೆ. ಸಾಂಬಾಜಿಯೂ ಅವನೂ ಒಳ್ಳೆಯ ಸ್ನೇಹಿತರು, ಇಬ್ಬರೂ ಪರಾಕ್ರಮಶಾಲಿಗಳಾದ ಸೇನಾಧಿಪತಿಗಳು. ಅವರಿಬ್ಬರೂ ಒಂದಾಗಿ ಬಾದಶಹರಿಗೆ ತಿರುಗಿಬಿದ್ದರೆ ದಖ್ಖನ್ ರಾಜ್ಯವು ಕೈಬಿಟ್ಟುಹೋದಂತೆಯೇ."

ಬಾದಶಹನು ಗಟ್ಟಿಯಾಗಿ ನಕ್ಕು, "ಇದೆಲ್ಲಾ ನಿಮ್ಮ ಕಲ್ಪನೆಗಳು. ಈ ಅಂತಃಪುರದಲ್ಲಿ ವಿಚಿತ್ರ ಕಲ್ಪನೆಗಳು ಹುಟ್ಟುತ್ತವೆ. ನಾನು ಸಿಂಹಾಸನದ ಮೇಲಿರುವಾಗ ಇತ್ತಕಡೆಯ ಸೂರ್ಯ ಅತ್ತಕಡೆ ಉದಯಿಸಿದರೂ ರಾಜಕೀಯದಲ್ಲಿ ವ್ಯತ್ಯಾಸವಾಗುವುದಿಲ್ಲ. ಬೇಗಂ ಸಾಹೇಬಾ, ನಿಮಗಾರೋ ಚೆನ್ನಾಗಿ ಬೋಧನೆ ಮಾಡಿದ್ದಾರೆ. ಈ ಅಂತಃಪುರವು ಇಂದ್ರಜಾಲಕನ ಪೆಟ್ಟಿಗೆಯಂತಿದೆ. ಪ್ರಪಂಚವೆಲ್ಲವೂ ತಲೆಕೆಳಗಾಗಿ ಕಾಣುತ್ತದೆ" ಎಂದು ಹೇಳುತ್ತಾ ಉದಯಪುರಿಯ

ಕಪೋಲಗಳನ್ನು ಚುಂಬಿಸಿದನು. ಬೇಗಂ ಸಾಹೇಬಳು ಮದ್ಯಪಾನ ಮಾಡದೇ ಬಹಳ ಹೊತ್ತಾಗಿದ್ದಿತು. ಅವಳು ಮಧುಪಾತ್ರೆಯನ್ನು ಕೈಗೆ ತೆಗೆದುಕೊಂಡು ಚಿನ್ನದ ಬಟ್ಟಲಿಗೆ ಬಗ್ಗಿಸಿ ತುಟಿಗಳಲ್ಲಿಟ್ಟುಕೊಂಡು ಆಸ್ವಾದಿಸುತ್ತಾ ನಿಮ್ಮ ಹೃದಯವೇ ಇಂದ್ರಜಾಲಕನ ಪೆಟ್ಟಿಗೆ ಎಂದು ನಗುತ್ತಾ ಹೇಳಿದಳು.

ಔರಂಗಜೇಬನು ಬೇಗಂ ಸಾಹೇಬರು ಇಷ್ಟುಹೊತ್ತೂ ಸರಿಯಾಗಿರಲಿಲ್ಲ. ಈಗ ಇನ್ನು ಒಂದು ಕ್ಷಣದಲ್ಲಿ ಅವರ ಪೂರ್ಣಗಾಂಭೀರ್ಯವು ಈ ಮುಖದ ಮೇಲೆ ಕಂಗೊಳಿಸುತ್ತದೆ. ಈ ದೇವಕನ್ಯೆ ಮಧುಪಾನಮಾಡದೇ ಬಹಳ ಹೊತ್ತಾಗಿತ್ತೆಂದು ಮರೆತೇ ಬಿಟ್ಟಿದ್ದಳು ಎಂದು ಹಾಸ್ಯ ಮಾಡಿ ರಾಣೀಸಾಹೇಬಳನ್ನು ಆಲಿಂಗನಮಾಡಿದನು. ನಿಜವಾಗಿಯೂ ಉದಯಪುರಿ ಬೇಗಂಳು ದಖ್ಖನ್ ವಿಚಾರಗಳನ್ನು ಕ್ಷಣದಲ್ಲಿ ಮರೆತುಬಿಟ್ಟಳು. ದಿಲೀರ್‌ಖಾನನೂ ಸಾಂಬಾಜಿಯೂ ಮನಸ್ಸಿನಿಂದ ಯಾವಾಗಲೋ ಹಾರಿಹೋದರು. ಅವಳ ಮುಂದಿರುವ ಪ್ರೇಮಸ್ವರೂಪಿ ಆಲಂಗೀರನೊಬ್ಬ, ಅವಳ ಕೈಯಲ್ಲಿರುವ ಮಧು ಪಾತ್ರೆಯೊಂದು ಇವೆರಡಲ್ಲದೇ ಉದಯಪುರಿ ಬೇಗಂಳ ಮನಸ್ಸಿನ ಮೇಲೆ ಮತ್ತಾವ ಪ್ರತಿಬಿಂಬವೂ ಉಳಿದಿರಲಿಲ್ಲ.

ಔರಂಗಜೇಬನು ಅಂತಃಪುರವನ್ನು ಬಿಟ್ಟುಹೊರಡುವಾಗ ಅರ್ಧರಾತ್ರಿಯು ಮೀರಿಹೋಗಿತ್ತು. ಅವನು ನೇರವಾಗಿ ಪ್ರಾರ್ಥನಾ ಮಂದಿರಕ್ಕೆ ಹೋದನು. ಪ್ರಾರ್ಥನೆಗೆ ಕುಳಿತುಕೊಳ್ಳುತ್ತಲೇ ಬೇಗಂ ಸಾಹೇಬಳನ್ನು ಅವಳಾಡಿದ ಮಾತುಗಳನ್ನೂ ಪೂರ್ತಿಯಾಗಿ ಮರೆತುಬಿಟ್ಟನು. ದೇವರ ಪ್ರಾರ್ಥನೆಯಲ್ಲಿ ಮೈಮರೆತು ಶರಣಾಗತಿಯೊಂದರಲ್ಲಿಯೇ ಮಗ್ನನಾದನು.

ಸೂರ್ಯೋದಯ ಸಮಯಕ್ಕೆ ಔರಂಗಜೇಬನ ಪ್ರಾರ್ಥನೆಯು ಮುಗಿಯಿತು. ಪ್ರಾರ್ಥನಾಮಂದಿರದಲ್ಲಿಯೇ ಕುಳಿತು ಆಲೋಚಿಸತೊಡಗಿದನು. ಮತ್ತೆ ಅವನ ಹೃದಯಪಟಲದ ಮೇಲೆ ಉದಯಪುರಿ ಬೇಗಂಳ ಪ್ರತಿರೂಪವು ಉದಯಿಸಿತು. ಅವಳ ಇನಿಮಾತುಗಳು ಕಿವಿಯಲ್ಲಿ ಗುಂಜಿದವು. "ಸಾಂಬಾಜಿ ಮತ್ತು ದಿಲೀರ್‌ಖಾನರು ಒಂದಾದರೆ, ಅವರಿಬ್ಬರೂ ನಮಗೆ ತಿರುಗಿಬಿದ್ದರೆ, ದಖ್ಖನ್ ರಾಜ್ಯವು ಕೈಬಿಟ್ಟುಹೋಗುತ್ತದೆ."

ಉದಯಪುರಿಯ ಬಾಯಿಂದ ಹೊರಟ ಈ ಅಮೃತವಾಣಿಯನ್ನು ಅವನು ಪುನಃ ನೆನೆದುಕೊಂಡನು.

ಬಾದಶಹನು ಪ್ರಾರ್ಥನಾಮಂದಿರವನ್ನು ಬಿಟ್ಟು ಲಗುಬಗೆಯಿಂದ ದರ್ಬಾರು ಮಹಲಿಗೆ ಬಂದನು.

ದರ್ಬಾರು ಶಾಲೆಯಲ್ಲಿ ಕೋಣೆಯೊಳಗೆ ಕುಳಿತು ರಾಯಸದವರನ್ನು ಕರೆಸಿ ದಿಲೀರ್‌ಖಾನನಿಗೆ ಪತ್ರ ಬರೆಸಿದನು.

ದಖ್ಖನ್ನಿನ ಸರ್ವಸೇನಾಧಿಪತಿ ದಿಲೀರ್‌ಖಾನನಿಗೆ—

ಶಿವಾಜಿಯ ಮಗ ಸಾಂಬಾಜಿಯ ವಿಚಾರದಲ್ಲಿ ನೀನು ಬರೆದಿರುವುದೆಲ್ಲವೂ ನಮ್ಮ ಮನಸ್ಸಿಗೆ ಅತ್ಯಂತ ಹರ್ಷವನ್ನುಂಟುಮಾಡುತ್ತಿದೆ. ಸಾಂಬಾಜಿಯು ಉದಾರಪುರುಷನೆಂದು ಬಹುದಿನಗಳಿಂದ ನಮ್ಮ ಮನಸ್ಸಿಗೆ ಗೋಚರವಾಗಿಯೇ ಇದ್ದಿತು. ಸಾಂಬಾಜಿಯು ಎಲ್ಲ ವಿಚಾರಗಳಲ್ಲಿಯೂ ಮೊಗಲ್ ಸರದಾರರಂತೆ ಇದ್ದಾನೆಂದು ನೀನು ಬರೆಸಿದ್ದಿ. ಆ ಭಾಗದಲ್ಲಿ ನಮ್ಮ ಉಮ್ರಾಗಳೂ ಸರಪತಿಗಳೂ ಸಂತೋಷಚಿತ್ತರಾಗಿದ್ದಾರೆ. ಸಾಂಬಾಜಿಯು ತಾನಾಗಿಯೇ ಇಸ್ಲಾಂ ಮತವನ್ನು ಅಂಗೀಕರಿಸುತ್ತಾನೆಂದು ನಮಗೆ ದೇವರ ಪ್ರೇರಣೆಯಾಗಿದೆ. ಸಾಂಬಾಜಿಯಂಥಾ ಮೇಧಾವಿಗಳಿಗೆ ಈ ವಿಷಯದಲ್ಲಿ ಯಾರ ಪ್ರೇರಣೆಯೂ ಅಗತ್ಯವೇ ಇರುವುದಿಲ್ಲ. ಒಂದಲ್ಲ ಒಂದು ದಿನ ಶೀಘ್ರದಲ್ಲಿಯೇ ಸಾಂಬಾಜಿಯು ದಖ್ಖನ್ನಿನ ಸರ್ವಾಧಿಕಾರಿಯಾಗಬಹುದು. ಹೇಗೇ ಆಗಲಿ ಒಂದು ಬಾರಿ ನಮ್ಮ ದರ್ಬಾರಿನಲ್ಲಿ ಖುದ್ದಾಗಿ ಅವನಿಗೆ ಗೌರವವನ್ನು ಕೊಡಬೇಕೆಂದು ನಮ್ಮ ಆಕಾಂಕ್ಷೆಯಾಗಿರುತ್ತದೆ. ನೀನು ಸಾಂಬಾಜಿಗೆ ಸರಿಯಾದ ತಿಳಿವಳಿಕೆ ಹೇಳಿ ಗೌರವದಿಂದ ಅವನನ್ನು ನಮ್ಮ ದರ್ಬಾರಿಗೆ ಕಳಿಸಿಕೊಡತಕ್ಕದ್ದು. ದೆಹಲಿಯ ದರ್ಬಾರಿನಲ್ಲಿ ಸಾಂಬಾಜಿಗೆ ದೊರೆಯುವ ಮಾನ ಮನ್ನಣೆಗಳನ್ನೂ ಗೌರವವನ್ನೂ ಕೇಳಿ ಶಿವಾಜಿಯು ತಾನಾಗಿಯೇ ನಾಚುವಂತಾಗುವನೆಂದು ನಮ್ಮ ಭರವಸೆಯಿದೆ. ಬಹುದಿವಸಗಳಿಂದ ಅಪೇಕ್ಷಿಸಿದ ಮಹಾರಾಷ್ಟ್ರದ ಸ್ನೇಹವನ್ನು ಇಂದು ದೇವರು ತಾನಾಗಿಯೇ ಅನುಗ್ರಹಿಸಿದ್ದಾನೆ.

ಬಾದಶಹನು ಈ ಮೇರೆಗೆ ಪತ್ರವನ್ನು ಬರೆಯಿಸಿ ರಾಜದೂತರ ಕೈಯಲ್ಲಿ ಕೊಟ್ಟು ಔರಂಗಾಬಾದಿಗೆ ಕಳುಹಿಸಿಕೊಟ್ಟನು.

ಔರಂಗಾಬಾದಿನಲ್ಲಿ ದಿಲೀರ್‌ಖಾನನಿಗೆ ಬಾದಶಹರ ಪತ್ರವು ಕೈಸೇರಿತು. ಅವನು ಆ ಪತ್ರವನ್ನು ಆಮೂಲಾಗ್ರವಾಗಿ ಓದಿನೋಡಿಕೊಂಡು ಮೊದಲು ಹರ್ಷಿತನಾದನು. ಉತ್ತರಕ್ಷಣದಲ್ಲಿಯೇ ಅವನ ಮನಸ್ಸಿನಲ್ಲಿ ಒಂದು ಶಂಕೆ

ಹುಟ್ಟಿತು. ಬಾದಶಹನು ಸಾಂಬಾಜಿಯನ್ನು ಇಸ್ಲಾಂ ಮತಕ್ಕೆ ಸೇರಿಸುವ ಪರಮೋದ್ದೇಶ್ಯವನ್ನು ಇಟ್ಟುಕೊಂಡಿರುವಂತಿದೆ. ದೇವರ ಪ್ರೇರಣೆಯಿಂದ ಹಾಗಾದರೆ ಎಷ್ಟೋ ಒಳ್ಳೆಯದು. ಆದರೆ ಶುದ್ಧಾಂಗವಾಗಿ ಅದು ಅಸಂಭವವೇ ಆಗಬಹುದು. ಇಷ್ಟು ವಿವೇಚನೆಯು ಬಾದಶಹರಿಗೆ ಬಾರದೇಹೋದದು ದುರದೃಷ್ಟವೆಂದು ಹೇಳಬೇಕು. ಸಾಂಬಾಜಿಯು ಅಂಥಾ ವೀರ ಧರ್ಮಾಭಿಮಾನಿಯೇನೂ ಅಲ್ಲ. ಅವನ ಆಚಾರ ವ್ಯವಹಾರಗಳಲ್ಲಿ ಅಂತಹ ಬೇರ್ಪಡೆಯೂ ಇಲ್ಲ. ರಾಜಮನೆತನದ ಮೊಗಲ್ ರಾಜಕುಮಾರಿಯೊಬ್ಬಳು ಒಲಿದು ಬಂದರೆ ಅವನು ಶಾಸ್ತ್ರೋಕ್ತವಾಗಿ ಮದುವೆಯಾಗಲು ಸಿದ್ಧನಾಗಿರಬಹುದು. ಆದರೆ ಮಹಾರಾಷ್ಟ್ರದ ಕಣ್ಣಿನಲ್ಲಿ ಸಣ್ಣವನಾಗಿ ಕಾಣುವುದು ಅವನಿಗೆ ಪ್ರಿಯವಾಗಲಾರದು. ಅಂಥಾ ಮಾತುಗಳು ಕೂಡಾ ಅಪ್ರಿಯವಾಗಬಹುದು. ಏನು ಮಾಡಲಾದೀತು ? ಬಾದಶಹರ ಮಾತಿಗೆ ಪ್ರತಿಹೇಳಿ ಜಯಿಸಬಲ್ಲವರಾರು ?

ಹೇಗಾದರೂ ಅವರ ಆಜ್ಞೆಯನ್ನು ಪಾಲನೆಮಾಡುವುದು ನನ್ನ ಕರ್ತವ್ಯ ಎಂದುಕೊಂಡನು. ದಿಲೀರ್‌ಖಾನನು ಆ ದಿನವೇ ಸಾಂಬಾಜಿಯ ಅರಮನೆಗೆ ತಾನೇ ಹೋಗಿ ಭೇಟಿಮಾಡಿದನು. ಸಾಂಬಾಜಿಯು ದಿಲೀರ್‌ಖಾನನನ್ನು ಅತ್ಯಾದರದಿಂದ ಎದುರುಗೊಂಡು ದಿವಾನ್‌ಖಾನೆಯಲ್ಲಿ ಕೂರಿಸಿ ಗೌರವದಿಂದ ಮಾತುಕತೆಗಳಿಗೆ ಆರಂಭಿಸಿದನು.

ದಿಲೀರ್‌ಖಾನನು ಬಾದಶಹರು ಸಾಂಬಾಜಿಯ ವಿಚಾರದಲ್ಲಿ ಅತ್ಯಂತ ಪ್ರಸನ್ನರಾಗಿದ್ದಾರೆಂದು ತಿಳಿಸಿದನು.

ಸಾಂಬಾಜಿಯು "ಅದೆಲ್ಲಾ ನಿಮ್ಮ ಸ್ನೇಹದ ಫಲ. ನೀವು ನನ್ನ ನಿಜವಾದ ಯೋಗ್ಯತೆಗಿಂತಲೂ ಮಿತಿಮೀರಿ ಬಾದಶಹರಲ್ಲಿ ನನ್ನ ವಿಚಾರವಾಗಿ ಶಿಫಾರ್ಸುಮಾಡುತ್ತಿದ್ದೀರಿ. ಅದು ನನಗೆ ಭಯವನ್ನುಂಟುಮಾಡುತ್ತಿದೆ. ಅತಿ ಸ್ನೇಹವೆಂಬುದು ಯಾರಿಗಾದರೂ ಶಂಕೆಯನ್ನುಂಟುಮಾಡುತ್ತದೆ" ಎಂದು ಹೇಳಿದನು.

ಬಾದಶಹರ ಪತ್ರವನ್ನು ಖಾನನು ಕಿಸೆಯಿಂದ ತೆಗೆದು ಸಾಂಬಾಜಿಯ ಕೈಗೆ ಕೊಟ್ಟು, ನೋಡಿ ಯುವರಾಜರೆ ! ಬಾದಶಹರು ಖುದ್ದಾಗಿ ಈ ಪತ್ರವನ್ನು ಬರೆಯಿಸಿದ್ದಾರೆ. ಇದು ನನ್ನ ಹೆಸರಿಗೆ ಬರೆದ ಪತ್ರದಂತಿದ್ದರೂ ನಿಜವಾಗಿಯೂ ಬಾದಶಹರು ನಿಮಗೇ ಬರೆಸಿರುವ ಪತ್ರ ಎಂದನು.

ಸಾಂಬಾಜಿಯು ಆ ಪತ್ರವನ್ನು ಆದರದಿಂದ ಕೈಗೆ ತೆಗೆದುಕೊಂಡು ಓದಿದನು, ಮತ್ತೊಮ್ಮೆ ಓದಿಕೊಂಡನು, ಕ್ಷಣಹೊತ್ತು ಆಲೋಚನೆ ಮಾಡಿದನು. ಆ ಪತ್ರವನ್ನು ಗೌರವದಿಂದ ದಿಲೀರ್‌ಖಾನನ ಕೈಗೆ ಕೊಟ್ಟು ಖಾನ್ ಸಾಹೇಬರೇ ಇದಕ್ಕಿಂತಲೂ ಗೌರವವು ಮತ್ತಾವುದಿದೆ. ನನಗೂ ಒಂದು ಬಾರಿ ದೆಹಲಿಯ ದರ್ಬಾರಿಗೆ ಹೋಗಿಬರಬೇಕೆಂದು ಆಶೆಯುಂಟು. ಬಾಲ್ಯದಲ್ಲಿ ಶಿವಾಜಿ ಮಹಾರಾಜರ ಜೊತೆಯಲ್ಲಿ ಬಾದಶಹರ ದರ್ಬಾರಿಗೆ ಹೋಗಿದ್ದ ನೆನಪಿದೆ, ಅದು ಬಹಳ ಕಹಿನೆನಪು ಎಂದುಕೊಳ್ಳಿ. ನಮ್ಮ ಮಹಾರಾಜರು ಅತ್ಯಂತ ಶೌರ್ಯವನ್ನು ತೋರಿದರು. ದರ್ಬಾರಿನಲ್ಲಿ ಬಾದಶಹರನ್ನು ಅಪಮಾನಗೊಳಿಸಿದಂತೆಯೇ ಮಾಡಿಬಿಟ್ಟರು. ಅದನ್ನು ನೆನೆದುಕೊಂಡರೆ ನನ್ನ ಹೃದಯವು ಈಗಲೂ ನಡುಗುತ್ತದೆ. ಮತ್ತೊಂದು ಬಾರಿ ಯಾವಾಗಲಾದರೂ ಆ ಕತೆಯನ್ನು ನಿಮಗೆ ವಿವರವಾಗಿ ಹೇಳುತ್ತೇನೆ. ಬಾದಶಹರ ದರ್ಬಾರಿನಲ್ಲಿ ಎಲ್ಲ ನರಪತಿಗಳಂತೆ ಮುಜರೆಮಾಡಲು ನಾನು ಸಂತೋಷದಿಂದ ಸಿದ್ಧನಾಗಿದ್ದೇನೆ. ಈ ಬಗ್ಗೆ ನನ್ನದು ಒಂದೇ ಒಂದು ಕೋರಿಕೆಯಿದೆ. ದೆಹಲಿಗೆ ನೀವೇ ನನ್ನನ್ನು ಕರೆದೊಯ್ಯಬೇಕು. ನಾವಿಬ್ಬರೂ ಒಟ್ಟಿಗೆ ಹೋದರೆ ಬಲು ಚೆಂದ, ದರ್ಬಾರಿನಲ್ಲಿ ಬಹುಜನಕ್ಕೆ ನಮ್ಮನ್ನು ಕಂಡರೆ ಅಸಹನೆ. ನಾವಿಬ್ಬರೂ ಒಟ್ಟಿಗೆ ಹೋದರೆ ಅವರ ತಂತ್ರಗಳೇನೂ ನಡೆಯುವುದಿಲ್ಲ. ನಾಳೆಯೇ ನಾನು ದೆಹಲಿಗೆ ಹೊರಡಲು ಸಿದ್ಧ. ನೀವೂ ಹೊರಟುಬಿಡಿ."

ದಿಲೀರ್‌ಖಾನನು "ನೀವು ಹೇಳುವುದೇನೋ ಸಮಂಜಸವಾಗಿದೆ. ನಾನು ಬಾದಶಹರ ಅಪ್ಪಣೆಯಿಲ್ಲದೆ ಏಕಾಏಕಿ ದೆಹಲಿಗೆ ಹೋಗಕೂಡದು, ಅದು ದರ್ಬಾರಿನ ಪದ್ಧತಿ, ಆದರೂ ಯೋಚನೆಮಾಡುತ್ತೇನೆ, ನೀವು ಹೇಳುವ ಮಾತು ನ್ಯಾಯುವಾಗಿದೆ, ವಿಹಿತವಾಗಿದೆ. ಅಲ್ಲಿ ಯಾರಾದರೂ ನಿಮ್ಮ ಮೇಲೆ ಅಪಾಯವನ್ನು ತಂದೊಡ್ಡಬಹುದೆಂಬ ಶಂಕೆ ನನಗೂ ಇದೆ. ಎರಡು ಮೂರು ದಿನಗಳಲ್ಲಿ ಯೋಚನೆ ಮಾಡಿ ಇತ್ಯರ್ಥಪಡಿಸುತ್ತೇನೆ" ಎಂದು ಹೇಳಿದನು.

ಸಾಂಬಾಜಿಯು "ಸೇನಾಧಿಪತಿಗಳೇ, ಎಲ್ಲವೂ ನಿಮ್ಮ ಜವಾಬ್ದಾರಿ, ಆಮೇಲೆ ನನ್ನ ಮೇಲೆ ತಪ್ಪು ಹಾಕಬೇಡಿರಿ, ನೀವು ಹೇಳಿದಂತೆ ನಾನು, ನೀವು ಹೆಜ್ಜೆಯನ್ನು ಮುಂದಿಟ್ಟರೆ ನಾನು ಹಿಂದೆಯೇ ಇದ್ದೇನೆ" ಎಂದು ಹೇಳಿ ದಿಲೀರ್‌ಖಾನನನ್ನು ಅವನ ಅರಮನೆಗೆ ಕಳಿಸಿಕೊಟ್ಟನು.

## ೧೫

ಸಾಂಬಾಜಿಯು ಗಂಭೀರವಾದ ಆಲೋಚನೆಯಲ್ಲಿ ಮುಳುಗಿದನು. ಅವನಿಗೆ ದಿಕ್ಕು ತೋಚದಂತಾಯಿತು. ಯೋಗೀಶ್ವರನು ಹೇಳಿದ ಮಾತುಗಳೆಲ್ಲಾ ನಿಜವಾಗುತ್ತಿವೆಯೆಂದು ಕಂಡಿತು. ರಘುನಾಥರಾಯನೊಡನೆ ಆಲೋಚನೆ ಮಾಡತೊಡಗಿದನು.

"ರಘುನಾಥರಾಯ, ಬಾದಶಹನು ನನ್ನನ್ನು ಡಿಲ್ಲಿಗೆ ಬರಬೇಕೆಂದು ಬರೆದು ಕಳುಹಿಸಿದ್ದಾನೆ" ಎಂದು ಮಾತಿಗೆ ಮೊದಲು ಮಾಡಿದನು.

ರಘುನಾಥರಾಯನು "ಪ್ರಭು, ಈಗ ನಿಮ್ಮನ್ನು ದೆಹಲಿಗೆ ಕರೆಸಿಕೊಳ್ಳುವಂಥಾ ಕಾರಣವೇನಿದೆ? ಈ ಸಮಯವನ್ನು ಉಪಯೋಗಿಸಿಕೊಂಡು ಶಿವಾಜಿ ಮಹಾರಾಜರ ಮೇಲೆ ನಿಮ್ಮನ್ನು ಎತ್ತಿಕಟ್ಟುವ ಆಲೋಚನೆ ಬಾದಶಹನಿಗೆ ಹೊಳೆದಿರಬೇಕು. ಅಂಥಾ ಕಾರ್ಯಕ್ಕೆ ನಾವು ಸ್ವಲ್ಪವೂ ಮನಗೊಡಕೂಡದು. ಶಿವಾಜಿ ಮಹಾರಾಜರಿಗೆ ಪ್ರತಿಕೂಲಾಚರಣೆ ಮಾಡುವಂಥಾ ಮಹಾಪಾತಕಕ್ಕೆ ಯಾವ ಹಿಂದುವೂ ಕೈ ಹಾಕಲಾರ. ಆದರಲ್ಲಿಯೂ ಯುವರಾಜರಾದ ನೀವು ಅಂಥಾ ಕಾರ್ಯವನ್ನು ಮನದಲ್ಲಾದರೂ ಎಣಿಸುವುದು ಹೇಗೆ? ಮತ್ತೊಂದು ವಿಧವಾಗಿ ಆಲೋಚನೆ ಮಾಡಿದರೆ ಆ ಔರಂಗಜೇಬ್ ಬಾದಶಹನು ನಿಮ್ಮ ಮೇಲೆಯೇ ಅಘಾತವನ್ನುಂಟುಮಾಡಬಹುದು. ಹಿಂದೆ ಶಿವಾಜಿ ಪ್ರಭುಗಳಿಗೆ ಅವನು ಎಸಗಿದ ಅಪಚಾರವು ಲೋಕಕ್ಕೆಲ್ಲಾ ತಿಳಿದೇ ಇದೆ. ಔರಂಗಜೇಬನು ಅತ್ಯಂತ ಕ್ರೂರಿಯಾದ ಮನುಷ್ಯ. ಅವನಿಗೆ ಹೃದಯವೆಂಬುದೇ ಇಲ್ಲ. ಹಿಂದುಗಳಲ್ಲಿ ಪರಾಕ್ರಮಶಾಲಿಗಳನ್ನು ನೋಡಿ ಸಹಿಸನು. ದೆಹಲಿಗೆ ಹೋದರೆ ನಿಮಗೆ ಅಪಾಯವು ಸಿದ್ಧ" ಎಂದು ಹೇಳಿದನು.

ಸಾಂಬಾಜಿಯು "ನಾನೂ ಅದನ್ನೇ ಆಲೋಚನೆ ಮಾಡುತ್ತಿದ್ದೇನೆ. ಈ ಕಷ್ಟ ಸಮಯದಲ್ಲಿ ದೇವರು ನನ್ನನ್ನೂ ಇಲ್ಲಿಗೆ ತಂದು ಸೇರಿಸಿದ್ದಾನೆ. ಇಂತಹ ವಿಷಯಗಳಲ್ಲಿ ಆಲೋಚನೆ ಮಾಡಬೇಕಾದರೆ ಒಬ್ಬರಿಗೆ ಇಬ್ಬರು ಲೇಸು. ದಿಲೇರ್‌ಖಾನನ ವಿಷಯದಲ್ಲಿ ನನಗೆ ಎಳ್ಳಷ್ಟೂ ಸಂಶಯವಿಲ್ಲ. ಅವನು ನಿಷ್ಕಪಟಿ. ಒಳ್ಳೆಯ ಸ್ನೇಹಿತ. ನಿನ್ನೆಯ ದಿನ ಬಾದಶಹರ ಪತ್ರವನ್ನು ಮುಚ್ಚುಮರೆಯಿಲ್ಲದೆ ನನಗೆ ತೋರಿಸಿದ. ನಾನಾಗಿಯೇ ದೆಹಲಿಗೆ

ಹೋಗಲು ಒಪ್ಪಿದೆ. ಅವನದೇನು ತಪ್ಪಿದೆ? ನಾನು ದಿಲೀರ್‌ಖಾನನ ಸಂಮುಖಕ್ಕೆ ಹೋಗಿ "ದೆಹಲಿಗೆ ಹೋಗಲು ನನ್ನ ಮನಸ್ಸು ಹಿಂತೆಗೆಯುತ್ತಿದೆ. ನಾನು ದೆಹಲಿಗೆ ಹೋಗುವುದಿಲ್ಲ. ನಿಮ್ಮ ಇಷ್ಟವಿಲ್ಲದಿದ್ದರೆ ಇಲ್ಲಿಯೂ ಇರುವುದಿಲ್ಲ" ಎಂದು ಹೇಳಿ ಬಂದುಬಿಡುತ್ತೇನೆ."

ರಘುನಾಥರಾಯನು "ಅದೇನೋ ಸರಿ, ಇಲ್ಲಿಂದ ಹೊರಟು ನಾವೆಲ್ಲಿಗೆ ಹೋಗುವುದು? ಬಿಜಾಪುರಕ್ಕೆ ಹೋಗುವ ಆಲೋಚನೆ ಮಾಡಿದ್ದೀರೇನು?

"ಇಲ್ಲ ರಘುನಾಥರಾಯ. ಅದೊಂದು ಆಲೋಚನೆಗಳೂ ನನಗೆ ಸರಿದೋರುತ್ತಿಲ್ಲ. ಯೋಗೀಶ್ವರನು ಬಂದು ದರ್ಶನವಿತ್ತು 'ನನ್ನೊಡನೆ ಬಾ, ಶಿವಪ್ರಭುವಿನ ಸಮೀಪಕ್ಕೆ ಕರೆದುಕೊಂಡು ಹೋಗುತ್ತೇನೆ' ಎಂದು ಹೇಳಿದ. ಒಣಪ್ರತಿಷ್ಠೆಯಿಂದ ನಾನದಕ್ಕೆ ಒಪ್ಪಲಿಲ್ಲ. ಅಂದಿನಿಂದ ನನ್ನ ಮನಸ್ಸಿನಲ್ಲಿ ಭಯ-ಶಂಕೆಗಳು ಬರುತ್ತಲೇ ಇವೆ. ಈಗ ಅದು ಪ್ರತ್ಯೇಕವಾಗಿ ತಾರ್ಕ್ಯಾಣೆಗೆ ಬಂದಂತಾಗಿದೆ. ಆ ಯೋಗೀಶ್ವರನು ಸಮರ್ಥ ರಾಮದಾಸರ ಶಿಷ್ಯನೆಂದು ಹೇಳಿದ. ಅರ್ಥಾತ್ ನಾನು ಪಿತೃ ಸನ್ನಿಧಾನಕ್ಕೆ ಹೋಗಬೇಕೆಂಬುದೇ ಗುರುವಿನ ಆಜ್ಞೆ. ನಾನು ಮಹಾರಾಜರ ಸನ್ನಿಧಾನಕ್ಕೆ ಹೋಗಲು ಅಂಜುವುದಿಲ್ಲ. ಆ ಮಹಾಪ್ರಭುವು ಎಂತಹ ಅಪರಾಧವನ್ನಾದರೂ ಮನ್ನಿಸುತ್ತಾನೆ. ಅಥವಾ ಪುನಃ ನನಗೆ ಶಿಕ್ಷೆಯನ್ನು ವಿಧಿಸಿದರೂ ಸಂತೋಷದಿಂದ ಅನುಭವಿಸುತ್ತೇನೆ. ನಾನು ಶಿವಪ್ರಭುವಿನ ಸನ್ನಿಧಿಗೆ ಹಿಂತಿರುಗಿ ಹೋಗಲು ನಿಶ್ಚಯ ಮಾಡಿದ್ದೇನೆ. ಇನ್ನು ತಡಮಾಡಲಾಗದು. ಇಂದೇ ಹೋಗಿ ದಿಲೀರ್‌ಖಾನನಿಗೆ ಹೇಳಿ ಅಪ್ಪಣೆ ಪಡೆದು ಬಂದುಬಿಡುತ್ತೇನೆ."

"ಯುವರಾಜರೇ, ಈ ಸಮಯದಲ್ಲಿ ದಿಲೀರ್‌ಖಾನನೊಡನೆ ಹೇಳಿ ಹೋಗುವುದು ಅಷ್ಟು ಉಚಿತವೆಂದು ನನಗೆ ತೋರುವುದಿಲ್ಲ. ಎಷ್ಟಾದರೂ ದಿಲೀರ್‌ಖಾನನು ಮುಸಲ್ಮಾನ. ಈ ಮುಸಲ್ಮಾನರೆಲ್ಲಾ ಒಂದೆ. ದಿಲೀರ್‌ಖಾನನು ಗುಣಶಾಲಿಯೆಂದು ನೀವು ಹೇಳುತ್ತೀರಿ. ಇದ್ದರೂ ಇರಬಹುದು. ಆದರೆ ಈಗ ಅವನು ಅಸ್ವತಂತ್ರ. ಬಾದಷಹನ ಆಜ್ಞಾಬದ್ಧ. ನೀವು ಮಹಾರಾಜರಲ್ಲಿಗೆ ಹೋಗುವುದನ್ನು ಅವನು ನಿರೋಧಿಸಿದರೂ ನಿರೋಧಿಸಬಹುದು. ಬಲಪ್ರಯೋಗ ಮಾಡಿದರೂ ಮಾಡಬಹುದು. ಈ ಸಮಯದಲ್ಲಿ ಅವನಿಗೆ ಅರಿಯದಂತೆ ನಾವು ಈ ಸ್ಥಳವನ್ನು ಬಿಟ್ಟು ಹೋಗುವುದೇ ಲೇಸು.

ನಮ್ಮ ರಾಜ್ಯದ ಗಡಿಯೊಳಗೆ ಹೋದ ಮೇಲೆ ನಾವು ನಿರ್ಭಯರಾಗುತ್ತೇವೆ. ಅಲ್ಲಿಂದ ದಿಲೀರ್‌ಖಾನನಿಗೆ ಸ್ನೇಹಪತ್ರ ಬರೆದು ಕಳುಹಿಸುವುದು ಮೇಲು" ಎಂದು ಹೇಳಿದನು.

ಸಾಂಬಾಜಿಯು ದೀರ್ಘವಾದ ನಿಟ್ಟುಸಿರು ಬಿಟ್ಟು ಹೇಳಿದನು. "ರಘುನಾಥ ರಾಯ! ರಾಜರ ಕುಲದಲ್ಲಿ ಹುಟ್ಟುವುದು ಅತಿಕಷ್ಟ. ದೊಡ್ಡವರಾಗಿ ಬಾಳುವುದು ಮಹಾಪ್ರಯಾಸ. ಸ್ನೇಹ, ಮಮತೆ, ದಯಾ, ದಾಕ್ಷಿಣ್ಯಗಳಿಗೆ ಎಂದೂ ಅವಕಾಶವಿಲ್ಲ. ಸಾಮಾನ್ಯ ಮನುಷ್ಯನಾಗಿ ಹುಟ್ಟಿ ಹಾಗೆಯೇ ಸಾಮಾನ್ಯ ಜೀವನವನ್ನು ಸಾಗಿಸುವವನ ಬಾಳು ಪರಮಸುಖ. ನಾನಾಗಿ ಪಿತೃವಿನ ಸಾನ್ನಿಧ್ಯವನ್ನು ತ್ಯಜಿಸಿ ಇಲ್ಲಿಗೆ ಬಂದೆ. ದಿಲೀರ್‌ಖಾನನು ಆಶ್ರಯ ವಿತ್ತ; ಔದಾರ್ಯದಿಂದ ಗೌರವಿಸಿದ; ಬೇಕಾದಷ್ಟು ಐಶ್ವರ್ಯವನ್ನು ನನಗಿತ್ತ; ಅಂಥವನಲ್ಲಿ ಸಂದೇಹಪಡುತ್ತಾ ಕಳ್ಳನಂತೆ ಹೇಳದೇ ಹೋಗುತ್ತಿದ್ದೇನೆ. ಇದು ಶೂರನ ಲಕ್ಷಣವೇ" ಎಂದು ಹೇಳಿದನು.

ಆ ದಿನ ರಾತ್ರಿಯೇ ರಘುನಾಥರಾಯನೂ ಸಾಂಬಾಜಿಯೂ ಇಬ್ಬರೇ ವೇಷ ಮರೆಸಿಕೊಂಡು ಕೋಟೆಯ ಬಾಗಿಲನ್ನು ದಾಟಿ ಹೊರಟುಹೋದರು.

ಸಾಂಬಾಜಿಯು ತನ್ನ ನಿವಾಸ ಸ್ಥಾನವನ್ನು ಬಿಟ್ಟು ಹೋಗುವಾಗ ದಿಲೀರ್‌ಖಾನನಿಗೆ ಒಂದು ಪತ್ರವನ್ನು ಬರೆದಿಟ್ಟು ಹೊರಟುಹೋದನು. ಆ ಪತ್ರವು ಈ ರೀತಿಯಾಗಿದ್ದಿತು.

"ಪ್ರಿಯ ಸ್ನೇಹಿತನಾದ ದಿಲೀರ್‌ಖಾನನೇ! ನಾನು ಅತ್ಯಂತ ದುಃಖ ದಿಂದ ನಿನ್ನನ್ನು ಅಗಲಿ ಹೊರಟುಹೋಗುತ್ತಿದ್ದೇನೆ. ಈ ಲೋಕದಲ್ಲಿ ನಿನ್ನಂಥಾ ಪರಮ ಮಿತ್ರನೂ ಬಂಧುವೂ ನನಗಾರೂ ಇಲ್ಲ. ನಾನು ನಮ್ಮ ತಂದೆ ಶಿವಾಜಿ ಮಹಾರಾಜರಿಂದ ತಿರಸ್ಕೃತನಾಗಿ ಬಂದಾಗ ನೀನು ನನಗೆ ಗೌರವಯುತವಾದ ಆಶ್ರಯವಿತ್ತ ಬಂಧು. ಅಂದು ನನ್ನನ್ನು ಮಹಾರಾಜನಿಗಿಂತಲೂ ಅತಿಶಯ ವಾಗಿ ಗೌರವಿಸಿದೆ, ನಿನ್ನ ರಾಜಧಾನಿಯಲ್ಲಿ ಉನ್ನತಾಧಿಕಾರವನ್ನು ನನಗೆ ಕೊಡಿಸಿದೆ. ಬೇಕಾದಷ್ಟು ಸಂಪತ್ತನ್ನು ನನಗಿತ್ತು ಆದರಿಸಿದೆ. ನಾನು ಈಗ ಕಳ್ಳನಂತೆ, ಅಪರಾಧಿಯಂತೆ, ನಿನ್ನೊಡನೆ ಹೇಳದೇ ನಿನ್ನ ಪ್ಪಣೆಯನ್ನು ಪಡೆಯದೇ ಹೊರಟುಹೋಗುತ್ತಿದ್ದೇನೆ. ಇನ್ನು ಮುಂದೆ ನೀನು ನನ್ನನ್ನು ನಂಬುವೆಯಾ? ನನ್ನ ವಿಚಾರವಾಗಿ ನಿನ್ನ ಮನಸ್ಸಿನಲ್ಲಿ ಎಳ್ಳಷ್ಟಾದರೂ

ಗೌರವವು ಉಳಿದೀತೇ ? ಸರ್ವಥಾ ಇಲ್ಲ. ನಾನದನ್ನು ಅಪೇಕ್ಷಿಸಲೂಬಾರದು. 'ನಿನ್ನ ಭವ್ಯ ಮಂದಿರದಲ್ಲಿ ಕಾಡಿನಿಂದ ಓಡಿಬಂದು ಒಂದು ಕಪೋತಿಯು ಆಶ್ರಯ ಪಡೆದಿತ್ತು, ಅದು ಹಾರಿಹೋಯಿತು' ಎಂದು ಭಾವಿಸಿಕೋ. ನೀನು ನನ್ನ ವಿಚಾರವಾಗಿ ಅದಕ್ಕಿಂತಲೂ ಹೆಚ್ಚಿನ ಭಾವನೆಯನ್ನು ಹೇಗೆ ತಾನೆ ಮಾಡಬಲ್ಲೆ.

ಆದಾಗ್ಯೂ ನಿನ್ನನ್ನು ಅಗಲಿಹೋಗಲು ನನ್ನ ಮನವು ಪರಿತಪಿಸುತ್ತಿದೆ. ನಾನೇಕೆ ಹೊರಟುಹೋಗುತ್ತಿದ್ದೇನೆಂಬುದನ್ನು ನಿನಗೆ ತಿಳಿಸಲೇಬೇಕು. ಬಾದಷಹನು ನನ್ನನ್ನು ದೆಹಲಿಗೆ ಕಳುಹಿಸಬೇಕೆಂದು ಪತ್ರ ಬರೆಸಿದ್ದಾನೆ. ಬಾದಷಹನ ಅಭಿಮಾನ-ಅನುಗ್ರಹಗಳ ಬಗ್ಗೆ ನನಗೆ ಬಾಲ್ಯದ ನೆನಪು ಬಲ ವಾಗಿರುತ್ತದೆ. ಅವನೇಕೆ ನಮ್ಮ ಮೇಲೆ ಅಕಾರಣವಾಗಿ ಅನುಗ್ರಹ ಮಾಡು ತ್ತಾನೆ ? ನಾನೊಬ್ಬ ಶೂರನೆಂದೇ ? ಛೇ ಛೇ. ಬಾದಷಹನಿಂದ ಗೌರವ ಪಡೆಯುವಂಥಾ ಶೂರನು ನಾನಲ್ಲ. ಬಾದಷಹನ ಪರಮ ಗೌರವಕ್ಕಾಗಲೀ, ಪರಮ ವಿರೋಧಕ್ಕಾಗಲೀ ಅರ್ಹನಾದವನು ಹಿಂದುಗಳಲ್ಲಿ ಯಾವನಾದರೊಬ್ಬ ಇದ್ದರೆ ಅದು ಶಿವಾಜಿ ಮಹಾರಾಜನೊಬ್ಬನೇ. ಮತ್ತಾವನಿಗೂ ಬಾದಷಹನ ಮನಸ್ಸಿನಲ್ಲಿ ಅಂಥಾ ಸ್ಥಾನವಿಲ್ಲ. ಅದರಿಂದ ನಾನು ಬಾದಷಹನ ದರಬಾರಿಗೆ ಹೋಗಿ ಗೌರವವನ್ನು ಪಡೆಯಲು ಅರ್ಹನಲ್ಲ. ಬಾದಷಹನ ಪತ್ರದಲ್ಲಿ ಸಾಂಬಾಜಿಯು ತಾನಾಗಿಯೇ ಇಸ್ಲಾಂ ಧರ್ಮವನ್ನು ಪರಿಗ್ರಹಿಸಬಹುದು ಎಂಬ ನಿಷಾಣೆಯಿದೆ. ನಾನು ದೆಹಲಿಗೆ ಹೋಗುವುದಕ್ಕೂ ಇಸ್ಲಾಂ ಧರ್ಮವನ್ನು ಸ್ವೀಕರಿಸುವುದಕ್ಕೂ ಏನೋ ಪ್ರಬಲವಾದ ಸಂಬಂಧವಿರುವಂತೆ ನನಗೆ ತೋರಿ ಬಂದಿದೆ. ಆದುದರಿಂದಲೇ ನಾನು ದೆಹಲಿಗೆ ಹೋಗುವುದನ್ನು ಒಪ್ಪುವುದಿಲ್ಲ. ನೀನು ಬಾದಷಹರ ಆಜ್ಞೆಯಂತೆ ನನ್ನನ್ನು ದೆಹಲಿಗೆ ಕಳುಹಿಸಲು ಬದ್ಧನಾಗಿ ದ್ದೀಯೇ. ಆಜ್ಞಾಪಾಲನೆ ಮಾಡದಿದ್ದರೆ ನಿನಗೆ ಸ್ವಾಮಿದ್ರೋಹವು ಬರುತ್ತದೆ. ಆಜ್ಞೆಯನ್ನು ಪಾಲಿಸಲಿಕ್ಕೆ ಹೊರಟರೆ ಪುತ್ರದ್ರೋಹವು ಒದಗಿಬರುತ್ತದೆ. ಈ ಉಭಯ ಸಂಕಟಕ್ಕೆ ನಿನ್ನನ್ನು ಗುರಿಪಡಿಸಲು ಇಷ್ಟವಿಲ್ಲದೆ ಇಲ್ಲಿಂದ ನಾನು ಹೊರಟುಹೋಗುತ್ತಿದ್ದೇನೆ. ನೀನಿತ್ತ ಸಮಸ್ತ ಐಶ್ವರ್ಯವನ್ನೂ ಇಲ್ಲಿಯೇ ಬಿಟ್ಟುಹೋಗುತ್ತಿದ್ದೇನೆ. ಬಾದಷಹರು ಅನುಗ್ರಹಿಸಿದ ಬಿರುದು ಬಾವಲಿಗಳ ನ್ನೆಲ್ಲಾ ಇಲ್ಲಿಯೇ ಇಟ್ಟು ಹೋಗುತ್ತಿದ್ದೇನೆ. ನಾನಿಲ್ಲಿಂದ ತೆಗೆದುಕೊಂಡು

ಹೋಗುತ್ತಿರುವುದು ಶುದ್ಧವಾದ ಅಪಾರವಾದ ನಿನ್ನ ಸ್ನೇಹದ ನೆನಪನ್ನು ಮಾತ್ರ. ಅದು ಯಾವಾಗಲೂ, ನಮ್ಮಿಬ್ಬರಲ್ಲಿ ಶಾಶ್ವತವಾಗಿರಲಿ.

ಇತಿ ನಿನ್ನ ಪ್ರಿಯ ಸ್ನೇಹಿತ

ಸಾಂಬಾಜಿಯ ಅನಂತ ಪ್ರಣಾಮಗಳು."

ಸಾಂಬಾಜಿಯು ಈ ಪತ್ರವನ್ನು ತನ್ನ ಹಾಸಿಗೆಯ ಮೇಲಿಟ್ಟು ಆ ಪತ್ರದ ಮೇಲೆ ಬಾದಷಹನು ಕಳುಹಿಸಿಕೊಟ್ಟಿದ್ದ ರತ್ನಖಚಿತವಾದ ಹಿಡಿಯುಳ್ಳ ಕತ್ತಿಯನ್ನು ಒರೆಯಿಂದ ತೆಗೆದಿಟ್ಟು ಎರಡು ಕೈಗಳನ್ನೂ ಜೋಡಿಸಿ ಪ್ರಣಾಮ ಮಾಡಿ ಹೊರಟುಹೋದನು.

ಮಾರನೆಯ ದಿನ ಬೆಳಕು ಹರಿಯುತ್ತಲೇ ಸಾಂಬಾಜಿಯ ಅರಮನೆಯ ಪಹರೆಯವರು, ಕಾವಲುಗಾರರು; ಸಾಂಬಾಜಿಯನ್ನು ಕಾಣದೆ ಗಾಬರಿಗೊಂಡರು. ಎಲ್ಲೆಲ್ಲಿಯೂ ಅರಸಿದರು. ಎಲ್ಲೆಲ್ಲಿಯೂ ಕಾಣಲಿಲ್ಲ. ರಘುನಾಥರಾಯನೂ ಇರಲಿಲ್ಲ. ಆ ಪಹರೆಯವರ ಯಜಮಾನನು ಸಾಂಬಾಜಿಯು ಶಯನಗೃಹಕ್ಕೆ ಬಂದು ನೋಡಿದನು. ಮಂಚದ ಮೇಲೆ ಬರೆದಿಟ್ಟ ಪತ್ರವಿದೆ! ತೆರೆದಿಟ್ಟ ಬಿಚ್ಚುಕತ್ತಿಯಿದೆ! ಅದನ್ನು ನೋಡಿ ಓಡಿಹೋಗಿ ದಿಲೀರ್‌ಖಾನನಿಗೆ ಅರಿಕೆ ಮಾಡಿದನು.

"ಹುಜೂರ್! ಯುವರಾಜ ಸಾಂಬಾಜಿಯು ಅರಮನೆಯಲ್ಲಿಲ್ಲ. ಕೋಟೆಯಲ್ಲೆಲ್ಲಾ ಅರಸಿ ಬಂದೆವು. ಎಲ್ಲಿಯೂ ಕಾಣಲಿಲ್ಲ. ಅವರ ಶಯನಗೃಹದಲ್ಲಿ ಹಾಸಿಗೆಯ ಮೇಲೆ ಬರೆದಿಟ್ಟಿರುವ ಪತ್ರವೊಂದಿದೆ. ನಮಗೆ ಗಾಬರಿಯಾಗುತ್ತದೆ" ಎಂದು ತಿಳಿಸಿದನು.

ದಿಲೀರ್‌ಖಾನನು ಮಾತನಾಡದೇ ಸಾಂಬಾಜಿಯಿದ್ದ ಅರಮನೆಗೆ ಬಂದನು. ಶಯನಗೃಹದೊಳಗೆ ಹೋಗಿ ಹಾಸಿಗೆಯ ಮೆಲಿಟ್ಟಿದ್ದ ಪತ್ರವನ್ನೂ ಅದರ ಮೇಲಿದ್ದ ಖಡ್ಗವನ್ನೂ ನೋಡಿ ಗಾಬರಿಗೊಂಡನು. ಖಡ್ಗವನ್ನು ತೆಗೆದಿಟ್ಟು ಪತ್ರವನ್ನು ಕೈಗೆ ತೆಗೆದುಕೊಂಡನು. ಅದು ತನಗೇ ಬರೆಯಲ್ಪಟ್ಟಿದ್ದ ಪತ್ರ. ಸಾಂಬಾಜಿಯು ಸ್ವಹಸ್ತದಿಂದ ಬರೆದಿದ್ದ ಪತ್ರ! ಮಂಚದ ಮೇಲೆಯೇ ಕುಳಿತು ಆ ಪತ್ರವನ್ನು ಓದಿ ನೋಡಿಕೊಂಡನು. ನಿಟ್ಟುಸಿರುಬಿಟ್ಟು ಆಕಾಶದ ಕಡೆಗೆ ನೋಡುತ್ತಾ ಬಹಳಹೊತ್ತು ಸುಮ್ಮನೆ ಕುಳಿತುಬಿಟ್ಟನು. ಕೊನೆಗೆ ತನ್ನಷ್ಟಕ್ಕೆ ತಾನೇ "ಸಾಂಬಾಜೀ ನೀನೇಕೆ ಹೀಗೆ ಮಾಡಿದೆ? ನಿನಗೆ ನನ್ನ ಸ್ನೇಹದಲ್ಲಿ

ನಂಬುಗೆಯಿಲ್ಲವೆ ? ನಿನಗೆ ದಹಲಿಗೆ ಹೋಗಲು ಇಷ್ಟವಿಲ್ಲದಿದ್ದರೆ ಸ್ಪಷ್ಟವಾಗಿ ನನ್ನೊಡನೆ ಹೇಳಬಾರದಿತ್ತೇ ? ನಾನು ಅಷ್ಟೇ ಸ್ಪಷ್ಟವಾಗಿ ಸಾಂಬಾಜಿಯನ್ನು ದೆಹಲಿಗೆ ಕಳುಹಿಸಲಾಗುವುದಿಲ್ಲ" ಎಂದು ಬರೆಸಿ ಕಳುಹಿಸುತ್ತಿದ್ದೆ. ಬಾದಶಹನು ನಮ್ಮನ್ನು ಏನು ತಾನೇ ಮಾಡಬಲ್ಲ ? ನಾವಿಬ್ಬರೂ ಒಂದಾಗಿ ನೆಟೆದು ನಿಂತರೆ ಈ ಭೂಮಂಡಲದಲ್ಲಿ ನಮಗೆ ಎದುರು ಯಾರು ನಿಲ್ಲ ಬಲ್ಲವರು ? " ಎಂದು ಕೊಂಡ.

ದಿಲೇರ್ ಖಾನನ ಕಣ್ಣಿನಿಂದ ಒಂದೇ ಒಂದು ಹನಿ ಕಣ್ಣೀರು ಆ ಪತ್ರದ ಮೇಲೆ ತೊಟ್ಟಿಕ್ಕಿತು. ಆ ಪತ್ರವನ್ನು ಮಡಿಸಿ ಜೋಪಾನವಾಗಿ ಕಿಸೆಯೊಳಗೆ ಇಟ್ಟುಕೊಂಡು ಹಾಸಿಗೆಯ ಮೇಲಿದ್ದ ಕತ್ತಿಯನ್ನು ತೆಗೆದುಕೊಂಡು ತನ್ನ ಅರಮನೆಗೆ ಹೊರಟುಹೋದ. ಆ ಕತ್ತಿಯು ಯಾವಾಗಲೂ ದಿಲೇರ್ ಖಾನನ ಹತ್ತಿರವೇ ಇಡಲ್ಪಟ್ಟಿತ್ತು. ಅದರ ಮೇಲೆ ; ಪ್ರಿಯಬಂಧು ಸಾಂಬಾಜಿ, ಎಂಬ ಅಕ್ಷರಗಳು ಕೆತ್ತಲ್ಪಟ್ಟಿದ್ದವು.

ಸಾಂಬಾಜಿಯೂ ರಘುನಾಥನೂ ನೇರವಾಗಿ ರಾಯಘಡಕ್ಕೆ ಹೋಗಿ ತಲುಪಿದರು. ಪ್ರಾತಃಕಾಲ ಶಿವಾಜಿಯು ಈಶ್ವರಪೂಜೆಯನ್ನು ಪೂರೈಸಿಕೊಂಡು ಹಣೆಯಲ್ಲಿ ಪ್ರಸಾದ ಗಂಧಾಕ್ಷತೆಗಳನ್ನು ಧರಿಸಿಕೊಂಡು ಪೂಜಾಗೃಹದಿಂದ ಹೊರಗೆಬರುವ ಸಮಯಕ್ಕೆ ಸರಿಯಾಗಿ ಸಾಂಬಾಜಿಯು ಶಿವಾಜಿಯ ಪಾದಗಳ ಗೆರಗಿ ಗಟ್ಟಿಯಾಗಿ ಹಿಡಿದುಕೊಂಡು ಕಣ್ಣೀರು ಸುರಿಸಿದನು.

ಶಿವಾಜಿಗೆ ಹಠಾತ್ತನೆ ಸಾಂಬಾಜಿಯನ್ನು ಕಂಡು ಆಶ್ಚರ್ಯವಾಯಿತು. ಆವನು ಸಾಂಬಾಜಿಯ ಎರಡು ತೋಳುಗಳನ್ನೂ ಹಿಡಿದು, ಮೇಲಕ್ಕೆತ್ತಿ ಗಾಢಾಲಿಂಗನ ಮಾಡಿಕೊಂಡನು. ಆ ಪಿತೃ-ಪುತ್ರರ ಸಮಾಗಮವು ಅಮೃತ ವರ್ಷದಂತಿದ್ದಿತು. ಬಹಳ ಹೊತ್ತಾದ ಮೇಲೆ "ಸಾಂಬಾಜಿ ಬಂದೆಯಾ" ಎಂಬ ಮಾತು ಹೊರಟಿತು.

ಸಾಂಬಾಜಿಯು ಗದ್ಗದ ಕಂಠದಿಂದ "ತಂದೆಯೇ ಈ ಅಪ್ರಿಯ ಕುಮಾರ ನನ್ನು ಕ್ಷಮಿಸುವೆಯಾ ? ನಿನ್ನ ಆಶ್ರಯದಲ್ಲಿ ಕಟ್ಟಕಡೆಯ ಸ್ಥಾನವನ್ನಾದರೂ ನನಗೆ ನೀಡುವೆಯಾ ? ಶಿವಪ್ರಭುವಿನ ಮಗನೆಂದು ಹೇಳಿಕೊಳ್ಳುವ ಅಧಿಕಾರ ವಾದರೂ ನನಗಿದೆಯೇ" ಎಂದು ದೈನ್ಯದಿಂದ ಬೇಡಿಕೊಂಡನು.

ಶಿವಾಜಿಯು ಸಾಂಬಾಜಿಯ ಬೆನ್ನು ಸವರುತ್ತಾ ತಲೆಯನ್ನು ಆಘ್ರಾಣಿಸಿ,

"ನಮ್ಮಿಬ್ಬರ ಸಂಬಂಧವನ್ನು ಕರುಣಾಮಯನಾದ ಭಗವಂತನು ಅನುಗ್ರಹಿಸಿದ್ದಾನೆ. ಅಪರಾಧ ಸಹಸ್ರಗಳನ್ನಾದರೂ ಕ್ಷಮಿಸುವಂತಹ ಮಹಿಮಾನ್ವಿತನಾದ ಶ್ರೀ ರಾಮಚಂದ್ರನ ಅನುಗ್ರಹವು ನಮಗಿದೆ. ನಮ್ಮನ್ನು ಬೇರ್ಪಡಿಸಬಲ್ಲವರು ಯಾರು ? ನಾನು ನಿನಗೆ ಕಾರಾಗೃಹ ಶಿಕ್ಷೆಯನ್ನು ವಿಧಿಸಿ, ಪನ್ಹಾಲದಲ್ಲಿ ಬಂಧನದಲ್ಲಿಟ್ಟೆ. ನೀನು ತಪ್ಪಿಸಿಕೊಂಡು ಹೋದರೂ ಎಲ್ಲಿಗೆ ಹೋಗಬಲ್ಲೆ ? ಆ ಮಹಾದೇವನ ರಾಜ್ಯದಲ್ಲಿ ಎಲ್ಲಿದ್ದರೂ ನಾನು ನಿನ್ನ ತಂದೆ, ನೀನು ನನ್ನ ಮಗ. ಈ ರಾಜ್ಯಭಾರವು ಅತ್ಯಂತ ಕಠೋರವಾದ ವ್ರತವೆಂದು ತಿಳಿದುಕೋ. ಲೋಕಾರಾಧನೆಗಾಗಿ ಸ್ನೇಹ, ದಯೆ, ಸೌಖ್ಯಗಳೆಲ್ಲವನ್ನೂ ರಾಜನಾದವನು ತೊರೆಯಬೇಕಾಗುತ್ತದೆ. ಆ ನಿಯಮಕ್ಕೆ ನಾನೂ ಮತ್ತು ನೀನೂ ಬದ್ಧರಾಗಿದ್ದೇವೆ" ಎಂದು ಹೇಳಿ ಸಾಂಬಾಜಿಯನ್ನು ಸಂತೈಸಿದನು.

ಸಾಂಬಾಜಿಯ ಪುನರಾಗಮನವು ಮಹಾರಾಷ್ಟ್ರದಲ್ಲೆಲ್ಲಾ ಸಂತೋಷವನ್ನುಂಟುಮಾಡಿತು. ಮಂತ್ರಿಗಳೂ ಸೇನಾಧಿಪತಿಗಳೂ ಅಧಿಕಾರಿಗಳೂ ಅರಮನೆಗೆ ಬಂದು ಸಾಂಬಾಜಿಯನ್ನು ನೋಡಿ ಹರ್ಷಚಿತ್ತರಾದರು. ಶಿವಾಜಿಯ ದರ್ಬಾರು ಪುನಶ್ಚ ಪ್ರಕಾಶಮಾನವಾದಂತಾಯಿತು. ಸಾಂಬಾಜಿಯು ಶಿವಾಜಿ ಮಹಾರಾಜನಲ್ಲಿ ಪ್ರಾರ್ಥನೆ ಮಾಡಿ ಪನ್ಹಾಲಾದುರ್ಗದಲ್ಲಿಯೇ ಇರುವಂತೆ ತನಗೆ ಅಪ್ಪಣೆ ಕೊಡಬೇಕೆಂದು ಕೇಳಿಕೊಂಡನು. ಶಿವಾಜಿಯ ಅನುಜ್ಞೆಯಂತೆ ಸಾಂಬಾಜಿಯು ಪತ್ನೀಸಮೇತನಾಗಿ ಪನ್ಹಾಲಾದಲ್ಲಿ ಹೋಗಿ ನಿಂತನು. ರಘುನಾಥನೂ ಪುನಃ ಕೋಟೆಯ ಅಧಿಕಾರವನ್ನು ಸ್ವೀಕಾರ ಮಾಡಿದನು.

## ೧೬

ಔರಂಗಾಬಾದಿನ ರಾಜಮಹಲಿನ ದಿವಾನ್‌ಖಾನೆಯಲ್ಲಿ ದಿಲೇರ್‌ಖಾನನು ಇಬ್ಬರು ಸರದಾರರೊಡನೆ ಸಂಭಾಷಣೆ ಮಾಡುತ್ತಾ ಕುಳಿತಿದ್ದನು. ಅವರಿಬ್ಬರೂ ಬಿಜಾಪುರದಿಂದ ಬಂದಿದ್ದ ಷರ್ಜಾಖಾ ಮತ್ತು ಉಮರ್ ಹಯಾತ್ ಖಾನ್.

ದಿಲೇರ್ ಖಾನನು, "ನೀವಿಬ್ಬರೂ ಬಿಜಾಪುರದ ಸುಲ್ತಾನರ ಸೇವೆಯಲ್ಲಿ ಇದ್ದವರು. ನಿಮಗೆ ಗೌರವದ ಸ್ಥಾನಗಳು ದರಬಾರಿನಲ್ಲಿ ಕೊಡಲ್ಪಟ್ಟವೆ. ನೀವೇಕೆ ಆ ದರಬಾರನ್ನು ಬಿಟ್ಟು ಬರಬೇಕೆನ್ನುತ್ತೀರಿ ?" ಎಂದನು.

ಷರ್ಜಾಖಾನನು "ಆ ದರಬಾರಿನಲ್ಲಿ ವಿಚಿತ್ರ ಪರಿಸ್ಥಿತಿಯುಂಟಾಗಿದೆ. ಇನ್ನು ಅದು ಸರಿಹೋಗುವುದೆಂದು ನಮಗೆ ತೋರುವುದಿಲ್ಲ. ಬಹುಬೇಗನೆ ಅವಮಾನಕರವಾದ ಪರಿಸ್ಥಿತಿಯು ಬಂದೊದಗಬಹುದು. ಅಲ್ಲಿದ್ದರೆ ನಮ್ಮ ಭವಿಷ್ಯಕ್ಕೆ ಕತ್ತಲೆ ಕವಿದಂತೆಯೇ ಸರಿ" ಎಂದನು.

"ಬಿಜಾಪುರದ ವಜೀರರಾದ ಸಿದ್ದಿಮಸೂದರವರು ಅತ್ಯಂತ ಪರಾಕ್ರಮ ಶಾಲಿಗಳೆಂದು ಕೇಳಿದ್ದೇನೆ. ಪರಾಕ್ರಮಶಾಲಿಯಾದವನು ಮತ್ತೊಬ್ಬನ ಪರಾಕ್ರಮದ ರಹಸ್ಯವನ್ನು ಅರಿಯಬಲ್ಲ. ಅಲ್ಲಿ ನಿಮಗೆ ವೈಮನಸ್ಯ ಉಂಟಾಗಲು ಕಾರಣವೇನು ?"

"ಸಿದ್ದಿಮಸೂದರವರು ಪರಾಕ್ರಮಶಾಲಿಗಳೆಂದು ಜನರು ಹೇಳಿಕೊಳ್ಳುವು ದನ್ನು ನಾವೂ ಕೇಳಿದ್ದೇವೆ. ಅದೆಂಥಾ ಪರಾಕ್ರಮವೋ ನಮಗೆ ಅರ್ಥವಾಗುವ ಹಾಗಿಲ್ಲ" ಎಂದು ಷರ್ಜಾಖಾನನು ನಗುತ್ತ ಹೇಳಿದನು.

"ನೀವು ಎಲ್ಲ ವಿಚಾರಗಳನ್ನೂ ಒಗಟಿಯಂತೆ ಬಚ್ಚಿಡುತ್ತಿದ್ದೀರಿ. ಅದ ರಿಂದ ವಿಷಯವು ಇತ್ಯರ್ಥವಾಗುವುದಿಲ್ಲ" ಎಂದು ದಿಲೀರ್‌ಖಾನನು ಹೇಳಿದನು.

"ಅಂತಹ ರಹಸ್ಯವೇನೂ ಇಲ್ಲ. ನಾವು ಸುಲ್ತಾನರ ಉಪ್ಪುಂಡವರು. ಅಲ್ಲಿಯ ದೋಷಗಳನ್ನು ಹೇಳಿಕೊಳ್ಳುವುದು ತರವಲ್ಲ. ಬಿಜಾಪುರವು ಸುಲ್ತಾನರ ದರಬಾರಿನ ಅಧಿಕಾರದಲ್ಲಿಲ್ಲ. ಅಧಿಕಾರವೆಲ್ಲವೂ ಜನಾನಾದ ಆಜ್ಞೆಯಂತೆ ನಡೆಯುತ್ತದೆ. ಸುಲ್ತಾನರಿಗೆ ಇನ್ನೂ ಬಾಲ್ಯ. ಬೇಗಂ ಸಾಹೇಬರ ದವಲತ್ತು ನಡೆಯುತ್ತಿದೆ. ಸಿದ್ದಿಮಸೂದರು ವಜೀರರೆಂದು ಹೆಸರಿಟ್ಟುಕೊಂಡು ಕಾರಕೂನ ರಂತೆ ಬೇಗಂ ಸಾಹೇಬರ ಹುಕುಂ ಜಾರಿ ಮಾಡುತ್ತಾರೆ. ಸೈನ್ಯವನ್ನೆಲ್ಲಾ ಒಡಿಸಿಬಿಟ್ಟಿದ್ದಾರೆ. ಜನಾನಾದ ಆಗ್ರಹಕ್ಕೆ ಪಾತ್ರರಾಗಿ ಮರ್ಯಾದಸ್ಥರಾದ ಮಂತ್ರಿಗಳು, ಒಬ್ಬಿಬ್ಬರು ಸೇನಾಧಿಪತಿಗಳು, ಒಳಗೊಳಗೇ ಸತ್ತುಹೋದರು. ಇನ್ನು ನಮ್ಮ ಸರದಿಯು ಯಾವಾಗ ಬರುತ್ತದೋ ನಿರೀಕ್ಷಿಸುತ್ತಾ ಕುಳಿತಿರ ಬೇಕು."

"ಬೇಗಂ ಸಾಹೇಬರವರಾದರೇನು, ವಜೀರರಾದರೇನು, ಅವರಿಗೆ ಶತ್ರು ಗಳ ಭಯವಿಲ್ಲವೋ ? "

"ಅಂಥಾ ಭಯವೇನೂ ಕಾಣುವುದಿಲ್ಲ. ಈ ದಖ್ಖನ್ನಿನಲ್ಲಿ ಶಿವಾಜಿ ಭಯ ಯಾರಿಗೆ ತಾನೇ ತಪ್ಪಿದೆ ? ಶಿವಾಜಿ ಮಹಾರಾಜನು ಸೈನ್ಯ ತೆಗೆದುಕೊಂಡು

ಬಂದರೆ ಬೇಕಾದಷ್ಟು ಹಣವನ್ನು ಕೊಟ್ಟು ಮರ್‍ಯಾದೆ ಮಾಡಿ ಕಳಿಸಿ ಬಿಡುತ್ತಾರೆ."

"ಆ ಶಿವಾಜಿಯು ಒಂದು ಪಕ್ಷ ರಾಜ್ಯವನ್ನೇ ಕಿತ್ತುಕೊಳ್ಳಲು ಸಾಹಸ ಮಾಡಿದರೆ ? "

"ಅವನೇಕೆ ಅಂಥಾ ಸಾಹಸ ಮಾಡುತ್ತಾನೆ ? ಸುಲ್ತಾನರೆಂದು ಜಂಬ ಕೊಚ್ಚಿಕೊಳ್ಳುತ್ತಾ ಅವನು ಹೇಳಿದ ಹಾಗೆ ಕೇಳಿಕೊಂಡು ಬಿದ್ದಿರುವ ರಾಜ್ಯದ ಮೇಲೆ ಅವನೆಂದೂ ಕೈಯೆತ್ತುವುದಿಲ್ಲ. ಅಂಥಾ ಧರ್ಮಾತ್ಮ ಶಿವಾಜಿ. ಗೋಲ್ಕೊಂಡದ ಎದ್ಯಮಾನವನ್ನು ನೋಡಿದರೆ ಸಾಲದೇ ? ಶಿವಾಜಿಯು ಕೇಳಿದಷ್ಟು ಹಣಕೊಟ್ಟು ಸಲಾಂ ಹಾಕುತ್ತಾರೆ, ಮತ್ತೇನು ಬೇಕು ಶಿವಾಜಿಗೆ ? ಆ ಸುಲ್ತಾನರುಗಳಿಂದ ಹಣ ಕಿತ್ತುಕೊಂಡು ಬಂದು ಸೈನ್ಯಗಳನ್ನು ಕಟ್ಟಿ ಬಾದಶಹರ ಎದುರು ನಿಲ್ಲುತ್ತಾನೆ ಆ ಶಿವಾಜಿ. ನೀವಾದರೂ ಏನು ಮಾಡು ತ್ತಿದ್ದೀರಿ? ಕೊನೆಮುಟ್ಟಿಸಿ ಬಿಡುವುದಿಲ್ಲ. ಮತ್ತೆ ಮತ್ತೆ ಅವನನ್ನು ಚಿಗುರಲು ಬಿಡುತ್ತೀರಿ. ವರ್ಷೇ ವರ್ಷೇ ಶಿವಾಜಿಯ ಕಾಟ ನಿಮ್ಮ ರಾಜ್ಯಕ್ಕಾದರೂ ಎಲ್ಲಿ ತಪ್ಪಿದೆ ? ಈ ದೊಡ್ಡ ದೊಡ್ಡ ರಾಜಕೀಯದ ಮಾತು ನಮಗೇಕೆ ? ಅದೆಲ್ಲಾ ನಮ್ಮ ಯೋಗ್ಯತೆಗೆ ಮೀರಿದ ಮಾತುಗಳು. ನಾವಿನ್ನೂ ತರುಣರು. ನಿಮ್ಮ ಸೈನ್ಯದಲ್ಲಿ ನಮ್ಮ ಯೋಗ್ಯತೆಗೆ ತಕ್ಕ ಹುದ್ದೆಗಳನ್ನು ಕೊಟ್ಟರೆ ಸೇವೆ ಮಾಡಿ ನಮ್ಮ ಪರಾಕ್ರಮ ತೋರಿಸುತ್ತೇವೆ."

"ಒಳ್ಳೆಯದು ! ಬಾದಶಹರ ಸೇವೆಯಲ್ಲಿರುವುದು ನಿಮ್ಮಂಥಾ ತರುಣರಿಗೆ ಭೂಷಣವಾದೀತು, ಬಾದಶಹರು ಪರಾಕ್ರಮಿಗಳನ್ನು ಮೆಚ್ಚುತ್ತಾರೆ. ನಮ್ಮ ಸೈನ್ಯದಲ್ಲಿ ನಿಮ್ಮನ್ನು ನೇಮಿಸಿಕೊಳ್ಳುವುದಕ್ಕೆ ಒಂದೇ ಒಂದು ಆತಂಕವಿದೆ. ಅದನ್ನು ಖುಲ್ಲಾ ಹೇಳಿಬಿಡುತ್ತೇನೆ. ಮುಚ್ಚಿಟ್ಟು ಮಾತನಾಡಬಾರದು. ನಿಮಗೆ ತಿಳಿದೇ ಇದೆ ; ಬಿಜಾಪುರದವರಿಗೂ ನಮಗೂ ಸರಿಬೀಳುವುದಿಲ್ಲ. ಮತ್ತೆ ಯುದ್ಧವಾಗಬಹುದು. ಸಿದ್ದಿ ಮಸೂದರ ಎದುರಿಗೇ ನೀವು ಯುದ್ಧಕ್ಕೆ ನಿಲ್ಲಬೇಕಾದ ಪ್ರಸಂಗವು ಬರಬಹುದು. ಆಗ ಹಿಂದೆ ಮುಂದೆ ನೋಡಿದರೆ ಬಹಳ ಕಷ್ಟವಾದೀತು."

"ನಾವು ಬಿಜಾಪುರದ ಮೇಲೆ ಯುದ್ಧ ಮಾಡಲು ಹಿಂತೆಗೆಯುವವರಲ್ಲ. ಅಂಥಾ ಸಂದೇಹ ಬಂದರೆ, ನೀವು ವಿಚಾರಣೆಯಿಲ್ಲದೇ ನಮ್ಮ ತಲೆಯೊಡೆದು

ಹಾಕಬಹುದು. ಸಿದ್ದಿಮಸೂದರಿಗೆ ಶಪಥಪೂರ್ವಕವಾಗಿ ಹೇಳಿಯೇ ಬಂದಿದ್ದೇವೆ. 'ಆದಿಲ್‌ಷಾಹಿಯು ಕೊನೆಮುಟ್ಟುತ್ತಿದೆ, ಯಾರೋ ಮುಗಿಸಿಬಿಡುತ್ತಾರೆ. ನಾವೇ ಎದುರುಬಿದ್ದು ನಾಶಗೊಳಿಸಿದರೂ ಆಶ್ಚರ್ಯವಿಲ್ಲ. ಭೂಮಿಯ ಮೇಲೆ ಇಂಥಾ ದರ್ಬಾರು ಇರಬಾರದು. ನಿಮ್ಮ ಅಧಿಕಾರವು ಗೌರವಾಸ್ಪದವಾದುದಲ್ಲ. ನೀವು ನಿಮ್ಮ ಜಹಗೀರಿಗೆ ಹೋಗಿ ಉಳಿದ ಕಾಲವನ್ನು ಕಳೆಯಿರಿ' ಎಂದು ಆ ವಜೀರರಿಗೆ ಖಡಾಖಡಿ ಹೇಳಿ ಬಂದುಬಿಟ್ಟಿದ್ದೇವೆ. ಕತ್ತಿಯ ಮೇಲೆ ಆಣೆ ಹಾಕಿ ಪ್ರಮಾಣಮಾಡಿ ಬಂದಿದ್ದೇವೆ, ಇನ್ನೂ ನಿಮಗೆ ಸಂಶಯವಿದ್ದರೆ ನಮ್ಮನ್ನು ಸೇರಿಸಿಕೊಳ್ಳಬೇಡಿರಿ, ನಾವು ನಿಮ್ಮಲ್ಲಿ ಬೇಡುವುದಕ್ಕೆ ಬಂದಿಲ್ಲ. ನಮ್ಮ ಶಕ್ತಿ ಸಾಮರ್ಥ್ಯಗಳಿಗೆ ತಕ್ಕ ಸ್ಥಾನಮಾನಗಳು ದೊರೆತರೆ ಸೇವೆ ಮಾಡುವುದಕ್ಕೆ ಬಂದಿದ್ದೇವೆ."

ದಿಲೀರ್‌ಖಾನನು ಅವರಿಬ್ಬರನ್ನೂ ಸೇನಾಧಿಪತಿಗಳನ್ನಾಗಿ ಸೇರಿಸಿಕೊಂಡನು.

ಬಿಜಾಪುರದ ವಿಚಾರಗಳನ್ನೆಲ್ಲಾ ದೆಹಲಿಗೆ ಬರೆಸಿ ಕಳಿಸಿದನು. 'ಬಿಜಾಪುರದವರು ಶಿವಾಜಿಗೆ ಹಣ ಕೊಟ್ಟು ಸಹಾಯಮಾಡುತ್ತಾರೆ. ಅವರಲ್ಲಿ ಬೇಕಾದಷ್ಟು ಹಣವಿದೆ. ಯುದ್ಧಕ್ಕೆ ಅಪ್ಪಣೆ ಕೊಟ್ಟರೆ ಬಿಜಾಪುರವನ್ನು ಮುಗಿಸಿಬಿಡುತ್ತೇನೆ. ಈಗ ಸಂದರ್ಭವು ಸರಿಯಾಗಿದೆ. ಸುಲ್ತಾನನು ಬಾಲಕ ವಜೀರನಾದ ಸಿದ್ದಿಮಸೂದನು ಭೋಗಲಾಲಸೆಗಳಲ್ಲಿ ಮುಳುಗಿದ್ದಾನೆ. ರಾಜ್ಯಭಾರವೆಲ್ಲವೂ ಜನಾನಾದ ಬೇಗಂ ಸಾಹೇಬರುಗಳ ಕೈಯಲ್ಲಿದೆ. ರಾಜನಿಷ್ಠರಾದ ಅಧಿಕಾರಿಗಳನ್ನು ಆ ಜನಾನಾ ಸ್ತ್ರೀಯರುಗಳು ನಾನಾ ಕಾರಣಗಳಿಂದ ಕೊಲ್ಲಿಸಿಬಿಟ್ಟಿದ್ದಾರೆ. ಸೈನ್ಯಗಳೆಲ್ಲಾ ಬಿಟ್ಟು ಓಡಿಹೋಗಿವೆ. ಸೇನಾಧಿಪತಿಗಳು ತಲೆಮರೆಸಿಕೊಂಡು ಹೋಗಿದ್ದಾರೆ. ಇಬ್ಬರು ಪರಾಕ್ರಮಶಾಲಿಗಳಾದ ಸೇನಾಧಿಪತಿಗಳು ನಮ್ಮಲ್ಲಿಯೂ ಬಂದು ಸೇರಿಕೊಂಡಿದ್ದಾರೆ. ಬಿಜಾಪುರದ ಮೇಲೆ ಯುದ್ಧಕ್ಕೆ ಅಪ್ಪಣೆ ಕೊಡಬೇಕು. ಶಿವಾಜಿಯೋ ಅವನ ಕಡೆಯ ಸೇನಾಧಿಪತಿಗಳೋ ಬಿಜಾಪುರದೊಳಗೆ ಹೋಗಿ ಸೇರಿಕೊಳ್ಳುವುದಕ್ಕಿಂತ ಮುಂಚಿತವಾಗಿ ನಾವು ಹೋಗಿ ಆ ಕೋಟೆಯನ್ನು ವಶಪಡಿಸಿಕೊಳ್ಳಬೇಕು' ಎಂದು ಪತ್ರ ಬರೆಸಿ ದೂತರ ಕೈಯಲ್ಲಿ ಕೊಟ್ಟು ದೆಹಲಿಗೆ ಅಟ್ಟಿದನು,

ಔರಂಗಜೇಬನಿಗೆ ಈ ಪತ್ರ ಸುಲಾವಣೆಯಾಯಿತು. 'ದಿಲೀರ್‌ಖಾನನ

ಪರಾಕ್ರಮದಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಆವನ ರಾಜಕೀಯವೆಲ್ಲಾ ಜೊಳ್ಳು. ದಕ್ಷಿಣದಲ್ಲಿ ಬೇಕಾದಷ್ಟು ಸೈನ್ಯಗಳಿವೆ, ದಿಲೀರ್‌ಖಾನನು ಸೈನ್ಯಗಳನ್ನು ತೆಗೆದುಕೊಂಡು ಹೋಗಿ ಬಿಜಾಪುರವನ್ನು ಮುತ್ತಲಿ. ಅವನು ಬರೆಸಿರುವುದೆಲ್ಲಾ ನಿಜವಾದರೆ ನಮ್ಮ ಇಷ್ಟ ಸಿದ್ಧಿಯಾದಂತಾಗುತ್ತದೆ. ವ್ಯತ್ಯಸ್ತವಾದರೆ ಹಿಂದಕ್ಕೆ ಬರುತ್ತಾನೆ, ದಾರಿಯಲ್ಲಿ ಸೈನ್ಯದ ಖರ್ಚನ್ನು ಶೇಖರಿಸಿಕೊಳ್ಳುತ್ತಾನೆ' ಎಂದು ಆಲೋಚನೆ ಮಾಡಿದನು.

'ದಿಲೀರ್‌ಖಾನನಿಗೆ ಬಹು ರಹಸ್ಯವಾಗಿ ಪತ್ರ ಬರೆಸಿ ಕಳುಹಿಸಿದನು. ನಿಮ್ಮ ಪತ್ರ ಬಾದಷಹರಿಗೆ ಸುಲಾವಣೆಯಾಗಿದೆ, ನಿಮ್ಮ ಇಷ್ಟದಂತೆ ಬಿಜಾಪುರದ ಮೇಲೆ ಯುದ್ಧಮಾಡಬಹುದು. ಆದರೆ ದೆಹಲಿಯಿಂದ ಈ ಸಮಯದಲ್ಲಿ ಹಣವನ್ನಾಗಲೀ ಸೈನ್ಯವನ್ನಾಗಲೀ ಸಹಾಯಮಾಡಲು ಸಾಧ್ಯವಾಗುವುದಿಲ್ಲ. ಅಲ್ಲಿಯ ಖರ್ಚನ್ನೂ ಪರರಾಜ್ಯಗಳಲ್ಲಿಯೇ ಹುಟ್ಟಿಸಿಕೊಳ್ಳಬೇಕು. ಶಿವಾಜಿಯ ವಿಷಯದಲ್ಲಿ ಯಾವಾಗಲೂ ಕಣ್ಣಿಟ್ಟಿರಬೇಕು. ನಿಮ್ಮ ರಾಜಧಾನಿಯಿಂದ ತಪ್ಪಿಸಿಕೊಂಡು ಓಡಿಹೋದಿರುವ ಸಾಂಬಾಜಿಯನ್ನು ಸ್ನೇಹದಿಂದಲೋ ಅಥವಾ ವಿರೋಧದಿಂದಲೋ ಪುನಃ ಸಂಗ್ರಹಿಸಲು ಪ್ರಯತ್ನಮಾಡಬೇಕು.'

ಈರೀತಿ ಖಾಸ್ ಮುತ್ಸದ್ದಿಗಳು ಬಾದಷಹರ ಅಪ್ಪಣೆ ಪ್ರಕಾರ ಬರೆಸಿ ದೂತರ ಮುಖೇನ ಕಳಿಸಿದರು.

ದಿಲೀರ್ ಖಾನನು ರಹಸ್ಯವಾಗಿ ಸೈನ್ಯದ ಸಿದ್ಧತೆಗಳನ್ನು ಮಾಡಿದನು. ಬಿಜಾಪುರದ ಕೋಟೆಯು ಬಲು ಭದ್ರವಾದ ಕೋಟೆ ; ಐದಾರು ತಿಂಗಳ ಕಾಲ ಕೋಟೆಯು ವಶವಾಗದೇ ಹೋಗಬಹುದು. ಅದಕ್ಕೆ ಬೇಕಾದಷ್ಟು ಆಹಾರ ಸಾಮಗ್ರಿಗಳನ್ನು ಸಿದ್ಧಪಡಿಸುವಂತೆ ಅಧಿಕಾರಿಗಳಿಗೆ ಆಜ್ಞೆ ಇತ್ತನು. ತಾನೇ ಕುದುರೆಯ ಸೈನ್ಯಗಳನ್ನೂ ಕಾಲಾಳು ಭಟರನ್ನೂ ಚುನಾಯಿಸಿ ಸಿದ್ಧಗೊಳಿಸಿದನು. ಯುದ್ಧಕ್ಕೆ ಯಾರ್ಯಾರು ಹೊರಡಬೇಕೆಂಬುದನ್ನು ಗೊತ್ತುಮಾಡಿ ಆಜ್ಞೆ ಇತ್ತನು. ಷರ್ಜಾಖಾ ಮತ್ತು ಉಮ್ಮರ್‌ಹಯಾತ್‌ಖಾನರನ್ನು ಬರಮಾಡಿಕೊಂಡು ಬಹಳ ಗೌರವದಿಂದ ಕಂಡು ಅವರನ್ನು ಸೈನ್ಯದ ಮುಂದೆ ಹೊರಡಬೇಕೆಂದು ಆಜ್ಞೆ ಇತ್ತನು. ಮದ್ದುಗುಂಡು ಫಿರಂಗಿಗಳನ್ನೂ ಮತ್ತು ಪೋರ್ಚುಗೀಸ್ ಸೈನಿಕರನ್ನೂ ತೋಪುಖಾನೆಗೆ ನೇಮಿಸಿದನು.

ದಿಲೀರ್‌ಖಾನನು ಈ ರೀತಿ ಸೈನ್ಯ ಸನ್ನಾಹಗಳನೆಲ್ಲಾ ಸಿದ್ಧಪಡಿಸಿ ಬಿಜಾಪುರದ ಕಡೆಗೆ ಹೊರಡಿಸಿದನು. ದಾರಿಯಲ್ಲಿ ಸಿಕ್ಕಿದ ಹಿಂದೂ ಜನರನ್ನೂ ವರ್ತಕರನ್ನೂ ಶ್ರೀಮಂತರನ್ನೂ ಲೂಟಮಾಡುತ್ತಾ ಮೊಗಲ್ ಸೈನ್ಯಗಳು ಬಿಜಾಪುರದ ಕಡೆಗೆ ಹೊರಟವು. ದಿಲೀರ್‌ಖಾನನು ಬಿಜಾಪುರಕ್ಕೆ ನಲವತ್ತು ಮೈಲಿಗಳ ದೂರದಲ್ಲಿ ಬೀಡು ಬಿಟ್ಟನು.

ಮೊಗಲ್ ಸೇನಾಧಿಪತಿ ದಿಲೀರ್‌ಖಾನನು ಬಿಜಾಪುರದ ಮೇಲೆ ಹದಿನೈದು ಸಾವಿರ ಸೈನ್ಯವನ್ನು ತೆಗೆದುಕೊಂಡು ಯುದ್ಧಕ್ಕೆ ಬರುತ್ತಿದ್ದಾನೆಂದು ಬಿಜಾಪುರ ದಲ್ಲೆಲ್ಲಾ ವರ್ತಮಾನ ಹರಡಿತು. ಬಿಜಾಪುರದ ದರ್ಬಾರಿನಲ್ಲಿ ಸೇನಾಧಿಪತಿ ಗಳಾಗಿದ್ದ ಷರ್ಜಾಖಾ ಮತ್ತು ಹಯಾತ್‌ಖಾನರಿಬ್ಬರೂ ದಿಲೀರ್‌ಖಾನ ನೊಡನೆ ಸೇರಿಕೊಂಡಿದ್ದಾರೆಂಬ ಸಮಾಚಾರವು ಬಂದಿತು. ನಗರದಲ್ಲೆಲ್ಲಾ ಅಲ್ಲೋಲಕಲ್ಲೋಲವಾಯಿತು. ವಜೀರ್ ಸಿದ್ದಿ ಮಸೂದನು ಯೋಚನೆ ಮಾಡ ತೊಡಗಿದನು. ರಾಜಧಾನಿಯಲ್ಲಿದ್ದ ಒಬ್ಬಿಬ್ಬರು ಸೇನಾಧಿಪತಿಗಳನ್ನು ಕಳಿಸಿ ತಮ್ಮ ರಾಜ್ಯದಲ್ಲಿರುವ ಸೈನ್ಯಗಳನ್ನು ಒಟ್ಟುಗೂಡಿಸಬೇಕೆಂದು ಅಪ್ಪಣೆ ಮಾಡಿದನು. ಸುಲ್ತಾನರ ಅಂತಃಪುರದಲ್ಲಿಯೂ ಮೊಗಲ್ ಸೈನ್ಯಗಳು ಯುದ್ಧಕ್ಕೆ ಬರುತ್ತಿರುವ ವಾರ್ತೆ. ಅದರಲ್ಲಿಯೂ ಮೊಗಲ್ ಸೇನಾಧಿಪತಿಯೊಡನೆ ಷರ್ಜಾಖಾ ಮತ್ತು ಹಯಾತ್‌ಖಾನರವರು ಬರುತ್ತಿರುವರೆಂಬ ಸುದ್ದಿ ಪುಂಖಾನುಪುಂಖವಾಗಿ ಹಬ್ಬಿತು. ಇವರಲ್ಲಿ ರಹಸ್ಯವೇನೂ ಇಲ್ಲ. ಎಲ್ಲರೂ ಮಾತನಾಡಬಹುದು. ದಾಸದಾಸಿಯರು, ಪರಿಚಾರಿಕೆಯವರು, ಪಹರೆಯವರು, ಮುತ್ಸದ್ದಿಗಳು ಎಲ್ಲರೂ ತಮತಮಗೆ ತೋರಿದಂತೆ ಮಾತನಾಡತೊಡಗಿದರು. ಆ ಪರಿಜನರಲ್ಲಿ ವಜೀರ ಸಿದ್ದಿ ಮಸೂದನಿಗೆ ವಿರೋಧಿಗಳೆಷ್ಟೋ ಮಂದಿ. ಬೇಗಂ ಸಾಹೇಬರ ಮೇಲೆಯೂ ಕೋಪವುಳ್ಳ ದಾಸದಾಸಿಯರಿಗೇನೂ ಆ ಅಂತಃಪುರದಲ್ಲಿ ಕೊರತೆ ಇರಲಿಲ್ಲ. ಷರ್ಜಾಖಾ ಹಯಾತ್‌ಖಾನರುಗಳೇ ಯುದ್ಧಕ್ಕೆ ಬಂದಿದ್ದಾರೆಂದು ಅವರ ನಂಬಿಕೆ. ಅವರಿಗೆ ಜಯವಾಗುವುದೇನೋ ಖಚಿತವಾದ ಮಾತೆಂದು ಆ ಜನರ ಸಿದ್ಧಾಂತ. ಪಾಪ, ಸುಲ್ತಾನರೇನು ಮಾಡಿ ಯಾರು ? ಅವರು ಬಲು ಒಳ್ಳೆಯವರು. ಈ ಪ್ರಪಂಚದಲ್ಲಿ ಯಾವ ಪಾಪಿ ಗಳೂ ಅವರನ್ನು ವಿರೋಧಿಸುವುದಿಲ್ಲ. ಒಂದು ಪಕ್ಷ ಅಂಥಾ ಸಂದರ್ಭ ಒದಗಿ ದರೆ ನಾವುಗಳೆಲ್ಲಾ ಸುಮ್ಮನಿರುತ್ತೇವೆಯೇ ? ಸುಲ್ತಾನರನ್ನೆಂದಿಗೂ ಬಿಟ್ಟು

ಕೊಡುವುದಿಲ್ಲ. ನಮ್ಮ ಪ್ರಾಣವಿರುವತನಕ ಸುಲ್ತಾನರಿಗೆ ಭಯವಿಲ್ಲ, ಎಂದು ಪಹರೆಯವರು ಭರವಸೆಯಿಂದ ಹೇಳುತ್ತಿದ್ದರು. ವಜೀರರು ಯುದ್ಧದಲ್ಲಿ ಸಾಯುತ್ತಾರೆ, ಇಲ್ಲವೇ ಓಟ ಕೀಳುತ್ತಾರೆ. ಬೇಗಂ ಸಾಹೇಬರು ಮೆಕ್ಕಾಕ್ಕೆ ಹೋಗುವುದು ಖಂಡಿತ. ಹೋದರೆ ಹೋಗಲಿ, ಪರ್ಜಾಖಾನನ ಅಧಿಕಾರ ಬರುತ್ತದೆ. ಅದೇ ಒಳ್ಳೆಯದು, ಎಂದು ದಾಸದಾಸಿಯರು ಮಾತನಾಡಿ ಕೊಂಡರು. ಕೆಲವರು ಕೊನೆಗೆ ಅಯ್ಯೋ, ಯಾರು ಅಧಿಕಾರಕ್ಕೆ ಬಂದರೇನು, ಯಾರು ಗೆದ್ದರೇನು, ಸೋತರೇನು? ನಮ್ಮ ಊಳಿಗ ಇದ್ದೇ ಇದೆ. ಬೆಳಗಿನಿಂದ ಅರ್ಧರಾತ್ರಿಯವರೆಗೆ ದುಡಿದು ಹೊಟ್ಟೆ ಹೊರೆದುಕೋ, ಎಂದು ದೇವರು ನಮ್ಮ ಹಣೆಯಲ್ಲಿ ಬರೆದುಬಿಟ್ಟಿದ್ದಾನೆ, ಎಂದು ನಿರಾಶೆಯ ಮಾತುಗಳನ್ನಾಡು ತ್ತಿದ್ದರು.

ಸುಲ್ತಾನನ ಮಾತೆ ಬೇಗಂಸಾಹೇಬರಿಗೆ ಮೊಗಲ್ ಸೈನ್ಯಗಳು ಯುದ್ಧಕ್ಕೆ ಬರುತ್ತಿರುವ ವಿಚಾರ ಕಿವಿಗೆ ಬಿತ್ತು. ಸಿಡಿಲು ಬಡಿದಂತಾಯಿತು. ಮುಂದೇನು ಮಾಡಬೇಕು ಎಂದು ಯೋಚನೆ ಮಾಡತೊಡಗಿದರು. ವಜೀರ ಸಿದ್ದಿ ಮಸೂದ ನನ್ನು ಅಂತಃಪುರಕ್ಕೆ ಕರೆಸಿದರು. ಅವರಿಬ್ಬರೂ ಅಂತರಂಗದಲ್ಲಿ ಕುಳಿತು ಮಾತ ನಾಡತೊಡಗಿದರು. ಈ ರಹಸ್ಯ ಮಂತ್ರಾಲೋಚನೆಯ ಸುದ್ದಿಯು ಅರಮನೆ ಯಿಂದ ಹೊರಗೆ ಹೋಗಬಾರದೆಂದು ಅವರು ಕುಳಿತಿದ್ದ ಕೋಣೆಯ ಸುತ್ತಲೂ ಬಲವಾದ ಪಹರೆಯನ್ನಿಟ್ಟಿದ್ದರು.

ವಜೀರ್ ಸಿದ್ದಿಮಸೂದನು ಮೊಗಲ್ ಸೇನಾಧಿಪತಿ ದಿಲೇರ್‌ಖಾನನು ಬಿಜಾಪುರಕ್ಕೆ ನಲವತ್ತು ಮೈಲಿಗಳ ದೂರದಲ್ಲಿ ಸೈನ್ಯ ಸಮೇತನಾಗಿ ಬಂದು ಬೀಡು ಬಿಟ್ಟಿದ್ದಾನೆಂದು ಬೇಗಂ ಸಾಹೇಬರಿಗೆ ಅರಿಕೆ ಮಾಡಿದನು. ಬಿಜಾಪುರದ ಸೇನಾಧಿಪತಿಗಳಾದ ಖಾನ್ ಸಾಹೇಬರುಗಳಿಬ್ಬರೂ ಮೊಗಲ್ ಸೈನ್ಯದಲ್ಲಿ ಸೇರಿ ಕೊಂಡಿದ್ದಾರೆಂದು ಮಸೂದನು ಖೇದದಿಂದ ತಿಳಿಸಿದನು.

ಬೇಗಂ ಸಾಹೇಬಳು ಅಧೈರ್ಯದಿಂದಿರಲಿಲ್ಲ. ಅವಳ ಧೈರ್ಯವನ್ನು ನೋಡಿ ಮಸೂದನಿಗೆ ಆಶ್ಚರ್ಯವಾಯಿತು. ಬೇಗಂ ಸಾಹೇಬಳು "ವಜೀರರೇ ! ಯಾರು ಶತ್ರುಗಳು, ಯಾರು ಮಿತ್ರರು ಎಂದು ಹೇಳುವುದಕ್ಕಾಗುವುದಿಲ್ಲ. ಅವರವರ ಲಾಭ ಅವರವರು ನೋಡಿಕೊಳ್ಳುತ್ತಾರೆ. ಈ ರಾಜ್ಯದಲ್ಲಿ ನೀವು ಅಧಿಕಾರಿ ಗಳಾಗಿರದೇ ಆ ಖಾನರುಗಳೇ ಅಧಿಕಾರಿಗಳಾಗಿದ್ದಿದ್ದರೆ ಅವರು ಮೊಗಲ್

ಸೈನ್ಯದೊಡನೆ ಹೊರಾಡುತ್ತಿದ್ದರು. ನಿಮ್ಮ ಮೇಲಿನ ವಿರೋಧದಿಂದ ಅವರು ಶತ್ರುಗಳ ಕಡೆ ಸೇರಿಕೊಂಡಿದ್ದಾರೆ. ಅದಕ್ಕಾಗಿ ಚಿಂತಿಸಿ ಫಲವಿಲ್ಲ. ಈ ಆದಿಲ್ ಷಾಹಿಯು ಅಂಥಾ ಸೇನಾಧಿಪತಿಗಳ ಗಮನಾಗಮನಗಳ ಮೇಲೆ ನಿರ್ಭರವಾಗಿಲ್ಲ. ಯಾರು ಇರಲಿ ಯಾರು ಇಲ್ಲದಿರಲಿ ಈ ಸುಲ್ತಾನೀ ಸಿಂಹಾಸನವನ್ನು ಉಳಿಸುವುದು ಈಗ ನಮ್ಮ ಭಾರವಾಗಿದೆ. ಇದಕ್ಕೆ ನೀವೇನು ಪ್ರತಿಕ್ರಿಯೆ ಆಲೋಚನೆ ಮಾಡಿದ್ದೀರಿ, ಅದನ್ನು ಮೊದಲು ಹೇಳಿರಿ."

"ಬೇಗಂ ಸಾಹೇಬ್! ನಿಜವಾಗಿಯೂ ನನಗೇನೂ ತೋರುವುದಿಲ್ಲ. ನಿಮ್ಮಲ್ಲಿ ವೃಥಾ ಜಂಬ ಕೊಚ್ಚಿಕೊಳ್ಳುವುದು ನನ್ನಂಥವನಿಗೆ ಸರಿಯಲ್ಲ. ನಮ್ಮ ಸೈನ್ಯ ಬಲ ಏನೇನೂ ಸಾಲದು. ಆದರೆ ನಾನು ಯುದ್ಧಕ್ಕೆ ಅಂಜುವನಲ್ಲ. ರಣಭೂಮಿಯಲ್ಲಿಯೇ ಹುಟ್ಟಿ ರಣಭೂಮಿಯಲ್ಲಿಯೇ ಮಣ್ಣಾಗಿ ಹೋಗುವ ಯೋಧನು ನಾನು. ಇದ್ದ ಬದ್ದ ಸೈನ್ಯವನ್ನು ಶೇಖರಿಸಿಕೊಂಡು ಯುದ್ಧಕ್ಕೆ ಹೊರಡುತ್ತೇನೆ. ಮುಂದಿನ ಕೆಲಸ ನಿಮಗೆ ಸೇರಿದ್ದು. ಸುಲ್ತಾನರನ್ನು ದೇವರು ರಕ್ಷಿಸುತ್ತಾನೆ ಎಂಬ ನಂಬಿಕೆ ನನಗೆ ಬಂದಿದೆ."

ವಜೀರರೇ! ನಿಮ್ಮ ಮಾತು ಸತ್ಯವಾಗಿದೆ. ನಾನು ಅದನ್ನು ನಂಬುತ್ತೇನೆ. ಈ ಸಮಯದಲ್ಲಿ ಯುದ್ಧ ಮಾಡುವುದಕ್ಕಿಂತಲೂ ಸಂಧಿ ಮಾಡಿಕೊಳ್ಳುವುದೇ ಲೇಸೆಂದು ನನಗೆ ತೋರುತ್ತದೆ. ನೀವೇನು ಹೇಳುತ್ತೀರಿ."

ಸಿದ್ದಿಮಸೂದನು ಬೇಗಂ ಸಾಹೇಬಳಿಗೆ ತಲೆಬಾಗಿ ಎರಡು ಕೈಗಳನ್ನೂ ಜೋಡಿಸಿ ಹೇಳಿದನು. "ಬೇಗಂ ಸಾಹೇಬಾ! ಬುದ್ಧಿಯಲ್ಲಿ ನಿಮಗೆ ಯಾರೂ ಎಣೆಯಿಲ್ಲವೆಂದು ನಾನು ನಿಶ್ಚಯಿಸಿಕೊಂಡಿದ್ದೇನೆ. ಈ ಪ್ರಸಂಗದಲ್ಲಿ ನೀವು ತಪ್ಪು ಹೆಜ್ಜೆ ಇಡುತ್ತಿದ್ದೀರಿ. ಸಂಧಿಯಾಗುವುದೇ ಇಲ್ಲ. ಇದು ನನ್ನ ಮೇಲಿನ ದ್ವೇಷದಿಂದ ಎದ್ದಿರುವ ಯುದ್ಧ. ನಾನು ಯುದ್ಧದಿಂದಲೇ ಪೂರೈಸಬೇಕು. ಇಲ್ಲವೇ ರಣಭೂಮಿಯಲ್ಲಿ ವಿರೋಚಿತವಾದ ಮರಣವನ್ನು ಆಲಂಗಿಸಬೇಕು. ನಮ್ಮ ಸೇನಾಧಿಪತಿಗಳು ನನ್ನ ಮೇಲೆ ಹಠತೊಟ್ಟು ಬಂದಿದ್ದಾರೆ."

ಬೇಗಂ ಸಾಹೇಬಳು ಗಹಗಹಿಸಿ ನಕ್ಕಳು. ನಿಜವಾಗಿಯೂ ವಜೀರರ ಬುದ್ಧಿಯು ಮೊಂಡಾಗಿ ಹೋಗಿದೆ. ಈ ಸೇನಾಧಿಪತಿಗಳು ನಿಮ್ಮ ಮೇಲಿನ ದ್ವೇಷದಿಂದ ಹೋಗಿ ಕರೆದು ಬಿಟ್ಟರೆ ಇನ್ನೊಂದು ಸೈನ್ಯವನ್ನು ಕಟ್ಟಿಕೊಂಡು ಬರುವಷ್ಟು ಮೂರ್ಖನಲ್ಲ. ಆ ದಿಲೀರ್‌ಖಾನ್ ದೆಹಲಿಯ ಬಾದಷಹನಿಗೆ ನಮ್ಮ

ಮೇಲೆ ಬಲವಾದ ದ್ವೇಷವಿದೆ. ಈ ರಾಜ್ಯವನ್ನು ನಿರ್ಮೂಲ ಮಾಡಿಬಿಡ ಬೇಕೆಂದು ಅವನು ಸಂಕಲ್ಪಿಸಿದ್ದಾನೆ. ಬಾದಷಹನ ಅಪ್ಪಣೆ ಇಲ್ಲದೇ ದಿಲೀರ್‌ಖಾನನು ಇತ್ತ ಕಡೆಗೆ ಬಂದಿಲ್ಲ. ನಮ್ಮ ಸೇನಾಧಿಪತಿಗಳು ಅಲ್ಲಿ ಹೋಗಿ ಸೇರಿರುವುದು ಅಷ್ಟೇನೂ ಮಹತ್ವದ ವಿಚಾರವಲ್ಲ ನಾವು ಬಲವಾಗಿ ಎದುರಿಸಿ ಯುದ್ಧ ಮಾಡಬೇಕು. ಇಲ್ಲವೇ ಈ ಅದಿಲ್‌ಷಾಹಿಯು ನಿರ್ನಾಮ ವಾಗಿ ಹೋಗಬೇಕು. ಅದನ್ನು ನಾನೂ ಹಠ ತೊಟ್ಟಿದ್ದೇನೆ. ನಾನು ಜೀವಂತಳಾಗಿ ಬದುಕಿರುವ ತನಕ ಈ ಬಿಜಾಪುರದೊಳಗೆ ಮೊಗಲರು ಪ್ರವೇಶ ಮಾಡುವುದಕ್ಕೆ ಆಸ್ಪದ ಕೊಡುವುದಿಲ್ಲ. ಬಾಲಕನಾದ ಸುಲ್ತಾನನನ್ನು ಎಂದೆಂದಿಗೂ ಆ ಬಾದಶಹನಿಗೆ ಒಪ್ಪಿಸುವುದಿಲ್ಲ. ಅವನ ಕೊರಳನ್ನು ನನ್ನ ಕೈಯ್ಯಿಂದಲೇ ಜಿಗುಟಿ ಹಾಕಿ ಪ್ರಾಣ ಬಿಡುತ್ತೇನೆ" ಎಂದಳು. ಅವಳ ಮುಖವು ಕಾದ ಕಬ್ಬಿಣದ ಗುಂಡಿನಂತೆ ಕೆಂಪಾಗಿದ್ದಿತು. ಕಣ್ಣುಗಳು ಜ್ವಲಿಸು ತ್ತಿದ್ದವು. ಶರೀರವೆಲ್ಲವೂ ಉಕ್ಕಿನ ತಂತಿಯಂತೆ ಸೆಟೆದುಕೊಂಡಿತ್ತು.

ಸಿದ್ಧಿ ಮಸೂದನು ಬೇಗಂ ಸಾಹೇಬಳ ಈ ಭೈರವಾಕೃತಿಯನ್ನು ನೋಡಿ ಗಾಬರಿಗೊಂಡನು. "ಬೇಗಂ ಸಾಹೇಬಾ ನನ್ನದೇನಿದೆ? ತಮ್ಮ ಮಾತನ್ನು ಶಿರಸಾವಹಿಸಿ ನಡೆಸುತ್ತೇನೆ. ಮಸೂದನು ರಣ ಕ್ಷೇತ್ರದಲ್ಲಿ ಪ್ರಾಣಬಿಟ್ಟನು ಎಂದರೆ ಎಂತಹ ಕೀರ್ತಿಯು ಬರುತ್ತದೋ, ಸಾಯುವ ತನಕ ಬೇಗಂ ಸಾಹೇಬಳಲ್ಲಿ ಸ್ವಾಮಿನಿಷ್ಠೆಯಿಂದ ನಡೆದುಕೊಂಡನು, ಎಂದು ಜನ ಹೇಳಿದರೆ ಅದರ ನೂರರಷ್ಟು ಕೀರ್ತಿಯು ಲಭಿಸುತ್ತದೆ. ನಾನು ತಮ್ಮ ಆಜ್ಞಾಧಾರಕನಾಗಿದ್ದೇನೆ" ಎಂದನು.

"ಸಿದ್ದಿ ಮಸೂದ್! ಇದು ನಿಜವೇ? ಇದನ್ನು ಪ್ರಮಾಣ ಮಾಡಿ ಹೇಳುವೆಯಾ? ನೀನು ಈ ಮಾತಿಗೆ ತಪ್ಪಿದರೆ ನಾನು ನಿನ್ನ ಮುಂದೆಯೇ ಪ್ರಾಣ ಬಿಡುತ್ತೇನೆ. ದೇವರ ಮೇಲೆ ಪ್ರಮಾಣ ಮಾಡಿ ಹೇಳು."

ವಜೀರನು "ಅಲ್ಲಾವಿನ ಮೇಲೆ ಆಣೆ" ಇಟ್ಟು ಹೇಳುತ್ತಿದ್ದೇನೆ ಬೇಗಂ ಸಾಹೇಬಾ ತಮ್ಮ ಆಜ್ಞಾಧಾರಕ ನಾನು, ಎಂದು ಹೇಳಿ ಸೊಂಟದಲ್ಲಿದ್ದ ಕತ್ತಿಯನ್ನು ಹಿರಿದು ಬೇಗಂ ಸಾಹೇಬಳ ಪಾದದಡಿಯಲ್ಲಿಟ್ಟು ತಮಗೆ ಸಂದೇಹ ವಿದ್ದರೆ ಈ ನನ್ನ ಕತ್ತಿಯಿಂದಲೇ ನನ್ನ ತಲೆಯನ್ನು ಕಡಿದು ಹಾಕಿಬಿಡಿ" ಎಂದು ಹೇಳಿದನು.

ಬೇಗಂ ಸಾಹೇಬಳು ಶಾಂತಳಾದಳು. ವಜೀರನನ್ನ ಆಸನದ ಮೇಲೆ ಕುಳಿತುಕೊಳ್ಳುವಂತೆ ಹೇಳಿ "ಈಗ ನಮಗಿರುವುದು ಒಂದೇ ಮಾರ್ಗ. ಆ ಶಿವಾಜಿಯನ್ನು ತಂದು ಇವರೆದುರಿಗೆ ನಿಲ್ಲಿಸಿಬಿಡಬೇಕು. ದಿಲೀರ್‌ಖಾನನು ಓಡಿ ಹೋಗುತ್ತಾನೆ. ಬಿಜಾಪುರವು ಉಳಿದುಕೊಳ್ಳುತ್ತದೆ. ಇದೊಂದೇ ಮಾರ್ಗ. ಇದಕ್ಕೆ ನೀನೊಪ್ಪುವೆಯಾ ? ನಿನಗೆ ಸಮ್ಮತಿ ಇದೆಯೇ ? " ಎಂದಳು. ಈ ಮಾತು ಕೇಳಿ ವಜೀರನ ಮುಖವು ಬಿಳಚಿಕೊಂಡಿತು. ಕ್ಷಣಹೊತ್ತು ಮೌನದಿಂದಿದ್ದು ಮಸೂದನು, "ಬೇಗಂ ಸಾಹೇಬಾ ! ನಾವು ಕರೆದರೆ ಶಿವಾಜಿಯು ಬರುತ್ತಾನೆಂಬ ಭರವಸೆಯೇನಿದೆ ? ದಿಲೀರ್‌ಖಾನನ ಸೈನ್ಯವು ನಮ್ಮ ಬಾಗಿಲಿನಲ್ಲಿ ಬಂದು ಕುಳಿತಿದೆ. ಶಿವಾಜಿ ಇರುವುದೆಲ್ಲಿ ? ಅವನಿಗೆ ನಾವು ದೂತರನ್ನು ಕಳಿಸುವುದೆಲ್ಲಿ ? ಅವನು ಸೈನ್ಯವನ್ನು ತೆಗೆದುಕೊಂಡು ಬರುವುದಕ್ಕೆ ಎಷ್ಟು ದಿನಗಳಾಗುತ್ತವೆ ? ಅಷ್ಟರೊಳಗಾಗಿ ನಮ್ಮ ಕೋಟೆಯ ಕಲ್ಲುಗಳು ಪುಡಿಪುಡಿಯಾಗಿ ಹೋಗುತ್ತವೆ" ಎಂದನು.

ಬೇಗಂ ಸಾಹೇಬಳು ಗಹಗಹಿಸಿ ನಕ್ಕಳು. "ಹಾ ! ದಿಲೀರ್‌ಖಾನನ ಶಿಬಿರವು ಎಲ್ಲಿದೆ ? ರಾಯಗಡವೆಲ್ಲಿದೆ ? ಶಿವಾಜಿಯು ಎಲ್ಲಿದ್ದಾನೆ, ಎಂಬುದನ್ನು ನಾನರಿಯೆನೆ ? ಅದಕ್ಕೆ ತಕ್ಕ ಉಪಾಯವನ್ನು ಕಲ್ಪಿಸಬೇಕು. ನಮ್ಮ ರಾಯಭಾರಿಗಳನ್ನು ಈ ದಿನವೇ ದಿಲೀರ್‌ಖಾನನ ಶಿಬಿರಕ್ಕೆ ಕಳಿಸಿ ಕೊಡಬೇಕು. 'ಸಂಧಿ ಮಾಡಿಕೊಳ್ಳಬೇಕು, ಹೇರಳವಾಗಿ ಹಣ ಕೊಡುತ್ತೇವೆ, ಉತ್ತರಕ್ಕಿರುವ ಗೋದಾವರಿಯ ಪ್ರಾಂತವನ್ನೆಲ್ಲಾ ಮೊಗಲರಿಗೆ ಒಪ್ಪಿಸುತ್ತೇವೆ. ಪೂರ್ವದ ತೀರಪ್ರದೇಶಗಳನ್ನೂ ಅವರಿಗೆ ಬಿಟ್ಟು ಕೊಡುತ್ತೇವೆ' ಎಂದು ಹೇಳಿ ಕಳುಹಿಸಿ ಸಂಧಾನಕ್ಕೆ ಆರಂಭ ಮಾಡಬೇಕು. ದಿಲೀರ್‌ಖಾನನು ಚಾಪಲ್ಯದಿಂದ ದೆಹಲಿಯ ದರಬಾರಿಗೆ ಹೇಳಿ ಕಳುಹಿಸುತ್ತಾನೆ. ಇತ್ತ ಪತ್ರ ಬರೆಸಿ ಶಿವಾಜಿಗೆ ಕಳುಹಿಸಿ ಕೊಡಬೇಕು. ಯಾವುದು ಮೊದಲು ಫಲಿಸಿದರೆ ಅದನ್ನು ಉಪಯೋಗಿಸಿಕೊಳ್ಳಬೇಕು. ಕಟ್ಟಕಡೆಯ ಅಸ್ತ್ರ ಶಿವಾಜಿಗೆ ಶರಣು ಹೋಗುವುದು."

ವಜೀರ್ ಸಿದ್ದಿ ಮಸೂದನು ಬೇಗಂ ಸಾಹೇಬಳ ಆಜ್ಞೆಯನ್ನು ಒಪ್ಪಿಕೊಂಡು ಅಂತಃಪುರದಿಂದ ಹೊರಡನು.

## ೧೭

ವಜೀರ್ ಸಿದ್ದಿ ಮಸೂದನು ತನ್ನ ಮನೆಗೆ ಬಂದು ಆಲೋಚನೆ ಮಾಡ ತೊಡಗಿದನು. ಅವನಿಗೆ ಆಲೋಚನೆ ಮಾಡುವುದಕ್ಕೆ ಕೂಡಾ ಯಾರೂ ಇರಲಿಲ್ಲ. ಒಂದಲ್ಲ ಒಂದು ವಿಧದಿಂದ ದೊಡ್ಡ ದೊಡ್ಡ ಮನುಷ್ಯರುಗಳೆಲ್ಲರೂ ವಿಮುಖರಾಗಿದ್ದರು. ಅನೇಕರು ರಾಜಧಾನಿಯನ್ನೇ ಬಿಟ್ಟು ಹೊರಟು ಹೋಗಿದ್ದರು. ಬೇಗಂ ಸಾಹೇಬಳು ಹೇಳಿದ ಆಲೋಚನೆಯೇನೋ ಒಳ್ಳೆಯ ಆಲೋಚನೆ. ಆದರೆ ತನ್ನನ್ನಾಗಲೀ ಬೇಗಂ ಸಾಹೇಬಳನ್ನಾಗಲೀ ಯಾರೂ ನಂಬುವುದಿಲ್ಲವೆಂದು ಅವನಿಗೆ ಸಂದೇಹ. ಸಿದ್ದಿ ಮಸೂದನಿಗೆ ಇದ್ದ ಒಂದೇ ಒಂದು ಭರವಸೆಯೆಂದರೆ, ಬಾಲಕನಾದ ಸುಲ್ತಾನನ ಮೇಲೆ ಯಾರಿಗೂ ದ್ವೇಷವಿಲ್ಲ. ಬಿಜಾಪುರದ ರಾಜ್ಯ ಹೋದರೆ ಹೋಗಲಿ, ಬಿಜಾಪುರದ ಕೋಟೆ ಯೊಂದು ಉಳಿದರೆ ಸಾಕು. ಅರಮನೆಯ ಐಶ್ವರ್ಯವು ಲೂಟಿಯಾಗದಿದ್ದರೆ ಸಾಕು. ಸುಲ್ತಾನನು ಪ್ರವೃದ್ಧಮಾನಕ್ಕೆ ಬಂದಮೇಲೆ ರಾಜ್ಯವನ್ನು ವಿಸ್ತರಿಸಿ ಕೊಳ್ಳುತ್ತಾನೆ, ಎಂದು ಆಲೋಚನೆ ಮಾಡಿದನು. ತಕ್ಷಣ ಬಂದಿರುವ ಆಪತ್ತನ್ನು ನಿವಾರಿಸುವುದು ಹೇಗೆ? ಬೇಗಂ ಸಾಹೇಬಳ ಆಲೋಚನೆಯೇ ಸರಿ ನನ್ನ ಆಲೋಚನೆಯಿಂದ ಪರಿಣಾಮ ಒಳ್ಳೆಯದಾಗಲಿಕ್ಕಿಲ್ಲ. ನಾನು ಈ ಸೈನ್ಯವನ್ನು ಕಟ್ಟಿಕೊಂಡು ಹೋಗಿ ದಿಲೀರ್‌ಖಾನನಿಗೆ ಎದುರು ನಿಂತು ಯುದ್ಧ ಮಾಡಿದರೆ, ಒಂದು ಎರಡು ಮೂರು ದಿನಗಳು ಕೂಡಾ ತಡೆಯುವುದಿಲ್ಲ. ಈ ಕೋಟೆಯು ಅವರ ಸ್ವಾಧೀನವಾಗುತ್ತದೆ. ಆಮೇಲಾದರೂ ಸಂಧಿ ಮಾಡಿಕೊಳ್ಳಬೇಕು. ಅದಕ್ಕಿಂತ ಅವರ ಮೇಲೆ ಯುದ್ಧಕ್ಕೆ ಕತ್ತಿಕಟ್ಟಿ ನಿಲ್ಲದೇ ಸಂಧಿಯನ್ನು ಕೇಳುವುದೇ ಗೌರವ. ದಿಲೀರ್‌ಖಾನನು ಸಂಧಿಗೆ ಒಪ್ಪಲಾರ. ಅವನು ಏನು ಕೇಳಿದರೂ ಕೊಡಲೇ ಬೇಕಾಗುತ್ತದೆ.

ಮತ್ತೊಂದು ಕಡೆ ಪ್ರಯತ್ನವೆಂದರೆ ಶಿವಾಜಿಯೊಡನೆ ಸಂಧಾನ. ಅದು ನನಗೆ ತೋರಲೇ ಇಲ್ಲ. ನನಗೆ ಭರವಸೆಯೂ ಇಲ್ಲ. ಆ ವಿಷಯದಲ್ಲಿ ಬೇಗಂ ಸಾಹೇಬಳಿಗೆ ಬಹಳ ಭರವಸೆಯಿರುವಂತಿದೆ, ಕಾರಣವೇನೋ ದೇವರೇ ಬಲ್ಲ.

ಶಿವಾಜಿಯೊಡನೆ ಸಂಧಾನವೇನಾದರೂ ಫಲಿಸಿದರೆ ನಮ್ಮ ಅದೃಷ್ಟ; ನಮ್ಮ ಭಾಗ್ಯಕ್ಕೆ ಎಣೆಯಿಲ್ಲವೆನ್ನಬೇಕು. ಅವನು ನಮ್ಮ ಕೋಟೆಯನ್ನು

ವಶಪಡಿಸಿಕೊಳ್ಳಬೇಕೆನ್ನುವುದಿಲ್ಲ. ನಮ್ಮ ರಾಜ್ಯವನ್ನು ಕಿತ್ತುಕೊಳ್ಳುವ ಆಶೆ ಅವನಿಗಿಲ್ಲ. ಅವನಿಗೆ ಯಥೇಚ್ಛ ಹಣ ಬೇಕು. ನಮ್ಮ ಕೆಲಸವಾಗಬೇಕಾದರೆ ಹಣ ಕೊಟ್ಟೇ ಕೊಡಬೇಕು. ಆದರೆ ಅವನು ಸಂಧಿಗೊಪ್ಪುವನೇ ? ಅವನು ಹಿಂದು. ಸಂಧಿಯಾದರೂ ಆ ಸ್ನೇಹವು ಎಷ್ಟು ದಿನಗಳು ತಾನೇ ಉಳಿದೀತು ? ಹೇಗಾದರೂ ಆಗಲೀ, ಗೊಲ್ಕೊಂಡದ ಸುಲ್ತಾನರು ಶಿವಾಜಿಯೊಡನೆ ಸ್ನೇಹ ಮಾಡಿಕೊಂಡಿದ್ದಾರೆ. ನಾವೂ ಸಂಧಿಮಾಡಿಕೊಂಡರೆ, ಈ ದೆಹಲಿಯ ಬಾದಷಹರು ನಮ್ಮ ಮೇಲೆ ಯುದ್ಧಕ್ಕೆ ಬರುವ ಧೈರ್ಯವಿಲ್ಲದೇ ಹೋಗುತ್ತದೆ. ದಖ್ಖನ್ನಿನಲ್ಲಿ ಅವರಿಗೆ ಸ್ಥಳವಿಲ್ಲವಾದರೂ ಆಗಬಹುದು. ಒಳ್ಳೆಯ ಉಪಾಯ. ಬೇಗಂ ಸಾಹೇಬಳ ಬುದ್ಧಿಯನ್ನು ಎಷ್ಟು ಪ್ರಶಂಸಿಸಿದರೂ ಸಾಲದು, ಎಂದುಕೊಂಡನು.

ರಫಿ ಅಹಮದ್ ಮತ್ತು ಯೂಸುಫ್‌ಖಾನ್ ಇವರಿಬ್ಬರು ಸೇನಾಧಿಪತಿಗಳನ್ನು ಕರೆಸಿ ಅವರಿಗೆ ಹೇಳಿದನು. ನೀವಿಬ್ಬರೂ ಬಾದಷಹನ ಸೇನಾಧಿಪತಿ ದಿಲೇರ್‌ಖಾನರ ಶಿಬಿರಕ್ಕೆ ನಮ್ಮ ರಾಯಭಾರಿಗಳಾಗಿ ಹೋಗಬೇಕು. ನಮ್ಮ ಸುಲ್ತಾನರು ಬಾಲಕರಾಗಿದ್ದಾರೆ. ನೀವು ಹಠಾತ್ತನೆ ನಮ್ಮ ಮೇಲೆ ಯುದ್ಧಕ್ಕೆ ಬಂದಿರುವುದು ತರವಲ್ಲ. ಬೇಗಂ ಸಾಹೇಬರೂ ನಮ್ಮ ದರಬಾರಿನ ಉನ್ನತಾಧಿಕಾರಿಗಳೂ ಸಂಧಿಯನ್ನು ಪ್ರಾರ್ಥನೆ ಮಾಡುತ್ತಾರೆ, ಎಂದು ಹೇಳಿ ಅವರನ್ನು ಸಂಧಿಗೊಪ್ಪುವಂತೆ ಮಾಡಬೇಕು. ನಾನು ದಿಲೇರ್‌ಖಾನರಿಗೆ ಒಂದು ಪತ್ರವನ್ನು ಬರೆದುಕೊಡುತ್ತೇನೆ. ಅದನ್ನು ಅವರಿಗೊಪ್ಪಿಸಿ ಉತ್ತರವನ್ನು ತರಬೇಕು. ಷರ್ಜಾಖಾನ್ ಮತ್ತು ಉಮ್ಮರ್ ಹಯಾತ್‌ಖಾನರನ್ನು ಭೇಟಿಮಾಡಿ ನಾವು ಹೇಳಿದೆವೆಂದು ಹೇಳಬೇಕು. ಬೇಗಂ ಸಾಹೇಬರು ಅಪ್ಪಣೆ ಮಾಡಿದ್ದಾರೆಂದು ತಿಳಿಸಬೇಕು. ನಮ್ಮ ರಾಜ್ಯದಲ್ಲಿ ಅವರಿಗೆ ಮೇಲಂತಸ್ತಿನ ಸೇನಾಧಿಪತ್ಯವನ್ನು ಕೊಡುತ್ತೇವೆ. ಮೊಗಲ್ ಸೈನ್ಯದಲ್ಲಿ ಅವರಿಗೆ ಸಾಮಾನ್ಯ ಅಧಿಕಾರವು ಸಿಕ್ಕುತ್ತದೆ. ಅಷ್ಟೇ ಅಲ್ಲ. ಅವರು ವಿಶೇಷವಾಗಿ ನಂಬುವುದೂ ಇಲ್ಲ. ನನಗೂ ಅವರಿಗೂ ವೈಮನಸ್ಯವಿದ್ದರೆ ನಮ್ಮ ರಾಜ್ಯದ ಕ್ಷೇಮಾರ್ಥವಾಗಿ ಅವರು ಹೇಳುವ ಷರತ್ತುಗಳಿಗೆ ನಾನೊಪ್ಪುತ್ತೇನೆ. ಇದನ್ನು ಅವರಿಗೆ ತಿಳಿಸಬೇಕು, ಎಂದು ಹೇಳಿದನು. ಅರಮನೆಯಿಂದ ಅನರ್ಘ್ಯವಾದ ಖಿಲ್ಲತ್ತುಗಳನ್ನೂ ವಜ್ರದ

ಹಾರವನ್ನೂ ತರಿಸಿ ಇದನ್ನು ದಿಲೀರ್‌ಖಾನರಿಗೆ ಒಪ್ಪಿಸಬೇಕೆಂದು ಕಳುಹಿಸಿ ಕೊಟ್ಟನು. ಅವರಿಬ್ಬರೂ ಆ ದಿನವೇ ಬಿಜಾಪುರದಿಂದ ಹೊರಟರು.

ಸಿದ್ದಿ ಮಸೂದನು ಹಿಂದು ರಾಜ್ ಎಂಬ ಸರದಾರನನ್ನು ತನ್ನ ಮನೆಗೆ ಕರೆಸಿಕೊಂಡು 'ನೀನು ನಮ್ಮ ಸುಲ್ತಾನರ ಪರವಾಗಿ ಶಿವಾಜಿ ಮಹಾರಾಜರಲ್ಲಿಗೆ ರಾಯಭಾರಿಯಾಗಿ ಹೋಗಬೇಕು. ಸುಲ್ತಾನರ ಮಾತೆ ಬೇಗಂ ಸಾಹೇಬಾರವರು ನನ್ನನ್ನೇ ಕಳಿಸಬೇಕೆಂದು ಆಜ್ಞೆ ಮಾಡಿದ್ದಾರೆ. ನಮ್ಮ ಮೇಲೆ ದಿಲೀರ್‌ಖಾನನು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಯುದ್ಧಕ್ಕೆ ಬಂದಿದ್ದಾನೆ. ನಮ್ಮ ಕೋಟೆಯನ್ನು ರಕ್ಷಿಸಿ ಸುಲ್ತಾನರ ಗೌರವವನ್ನು ಉಳಿಸಿಕೊಡಬೇಕೆಂದು ಶಿವಾಜಿ ಮಹಾರಾಜರಲ್ಲಿ ನಮ್ಮ ಪರವಾಗಿ ಪ್ರಾರ್ಥನೆ ಮಾಡಬೇಕು. ಈಗ ಅವರು ಬಾರದಿದ್ದರೆ ನಮ್ಮ ರಾಜ್ಯ ಉಳಿಯುವುದಿಲ್ಲ. ಈ ಮಹತ್ಕಾರ್ಯವನ್ನು ಸಾಧಿಸುವ ಸಾಮರ್ಥ್ಯವು ನಿನಗಿದೆ' ಎಂದು ಅವನನ್ನು ಪ್ರಶಂಸೆಮಾಡಿ ಪ್ರೋತ್ಸಾಹಿಸಿ ಶಿವಾಜಿಯ ಭೇಟಿಗೆ ಕಳುಹಿಸಿಕೊಡಲು ಸಿದ್ಧಗೊಳಿಸಿದನು. ವಜೀರನು ಶಿವಾಜಿಗೆ ಒಂದು ಪತ್ರವನ್ನು ಬರೆದು ಆ ಹಿಂದು ರಾಜ್ ಕೈಗೆ ಕೊಟ್ಟನು. ಅದರ ಪರಿಯು ಈ ರೀತಿಯಿದ್ದಿತು.

'ಹಿಂದೂ ಬಾದಶಹ ಶಿವಾಜಿ ಮಹಾರಾಜರವರಿಗೆ–ಮೊಗಲ್ ಸೇನಾಧಿಪತಿ ದಿಲೀರ್‌ಖಾನನು ಬ್ರಹ್ಮಾಂಡ ಸೈನ್ಯವನ್ನು ಕಟ್ಟಿಕೊಂಡು ಬಿಜಾಪುರದ ಮೇಲೆ ಯುದ್ಧಕ್ಕೆ ಬಂದಿದ್ದಾನೆ. ಮೊಗಲ್ ಸೈನ್ಯವು ಸಮೀಪಕ್ಕೆ ಬಂದು ಬಿಟ್ಟಿದೆ. ರಾಜಧಾನಿಗೆ ನಲವತ್ತು ಮೈಲಿಗಳ ದೂರದಲ್ಲಿ ಬಿಡುಬಿಟ್ಟಿದ್ದಾನೆ. ಪ್ರಕೃತ ನಮ್ಮಲ್ಲಿ ಸೇನಾಬಲವಿಲ್ಲ. ಅಶ್ವಬಲವೂ ಇಲ್ಲ. ಕೋಟೆಯನ್ನು ರಕ್ಷಣೆ ಮಾಡಿಕೊಳ್ಳುವ ಸಾಮರ್ಥ್ಯ ನಮಗಿಲ್ಲ. ಯುದ್ಧ ಸಾಮಗ್ರಿಗಳಾಗಲೀ ಆಹಾರ ಸಾಮಗ್ರಿಗಳಾಗಲೀ ನಮ್ಮಲ್ಲಿ ಯಥೇಚ್ಛವಾಗಿಲ್ಲ. ಇಂಥಾ ದುಷ್ಕಾಲದಲ್ಲಿ ನಮಗೆ ಈ ಆಪತ್ತು ಒದಗಿದೆ.

ಸುಲ್ತಾನರು ಬಾಲಕರು, ಅಪ್ರಬದ್ಧರು, ಎಂಬುದನ್ನು ನೀವು ಅರಿತೇ ಇದ್ದೀರಿ. ನೀವು ಈ ಸುಲ್ತಾನೀ ರಾಜ್ಯಕ್ಕೆ ಸೇರಿದಂಥವರು. ಒಂದಾನೊಂದು ಕಾಲದಲ್ಲಿ ನಮ್ಮ ಹಿರಿಯರು ಈ ದರ್ಬಾರಿನಲ್ಲಿ ಉನ್ನತ ಸ್ಥಾನವನ್ನು ಪಡೆದು ಗೌರವವನ್ನು ಗಳಿಸಿದಂಥವರು. ನಿಮಗೂ ಆ ಭಾವನೆಯೂ ಇರುವುದು ಸಹಜವಾಗಿಯೇ ಇದೆ. ನಾವು ನಿಸ್ಸಹಾಯಕರಾಗಿ ನಿಮ್ಮನ್ನು ಬೇಡಿಕೊಳ್ಳುತ್ತಿದ್ದೇವೆ.

ನೀವು ಸೈನ್ಯಸಮೇತರಾಗಿ ಬಂದು ನಮ್ಮ ಕೋಟೆಯನ್ನು ಕಾಪಾಡಿಕೊಡಬೇಕು. ಸುಲ್ತಾನರವರ ಗೌರವವನ್ನು ಉಳಿಸಬೇಕು. ನೀವಿಲ್ಲಿಗೆ ಬಂದರೆ ಎಲ್ಲ ವಿಚಾರಗಳಲ್ಲಿಯೂ ನೀವು ಹೇಗೆ ಆಜ್ಞೆ ಮಾಡುತ್ತೀರೋ ಹಾಗೆ ಶಿರಸಾವಹಿಸಿ ನಡೆಸಿಕೊಡಲು ನಾವು ಸಿದ್ಧರಾಗಿದ್ದೇವೆ. ಪ್ರತಿ ಕ್ಷಣದಲ್ಲಿಯೂ ಚಾತಕಪಕ್ಷಿಗಳಂತೆ ನಿಮ್ಮ ಸಹಾಯವನ್ನು ನಿರೀಕ್ಷಣೆ ಮಾಡುತ್ತಿದ್ದೇವೆ.

ಇತಿ ಬಿಜಾಪುರದ ಸುಲ್ತಾನರ
ವಜೀರ್ ಸಿದ್ದಿ ಮಸೂದ್

ಹಿಂದು ರಾಜನು ಈ ಪತ್ರವನ್ನು ತೆಗೆದುಕೊಂಡು ಬಿಜಾಪುರದಲ್ಲಿ ಯಾರಿಗೂ ತಿಳಿಯದಂತೆ ರಹಸ್ಯವಾಗಿ ಕರ್ನಾಟಕದ ಮಾರ್ಗವಾಗಿ ರಾಯಗಡಕ್ಕೆ ಪ್ರಯಾಣ ಬೆಳೆಸಿದನು.

ದಿಲೇರ್‌ಖಾನನ ಶಿಬಿರಕ್ಕೆ ಹೋಗಿದ್ದ ರಾಯಭಾರಿಗಳು ದಿಲೇರ್‌ಖಾನನ ಭೇಟಿಮಾಡಿ ಖಿಲ್ಲತ್ತುಗಳನ್ನು ಒಪ್ಪಿಸಿ "ಬೇಗಂ ಸಾಹೇಬರವರೂ, ವಜೀರ್‌ರವರೂ ನಿಮಗೆ ಶರಣಾಗತರಾಗಿ ಬೇಡಿಕೊಳ್ಳುತ್ತಾರೆ. ಸಂಧಿಯನ್ನು ಪ್ರಾರ್ಥನೆ ಮಾಡುತ್ತಾರೆ. ನೀವು ಅಪ್ಪಣೆ ಕೊಡಿಸುವ ಷರತ್ತುಗಳಿಗೆ ಒಪ್ಪಲು ಸಿದ್ಧರಾಗಿದ್ದಾರೆ", ಎಂದು ಬಿನ್ನಹಮಾಡಿ ಸಿದ್ದಿ ಮಸೂದನು ಕೊಟ್ಟಿದ್ದ ಪತ್ರವನ್ನು ದಿಲೇರ್‌ಖಾನನಿಗೆ ಒಪ್ಪಿಸಿದರು.

ಆ ಪತ್ರದ ಒಕ್ಕಣೆಯು ಈ ರೀತಿಯಾಗಿದ್ದಿತು.

"ಷಹಾನ್‌ಷಹಾ ದೆಹಲಿ ಬಾದಶಹರವರ, ಸರ್ವ ಸೇನಾಧಿಪತಿ ದಿಲೇರ್ ಖಾನ್‌ರವರ ಸಮ್ಮುಖದಲ್ಲಿ–ಈ ಬೇಡಿಕೆಯು ಬಿಜಾಪುರ ಸುಲ್ತಾನರವರ ಪರವಾದದ್ದು. ಬಿಜಾಪುರದ ರಾಜ್ಯವು ಪುರಾತನವಾದದ್ದು. ಸುಲ್ತಾನರವರು ಇನ್ನೂ ಬಾಲ್ಯ ವಯಸ್ಸಿನವರಾಗಿದ್ದಾರೆ. ಆಲಂಗೀರ್ ಬಾದಶಹರು ಹಿಂದೂಸ್ಥಾನದಲ್ಲಿ ಮಹಮದೀಯ ರಾಜ್ಯಗಳ ಸಂಸ್ಥಾಪಕರು. ಅವರು ಇಡೀ ಹಿಂದೂಸ್ಥಾನದ ಸಾಮ್ರಾಟರು. ಅವರು ಇಂಥಾ ಸಣ್ಣ ರಾಜ್ಯಗಳನ್ನು ಸಂಸ್ಥಾಪನೆ ಮಾಡಬೇಕು. ಅಂಥವರು ಕೋಪಗೊಂಡು ಈ ಎಳೆ ಚಿಗುರನ್ನು ಉಗುರಿನಿಂದ ಚಿಗುಟಿಹಾಕಿದರೆ, ಅದನ್ನು ಸಂರಕ್ಷಿಸಬಲ್ಲವರಾರು ? ಆಲಂಗೀರ್ ಬಾದಶಹರವರಿಗೆ ನಮ್ಮ ಸುಲ್ತಾನರವರು ಸಂಪೂರ್ಣ ಶರಣಾಗತರಾಗುತ್ತಾರೆ. ನಮ್ಮ ರಾಜ್ಯದಲ್ಲಿ ಯಾವ ಪ್ರದೇಶಗಳನ್ನು ಮೊಗಲ್ ಸಾಮ್ರಾಜ್ಯರ ಅಧಿಕಾರಕ್ಕೆ

ಒಪ್ಪಿಸಬೇಕೆಂದರೂ ಶಿರಸಾವಹಿಸಿ ಅದನ್ನೊಪ್ಪಿಕೊಳ್ಳುತ್ತಾರೆ. ತಮ್ಮ ಸೈನ್ಯದ ಯುದ್ಧದ ಖರ್ಚುಗಳನ್ನೆಲ್ಲಾ ನಾವು ಒಪ್ಪಿಕೊಳ್ಳಲು ಸಿದ್ಧರಾಗಿದ್ದೇವೆ. ನಮ್ಮ ರಾಜ್ಯವನ್ನು ಕಾಪಾಡಿ ನಮ್ಮ ಸುಲ್ತಾನರನ್ನು ಗೌರವಿಸುವ ಭಾರ ತಮಗೆ ಸೇರಿದ್ದಾಗಿದೆ. ಇಸ್ಲಾಂ ಧರ್ಮವು ಸೋದರತ್ವದ ಧರ್ಮವೆಂದು ತಮಗೆ ತಿಳಿದೇ ಇದೆ. ಆ ಸೋದರ ಪ್ರೇಮದಿಂದ ನಮ್ಮ ಸುಲ್ತಾನರನ್ನು ರಕ್ಷಣೆ ಮಾಡಬೇಕೆಂದು ಬೇಡಿಕೊಳ್ಳುತ್ತೇವೆ.

ಸುಲ್ತಾನರ ಆಜ್ಞಾಧಾರಕ
ಸಿದ್ದಿ ಮಸೂದ್

ದಿಲೀರಖಾನನು ಆ ಪತ್ರವನ್ನೋದಿಕೊಂಡು ಆ ರಾಯಭಾರಿಗಳಿಬ್ಬರನ್ನೂ ಗೌರವಿಸಿ ಆಸನಗಳ ಮೇಲೆ ಕುಳಿತುಕೊಳ್ಳುವಂತೆ ಹೇಳಿದನು. ಅವರು ವಿನಯದಿಂದ ಸಲಾಂ ಮಾಡಿ ಕುಳಿತುಕೊಂಡರು. ದಿಲೀರ್‌ಖಾನನು "ನಿಮ್ಮ ವಜೀರರು ಮಹಾ ಸಾಮರ್ಥ್ಯಶಾಲಿಗಳೆಂದು ಕೇಳಿದ್ದೇವೆ. ಅವರು ನಮ್ಮೆದುರಿಗೆ ಯುದ್ಧಕ್ಕೆ ಬಾರದಿರುವುದು ಆಶ್ಚರ್ಯವಾಗಿದೆ" ಎಂದನು.

ರಫಿ ಅಹಮದನು ಸಲಾಂ ಮಾಡಿ "ಸೇನಾಧಿಪತಿಗಳೇ! ರಾಜಮಾತೆ ಬೇಗಂಸಾಹೇಬರು ಯುದ್ಧಕ್ಕೆ ಸರ್ವಥಾ ಒಪ್ಪುವುದಿಲ್ಲ. ಅವರು ಕೋಟೆಯನ್ನು ಅರಮನೆಯನ್ನು ತಮ್ಮ ವಶಕ್ಕೊಪ್ಪಿಸಿ ಬಾಲಕನಾದ ಸುಲ್ತಾನನನ್ನು ಕರೆದುಕೊಂಡು ಎಲ್ಲಿಗಾದರೂ ಹೊರಟುಹೋಗಲು ನಿಶ್ಚಯಿಸಿದ್ದಾರೆ. ಹೀಗಿರುವಲ್ಲಿ ನಮ್ಮ ವಜೀರರೇನು ಮಾಡಲಾದೀತು?" ಎಂದನು.

ಖಾನನು ತಲೆದೂಗಿದನು. "ಯುದ್ಧವಾಗಿದ್ದರೆ ಆ ಮಾತು ಬೇರೆಯಾಗಿದ್ದಿತು. ಈಗ ನಿಮ್ಮ ವಜೀರರು ಸಂಧಿಯನ್ನು ಪ್ರಾರ್ಥಿಸುತ್ತಿದ್ದಾರೆ. ಈ ಸಂಧಿ ಪ್ರಸ್ತಾಪವು ಆತ್ಮಸಾಕ್ಷಿಯಾಗಿ ನಿಜವೆಂದು ನಾವು ನಂಬಬಹುದೇ?"

ರಫಿ ಅಹಮದನು ಎದ್ದು ನಿಂತು ಸಲಾಂ ಮಾಡಿ, "ಖುದಾನ ಸಾಕ್ಷಿಯಾಗಿಯೂ ನಂಬಬಹುದು ಹುಜೂರ್. ಈ ಮಾತಿನಲ್ಲಿ ಸಂದೇಹವಿಲ್ಲ" ಎಂದನು.

"ಒಳ್ಳೆಯದು ಕುಳಿತುಕೊಳ್ಳಿರಿ. ನೀವಿಬ್ಬರೂ ತರುಣ ಸರದಾರರು, ನಿಮ್ಮ ಮಾತನ್ನು ನಾನು ಪೂರ್ಣವಾಗಿ ನಂಬುತ್ತೇನೆ. ಈ ಸಂಧಿಗೆ ಎಂಥವರಾದರೂ ಒಪ್ಪಲೇಬೇಕು. ಆದರೆ ವಜೀರ್ ಸಿದ್ದಿ ಮಸೂದರವರೇ ಖುದ್ದಾಗಿ

ನಮ್ಮಲ್ಲಿಗೆ ಬಂದು ಸಂಧಿ ಪ್ರಸ್ತಾಪ ಮಾಡಿದ್ದರೆ, ಈ ಸಂಧಿಯು ಹದಿನಾರಾಣೆ 'ಸಾಚಾ' ಎಂದು ನಂಬುತ್ತಿದ್ದೆವು."

ಈ ಮಾತನ್ನು ಕೇಳಿ ರಫಿ ಅಹಮದನು ತಬ್ಬಿಬ್ಬಾದನು.

ಯೂಸುಫ್‌ಖಾನನು, "ಹುಜೂರ್! ತಮ್ಮ ಮಾತು ದೇವವಾಣಿಗೂ ಸತ್ಯ. ನಮ್ಮ ವಜೀರರು ಅದನ್ನೇ ಮೊದಲು ಯೋಚನೆ ಮಾಡಿದರು. ಅವರು ಇಲ್ಲಿಗೆ ಬರಲು ಹೊರಟೇ ಇದ್ದರು. ಇಲ್ಲಿ ಬಿಜಾಪುರದ ಸೇನಾಧಿಪತಿಗಳು ಇಬ್ಬರಿದ್ದಾರೆ. ಅವರು ವಜೀರರೊಡನೆ ದ್ವೇಷವನ್ನು ಸಾಧಿಸಲು ತಮ್ಮಲ್ಲಿಗೆ ಬಂದಿದ್ದಾರೆ. ಅವರಿಂದ ಅಪಮಾನವಾಗಬಹುದೆಂದೂ ಅಪಾಯಕ್ಕೆ ಸಿಕ್ಕ ಬಹುದೆಂದೂ ಯೋಚಿಸಿ ನಮ್ಮ ವಜೀರರು ಹಿಂಜರಿದರು. ಷರ್ಜಾಖಾನ್ ಮತ್ತು ಉಮ್ಮರ್ ಹಯಾತ್‌ಖಾನ್ ಇವರಿಬ್ಬರನ್ನು ಬಿಟ್ಟು ಸಂಧಿಮಾಡ ಬೇಕೆಂದು ನಮ್ಮ ವಜೀರರ ಅಭಿಪ್ರಾಯವಿಲ್ಲ. ನಮ್ಮೊಡನೆ ಅವರಿಗೂ ಸ್ನೇಹ ವಚನಗಳನ್ನು ಹೇಳಿಕಳಿಸಿದ್ದಾರೆ. ಈ ಸಂಧಿಯ ಭಾರವನ್ನು ಸಿದ್ದಿ ಮಸೂದ್ ರವರು ಅವರ ಮೇಲೆಯೇ ಹೊರಿಸಿದ್ದಾರೆ. ಅವರು ಹೇಳಿದ ಷರತ್ತುಗಳಿಗೆ ಒಪ್ಪುವುದಾಗಿ ನಮ್ಮೊಡನೆ ಹೇಳಿಕಳಿಸಿದ್ದಾರೆ. ನಾವು ತಮ್ಮ ಭೇಟಿಯ ನಂತರ ಅವರ ಭೇಟಿಗೆ ಹೋಗಬೇಕೆಂದು ನಿಶ್ಚಯಿಸಿಕೊಂಡು ಇಲ್ಲಗೆ ಬಂದಿದ್ದೇವೆ" ಎಂದನು.

"ಭೇಷ್! ಇದು ನ್ಯಾಯವಾಗಿದೆ. ರಾಜನೀತಿಯಲ್ಲಿ ನಿಮ್ಮ ವಜೀರರು ನಮ್ಮನ್ನು ಗೆದ್ದಂತೆಯೇ ಆಯಿತು. ಬಿಜಾಪುರದ ಸೇನಾಧಿಪತಿಗಳಾದ ಷರ್ಜಾ ಖಾನರೂ, ಹಯಾತ್ ಖಾನರೂ ಈ ಸಂಧಿಯ ಜವಾಬ್ದಾರಿಯನ್ನು ಒಪ್ಪಿ ಕೊಂಡರೆ. ನಾವು ಇಷ್ಟವಿರಲಿ, ಇಷ್ಟವಿಲ್ಲದಿರಲಿ ಸಂಧಿಗೊಪ್ಪಲೇಬೇಕು. ಅರ್ಥಾತ್ ಈಗ ನಾವು ರಣಕ್ಷೇತ್ರದಲ್ಲಿ ನಿಂತಿದ್ದೇವೆ. ಆ ಇಬ್ಬರು ಸೇನಾಧಿಪತಿ ಗಳು ಹೇಗೆ ಹೇಳುತ್ತಾರೋ ಹಾಗೆ ನಡೆಸಿಕೊಡಲು ನಾನು ತಯಾರಾಗಿದ್ದೇನೆ. ಅವರೊಪ್ಪಿಕೊಂಡರೆ ನಾನೇ ಖುದ್ದಾಗಿ ಅವರೊಡನೆ ಬಿಜಾಪುರಕ್ಕೆ ಬಂದು ಸುಲ್ತಾನರ ದರಬಾರಿನಲ್ಲಿ ಅವರಿಗೆ ಭೇಟಿಕೊಡುತ್ತೇನೆ. ನಾವು ಯುದ್ಧವಿಲ್ಲದೇ ಗೆದ್ದಂತಾಯಿತು. ಅವರ ಇಷ್ಟಾರ್ಥವೂ ನೆರವೇರಿದಂತಾಯಿತು. ಇದು ಸಫಲವಾದರೆ ನಿಜವಾಗಿಯೂ ನಿಮ್ಮ ವಜೀರರ ಜಯ, ಎಂದು ನಾನೊಪ್ಪಿ ಕೊಳ್ಳುತ್ತೇನೆ. ನೀವು ಹೋಗಿ ನಿಮ್ಮ ಸೇನಾಧಿಪತಿಗಳೊಡನೆ ಮಾತನಾಡಿರಿ.

ನಿಮ್ಮ ರಾಯಭಾರವು ಅಲ್ಲಿ ಯಶಸ್ವಿಯಾಗುತ್ತದೆ", ಎಂದು ಹೇಳಿ ಆವರನ್ನು ಷರ್ಜಾಖಾನರ ಸಮೀಪಕ್ಕೆ ಕಳುಹಿಸಿಕೊಟ್ಟನು. ರಾಯಭಾರಿಗಳಿಬ್ಬರೂ ಹೋಗಿ ಷರ್ಜಾಖಾನನ ಭೇಟಿಮಾಡಿದರು. ವಜೀರರು ತಮ್ಮನ್ನು ಕಳುಹಿಸಿ ಕೊಟ್ಟಿರುವ ವಿದ್ಯಮಾನಗಳನ್ನೆಲ್ಲಾ ವಿವರವಾಗಿ ತಿಳಿಸಿದರು.

ಷರ್ಜಾಖಾನನು 'ಬಿಜಾಪುರವು ಇಷ್ಟು ನಿಸ್ಸತ್ವವಾಗಿಹೋಗಿದೆಯೇ ? ಈ ದುರವಸ್ಥೆಯನ್ನು ನಾವೆಂದೂ ಕಂಡು ಕೇಳಿರಲಿಲ್ಲ. ಬಾದಶಹರ ಸೈನ್ಯಗಳು ಬರುತ್ತಿರುವ ಮಾರ್ಗದಲ್ಲಿಯೇ ವಜೀರರು ಶರಣಾಗತರಾಗಿ ಹೇಳಿಕಳಿಸಿದ್ದಾರೆ. ಬಿಜಾಪುರದಲ್ಲಿ ಇನ್ನು ವಜೀರರೇಕಿರಬೇಕು. ನಾವು ತಾನೇ ಯಾವ ಭಾಗ್ಯಕ್ಕಾಗಿ ಅಲ್ಲಿಗೆ ಬರಬೇಕು. ರಾಜ್ಯವನ್ನು ದೆಹಲಿಯ ಸಾಮ್ರಾಟರಿಗೆ ಒಪ್ಪಿಸಿದ ಮೇಲೆ ನಮಗೂ ಸಿದ್ದಿ ಮಸೂದರಿಗೂ ಸ್ನೇಹವೆಂದರೆ ಅರ್ಥವೇನು ? ನಾವು ದಿಲೀರ್‌ಖಾನರೊಂದಿಗೆ ಆಲೋಚನೆ ಮಾಡಿ ನಿಮಗೆ ಉತ್ತರ ಕೊಡುತ್ತೇವೆ" ಎಂದು ಹೇಳಿದನು.

ದಿಲೀರ್‌ಖಾನನು ಷರ್ಜಾಖಾನನೊಡನೆಯೂ ಹಯಾತ್‌ಖಾನನೊಡನೆಯೂ ಈ ಸಂಧಿಯ ರಹಸ್ಯವನ್ನು ಕುರಿತು ಆಲೋಚನೆ ಮಾಡಿದನು. ಷರ್ಜಾಖಾನನು "ಖಾನ್ ಸಾಹೇಬರೇ ! ನಮಗೇನೋ ಈ ಸಂಧಿಯಲ್ಲಿ ಸುತಾರಾಂ ನಂಬಿಕೆ ಇಲ್ಲ. ಸಿದ್ದಿಮಸೂದರವರನ್ನು ನಾವು ಬಹುಕಾಲದಿಂದ ಬಲ್ಲೆವು. ಹೀಗೆ ಮಾರ್ಗಮಧ್ಯದಲ್ಲಿಯೇ ಸಂಧಿಯನ್ನು ಪ್ರಾರ್ಥಿಸುತ್ತಾರೆಂಬುದನ್ನು ನಾವು ನಂಬುವುದಿಲ್ಲ. ನಮ್ಮ ಮೇಲೆ ದೂರು ಹೊರಿಸಬೇಡಿರಿ. ಈ ಸಂಧಿಯಲ್ಲಿ ಏನೋ ಮಹತ್ತರವಾದ ಕುತಂತ್ರವು ಅಡಗಿದೆಯೆಂದೇ ನಮ್ಮ ಭಾವನೆ" ಎಂದು ಹೇಳಿದನು.

ದಿಲೀರ್‌ಖಾನನು ಬಹಳವಾಗಿ ಆಲೋಚನೆ ಮಾಡಿ ಆ ರಾಯಭಾರಿಗಳನ್ನು ಕರೆಸಿ "ಖಾನರು ಈ ಸಂಧಿಯನ್ನು ಪೂರ್ಣವಾಗಿ ಒಪ್ಪುತ್ತಿಲ್ಲ. ಏನೇ ಆಗಲಿ ನಮಗೆ ಈ ಸಂಧಿಯನ್ನೊಪ್ಪಿಕೊಳ್ಳುವುದು ಸರಿಯಿಲ್ಲವೆಂದು ತೋರುತ್ತದೆ. ಸಿದ್ದಿಮಸೂದರು ಬಿಜಾಪುರದ ಕೋಟೆಯನ್ನು ಬಾಗಿಲು ತೆರೆದು ನಮಗೊಪ್ಪಿಸಿಬಿಡಲಿ. ಸುಲ್ತಾನರನ್ನು ನಮ್ಮ ವಶಕ್ಕೊಪ್ಪಿಸಲಿ, ಅವರಿಗೆ ಯಾವ ಅಪಮಾನವೂ ಸಂಭವಿಸದಂತೆ ನಾವು ನೋಡಿಕೊಳ್ಳುತ್ತೇವೆ. ಸುಲ್ತಾನರ ಅರಮನೆಗಾಗಲೀ, ರಾಜಧಾನಿಯಲ್ಲಿರುವ ಉಮ್ರಾಗಳು,

ನರಪತಿಗಳು ಇವರುಗಳ ಅರಮನೆಗಾಗಲೀ ಯಾವ ಅಪಾಯವೂ ಸಂಭವಿಸದಂತೆ ನೋಡಿಕೊಳ್ಳಲು ನಾನು ವಚನ ಕೊಡುತ್ತೇನೆ. ರಾಜ್ಯದ ವಿಚಾರವೆಲ್ಲಾ ಬಾದಶಹರವರಿಗೆ ಸೇರಿದ್ದು. ಅವರು ಚಿತ್ತಕ್ಕೆ ಬಂದಂತೆ ಮಾಡಿಸಬಹುದು" ಎಂದು ಹೇಳಿದನು.

ಆ ರಾಯಭಾರಿಗಳಿಬ್ಬರೂ ತಮ್ಮ ರಾಯಭಾರವು ವಿಫಲವಾಯಿತೆಂದು ತಿಳಿದುಕೊಂಡು ರಾಜಧಾನಿಗೆ ಹಿಂತಿರುಗಿದರು.

ದಿಲೀರ್‌ಖಾನನ ಸೈನ್ಯಗಳು ಶಿಬಿರವನ್ನು ಕಿತ್ತು ಮುಂದಕ್ಕೆ ಹೊರಟವು. ಬಿಜಾಪುರಕ್ಕೆ ಆರು ಮೈಲಿಗಳ ದೂರದಲ್ಲಿರುವ ಭರತ್ಗಿ ಎಂಬ ಸ್ಥಳದಲ್ಲಿ ಮೊಗಲ್ ಸೈನ್ಯಗಳು ಬೀಡುಬಿಟ್ಟವು.

ಶಿವಾಜಿಯಲ್ಲಿಗೆ ರಾಯಭಾರಿಯಾಗಿ ಹೋಗಿದ್ದ ಹಿಂದುರಾಜ್‌ನೆಂಬ ಸರದಾರನು ರಾಯಘಡವನ್ನು ತಲುಪಿ ಶಿವಾಜಿ ಮಹಾರಾಜರ ಭೇಟಿಮಾಡಿ ವಜೀರ್ ಸಿದ್ದಿಮಸೂದರವರು ಕೊಟ್ಟಿದ್ದ ಪತ್ರವನ್ನೊಪ್ಪಿಸಿದನು. ಶಿವಾಜಿಯು ಬಿಜಾಪುರದ ಸಮಾಚಾರಗಳನ್ನೆಲ್ಲಾ ಸಾವಧಾನವಾಗಿ ವಿಚಾರಿಸಿದನು. ತನ್ನ ಕಡೆಯ ಸೇನಾಧಿಪತಿಗಳನ್ನೂ ಮಂತ್ರಿಗಳನ್ನೂ ಕರೆಸಿ ಬಿಜಾಪುರದ ಸುಲ್ತಾನರ ಸಹಾಯಕ್ಕೆ ಹೋಗುವುದು ಸರಿಯೇ ತಪ್ಪೇ ಎಂದು ಸಮಾಲೋಚನೆ ನಡೆಸಿದನು. ಆ ಸೇನಾಧಿಪತಿಗಳು "ನಾವು ಯುದ್ಧಕ್ಕೆ ಹೋಗದಿದ್ದರೆ ದಿಲೀರ್ ಖಾನನಿಗೆ ಬಿಜಾಪುರದ ಕೋಟೆಯು ವಶವಾಗುವುದೇನೊ ಖಂಡಿತ' ಆಮೇಲೆ ನಮ್ಮ ರಾಜ್ಯಕ್ಕೆ ಉಭಯ ಪಾರ್ಶ್ವಗಳಲ್ಲಿಯೂ ಮೊಗಲರ ಕಾಟ ಸಂತತವಾಗಿ ತಪ್ಪಿದ್ದಲ್ಲ. ಬಿಜಾಪುರದಲ್ಲಿ ಅಪಾರವಾದ ಐಶ್ವರ್ಯವಿದೆ. ಅದೂ ದಿಲೀರ್ ಖಾನನ ಕೈಗೆ ಸಿಕ್ಕುತ್ತದೆ. ಅದನ್ನು ವಿನಿಯೋಗಿಸಿ ನಮ್ಮ ಮೇಲೆ ಯುದ್ಧವನ್ನು ಹಚ್ಚುತ್ತಾನೆ. ಈಗಲೇ ಅವನ ಮೇಲೆ ಬಿದ್ದು ಹೊಡೆದೋಡಿಸಿದರೆ. ಮತ್ತೆ ನಮ್ಮ ಕಡಗೆ ತಿರುಗಿನೋಡುವ ಸಾಹಸವು ಅವನಿಗಿರುವುದಿಲ್ಲ" ಎಂದರು.

ಶಿವಾಜಿಯು ತಾನೇ ಯುದ್ಧಕ್ಕೆ ಹೊರಡುವುದಾಗಿ ನಿಶ್ಚಯ ಮಾಡಿದನು. ವಿಸಾಜಿ ನೀಲಕಂಠನೆಂಬ ಸೇನಾಧಿಪತಿಯೊಡನೆ ಹತ್ತು ಸಾವಿರ ಸೈನ್ಯವನ್ನು ಮುಂಚಿತವಾಗಿ ಕಳುಹಿಸಿಕೊಟ್ಟನು. ಹಿಂದುರಾಜ್‌ನು ವಿಸಾಜಿ ನೀಲಕಂಠನ ಜೊತೆಯಲ್ಲಿಯೇ ಬಿಜಾಪುರಕ್ಕೆ ಬಂದನು. ವಿಸಾಜಿ ನೀಲಕಂಠನು ಬಿಜಾಪುರಕ್ಕೆ ಹೋಗಿ ಸಿದ್ದಿಮಸೂದನನ್ನು ಕಂಡು "ಬಿಜಾಪುರದ ಕೋಟೆಯು

ರಕ್ಷಣೆಯನ್ನು ನೀವು ಮಾಡಿಕೊಳ್ಳಿರಿ. ನಮ್ಮ ಐದು ಸಹಸ್ರ ದಂಡು ಬಿಜಾಪುರದಲ್ಲಿಯೂ, ಐದು ಸಹಸ್ರ ದಂಡು ಭೂಪಾಲಗಡದಲ್ಲಿಯೂ ನನಗಾಗಿ ಕಾಯುತ್ತಿದೆ. ಸ್ವಯಂ ಶಿವಾಜಿ ಮಹಾರಾಜರವರೇ ಸೈನ್ಯಸಮೇತರಾಗಿ ಬರುತ್ತಿದ್ದಾರೆ" ಎಂದು ತಿಳಿಸಿದನು.

ಸಿದ್ದಿ ಮಸೂದನಿಗೆ ಅತ್ಯಂತ ಸಂತೋಷವಾಯಿತು. ಈ ಸಮಾಚಾರವನ್ನು ಬೇಗಂ ಸಾಹೇಬಳಿಗೆ ವಿಜ್ಞಾಪನೆ ಮಾಡಿದನು. "ನಿಮ್ಮ ಇಷ್ಟದಂತೆಯೇ ಎಲ್ಲವೂ ಕೂಡಿಬಂದಿದೆ. ಇನ್ನು ನಮಗೇನೂ ಭಯವಿಲ್ಲ" ಎಂದು ಹೇಳಿದನು.

ಮರಾಠಾ ಸೈನ್ಯಗಳು ವಿಸಾಜಿ ನೀಲಕಂಠನ ನಾಯಕತ್ವದಲ್ಲಿ ದಿಲೇರ್ ಖಾನನ ಶಿಬಿರದ ಮೇಲೆ ಯುದ್ಧಕ್ಕೆ ತೊಡಗಿದವು. ಬಿಜಾಪುರದ ರಾಜ್ಯದ ನಾನಾ ಕಡೆಗಳಲ್ಲಿ ಮೊಗಲ್ ಸೈನ್ಯಗಳೂ, ಮರಾಠಾ ಸೈನ್ಯಗಳೂ ಹೋರಾಡುತ್ತಿದ್ದವು. ಶಿವಾಜಿಯು ಸೈನ್ಯಸಮೇತನಾಗಿ ಪನ್ಹಾಲಾದುರ್ಗಕ್ಕೂ, ಬಿಜಾಪುರಕ್ಕೂ ಮಧ್ಯದಲ್ಲಿರುವ ಸೆಲ್ಗೂರ್‌ನಲ್ಲಿ ಬಂದು ತನ್ನ ಶಿಬಿರವನ್ನು ಹೂಡಿದನು. ಸಿದ್ದಿ ಮಸೂದನು ತನ್ನ ಕಡೆಯ ಅಧಿಕಾರಿಗಳನ್ನು ಶಿವಾಜಿಯೆಡೆಗೆ ಕಳುಹಿಸಿ ಸ್ವಾಗತವಿತ್ತನು.

ದಿಲೇರ್‌ಖಾನನು ಶಿವಾಜಿಯು ತಾನೇ ದೊಡ್ಡ ಸೈನ್ಯದೊಡನೆ ಯುದ್ಧಕ್ಕೆ ಬರುತ್ತಿರುವ ಸಮಾಚಾರವನ್ನು ಕೇಳಿ ಹಿಮ್ಮೆಟ್ಟುವ ಯೋಚನೆ ಮಾಡುತ್ತಿದ್ದನು ಇಷ್ಟೊಂದು ಮಹಾ ಸೈನ್ಯದೊಡನೆ ಬಂದುದು ಏನೂ ಪ್ರಯೋಜನವಾಗದೇ ಹೋಯಿತು. ಶಿವಾಜಿಯು ಎರಡು ಸಾವಿರದೈನೂರು ಸೈನ್ಯಗಳೊಡನೆ ಆನಂದರಾಯನನ್ನು ಜೊತೆಯಲ್ಲಿ ಕರೆದುಕೊಂಡು ಬಿಜಾಪುರದ ಸಮೀಪಕ್ಕೆ ಬಂದುಬಿಟ್ಟನು. ರಾಜಧಾನಿಯಲ್ಲೆಲ್ಲಾ ಶಿವಾಜಿಯು ಬಂದಿರುವ ಸಮಾಚಾರವು ಹರಡಿ ಕೋಲಾಹಲವೆದ್ದಿತು. ಸಿದ್ದಿ ಮಸೂದನು ಬಂದು ಶಿವಾಜಿಯ ಭೇಟಿ ಮಾಡಿದನು. ಶಿವಾಜಿಯ ಸಹಾಯಕ್ಕಾಗಿ ವಿಶೇಷ ಧನ್ಯವಾದಗಳನ್ನು ಅರ್ಪಿಸಿದನು. ಶಿವಾಜಿಯನ್ನು ಬಿಜಾಪುರದ ಕೋಟೆಯೊಳಗೆ ಬರಬೇಕೆಂದೂ ಸುಲ್ತಾನನನ್ನು ದರಬಾರಿನಲ್ಲಿ ಭೇಟಿ ಮಾಡಬೇಕೆಂದೂ ಸಿದ್ದಿ ಮಸೂದನು ಪ್ರಾರ್ಥನೆ ಮಾಡಿದನು. ರಾಜಧಾನಿಯಲ್ಲಿ ಶಿವಾಜಿ ಮಹಾರಾಜನನ್ನು ಎದುರುಗೊಳ್ಳುವ ಸಿದ್ಧತೆಗಳೆಲ್ಲವೂ ನಡೆಯುತ್ತಿದ್ದವು. ಅರಮನೆಯಲ್ಲಿ ಶಿವಾಜಿಯ ಭೇಟಿಗಾಗಿ ಅಭೂತಪೂರ್ವವಾದ ಸಿದ್ಧತೆಗಳು ನಡೆಯುತ್ತಿದ್ದವು. ಮಂತ್ರಿ

ಯಾದ ಮೋರೋ ತ್ರಿಂಬಕನು ಶಿವಾಜಿಯನ್ನು ಅಂತರಂಗದಲ್ಲಿ ಭೇಟಿಮಾಡಿದನು. "ಮಹಾರಾಜರು ಏಕಾಏಕಿ ಬಿಜಾಪುರದ ಅರಮನೆಗೆ ಹೋಗಿ ಆ ಬಾಲಕನಾದ ಸುಲ್ತಾನನನ್ನು ಭೇಟಿಮಾಡುವುದು ನಮಗೆಲ್ಲಾ ಒಪ್ಪಿಗೆಯಾಗಿಲ್ಲ. ಸಿದ್ದಿ ಮಸೂದನು ನಂಬಿಕೆಗೆ ಅರ್ಹನಾದ ದೊಡ್ಡ ಮನುಷ್ಯನಲ್ಲ. ಅವನು ಏನಾದರೂ ಉಪಾಯಮಾಡಿ ನಿಮಗೆ ಅಪಾಯವನ್ನು ತಂದೊಡ್ಡಬಹುದು. ಆದರಿಂದ ನಮ್ಮ ಸರ್ವನಾಶಕ್ಕೆ ಕಾರಣವಾಗುತ್ತದೆ. ಈ ಬಿಜಾಪುರದವರಿಗೆ ಹೊರಗಿನಿಂದಲೇ ನಮ್ಮ ಸಹಾಯಗಳೆಲ್ಲವನ್ನೂ ಮಾಡಬಹುದು. ಬಿಜಾಪುರದ ಅರಮನೆಗೆ ಮಾತ್ರ ನೀವು ಹೋಗಕೂಡದು" ಎಂದು ತಡೆಗಟ್ಟಿದನು. ಶಿವಾಜಿಯು, "ಅಂತಹ ಭಯವೇನೂ ಇಲ್ಲ. ಆದಾಗ್ಯೂ ನಾನು ಯಾವಾಗಲೂ ನಿಮ್ಮಗಳ ಮಾತನು ಮೀರಿದವನಲ್ಲ. ಈಗಲೂ ನಿಮ್ಮ ಮಾತಿಗೆ ಕಟ್ಟುಬೀಳುತ್ತೇನೆ" ಎಂದು ಹೇಳಿದನು. ಸಿದ್ದಿ ಮಸೂದನನ್ನು ಕರೆಸಿ, "ವಜೀರರೇ, ನಮಗೆ ಬಿಜಾಪುರದೊಳಗೆ ಬಂದು ನಿಮ್ಮ ಆತಿಥ್ಯವನ್ನು ಸ್ವೀಕರಿಸಲು ಎಷ್ಟೋ ಅಭಿಲಾಷೆಯಿತ್ತು. ಸುಲ್ತಾನರ ದರ್ಬಾರನ್ನು ನನ್ನ ಚಿಕ್ಕತನದಲ್ಲಿ ನೋಡಿದ್ದೇನೆ. ಆ ನೆನಪು ಇನ್ನೂ ಇದೆ. ಆಗ ನಿಮ್ಮ ಸುಲ್ತಾನರಿಗಿಂತಲೂ ಸ್ವಲ್ಪ ದೊಡ್ಡ ವಯಸ್ಸಿನವನಾಗಿರಬಹುದು. ನಾನಾಗಿಯೇ ಸುಲ್ತಾನರ ಭೇಟಿಗೆ ಬರಬೇಕೆಂದು ನಿಶ್ಚಯ ಮಾಡಿದ್ದೆ. ಆದರೆ ಈ ಮೊಗಲರ ಯುದ್ಧವು ಇನ್ನೂ ಪೂರೈಸಿಲ್ಲ. ನಿಮ್ಮ ರಾಜ್ಯದಲ್ಲಿ ಎಲ್ಲೆಲ್ಲಿಯೂ ಯುದ್ಧಗಳು ನಡೆಯುತ್ತಿವೆ. ಈ ಯುದ್ಧಗಳೆಲ್ಲಾ ಪೂರೈಸಿ ಶಾಂತವಾದ ಮೇಲೆ ನಾನು ಸುಲ್ತಾನರ ಭೇಟಿಗೆ ಬರುತ್ತೇನೆ. ಈಗ ಈ ಭೇಟಿಯ ಉತ್ಸವವನ್ನು ಇಟ್ಟುಕೊಳ್ಳಬೇಡಿರಿ. ನಿಮ್ಮ ಕೋಟೆಯೊಳಗೂ ಎಷ್ಟೋ ಮಂದಿ ನಮ್ಮ ವಿರೋಧಿಗಳಿರಬಹುದು" ಎಂದು ಹೇಳಿ ಸಮಾಧಾನಗೊಳಿಸಿದನು. ಸಿದ್ದಿ ಮಸೂದನು, "ನಮ್ಮ ಕೋಟೆಯ ಜನರು ನಿಮ್ಮನ್ನು ಉತ್ಸಾಹದಿಂದ ಎದುರುಗೊಳ್ಳಲು ಏರ್ಪಾಡುಗಳನ್ನು ಮಾಡಿಕೊಳ್ಳುತ್ತಿದ್ದಾರೆ. ಅರಮನೆಯಲ್ಲಿಯೂ ನಿಮ್ಮ ಆತಿಥ್ಯಕ್ಕೆ ಬೇಕಾದ ಸಿದ್ಧತೆಗಳೆಲ್ಲಾ ನಡೆಯುತ್ತಿವೆ. ಅವರೆಲ್ಲರ ಉತ್ಸಾಹ ಭಂಗವಾದಂತಾಗುತ್ತದೆ" ಎಂದು ಹೇಳಿದನು.

ಶಿವಾಜಿಯು, "ವಜೀರರೇ! ಮತ್ತೂ ಒಂದು ರಹಸ್ಯ ಕಾರಣವಿದೆ. ಅದನ್ನು ನೀವು ಅರಿತುಕೊಳ್ಳಬಲ್ಲಿರಿ. ನಾನು ಸುಲ್ತಾನರ ದರ್ಬಾರಿಗೆ ಬಂದ

ನಮ್ಮಿಬ್ಬರ ಭೇಟಿಯಾದರೆ ಈ ಸಮಯದಲ್ಲಿ ನೀವೆಲ್ಲರೂ ಸುಲ್ತಾನರನ್ನು ಶರಣಾಗತರನ್ನಾಗಿ ಮಾಡಿದಿರಿ, ಎಂದು ನಿಮ್ಮ ವಿರೋಧಿಗಳು ಗುಲ್ಲೆಬ್ಬಿಸುತ್ತಾರೆ. ಆದರಿಂದ ನಿಮಗೂ ಕಳಂಕ. ಸುಲ್ತಾನರ ದರ್ಬಾರಿಗೂ ನಾನು ಅಗೌರವವನ್ನುಂಟು ಮಾಡಿದಂತಾಗುತ್ತದೆ. ನೀವು ನಮ್ಮನ್ನು ಆಪ್ತರಂತೆ ಸಹಾಯ ಬೇಡಿದಿರಿ, ಈ ಕಷ್ಟದಲ್ಲಿ ಬಂದು ನಾವು ನೆರವಾಗಿದ್ದೇವೆ. ಈ ದಿಲೀರ್‌ಖಾನನನ್ನು ಪೂರ್ತಿಯಾಗಿ ನಿಮ್ಮ ರಾಜ್ಯದಿಂದ ಓಡಿಸಿಬಿಡುತ್ತೇವೆ. ಆಗ ನಮ್ಮ ಸಹಾಯವು ಪ್ರಪಂಚಕ್ಕೆಲ್ಲಾ ವೇದ್ಯವಾದಂತಾಗುತ್ತದೆ. ನಮ್ಮೆರಡು ರಾಜ್ಯಗಳು ಸ್ನೇಹ ಬಾಂಧವ್ಯಗಳು ಸಮಾನ ಗೌರವದಿಂದ ಬೆಳೆಯಲು ಆಸ್ಪದವಾಗುತ್ತದೆ" ಎಂದನು.

ಸಿದ್ದಿ ಮಸೂದನು ಅರಮನೆಯಿಂದ ಖಿಲ್ಲತ್ತುಗಳನ್ನೂ ಅಪಾರವಾದ ಕಾಣಿಕೆಯನ್ನೂ ತಂದು ಶಿವಾಜಿ ಮಹಾರಾಜನಿಗೆ ಒಪ್ಪಿಸಿದನು.

ಶಿವಾಜಿಯು ತನ್ನ ಸೈನ್ಯಗಳನ್ನು ಇಬ್ಭಾಗವಾಗಿ ಹಂಚಿದನು. ಹತ್ತು ಸಾವಿರ ಸೈನ್ಯಗಳನ್ನು ತೆಗೆದುಕೊಂಡು, ಸೇನಾಧಿಪತಿ ಆನಂದರಾಯನು ಒಂದು ಕಡೆ ಹೋಗತಕ್ಕದ್ದೆಂದೂ, ಮತ್ತೊಂದು ಭಾರೀ ಸೈನ್ಯವನ್ನು ತೆಗೆದುಕೊಂಡು ಸ್ವಯಂ ಶಿವಾಜಿ ಮಹಾರಾಜನೇ ಮೊಗಲರಿಗೆ ಸೇರಿದ ರಾಜ್ಯಗಳ ಮೇಲೆ ದಾಳಿ ಮಾಡುತ್ತಾ ಹೋಗಬೇಕೆಂದೂ ನಿರ್ಧರಿಸಿಕೊಂಡರು.

ಶಿವಾಜಿಯು ಮೊಗಲ್ ಪ್ರದೇಶಗಳ ಮೇಲೆ ಪ್ರಬಲ ಧಾಳಿಯನ್ನು ಆರಂಭ ಮಾಡಿದನು. ದಿಲೀರ್‌ಖಾನನು ಆ ಸಮಾಚಾರಗಳನ್ನು ಕೇಳಿ ಮೊಗಲರಿಗೆ ಸೇರಿದ ದಖ್ಖನ್ ಪ್ರದೇಶಗಳೆಲ್ಲವೂ ನಾಶವಾಗಿ ಹೋಗುತ್ತವೆ. ಈ ಬಿಜಾಪುರದ ಕೋಟೆಯು ಸ್ವಾಧೀನವಾಗುವ ಸಂಭವವೇ ಇಲ್ಲ, ಎಂದು ನಿರಾಶೆ ಮಾಡಿಕೊಂಡು ಹಿಂತಿರುಗಿದನು.

ದಿಲೀರ್‌ಖಾನನು ಭರತ್ಗಿಯಿಂದ ಶಿಬಿರವನ್ನೆತ್ತಿ ಬಿಜಾಪುರಕ್ಕೆ ಹದಿಮೂರು ಮೈಲಿಗಳ ದೂರದಲ್ಲಿದ್ದ ಟಿಕೋಟಿ ಎಂಬ ಸ್ಥಳಕ್ಕೆ ಹೊರಟನು.

ದಿಲೀರ್‌ಖಾನನು ಹಿಂದಕ್ಕೆ ಹೊರಟಿದ್ದನು. ದಾರಿಯುದ್ದಕ್ಕೂ ಬಿಜಾಪುರದ ಸೀಮೆಯನ್ನು ಲೂಟಿಮಾಡಿಕೊಂಡು ಆದಷ್ಟು ಹಣವನ್ನು ಸಂಗ್ರಹಿಸಿಕೊಂಡು ಹೋಗಬೇಕೆಂದು ಹೊರಟಿದ್ದನು. ಶಿವಾಜಿಯ ಹಾವಳಿಯಿಂದ ತಮ್ಮ ರಾಜ್ಯವು ಕಂಗಾಲಾಗುವ ಮೊದಲೇ ಆದಷ್ಟು ಬೇಗ ತಾನು

ಔರಂಗಾಬಾದಿಗೆ ಹೋಗಿ ಸೇರಬೇಕೆಂದು ಅವನು ಸಂಕಲ್ಪ ಮಾಡಿದ್ದನು. ಮಾರ್ಗ ಮಧ್ಯದಲ್ಲಿ ಟಿಕೋಟಿಯು ಸಣ್ಣ ಗ್ರಾಮವಾದರೂ ಸಂಪದ್ಯುಕ್ತವಾಗಿದ್ದಿತು. ಒಂದುಗಳು ಮುಸಲ್ಮಾನರು ಬಹುಮಂದಿ ಶ್ರೀಮಂತರೂ ಅಲ್ಲಿ ನೆಲಸಿದ್ದರು. ಮೊಗಲ್ ಸೈನ್ಯಗಳು ಸಮೀಪಕ್ಕೆ ಬಂದಿರುವ ಸುದ್ದಿಯನ್ನು ಕೇಳಿ ಊರು ಜನರು ಗಾಬರಿಗೊಂಡರು. ತಮ್ಮ ದನಕರುಗಳನ್ನೆಲ್ಲಾ ಊರಾಚೆಗೆ ಕಾಡುಗಳ ಕಡೆಗೆ ಹೊಡೆದು ಓಡಿಸಿದರು. ತಮ್ಮಲ್ಲಿದ್ದ ಧನಕನಕಗಳನ್ನು ಮನೆಗಳಲ್ಲಿ ಆಳವಾದ ಹಳ್ಳಗಳನ್ನು ತೋಡಿ ಹುಗಿದಿಟ್ಟರು. ಊರು ಮುಖಂಡರೆಲ್ಲರೂ ದಿಕ್ಕಾಪಾಲಾಗಿ ಓಡಿಹೋಗಿ ಅವಿತುಕೊಂಡರು. ದಿಲೀರ್‌ಖಾನನು ಆ ಊರನ್ನೆಲ್ಲಾ ಲೂಟಿಮಾಡುವಂತೆ ತನ್ನ ಸೈನಿಕರಿಗೆ ಅಪ್ಪಣೆ ಮಾಡಿದನು. ಸೈನಿಕರು ಮನೆ ಮನೆಗಳನ್ನು ನುಗ್ಗಿ ಮನೆಗಳಲ್ಲಿದ್ದ ಸಾಮಾನುಗಳನ್ನು ಸಂದೂಕುಗಳನ್ನು ಬೀದಿಗೆ ತಂದುಹಾಕಿದರು. ಒಡೆದು ನೋಡಿದರು. ಅವರುಗಳಿಗೆ ವಿಶೇಷ ಐಶ್ವರ್ಯವು ದೊರೆಯಲಿಲ್ಲ. ಕೈಗೆ ಸಿಕ್ಕಿದ ಸ್ತ್ರೀಪುರುಷರನ್ನು ಹಿಡಿದು ಹಿಂಸಿಸತೊಡಗಿದರು. ಮನೆಗಳಿಗೆ ಬೆಂಕಿ ಹಚ್ಚಿದರು. ಸ್ತ್ರೀಯರೆಲ್ಲರೂ ಭಯದಿಂದ ಓಡಿಹೋಗಿ ಕೊಳಭಾವಿಗಳಲ್ಲಿ ಬಿದ್ದು ಆತ್ಮಹತ್ಯ ಮಾಡಿಕೊಂಡರು. ಸೈನಿಕರು ಹುಡುಗರನ್ನು ಮುದುಕರನ್ನು ಕೈಗೆ ಸಿಕ್ಕಿದವರನ್ನು ಕೊಲೆಮಾಡಿದರು. ಗಟ್ಟಿಮುಟ್ಟಾಗಿದ್ದ ಮೂರು ಸಾವಿರ ಮಂದಿಯನ್ನು ಹಿಡಿದುಕೊಂಡುಹೋಗಿ ಅವರನ್ನೆಲ್ಲಾ ದಾರಿಯುದ್ದಕ್ಕೂ ಗುಲಾಮರನ್ನಾಗಿ ಮಾಡಿ ಮಾರಿಕೊಂಡು ಹೋದರು. ಪ್ರಾಣವನ್ನು ಕಳೆದುಕೊಳ್ಳದೇ ಉಳಿದಿದ್ದ ಸ್ತ್ರೀಯರು ಸೈನಿಕರ ಪಾಲಾದರು.

ಮೊಗಲ್ ಸೈನ್ಯಗಳು ಅಲ್ಲಿಂದ ಅಥನಿ ಎಂಬ ಊರಿಗೆ ಹೋದವು. ಆ ಊರಿನಲ್ಲಿದ್ದವರೆಲ್ಲಾ ಹಿಂದೂ ಜನ. ಮುಸಲ್ಮಾನ್ ನಿವಾಸಿಗಳು ಅಲ್ಲಿರಲಿಲ್ಲ. ಆ ಹಿಂದೂ ಜನರ ಮೇಲೆ ನಡೆದ ಅತ್ಯಾಚಾರಗಳನ್ನು ನೋಡಿ ಮೊಗಲ್ ಸೈನ್ಯದಲ್ಲಿದ್ದ ರಜಪೂತ ಸರದಾರರುಗಳು ಖಿನ್ನರಾದರು. ಅನೇಕರು ಪ್ರತಿಭಟಿಸಿದರು. ಆದರೆ ದುರ್ದಮನೀಯವಾದ ಆ ಮೊಗಲ್ ಸೈನ್ಯದ ಅತ್ಯಾಚಾರಗಳನ್ನು ತಡೆಗಟ್ಟಲು ಅವರಿಂದ ಸಾಧ್ಯವಾಗಲಿಲ್ಲ. ಆ ಹಿಂದೂ ಸರದಾರರುಗಳು ಆ ಅಥನಿಯಲ್ಲಿದ್ದು ನೋಡಲಾರದೇ, ನೋಡಿ ಸಹಿಸಲಾರದೇ, ಮುಂದಕ್ಕೆ ಹೊರಟುಹೋದರು.

ಹೀಗೆ ದಿಲೀರ್‌ಖಾನನ ಸೈನ್ಯಗಳು ದಾರಿಯುದ್ದಕ್ಕೂ ಬಿಜಾಪುರದ ರಾಜ್ಯದ ಊರುಗಳನ್ನೂ ಗ್ರಾಮಗಳನ್ನೂ ಲೂಟಿಮಾಡುತ್ತಾ ಹೋಗುತ್ತಿದ್ದವು. ದಿಲೀರ್‌ಖಾನನು ಪನ್ಹಾಲಾ ಕೋಟೆಯ ಸಮೀಪಕ್ಕೆ ಹೋದನು. ತಾನು ಯುದ್ಧಕ್ಕೆ ಬಂದುದು ವ್ಯರ್ಥವಾಯಿತು. ಈ ಪನ್ಹಾಲಾ ದುರ್ಗವು ಮರಾಠರ ವಶದಲ್ಲಿದೆ. ಇದನ್ನು ಸ್ವಾಧೀನಪಡಿಸಿಕೊಂಡರೆ ಬಹುಕಾಲದ ಸೇಡನ್ನು ತೀರಿಸಿಕೊಂಡಂತಾಗುತ್ತದೆ. ಈ ಯುದ್ಧದಿಂದ ಅಲ್ಪಸ್ವಲ್ಪ ಪ್ರಯೋಜನವೂ ಆದಂತಾಗುತ್ತದೆ, ಎಂದು ಯೋಚನೆಮಾಡಿ ಪನ್ಹಾಲಾ ಕೋಟೆಗೆ ಮುತ್ತಿಗೆ ಹಾಕಿದನು.

ಪನ್ಹಾಲಾ ಕೋಟೆಯಲ್ಲಿ ಮರಾಠಾ ಸೈನ್ಯಗಳು ಬಲವಾಗಿ ಜಮಾಯಿಸಿದ್ದವು. ಪಶ್ಚಿಮತೀರದಲ್ಲಿ ಅನೇಕ ರೇವುಪಟ್ಟಣಗಳಲ್ಲಿದ್ದ ಫಿರಂಗಿಗಳನ್ನೂ ಮದ್ದುಗುಂಡುಗಳನ್ನೂ ಶಿವಾಜಿಯು ಪನ್ಹಾಲಾ ದುರ್ಗದಲ್ಲಿ ಹೇರಳವಾಗಿ ಸಂಗ್ರಹಿಸಿದ್ದನು. ಕೋಟೆಯ ಬತೇರಿಯ ಮೇಲೆ ನಲವತ್ತು ತೋಪುಗಳು ಸಿದ್ಧವಾಗಿದ್ದವು. ಒಂದೊಂದು ತೋಪು ಹಾರಿದರೆ ನೂರಾರು ಮೊಗಲ್ ಸೈನಿಕರು ಛಿನ್ನಭಿನ್ನವಾಗಿ ಬೀಳುತ್ತಿದ್ದರು. ಮೊಗಲ್ ಸೈನ್ಯಗಳು ಹಿಂದಕ್ಕೆ ಓಡಲಾರಂಭಿಸಿದವು. ದಿಲೀರ್‌ಖಾನನ ಸೈನ್ಯದ ದಳಪತಿಗಳು "ಕೋಟೆಯ ಮುಂದೆ ವೃಥಾ ನಮ್ಮ ಸೈನ್ಯಗಳನ್ನು ಬಲಿಕೊಡುವುದರಿಂದ ಪ್ರಯೋಜನವಿಲ್ಲ. ಈ ಸನ್ನಿವೇಶದಲ್ಲಿ ನಾವು ಒಂದು ಕ್ಷಣಕಾಲ ಕಾದಾಡಿದರೂ ಪ್ರಯೋಜನವಿಲ್ಲ" ಎಂದು ದಿಲೀರ್‌ಖಾನನಿಗೆ ಅರಿಕೆ ಮಾಡಿದರು.

ದಿಲೀರ್‌ಖಾನನು ಚದುರಿಹೋಗಿದ್ದ ತನ್ನ ಸೈನ್ಯವನ್ನೆಲ್ಲಾ ಒಟ್ಟುಗೂಡಿಸಿಕೊಂಡು ಔರಂಗಾಬಾದಿನ ಕಡೆಗೆ ಹಿಂತಿರುಗಿದನು.

## ೧೮

ಶಿವಾಜಿಯು ಖಾಂದೇಶದಲ್ಲಿ ಮೊಗಲರ ಪಟ್ಟಣಗಳನ್ನು ಕೊಳ್ಳೆಹೊಡೆದು ಗಲ್ಲೆಬ್ಬಿಸಿದನು. ದಿಲೀರ್‌ಖಾನನು ಹಿಂತಿರುಗುವ ಹೊತ್ತಿಗೆ ಎಲ್ಲೆಲ್ಲಿಯೂ ಅನಾಹುತಗಳಾಗಿದ್ದವು. ತಮ್ಮ ರಾಜ್ಯವನ್ನು ರಕ್ಷಣೆ ಮಾಡಿಕೊಳ್ಳುವ ಆಶೆಯೇ ಉಳಿಯದಂತಾಗಿದ್ದಿತು. ಮರಾಠಾ ಸೈನ್ಯಗಳ ಮತ್ತೊಂದು ತಂಡವು

ಬರುತ್ತಾ ದಾರಿಯಲ್ಲಿ ಸಂಪಗಾಂ ಸಮೀಪದಲ್ಲಿ ಮರಾಠಾ ಸೈನ್ಯಗಳು ಬೀಡು ಬಿಟ್ಟಿದ್ದವು. ಸಮೀಪದಲ್ಲಿ ಬೆಳವಾಡಿ ಎಂಬ ಗ್ರಾಮದಲ್ಲಿ ಆ ಗ್ರಾಮಸ್ಥರು ಮರಾಠಾ ಸೈನಿಕರು ಲೂಟಿಮಾಡಿದ ಪದಾರ್ಥಗಳನ್ನು ಹೇರಿಕೊಂಡು ಹೋಗು ತ್ತಿದ್ದ ಹೇರುಗಳನ್ನು ತಡೆಗಟ್ಟಿ ಸ್ವಾಧೀನಪಡಿಸಿಕೊಂಡರು. ಮರಾಠಾ ಸೈನಿಕರಿಗೂ ಆ ಊರು ಜನರಿಗೂ ಹೊಡೆದಾಟ ನಡೆಯಿತು. ಆ ಹೋರಾಟವು ಒಂದು ಸಣ್ಣ ಯುದ್ಧದಂತೆಯೇ ಪರ್ಯವಸಾನವಾಯಿತು. ಊರು ಪಟೇಲನು ಹೋರಾಟದಲ್ಲಿ ಮಡಿದನು. ಮರಾಠಾರು, ಹಿಂದುಗಳೇ ಶಿವಾಜಿ ಮಹಾರಾಜರ ಸೈನ್ಯದ ಮೇಲೆ ತಿರುಗಿಬಿದ್ದುದನ್ನು ನೋಡಿ ಆಶ್ಚರ್ಯಪಟ್ಟರು. ತಮ್ಮ ಲೂಟಿಯ ಸಾಮಾನುಗಳನ್ನು ಬಿಟ್ಟುಹೋದರೆ ಆ ಸೈನ್ಯಕ್ಕೆ ಅಗೌರವ. ಆ ಧಾಳಿ ಮಾಡಿದ ಜನರನ್ನು ಹಿಡಿಯಬೇಕೆಂದೂ ಆ ಲೂಟಿಯ ಸಾಮಾನುಗಳನ್ನು ಪುನಶ್ಚ ಸ್ವಾಧೀನಪಡಿಸಿಕೊಂಡು ಮುಂದಕ್ಕೆ ಹೋಗಬೇಕೆಂದೂ ಮರಾಠಾ ಸೈನಿಕರು ಹಟತೊಟ್ಟು ನಿಂತರು. ಪಟೇಲನ ಹೆಂಡತಿ ಸಾವಿತ್ರಿಬಾಯಿ ಎಂಬ ವೀರರಮಣಿಯು ತನ್ನೂರು ಜನರನ್ನು ಕಟ್ಟಿಕೊಂಡು ಮರಾಠಾ ಸೈನಿಕರ ಮೇಲೆ ಹೋರಾಟ ನಡೆಸಿದಳು. ತನ್ನ ಪತಿಯು ಮರಣ ಹೊಂದಿದ್ದರೂ ದುಃಖದಿಂದ ಕುಂಠಿತಳಾಗದೇ ರಣಭೂಮಿಯಲ್ಲಿ ತಮ್ಮೆದುರಿಗೆ ನಿಂತು ಯುದ್ಧ ಮಾಡುತ್ತಿದ್ದ ಆ ವೀರರಮಣಿಯನ್ನು ನೋಡಿ ಮರಾಠಾ ಸೇನಾನಾಯಕರು ಆಶ್ಚರ್ಯಗೊಂಡರು. ಸೇನಾನಾಯಕನಾದ ಸಖೂಜೀ ಗಾಯಕ್‌ವಾಡನು ಆ ವೀರರಮಣಿಯ ಪರಾ ಕ್ರಮವನ್ನು, ರೂಪಲಾವಣ್ಯಗಳನ್ನು ನೋಡಿ ಮೋಹಿತನಾಗಿ ಅವಳನ್ನು ಹಿಡಿದುಕೊಂಡು ಹೋಗಬೇಕೆಂದು ಹಠತೊಟ್ಟನು.

ದಿನ ದಿನಗಳು ಕಳೆದವು. ವಾರಗಳು ಹೊರಳಿದವು. ಪ್ರತಿದಿನವೂ ಯುದ್ಧ ವಾಗುತ್ತಲೇ ಇದ್ದಿತು. ಈ ಸುದ್ದಿಯನ್ನು ಕೇಳಿ ಆ ಪ್ರಾಂತದ ಜನರೆಲ್ಲರೂ ತಮ್ಮ ತಮ್ಮಲ್ಲಿದ್ದ ಆಯುಧಗಳನ್ನು ತೆಗೆದುಕೊಂಡು ಬಂದು ಸಾವಿತ್ರಿಬಾಯಿಗೆ ಬೆಂಬಲವಾಗಿ ನಿಂತರು. ಈ ಯುದ್ಧವು ಮತ್ತೂ ಬೆಳೆಯಿತು. ಇಪ್ಪತ್ತೇಳು ದಿನಗಳ ತನಕ ಸಾವಿತ್ರಿಬಾಯಿಯು ಮರಾಠಾ ಸೈನ್ಯದೊಡನೆ ಪರಮ ಸಾಹಸ ದಿಂದ ಹೋರಾಡಿದಳು. ಅವಳ ಕಡೆಯ ಜನರೆಲ್ಲರೂ ಸತ್ತು ಬಿದ್ದರು. ಸಾವಿತ್ರಿಬಾಯಿಯು ಏಕಾಕಿನಿಯಾಗಿ ಸಿಕ್ಕಿಬಿದ್ದಳು. ಸಖೂಜೀಗಾಯಕ್‌ವಾಡನು ಸಾವಿತ್ರಿಬಾಯಿಯನ್ನು ಎತ್ತಿಕೊಂಡು ತನ್ನ ಕುದುರೆಯ ಮೇಲೆ ಕೂಡಿಸಿಕೊಂಡು

ರಣಕ್ಷೇತ್ರದಿಂದ ದೂರವಾಗಿಹೋದನು. ಅಲ್ಲಿ ಸಾವಿತ್ರಿಬಾಯಿಯಲ್ಲಿ ಪ್ರಣಯ ಭಿಕ್ಷೆಯನ್ನು ಬೇಡಿದನು. ಸಾವಿತ್ರಿಬಾಯಿಯು ಕಠೋರ ವಾಕ್ಯಗಳಿಂದ ಅವನನ್ನು ತಿರಸ್ಕರಿಸಿದಳು. "ನೀವು ಶಿವಾಜಿ ಮಹಾರಾಜರ ಸೈನಿಕರೆಂದು ಕೇಳಿದ್ದೇನೆ. ನೀನು ಸೇನಾಧಿಪತಿಯಂತೆ ಕಾಣುತ್ತಿ. ಶಿವಾಜಿ ಮಹಾರಾಜರ ರಾಜ್ಯದಲ್ಲಿ ಸ್ತ್ರೀಯರಿಗೆ ರಕ್ಷಣೆ ಇದೆಯೆಂದು ಹಿಂದೂಸ್ಥಾನದಲ್ಲೆಲ್ಲಾ ಹೊಗಳುತ್ತಾರೆ. ಮುಸಲ್ಮಾನ್ ಸ್ತ್ರೀಯರಿಗೂ ಮರ್ಯಾದೆಯಿಂದ ಮಹಾರಾಜರು ರಕ್ಷಣೆ ಕೊಡುತ್ತಾರೆಂದು ಕೇಳಿದ್ದೇನೆ. ನಾನು ಹಿಂದೂ ಸ್ತ್ರೀ. ನನ್ನ ಗಂಡನು ಯುದ್ಧದಲ್ಲಿ ಮಡಿದು ಆ ದುಃಖದಲ್ಲಿ ಕೊರಗುತ್ತಿರುವ ಸ್ತ್ರೀ. ನಿಮ್ಮಿಂದಲೇ ಇಷ್ಟು ಅನಾಹುತಗಳಾಗಿವೆ. ನೀನು ನನ್ನಲ್ಲಿ ಪ್ರಣಯಭಿಕ್ಷೆಯನ್ನು ಬೇಡುತ್ತಿದ್ದಿ. ನಿನ್ನಂಥಾ ಘೋರಪಶುಗಳು ಶಿವಾಜಿ ಮಹಾರಾಜರ ಸಮ್ಮುಖದಲ್ಲಿದ್ದಾರೆಂದು ನಾನು ನೆನೆದಿರಲಿಲ್ಲ" ಎಂದಳು.

ಸಾವಿತ್ರಿ ! ಈ ನಿನ್ನ ಬುದ್ಧಿವಂತಿಕೆಯೊಂದೂ ನಡೆಯುವುದಿಲ್ಲ. ಶಿವಾಜಿ ಮಹಾರಾಜರ ಸೈನ್ಯದೊಂದಿಗೆ ಹೋರಾಡಿ ಮಹಾರಾಜರನ್ನು ಹೊಗಳಿದ ಮಾತ್ರಕ್ಕೆ ನಿನ್ನನ್ನು ಬಿಟ್ಟುಬಿಡುತ್ತೇನೆಂದು ತಿಳಿದುಕೊಳ್ಳಬೇಡ. ನಿನ್ನ ರೂಪ ಲಾವಣ್ಯಗಳಿಗಿಂತಲೂ ಅತಿಶಯವಾಗಿ ನಿನ್ನ ಪರಾಕ್ರಮವನ್ನು ನೋಡಿ ನಾನು ಮೆಚ್ಚಿದ್ದೇನೆ. ನನ್ನಂಥಾ ಪರಾಕ್ರಮಿಗಳಿಗೆ ವೀರರಮಣಿಯರನ್ನು ಪಡೆಯುವುದಕ್ಕಿಂತಲೂ ವಿಶೇಷ ಭಾಗ್ಯವು ಮತ್ತೇನೂ ಇಲ್ಲ. ನೀನು ನನ್ನ ವಶಳಾಗದಿದ್ದರೆ ನಾನು ಬಲಾತ್ಕಾರದಿಂದಲಾದರೂ ನಿನ್ನನ್ನು ಪಡೆಯುತ್ತೇನೆ. ಶಿವಾಜಿ ಮಹಾರಾಜರು ನನ್ನನ್ನು ಸೈನ್ಯದಿಂದ ಕಿತ್ತುಹಾಕಿದರೂ ನಾನು ನಿನ್ನನ್ನು ಬಿಡುವವನಲ್ಲ. ನೀನು ಯುದ್ಧದಲ್ಲಿ ನನ್ನ ಕೈಗೆ ಸಿಕ್ಕಿರುವ ಶಿಕಾರಿ. ನಿನ್ನ ಮೇಲಿನ ಪೂರ್ಣ ಅಧಿಕಾರವು ನನ್ನದು." ಎಂದು ಹೇಳಿ ಸಾವಿತ್ರಿಯನ್ನು ಬಲಾತ್ಕಾರದಿಂದ ಎತ್ತಿಕೊಂಡು ನಿರ್ಜನವಾದ ರಹಸ್ಯ ಸ್ಥಾನಕ್ಕೆ ಹೊರಟುಹೋದನು.

ಶಿವಾಜಿ ಮಹಾರಾಜರಿಗೆ ಸಾವಿತ್ರಿಬಾಯಿಯು ಮರಾಠಾ ಸೈನ್ಯದ ಲೂಟಿಯ ಹೇರುಗಳನ್ನು ವಶಪಡಿಸಿಕೊಂಡು ಮರಾಠಾ ಸೈನ್ಯವನ್ನು ಎದುರಿಸಿ ೨೭ ದಿನಗಳ ಕಾಲ ಯುದ್ಧ ಮಾಡಿದಳೆಂದು ಗುಪ್ತಚಾರರ ಮುಖೇನ ತಿಳಿಯಿತು. ಆ ವೀರರಮಣಿಯ ಪರಾಕ್ರಮವನ್ನೂ ಕೇಳಿ ಶಿವಾಜಿಯು ಆಶ್ಚರ್ಯಚಕಿತನಾದನು. ಆ ಸಾವಿತ್ರಿಬಾಯಿಯು ಎಲ್ಲಿದ್ದರೂ ಮರ್ಯಾದೆಯಿಂದ ಕರೆದು

ಕೊಂಡು ಬರಬೇಕು. ನಾನು ಅಂಥಾ ವೀರ ರಮಣಿಯನ್ನು ಕೇಳಿಯೂ ಇಲ್ಲ. ಅವಳಿಗೆ ನಮ್ಮ ವಂದನೆಗಳನ್ನರ್ಪಿಸಿ ನಮ್ಮ ರಾಜ್ಯದಲ್ಲಿ ಜಹಗೀರಿಯನ್ನು ಕೊಡಬೇಕು. ನಮ್ಮ ದೇಶದಲ್ಲಿ ಅವಳ ಹೆಸರು ಶಾಶ್ವತವಾಗಿರಬೇಕು" ಎಂದು ಹೇಳಿದನು.

ದೂತರು ನಾನಾ ದಿಕ್ಕುಗಳಲ್ಲಿ ಸಾವಿತ್ರಿಬಾಯಿಯನ್ನು ಹುಡುಕುತ್ತ ಹೊರಟರು. ಎಲ್ಲಿಯೂ ಅವಳು ಕಣ್ಣಿಗೆ ಬೀಳಲಿಲ್ಲ. ಯುದ್ಧ ಭೂಮಿಯಲ್ಲಿದ್ದ ಸೈನಿಕರು ಸಖೂಜಿಗಾಯಕ್‌ವಾಡನು ಆ ವೀರ ರಮಣಿಯನ್ನು ಹೊತ್ತುಕೊಂಡು ಹೋದನೆಂದು ಇಷಾರೆ ಕೊಟ್ಟರು. ದೂತರುಗಳು ಎಲ್ಲೆಲ್ಲಿಯೋ ಹುಡುಕಿ ಗಾಯಕವಾಡನನ್ನು ಪತ್ತೆಹಚ್ಚಿದರು. ರಾಜಭಟರು ಶಿವಾಜಿ ಮಹಾರಾಜರ ಆಜ್ಞೆಯಾಗಿದೆಯೆಂದು ಹೇಳಿ ಆ ಸೇನಾಧಿಪತಿಯನ್ನು ಬಲಾತ್ಕಾರದಿಂದ ಹಿಡಿದು ತಂದರು. ದೂತರುಗಳು ಶಿವಾಜಿ ಮಹಾರಾಜನ ಸಮ್ಮುಖಕ್ಕೆ ಬಂದು ರಣಕ್ಷೇತ್ರದಿಂದ ಸಖೂಜಿಯು ಸಾವಿತ್ರಿಬಾಯಿಯನ್ನು ಹೊತ್ತುಕೊಂಡು ಹೋದನೆಂದೂ ಬಲಾತ್ಕಾರದಿಂದ ಅವಳ ಮೇಲೆ ಅತ್ಯಾಚಾರ ನಡೆಸಿದನೆಂದೂ ಅರಿಕೆಮಾಡಿದರು. ರಾಜಭಟರು ಸಖೂಜಿ ಗಾಯಕವಾಡನನ್ನು ಹಿಡಿದು ತರುತ್ತಿದ್ದಾರೆಂದು ಬಿನ್ನಹ ಮಾಡಿದರು. ಶಿವಾಜಿಯು ಆ ಮಾತುಗಳನ್ನು ಕೇಳಿ ಬೆಂಕಿಯಲ್ಲಿ ಬಿದ್ದ ಪಕ್ಷಿಯಂತೆ ಪರಿತಪಿಸತೊಡಗಿದನು. ಆ ಪಾಪವೆಲ್ಲವೂ ತನಗೇ ಸಂಘಟಿಸಿತೆಂದು ಖಿನ್ನನಾದನು. ಆ ಶಿಬಿರದಲ್ಲಿ ಶಿವಾಜಿಯ ದರಬಾರು ಸೇರಿತು. ಮಂತ್ರಿಗಳು ಸೇನಾಧಿಪತಿಗಳು ಎಡಬಲ ಪಾರ್ಶ್ವಗಳಲ್ಲಿ ಮಂಡಿಸಿದ್ದರು. ಸೈನಿಕರು ಭಯದಿಂದ ಗಾಯಕವಾಡನಿಗೆ ಏನಾಗುವುದೋ ಎಂದು ನೋಡುತ್ತ ನಿಂತಿದ್ದರು. ರಾಜಭಟರು ಸಖೂಜಿ ಗಾಯಕವಾಡನನ್ನು ಶಿವಾಜಿ ಮಹಾರಾಜರ ಎದುರಿಗೆ ತಂದು ನಿಲ್ಲಿಸಿದರು. ಸಖೂಜಿಯು ತಲೆಬಾಗಿ ನಿಂತಿದ್ದನು. ಶಿವಾಜಿಯು, "ಸೇನಾಧಿಪತಿಗಳೇ ! ಸ್ನೇಹಿತರೇ ! ಇವನು ನಮ್ಮ ಕೂಟಕ್ಕೆ ಅಪಮಾನ ತಂದಿದ್ದಾನೆ. ನಮ್ಮ ರಾಜ್ಯಕ್ಕೆ ಕಳಂಕವನ್ನು ಉಂಟು ಮಾಡಿದ್ದಾನೆ. ಆ ವೀರರಮಣಿ ಸಾವಿತ್ರಿಬಾಯಿಯ ಕಥೆಯನ್ನು ನೀವುಗಳು ಕೇಳಿರಬಹುದು. ಹಲವರು ಅವಳ ದರ್ಶನವನ್ನು ಮಾಡಿರಬಹುದು. ಅವಳಂಥಾ ಅನಾಥ ಪತಿವಿಹೀನ ವೀರರಮಣಿಯ ಮಾನಾಪಹಾರ ಮಾಡಿದ ಪಾಪಿ ಇವನು. ಇವನಿಗೆ ತಕ್ಕ ಶಿಕ್ಷೆಯನ್ನು

ವಿಧಿಸಬೇಕು. ಎಂಥಾ ಶಿಕ್ಷೆಯನ್ನು ವಿಧಿಸಿದರೂ ನಮ್ಮ ಪಾಪವು ಪರಿಹಾರ ವಾಗುವುದಿಲ್ಲ" ಎಂದು ಗರ್ಜಿಸಿದನು. ಸಖೋಜಿಗಾಯಕವಾಡನು ತಲೆಯೆತ್ತಿ ಕೈಮುಗಿದು "ಮಹಾಪ್ರಭುಗಳೇ, ನನ್ನದು ಪರಮಾಪರಾಧವಾಗಿದೆ. ನಾನು ಕ್ಷಮೆಯನ್ನು ಕೇಳುವುದಿಲ್ಲ. ಕ್ಷಮೆಗೆ ನಾನು ಪಾತ್ರನಲ್ಲ. ಆ ವೀರರಮಣಿಯ ರೂಪಲಾವಣ್ಯಗಳನ್ನು ನೋಡಿ ನಾನು ಮೋಹಿತನಾದೆ. ನನ್ನನ್ನು ನಾನು ಮರೆತೆ. ಮಹಾಪ್ರಭುಗಳ ಕಠೋರ ಶಾಸನವನ್ನು ಮರೆತುಬಿಟ್ಟೆ. ನಮ್ಮ ಸೈನ್ಯದಲ್ಲಿ ಎಂದೂ ಯಾರೂ ಇಂತಹ ಅಪರಾಧವನ್ನು ಮಾಡಬಾರದು. ನೀವೆಲ್ಲರೂ ಏಕವಾಕ್ಯತೆಯಿಂದ ನನಗೆ ಶಿಕ್ಷೆಯನ್ನು ವಿಧಿಸಿರಿ" ಎಂದು ಹೇಳಿ ಕೊಂಡನು.

ಶಿವಾಜಿ ಮಹಾರಾಜನು ಸ್ವಲ್ಪ ಸ್ವಲ್ಪವಾಗಿ ಶಾಂತನಾದನು. ಕ್ಷಣ ಹೊತ್ತು ಯೋಚನೆ ಮಾಡಿ ಈ ಸಖೋಜಿಯ ಎರಡು ಕಣ್ಣುಗಳನ್ನು ಕಿತ್ತುಹಾಕಿ ಆಮರಣಾಂತ ಇವನನ್ನು ಸೆರೆಯಲ್ಲಿಡಿಸಿರಿ, ಎಂದು ಅಪ್ಪಣೆ ಮಾಡಿದನು.

ಅಂದಿನ ದರಬಾರು ಗಾಯಕವಾಡನ ಶಿಕ್ಷೆಯಿಂದ ಪರಿಸಮಾಪ್ತವಾಯಿತು. ಸರದಾರರೆಲ್ಲರೂ ಗಾಯಕವಾಡನ ದುರ್ಗತಿಗಾಗಿ ದುಃಖಿಸುತ್ತಾ ಸಾವಿತ್ರಿಬಾಯಿಯ ಸಂಕಟಕ್ಕಾಗಿ ಪರಿತಪಿಸುತ್ತಾ ತಮ್ಮ ತಮ್ಮ ಗುಡಾರಗಳಿಗೆ ಹೋದರು. ಶಿವಾಜಿ ಮಹಾರಾಜನು ಆ ಸಾವಿತ್ರಿಬಾಯಿಯು ಎಲ್ಲಿದ್ದರೂ ಹುಡುಕಿ ಗೌರವದಿಂದ ನಮ್ಮಲ್ಲಿಗೆ ಕರೆತರಬೇಕೆಂದು ಅಪ್ಪಣೆ ಮಾಡಿದನು.

ದೂತರು ಎಷ್ಟೋ ಕಡೆ ಆ ಸಾವಿತ್ರಿಯನ್ನು ಹುಡುಕಿದರು. ಅವಳು ಯಾರ ಕಣ್ಣಿಗೂ ಕಾಣಲಿಲ್ಲ. ಈ ಪ್ರಪಂಚದಲ್ಲಿ ಅವಳನ್ನು ಮತ್ತಾರೂ ಎಂದೂ ನೋಡಲಿಲ್ಲ. ಶಿವಾಜಿಯು ಮಾತ್ರ ಆ ಸಾವಿತ್ರಿಯನ್ನು ಎಂದೆಂದಿಗೂ ಮರೆಯಲಿಲ್ಲ.

ಮರಾಠಾ ಸೈನ್ಯಗಳು ಔರಂಗಾಬಾದಿನ ಕಡೆಗೆ ಭರದಿಂದ ಹೋಗು ತ್ತಿದ್ದವು. ಮಧ್ಯ ಮಧ್ಯ ಊರುಗಳನ್ನು ಲೂಟಿಮಾಡಿಕೊಂಡು ಮುಂದೆ ಸಾಗಿದ್ದುವು. ಔರಂಗಾಬಾದಿನವರೆಗೂ ಹೋಗಬೇಕೆಂದು ಮರಾಠರ ಸಂಕಲ್ಪವಿತ್ತು. ಔರಂಗಾಬಾದಿಗೆ ನಲವತ್ತು ಮೈಲಿಗಳ ಸಮೀಪದಲ್ಲಿ ಜಾಲ್ನಾ ಎಂಬ ಊರಿನ ಸಮೀಪದಲ್ಲಿ ಮರಾಠಾ ಸೈನ್ಯಗಳು ಬೀಡು ಬಿಟ್ಟಿದ್ದುವು ಜಾಲ್ನಾದಲ್ಲಿ ಬಹು ಮಂದಿ ಶ್ರೀಮಂತರಿದ್ದಾರೆಂದೂ ಅಲ್ಲಿ ಕೊಳ್ಳೆ ಹೊಡೆದರೆ

ಅಪಾರ ಧನಕನಕಗಳು ಸಿಕ್ಕುತ್ತವೆಂದೂ ಮರಾಠರು ಹೊಂಚಿ ಹಾಕಿದರು. ಆ ಊರಿನ ಹೊರಗೆ ಕೊಂಚ ದೂರದಲ್ಲಿ ಸಯ್ಯದ್‌ಜಾನ್ ಮಹಮದ್ ಎಂಬ ಫಕೀರನು ವಾಸ ಮಾಡುತ್ತಿದ್ದನು. ಅವನು ಸಿದ್ಧಪುರುಷನೆಂದೂ ದೇವರಂಥಾ ಮನುಷ್ಯನೆಂದೂ ಆ ಪ್ರಾಂತದಲ್ಲೆಲ್ಲಾ ಪ್ರಸಿದ್ಧವಾಗಿತ್ತು. ಶಿವಾಜಿಯಾಗಲಿ ಅವನ ಸೈನಿಕರಾಗಲೀ ಸಾಧುಸಂತರ ಗೋಜಿಗೆ ಹೋಗುವುದಿಲ್ಲವೆಂದು ಆ ಪ್ರಾಂತವಲ್ಲೆಲ್ಲಾ ಪ್ರಸಿದ್ಧವಾಗಿತ್ತು. ಶಿವಾಜಿಯು ಎಷ್ಟೋ ಮಂದಿ ಖಾಜಿಗಳನ್ನೂ ಫಕೀರರನ್ನೂ ಕಂಡಲ್ಲಿ ಗೌರವದಿಂದ ನಡೆದುಕೊಂಡ ಅನೇಕ ಕಥೆಗಳನ್ನು ಅತ್ತ ಕಡೆಯ ಜನರು ಕೇಳಿದ್ದರು. ಶಿವಾಜಿಯು ಸೈನ್ಯಸಮೇತ ಬಂದಿದ್ದಾನೆಂಬ ಸುದ್ದಿಯನ್ನು ಕೇಳುತ್ತಲೇ ಆ ಜನರೆಲ್ಲರಿಗೂ ಗಾಬರಿಯಾಯಿತು. ಅವರೆಲ್ಲರೂ ಸೇರಿ ಆಲೋಚನೆ ಮಾಡಿದರು. ಫಕೀರನು ವಾಸವಾಗಿರುವ ಎಡೆಯಲ್ಲಿ ಹೋಗಿ ಅಡಗಿಕೊಂಡರೆ ತಾವು ಸುರಕ್ಷಿತವಾಗಿ ಬದುಕಿಕೊಳ್ಳಬಹುದು ಎಂದು ಅವರು ಆಲೋಚನೆ ಮಾಡಿದರು.

ಸಯ್ಯದ್‌ಜಾನ್ ಮಹಮದ್‌ನಿದ್ದೆಡೆಗೆ ಹೋಗಿ "ಫಕೀರ ಸಾಹೇಬರೇ ! ಮರಾಠಾ ಸೈನ್ಯಗಳು ಬರುತ್ತಿವೆ. ನಮ್ಮ ಊರಿನ ಸಮೀಪಕ್ಕೆ ಬಂದೇಬಿಟ್ಟಿವೆ. ನಮ್ಮ ಊರನ್ನು ಕೊಳ್ಳೆ ಹೊಡೆಯುತ್ತಾರೆ. ಲೂಟಿ ಮಾಡುತ್ತಾರೆ. ನಮ್ಮ ಪ್ರಾಣ, ಮಾನ, ಧನಗಳೆಲ್ಲ ಹೋಗುವ ಕಾಲ ಬಂದಿದೆ. ನೀವು ಆಶ್ರಯವಿತ್ತು ಕಾಪಾಡಬೇಕು" ಎಂದು ಕೇಳಿಕೊಂಡರು.

ಫಕೀರನು "ಎಲ್ಲ ರಾಜ್ಯಗಳಲ್ಲಿಯೂ ಇದೇ ಗತಿಯಾಗಿದೆ. ಸಂಭಾವಿತರು ಎಲ್ಲಿಯೂ ನೆಮ್ಮದಿಯಾಗಿ ಇರುವುದಕ್ಕಿಲ್ಲ. ರಾಜರು ದುಷ್ಟರಾಗಿ ಹೋಗಿರುವುದೇ ಇದಕ್ಕೆ ಕಾರಣ. ಮೊಗಲ್ ಸೇನಾಪತಿ ದಿಲೀರ್‌ಖಾನನು ಮಹಾರಾಷ್ಟ್ರ ರಾಜ್ಯಗಳಿಗೆ ಹೋಗಿ ಕೊಳ್ಳೆ ಹೊಡೆದುಕೊಂಡು ಬಂದಿದ್ದಾನೆ. ಇವರ ರಾಜ್ಯದ ಮೇಲೆ ಆ ಮರಾಠರು ಧಾಳಿ ಮಾಡಲು ಬಂದಿದ್ದಾರೆ. ಒಬ್ಬರ ಮೇಲೊಬ್ಬರು ಹೋರಾಟ ನಡೆಸುತ್ತಾರೆ. ಮುಯ್ಯಿಗೆ ಮುಯ್ಯಿ ತೀರಿಸುತ್ತಾರೆ. ಅವರಿಗೇನು ಕಷ್ಟ ? ಇವರಿಗಾಗಿ ಜನರು ಕಷ್ಟಪಡಬೇಕಾಗಿದೆ. ಸಂಸಾರಿಗಳು ತಮ್ಮಷ್ಟಕ್ಕೆ ತಾವು ಸುಖವಾಗಿರಲು ಇವರು ಬಿಡುವುದಿಲ್ಲ. ನಿಮ್ಮನ್ನೆಲ್ಲಾ ರಕ್ಷಿಸಲು ನನಗೇನು ಶಕ್ತಿಯಿದೆ ? ನಾನಿರುವೆಡೆ, ನೀವಿರುತ್ತೇವೆಂದು ಹೇಳಿದರೆ ನಾನು ಹೇಗೆ ತಾನೇ ಬೇಡವೆನ್ನಲಾದೀತು ? ಇನ್ನು ದೇವರು ಮಾಡಿಸಿದಂತೆ ಆಗುತ್ತದೆ" ಎಂದನು.

ಆ ಸಂಸಾರಿಗಳು ತಮ್ಮ ಐಶ್ವರ್ಯವನ್ನೆಲ್ಲಾ ಹೊತ್ತುಕೊಂಡು ಬಂದು ನೆಲದಲ್ಲಿ ಹೂಳಿಟ್ಟು ಆ ಫಕೀರನ ಆಶ್ರಮದಲ್ಲಿ ಅವಿತುಕೊಂಡರು.

ಮರಾಠಾ ಸೈನ್ಯಗಳು ಜಾಲ್ನಾ ಊರಿನೊಳಗೆ ಪ್ರವೇಶ ಮಾಡಿದವು. ಅವರಿಗೆ ಅಲ್ಲಿ ಹೇರಳವಾದ ಧನ ಸಿಕ್ಕುವುದೆಂಬ ಆಸೆಯಿತ್ತು. ಶ್ರೀಮಂತರ ಮನೆಗಳಿಗೆ ಮೊದಲು ನುಗ್ಗಿದರು. ಅಲ್ಲಿ ಏನೂ ಸಿಕ್ಕಲಿಲ್ಲ. ಸಂದೂಕಗಳೆಲ್ಲಾ ಬರಿದಾಗಿದ್ದುವು. ಮನೆಗಳಲ್ಲಿ ನೆಲವನ್ನು ಅಗೆದು ನೋಡಿದರು. ಏನೂ ಇಲ್ಲ. ಕಾವಲುಗಾರರು ಕೂಡಾ ಇರಲಿಲ್ಲ. ಬಡವರ ಮನೆಗಳನ್ನು ಲೂಟಿ ಮಾಡಿದರು. ಅಲ್ಲಿಯೂ ಏನೂ ದೊರಕಲಿಲ್ಲ. ಸರದಾರರುಗಳಿಗೆ ಕೋಪ ಬಂದಿತು. ಇವರೆಲ್ಲಾ ಎಲ್ಲಿಗೆ ಹೋಗಿರಬೇಕು ? ಕೂಡಿಟ್ಟ ಹಣವನ್ನು ಹೊತ್ತುಕೊಂಡು ಔರಂಗಾಬಾದಿಗೆ ರಕ್ಷಣೆಗಾಗಿ ಹೋಗಿರಬಹುದೇ ? ಧನಿಕರು ಅಲ್ಲಿಗೆ ಹೋಗುವುದೇ ಇಲ್ಲ. ಅಲ್ಲಿ ಅವರಿಗೆ ರಕ್ಷಣೆ ಎಲ್ಲಿದೆ? ಮೊಗಲ್ ಸೈನಿಕರು ಎಲ್ಲವನ್ನೂ ಕಿತ್ತುಕೊಳ್ಳುತ್ತಾರೆ. ದಿಲೀರ್‌ಖಾನನೇ ಕಿತ್ತುಕೊಂಡು ಓಡಿಸುತ್ತಾನೆ. ಈ ಸಾಹುಕಾರರಿಗೆ ಅಷ್ಟು ಬುದ್ಧಿ ಇಲ್ಲದೇ ಹೋಗಿಲ್ಲ. ಅವರುಗಳು ಇಲ್ಲಿಯೇ ಸಮೀಪದಲ್ಲಿ ಕಾಡುಗುಡ್ಡಗಳಲ್ಲಿಯೋ ವನಪ್ರದೇಶಗಳಲ್ಲಿಯೋ ಅವಿತುಕೊಂಡಿರಬೇಕು. ನಮ್ಮ ಸೈನ್ಯಗಳು ಮುಂದಕ್ಕೆ ಹೊರಟುಹೋಗುತ್ತಲೇ ಬಂದು ಊರು ಸೇರಿಕೊಳ್ಳೋಣವೆಂದು ಹೊಂಚು ಹಾಕುತ್ತಿರಬಹುದೆಂದು ನಿರ್ಧರಿಸಿಕೊಂಡರು.

ಈ ಜನರು ಎಲ್ಲಿ ಹೋಗಿದ್ದಾರೆ ? ಹುಡುಕಬೇಕೆಂದು ಸೇನಾಧಿಪತಿಗಳು ದೂತರನ್ನು ನಾಲ್ಕು ಕಡೆಗಳಿಗೆ ಅಟ್ಟಿದರು. ದೂತರು ಸಮೀಪದಲ್ಲಿರುವ ಫಕೀರ ಸಯ್ಯದ್‌ಜಾನ್ ಮಹಮದ್‌ನ ಆಶ್ರಮದಲ್ಲಿ ಈ ಜನರೆಲ್ಲರೂ ಹೋಗಿ ಸೇರಿಕೊಂಡಿದ್ದಾರೆಂದು ಕಂಡುಹಿಡಿದರು. ಶಿಬಿರಕ್ಕೆ ಹಿಂತಿರುಗಿ ಬಂದು ಸೇನಾಧಿಪತಿಗಳಿಗೆ ಅರಿಕೆ ಮಾಡಿದರು. "ಇಲ್ಲಿಗೆ ಸ್ವಲ್ಪ ದೂರದಲ್ಲಿಯೇ ಸಯ್ಯದ್‌ಜಾನ್ ಮಹಮದ್ ಎಂಬ ಫಕೀರನ ಠಾಣೆಯಿದೆ. ಈ ಶ್ರೀಮಂತರೆಲ್ಲರೂ ಅಲ್ಲಿಗೆ ಹೋಗಿ ಸೇರಿಕೊಂಡಿದ್ದಾರೆ" ಎಂದು ತಿಳಿಸಿದರು.

ಸೇನಾಧಿಪತಿಗಳು ಅವನೆಂಥಾ ಫಕೀರ ? ಕಳ್ಳ ಫಕೀರ, ಇವರನ್ನೆಲ್ಲಾ ಏಕೆ ಸೇರಿಸಿಕೊಂಡಿದ್ದಾನೆ. ಬೆಳಗಿನಿಂದ ಇರುಳಿನವರೆಗೆ ಬೇಡಿದರೂ ಭಿಕ್ಷವನ್ನು ನೀಡದ ಈ ಜನರಿಗೆ ಅವನೇಕೆ ಆಶ್ರಯವಿತ್ತ ಈ ಐಶ್ವರ್ಯವಂತರ ಸ್ವಭಾವವೇ ಹೀಗೆ. ಅವರು ಯಾವಾಗಲೂ ಭಯಗ್ರಸ್ತರು. ಭಯ ಬಂದಾಗ

ದೇವಾಲಯುಗಳನ್ನೋ ಸಾಧುಸಂತರನ್ನೋ ಆಶ್ರಯಿಸುತ್ತಾರೆ. ಭಯತಪ್ಪಿ ಹೋದ ಮೇಲೆ ಅವರಿಗೆ ದುಡ್ಡೇ ದೇವರು ಇರಲಿ, ಆ ಫಕೀರನ ಠಾಣೆಗೆ ಹೋಗಿ ಆ ಧನಿಕರನ್ನು ಹಿಡಿದು ತನ್ನಿರಿ. ಅವರು ಬಚ್ಚಿಟ್ಟಿರುವ ಧನವನ್ನು ಪತ್ತೆಹಚ್ಚಿ ಹೊತ್ತುಕೊಂಡು ಬನ್ನಿರಿ. ನಾವು ಇಷ್ಟಾದ ಮೇಲೆ ಈ ಜಾಲ್ನಾದ ಹಣವನ್ನು ಹೊತ್ತುಕೊಂಡೇ ಹೋಗಬೇಕು. ಈ ಜನರಿಗೆ ಸರಿಯಾಗಿ ಬುದ್ಧಿ ಕಲಿಸಬೇಕು. ಹಾಗೇ ಬಿಟ್ಟುಹೋದರೆ ನಮಗೆ ಅಪಮಾನ. ಅಲ್ಲಿ ಫಕೀರ ನೇನಾದರೂ ಅಡ್ಡ ಬಂದರೆ ಅವನನ್ನು ನಮ್ಮ ಶಿಬಿರಕ್ಕೆ ಕರೆದು ತನ್ನಿ. ವಿಚಾರಣೆ ಮಾಡೋಣ" ಎಂದು ಹೇಳಿದನು.

ಸೈನಿಕರು ಉತ್ಸಾಹದಿಂದ ಫಕೀರನ ಠಾಣ್ಯಕ್ಕೆ ಹೋಗಿ ಧನಿಕರನ್ನು ಹಿಡಿದರು. ಅಲ್ಲಿ ಸೇರಿಕೊಂಡಿದ್ದ ಧನಿಕರು, ಬಡವರು, ಸ್ತ್ರೀಯರು, ಮಕ್ಕಳು ಗಳನ್ನೆಲ್ಲಾ ಹೊಡೆದು ಹಿಂಸೆಪಡಿಸಿದರು. ಆ ಹಿಂಸೆಯನ್ನು ತಡೆಯಲಾರದೇ ಆ ಜನರು ಬಾಯಿಬಿಟ್ಟರು. ಭೂಮಿಯಲ್ಲಿ ಹುಗಿದಿಟ್ಟಿದ್ದ ಚಿನ್ನ, ಬೆಳ್ಳಿ, ರತ್ನಾಭರಣಗಳನ್ನೆಲ್ಲಾ ಅಗೆದು ತೆಗೆದು ತಮ್ಮ ಶಿಬಿರಕ್ಕೆ ಸಾಗಿಸಿಕೊಂಡು ಹೋದರು. ಎದುರು ಬಿದ್ದವರನ್ನು ಕಡಿದುಹಾಕಿದರು. ಆ ಠಾಣ್ಯದಲ್ಲಿ ರಕ್ತದ ಕೋಡಿಯು ಹರಿಯಿತು. ಹೆಣಗಳು ರಾಶಿರಾಶಿಯಾಗಿ ಬಿದ್ದುಹೋದವು.

ಫಕೀರನು ಬಂದು ಆ ದೃಶ್ಯವನ್ನು ಕಣ್ಣಾರೆ ನೋಡಿದನು. ದುಃಖದಿಂದ ಉದ್ವಿಗ್ನನಾಗಿ "ದೇವರೇ ಯಾರ ಪಾಪಕ್ಕಾಗಿ ನೀನು ಈ ಜನರಿಗೆ ಇಂಥಾ ಶಿಕ್ಷೆಯನ್ನು ಕೊಟ್ಟೆ ಇವರೇನು ತಪ್ಪು ಮಾಡಿದರು ? ಈ ಭೂಮಿಯ ಮೇಲೆ ಬಲಹೀನರು ಬದುಕಿರಬಾರದೆಂದು ನಿನ್ನ ಶಾಸನವಿದೆಯೇ ? ದುಷ್ಟರಾದ ರಾಜರು, ಕ್ರೂರಕರ್ಮಿಗಳಾದ ಸೇನಾಧಿಪತಿಗಳು, ಇವರಿಗಾಗಿಯೇ ಈ ರಾಜ್ಯವು ನಿರ್ಮಾಣವಾಗಿದೆಯೇ ? ದೇವರಿಲ್ಲವೆ ? ದೇವರೇ ಸೃಷ್ಟಿಮಾಡಿದ ಈ ಭೂಮಿಯ ಮೇಲೆ ದೇವರ ರಾಜ್ಯಕ್ಕೆ ಜಾಗವೇ ಇಲ್ಲವೆ ? " ಎಂದು ಉದ್ಗಾರ ತೆಗೆದನು.

ಆ ಘೋರ ಸ್ಮಶಾನದಂತಿದ್ದ ಠಾಣೆಯಲ್ಲಿ ಕುಳಿತು ದೇವರಲ್ಲಿ ಪ್ರಾರ್ಥನೆ ಮಾಡಿದನು. ಅಲ್ಲಿಂದ ಎದ್ದು ನೇರವಾಗಿ ಮರಾಠಾ ಸೈನ್ಯಗಳು ಎಲ್ಲಿ ಬೀಡು ಬಿಟ್ಟಿದ್ದವೋ ಅಲ್ಲಿಗೆ ಹೋದನು.

ಸೈನಿಕರು ಆ ಫಕೀರನನ್ನು ಕಾಣುತ್ತಲೇ "ಓ! ಫಕೀರನು ಬಂದ. ಇವನೇ

ಆ ಜಾಲ್ನಾದ ಜನರನ್ನು ಬಚ್ಚಿಟ್ಟಿದ್ದವನು. ಅಲ್ಲಿ ಸಿಕ್ಕಲಿಲ್ಲ. ಈಗ ನಮ್ಮ ಕೈಗೆ ಸಿಕ್ಕಿದ್ದಾನೆ" ಎಂದು ಕೂಗಿಕೊಳ್ಳುತ್ತಾ ಅವನ ಸಮೀಪಕ್ಕೆ ಬಂದರು.

ಫಕೀರನು ಆ ಸೈನಿಕರ ಅರ್ಭಟವನ್ನು ಕೇಳಿ ಹೆದರಲಿಲ್ಲ. ಅವರನ್ನೆಲ್ಲಾ ಧೈರ್ಯದಿಂದ ಎದುರಿಸಿ ನಿಮ್ಮ ಸೇನಾಧಿಪತಿಗಳು ಎಲ್ಲಿದ್ದಾರೆ? ನಿಮ್ಮ ರಾಜ ಶಿವಾಜಿಯು ಎಲ್ಲಿದ್ದಾನೆ? ತೋರಿಸಿರಿ. ನನ್ನನ್ನು ಮುಟ್ಟಬೇಡಿರಿ. ನಾನು ಓಡಿ ಹೋಗುವವನೂ ಅಲ್ಲ, ನಿಮ್ಮ ಕೈಗೆ ಸಿಕ್ಕುವವನೂ ಅಲ್ಲ, ಎಂದು ಹೇಳಿದನು.

ಸೈನಿಕರು ಅವನನ್ನು ಅಧಿಕಾರಿಗಳಿದ್ದ ಗುಡಾರಕ್ಕೆ ಕರೆದೊಯ್ದರು. ನಿಸಾಜಿ ನೀಲಕಂಠ, ಮೋರೆ ತ್ರ್ಯಂಬಕ್ ಇವರಿದ್ದ ಸ್ಥಳಕ್ಕೆ ಕರೆದೊಯ್ದು ನಿಲ್ಲಿಸಿದರು.

ಆ ಅಧಿಕಾರಿಗಳು ಉಗ್ರ ರೂಪವನ್ನು ತಾಳಿ ಬಂದಿದ್ದ ಫಕೀರನನ್ನು ನೋಡಿ "ನೀವೇಕೆ ಬಂದಿದ್ದೀರಿ, ನಿಮಗೇನು ಬೇಕು" ಎಂದು ಕೇಳಿದರು.

ಫಕೀರನು "ನಿಮ್ಮ ಸೈನಿಕರು ನಮ್ಮ ಠಾಣ್ಯಕ್ಕೆ ಬಂದು ಅಲ್ಲಿದ್ದ ಜನರನ್ನೆಲ್ಲಾ ಕೊಂದುಹಾಕಿ ಹಣವನ್ನು ದೋಚಿಕೊಂಡು ಬಂದಿದ್ದಾರೆ. ಹೆಣಗಳ ರಾಶಿ ರಾಶಿಗಳು ಬಿದ್ದಿವೆ. ಅದನ್ನು ನೋಡಿದರೆ ಕಲ್ಲಿನ ಹೃದಯವಾದರೂ ಕರಗಿ ಹೋಗುತ್ತದೆ. ಇಂಥಾ ದುಷ್ಕೃತ್ಯಗಳನ್ನು ಮಾಡಲು ನಿಮಗಾರು ಅಪ್ಪಣೆ ಕೊಟ್ಟರು. ಛತ್ರಪತಿ ಶಿವಾಜಿಯ ಹೆಸರು ಕೇಳಿದ್ದೇನೆ. ಅವನು ಧರ್ಮಾತ್ಮನೆಂದು ಹಿಂದೂ ಜನ ಹೊಗಳುವುದನ್ನು ಕೇಳಿದ್ದೇನೆ. ಇಂಥಾ ಸುಳ್ಳು ಹೊಗಳಿಕೆಗಳೇಕೆ! ಅಲ್ಲಿಗೆ ಬಂದು ನೋಡಿದರೆ ಗೊತ್ತಾಗುತ್ತದೆ. ಎಷ್ಟು ಜನ ಹಿಂದೂಗಳು ಸತ್ತುಬಿದ್ದಿದ್ದಾರೆ. ಶಿವಾಜಿಯು ಎಂಥಾ ಹಿಂದೂ ರಾಜ? ಎಂಥಾ ಧರ್ಮಾತ್ಮಾ?" ಎಂದು ಉದ್ಗಾರ ತೆಗೆದನು.

ಸೇನಾಧಿಪತಿಯು ನಗುತ್ತಾ "ಫಕೀರರು ಇಷ್ಟೊಂದು ಉದ್ರಿಕ್ತರಾಗಿರುವುದು ನಮಗೆ ಆಶ್ಚರ್ಯಕರವಾಗಿದೆ. ಮೊದಲು ನೀವು ದಾರಿ ತಪ್ಪಿ ತಪ್ಪು ಸ್ಥಳಕ್ಕೆ ಬಂದಿದ್ದೀರೆಂದು ತೋರುತ್ತದೆ. ನೀವು ನೇರವಾಗಿ ಔರಂಗಾಬಾದಿಗೆ ಹೋಗಿ ದಿಲೇರ್‌ಖಾನನಿಗೆ ಈ ಪ್ರಶ್ನೆಗಳನ್ನು ಹಾಕಿದ್ದರೆ ಬಲು ಚೆನ್ನಾಗಿತ್ತು. ಶಿವಾಜಿ ಮಹಾರಾಜರು ಯಾರೆಂಬುದನ್ನು ಅವನು ಚೆನ್ನಾಗಿ ಬಲ್ಲ. ನಿಮ್ಮ ಧರ್ಮಜಿಜ್ಞಾಸೆಗೆ ಉತ್ತರ ಕೊಡಬೇಕಾದವನು ದಿಲೇರ್‌ಖಾನ್. ಅವನು ಮಾಡಿದ ಪಾಪಕ್ಕೆ ಇದು ಪ್ರಾಯಶ್ಚಿತ್ತವೆಂದುಕೊಳ್ಳಿ ಅಥವಾ ಪ್ರತೀಕಾರ

ವೆಂದುಕೊಳ್ಳಿ. ಫಕೀರರು ಹೆಣಗಳನ್ನೇ ಕಂಡಿಲ್ಲವೇನು ? ಇಂದೇ ಹೊಸದಾಗಿ ಹೆಣಗಳನ್ನು ನೋಡುತ್ತಿದ್ದೀರೇನು ? ಅತ್ತ ಬಿಜಾಪುರದ ಕಡೆ ಹೋಗಿ ಬನ್ನಿರಿ. ಎಷ್ಟು ಊರುಗಳು ಸುಟ್ಟು ಬೂದಿಯಾಗಿವೆ! ಊರು ಊರುಗಳಲ್ಲಿಯೂ ರಕ್ತದ ಕೋಡಿಗಳು ಹರಿದಿದೆ. ಹೆಣಗಳ ರಾಶಿಗಳು ಬಿದ್ದಿವೆ.

ಫಕೀರನು "ಸೇನಾಧಿಪತಿಗಳೇ, ಯಾರ ಅಪರಾಧಕ್ಕೆ ಯಾರಿಗೆ ಶಿಕ್ಷೆ ? ನನ್ನ ಕಣ್ಣು ಮುಂದೆ ಈ ಘೋರ ಕೃತ್ಯಗಳನ್ನು ನಡೆಸಿದ್ದೀರಿ. ಈ ಜನ ನಿರಪರಾಧಿಗಳು. ಅದಕ್ಕೆ ನಾನು ಸಾಕ್ಷಿ."

ಸೇನಾಧಿಪತಿಯು "ಅಪರಾಧಿಗಳಾರು ?" ಎಂದು ಪ್ರಶ್ನೆ ಮಾಡಿದನು.

"ನೀವು, ನಿಮ್ಮ ಸೈನಿಕರು, ನಿಮ್ಮ ಸೇನಾಧಿಪತಿಗಳು, ನಿಮ್ಮ ಮಹಾರಾಜರು, ನೀವು ಘೋರ ಪಾತಕಿಗಳು. ನಿಮಗೆ ಕ್ಷಮೆಯಿಲ್ಲ" ಎಂದು ಗದ್ದರಿಸಿದನು.

ಸೇನಾಧಿಪತಿಯು "ನಾವು ನಿಮ್ಮಂಥವರಲ್ಲಿ ಕ್ಷಮಾ ಪ್ರಾರ್ಥನೆ ಮಾಡು ಪವರಲ್ಲ. ನೀವು ಮನಸ್ಸಿಗೇ ಹರಟುತ್ತಿದ್ದರೂ ಫಕೀರರೆಂದು ನಾವೇ ನಿಮನ್ನು ಕ್ಷಮಿಸಿದ್ದೇವೆ. ನೀವೇನು ಮಾಡಬಲ್ಲಿರಿ ? ಹೋಗಿ. ನಿಮಗೆ ಶಕ್ತಿಯಿದ್ದರೆ ಧೈರ್ಯವಿದ್ದರೆ, ಆ ದಿಲೇರ್‌ಖಾನನಿಗೆ ಹೇಳಿರಿ. ಈ ಕೃತ್ಯಗಳಿಗೆಲ್ಲಾ ಅವನು ಹೊಣೆ" ಎಂದು ಹೇಳಿದನು.

ಕೋಪದಿಂದ ಫಕೀರನು ಉತ್ತರ ಕೊಟ್ಟನು : "ಲೋಕದ ಪಾಪಕ್ಕೆ ನೀವೆಲ್ಲರೂ ಹೊಣೆ. ದೇವರ ರಾಜ್ಯವನ್ನು ಹಾಳುಮಾಡುತ್ತಿರುವ ಸೈತಾನಿಗಳು ನೀವು. ನಿಮ್ಮ ಪಾಪದಿಂದಲೇ ನೀವು ಹಾಳಾಗಿ ಹೋಗುತ್ತೀರಿ. ನಿಮ್ಮ ರಾಜನು ಮರಣ ಹೊಂದುತ್ತಾನೆ ನನ್ನ ಶಾಪವು ತಪ್ಪಿಹೋಗುವುದಿಲ್ಲ" ಎಂದು ಹೇಳಿದನು.

ಅವನ ಮಾತುಗಳನ್ನು ಕೇಳಿ ಸೇನಾಧಿಪತಿಗಳಿಗೆ ತಡೆಯಲಾರದಷ್ಟು ಕೋಪ ಬಂದಿತು. "ನೀನು ಫಕೀರನಲ್ಲ. ಹರಾಂಕೋರ. ಮಹಾರಾಜರ ಹೆಸರೆತ್ತಬೇಡ. ಹೋಗು" ಎಂದು ಹೇಳಿ ಆಸನದಿಂದ ಎದ್ದು ಬಂದು ಫಕೀರನ ಕಪಾಲಕ್ಕೆ ಬಲವಾಗಿ ಪಟು ಕೊಟ್ಟನು.

ಫಕೀರನು ತಿರಸ್ಕಾರದ ನಗುವನ್ನು ನಕ್ಕು ಅವರ ಸಮ್ಮುಖದಿಂದ ಹೊರಟು ಹೋದನು.

ಸೇನಾಧಿಪತಿಗಳಿಗೆ ಧೈರ್ಯ ಕೆಡದಿದ್ದರೂ ಫಕೀರನ ಮಾತುಗಳು ಅವರ ಹೃದಯದಲ್ಲಿ ಕೊರೆಯುತ್ತಲೇ ಇದ್ದಿತು.

ಮರಾಠರು ಎಲ್ಲೆಲ್ಲಿಯೂ ಲೂಟಿ ಮಾಡಿ ಅಪಾರ ಹಣವನ್ನು ಶೇಖರಿಸಿದ್ದರು. ಮೊಗಲ್ ಅಧಿಕಾರಿಗಳ ರಾಜಧಾನಿಯಾದ ಔರಂಗಾಬಾದನ್ನು ಕೊಳ್ಳೆ ಹೊಡೆದುಕೊಂಡು ರಾಯಗಡಕ್ಕೆ ಹಿಂತಿರುಗಬೇಕೆಂದು ಅಲ್ಲಿಂದ ಸೈನ್ಯವನ್ನು ಮುಂದಕ್ಕೆ ನಡೆಸಿಕೊಂಡು ಹೋದರು.

## ೧೯

ದಿಲೀರ್‌ಖಾನನಿಗೆ ಈ ಸಮಾಚಾರಗಳೆಲ್ಲವೂ ತಿಳಿದವು. ಮರಾಠರು ತಮ್ಮ ರಾಜ್ಯದಲ್ಲಿ ಲೂಟಿಯಿಂದ ವಿಶೇಷ ಹಣವನ್ನು ಸಂಪಾದಿಸಿದ್ದಾರೆಂದೂ, ಔರಂಗಾಬಾದಿನ ಕಡೆಗೆ ಬರುತ್ತಿದ್ದಾರೆಂದೂ ಕೇಳಿದನು. ಜಾಲ್ನಾದಲ್ಲಿ ನಡೆಸಿದ ಅತ್ಯಾಚಾರಗಳೆಲ್ಲವನ್ನೂ ಕೇಳಿದನು. ಈ ಶಿವಾಜಿಯು ಔರಂಗಾಬಾದಿನವರೆಗೆ ಬರುವುದಕ್ಕೆ ಆಸ್ಪದ ಕೊಡಬಾರದು. ಅವನನ್ನು ಮಾರ್ಗದಲ್ಲಿಯೇ ಹೊಡೆದು ಓಡಿಸಿ ಅವನು ಕೊಳ್ಳೆ ಹೊಡೆದುಕೊಂಡು ಬಂದಿರುವ ಹಣವನ್ನೆಲ್ಲಾ ಕಿತ್ತುಕೊಳ್ಳಬೇಕೆಂದು ಹಟತೊಟ್ಟನು. ತಕ್ಷಣವೇ ಔರಂಗಾಬಾದಿನಲ್ಲಿದ್ದ ಸೈನ್ಯವನ್ನೆಲ್ಲಾ ಜೊತೆಗೂಡಿಸಿ ಹೊರಡಿಸಿದನು. ಆ ಸೈನ್ಯಗಳ ಜೊತೆಯಲ್ಲಿ ಕರಣಸಿಂಗ್ ಎಂಬ ರಜಪೂತ ಸೇನಾಧಿಪತಿಯು ಹೊರಟಿದ್ದನು. ಮೊಗಲ್ ಸೈನ್ಯಗಳು ಭರದಿಂದ ಬರುತ್ತಿದ್ದವು. ಮೊಗಲ್ ಸೈನ್ಯಕ್ಕೂ ಮರಾಠ ಸೈನ್ಯಕ್ಕೂ ಇನ್ನು ಆರು ಮೈಲಿಗಳ ದೂರ ಮಾತ್ರ ಉಳಿದಿದ್ದಿತು. ಕರಣಸಿಂಗನು' ಈ ಸೈನ್ಯಗಳೆಲ್ಲಾ ಹೋಗಿ ಮರಾಠರ ಮೇಲೆ ಬಿದ್ದರೆ ಅವರು ನಾಶವಾಗುವುದು ಖಂಡಿತ' ಎಂದು ಆಲೋಚನೆ ಮಾಡಿದನು. ಅವನಿಗೆ ಅಂತರಂಗದಲ್ಲಿ ಶಿವಾಜಿಯ ಮೇಲೆ ಅಭಿಮಾನವಿತ್ತು. 'ಈ ಮರಾಠರೂ ರಜಪೂತರೂ ಎಂದಾದರೂ ಒಂದಾಗಿ ಔರಂಗಜೇಬನನ್ನು ಮೂಲೆಗೆ ಕೂಡಿಸುತ್ತಾರೆ' ಎಂಬ ಭಾವನೆಯು ಅವನ ಮನದಲ್ಲಿ ನಾಟಿತ್ತು. ಶಿವಾಜಿಗೆ ತನ್ನ ಕೈಲಾದ ಸಹಾಯ ಮಾಡಬೇಕೆಂದು ನಿಶ್ಚಯಿಸಿಕೊಂಡು ರಹಸ್ಯವಾಗಿ ಒಬ್ಬ ದೂತನನ್ನು ಅವನ ಬಳಿಗೆ ಕಳುಹಿಸಿಕೊಟ್ಟನು.

ಈ ದೂತನು ಬೈರಾಗಿಯ ವೇಷದಿಂದ ಬಂದು ಮರಾಠಾ ಸೇನಾಧಿಪತಿಗಳನ್ನು ಕಂಡನು. "ದಿಲೀರ್‌ಖಾನನ ಬ್ರಹ್ಮಾಂಡ ಸೈನ್ಯಗಳು ಬರುತ್ತಿವೆ. ಇಲ್ಲಿ ಯುದ್ಧವೊದಗಿದರೆ ನಿಮಗೆ ಜಯವಾಗದು. ಎಲ್ಲವನ್ನೂ ಕಳೆದುಕೊಂಡು ಸೈನ್ಯವನ್ನು ನಾಶಪಡಿಸಿಕೊಂಡು ಹೋಗುತ್ತೀರಿ. ಮೊಗಲ್ ಸೇನಾಧಿಪತಿ ಕರಣಸಿಂಗರ ದೂತನು ನಾನು" ಎಂದು ಹೇಳಿದನು.

ಮರಾಠಾ ಸೈನ್ಯಗಳು ತಕ್ಷಣವೇ ಹಿಂತಿರುಗಿ ಕಾಡು ಮಾರ್ಗಗಳಲ್ಲಿ ಹೊರಟವು. ಅಷ್ಟರಲ್ಲಿ ಮೊಗಲ್ ಸೈನ್ಯಗಳು ಹಿಂದಿನಿಂದ ಅಟ್ಟಿಸಿಕೊಂಡು ಬಂದೇಬಿಟ್ಟವು. ದಾರಿಯುದ್ಧಕ್ಕೂ ಮರಾಠರು ಲೂಟಿಮಾಡಿ ತಂದಿದ್ದ ಎಷ್ಟೋ ಐಶ್ವರ್ಯವನ್ನು ಕಳೆದುಕೊಂಡರು. ದಾರಿಯಲ್ಲಿ ಹಲವು ಸೈನ್ಯಗಳು ನಾಶವಾದವು. ಮರಾಠಾ ಸೈನಿಕರು ಅತಿಕಷ್ಟದಿಂದ ತಮ್ಮ ರಾಜ್ಯದ ಗಡಿಯನ್ನು ಸೇರಿದರು.

ಜಾಲ್ನಾದಲ್ಲಿ ಫಕೀರನು ಕೊಟ್ಟ ಶಾಪವು ತಟ್ಟಿತೆಂದು ಎಷ್ಟೋ ಮಂದಿ ಸೈನಿಕರು, ಸೇನಾಧಿಪತಿಗಳು ಮನನೊಂದುಕೊಳ್ಳುತ್ತಾ ಹಿಂತಿರುಗಿದರು.

ದಿಲೀರ್‌ಖಾನನು "ಇನ್ನು ಆ ಮರಾಠರನ್ನು ಹಿಂದಟ್ಟಿಕೊಂಡು ಹೋಗುವುದು ವ್ಯರ್ಥ. ಅವರು ಅವರ ಗಡಿಯನ್ನು ಸೇರಿಕೊಂಡರು. ಇನ್ನು ಮುಂದೆ ಹೋದರೆ ನಮಗೆ ಅಪಾಯ ತಪ್ಪದು. ನಮ್ಮ ಸೈನ್ಯಗಳು ನಾಶವಾಗುತ್ತವೆ" ಎಂದುಕೊಂಡು ಕೈಗೆ ಸಿಕ್ಕಿದಷ್ಟು ಮರಾಠರ ಪದಾರ್ಥಗಳನ್ನು ವಶಪಡಿಸಿಕೊಂಡು ಹಿಂತಿರುಗಿದನು.

ನಾನಾ ದಿಕ್ಕುಗಳಿಂದ ಮರಾಠಾ ಸೈನ್ಯಗಳೆಲ್ಲವೂ ಹಿಂತಿರುಗಿದವು. ಹೇರಳವಾದ ಸಂಪತ್ತನ್ನು ಕೊಳ್ಳೆಹೊಡೆದು ತಂದಿದ್ದರು. ರಾಜ ಭಂಡಾರವನ್ನು ಬಂಗಾರದಿಂದ ತುಂಬಿದರು. ಶಿವಾಜಿಯು ಸೈನ್ಯಸಮೇತನಾಗಿ ಹಿಂತಿರುಗುತ್ತಾ ಪನ್ಹಾಲಾದಲ್ಲಿ ಕೆಲವು ದಿನಗಳು ಮೊಕ್ಕಾಂ ಮಾಡಿದನು. ಸಾಂಬಾಜಿಯು ಪನ್ಹಾಲಾ ಕೋಟೆಯಲ್ಲಿ ಶಿವಾಜಿ ಮಹಾರಾಜನಿಗೆ ರಾಜಯೋಗ್ಯವಾದ ಆತಿಥ್ಯಗಳನ್ನು ಸಿದ್ಧಗೊಳಿಸಿದನು. ತಂದೆ ಮಕ್ಕಳಿಬ್ಬರೂ ಸ್ವಲ್ಪದಿನಗಳು ಪನ್ಹಾಲಾ ದುರ್ಗದಲ್ಲಿ ಏಕತ್ರನಿವಾಸ ಮಾಡಿದರು. ಸಾಂಬಾಜಿಯು ತಂದೆಯ ಪರಾಕ್ರಮವನ್ನೂ ಆವನ ಸದ್ಗುಣಗಳನ್ನೂ ಬಹಳವಾಗಿ ಮೆಚ್ಚಿಕೊಂಡಿದ್ದರೂ, ತಂದೆಯ ವಿಷಯದಲ್ಲಿ ವಿಶೇಷ ಗೌರವವನ್ನು ತೋರುತ್ತಿದ್ದರೂ ಅನೇಕ ವಿಚಾರಗಳಲ್ಲಿ

ತಂದೆಯ ಅಭಿಪ್ರಾಯಕ್ಕೂ ಸಾಂಬಾಜಿಯ ಅಭಿಪ್ರಾಯಕ್ಕೂ ಭೇದವಿದ್ದಿತು. ಆದರೆ ಶಿವಾಜಿಯೊಡನೆ ಧೈರ್ಯದಿಂದ ನಿಂತು ಮಾತನಾಡುವ ಸಾಹಸವು ಸಾಂಬಾಜಿಗೆ ಎಂದೂ ಇರಲಿಲ್ಲ.

ತಂದೆಮಕ್ಕಳಿಬ್ಬರೂ ಲೋಕಾಭಿರಾಮವಾಗಿ ಮಾತನಾಡುತ್ತಿದ್ದಾಗ ಸಾಂಬಾಜಿಯು ಮೆಲ್ಲಮೆಲ್ಲಗೆ ಹೇಳಿದನು. "ಮಹಾರಾಜರೇ, ಈ ಮೊಗಲರಿಗೂ ನಮಗೂ ವಿರೋಧವು ಕೊನೆ ಮುಟ್ಟುವುದೇ ಇಲ್ಲವೆ ?"

ಶಿವಾಜಿಯು ನಕ್ಕು ಹೇಳಿದನು. "ನಿನ್ನ ಮಾತುಗಳೂ, ಮನಸ್ಸೂ ನನಗೆ ಚೆನ್ನಾಗಿ ಅರ್ಥವಾಗಿದೆ. ಸಾಂಬಾಜಿ, ನೀನು ಮೊಗಲರೊಡನೆ ಸಂಧಿಮಾಡಿ ಕೊಳ್ಳಬೇಕೆಂದು ಇಷ್ಟಪಡುತ್ತೀಯೆ. ಅದು ಎಂದೆಂದಿಗೂ ನಡೆಯದ ಮಾತು. ಔರಂಗಜೇಬನು ಜೀವಂತನಾಗಿರುವವರೆಗೆ ನಮಗೂ ಅವರಿಗೂ ಸಂಧಿಯಾಗಲೀ, ಸಮಾಧಾನವಾಗಲೀ ಅಸಂಭವ. ಔರಂಗಜೇಬನು ಅತ್ಯಂತ ಕ್ರೂರಿ, ಮೋಸ ಗಾರ, ವಂಚಕ. ಹಿಂದುಗಳನ್ನು ದ್ವೇಷಿಸುವುದೇ ಅವನ ಧರ್ಮ. ಅವನಿಗೂ ನಮಗೂ ಸಂಧಿಯೆಂದರೆ - ಆ ಮಾತಿನಲ್ಲಿ ಅರ್ಥವೇ ಇಲ್ಲ ! ನಾನು ಒಂದು ರಾಜ್ಯವನ್ನು ನಿರ್ಮಾಣ ಮಾಡಿದ್ದೇನೆ. ಒಂದು ಜನಾಂಗವನ್ನು ಕಟ್ಟಿದ್ದೇನೆ. ಈ ಸಿಂಹಾಸನದ ಮುಂದಿನ ಅಧಿಕಾರಿ ನೀನು. ಮೊಗಲರೊಡನೆ ನಮಗೆ ಸಂಧಿ ಯೆಂದರೆ ಅದು ಅಧೀನತ್ವ. ಆ ಅಧೀನತ್ವವನ್ನು ಒಪ್ಪಿಕೊಂಡರೆ ನಮ್ಮ ರಾಷ್ಟ್ರದ ನಾಶವು ಸಿದ್ಧ. ಈ ರಹಸ್ಯವನ್ನು ನೀನು ಯಾವಾಗಲೂ ಮನಸ್ಸಿ ನಲ್ಲಿಟ್ಟಿರಬೇಕು. ಇದನ್ನು ಎದುವರೆಗೆ ಮರಾಠರು ನೆನಪಿಟ್ಟಿರುವರೋ ಅದುವರೆಗೆ ನಮ್ಮ ಜಯವು ಸಿದ್ಧ. ಯಾರೇ ಸಾಯಲಿ, ಯಾರೇ ಬದುಕಲಿ. ಈ ಧ್ಯೇಯವನ್ನು ಮನಸ್ಸಿನಲ್ಲಿಟ್ಟುಕೊಂಡಿದ್ದರೆ ಎಂದಾದರೊಂದು ದಿನ ಡೆಲ್ಲಿಯ ಸಿಂಹಾಸನವು ಮರಾಠರ ವಶವಾಗುವುದು. ಅಂದು ಹಿಂದೂಧರ್ಮದ ಪೂರ್ಣ ಜಯವೆಂದು ತಿಳಿದುಕೊ."

"ಮಹಾಪ್ರಭುಗಳೇ ! ನಾನು ರಾಜ್ಯಗಳ ಮಾತನ್ನು ಕುರಿತು ಪ್ರಸ್ತಾಪ ಮಾಡುತ್ತಿಲ್ಲ. ನೀವು ಈ ಮಹಾರಾಷ್ಟ್ರ ರಾಜ್ಯವನ್ನು ನಿರ್ಮಾಣ ಮಾಡಿದ ದೊರೆಗಳು. ಹಿಂದುಗಳಿಗೆ ಚೈತನ್ಯ ಶಕ್ತಿಯನ್ನು ನೀಡಿದ ಸಾಮ್ರಾಟರು. ಈ ಜಗತ್ತು ಇರುವವರೆಗೆ ಈ ಹಿಂದೂಸ್ಥಾನದಲ್ಲಿ ಮನುಮಾಂಧಾತರಂತೆ ನಿಮ್ಮ ಹೆಸರು ಶಾಶ್ವತವಾಗಿ ಉಳಿಯುತ್ತದೆ. ನಾವೆಲ್ಲರೂ ಅದನ್ನು ರಕ್ಷಣೆ

ಮಾಡಿಕೊಂಡು ಬಂದರೆ ಸಾಕು. ಅದು ನನಗೆ ಮನದಟ್ಟಾಗಿದೆ. ನಾನು ತಮ್ಮಲ್ಲಿ ಪ್ರಸ್ತಾಪವೆತ್ತಿರುವುದು ಈ ಜನಗಳ ಸುಖದುಃಖಗಳ ಮಾತು. ಮೊಗಲರು ಸಮಯ ಸಿಕ್ಕಿದಾಗ ನಮ್ಮ ರಾಜ್ಯದ ಮೇಲೆ ನುಗ್ಗಿ ಲೂಟಿ ಮಾಡು ತ್ತಾರೆ. ಜನಗಳನ್ನು ಅನ್ಯಾಯವಾಗಿ ಕೊಲೆ ಮಾಡುತ್ತಾರೆ. ಧನವನ್ನು ಅಪಹರಿಸಿಕೊಂಡು ಹೋಗುತ್ತಾರೆ. ನಾವೂ ಹಾಗೆಯೇ ಮಾಡುತ್ತಿದ್ದೇವೆ. ಸಮಯ ಸಿಕ್ಕಿದಾಗ ಅವರ ರಾಜ್ಯದ ಮೇಲೆ ಧಾಳಿ ನಡೆಸುತ್ತೇವೆ. ವಿಶೇಷ ಘಾಸಿಯಾಗುವುದು ಆ ಜನರಿಗೆ. ಸೇನಾಧಿಪತಿಗಳಿಗೇನು, ಬಾದಷಹರಿಗೇನು ? ಈ ಜನರ ಕಷ್ಟವನ್ನು ನೋಡಿ ಎಂಥವರಿಗಾದರೂ ಸಂಕಟವಾಗದಿರದು."

"ಶಂಭು ! ಸರಿಯಾಗಿ ಹೇಳುತ್ತಿದ್ದೀಯೇ. ಆದರೆ ಅದರ ಮೂಲವನ್ನು ನೀನರಿತಿಲ್ಲ. ಒಂದು ರಾಜ್ಯದಲ್ಲಿ ಎರಡು ರಾಜತ್ವಗಳಿರಬಾರದು. ಈ ದಕ್ಷಿಣದಲ್ಲಿ ಒಂದು ಕಡೆ ಮೊಗಲರ ರಾಜ್ಯಭಾರ. ಮತ್ತೊಂದು ಕಡೆ ನಮ್ಮ ಪ್ರಭುತ್ವ. ಇವೆರಡಕ್ಕೂ ಘಕ್ಕೆ ಹೊಡೆಯುತ್ತಲೇ ಇರುತ್ತದೆ. ಅವರನ್ನು ನಾವು ಮೂಲೋತ್ಪಾಟನ ಮಾಡಬೇಕು. ಈ ರಾಜ್ಯದಲ್ಲಿ ಕಾಲಿಡಲು ಅವರಿಗೇನು ಅಧಿಕಾರ ?"

ಸಾಂಬಾಜಿಯು ಕೈಮುಗಿದು "ಏಕಚಕ್ರಾಧಿಪತ್ಯವಿರಬೇಕೆಂದು ಮಹಾರಾಜರು ಅಪ್ಪಣೆ ಕೊಡಿಸೋಣಾಗುತ್ತಿದೆ, ಅಲ್ಲವೇ ? ಎಂದನು.

ಹೌದು. ಅದೇ ಸರಿಯಾದ ಮಾತು. ನಮ್ಮ ಗುರುವರ್ಯರಾದ ಸಮರ್ಥ ರಾಮದಾಸರು ನನ್ನನ್ನು 'ಛತ್ರಪತಿ' ಎಂದು ಹೆಸರಿಟ್ಟು ಕರೆದರು. ಈ ಶಿವನನ್ನು ಗೌರವಿಸುವುದು ಅವರ ತಾತ್ಪರ್ಯವಲ್ಲ. ಈ ರಾಜ್ಯವು ಏಕಚಕ್ರಾಧಿಪತ್ಯದಲ್ಲಿ ಇರಬೇಕೆಂಬುದೇ ಅವರ ಅಭೀಷ್ಟ. ಛತ್ರಪತಿ ಎಂಬ ನಾಮಧೇಯವು ಅದರ ಸಂಕೇತ."

"ಹಾಗಾದರೆ ಮೊಗಲರಿಗೂ ನಮಗೂ ಯಾವಾಗಲೂ ಯುದ್ಧ ಮತ್ತು ಬದ್ಧವೈರ ?"

"ಓಹೋ ! ಅದಕ್ಕೆ ಸಂದೇಹವೇನು ? ಅದರಲ್ಲಿ ಎಳ್ಳಷ್ಟೂ ಭಿನ್ನಾಭಿಪ್ರಾಯವಿಲ್ಲ. ಮಹಾ ತಪಸ್ವಿಗಳಾದ ವಿದ್ಯಾರಣ್ಯ ಮಹಾಮುನಿಗಳು ವೇದ ಧರ್ಮಗಳ ಪುನಃ ಪ್ರತಿಷ್ಠೆಗಾಗಿಯೇ ವಿಜಯನಗರವನ್ನು ಸ್ಥಾಪಿಸಿದರು. ಎಂದು ವಿಧರ್ಮೀಯರೊಡನೆ ವಿಜಯನಗರದರಸರು ಸ್ನೇಹಬಾಂಧವ್ಯಗಳನ್ನು ನಡೆಸಿದರೋ ಅಂದೇ ಆ ಮಹಾಮುನಿಗಳ ತಪಸ್ಸು ಭಗ್ನವಾದಂತಾಯಿತು.

ಸಮರ್ಥ ರಾಮದಾಸರ ಧ್ಯೇಯವು ಅದೇ. ಅವರು 'ಮಹಾ ತಪಸ್ವಿಗಳು, ರಾಮಚಂದ್ರನ ಭಕ್ತರು. ದೇವರನ್ನು ಪ್ರತ್ಯಕ್ಷವಾಗಿ ಕಂಡ ಮಹಾಪುರುಷರು. ಅವರ ಆಜ್ಞೆ ಹೀಗಿದೆ :—'ಆಚಾರದಲ್ಲಿ ವ್ಯವಹಾರದಲ್ಲಿ ನಡೆನುಡಿಗಳಲ್ಲಿ ಪ್ರತಿಯೊಂದರಲ್ಲಿಯೂ ಹಿಂದುಗಳು ಪೂರಾ ಹದಿನಾರಾಣೆ ಹಿಂದುಗಳಾಗಿರಬೇಕು. ಹಾಗಾದರೆ ಮಾತ್ರ ಹಿಂದೂಸ್ಥಾನವು ಉದ್ಧಾರವಾಗುತ್ತದೆ.' ಈ ವಿಧರ್ಮೀಯರ ಸಿಂಹಾಸನಗಳೆಲ್ಲಾ ಉರುಳಿಹೋಗುತ್ತವೆ"

"ಮಹಾಪ್ರಭು, ಹಿಂದೂಸ್ಥಾನದಲ್ಲಿ ಒಬ್ಬ ಮುಸಲ್ಮಾನನೂ ಇರಬಾರದೆಂದು ಗುರುಗಳ ಅಭೀಷ್ಟವೇನು ? ಪೋರ್ಚುಗೀಸರು, ಫ್ರೆಂಚರು, ಇಂಗ್ಲೀಷರು ಇವರೆಲ್ಲರನ್ನೂ ತೊಡೆದುಬಿಡಬೇಕೆಂದು ಗುರುಗಳ ಅಭೀಷ್ಟವೇನು ?"

ಅಲ್ಲ-ಅಲ್ಲ. "ನೀನೇಕೆ ಹಾಗೆ ಅಪಾರ್ಥಮಾಡಿಕೊಳ್ಳುತ್ತೀ ? ಮುಸಲ್ಮಾನರಿರಬಹುದು. ಅವರು ನಮ್ಮ ರಾಜ್ಯದಲ್ಲಿ ದುಡಿದು ಜೀವಿಸಬಹುದು, ಐಶ್ವರ್ಯವಂತರಾಗಿ ಬಾಳಲೂಬಹುದು. ಆದರೆ ನಮ್ಮ ರಾಜ್ಯವನ್ನು ಅವರು ಆಳಕೂಡದು. ಹಿಂದೂಸ್ಥಾನದಲ್ಲಿ ಯಾವ ಮೂಲೆಯಲ್ಲಿಯೂ ಅವರ ಪ್ರಭುತ್ವವಿರಕೂಡದು. ನಾನೆಂದೂ ಮಸೀದಿಗಳನ್ನು ಒಡೆದುಹಾಕಿಲ್ಲ. ಖುರಾನನ್ನು ಸುಟ್ಟುಹಾಕಿಲ್ಲ. ಖಾಜಿಗಳನ್ನೂ, ಮೌಲ್ವಿಗಳನ್ನೂ, ಫಕೀರರನ್ನೂ ಅಗೌರವಪಡಿಸಿಲ್ಲ. ಒಬ್ಬ ಮುಸಲ್ಮಾನ್ ಸ್ತ್ರೀಯನ್ನೂ ಅಪಮಾನಗೊಳಿಸಿಲ್ಲ. ನಮ್ಮ ರಾಜ್ಯದಲ್ಲಿ ಯಾವಾಗಲೂ ಹಾಗೆಯೇ ನಡೆದುಬರಬೇಕು. ಅಂಥಾ ಸಾಧು ಸತ್ಪುರುಷರಿಗೆ ಭಯವೆಂಬುದೇ ಇರಬಾರದು."

"ಮಹಾಪ್ರಭು ! ಕ್ಷಮಿಸಬೇಕು. ಬಹಳ ಮಾತನಾಡಿಬಿಟ್ಟೆ. ಮನಸ್ಸಿನಲ್ಲಿ ಎಷ್ಟೋ ಉದ್ವೇಗಗಳಿವೆ. ತಾವು ಇಷ್ಟು ಉಪದೇಶ ಮಾಡಿದ ಮೇಲೆಯೂ ಅರ್ಥವಾಗದ ಸಮಸ್ಯೆಗಳು ಬೇಕಾದಷ್ಟಿವೆ. ಮುಸಲ್ಮಾನರ ಪ್ರಭುತ್ವವಿರಕೂಡದೆಂದು ಅಪ್ಪಣೆ ಕೊಡಿಸುತ್ತೀರಿ. ಈಗ ತಾನೇ ಬಿಜಾಪುರದ ಸುಲ್ತಾನರ ಸಿಂಹಾಸನವನ್ನು ಉಳಿಸಿ ಬಂದಿದ್ದೀರಿ. ನನಗೆ ಹೇಗೆ ತಾನೇ ಅರ್ಥವಾಗಬೇಕು?"

ಶಿವಾಜಿಯು ನಕ್ಕು "ಶಂಭು ! ನಿನಗೆ ಅರ್ಥವಾಗುವುದಿಲ್ಲ. ಅದು ಅನುಭವದಿಂದಲೇ ಬರಬೇಕಾದ ಜ್ಞಾನ. ಬಿಸಿನೀರನ್ನು ಕುಡಿಯಬೇಕೆಂದರೆ ಸೀಸವನ್ನು ಕಾಸಿ ಕುಡಿಯಬಾರದು. ಬಿಜಾಪುರದ ವ್ಯವಹಾರವು ಬಿಸಿನೀರಿನಂತೆ. ಮೊಗಲರ ಸ್ನೇಹವು ಸೀಸವನ್ನು ಕಾಸಿ ಕುಡಿದಂತೆ. ನೀನು ಧರ್ಮವನ್ನು

ಪೂರ್ಣವಾಗಿ ನಂಬಿದರೆ, ಗುರುಗಳಲ್ಲಿ ಸಂಪೂರ್ಣ ಭಕ್ತಿ ಇಟ್ಟರೆ, ಈ ವಿವೇಚನೆಯು ನಿನಗೆ ತಾನಾಗಿಯೇ ಹೊಳೆಯುತ್ತದೆ" ಎಂದನು.

ಪನ್ಹಾಲಾದುರ್ಗದಲ್ಲಿ ಶಿವಾಜೀ ಮಹಾರಾಜನು ಇರುವವರೆಗೆ ಸಾಂಬಾಜಿಯ ಧರ್ಮಪತ್ನಿ ಯೇಸುಬಾಯಿಯು ಶಿವಾಜಿಯನ್ನು ಭಕ್ತಿಯಿಂದ ಉಪಚರಿಸುತ್ತಿದ್ದಳು. ಸೇವೆ ಮಾಡುತ್ತಿದ್ದಳು. ಶಿವಾಜಿಯು ಆ ಸಾಧ್ವಿಯ ಗುಣಗಳನ್ನೂ ಸೇವೆಯನ್ನೂ ನೋಡಿ ಪ್ರಸನ್ನನಾಗಿ "ಮಗಳೇ ! ನೀನು ಏನಾದರೂ ವರವನ್ನು ಬೇಡು. ದೇವರು ಕೊಟ್ಟಿರುವುದರಲ್ಲಿ ಯಾವುದನ್ನಾದರೂ ನಾನು ನಿನಗೆ ಕೊಡುತ್ತೇನೆ" ಎಂದನು.

"ಪೂಜ್ಯರಾದ ಪಿತೃವರ್ಯರೇ, ತಮ್ಮ ಅನುಗ್ರಹದಿಂದ ನನಗೆ ಎಲ್ಲವೂ ಇದೆ. ನಾನು ತಮ್ಮಲ್ಲಿ ಪ್ರಾರ್ಥನೆ ಮಾಡುವುದು ಒಂದೇ ಒಂದು ಅಂಶ. ನಿಮ್ಮ ಮಕ್ಕಳಾದ ಯುವರಾಜನ ಅಪರಾಧವೇನಿದ್ದರೂ ಕ್ಷಮಿಸಬೇಕು. ಈ ಸೀಮಂತ ಪುತ್ರನನ್ನು ಎಂದೆಂದಿಗೂ ಪರಿತ್ಯಜಿಸುವುದಿಲ್ಲವೆಂದು ಮಹಾರಾಜರು ವಚನವೀಯಬೇಕು."

ಶಿವಾಜಿಯು ನಕ್ಕನು. "ಮಗಳೇ ! ರಾಯಗಡದಲ್ಲಿ ಅರಮನೆಯಲ್ಲಿ ನಡೆಯುತ್ತಿರುವ ಅನೇಕ ಮಾತುಕಥೆಗಳು ಮತ್ತು ದರಬಾರಿನಲ್ಲಿ ಹುಟ್ಟಿರುವ ಪಕ್ಷ ಪ್ರತಿಪಕ್ಷಗಳು ಮತ್ತು ಸಾಂಬಾಜಿಯ ಧೂರ್ತತನ, ಇವುಗಳನ್ನೆಲ್ಲಾ ಚಿಂತಿಸಿ ನನ್ನ ಮನಸ್ಸು ವಿಹ್ವಲವಾಗಿದೆ. ಸಾಂಬಾಜಿ, ಮಹಾತ್ಮರ ಅನುಗ್ರಹದಿಂದ ಹುಟ್ಟಿದ ಮಗ. ಅವನಿಗೆ ಲಭ್ಯವಾಗುವ ಸಿಂಹಾಸನವನ್ನು ಯಾರೂ ತಪ್ಪಿಸಲಾರರು. ನಿನ್ನ ಹೊಟ್ಟೆಯಲ್ಲಿ ಜನಿಸಿದ ವಂಶವು ತಲೆತಲಾಂತರದವರೆಗೆ ಈ ಸಿಂಹಾಸನವನ್ನು ಅಲಂಕರಿಸುತ್ತದೆ" ಎಂದು ಹೇಳಿದನು.

ಯೇಸುಬಾಯಿಯು ಶಿವಾಜಿಯ ಪಾದಗಳಿಗೆ ವಂದಿಸಿ, ಆಶೀರ್ವಾದವನ್ನು ಪಡೆದಳು.

ಶಿವಾಜಿಯು ರಾಯಗಡಕ್ಕೆ ಹೊರಡುವ ದಿನಗಳು ಬಂದುವು. ಸಾಂಬಾಜಿಯನ್ನು ತನ್ನೊಡನೆ ರಾಜಧಾನಿಗೆ ಬರಬೇಕೆಂದು ಹೇಳಿ ಆ ದಂಪತಿಗಳಿಬ್ಬರನ್ನೂ ತನ್ನೊಡನೆ ಕರೆದುಕೊಂಡು ಹೋದನು.

ಆ ಯುದ್ಧದಲ್ಲಿ ಸಂಪಾದಿಸಿಕೊಂಡು ಬಂದಿದ್ದ ಅರ್ಥಪಾಲು ಐಶ್ವರ್ಯ

ವನ್ನೆಲ್ಲಾ ಸೈನಿಕರಿಗೆ ಯಥೇಚ್ಛವಾಗಿ ಹಂಚಿದನು. ಅವರೆಲ್ಲರಿಗೂ ಉಡುಗೊರೆಗಳನ್ನು ಕೊಡಿಸಿ ಅವರವರ ಊರುಗಳಿಗೆ ಕಳುಹಿಸಿಕೊಟ್ಟನು.

ಶಿವಾಜಿಯು ರಾಯಗಡವನ್ನು ತಲುಪಿದ ಕೆಲವೇ ದಿನಗಳಲ್ಲಿ ಬಿಜಾಪುರದ ರಾಜಮಾತೆ ಬೇಗಂ ಸಾಹೇಬಳು ಅನೇಕ ಉಡುಗೊರೆಗಳನ್ನೂ ಹೇರಳವಾದ ಐಶ್ವರ್ಯವನ್ನೂ ಕಳುಹಿಸಿ, ರಾಯಭಾರಿಗಳ ಕೈಲಿ ಒಂದು ಪತ್ರವನ್ನೂ ಕೊಟ್ಟು ಕಳುಹಿಸಿದಳು. ಆ ಪತ್ರದ ಒಕ್ಕಣೆ ಈ ರೀತಿಯಾಗಿದ್ದಿತು :—

"ಬಿಜಾಪುರದ ಸುಲ್ತಾನರ ಮಾತೆಯವರು ಹಿಂದೂ ಸಾರ್ವಭೌಮ ಶಿವಾಜಿ ಮಹಾರಾಜರಿಗೆ ಬರೆಸಿ ಕಳಿಸುವುದೇನೆಂದರೆ—

"ನೀವು ಬಿಜಾಪುರದ ಸಂರಕ್ಷಣೆಗೆ ಸಹಾಯ ಮಾಡಿದ್ದೀರಿ. ಸುಲ್ತಾನರು ಬಾಲ್ಯಾವಸ್ಥೆಯಲ್ಲಿರುವ ಈ ಸಮಯದಲ್ಲಿ ನೀವು ನಮ್ಮ ಪ್ರಾರ್ಥನೆಯನ್ನು ಅಂಗೀಕರಿಸಿ ಸೈನ್ಯಸಮೇತರಾಗಿ ಬಂದು ಆಪತ್ಕಾಲದಲ್ಲಿ ಸುಲ್ತಾನರಿಗೆ ಮಾಡಿರುವ ಸಹಾಯವು ಚಿರಸ್ಮರಣೀಯವಾದುದು. ನಿಮ್ಮ ಮತ್ತು ಸುಲ್ತಾನೀ ರಾಜ್ಯದ ಸ್ನೇಹ ಸೌಹಾರ್ದಗಳು ಹೀಗೆಯೇ ಶಾಶ್ವತವಾಗಿ ಬೆಳೆಯಲಿ ಎಂದು ಆಶಿಸುತ್ತೇವೆ.

"ಔರಂಗಜೇಬ ಬಾದಷಹರು ಇನ್ನು ಮುಂದಾದರೂ ನಮ್ಮ ಮೇಲೆ ದ್ವೇಷ ಸಾಧನೆಯನ್ನು ಬಿಡುವರೆಂಬ ಭಾವನೆ ನಮಗಿಲ್ಲ. ಎಂದೆಂದಿಗೂ ಅವರಿಂದ ಆಪತ್ತು ನಮಗೆ ಇದ್ದೇ ಇದೆ. ನಾನು ರೋಗಗ್ರಸ್ತಳಾಗಿದ್ದೇನೆ. ಮಕ್ಕಾಕ್ಕೆ ಹೋಗಿ ಸಾಯಬೇಕೆಂದು ಆಸೆಯುಳ್ಳವಳಾಗಿದ್ದೇನೆ. ನೀವು ಬಿಜಾಪುರಕ್ಕೆ ಬಂದಿದ್ದಾಗ, ನಮ್ಮ ಅರಮನೆಗೆ ಭೇಟಿಕೊಟ್ಟಿದ್ದರೆ, ಬಾಲಕನಾದ ಸಿಕಂದರ್ ಷಹನನ್ನು ನಿಮಗೆ ಒಪ್ಪಿಸಿ ಧನ್ಯಳಾಗಬೇಕೆಂದು ಬಯಸಿದ್ದೆ. ಹಾಗೆ ಪ್ರತ್ಯಕ್ಷವಾಗಿ ನಿಮಗೆ ಒಪ್ಪಿಸಲು ಸಾಧ್ಯವಾಗದಿದ್ದರೂ, ಪರೋಕ್ಷವಾಗಿಯಾದರೂ ನಿಮಗೆ ಸಿಕಂದರ್‌ಷಹನ ರಕ್ಷಣೆಯ ಭಾರವನ್ನು ಒಪ್ಪಿಸುತ್ತಿದ್ದೇನೆ. ನಿಮ್ಮ ಪೂಜ್ಯ ಪಿತೃಗಳಾದ ಷಾಜಿಯವರು ನಮ್ಮ ಸಿಂಹಾಸನದ ಮೇಲೆ ಹೇಗೆ ಅಭಿಮಾನವನ್ನು ಇಟ್ಟಿದ್ದರೋ ನೀವೂ ಅದೇ ರೀತಿಯ ಅಭಿಮಾನದಿಂದ ನಡೆಸಿಕೊಂಡು ಬರಬೇಕು. ನೀವು ಇಲ್ಲಿಗೆ ಬಂದಿದ್ದಾಗ್ಗೆ ಯುದ್ಧದ ಖರ್ಚುಗಳನ್ನು ಕೂಡಾ ಒಪ್ಪಿಸದಿದ್ದುದು ನಮಗೆ ಬಹಳ ವಿಷಾದವೆನಿಸುತ್ತದೆ. ಆದಕಾರಣ ಈಗ ಈ ರಾಯಭಾರಿಗಳೊಡನೆ ಮೂವತ್ತು ಲಕ್ಷ ವರಹಗಳನ್ನು

ಕಳುಹಿಸಿಕೊಟ್ಟಿದ್ದೇವೆ. ಅದನ್ನು ಗೌರವದಿಂದ ಸ್ವೀಕರಿಸಬೇಕೆಂದು ಪ್ರಾರ್ಥಿಸುತ್ತೇವೆ. ನಿಮ್ಮ ಉಪಕಾರ ಸ್ಮರಣೆಗಾಗಿ ನಮ್ಮ ರಾಜ್ಯದಲ್ಲಿರುವ ಎಲ್ಲ ದೇವಾಲಯಗಳಿಗೂ ಪೂಜಾದಿ ಕಾರ್ಯಗಳನ್ನು ಶಾಶ್ವತವಾಗಿ ನಡೆಸಿಕೊಂಡು ಬರುವಂತೆ ವಿಶೇಷ ಧನಸಹಾಯವನ್ನು ಅರ್ಪಿಸಿರುತ್ತೇವೆ.

ಸುಲ್ತಾನರ ಮಾತೆ ಉರಿಯಾಬೇಗಂ.'

ಬಿಜಾಪುರದಿಂದ ಬಂದಿದ್ದ ರಾಯಭಾರಿ ಹಿಂದ್‌ರಾಜನೂ, ರಫಿ ಅಹಮದನೂ ರಾಯಗಡದಲ್ಲಿ ಶಿವಾಜಿ ಮಹಾರಾಜರ ಭೇಟಿಮಾಡಿ ಬಿಜಾಪುರದಿಂದ ತಂದಿದ್ದ ಖಿಲ್ಲತ್ತುಗಳನ್ನೂ ಕಾಣಿಕೆಗಳನ್ನೂ ಮಹಾರಾಜರವರಿಗೆ ಒಪ್ಪಿಸಿ ಬೇಗಂ ಸಾಹೇಬರ ಪತ್ರವನ್ನು ಕೊಟ್ಟನು.

ಶಿವಾಜಿಯು ಸಂತೋಷವನ್ನು ಸೂಚಿಸಿ ಆ ಪತ್ರಿಕೆಯನ್ನು ಓದಿಕೊಂಡನು.

ರಾಯಭಾರಿಗಳು ವಜೀರ್ ಸಿದ್ದಿ ಮಸೂದ್‌ರವರ ಪರವಾಗಿ ವಂದನೆಗಳನ್ನು ಸಮರ್ಪಿಸಿದರು.

ಶಿವಾಜಿಯು ಆ ರಾಯಭಾರಿಗಳನ್ನು ಆದರಿಸಿ "ನಿಮ್ಮ ಸುಲ್ತಾನರಾದ ಸಿಕಂದರ್‌ಷಾರವರನ್ನು ನೋಡುವ ಕುತೂಹಲ ನನಗೂ ವಿಶೇಷವಾಗಿತ್ತು. ಆದರೆ ಆ ಯುದ್ಧದ ಗಲಾಟೆಯಲ್ಲಿ ಅವಕಾಶವಿಲ್ಲದೆ ಹೋಯಿತು. ಸ್ವಲ್ಪ ದಿವಸಗಳಲ್ಲಿಯೇ ನಾವು ಮತ್ತೊಮ್ಮೆ ರಾಮೇಶ್ವರದ ಕಡೆ ಯಾತ್ರೆ ಹೊರಡುವ ಅಭಿಲಾಷೆಯಿದೆ. ಆಗ ಬಿಜಾಪುರಕ್ಕೆ ಬಂದು ಸುಲ್ತಾನರ ಭೇಟಿ ತೆಗೆದುಕೊಳ್ಳುತ್ತೇವೆಂದು ಬೇಗಂ ಸಾಹೇಬರವರಿಗೆ ತಿಳಿಸಬೇಕು. ಬಿಜಾಪುರದ ರಾಜ್ಯದಲ್ಲಿಯೂ, ದರ್ಬಾರಿನಲ್ಲಿಯೂ ಹಿಂದುಗಳನ್ನೂ, ಮುಸಲ್ಮಾನರನ್ನೂ ಸಮಾನವಾಗಿ ಕಾಣುತ್ತಿರುವುದು ನಮಗೆ ಬಲು ಸಂತೋಷಕರವಾಗಿದೆ. ಆಲಂಗೀರ್ ಬಾದಶಹನು ಮತ್ತೆ ದಕ್ಷಿಣಕ್ಕೆ ಬರುವ ಸ್ಮರಣೆಯನ್ನ ಮಾಡಲಾರ. ಒಂದು ಪಕ್ಷ ಬಿಜಾಪುರದ ಮೇಲೆ ಮೊಗಲರು ಮತ್ತೆ ದಾಳಿ ಮಾಡುವುದಾದರೆ, ನಮ್ಮ ಸೈನ್ಯ ಸಹಾಯವು ಸುಲ್ತಾನರಿಗೆ ಯಾವಾಗಲೂ ಇದೆಯೆಂದು ನಂಬಿ ಧೈರ್ಯದಿಂದ ಇರಬಹುದು ಎಂದು ಹೇಳಿ" ಮತ್ತೊಮ್ಮೆ ಬೇಗಂ ಸಾಹೇಬರಿಗೆ ತನ್ನ ವಂದನೆಗಳನ್ನು ತಿಳಿಸಬೇಕೆಂದೂ, ವಜೀರ್ ಸಿದ್ದಿ ಮಸೂದ್‌ರಿಗೆ ನಮ್ಮ

ಅಭಿನಂದನೆಗಳನ್ನು ತಿಳಿಸಬೇಕೆಂದೂ ಹೇಳಿ ಆ ಇಬ್ಬರು ರಾಯಭಾರಿಗಳಿಗೂ ವಿಶೇಷ ಉಡುಗೊರೆಗಳನ್ನು ಕೊಡಿಸಿ ಮರ್ಯಾದೆಮಾಡಿ ಕಳುಹಿಸಿಕೊಟ್ಟನು.

ದೆಹಲಿಯಲ್ಲಿ ಔರಂಗಜೇಬನಿಗೆ ಈ ಸಮಾಚಾರಗಳೆಲ್ಲವೂ ವಿವರವಾಗಿ ತಿಳಿಯಿತು. ದಿಲೀರ್‌ಖಾನನ ಮೇಲೆ ಬಾದಷಹನಿಗೆ ಉಗ್ರಕೋಪ ಬಂದಿತು. ಶಿವಾಜಿಯು ಬಿಜಾಪುರದ ಯುದ್ಧದಲ್ಲಿ ಜಯಶೀಲನಾದುದು ದಿಲೀರ್‌ಖಾನನ ಅವಿವೇಕದಿಂದಲೇ ಎಂದು ಬಾದಷಹನು ಭಾವಿಸಿಕೊಂಡನು. ಶಿವಾಜಿಯು ದಖ್ಖನ್ನಿನಲ್ಲಿ ಮೊಗಲ್ ಸಾಮ್ರಾಜ್ಯಕ್ಕೆ ಸೇರಿದ ಅನೇಕ ಊರುಗಳ ಮೇಲೆಯೂ ಪಟ್ಟಣಗಳ ಮೇಲೆಯೂ ನಿರ್ಭಯವಾಗಿ ಧಾಳಿ ನಡೆಸಿದ ವಾರ್ತೆಯನ್ನು ಕೇಳಿದ ಮೇಲಂತೂ ಬಾದಷಹನಿಗೆ ಉಗ್ರಕೋಪವು ಬಂದಿತು. "ಗೋಲ್ಕೊಂಡ, ಬಿಜಾಪುರ ರಾಜ್ಯಗಳ ಇಬ್ಬರು ಸುಲ್ತಾನರುಗಳು ಶಿವಾಜಿಯ ವಶವರ್ತಿಗಳಾಗಿ ಹೋದಮೇಲೆ ಅವನು ಹಿಂದೂ ಬಾದಶಹನೆಂದು ಕರೆಸಿಕೊಳ್ಳುವುದಕ್ಕೆ ಅಡ್ಡಿ ಏನಿದೆ?" ಎಂದು ಉಚ್ಚರಿಸಿದನು. ದಿಲೀರ್‌ಖಾನನು ತಕ್ಷಣ ದೆಹಲಿಗೆ ಹಿಂದಕ್ಕೆ ಬರಬೇಕೆಂದು ಆಜ್ಞೆ ಮಾಡಿದನು.

ಬಾದಷಹರ ಮಗನಾದ ಷಾ ಆಜಂನನ್ನು ದಖ್ಖನ್ ಸರ್ವಾಧಿಕಾರಿಯಾಗಿ ಕಳುಹಿಸಲಾಯಿತು. ಅವನು ಜಾಗ್ರತೆಯಾಗಿ ಸೈನ್ಯಸಮೇತರಾಗಿ ಆಲಂಗೀರ್ ಬಾದಷಹರೇ ದಖ್ಖನ್ನಿಗೆ ಬಂದು ಶಿವಾಜಿಗೆ ತಕ್ಕ ಬಂದೋಬಸ್ತು ಮಾಡಿಸುವುದಾಗಿ ಅಪ್ಪಣೆಯಾಯಿತು. ಯುವರಾಜ ಆಜಂಷಹನು ಪರಿವಾರ ಸಮೇತನಾಗಿ ಅಹಮದ್ ನಗರಕ್ಕೆ ಬಂದು ಸೇರಿದನು. ಅಂದಿನಿಂದ ದಖ್ಖನ್ನಿನ ಮೊಗಲ್ ರಾಜಧಾನಿ ಅಹಮದ್‌ನಗರವಾಯಿತು.

ಯುವರಾಜ ಆಜಂಷಹನು ಬಾದಷಹನಿಂದ ವಿಶೇಷ ಅಧಿಕಾರಗಳನ್ನು ಪಡೆದು ಬಂದಿದ್ದಾಗ್ಯೂ ಶಿವಾಜಿಯನ್ನು ಕೆಣಕುವ ತಂಟೆಗೆ ಹೋಗಲಿಲ್ಲ. ಆ ಸಮಯಕ್ಕೆ ಶಿವಾಜಿಯ ಪ್ರಾಬಲ್ಯವು ಮಹತ್ತರವಾಗಿ ಹೋಗಿತ್ತು. ಸೈನ್ಯ ಸಂಪತ್ತಿನಲ್ಲಿ, ಆಡಳಿತ ವಿಚಕ್ಷಣೆಯಲ್ಲಿ, ಐಶ್ವರ್ಯದಲ್ಲಿ ಶಿವಾಜಿಯು ಎಲ್ಲರಿಗಿಂತಲೂ ಅಧಿಕನಾಗಿದ್ದನು. ಸ್ವಯಂ ಬಾದಶಹನೇ ಮೊಗಲರ ಸಮಸ್ತ ಸೈನ್ಯವನ್ನು ತೆಗೆದುಕೊಂಡು ದಖ್ಖನ್ನಿಗೆ ಬಂದಿದ್ದರೂ ಶಿವಾಜಿಯನ್ನು ಎದುರಿಸುವುದು ದುಸ್ಸಾಧ್ಯವಾಗಿತ್ತು. ಆಜಂಷಹನು ಯುದ್ಧಪ್ರಿಯನೂ ಅಲ್ಲ. "ಮೊಗಲರ ರಾಜ್ಯದಲ್ಲಿ ಮರಾಠರು ಬಂದು ಧಾಳಿ ನಡೆಸದಂತೆ ಬಂದೋಬಸ್ತು

ಮಾಡಿದರೆ ಸಾಕು" ಎಂದುಕೊಂಡು ಅದಕ್ಕೆ ತಕ್ಕ ವ್ಯವಸ್ಥೆ ಮಾಡಿದನು. ಗಡಿಪ್ರದೇಶದಲ್ಲಿರುವ ಮೊಗಲರಿಗೆ ಸೇರಿದ ದುರ್ಗಗಳಲ್ಲೆಲ್ಲಾ ರಜಪೂತ ಸೇನಾಧಿಪತಿಗಳನ್ನೇ ಅಧಿಕಾರಿಗಳಾಗಿ ನೇಮಿಸಿದನು. ಬಿಜಾಪುರ, ಗೋಲ್ಕೊಂಡ ಗಳಿಗೆ ರಾಯಭಾರಿಗಳನ್ನು ಕಳುಹಿಸಿ ಆ ಸುಲ್ತಾನರುಗಳೊಡನೆ ಪುನಃ ಸ್ನೇಹ ಸೌಹಾರ್ದಗಳನ್ನು ಬೆಳೆಸಲು ಏರ್ಪಾಡು ಮಾಡಿದನು. ಆಜಂ ಷಹನ ಆಡಳಿತ ದಿಂದ ಕೆಲವು ದಿನಗಳು ದಕ್ಖನ್, ಶಾಂತ ಪರಿಸ್ಥಿತಿಯಲ್ಲಿದ್ದಿತು.

## ೨೦

ರಾಯಗಡದಲ್ಲಿ ಶಿವಾಜಿಮಹಾರಾಜನ ದ್ವಿತೀಯ ಪುತ್ರ ರಾಜಾರಾಮನಿಗೆ ಉಪನಯನ ಮಾಡಿಸುವ ಏರ್ಪಾಡುಗಳಿಗೆ ಮೊದಲಾಯಿತು. ರಾಮೇಶ್ವರದಿಂದ ಕಾಶಿಯವರೆಗೆ ಆಯಾ ರಾಜ್ಯಗಳಲ್ಲಿ ಪ್ರಸಿದ್ಧರಾಗಿದ್ದ ವೈದಿಕ ವಿದ್ವಾಂಸರಿಗೆಲ್ಲಾ ಆಹ್ವಾನ ಪತ್ರಗಳು ಕಳುಹಿಸಲ್ಪಟ್ಟವು. ದಕ್ಷಿಣದಲ್ಲಿದ್ದ ಅನೇಕ ಹಿಂದೂ ರಾಜರುಗಳಿಗೂ ಪಾಳೇಯಗಾರರುಗಳಿಗೂ ಕರೆಯೋಲೆಗಳನ್ನು ಬರೆಸಿ ದೂತರ ಮುಖೇನ ಕಳುಹಿಸಲಾಯಿತು. ಕಾಶೀಕ್ಷೇತ್ರಕ್ಕೆ ಮುತ್ಸದ್ದಿಗಳನ್ನು ಕಳುಹಿಸಿ ವಿದ್ವಾಂಸರುಗಳನ್ನು ಮೊದಲೇ ಕರೆಸಿಕೊಂಡನು. ಅವರು ಹೇಳಿದ ಕ್ರಮದಿಂದ ಉಪನಯನದ ಉತ್ಸವಗಳಿಗೆಲ್ಲಾ ಸಜ್ಜುಗೊಳಿಸಲಾಯಿತು. ಮಹಾರಾಷ್ಟ್ರದ ಎಲ್ಲ ಕಡೆಗಳಿಂದಲೂ ಬ್ರಾಹ್ಮಣರು ಬಂದು ನೆರೆದಿದ್ದರು. ಈ ಉತ್ಸವವು ವೈಶಾಖ ಮಾಸದಲ್ಲಿ ನಡೆಯಿತು. ಪುರೋಹಿತರುಗಳು ಶಾಸ್ತ್ರೋಕ್ತವಾಗಿ ರಾಜಾರಾಮನಿಗೆ ಉಪನಯನ ಮಾಡಿಸಿದರು. ಒಂದು ತಿಂಗಳ ಕಾಲ, ಈ ಉತ್ಸವಗಳು ವಿಜೃಂಭಣೆಯಿಂದ ನಡೆಸಲ್ಪಟ್ಟವು. ಬ್ರಾಹ್ಮಣ ಭೋಜನ, ಭೂರಿದಕ್ಷಿಣೆಗಳು ಯಥೇಚ್ಛವಾಗಿ ಕೊಡಲ್ಪಟ್ಟವು. ವೈದಿಕ ವಿದ್ವಾಂಸರುಗಳಿಗೆ ಸನ್ಮಾನಗಳು ದೊರೆತವು. ಈ ಉತ್ಸವಗಳಲ್ಲೆಲ್ಲಾ ಸಾಂಬಾಜಿಯು ಉತ್ಸಾಹ ದಿಂದ ಯಾಜಮಾನ್ಯವನ್ನು ವಹಿಸಿದ್ದನು. ಅವನ ಔದಾರ್ಯವನ್ನೂ ವಿತರಣೆ ಯನ್ನೂ ಎಲ್ಲರೂ ಕೊಂಡಾಡಿದರು. ಉಪನಯನಕ್ಕೆ ಬಂದಿದ್ದ ರಾಜರುಗಳಿಗೂ ಪಾಳೆಯಗಾರರಿಗೂ ಔತಣಗಳನ್ನು ಮಾಡಿ ಉಡುಗೊರೆಗಳನ್ನು ಕೊಟ್ಟು ಕಳುಹಿಸಿದನು.

ಈ ಉತ್ಸವವು ಕಳೆದ ತರುವಾಯ ಮುಂದಿನ ರಾಜ್ಯಾಧಿಕಾರವು ಯಾರಿಗೆ ಸಲ್ಲಬೇಕು ಎಂಬ ಜಿಜ್ಞಾಸೆಯು ಅಲ್ಲಲ್ಲಿ ಆರಂಭವಾಯಿತು. ಶಿವಾಜಿಗೆ ಅಷ್ಟೇನೂ ವಯಸ್ಸಾಗಿರಲಿಲ್ಲ. ಐವತ್ತೆರಡು ವರ್ಷಗಳು ಕಳೆದಿದ್ದುವು. ಮೊರೋಪಂತ್ ತ್ರ್ಯಂಬಕ್ ಮುಂತಾದ ಹಿರಿಯ ಮಂತ್ರಿಗಳು ಈಗ ಸಿಂಹಾಸನಕ್ಕೆ ಮುಂದಿನ ಅಧಿಕಾರಿಗಳಾರೆಂಬ ಪ್ರಸ್ತಾಪವನ್ನೆತ್ತುವ ಅವಸರವೇ ಇಲ್ಲವೆಂದು ಖಂಡಿಸಿ ಬಿಟ್ಟರು. ಆದರೆ ಶಿವಾಜಿಯ ಮನಸ್ಸು ಆ ರೀತಿ ಯಾಗಿರಲಿಲ್ಲ. ಸಿಜವಾಗಿಯೂ ಅವನ ಅಂತರಂಗವು ಪರಿಪಕ್ವವಾಗಿದ್ದಿತು. ಒಂದೊಂದು ಬಾರಿ ನಾಲ್ಕಾರು ದಿನಗಳಾದರೂ ಉಪವಾಸದಿಂದ ದೇವರ ಸನ್ನಿಧಿಯಲ್ಲಿ ಧ್ಯಾನಮಾಡುತ್ತಾ ಕುಳಿತು ಬಿಡುತ್ತಿದ್ದನು. ಮಂತ್ರಿಗಳು ರಾಜಕಾರ್ಯಗಳನ್ನು ಬಿನ್ನಹ ಮಾಡಿದರೆ ನಗುಮೊಗದಿಂದ 'ನೀವುಗಳೇ ಎಲ್ಲ ವನ್ನೂ ನಿರ್ವಹಿಸಬಲ್ಲಿರಿ. ಇದಕ್ಕೆ ನನ್ನ ಆಜ್ಞೆಯನ್ನು ಪಡೆಯಬೇಕಾದುದಿಲ್ಲ. ರಾಜ್ಯದ ರಕ್ಷಣೆಯ ಕಾರ್ಯವು ನಿಮಗೆ ಸೇರಿದ್ದು. ಧರ್ಮರಕ್ಷಣೆಯು ನಿಮ್ಮ ಕರ್ತವ್ಯ. ನನ್ನನ್ನು ದೇವರ ಸೇವೆ ಮಾಡಿಕೊಂಡಿರಲು ಬಿಟ್ಟುಬಿಡಿರಿ' ಎಂದು ಹೇಳುತ್ತಿದ್ದನು.

ಇದರಿಂದ ದರ್ಬಾರಿನ ಪರಿಸ್ಥಿತಿಯು ಕೊಂಚ ಕೆಡುವುದಕ್ಕೆ ಆರಂಭ ವಾಯಿತು. ಮಂತ್ರಿಗಳಲ್ಲಿ ಭಿನ್ನಾಭಿಪ್ರಾಯವು ಪ್ರಾಪ್ತವಾಗಿ ಆಗಾಗ ತಿಕ್ಕಾಟ ವಾಗುತ್ತಿದ್ದಿತು. ಒಂದೊಂದು ಸಮಯದಲ್ಲಿ ಶಿವಾಜಿಯೇ ಸಮಾಧಾನ ಪಡಿಸಬೇಕಾದ ಪ್ರಮೇಯಗಳು ಬಂದು ಒದಗುತ್ತಿದ್ದುವು. ಅಂತಃಪುರದಲ್ಲಿ ಮಹಾರಾಣಿಯು ತನ್ನದೇ ಒಂದು ವ್ಯೂಹವನ್ನು ರಚಿಸುತ್ತಿದ್ದಳು. ಸಾಂಬಾಜಿ ಯನ್ನು ಹೇಗಾದರೂ ತಪ್ಪಿಸಿ ರಾಜಾರಾಮನಿಗೆ ಪಟ್ಟಕಟ್ಟಿಸಬೇಕೆಂದು ಅವಳು ಸರ್ವಪ್ರಯತ್ನವನ್ನು ಮಾಡುತ್ತಿದ್ದಳು. ದರ್ಬಾರಿಗಳಲ್ಲಿ ಬಹುಮಂದಿ ರಾಣಿಯ ಮಾತಿನಂತೆ ನಡೆಯತಕ್ಕವರಾಗಿದ್ದರು. ಶಿವಾಜಿ ಮಹಾರಾಜರಿಗೆ ಸಾಂಬಾಜಿಯ ಮೇಲೆ ಅತ್ಯಂತ ಪ್ರೇಮವಿದ್ದಿತೆಂಬುದನ್ನು ಎಲ್ಲರೂ ಅರಿತಿದ್ದರು ಸಾಂಬಾಜಿಯು ಮಹಾಪರಾಕ್ರಮಶಾಲಿಯೆಂಬುದು ಸರ್ವವಿದಿತವಾಗಿದ್ದಿತು. ಮಂತ್ರಿಗಳೂ, ಸೇನಾಧಿಪತಿಗಳೂ ಶಿವಾಜಿ ಮಹಾರಾಜರಿಗೆ ಸಾಂಬಾಜಿಯು ಸಮ ಸಮ ಪರಾಕ್ರಮಶಾಲಿಯೆಂದು ಹೇಳುತ್ತಿದ್ದರು. ಮಂತ್ರಿಗಳು ಸಾಂಬಾಜಿಯು ಬುದ್ಧಿವಂತನೆಂದೂ, ವಿನಯಶೀಲನೆಂದೂ ಒಪ್ಪಿಕೊಂಡಿದ್ದರು.

ಅವನ ಚಿಕ್ಕತಾಯಿ ಸೋಯರ್ಬಾಯಿಯು ಮಾತ್ರ ತನ್ನ ಮಹತ್ವಾಕಾಂಕ್ಷೆಯನ್ನು ಬಿಟ್ಟಿರಲಿಲ್ಲ. ಪ್ರತ್ಯಕ್ಷ ವಿರೋಧವನ್ನೇ ಬೆಳೆಸಿ ಬಿಟ್ಟಿದ್ದಳು. ಸಾಂಬಾಜಿಯು ಈ ಮಲತಾಯಿಯ ಆಗ್ರಹದಿಂದ ಅರಮನೆಗೆ ಪ್ರವೇಶಮಾಡಲಿಕ್ಕೇ ಆಗದಂತೆ ಆಗಿದ್ದಿತು. ಅವನು ಪನ್ಹಾಲಾದಲ್ಲಿಯೇ ಇರುತ್ತಿದ್ದನು. ಅವನ ವಿರೋಧಿಗಳು ಅವನ ಮೇಲೆ ಹೊರಿಸುತ್ತಿದ್ದ ಅಪಖ್ಯಾತಿಯೆಂದರೆ ಸಾಂಬಾಜಿಯು ಮಹಮದೀಯರ ಸ್ನೇಹಿತ ಎಂಬುದೊಂದೇ ಆಗಿದ್ದಿತು. ಮತ್ತೊಂದು ಕಳಂಕ ವೆಂದರೆ ಸ್ತ್ರೀವ್ಯಾಮೋಹ. ಇದನ್ನು ಮಲತಾಯಿ ಸೋಯರ್ಬಾಯಿಯು ಮಹಭರ್ೂತಮಾಡಿ ಅರಮನೆಯ ವರ್ತುಲಗಳಲ್ಲೆಲ್ಲಾ ಬೆಳೆಸಿಬಿಟ್ಟಿದ್ದಳು. ಸಾಂಬಾಜಿಯ ಪತ್ನಿ ಏಸೂಬಾಯಿಯು ಈ ವಿಷಯವನ್ನು ಅರಿತು ತನ್ನ ಪತಿಯನ್ನು ಬಹು ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದಳು. ಹಬ್ಬ ಹರಿದಿನಗಳಲ್ಲಿ, ಉತ್ಸವ ದಿನಗಳಲ್ಲಿ ಮಹಾರಾಣಿಯು ಈ ಸೊಸೆ ಏಸೂಬಾಯಿ ಯನ್ನು ಎಷ್ಟೋ ಬಾರಿ ತಾತ್ಸಾರ ಮಾಡುತ್ತಿದ್ದರೂ, ಏಸೂಬಾಯಿಯೂ ಅದನ್ನೆಲ್ಲಾ ಲಕ್ಷ್ಯಕ್ಕೆ ತಾರದೆ ಪ್ರತಿಯೊಂದು ವಿಷಯದಲ್ಲಿಯೂ ಮಹಾರಾಣಿ ಯವರನ್ನು ಅತ್ಯಂತ ಗೌರವದಿಂದ ಕಾಣುತ್ತಿದ್ದಳು.

ಮಹಾರಾಣಿಯು ಸಮಯ ಸಿಕ್ಕಿದಾಗಲೆಲ್ಲಾ ಶಿವಾಜಿ ಮಹಾರಾಜ ರೊಂದಿಗೆ ತನ್ನ ಮಗ ರಾಜಾರಾಮನಿಗೆ ಪಟ್ಟ ಕಟ್ಟಿಸಬೇಕೆಂದು ಹೇಳುತ್ತಿದ್ದಳು. ಅನೇಕ ಸಮಯಗಳಲ್ಲಿ ಬಲಾತ್ಕಾರ ಮಾಡುತ್ತ ಇದ್ದಳು. ಸಮಯ ಬಂದಾಗ ಬಂಧುಗಳು ಶಿವಾಜಿ ಮಹಾರಾಜನನ್ನು ಪ್ರತ್ಯಕ್ಷವಾಗಿಯೇ ಕೇಳುತ್ತಿದ್ದರು. "ನೀವು ಸಾಂಬಾಜಿಯ ಅಪರಾಧಗಳನ್ನೆಲ್ಲಾ ಅಲಕ್ಷ್ಯ ಮಾಡಿ ಅವನನ್ನು ಮುಂದಕ್ಕೆ ತರುತ್ತಿದ್ದೀರಿ. ಅವನು ದಿನದಿನಕ್ಕೆ ತನ್ನ ಬಲ ಪ್ರಭಾವಗಳನ್ನು ಹೆಚ್ಚಿಸಿಕೊಳ್ಳುತ್ತಿದ್ದಾನೆ. ಒಂದು ದಿನ ನಿಮ್ಮನ್ನೇ ಮೂಲೆಗೊತ್ತರಿಸಿ ಅವನು ಸಿಂಹಾಸನವನ್ನೇರಿದರೂ ಆಶ್ಚರ್ಯವಿಲ್ಲ. ಇನ್ನು ರಾಜಾರಾಮನ ಪಾಡೇನು? ಎಂದಾದರೊಂದು ದಿನ ಸಾಂಬಾಜಿಗೆ ಪೂರ್ಣಾಧಿಕಾರವು ಬರುತ್ತದೆ. ಆಗ ಅವನು ರಾಜಾರಾಮನನ್ನು ಬೀದಿಯ ಭಿಕಾರಿಯಾಗಿ ಓಡಿಸಿ ಬಿಡುತ್ತಾನೆ. ಅಥವಾ ಅವನ ಪ್ರಾಣಕ್ಕೇ ಅಪಾಯ ಸಂಭವಿಸಿದರೂ ಆಶ್ಚರ್ಯವೇನೂ ಇಲ್ಲ. ರಾಜಾರಾಮನಿಗೆ ಒಂದು ಜಹಗೀರಿಯನ್ನಾದರೂ ಈಗಲೇ ಕೊಟ್ಟು ಕಳುಹಿಸಿ ಬಿಟ್ಟರೆ ಉತ್ತಮ" ಎಂದು ಹೇಳಲಾರಂಭಿಸಿದರು. ಈ ಮಾತುಗಳನ್ನು ಕೇಳಿ

ಶಿವಾಜಿಗೆ ಆಶ್ಚರ್ಯ ಖೇದಗಳುಂಟಾಗುತ್ತಿತ್ತು. 'ತನ್ನೆದುರಿಗೆ ಇಂಥಾ ಮಾತುಗಳನ್ನಾಡಲು ಇವರುಗಳಿಗೆ ಧೈರ್ಯ ಬಂದಿದೆಯಲ್ಲಾ ! ಇದಕ್ಕೆಲ್ಲಾ ರಾಜಾರಾಮನ ತಾಯಿಯ ಚಿತಾವಣೆಯೇ ಕಾರಣ. ಏನು ಮಾಡಲಾದೀತು' ಎಂಬ ವಿರಕ್ತಭಾವದಿಂದ ಶಿವಾಜಿಯು ಅಂತಃಪುರಕ್ಕೆ ಹೋಗುವುದನ್ನ ಬಿಟ್ಟುಬಿಟ್ಟನು.

ಆದರೆ ಈ ಚಿಂತೆ ಹವ್ಯಾಸಗಳು ಅವನನ್ನು ಬಿಡಲಿಲ್ಲ. ಕೆಲವರು ಮಂತ್ರಿಗಳು ಹೀಗೆಯೇ ಮಹಾರಾಜರಲ್ಲಿ ಈ ಪ್ರಸ್ತಾಪವನ್ನೆತ್ತಿ "ರಾಜಾರಾಮ ನನ್ನು ಕರ್ಣಾಟಕಕ್ಕೆ ರಾಜನನ್ನಾಗಿ ಮಾಡಿಬಿಡುವುದು, ಸಾಂಬಾಜಿಯು ಮಹಾರಾಷ್ಟ್ರದ ರಾಜನಾಗಿರಲಿ" ಎಂದು ಹೇಳಲಾರಂಭಿಸಿದರು.

ಶಿವಾಜಿಯು "ನಮ್ಮ ರಾಜ್ಯದಲ್ಲಿ ಅಂಥಾ ಭೇದಗಳನ್ನು ಎಣಿಸಲಾಗು ವುದಿಲ್ಲ. ಈ ಭಾರತದಲ್ಲಿ ಹಿಂದೂ ರಾಜ್ಯವೆಲ್ಲವೂ ಒಂದೇ ಆಗಿರಬೇಕು. ಕರ್ಣಾಟಕ ಮಹಾರಾಷ್ಟ್ರಗಳನ್ನು ವಿಭಜಿಸಲಾಗುವುದಿಲ್ಲ" ಎಂದು ಹೇಳುತ್ತಿದ್ದನು. ಆದರೂ ಇದೊಂದು ದೊಡ್ಡ ಸಮಸ್ಯೆಯಾಗಿಯೇ ಉಳಿಯುತ್ತಿತ್ತು. ಶಿವಾಜಿಯು 'ಈ ಭೇದಭಾವಗಳೆಲ್ಲಾ ಒತ್ತಟ್ಟಿಗಿರಲಿ. ಅರಮನೆಯ ಪ್ರಚೋದನೆಯೂ ನಡೆಯುತ್ತಿರಲಿ. ರಾಜಾರಾಮನೂ ಸಾಂಬಾಜಿಯೂ ಸೋದರತ್ವದಿಂದ ಇದ್ದರೆ ಮುಂದೆ ಎಲ್ಲವೂ ಸರಿಹೋಗುವುದು' ಎಂದುಕೊಂಡು ಅವರಿಬ್ಬರನ್ನು ಒಟ್ಟಿಗಿರುವಂತೆ ಪ್ರೇರೇಪಿಸುತ್ತಿದ್ದನು. ಸಾಂಬಾಜಿಯು ಈ ರಹಸ್ಯವನ್ನು ಅರಿತು ರಾಜಾರಾಮನನ್ನು ವಿಶೇಷವಾಗಿ ಪ್ರೀತಿಸುತ್ತಿದ್ದನು.

ಶಿವಾಜಿಯು ತನ್ನ ಗುರುವಾದ ಸಮರ್ಥ ರಾಮದಾಸರಿಗೆ ಪತ್ರ ಬರೆದು ಕಳಿಸಿದನು. 'ನನಗೆ ಈ ಪ್ರಪಂಚದ ವ್ಯವಹಾರಗಳೆಲ್ಲವೂ ಬೇಸರವನ್ನುಂಟು ಮಾಡುತ್ತಿವೆ. ನೀವು ಮುಕ್ತಿಮಾರ್ಗವನ್ನು ತೋರಬೇಕು. ನನ್ನನ್ನು ಆಶೀರ್ವದಿಸಬೇಕು' ಎಂದು ಬರೆದಿದ್ದನು. ಅರ್ಥಾತ್ ಶಿವಾಜಿಯು ರಾಜಕೀಯ ವ್ಯಾಪಾರಗಳಿಂದ ದೂರವಿರುತ್ತಿದ್ದನು.

ಚೈತ್ರಮಾಸದ ಆರಂಭದಲ್ಲಿ ಶಿವಾಜಿಯ ಮೊಣಕಾಲು ಊದಿಕೊಂಡು ಜ್ವರ ಬಂದಿತು. ಜ್ವರ ವೇಗವು ಅತಿಯಾಗಿದ್ದುದರಿಂದ ಮಂತ್ರಿಗಳೂ ಸೇನಾಧಿಪತಿಗಳೂ ಎಲ್ಲರೂ ಬಂದು ಸೇರಿದರು. ಶಿವಾಜಿಯು 'ಈ ಶರೀರವು ನಶ್ವರವಾದದ್ದು, ಆತ್ಮವು ನಿತ್ಯವಾದುದು. ನನಗೆ ಅಂತ್ಯಕಾಲವು

ಸಮೀಪಿಸುತ್ತಿದೆ. ಈ ಅಖಂಡ ರಾಜ್ಯವನ್ನು ನೀವೆಲ್ಲರೂ ಐಕಮತ್ಯದಿಂದ ಕಾಪಾಡಿಕೊಳ್ಳಿರಿ' ಎಂದು ಹೇಳಿದನು.

ಅಂತಃಪುರದಲ್ಲಿ ಬೇಕಾದಷ್ಟು ಗಲಿಬಿಲಿಯು ನಡೆಯುತ್ತಿದ್ದಿತು. ಸಮಸ್ತ ಮಂತ್ರಿ ಪ್ರಧಾನರುಗಳ ಸಮ್ಮುಖದಲ್ಲಿ "ನನ್ನ ಅನಂತರ ಸಾಂಬಾಜಿಗೇ ಸಿಂಹಾಸನದ ಪಟ್ಟಾಭಿಷೇಕವಾಗಬೇಕು" ಎಂದು ಖಚಿತವಾಗಿ ಹೇಳಿದನು. ಆ ದರಬಾರಿನಲ್ಲಿ ಸಾಂಬಾಜಿಗೆ ವಿರೋಧಿಗಳಾಗಿದ್ದವರು ಕೆಲವರಿದ್ದಾಗ್ಯೂ ದೊಡ್ಡ ದೊಡ್ಡವರೆಲ್ಲಾ ಸಾಂಬಾಜಿಯ ಮೇಲೆ ಅಭಿಮಾನವುಳ್ಳವರಾಗಿಯೇ ಇದ್ದರು. ಶಿವಾಜಿಯ ವ್ಯಾಧಿಯು ದಿನ ದಿನಕ್ಕೆ ಉಲ್ಬಣಸ್ಥಿತಿಗೆ ಬಂದಿತು. ವೈದಿಕ ಬ್ರಾಹ್ಮಣರನ್ನು ಕರೆಸಿ ವಿಶೇಷ ದಾನ ಧರ್ಮಗಳನ್ನು ಮಾಡಿದನು. ಅವರೆಲ್ಲರೂ ಮಂತ್ರ ಪಠನ ಮಾಡುತ್ತಾ ಶಿವಾಜಿಗೆ ಸದ್ಗತಿಯನ್ನು ಕೋರುತ್ತಿದ್ದರು. ಪವಿತ್ರ ಗಂಗಾಜಲದಿಂದ ಶಿವಾಜಿಗೆ ಅಭಿಷೇಕ ಮಾಡಿಸಿದರು. ಹನ್ನೆರಡನೆಯ ದಿನ ಶಿವಾಜಿಯು ಪರಲೋಕವನ್ನೈದಿದನು. ಪ್ರಾಣ ಹೋಗುವಾಗ ಶಿವಾಜಿಯು ಶಾಂತನಾಗಿದ್ದನು. ಅವನ ಮುಖದಲ್ಲಿ ಹರ್ಷಮುದ್ರೆಯು ಮೂಡಿದ್ದಿತು. ಶಿವಾಜಿಯ ಕತ್ತಿಯನ್ನು ತೆಗೆದುಕೊಂಡು ಹೋಗಿ ಸತಾರದಲ್ಲಿ ದೇವಿಯ ಪಕ್ಕದಲ್ಲಿಡಿಸಿದರು. ಆ ಕತ್ತಿಯನ್ನು ದೇವಿ ಭವಾನಿಯು ಅನುಗ್ರಹಿಸಿದುದೆಂದೂ ಪುನಃ ಆ ಖಡ್ಗವು ದೇವಿಗೆ ಅರ್ಪಿಸಬೇಕೆಂದೂ ಬ್ರಾಹ್ಮಣರುಗಳು ಹೇಳಿದರು. ಅನಂತರ ಉತ್ತರಕ್ರಿಯೆಗಳಿಗೆ ಆರಂಭವಾದವು. ಶಿವಾಜಿಯ ಶರೀರವನ್ನು ಬಿಲ್ವಪತ್ರಗಳಿಂದಲೂ, ಪುಷ್ಪಗಳಿಂದಲೂ ಅಲಂಕರಿಸಿ ಚಿನ್ನದ ಪಲ್ಲಕ್ಕಿಯಲ್ಲಿ ಕೂಡಿಸಿ ಉತ್ಸವದಿಂದ ಸ್ಮಶಾನಕ್ಕೆ ತೆಗೆದುಕೊಂಡು ಹೋದರು. ಅಂತಃಪುರ ಸ್ತ್ರೀಯರೆಲ್ಲರೂ ದುಃಖದಿಂದ ಗೋಳಿಡುತ್ತಿದ್ದರು. ಅಸಂಖ್ಯ ಜನಸಮೂಹವು ಶಿವಾಜಿಯ ಅಂತ್ಯದರ್ಶನಕ್ಕಾಗಿ ನೆರೆದಿದ್ದಿತು. ಮಂತ್ರಿಗಳು, ಸೇನಾಧಿಪತಿಗಳು, ಅಧಿಕಾರಿಗಳು, ರಾಜ ಬಂಧುಗಳು ಸ್ಮಶಾನದವರೆಗೆ ಹೋಗಿ ತಮ್ಮ ಅಂಜಲಿಯನ್ನು ಅರ್ಪಿಸಿದರು. ಮಹಾ ಚಿತೆಯು ನಿರ್ಮಾಣವಾಗಿತ್ತು. ಶಿವಾಜಿಯ ಶರೀರವನ್ನು ಆ ಚಿತೆಯ ಮೇಲಿಟ್ಟು ಮಂತ್ರ ಘೋಷ ಮಾಡುತ್ತಾ ಅಗ್ನಿಸಂಸ್ಕಾರ ಮಾಡಿದರು.

ಶಿವಾಜಿಯ ಮರಣ ವಾರ್ತೆಯನ್ನು ಕೇಳಿ ಭಾರತ ವರ್ಷದಲ್ಲಿ ಹಿಂದೂಗಳೆಲ್ಲರೂ ದುಃಖಿಸಿದರು. ಸಮಸ್ತ ದೇವಾಲಯಗಳಲ್ಲಿಯೂ

ಪುಣ್ಯಾತ್ಮನಾದ ಶಿವಾಜಿಯ ಆತ್ಮಕ್ಕೆ ಶಾಂತಿಯನ್ನು ಪ್ರಾರ್ಥನೆ ಮಾಡಿ ಪೂಜಾ ಮಂಗಳಾರತಿಗಳನ್ನು ನೆರವೇರಿಸಿದರು.

ದೆಹಲಿಗೆ ಶಿವಾಜಿಯ ಮರಣ ವಾರ್ತೆಯು ತಲುಪಿತು. ಬಹುಮಂದಿ ಮೊಗಲ್ ಸರದಾರರುಗಳು ಸಂತೋಷಪಟ್ಟರು. ಆಲಂಗೀರ್ ಬಾದಷಹನು ಶಿವಾಜಿಯ ಮರಣ ವಾರ್ತೆಯನ್ನು ಕೇಳಿ ಶಿವಾಜಿಯನ್ನು ನೆನೆದು, ಆ ಶಿವಾಜಿಯು ಮಹಾ ಪರಾಕ್ರಮಶಾಲಿ, ಶೂರಾಗ್ರೇಸರ. ಅವನು ತನ್ನ ಪರಾಕ್ರಮದಿಂದಲೇ ಆ ರಾಜ್ಯವನ್ನು ನಿರ್ಮಾಣ ಮಾಡಿದನು. ಹತ್ತೊಂಭತ್ತು ವರ್ಷಗಳ ಕಾಲ ಅಸಂಖ್ಯ ಮೊಗಲ್ ಸೇನಾಬಲದಿಂದ ಎದುರಿಸಿದರೂ ಅವನು ಜಗ್ಗಲಿಲ್ಲ, ಬಗ್ಗಲಿಲ್ಲ' ಎಂದು ಪ್ರಶಂಸೆ ಮಾಡಿದನು.

ಶಿವಾಜಿ ಮರಣ ಹೊಂದಿದ ಮೂರನೇ ದಿವಸವೇ ಮಹಾರಾಣಿ ಸೋಯಿರಾಬಾಯಿಯು ತನ್ನ ಪಕ್ಷದವರನ್ನೆಲ್ಲಾ ಪ್ರೋತ್ಸಾಹಗೊಳಿಸಿ, ರಾಜಾರಾಮನನ್ನು ಸಿಂಹಾಸನದ ಮೇಲೆ ಕೂಡಿಸಿ ಶಾಸ್ತ್ರೋಕ್ತವಾಗಿ ಪಟ್ಟಾಭಿಷೇಕ ಮಾಡಿಸಿಬಿಟ್ಟಳು. ಶಿವಾಜಿಯ ಮರಣದಿಂದ ದುಃಖಿತರಾಗಿದ್ದ ಯಾವ ಅಧಿಕಾರಿಗಳಾಗಲೀ, ಸೇನಾಧಿಪತಿಗಳಾಗಲೀ ಆಕಡೆಗೆ ಲಕ್ಷ್ಯವನ್ನೇ ಕೊಡಲಿಲ್ಲ. ಶಿವಾಜಿಯು ಮರಣಹೊಂದಿದ ಏಳನೇ ದಿವಸ ಸಾಂಬಾಜಿಯು ಪನ್ಹಾಲಾದಿಂದ ರಾಯಗಡಕ್ಕೆ ಬಂದು ಸೇರಿದನು. ಶಿವಾಜಿಯ ಅಂತ್ಯಕ್ರಿಯೆಗಳು ನಡೆಯುತ್ತಿದ್ದವು. ಅರಮನೆಯ ಅಧಿಕಾರಿಗಳು ಸೋಯಿರಾಬಾಯಿಯು ನಡೆಸಿದ ವಿದ್ಯಮಾನಗಳನ್ನೆಲ್ಲಾ ಸಾಂಬಾಜಿಯ ಕಿವಿಯಲ್ಲಿ ಹಾಕಿದರು. ಅವನು ಯಾವುದೊಂದು ಮಾತನ್ನೂ ಆಡಲಿಲ್ಲ. ರಾಯಗಡದಲ್ಲಿ ಪ್ರತ್ಯೇಕ ಅರಮನೆಯಲ್ಲಿ ವಸತಿ ಮಾಡಿದ್ದನು. ಪ್ರಮುಖರಾದ ಮಂತ್ರಿಗಳು ಒಬ್ಬೊಬ್ಬರಾಗಿ ಸಾಂಬಾಜಿಯನ್ನು ಬಂದು ನೋಡಿದರು. ಆದರೆ ಮಂತ್ರಿಗಳಲ್ಲಿ ಭಿನ್ನಾಭಿಪ್ರಾಯವಿದ್ದರೂ, ಸೇನಾಧಿಪತಿಗಳಲ್ಲೆಲ್ಲಾ ಒಮ್ಮತವಿದ್ದಿತು. ಅವರೆಲ್ಲರೂ ಸಾಂಬಾಜಿಯ ಪಕ್ಷವನ್ನು ಹಿಡಿದಿದ್ದಾರೆಂದು ರಾಜಧಾನಿಯಲ್ಲೆಲ್ಲಾ ವಾರ್ತೆ ಹರಡಿತ್ತು. ಮೋರೋತ್ರ್ಯಂಬಕನು ರಾಣಿಯ ಪಕ್ಷವನ್ನು ಬಿಟ್ಟು ಸಾಂಬಾಜಿಯ ಪಕ್ಷವನ್ನು ಹಿಡಿದನು.

ಮಂತ್ರಿ ಅಣ್ಣಾಜಿ ದತ್ತನು ರಾಣಿಯ ಪಕ್ಷದಲ್ಲಿಯೇ ಇದ್ದನು. ಅವನು ಸಾಂಬಾಜಿಯನ್ನು ಭೇಟಿಮಾಡಿ "ರಾಜಾರಾಮರವರನ್ನು ಸಿಂಹಾಸನದ ಮೇಲೆ

ಕೂಡಿಸಿ ಶಾಸ್ತ್ರವಿಧಿಗಳಿಗೆ ಅನುಸಾರವಾಗಿ ಪಟ್ಟಾಭಿಷೇಕ ಮಾಡಲಾಗಿದೆ. ಅವರಿನ್ನೂ ಚಿಕ್ಕ ವಯಸ್ಸಿನವರಾಗಿರುವುದರಿಂದ (ಹದಿನೆಂಟು ವರ್ಷ ವಯಸ್ಸು) ನೀವೇ ಯಜಮಾನ್ಯವನ್ನು ವಹಿಸಿ ರಾಜ್ಯಭಾರವನ್ನು ನಿರ್ವಹಿಸ ಬಹುದು. ಆದರಿಂದ ನಮ್ಮ ರಾಜ್ಯಕ್ಕೆ ಭದ್ರತೆಯೂ ಗೌರವವೂ ಉಂಟಾಗುತ್ತದೆ" ಎಂದು ಹೇಳಿದನು.

ಸಾಂಬಾಜಿಯು "ಅಣ್ಣಾಜಿಯವರೇ, ನಿಮ್ಮ ಮಾತುಗಳು ಆಶ್ಚರ್ಯಕರ ವಾಗಿದೆ. ರಾಜಾರಾಮನಿಗೆ ನೀವೆಲ್ಲರೂ ಸೇರಿ ಪಟ್ಟಕಟ್ಟಿದ್ದೀರೆಂದು ತಿಳಿಯಿತು. ಯಜಮಾನ್ಯವನ್ನು ವಹಿಸಲು ಸ್ವಯಂ ಮಹಾರಾಣಿಯವರೇ ಇದ್ದಾರೆ. ನನ್ನ ಆಗತ್ಯವೇನಿದೆ? ನಾನು ಬೇರೊಂದು ರಾಜ್ಯವನ್ನೇ ನಿರ್ಮಾಣ ಮಾಡಿಕೊಳ್ಳಬಹುದು. ಇಲ್ಲೇಕೆ ತಮ್ಮನ ಅಧೀನದಲ್ಲಿರಬೇಕು" ಎಂದು ಹೇಳಿದನು.

ಅಣ್ಣಾಜಿಯು ಏನೊಂದು ಉತ್ತರವನ್ನೂ ಕೊಡದೆ ಹೊರಟುಹೋದನು.

ಮಹಾರಾಣಿ ಸೊಯಿರಾಬಾಯಿಯು ಯಥೇಚ್ಛವಾಗಿ ರಾಜಭಂಡಾರ ದಿಂದ ಹಣವನ್ನು ವೆಚ್ಚಮಾಡಿ ತನ್ನ ವ್ಯೂಹವನ್ನು ಬಲಪಡಿಸುತ್ತಾ ಬಂದಳು. ರಾಜಧಾನಿಯಲ್ಲಿ ಸಾಂಬಾಜಿಯ ಕಡೆಯವರೂ ಬಲವಾದ ಸೈನ್ಯವನ್ನೇ ಸಜ್ಜು ಗೊಳಿಸುತ್ತಾ ಬಂದರು. ಮಹಾರಾಣಿಯು ಅರಮನೆಯಲ್ಲಿ ಬಲವಾದ ಕಾವಲಿಟ್ಟು ಪ್ರತಿಯೊಂದು ಹಜ್ಜೆ ಹೆಜ್ಜೆಗೂ ಸಾಂಬಾಜಿಗೆ ಪ್ರತಿರೋಧ ಮಾಡುತ್ತಾ ಬಂದಳು. ಸಾಂಬಾಜಿಯ ಪ್ರಾಣಾಪಹಾರ ಮಾಡಲು ಅನೇಕ ಪಿತೂರಿಗಳನ್ನು ಏರ್ಪಡಿಸಿದಳು. ಸಾಂಬಾಜಿಯಾಗಲೀ, ಸಾಂಬಾಜಿಯ ಕಡೆಯವರಾಗಲೀ ಅರಮನೆಗೆ ಪ್ರವೇಶ ಮಾಡದಂತೆ ತಕ್ಕ ಏರ್ಪಾಟುಗಳನ್ನು ಮಾಡತೊಡಗಿದಳು.

ಹೀಗೆ ಒಂದು ತಿಂಗಳು ಕಾಲ ಕಳೆದುಹೋಯಿತು. ಅರಮನೆಯನ್ನು ಆಕ್ರಮಿಸಿಕೊಂಡಲ್ಲದೆ ರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳಲಾಗುವುದಿಲ್ಲವೆಂದು ಸಾಂಬಾಜಿಗೆ ಮನದಟ್ಟಾಯಿತು. ಸಾಂಬಾಜಿಯು ತನ್ನ ಕಡೆಯ ಸೈನಿಕರಿಗೆ ಅರಮನೆಯನ್ನು ಆಕ್ರಮಣ ಮಾಡುವಂತೆ ಅಪ್ಪಣೆ ಮಾಡಿದನು. ಸೈನಿಕ ರೆಲ್ಲರೂ ಪಹರೆಯವರನ್ನೂ ಕಾವಲುಗಾರರನ್ನೂ ಹೊಡೆದೋಡಿಸಿ ಅರಮನೆ ಯನ್ನು ಸ್ವಾಧೀನಪಡಿಸಿಕೊಂಡು ನಿಂತರು. ಆ ದಿನ ಸಾಂಬಾಜಿಯು ತಾನೇ

ಸ್ವತಃ ಅರಮನೆಯನ್ನು ಪ್ರವೇಶ ಮಾಡಿ ಸ್ವಾಧೀನಪಡಿಸಿಕೊಳ್ಳುತ್ತಾನೆಂದು ಅಂತಃಪುರದಲ್ಲೆಲ್ಲಾ ಸಮಾಚಾರ ಹರಡಿತು. ರಾಣಿ ಸೋಯ್ರಾಬಾಯಿಯು ತನ್ನ ಮಗ ರಾಜಾರಾಮನನ್ನು ಜೊತೆಯಲ್ಲಿ ಕರೆದುಕೊಂಡು ಅರಮನೆಯ ಮಹಾದ್ವಾರದಲ್ಲಿ ಬಂದು ನಿಂತಳು. ಸಾಂಬಾಜಿಯು ತನ್ನ ಅನುಚರರೊಡನೆ ಅರಮನೆಗೆ ಬಂದನು. ರಾಣಿಯು ತಡೆದು "ಮಹಾರಾಜರು ಮರಣಕಾಲದಲ್ಲಿ ಅಪ್ಪಣೆ ಮಾಡಿದ್ದಾರೆ. ಈ ರಾಜಾರಾಮನಿಗೆ ಪಟ್ಟಾಭಿಷೇಕವಾಗಿದೆ. ನೀನು ಅರಮನೆಗೆ ಬರಕೂಡದು" ಎಂದು ನಿರೋಧಿಸಿದಳು.

ಸಾಂಬಾಜಿಯು "ಈ ರಾಜ್ಯದ ಹಕ್ಕು ನನ್ನದಾಗಿದೆ. ನೀವುಗಳು ವಿರೋಧಿಸಿದರೆ ಬಹಳ ಅನಾಹುತಕ್ಕೆ ಕಾರಣವಾಗುತ್ತದೆ" ಎಂದು ಗಂಭೀರವಾಗಿ ಹೇಳಿದನು.

ರಾಣಿ ಸೋಯ್ರಾಬಾಯಿಯು "ನೀನು ಬಹಿಷ್ಕೃತನಾಗಿದ್ದೀಯೇ, ಮಹಾರಾಜರು ನಿನ್ನನ್ನು ಪರಿತ್ಯಾಗ ಮಾಡಿದ್ದಾರೆ" ಎಂದು ಹೇಳಿ ತನ್ನ ಕಡೆಯ ಅಧಿಕಾರಿಗಳ ಕಡೆಗೆ ತಿರುಗಿ ಸಾಂಬಾಜಿಯನ್ನು ಬಂಧಿಸಿ ಸೆರೆಮನೆಯಲ್ಲಿಡುವಂತೆ ಅಪ್ಪಣೆ ಮಾಡಿದಳು.

ಸಾಂಬಾಜಿಯು ಕ್ರೋಧಾವೇಶದಿಂದ ಮೊರೆಯುತ್ತಾ "ನೀನು ನಮ್ಮ ಕುಲವನ್ನು ನಾಶಮಾಡಲು ಬಂದಿರುವ ಮಹಾಪಾತಕಿ. ಮಹಾರಾಜರಿಗೆ ವಿಷ ಹಾಕಿ ಕೊಂದುಹಾಕಿದ್ದೀಯೇ ಈ ರಾಜ್ಯಾಕಾಂಕ್ಷೆಯಿಂದ ಅನೇಕ ಅಕೃತ್ಯಗಳನ್ನು ಮಾಡಿದ್ದೀಯೆ. ರಾಜಭಂಡಾರದಿಂದ ಹಣವನ್ನು ಸೂರೆಗೊಟ್ಟು ಜನರನ್ನು ಎತ್ತಿಕಟ್ಟಿದ್ದೀಯೇ. ನಿನ್ನಿಂದ ನಮ್ಮ ಸಾಮ್ರಾಜ್ಯವು ನಾಶವಾಗುತ್ತದೆ. ನಿನ್ನನ್ನು ಇರಗೊಡಬಾರದು" ಎಂದು ಹೇಳಿ ಆ ಅರಮನೆಯ ಪರಿಜನರೂ, ದಾಸ ದಾಸಿಯರೂ ಎಲ್ಲರೂ ನೋಡುತ್ತಿರುವಂತೆ ಕತ್ತಿಯನ್ನು ಎತ್ತಿ ಆ ಮಹಾರಾಣಿಯನ್ನು ಕತ್ತರಿಸಿಹಾಕಿದನು. ರಾಜಾರಾಮನನ್ನೂ, ಅಣ್ಣಾಜೀ ದತ್ತನನ್ನೂ ಹಿಡಿದು ಸೆರೆಯಲ್ಲಿಡಿಸಿದನು. ಸಾಂಬಾಜಿಯ ಮೇಲೆ ಬೀಳಲು ಮಹಾರಾಣಿಯು ಸಿದ್ಧಗೊಳಿಸಿದ್ದ ರಾಜಭಟರೆಲ್ಲರನ್ನು ಕತ್ತರಿಸಿಹಾಕಿದನು. ಸಾಂಬಾಜಿಯು ಅರಮನೆಯಲ್ಲಿದ್ದವರನ್ನೆಲ್ಲಾ ಹೊರಕ್ಕೆ ಓಡಿಸಿ ಅರಮನೆಯನ್ನು ಸ್ವಾಧೀನಪಡಿಸಿಕೊಂಡನು. ರಾಜಧಾನಿಯಲ್ಲಿ ರಾಣಿಯ ಕಡೆಯವರು ಯಾರು

ಯಾರಿದ್ದರೋ ಅವರುಗಳನ್ನೆಲ್ಲಾ ಹಿಡಿತರಿಸಿ ಸೆರೆಯಲ್ಲಿಡಿಸಿದನು. ಅನೇಕರನ್ನು ಶೂಲಕ್ಕೇರಿಸಿದನು.

ಈ ಗದ್ದಲಗಳೆಲ್ಲಾ ಪೂರೈಸಿ ಶಾಂತವಾದ ಮೇಲೆ ಸಾಂಬಾಜಿಗೆ ಪಟ್ಟಾಭಿಷೇಕವಾಯಿತು. ರಾಜ್ಯದಲ್ಲೆಲ್ಲಾ ಅಧಿಕಾರಿಗಳು ಒಬ್ಬೊಬ್ಬರಾಗಿ ಸಾಂಬಾಜಿಯನ್ನು ಭೇಟಿಮಾಡಿ ಅವನ ಅನುಗ್ರಹವನ್ನು ಪಡೆದು ಹೋಗುತ್ತಿದ್ದರು. ಬಹು ಕ್ಷಿಪ್ರಕಾಲದಲ್ಲಿಯೇ ಇಡೀ ರಾಷ್ಟ್ರವು ಸಾಂಬಾಜಿಯ ಸಾಮರ್ಥ್ಯವನ್ನೂ ಸಾಹಸವನ್ನೂ ಮೆಚ್ಚಿ ಕೊಂಡಾಡತೊಡಗಿತು.



ಶ್ರೀ ವೀರಕೇಸರಿ ಸೀತಾರಾಮಶಾಸ್ತ್ರಿಗಳು ಮೈಸೂರಿನ ರಾಜಕೀಯದಲ್ಲಿ ಮರೆಯಲಾಗದ ವ್ಯಕ್ತಿ. ಪತ್ರಕರ್ತರಾಗಿ, ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಾಯಕರಾಗಿ ಸೇವೆ ಸಲ್ಲಿಸಿದ್ದರು. ಶ್ರೇಷ್ಠ ವಾಗ್ಮಿಗಳೂ ಸಂಸ್ಕೃತದಲ್ಲಿ ವಿದ್ವಾಂಸರೂ ಆಗಿದ್ದರು. ಬಾಲಗಂಗಾಧರ ತಿಲಕರ ಕಾಲದಿಂದಲೂ ದೇಶಸೇವೆಯಲ್ಲಿ ನಿರತರಾಗಿದ್ದವರು.

'ಆರ್ಯ ಮಹಿಳಾ' ಎಂಬ ಪತ್ರಿಕೆಯನ್ನು ಸಂಪಾದಿಸುತ್ತಿದ್ದರು. ನಂತರ ಭಾರತ ಸ್ವಾತಂತ್ರ್ಯ ಚಳವಳಿಯು ತೀಕ್ಷ್ಣವಾದಾಗ 'ವೀರಕೇಸರಿ' ಎಂಬ ಪತ್ರಿಕೆಯನ್ನು ಆರಂಭಿಸಿ 'ವೀರಕೇಸರಿ' ಎಂಬ ನಾಮಧೇಯವನ್ನು ಪಡೆದರು.

ಅವರು ಅನೇಕ ಐತಿಹಾಸಿಕ ಕಾದಂಬರಿಗಳನ್ನು ಬರೆದಿದ್ದಾರೆ. ಅವರು ರಾಜಕೀಯ, ಆರ್ಥಿಕ ಮುಂತಾದ ಯಾವುದೇ ಕಠಿಣ ವಿಷಯವಾಗಲಿ, ಜನಸಾಮಾನ್ಯರಿಗೆ ತಿಳಿಯುವಂತೆ ಹೇಳುವ ಪ್ರೌಢಿಮೆಯನ್ನು ಪಡೆದಿದ್ದರು.

ಅವರು ಅಂತ್ಯಕಾಲದಲ್ಲಿ ರಾಮಾಯಣ, ಭಾಗವತವನ್ನೂ ಬರೆದಿದ್ದರು. 1971ನೇ ಜನವರಿ 5ನೇ ತಾರೀಕು ಅವರು ಇಹಲೋಕವನ್ನು ತ್ಯಜಿಸಿದರು. ಅವರ ನೆನಪು ಇನ್ನೂ ಉಳಿದಿದೆ.

ಪ್ರಕಾಶಕರು